# ಲಕ್ಷ್ಮೀಶನ
# ಜೈಮಿನಿ ಭಾರತ

ಒಂದು ಅಧ್ಯಯನ

ಡಾ. ವಾಮನ ಬೇಂದ್ರೆ





ಗೀತಾ ಬುಕ್ ಹೌಸ್ : ಪ್ರಕಾಶಕರು : ಮೈಸೂರು

"ಕನ್ನಡ ಸಾಹಿತ್ಯ ಲೋಕದಲ್ಲಿ ಹಲವಾರು ವರ್ಷಗಳಿಂದ ಲಕ್ಷ್ಮೀಶನ ಕಾಲ, ಸ್ಥಳ, ಮತ ಮುಂತಾದ ಅಂಶಗಳ ಬಗ್ಗೆ ಚರ್ಚೆ ನಡೆದಿದೆ. ವಿದ್ವಾಂಸರಲ್ಲಿ ತೀವ್ರವಾದ ಭಿನ್ನಾಭಿಪ್ರಾಯಗಳು ಹುಟ್ಟಿಕೊಂಡಿವೆ. ವಾಮನ ಬೇಂದ್ರೆಯವರು ತುಂಬ ಶ್ರದ್ಧೆಯಿಂದ ಸಾಧ್ಯವಿರುವ ಎಲ್ಲ ಆಕರಗಳನ್ನು ಸಂಗ್ರಹಿಸಿ, ಆಧಾರಗಳನ್ನು ಪರಿಶೀಲಿಸಿ ತಮ್ಮ ಖಚಿತವಾದ ಅಭಿಪ್ರಾಯಗಳನ್ನು ಈ ಗ್ರಂಥದಲ್ಲಿ ಮಂಡಿಸಿದ್ದಾರೆ. ವಿಶೇಷವಾಗಿ ಕವಿಯ ಕಾಲ, ಸ್ಥಳ ಇವುಗಳ ಬಗ್ಗೆ ಅವರು ಕೊಟ್ಟಿರುವ ಎಲ್ಲ ಆಧಾರಗಳನ್ನು ಪರಿಶೀಲಿಸಿದರೆ ಅವರ ತೀರ್ಮಾನವನ್ನು ಒಪ್ಪಿಕೊಳ್ಳಬೇಕೆಂದು ಯಾರಿಗಾದರೂ ತೋರದೆ ಇರದು... ಗ್ರಂಥದುದ್ದಕ್ಕೂ ಅಭ್ಯಾಸಿಗಳಿಗೆ ಸಹಾಯಕವಾದ ನವೀನಸಾಮಗ್ರಿ, ನವೀನಸಂಶೋಧನೆ, ನವೀನ ನಿರ್ಣಯಗಳಿರುವುದರಿಂದ, ಕನ್ನಡ ಜೈಮಿನಿ ಭಾರತದ ವಿಚಾರದಲ್ಲಿ ಇದೊಂದು ಪ್ರಮಾಣಭೂತವಾದ ಗ್ರಂಥವೆಂದು ಮನ್ನಣೆ ಪಡೆಯಲು ಅರ್ಹವಾಗಿದೆ. ಕನ್ನಡ ಸಾಹಿತ್ಯದಲ್ಲಿ ಆಸಕ್ತಿಯುಳ್ಳ ಸಹೃದಯರು ಮತ್ತು ಕನ್ನಡ ಸಾಹಿತ್ಯವನ್ನು ಅಭ್ಯಸಿಸುವ ವಿದ್ಯಾರ್ಥಿಗಳು ಮತ್ತು ಅಧ್ಯಾಪಕರು ಇದರಿಂದ ಪ್ರಯೋಜನ ಹೊಂದುವರೆಂದು ನಾನು ಆಶಿಸುತ್ತೇನೆ."

—ಡಾ. ರಂ. ಶ್ರೀ. ಮುಗಳಿ

*Lakshmishana Jaimini Bharata* "is devoted to a detailed study of the literary aspects of the work proper. The theories of Indian poetics have been borne in mind while tracing out the development of the plot... The comparative study of Kannada and Sanskrit *Jaimini Bharatas* reveals the fact that the Kannada *Jaimini Bharata* departs from the original in many respects, and these departures add to the beauty of the poem. Although the Marathi and the Telugu *Jaimini Bharatas* have neither influenced nor been influenced by the Kannada *Jaimini Bharata,* a comparative study of these works helps us to know how far these works differ from each other, though emanating from the same source, how these differences mark the greatness of each poet, and in what way the Kannada *Jaimini Bharata* excels the other two... The prosodical features, the poetic qualities and embellishments have been discussed fully in the light of the principles enunciated by the successive poeticians like Bharata, Bhamaha, Dandi, Vamana, Vishwanatha, etc.... Lakshmisha's art of story-telling has been described in the light of modern techniques. The special characteristics of the poem and the place of Lakshmisha in the history of Kannada literature have been discussed."

—DR. D. JAVARE GOWDA

# ಲಕ್ಷ್ಮೀಶನ
# ಜೈಮಿನಿ ಭಾರತ

## ಒಂದು ಅಧ್ಯಯನ



**ಡಾ. ವಾಮನ ಬೇಂದ್ರೆ**
ರೀಡರ್ ಹಾಗೂ ಮುಖ್ಯಸ್ಥ, ಕನ್ನಡ ವಿಭಾಗ
ಕಿಟೆಲ್ ಕಾಲೇಜು, ಧಾರವಾಡ

ಗ್ರಂಥ ಸಂಪಾದನೆ ಮತ್ತು ತುಲನಾತ್ಮಕ ದೃಷ್ಟಿಯಿಂದ
ಸಂಸ್ಕೃತ, ಮರಾಠಿ ಮತ್ತು ಕನ್ನಡ
ಜೈಮಿನಿ ಭಾರತಗಳನ್ನು (ಅಶ್ವಮೇಧಿಕ ಪರ್ವ)
ಅನುಲಕ್ಷಿಸಿ ಸಿದ್ಧಗೊಳಿಸಿರುವ
ಒಂದು ಸಂಶೋಧನಾತ್ಮಕ ಪ್ರಬಂಧ



ಗೀತಾ ಬುಕ್ ಹೌಸ್ : ಪ್ರಕಾಶಕರು : ಮೈಸೂರು

*LAKSHMISHANA JAIMINI BHARATA: ONDU ADHYAYANA* (A Study of Lakshmisha's *Jaimini Bharata*)—By Dr. Vaman D. Bendre, M.A., Ph.D., Reader and Head of the Department of Kannada, Kittel College, Dharwad. Published by Geetha Book House, New Statue Circle, Mysore 570 001, 1979.

ಪ್ರಥಮ ಮುದ್ರಣ 1979




ಮುದ್ರಕರು
ಶ್ರೀ ಸದ್ಗುರು ಪ್ರಿಂಟರ್ಸ್
ರಾಮಾನುಜ ರಸ್ತೆ, ಮೈಸೂರು–570 004

# ಅರ್ಪಣೆ



ದಿ. ಲಕ್ಷ್ಮೀಬಾಯಿ ದತ್ತಾತ್ರೇಯ ಬೇಂದ್ರೆ

(ಏಪ್ರಿಲ್ ೧೨, ೧೯೦೬ – ಆಗಸ್ಟ್ ೧೭, ೧೯೬೬)

ಮರಣಶಯ್ಯೆಯಲ್ಲಿ ಇರುವಾಗಲೇ ನನ್ನ ಈ ಪ್ರಬಂಧವನ್ನು

ಓದಿಸಿ ಕೇಳಿ, ಚಿತ್ರಗಳನ್ನು ನೋಡಿ, ಆನಂದಪಟ್ಟು ನನ್ನನ್ನು ಆಶೀರ್ವದಿಸಿದ

ತಾಯಿಗೆ

ನನ್ನ ಈ ಕೃತಿ ಸಮರ್ಪಿತ

# ಅನುಕ್ರಮಣಿಕೆ

# ಕೆಲವು ಸೂಚನೆಗಳು

- ಪುಟ ೩೫ ರಿಂದ ೪೮ರವರೆಗೆ ಲಕ್ಷ್ಮೀಶ ಕವಿಯ ಜನ್ಮಸ್ಥಳದ ಆಧಾರಗಳಾದ ೧೮ ಚಿತ್ರಗಳ ಉಲ್ಲೇಖ ಬರುತ್ತದೆ. ಆದರೆ ಎಲ್ಲ ಚಿತ್ರಗಳನ್ನೂ ಪ್ರಕಟಿಸಲು ಸಾಧ್ಯವಾಗಿಲ್ಲ. ಆದ್ದರಿಂದ ಪ್ರಕಟಗೊಂಡ ಚಿತ್ರಗಳ ವಿವರವನ್ನು ಮಾತ್ರ ಪುಟ ೩೫ ರಿಂದ ೪೮ರಲ್ಲಿ ನೋಡಿಕೊಳ್ಳಬೇಕು.
- ಕಾವ್ಯವಸ್ತುವನ್ನು ಕುರಿತು ಸಿದ್ಧಪಡಿಸಿದ ಚಿತ್ರಗಳ ವಿವರವಿದ್ದಲ್ಲಿ—ಪು. ೭೯ ಮತ್ತು ಇತರೆಡೆಗೆ—X ಅಕ್ಷ, Y–ಅಕ್ಷ ಮತ್ತು ಮನೆಗಳ ವಿಷಯ ಬರುತ್ತದೆ. ಇದಕ್ಕೆ ಕಾರಣ ಮೂಲ ಚಿತ್ರಗಳು ಗ್ರಾಫ್ ಪೇಪರ್ ಮೇಲೆ ಇದ್ದವು. ಗ್ರಾಫ್‌ನ ಒಂದೊಂದು ಮನೆ= ಕಾವ್ಯದೊಳಗಿನ ಒಂದೊಂದು ಪದ್ಯ ಎಂದು ಹಿಡಿದು ವಿವರಗಳನ್ನು ಪ್ರಕಟಿಸಲಾಗಿದೆ. ಆದರೆ ಚಿತ್ರಗಳಲ್ಲಿ ಗ್ರಾಫ್ ಮನೆಗಳಿಲ್ಲದ್ದರಿಂದ, ಗ್ರಾಫ್ ಮನೆ ಮತ್ತು ಪದ್ಯಗಳಿಗಿರುವ ಸಮೀಕರಣವನ್ನು ಬಿಟ್ಟುಬಿಡಬೇಕು.
- ಈ ಕೆಳಗಿನ ಮುದ್ರಣದೋಷಗಳನ್ನು ಗ್ರಂಥದ ಅಭ್ಯಾಸಿಗಳು ದಯೆಯಿಟ್ಟು ಗಮನಿಸಬೇಕು.

| ಪುಟ | ಸಾಲು | ಹೀಗಿದೆ | ಸರಿಮಾಡಿ ಓದಿಕೊಳ್ಳಬೇಕು |
|---|---|---|---|
| ೩೫ | ೨೮ | ತೊಟಿತಿ | ತೊಜಿತಿ |
| ೪೫ | ೩ | ವಂತೆ | ಕೊಡುವಂತೆ |
| ೮೩ | ೪/೫ | ವಸ್ತು | ವಸ್ತು ಎಂದರೇನು ? |
| ೮೪ | ೨೪ | ಪವೀರ | ಪ್ರವೀರ |
| ೧೧೯ | ೩ | ಕೃಷ್ಣಾಂತ | ಕೃಷ್ಣಾಂಕ |
| ೧೨೩ | ೨೨ | ಉತ್ತಮದ ಉತ್ತಮದ | ಉತ್ತಮದ |
| ೧೩೧ | ೨೬ | ಕುಡಿದರ್ | ಕುಡದಿರ್ |
| ೧೫೮ | ೩ | ವರವನಿರ್ತು | ವರವನಿತ್ತು |
| ೧೬೫ | ೧೬ | ಮಾಕೃಭಕ್ತ | ಮಾತೃಭಕ್ತ |
| ೧೯೨ | ೧೮ | ಯಮನೆ | ಯಮುನಿಗೆ |
| ೨೨೩ | ೨೫ | ಪರಚಕ್ರಿ | ವರಚಕ್ರಿ |
| ೨೩೧ | ೨೨ | ಶ್ರೀಕೃಷನಿರೆ | ಶ್ರೀಕೃಷ್ಣನಿರೆ |
| ೨೩೮ | ೩೦ | ಪಲ್ಲವರ | ಪಲ್ಲವದ |
| ೨೩೯ | ೪ | ಸ್ವರದಿಂ | ಸ್ವೈರದಿಂ |
| ೨೪೫ | ೧೧ | ಆಹದ | ಆಹವ |
| ೨೬೯ | ೬ | ರಥಜಗತ್ | ರಥಜವಾತ್ |
| ೩೧೧ | ೨೫ | ತುರುಣಿಯ | ತರುಣಿಯ |
| ೩೧೭ | ೧೬ | ವಡೆಸಹಿತ | ಪಡೆಸಹಿತ |
| ೩೫೫ | ೧೪ | ಕಳೆದನಮನಗರೀ | ಕಳೆದನಮರನಗರಿ |
| ೩೭೩ | ಅಡಿಟಿಪ್ಪಣಿ | ನಾಯಿರ್...1974 | ನಾಯಕ...1964 |
| ೩೭೪ | ೧೪ | ಪದವಲ್ಲವಕೆ | ಪದಪಲ್ಲವಕೆ |
| ೩೮೬ | ೧೪ | ತಿಳಿದೀತು | ತಿಳಿಯಾದೀತು |
| ೪೨೦ | ೮ | ತಾಂಬಶಿ | ತಾಂಬಕಿ |
| ೪೨೩ | ಕೊನೆಯ ಸಾಲು | ಸತ್ಕೃತ ರಾಮನ | ಸಂಸ್ಕೃತ ಕಾವ್ಯದ ರಾಮನ |
| ೪೪೧ | ೨೫ | ಆಲಿಸುವುದೆಲ್ಲರು: | ಆಲಿಸುವುದೆಲ್ಲರುಂ |
| ೪೪೨ | ೨೮ | ತಪ್ರಾಪ್ಯ | ತತ್‌ಪ್ರಾಪ್ಯ |
| ೪೮೧ | ೨೧,೨೪ | ಕೇತಾರಗೌಳ | ಕೇದಾರಗೌಳ |
| ೫೪೨ | ೭ | ಬುವನ | ಭುವನ |
| ೫೪೫ | ೨೪ | ಣ್ಪೂಪುದು | ಣ್ಪಾವುದು |
| ೫೫೭ | ೨೭ | ಒಂಬತ್ತು | ಏಳು |

# ಕೃತಜ್ಞತೆಗಳು

'ಲಕ್ಷ್ಮೀಶನ ಜೈಮಿನಿ ಭಾರತ (ಸಂಶೋಧನಾತ್ಮಕ ಪ್ರಬಂಧ)' ಎಂಬುದನ್ನು ಕನ್ನಡ ಸಾಹಿತ್ಯ ಚರಿತ್ರೆಯ ಚಿಂತನ ಮಂಥನ ಕುಶಲರಾದ ಡಾ. ರಂ. ಶ್ರೀ. ಮುಗಳಿಯವರ ಪಾಂಡಿತ್ಯಪೂರ್ಣ ಮಾರ್ಗದರ್ಶನದಲ್ಲಿ ೨೪–೮–೧೯೬೧ರಿಂದ ಅಭ್ಯಾಸಮಾಡಿ, ಪೂನಾ ವಿಶ್ವವಿದ್ಯಾಲಯದಿಂದ ೨೨–೫–೧೯೬೭ರಲ್ಲಿ ಪಿಎಚ್.ಡಿ ಪದವಿಯನ್ನು ಪಡೆದೆ. ಈಗ ನನ್ನ ಈ ಪ್ರಬಂಧಕ್ಕೆ ಮುನ್ನುಡಿಯ ಶ್ರೀತಿಲಕವನ್ನು ಇಟ್ಟವರೂ ಡಾ. ರಂ.ಶ್ರೀ. ಮುಗಳಿಯವರೆ. ಅದಕ್ಕಾಗಿ ಅವರಿಗೆ ನಾನು ಚಿರಋಣಿ.

ಈ ಪ್ರಬಂಧವನ್ನು ಬರೆಯುತ್ತಿರುವಾಗ ನನ್ನ ತಂದೆಯವರಾದ ಡಾ. ದ. ರಾ. ಬೇಂದ್ರೆಯವರು ನನ್ನ ಸ್ಫೂರ್ತಿಕೇಂದ್ರವಾಗಿದ್ದು ಬರವಣಿಗೆಯಲ್ಲಿ ಇರಬೇಕಾದ ತೂಕದ ಕಲ್ಪನೆ ತಂದುಕೊಟ್ಟರು. ದಿ. ತೀ. ನಂ. ಶ್ರೀಕಂಠಯ್ಯ, ದಿ. ಡಿ. ಎಲ್. ನರಸಿಂಹಾಚಾರ್ ಅವರು ನನ್ನ ಪ್ರಯತ್ನದ ಲೋಪದೋಷಗಳತ್ತ ನನ್ನ ಗಮನವನ್ನು ಸೆಳೆದರು. ಡಾ. ವಿ. ಕೃ. ಗೋಕಾಕ, ಡಾ. ವಿ. ಸೀತಾರಾಮಯ್ಯ, ಡಾ. ಸದಾನಂದ ನಾಯಕ, ಶ್ರೀ ಎನ್. ಕೆ. ಕುಲಕರ್ಣಿ ಮತ್ತು ಪ್ರಾ. ಕೀರ್ತಿನಾಥ ಕುರ್ತಕೋಟಿ ಅವರು ನನ್ನ ಪ್ರಬಂಧ ರಚನೆಯನ್ನು ಕಂಡು ಬೆನ್ನು ಚಪ್ಪರಿಸಿ ಕಾರ್ಯಪ್ರವೃತ್ತ ಮಾಡಿದರು. ಇವರಿಗೆಲ್ಲ ನಾನು ಗೌರವಪೂರ್ವಕ ನಮನಗಳನ್ನು ಅರ್ಪಿಸಲೇಬೇಕು.

ಕರ್ನಾಟಕ ವಿಶ್ವವಿದ್ಯಾಲಯದ ರೀಸರ್ಚ್ ಇನ್ಸ್ಟಿಟ್ಯೂಟ್, ಮೈಸೂರಿನ ಓರಿಯಂಟಲ್ ರೀಸರ್ಚ್ ಇನ್ಸ್ಟಿಟ್ಯೂಟ್, ಮೈಸೂರಿನ ಸಂಸ್ಕೃತ ಕಾಲೇಜಿನ ಅಧಿಕಾರಿಗಳು ನನಗೆ ಜೈಮಿನಿ ಭಾರತದ ತಾಳೆಗರಿ ಪ್ರತಿ, ಕಾಗದದ ಪ್ರತಿಗಳನ್ನು ನೋಡಲು ಅನುಕೂಲ ಮಾಡಿಕೊಟ್ಟರು. ಅವರಿಗೆ ನಾನು ಉಪಕೃತನಾಗಿದ್ದೇನೆ. ಇದೇ ರೀತಿ ಗದುಗಿನ ಡಾ. ಆನಂದ ಉಮಚಗಿಯವರೂ ತಮ್ಮಲ್ಲಿದ್ದ ಹಸ್ತಪ್ರತಿಗಳನ್ನು ನನ್ನ ಉಪಯೋಗಕ್ಕೆ ಕೊಟ್ಟದ್ದಕ್ಕಾಗಿ ನಾನು ಆಭಾರಿಯಾಗಿದ್ದೇನೆ.

ಈ ಪ್ರಬಂಧದ ಹಸ್ತಪ್ರತಿಯನ್ನು ಸಿದ್ಧಪಡಿಸುವಾಗ ದಿ. ಮೇವುಂಡಿ ಮಲ್ಲಾರಿ, ಶ್ರೀ ಅರಳಗುಪ್ಪಿ ಮಾಸ್ತರ, ಶ್ರೀ ಬಾ. ಕುಲಕರ್ಣಿ, ಪ್ರಾ. ಕೆ. ಎಸ್. ಶರ್ಮ ಮತ್ತು ಅನೇಕ ಸ್ನೇಹಿತರು ಸಹಾಯ ಮಾಡಿದರು. ಅವರ ಸಸ್ನೇಹ ಅಂತಃಕರಣವನ್ನು ಸ್ಮರಿಸುತ್ತೇನೆ.

ಈ ಪ್ರಬಂಧದಲ್ಲಿಯ ಎಲ್ಲ ಚಿತ್ರಗಳನ್ನು ತೆಗೆದು ಪ್ರಬಂಧವನ್ನು ಸುಶೋಭಿತಗೊಳಿಸಿದವರು ಶ್ರೀ ಎಸ್. ವ್ಹಿ. ಪಟ್ಟಣಕೋಡಿಯವರು. ಅವರ ಉಪಕಾರ ಅನಮೌಲ್ಯವಾದುದು.

ಈ ಪ್ರಬಂಧ ಗ್ರಂಥರೂಪದಲ್ಲಿ ಪ್ರಕಟವಾಗಲು ತಕ್ಕುದೆಂದು ಉತ್ತೇಜನ ಕೊಟ್ಟು, ಇದರ ಪ್ರಕಾಶನಕ್ಕೆ ಬಹುಮಟ್ಟಿಗೆ ನೆರವಾದ ಡಾ. ದೇ. ಜವರೇಗೌಡ ಮತ್ತು ಡಾ. ಹಾ. ಮಾ. ನಾಯಕ ಅವರಿಗೆ ನನ್ನ ಕೃತಜ್ಞತೆಗಳು.

ಪ್ರಬಂಧವನ್ನು ಸ್ವತಂತ್ರವಾಗಿ ಮುದ್ರಿಸಿಕೊಳ್ಳಲು ಪೂನಾ ವಿಶ್ವವಿದ್ಯಾಲಯದ ಅಧಿಕಾರಿಗಳು ೯-೮-೧೯೭೩ರಂದು ಅನುಮತಿಯನ್ನು ಕೊಟ್ಟರು. ಅವರಿಗೆ ನಾನು ಆಭಾರಿಯಾಗಿರುವೆ.

ಈ ಪ್ರಬಂಧ ಪ್ರಕಾಶಕ್ಕೆ ಬರಲು ಕಾರಣೀಭೂತರಾದ ಶ್ರೀ ಎಂ. ಸತ್ಯನಾರಾಯಣ ರಾವ್ ಮತ್ತು ಅವರ ಸಹೋದರರಿಗೆ ಕೃತಜ್ಞತೆಗಳನ್ನು ಸಮರ್ಪಿಸದೆ ಇರಲಾರೆ.

ಶ್ರೀ ಕೃಷ್ಣ ಪೋದ್ದಾರ, ಆರ್. ಎನ್. ನಂಜುಂಡಪ್ಪ ಮತ್ತು ಎಸ್. ಎಸ್. ಶಾರದಾ ಪ್ರಸಾದ ಅವರು ಸಹಕರಿಸಿದ್ದಕ್ಕಾಗಿ ಅವರಿಗೂ ನನ್ನ ಸಸ್ನೇಹ ವಂದನೆಗಳು.

"ಕುದ್ದಾಲ ಹತವನುರೆ ತಾಳ್ದಿಮ್ಮನಿನ್ನೆಗಂ
ಮುದ್ದುಗೈದೀ ವಸುಧೆ ಬೆಳೆಯಿಸಿದಳೆಂದು ತುರು
ಗಿದ್ದ ತಣಿವಣ್ಗಳಿಂದೆಸೆವ ಪೆರ್ಗೊನೆಗಳಂ ಸಲೆಸಮರ್ಪಿಸಲೊಡರ್ಚಿ
ಎದ್ದಿರದೆ ಬಾಗಿದವು ಕದಳಿಗಳ್ ಧರಣಿಗೆ"

**ವಾಮನ ಬೇಂದ್ರೆ**

# ವಿಷಯಪ್ರವೇಶ

"ವ್ಯಾಸಾದಿಭಿಃ ಕವಿವರೈರವಸಾದಿತೋಽಪಿ
ಶೂನ್ಯತ್ವಮಾಪ ಕಲಯಾಪಿ ನ ವಾಕ್ಪ್ರಪಂಚಃ
ಆನಂದನಿರ್ಭರ ಚಕೋರ ಸಹಸ್ರಪೀತಂ
ಚಾಂದ್ರಂ ಮಹಃ ಕ್ಷಯಮುಪೈತಿ ನ ಮಾತ್ರಯಾಪಿ"*

ಮಹಾಭಾರತವೆಂದರೆ ಪ್ರಾಚೀನ ಭಾರತದ ಜ್ಞಾನಕೋಶವೇ ಸರಿ. ಅದರಲ್ಲಿ ಕಾವ್ಯ, ಇತಿಹಾಸ, ನೀತಿ, ಜ್ಞಾನ, ಧರ್ಮ, ತತ್ತ್ವವೂ ವಿಚಾರ ಎಲ್ಲ ಅಡಕವಾಗಿವೆ. ಹೀಗಾಗಿ "ಮಹಾಭಾರತದಲ್ಲಿರುವುದು ಎಲ್ಲಿಯೂ ಇರಬಹುದು, ಆದರೆ ಮಹಾಭಾರತದಲ್ಲಿ ಇಲ್ಲದುದು ಎಲ್ಲಿಯೂ ಇರಲಾರದು" ಎಂದೂ ಮಹಾಭಾರತದ ಹಿರಿಮೆ ಇದೆ. ಮಹಾಭಾರತಕ್ಕೆ ಪಂಚಮವೇದ ಎಂದೂ ಎನ್ನುತ್ತಾರೆ.

'ಮಹಾಭಾರತ'ದಲ್ಲಿ ಹದಿನೆಂಟು ಪರ್ವ, ಇಪ್ಪತ್ತೊಂದುನೂರಾ ಒಂಬತ್ತು ಅಧ್ಯಾಯ, ಲಕ್ಷಕ್ಕೂ ಮೇಲ್ಪಟ್ಟು ಶ್ಲೋಕಗಳಿವೆ. 'ರಾಮಾಯಣ' ಆದಿಕಾವ್ಯವಾದರೆ 'ಮಹಾಭಾರತ' ಕೇವಲ ಕಾವ್ಯವಲ್ಲ, ಜ್ಞಾನದೀಪ ಎಂದು ಪಂಡಿತರು ಅಭಿಪ್ರಾಯ ಪಟ್ಟಿದ್ದಾರೆ. ಈ ಜ್ಞಾನದೀಪದತ್ತ ಕನ್ನಡನಾಡಿನ ಕವಿಗಳ ಲಕ್ಷ್ಯವು ಆಕರ್ಷಿಸಲ್ಪಟ್ಟಿದ್ದು ಯುಕ್ತವೇ ಆಗಿದೆ.

ಇಡೀ ಮಹಾಭಾರತದ ಮೇಲೆ, ಅದರಲ್ಲಿಯ ಬಿಡಿಯಾದ ಕಥಾನಕಗಳ ಮೇಲೆ, ಕೃಷ್ಣಚಾರಿತ್ರ್ಯದ ಮೇಲೆ ಕ್ರಿ. ಶ. ೯೦೦ ರಿಂದ ಅಂದರೆ ಒಂದನೆಯ ಗುಣವರ್ಮನಿಂದ ಇಂದಿನವರೆಗೆ ಅನೇಕ ಕವಿಗಳ ಮನಸ್ಸು ನೆಲೆನಿಂತು ಸುಕೃತಿಗಳನ್ನು ನಿರ್ಮಿಸಿದೆ. 'ಮಹಾಭಾರತ'ವನ್ನು ಆಧರಿಸಿ ಈ ಕೃತಿಗಳನ್ನು ರಚಿಸುವುದರಲ್ಲಿ ಜೈನ ಮತ್ತು ಬ್ರಾಹ್ಮಣ ಕವಿಗಳು ಪ್ರಾಮುಖ್ಯ ಪಡೆದಿದ್ದಾರೆ. ಚಂಪೂ ಮತ್ತು ಷಟ್ಪದಿ ಛಂದೋರೂಪಗಳಲ್ಲಿ ಮಹಾಭಾರತವು ಅಭಿವ್ಯಕ್ತಗೊಂಡಿದೆ.

ಜೈನಕವಿಗಳಲ್ಲಿ ಪಂಪ ಮತ್ತು ರನ್ನ ವ್ಯಾಸಭಾರತದ ಕಥೆಯನ್ನು ಕನ್ನಡಕ್ಕೆ ತರುವಲ್ಲಿ ವೈದಿಕ ಪರಂಪರೆಯನ್ನು ಸಾಮಾನ್ಯವಾಗಿ ಅನುಸರಿಸಿದರೂ, ಜೈನದೃಷ್ಟಿಯನ್ನು ಅದರ ಮೇಲೆ ಬೀರಿದರು. ಪೂರ್ತಿ ಜೈನಸಂಪ್ರದಾಯದಂತೆ ಕರ್ಣಪಾರ್ಯ ಮತ್ತು ನೇಮಿಚಂದ್ರ ಇವರು ನೇಮಿನಾಥಪುರಾಣವನ್ನು ರಚಿಸಿದರು. ಇವುಗಳಲ್ಲಿ ಹರಿವಂಶ, ಕುರುವಂಶ, ನೇಮಿ ತೀರ್ಥಂಕರ ಚರಿತ್ರ ಈ ಮೂರರ ಮುಪ್ಪುರಿ ಇದೆ. ಕೃಷ್ಣ, ಕೌರವ, ಪಾಂಡವರ ಕಥೆಗಳೊಡನೆ ಒಬ್ಬ ತೀರ್ಥಂಕರನ ಪುರಾಣ ಈ ಜೈನ ಸಂಪ್ರದಾಯದಲ್ಲಿ ಸೇರಿಕೊಂಡಿದೆ. ಒಂದನೆಯ ಗುಣವರ್ಮ ಮತ್ತು ಬಂಧುವರ್ಮ ಇವರು 'ಹರಿವಂಶ' 'ಹರಿವಂಶಾಭ್ಯುದಯ' ಎಂಬ ಚಂಪೂ ಕಾವ್ಯಗಳನ್ನು ಅನುಕ್ರಮ

---

* 'ಮಹಾಭಾರತ' ಪುಸ್ತಿಕೆ : ಡಾ. ಕೆ. ಕೃಷ್ಣಮೂರ್ತಿ.

ವಾಗಿ ರಚಿಸಿದ್ದಾರೆ. ಸಾಳ್ವನು 'ಸಾಳ್ವಭಾರತ' ಎಂಬ ಕಾವ್ಯದಲ್ಲಿ ಜೈನಭಾರತ ಕಥೆಯನ್ನು ಮೊದಲನೆಯ ಸಲ ಸಮಗ್ರವಾಗಿ ಹದಿನಾರು ಪರ್ವಗಳಲ್ಲಿ ನಿರೂಪಿಸಿ ಕೀರ್ತಿ ಪಡೆದಿದ್ದಾನೆ. 'ಸಾಳ್ವಭಾರತ' ಭಾಮಿನೀ ಷಟ್ಪದಿಯಲ್ಲಿದ್ದು ಉಳಿದೆಲ್ಲ ಕೃತಿಗಳು ಚಂಪೂ ಛಂದಸ್ಸಿನಲ್ಲಿವೆ.

ಕನ್ನಡಕ್ಕೆ ಮಹಾಭಾರತದ ಕಥೆಯನ್ನು ಕೊಟ್ಟ ಬ್ರಾಹ್ಮಣ ಕವಿಗಳಲ್ಲಿ ಕುಮಾರವ್ಯಾಸ, ಲಕ್ಷ್ಮೀಶ, ತಿಮ್ಮಣ್ಣಕವಿ ಇವರೇ ಪ್ರಮುಖರು. ಕುಮಾರವ್ಯಾಸನು ಭಾಮಿನೀ ಷಟ್ಪದಿಯಲ್ಲಿ ಭಾರತದ ಮೊದಲ ಹತ್ತು ಪರ್ವಗಳನ್ನು ಕನ್ನಡಿಸಿದನು. ಇನ್ನುಳಿದ ಎಂಟು ಪರ್ವಗಳನ್ನು ತಿಮ್ಮಣ್ಣಕವಿಯು ವಿಜಯನಗರದ ಕೃಷ್ಣದೇವರಾಯನ ಹೇಳಿಕೆಯ ಪ್ರಕಾರ ಭಾಮಿನೀ ಷಟ್ಪದಿಯಲ್ಲಿಯೇ ಬರೆದು ಅರ್ಪಿಸಿದನು. ಲಕ್ಷ್ಮೀಶನು ಅನುವಾದಿಸಿದ್ದು ವ್ಯಾಸಭಾರತವನ್ನಲ್ಲ, ಜೈಮಿನಿ ಭಾರತವನ್ನು. ರುದ್ರಭಟ್ಟನು 'ವಿಷ್ಣು ಪುರಾಣ'ದ ೫, ೬ನೆಯ ಅಂಶಗಳಲ್ಲಿ ದೊರಕುವ ಶ್ರೀಕೃಷ್ಣ ಚರಿತ್ರೆಯನ್ನು ಕಾವ್ಯ ವಸ್ತುವನ್ನಾಗಿ ಮಾಡಿಕೊಂಡು 'ಜಗನ್ನಾಥವಿಜಯ'ವನ್ನು ಬರೆದಿದ್ದಾನೆ. ಚೌಂಡರಸನು ಮಹಾಭಾರತದಲ್ಲಿಯ ಒಂದು ಕಥಾನಕವಾದ ನಳಚರಿತ್ರೆಯನ್ನೇ ಚಂಪುವಿನಲ್ಲಿ ಕಾವ್ಯ ವಾಗಿ ಮಾಡಿದ್ದಾನೆ. 'ಜಗನ್ನಾಥವಿಜಯ' ಮತ್ತು 'ನಳಚರಿತ್ರೆ' ಇವೆರಡೂ ಚಂಪೂ ಕಾವ್ಯಗಳಾಗಿವೆ. ಚಾಟು ವಿಟ್ಠಲನಾಥನು ಭಾರತದ ಕೆಲವು ಭಾಗಗಳನ್ನೂ ಭಾಮಿನಿ ಷಟ್ಪದಿಯಲ್ಲಿ ರಚಿಸಿದ್ದಾನೆ. ಪುರಂದರದಾಸ ಮತ್ತು ಕನಕದಾಸರಿಗಂತೂ ಶ್ರೀಕೃಷ್ಣನೇ ಉಸಿರು. ಚಿಕ್ಕದೇವರಾಜನು ಭಾರತಕ್ಕೆ ಟೀಕೆ ಬರೆದಿದ್ದಾನೆ. ಜಗನ್ನಾಥದಾಸರು 'ಹರಿಕಥಾಮೃತಸಾರ'ವನ್ನು ಬರೆದಿದ್ದಾರೆ. ಈ ಪ್ರಕಾರ ಕನ್ನಡ ಕವಿಗಳು ವಿಧವಿಧ ವಾಗಿ ಮಹಾಭಾರತವನ್ನು ಅರಗಿಸಿಕೊಂಡು ಕೃತಿಗಳನ್ನು ನಿರ್ಮಿಸಿದ್ದಾರೆ.

ಸಂಸ್ಕೃತ ಜೈಮಿನಿ ಭಾರತವನ್ನು ಆಧರಿಸಿದ ಕನ್ನಡ ಜೈಮಿನಿ ಭಾರತವು ಯಾವ ವಿಶಿಷ್ಟ ಧರ್ಮವನ್ನಾಗಲಿ, ತತ್ತ್ವವನ್ನಾಗಲಿ ಎತ್ತಿಹಿಡಿಯುವ, ಪಾರಮ್ಯವಾದದ ಕಾವ್ಯ ವಲ್ಲ. ಬ್ರಹ್ಮ, ವಿಷ್ಣು, ಮಹೇಶ್ವರಾದಿ ಎಲ್ಲ ದೇವರು ಒಂದೇ, ನಾಮ ಹಲವು ಎಂದು ಪ್ರತಿಪಾದಿಸುವ ರಸವತ್ಕಾವ್ಯವಾಗಿದೆ. ಭಕ್ತಿರಸಪ್ರಾಧಾನ್ಯ ಈ ಕಾವ್ಯದ ಪ್ರಮುಖ ಲಕ್ಷಣವಾಗಿದೆ.

ಈ ಕಾವ್ಯದ ಕೊನೆಗೆ ನಡೆಯುವ ಅಶ್ವಮೇಧ ಯಜ್ಞವು ಹಿಂಸಾಯಜ್ಞವಲ್ಲ; ಅಹಿಂಸಾಯಜ್ಞ. ಅಶ್ವವು ಕಪ್ಪುರವಾಗಿ ಅದರ ಆತ್ಮತೇಜವು ಶ್ರೀಕೃಷ್ಣನಲ್ಲಿ ಅಡಗುತ್ತದೆ. ಈ ಕಾವ್ಯದಲ್ಲಿ ಸರ್ವಸಾಮಾನ್ಯವಾಗಿ ಬರುವ ಎಲ್ಲ ಪಾತ್ರಗಳು ದೇವಭಕ್ತಿಯುಳ್ಳ ಪಾತ್ರಗಳು. ಆದರೆ ಅವುಗಳಿಗೆ ಶ್ರೀಕೃಷ್ಣದರ್ಶನವಾಗುವವರೆಗೆ, ಜ್ಞಾನೋದಯವಾಗಿಲ್ಲ. ಶ್ರೀಕೃಷ್ಣದರ್ಶನವಾದ ಮೇಲೆ ಆ ಪಾತ್ರಗಳು ಜ್ಞಾನಿ ಭಕ್ತ ಎಂದು ಎನಿಸಿಕೊಳ್ಳುತ್ತವೆ. ಈ ಜ್ಞಾನ ಮತ್ತು ಭಕ್ತಿಗಳೇ ಮುಕ್ತಿಯ ಹಾದಿ ಎಂದು—

"ಭಕ್ತ್ಯಾ ಜ್ಞಾನಂ ತತೋಽಭಕ್ತಿಸ್ತತೋದೃಷ್ಟಿಸ್ತತಶ್ಚಸಾ
ತತೋ ಮುಕ್ತಿಸ್ತತೋ ಭಕ್ತಿಃ ಸೈವಸ್ಯಾತ್ ಸುಖರೂಪಿಣೀ ॥"*

—ಅನುವ್ಯಾಖ್ಯಾನ iii, 4, p. 51

ಹೇಳಲಾಗಿದೆ. ಇದರಂತೆ ಜೈಮಿನಿ ಭಾರತದ ಪಾಂಡವರು, ಅವರನ್ನು ಎದುರಿಸಿದ ರಾಜರು ಮತ್ತು ಯಜ್ಞಪೂರ್ವದಲ್ಲಿ, ಯಜ್ಞಕಾಲದಲ್ಲಿ ಆಗಮಿಸಿದ ಎಲ್ಲ ಋಷಿಮುನಿಗಳು ಮುಕ್ತಿಸುಖದ ಮಾರ್ಗದಲ್ಲಿ ಪಥಿಕರಾಗಿದ್ದಾರೆ. ಅವರಿಗೆಲ್ಲ ಶ್ರೀಕೃಷ್ಣನೇ ಮಾರ್ಗದರ್ಶಕ ತಾರಕ ಶಕ್ತಿಯಾಗಿದ್ದಾನೆ.

ನಾನು ಈ ಪ್ರಬಂಧವನ್ನು ಪೂನಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿ, ಪದವಿ ಪಡೆದು ಹತ್ತು ವರ್ಷಗಳಾದವು. ಈ ಹತ್ತು ವರ್ಷಗಳಲ್ಲಿ ನಾನು ಯಾವ ದೃಷ್ಟಿಯಿಂದ ಕನ್ನಡ ಜೈಮಿನಿ ಭಾರತವನ್ನು ಕಂಡಿದ್ದೇನೆ ಮತ್ತು ಅಭ್ಯಾಸ ಮಾಡಿದ್ದೇನೆ ಎಂಬುದರಲ್ಲಿ ಹೊಸತನ ಉಳಿದು ಬಂದಿದೆ. ಆದ್ದರಿಂದ ಪ್ರಬಂಧದ ವಿಷಯವಿನ್ಯಾಸದಲ್ಲಿ ಯಾವ ಬದಲಾವಣೆಯನ್ನೂ ಮಾಡಿಲ್ಲ. ಪ್ರಕರಣಗಳ ಹೊಂದಾಣಿಕೆಯಲ್ಲಿ ಮಾತ್ರ ಬದಲಾವಣೆ ಮಾಡಿದ್ದೇನೆ. ಪ್ರಬಂಧವನ್ನು ಎರಡು ಭಾಗಗಳಲ್ಲಿ ವಿಂಗಡಿಸಿದ್ದೇನೆ. ಮೊದಲನೆಯ ಭಾಗದಲ್ಲಿಯ ಐದು ಪ್ರಕರಣಗಳು ಕನ್ನಡ ಜೈಮಿನಿ ಭಾರತದ ರಸಿಕ ವಾಚಕರಿಗಾಗಿ ಮತ್ತು ಎರಡನೆಯ ಭಾಗದಲ್ಲಿಯ ಮೂರು ಪ್ರಕರಣಗಳು ಕನ್ನಡ ಜೈಮಿನಿ ಭಾರತವನ್ನು ಸಂಶೋಧನೆಯ ದೃಷ್ಟಿಯಿಂದ ನೋಡುವ ವಿದ್ವಾಂಸರಿಗಾಗಿ ಎಂದು ಯೋಜಿಸಿಕೊಂಡಿದ್ದೇನೆ.

ನನ್ನದು ಖಂಡನ ವಿಮರ್ಶೆಯಲ್ಲ, ಮಂಡನ ವಿಮರ್ಶೆ. ಕನ್ನಡ ಜೈಮಿನಿ ಭಾರತವನ್ನು ಕುರಿತು ನಡೆದ ಅಭ್ಯಾಸಲೇಖನದ ವಿಷಯಗಳನ್ನು, ಊಹೆಗಳನ್ನು, ಕಾಣ್ಕೆಗಳನ್ನು, ಅಭಿಪ್ರಾಯಗಳನ್ನು ಪ್ರತಿಯೊಂದು ಪ್ರಕರಣದ ಪ್ರಾರಂಭಕ್ಕೆ ಕೊಟ್ಟು ಅನಂತರದಲ್ಲಿ ನನ್ನ ವಿಚಾರಪ್ರವಾಹವನ್ನು ಹರಿಬಿಟ್ಟಿದ್ದೇನೆ, ಮಂಡಿಸಿದ್ದೇನೆ.

"ಆಪರಿತೋಷಾದ್ವಿದುಷಾಂ ನ ಸಾಧುಮನ್ಯೇ ಪ್ರಯೋಗ ವಿಜ್ಞಾನಂ
ಬಲವದಪಿ ಶಿಕ್ಷಿತಾನಾಮಾತ್ಮನ್ಯಪ್ರತ್ಯಯಂ ಚೇತಃ"

ಎಂಬುದರ ಅರಿವು ನನಗಿದೆ. ಆದ್ದರಿಂದ ನನ್ನ ಈ ಪ್ರಬಂಧವನ್ನು ಕನ್ನಡ ನಾಡಿನ, ಕನ್ನಡ ಸಾಹಿತ್ಯದ ಪಂಡಿತಮಂಡಲಿಯ ಎದುರು ಅತ್ಯಂತ ವಿನಯಪೂರ್ವಕವಾಗಿ ಸಾದರಪಡಿಸುತ್ತಿದ್ದೇನೆ. ೧೯೬೭ರ ಅನಂತರದಲ್ಲಿ ಕವಿ ಲಕ್ಷ್ಮೀಶ ಮತ್ತು ಜೈಮಿನಿ ಭಾರತವನ್ನು ಕುರಿತು ಪ್ರಕಟವಾದ ಲೇಖನ ಮತ್ತು ಗ್ರಂಥಗಳ ವಿಷಯವನ್ನು ಈ ಪ್ರಬಂಧದಲ್ಲಿ ಅಪೇಕ್ಷಿಸಬಾರದು.

**ವಾಮನ ಬೇಂದ್ರೆ**

---

* *Madhva's Teachings in His Own Words*—B. N. K. Sharma, p. 92.

# ಲಕ್ಷ್ಮೀಶ ಕವಿ

ಎಲೆ ಕರ್ಣಾಟಕಕವೀಂದ್ರ ಚೂತವನ ಚೈತ್ರ ! ಪ್ರೌಢ ಲಕ್ಷ್ಮೀಶ! ಗಾ
ವಿಲನಾದೆನ್ನ ಬಳಲ್ದ ಬಂಜೆನುಡಿಯುಂ ನೀಸಾಲಿಸೈ, ಲಾಲಿಸೈ !
ಲಲಿತ ಸ್ಮಾರಕ ಕಂಭದೊಲ್ ಕೃತಿಯೆ ನಿನ್ನಾ ನಾಮಮಂ ಕೀರ್ತಿಸಲ್
ಹುಲುಮಾತಿಂ ಪೊಗಳಿರ್ಪ ಮೂಢ ಕವಿಯುಂ ಪಕ್ಕಾಗನೇ ನಿಂದೆಗಂ ?

ಮುಗಿಲಂ ಮುಟ್ಟಿದ ಶೃಂಗಮಂ ಗಗನದೊಳ್ ಪ್ರಚ್ಛನ್ನಗೈದುಂ ವಲಂ
ಜಗಕಂ ಕನ್ನಡಿಯಂತೆ ತೋರಿ ಬೆಳೆದುಂ, ಪ್ರೌನ್ನತ್ಯದಿಂ ನಿಂದು, ನು
ಣ್ಬುಗರಿಂ ಶೋಭಿಪ ಸತ್ಕವೀಂದ್ರ ಗಿರಿ ! ನಿನ್ನಂ ನೋಡಲೇನೆಂದಪೆಂ ?
ಮಿಗೆಯುತ್ಸಾಹದಿ ನೀರವಂ ನಿರಧಿಕಂ ನಿಷ್ಪಂದಮಾನಂದಿಪೆಂ.

ಅಳಿವರ್ ಕಬ್ಬಿಗರೆಂದು ಪೇಳ್ವ ನುಡಿಯುಂ ಚೆನ್ನಪ್ಪುದೇ ಲೋಕದೊಳ್ ?
ಅಳಿವಿಲ್ಲಂ ಕೃತಿಗಳ್ಗೆ, ನಿನ್ನ ಜಸಮುಂ ಕರ್ಣಾಟದೊಳ್ ಶಾಶ್ವತಂ
ತಿಳಿಯಲ್ ನಿನ್ನಯ ಷಟ್ಪದಂಗಳೊಲವಿಂ ಸಾಹಿತ್ಯ ವಿದ್ವಾಂಸ ಮಂ-
ಡಳ ಕಾಸಾರದೊಳೀಗಳುಂ ಮೊರೆವುವೈ ನಿನ್ನಿಚ್ಛೆಯಂ ಪಾಲಿಸಲ್.

ಬೆಳೆದೆಂ ಬಾಲಕನಾಗಿ ನಿನ್ನ ವಿಲಸತ್ಷಟ್ಪಾದ ಝೇಂಕಾರದೊಳ್,
ಕಳೆದೆಂ ಜವ್ವನಮಂ ವಿಲಾಸ ಕವಿತಾ ಸಂಭೂತ ಶೃಂಗಾರದೊಳ್,
ತಳೆದುಂ ಮಾನಸ ತೃಪ್ತಿಯಂ ಕೃತಿಯ ಸದ್ಧರ್ಮೋಪದೇಶಂಗಳಿಂ,
ಕಳೆವೆಂ ಸಂಸೃತಿ ದುಃಖದಿಂ ನುರಿದ ಮುಪ್ಪಂ ನಿನ್ನ ವಾರ್ಧಿಕ್ಯದೊಳ್.

ದಿ. ಪಂಜೆ ಮಂಗೇಶರಾಯರು

['ಸುವಾಸಿನಿ' ಮಾಸಪತ್ರಿಕೆ— ೧೯೦೩]

## ಭಾಗ ಒಂದು

'. . . ಸುಮಾರ್ಗದೊಳ್ ನಡೆವ ಸತ್ಪುರುಷನ ಗ
ಭೀರದೆಸಕವ ಪೋಲ್ವ ಕಾವ್ಯ ಪ್ರಬಂಧಮಂ
ಶಾರದೆಯ ಕರುಣದಿಂ ಪೇಳ್ವೆನಾಂ ದೋಷಮಂತೊರೆದೆಲ್ಲರುಂ ಕೇಳ್ವುದು'

—ಲಕ್ಷ್ಮೀಶ

# ೧/ ಕವಿ ಮತ್ತು ಕಾವ್ಯ

- ಪ್ರಸ್ತಾವನೆ
- ಸಂಶೋಧಕ ವಿದ್ವಾಂಸರ ಅಭಿಪ್ರಾಯಗಳ ಪರಿಶೀಲನೆ: (ಅ) ಕವಿಯ ಜೀವನ ಚರಿತ್ರೆ (ಬ) ನಿವಾಸಸ್ಥಾನ (ಕ) ಕವಿಯ ಮತ (ಡ) ಕವಿಯ ಬಿರುದು (ಇ) ಕಾವ್ಯದ ರಚನಾಕಾಲ
- ಹೊಸ ಸಂಶೋಧನೆಯ ದೃಷ್ಟಿಯಲ್ಲಿ ವಾದ–ವಿವಾದಗಳ ಪುನರ್ವಿಮರ್ಶೆ
- ಕಾವ್ಯದ ರಚನಾಕಾಲ : (ಅ) ಸಂಸ್ಕೃತ ಜೈಮಿನಿಭಾರತದ ಕಾಲ (ಬ) ಕನ್ನಡ ಜೈಮಿನಿಭಾರತದ ಕಾಲ
- ಕವಿ ಲಕ್ಷ್ಮೀಶನ ಇತರ ಕೃತಿಗಳು
- ಸಮಾರೋಪ

## ಪ್ರಸ್ತಾವನೆ

'ಸುಮಾರ್ಗದೊಳ್ ನಡೆವ ಸತ್ಪುರುಷನ ಗಭೀರದೆಸಕವ ಪೋಲ್ವ ಕಾವ್ಯ ಪ್ರಬಂಧಮಂ ಶಾರದೆಯ ಕರುಣದಿಂ ಪೇಳ್ವೆನಾಂ' ಎಂದಿರುವಲ್ಲಿ ಕನ್ನಡ ಜೈಮಿನಿ ಭಾರತದ ಕವಿ ಲಕ್ಷ್ಮೀಶನು ಭಕ್ತಿಜೀವಿ ಎಂಬುದು ಸ್ಫುಟವಾಗಿದೆ. ಅವನು ಭಕ್ತಶ್ರೇಷ್ಠ ನಾಗಿ ಕೇವಲ ಸಾಧುಸಂತರ ಮಾಲಿಕೆಯಲ್ಲಿ ಸೇರದೆ, ಭಕ್ತಕವಿಯಾಗಿ ಕಾವ್ಯರೂಪದಿಂದ ಜನಮನದಲ್ಲಿ ಶಾಶ್ವತವಾದ ಸ್ಥಾನವನ್ನು ಪಡೆದಿದ್ದಾನೆ. ಇಂತಹ ಈ ಕವಿಯ ಜೀವನ ಚರಿತ್ರೆ, ನಿವಾಸಸ್ಥಾನ, ಮತ, ಬಿರುದು ಮತ್ತು ಕಾವ್ಯ ರಚನಾಕಾಲ ಇವುಗಳ ಬಗ್ಗೆ ಸಾಹಿತ್ಯ ಕ್ಷೇತ್ರದಲ್ಲಿ ಒಮ್ಮತವಿಲ್ಲ !

ಈ ಪ್ರಕರಣದ ಪ್ರಾರಂಭಕ್ಕೆ ಈವರೆಗೆ ಸಂಶೋಧಕ ವಿದ್ವಾಂಸರು ಅಭಿವ್ಯಕ್ತ ಪಡಿಸಿದ ಅಭಿಪ್ರಾಯಗಳ ಸಾರಾಂಶವನ್ನು ಕೊಟ್ಟಿದ್ದೇನೆ. ಅನಂತರ ಆ ಎಲ್ಲ ಅಭಿಪ್ರಾಯ ಗಳನ್ನು ನನ್ನ ಸಂಶೋಧಕ ದೃಷ್ಟಿಯಿಂದ ನೋಡಿ, ಪರಿಶೀಲನೆ ಮಾಡಿ, ಪುನಃ ವಿಮರ್ಶಿ ಸಿದ್ದೇನೆ, ಮಂಡಿಸಿದ್ದೇನೆ.

ಕವಿ ತನ್ನ ಜೀವನ ಮತ್ತು ಕೃತಿಗಳ ಬಗ್ಗೆ ಹೆಚ್ಚು ವಿವರಗಳನ್ನು ಕೊಡದಿರುವಾಗ ಅವುಗಳನ್ನೆಲ್ಲ ಊಹಿಸಬೇಕಾಗುತ್ತದೆ. ಈ ಊಹೆ ಬಾಹ್ಯ ಉಪಲಬ್ಧ ಆಧಾರಗಳನ್ನು

ಅವಲಂಬಿಸುತ್ತದೆ. ಆ ಆಧಾರಗಳ ಸತ್ಯಾಸತ್ಯತೆಯ ಬಗ್ಗೆ ಸಂಶಯಪಡುತ್ತಹೋದರೆ ಅದಕ್ಕೆ ಕೊನೆ ಇಲ್ಲ. ಸಿಕ್ಕಿರುವ ಕೆಲವು ಆಧಾರಗಳನ್ನು ನಂಬಿ ವಿಚಾರ ಮಂಥನವನ್ನು ನಡೆಯಿಸಿದ್ದಾದರೆ, ನಾವು ಸತ್ಯದ ಸಮೀಪವನ್ನಾದರೂ ತಲುಪುತ್ತೇವೆ. ಈ ದೃಷ್ಟಿಯಿಂದ ಒಬ್ಬರು ಹೇಳಿದ ದಂತಕಥೆ, ಇನ್ನೊಬ್ಬರು ಹೇಳಿದ ರೀತಿ ನಡತೆ, ಮಗದೊಬ್ಬರು ತೋರಿಸಿದ ಮೂರ್ತಿ, ಸ್ಥಳ ಇವುಗಳನ್ನು ನಂಬಿ ಸಾಗಿದ್ದೇವೆ.

ಸಂಸ್ಕೃತ ಜೈಮಿನಿ ಭಾರತದ ರಚನಾಕಾಲವನ್ನು ಕುರಿತು ಇದುವರೆಗೆ ಯಾರೂ ಚರ್ಚಿಸಿದಂತೆ ಕಾಣಲಿಲ್ಲ. ಅದನ್ನು ಊಹಿಸಲು ನಾವಿಲ್ಲಿ ಪ್ರಯತ್ನಿಸಿದ್ದೇವೆ.

## ಸಂಶೋಧಕ ವಿದ್ವಾಂಸರ ಅಭಿಪ್ರಾಯಗಳ ಪರಿಶೀಲನೆ

### ಅ) ಕವಿಯ ಜೀವನಚರಿತ್ರೆ

ಕವಿಯ ಹೆಸರು ಲಕ್ಷ್ಮೀಶನೋ, ಲಕ್ಷ್ಮೀಪತಿಯೋ ಎಂಬುದನ್ನು ನಿರ್ಣಯಿಸಲು ಆಧಾರಗಳು ಸಾಲವು. ಅವನ ಜೈಮಿನಿಭಾರತ ಕಾವ್ಯದಲ್ಲಿ ಸಂಧಿ–೧ ಪದ್ಯ ೧೧ ರಲ್ಲಿ 'ಲಕ್ಷ್ಮೀಶನೆಂಬೊರ್ವನು' ಎಂದೂ ಸಂಧಿ–೩೪ ಪದ್ಯ ೪೬ ರಲ್ಲಿ 'ಲಕ್ಷ್ಮೀಪತಿಯಕಾವ್ಯ ರಚನೆ' ಎಂದೂ ಹೇಳಿಕೊಂಡಿದ್ದಾನೆ. ಇವೆರಡರಲ್ಲಿ ರೂಢಿಯಲ್ಲಿದ್ದ ಅವನ ಹೆಸರು ಯಾವುದು?

ನಂದಿಮಾಹಾತ್ಮ್ಯದಲ್ಲಿ ಗೋವಿಂದಕವಿಯು 'ಲಕ್ಷ್ಮೀಪತಿ' ಎಂದು ಈತನನ್ನು ಸ್ತುತಿಸಿದ್ದಾನೆ. ಲಕ್ಷ್ಮಕವಿ, ಕೋನಯ್ಯ ಮತ್ತು ಬಬ್ಬೂರರಂಗ ಇವರು 'ಲಕ್ಷ್ಮೀಶ' ಎಂದೇ ಸ್ಮರಿಸಿದ್ದಾರೆ. ಹೀಗೆ ಬಾಹ್ಯಪ್ರಮಾಣಗಳಾದ ಇತರ ಕಾವ್ಯಗಳಲ್ಲಿ ಕವಿಗೆ ಲಕ್ಷ್ಮೀಶ ಮತ್ತು ಲಕ್ಷ್ಮೀಪತಿ ಎಂದು ಎರಡೂ ಹೆಸರುಗಳನ್ನು ಬಳಸುತ್ತಿದ್ದುದು ಕಂಡು ಬರುತ್ತದೆ. ಇದರಿಂದ ಇವನ ಹೆಸರು ಈ ಎರಡರಲ್ಲಿ ಒಂದಾಗಿತ್ತು ಎಂದು ತಿಳಿಯಲಡ್ಡಿಯಿಲ್ಲ. ಸಾಹಿತ್ಯ ಚರಿತ್ರೆಯಲ್ಲಿ ವಿಶೇಷ ಪ್ರಚಾರಗೊಂಡಿರುವ ಲಕ್ಷ್ಮೀಶ ಎಂಬುದನ್ನು ಇಟ್ಟುಕೊಳ್ಳಬಹುದು ಎಂದೂ ಅಭಿಪ್ರಾಯಪಟ್ಟಿದ್ದಾರೆ. ಲಕ್ಷ್ಮೀಶನ ತಂದೆಯ ಹೆಸರು –ಅಣ್ಣಮ(ಅಥವಾ ಅಣ್ಣಮಾಂಕ) ಅಣ್ಣಯ್ಯ ಎಂದು ಹೇಳುತ್ತಾರೆ. ಇವುಗಳಲ್ಲಿ ಭೇದ ವೇನೂ ಇಲ್ಲ. ಕವಿಯ ಗೋತ್ರವು ಭಾರದ್ವಾಜ. ದೇವಪುರದ ಲಕ್ಷ್ಮೀಕಾಂತನೇ ಅವರ ಕುಲದೇವತೆ. ಇಷ್ಟು ವಿಷಯ ಮಾತ್ರ ನಮಗೆ ಜೈಮಿನಿಭಾರತದಿಂದ ಗೊತ್ತಾಗುತ್ತದೆ.

ರನ್ನ, ಕುಮಾರವ್ಯಾಸಾದಿ ಕವಿಗಳಂತೆ ಕವಿ ಲಕ್ಷ್ಮೀಶನು ತನ್ನ ಪ್ರೀತಿಯ ಕವಿಗಳಾರು ಎಂದು ಹೆಸರೆತ್ತಿ ಹೇಳಿಲ್ಲ. 'ಪೂರ್ವ ಸತ್ಕವಿಗಳ್ಗೆ ನಮಿಸಿ ನಾಂ ಕೃತಿಪೇಳ್ವೆನು' ಎಂದು ಸಾಮೂಹಿಕವಾಗಿ ಸ್ಮರಿಸುತ್ತಾನೆ. ಅವನ ಕಾವ್ಯಗುರುಗಳು ಯಾರು ಎಂಬುದೂ ಅವನ ಕಾವ್ಯದಿಂದ ಸ್ಪಷ್ಟವಾಗುವದಿಲ್ಲ. 'ಕನ್ನಡದ ನುಡಿಗಳ ಬಗೆಯರಿದ' ಪೂರ್ವಕವಿಗಳೆಲ್ಲರೂ ಅವನಿಗೆ ಆದರ್ಶವಾಗಿದ್ದಾರೆ.'ಹೃದ್ವನಜದೊಳ್ ದೇವಪುರದ ಸಿರಿಯೆಣೆಯೆನಸ ಪದದ್ವಯವನಾವಗಂ ಧ್ಯಾನಿಸುವ ಸಡಿಗಳಂ ಸದ್ವಿನಯದಿಂ ಭಜಿಪ ಬಲ್ಪಿಂದೆ'ತಾನು ಕಾವ್ಯ

ರಚಿಸಿದ್ದಾಗಿ ಅವನು ಹೇಳುತ್ತಾನೆ. ಎಂದರೆ ಲಕ್ಷ್ಮೀಶನ ಕಾವ್ಯಸ್ಫೂರ್ತಿಯ ಮೂಲ, ಪ್ರತಿಭೆಯ ಪ್ರವಾಹ, ವಿದ್ವತ್ತೆಯ ಬಿನ್ನಾಣ ಎಲ್ಲವೂ ಆತನ ದೇವನದು.

ಕವಿ ಲಕ್ಷ್ಮೀಶನಿಗೆ ರಾಜಾಶ್ರಯವಿತ್ತು ಎಂದು ಕೆಲವರು ಊಹಿಸುತ್ತಾರೆ. ಕವಿ ಪೀಠಿಕೆಯಲ್ಲಿ ಹೇಳಿಕೊಂಡಿರುವ 'ವಿದ್ವತ್ ಸಭಾವಲಯ' ಎಂಬ ಮಾತೂ ಈ ಊಹೆಗೆ ಎಡೆಮಾಡಿ ಕೊಟ್ಟಿದೆ. ರಾಜಪುರೋಹಿತರು 'ಸುರಪುರದ ಅರಸನ ಆಶ್ರಯವು ಕವಿಗೆ ಇರಬೇಕು' ಎಂದು ಊಹಿಸಿದ್ದಾರೆ. ಅದರಂತೆಯೇ ಎಚ್. ಎಚ್. ವಿಲ್ಸನ್ ಅವರು 'ಹೊಯ್ಸಳ ವಂಶದ ರಾಜನಾದ ವೀರಬಲ್ಲಾಳನ ಕಾಲದಲ್ಲಿ ಎಂದರೆ ಕ್ರಿ.ಶ. ೧೧೯೦ ರಿಂದ ೧೨೨೦ರಲ್ಲಿ ಜೈಮಿನಿ ಭಾರತ ಗ್ರಂಥವು ರಾಜಾಶ್ರಯದಲ್ಲಿ ಹುಟ್ಟಿತು' ಎಂದಿದ್ದಾರೆ.

ಕವಿ ಲಕ್ಷ್ಮೀಶನು ಜೈಮಿನಿ ಭಾರತ ಕಾವ್ಯವನ್ನು ಬರೆದುದಲ್ಲದೆ ಕೆಲವು ಕೀರ್ತನೆಗಳನ್ನೂ ಬರೆದಿದ್ದಾನೆ ಎಂದು ಹೇಳಿ, ಮೈಸೂರು ಸಂಸ್ಥಾನದ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆಯವರು ಪ್ರಕಟಪಡಿಸಿದ 'ಕನ್ನಡ ಜೈಮಿನಿ ಭಾರತ' ೧೯೫೭, ಅನುಬಂಧ ಪುಟ ೪೦೪ರಿಂದ ೪೧೧ರ ವರೆಗೆ ಸಂಗ್ರಹಿಸಿಕೊಟ್ಟಿದ್ದಾರೆ.

## ಬ) ಕವಿಯ ನಿವಾಸಸ್ಥಾನ

ಕವಿ ಲಕ್ಷ್ಮೀಶನ ನಿವಾಸಸ್ಥಾನವಾದ ದೇವನೂರು ಯಾವುದು? ಕಡೂರ ತಾಲೂಕಿನಲ್ಲಿರುವ ದೇವನೂರು ಕವಿಯ ನಿವಾಸಸ್ಥಾನವೆಂದು ಒಪ್ಪಬಹುದೇ? ಹಳೆಯ ಹೈದರಾಬಾದ ಸಂಸ್ಥಾನದಲ್ಲಿರುವ ಸುರಪುರವು ಕವಿಯ ನಿವಾಸಸ್ಥಾನವಾಗಿದ್ದು, ಅದನ್ನೇ ಕವಿಯು ದೇವಪುರ,ದೇವನಗರಿ,ದೇವಗ್ರಾಮ, ಸುರನಗರ, ಗೀರ್ವಾಣಪುರ, ದಿವಿಜಪುರ, ಅನಿಮಿಷಪುರ, ಅಮರಪುರ, ಅಮರನಗರಿ ಎಂದು ಬೇರೆ ಬೇರೆ ಪರ್ಯಾಯಶಬ್ದಗಳಿಂದ ಹೆಸರಿಸಿದನೆ? ಅಥವಾ ಆ ಸುರಪುರದ ದಕ್ಷಿಣಕ್ಕೆ ೬ ಮೈಲಿಗಳ ಮೇಲಿರುವ ದೇವಪುರ ಗ್ರಾಮವು ಕವಿ ಲಕ್ಷ್ಮೀಶನದಾಗಿರಬಹುದೇ ? ಎಂಬುದರ ಬಗೆಗೆ ವಿದ್ವಾಂಸರಲ್ಲಿ ಚರ್ಚೆ ನಡೆಯಿತು. ಆ ಚರ್ಚೆಯನ್ನು ಕಿರಿಯದರಲ್ಲಿ ಸಂಗ್ರಹಿಸಿ ಹೀಗೆ ಹೇಳಬಹುದು :

**ಟಿ. ಎಸ್. ವೆಂಕಣ್ಣಯ್ಯ :** ಕ. ಸಾ. ಪರಿಷತ್ ಪತ್ರಿಕೆ, ಸಂಪುಟ ೫, ಸಂಚಿಕೆ ೧ರಲ್ಲಿ ಕವಿ ಲಕ್ಷ್ಮೀಶನ ನಿವಾಸಸ್ಥಾನವು ಹೈದರಾಬಾದ ಸಂಸ್ಥಾನದಲ್ಲಿರುವ ಸುರಪುರವೆಂದು ಅನುಮಾನಿಸಿದರು. ಆ ಪ್ರಾಂತದಲ್ಲಿ ಈಗಲೂ ಜನಗಳು ಕನ್ನಡ ಭಾಷೆಯನ್ನು ಮಾತನಾಡುವುದು ಮತ್ತು ಆ ಗ್ರಾಮದಲ್ಲಿ ಒಂದು ಲಕ್ಷ್ಮೀರಮಣದೇವಸ್ಥಾನವಿರುವುದು ಇವರ ಅನುಮಾನಕ್ಕೆ ಪ್ರಮುಖ ಆಧಾರಗಳಾಗಿವೆ.

**ನಾ. ಶ್ರೀ. ರಾಜಪುರೋಹಿತರು:** ಕ.ಸಾ.ಪ.ಪ. ಸಂಪುಟ ೮, ಸಂಚಿಕೆ ೪ರಲ್ಲಿ ಸುರಪುರದ ದಕ್ಷಿಣಕ್ಕೆ ೬ ಮೈಲಿಗಳ ಮೇಲಿರುವ ದೇವಪುರ ಗ್ರಾಮವು ಕವಿ ಲಕ್ಷ್ಮೀಶನ ನಿವಾಸಸ್ಥಾನವೆಂದು ಸಾಧಿಸಿದ್ದಾರೆ. ದೇವಪುರ ಗ್ರಾಮದಲ್ಲಿಯ ಒಬ್ಬ ಅಕ್ಕಸಾಲಿಗನ ಮನೆಯಲ್ಲಿ ಕನ್ನಡ ಜೈಮಿನಿ ಭಾರತದ ಕೈಬರೆಹದ ಹಳೆಯಪ್ರತಿ ಸಿಕ್ಕಿದ್ದು ಮತ್ತು ಆ ಗ್ರಾಮದಲ್ಲಿ ಲಕ್ಷ್ಮೀದೇವಿ ಮತ್ತು ಲಕ್ಷ್ಮೀರಮಣನ ಪ್ರತ್ಯೇಕ ಪ್ರತ್ಯೇಕ ದೇವಾಲಯಗಳಿರು

ವುದು ಪ್ರಮುಖ ಆಧಾರಗಳಾಗಿವೆ. ದೇವಪುರಕ್ಕೆ ಮತ್ತು 'ಲಕ್ಷ್ಮೀಶ' ಪದಕ್ಕೆ ಕವಿ ಪರ್ಯಾಯವಾಗಿ ಬಳಸಿದ ಪದಗಳನ್ನು ಸಂಗ್ರಹಿಸಿ ತಮ್ಮ ಮತವನ್ನು ಸಮರ್ಥಿಸಿದ್ದಾರೆ. 'ಅಣ್ಣಮಾಂಕ'ದಲ್ಲಿಯ 'ಮ' ಕಾರಾಂತ ಅಂಕಿತನಾಮದ ಮೇಲಿಂದ ಕವಿ ಲಕ್ಷ್ಮೀಶನು ವೆಂಗಿಮಂಡಲವಾಸಿಯೆಂದು ಹೇಳಿದ್ದಾರೆ. ಕಾವ್ಯದ ಭಾಷಾಸರಣಿಯ ಮೇಲಿಂದ ಕವಿಯು ವಿಜಾಪುರ ಪ್ರಾಂತದವನಾಗಿರಬೇಕು ಎಂದು ಊಹಿಸಿ ಅವರು ಹೇಳುವ ದೇವಪುರವು ವಿಜಾಪುರ ಜಿಲ್ಲೆಯ ತಾಳೀಕೋಟೆಯ ಹತ್ತಿರವಿದೆ ಎಂದು ಹೇಳಿದ್ದಾರೆ. ಇದಕ್ಕೆ ಉದಾಹರಣೆಯಾಗಿ 'ಫೌಜ' ಎಂಬ ಶಬ್ದವನ್ನು ಉಲ್ಲೇಖಿಸಿದ್ದಾರೆ. ದೇವಪುರದರಸನಾದಂಥ ಲಕ್ಷ್ಮೀಶ ಎಂಬ ರಾಜನನ್ನು ಶ್ಲೇಷದಿಂದ ಕವಿಯು ಬಳಸಿರಲಿಕ್ಕಿಲ್ಲವೇ? ಎಂದು ಪ್ರಶ್ನಿಸಿದ್ದಾರೆ.

**ಕೆ. ರಾಮಸ್ವಾಮಿ ಅಯ್ಯಂಗಾರರು :** ಕ.ಸಾ.ಪ.ಪ. ಸಂಪುಟ ೬, ಸಂಚಿಕೆ ೧ ರಲ್ಲಿ ಕವಿಯ ನಿವಾಸಸ್ಥಾನವು ಕಡೂರ ತಾಲೂಕಿನಲ್ಲಿಯ ದೇವನೂರು ಅಲ್ಲ ಎಂದು ಹೇಳಿ, ಕಡೂರು ತಾಲೂಕಿನಲ್ಲಿಯ ಶಕೆ ೧೪೪೦ ಮತ್ತು ೧೪೮೧ನೆಯ ಶಾಸನಗಳ ಆಧಾರದ ಮೇಲಿಂದ ದೇವನೂರಿಗೆ ಲಕ್ಷ್ಮೀನಾರಾಯಣಪುರ ಮತ್ತು ದೇವನೂರು ಹೀಗೆ ಬೇರೆ ಬೇರೆ ಹೆಸರುಗಳ ಪ್ರಯೋಗಗಳಿರುವುದನ್ನು ತಮ್ಮ ಅಭಿಪ್ರಾಯಕ್ಕೆ ಕಾರಣ ಕೊಡುತ್ತಾರೆ. ಕವಿಯು ಹೈದರಾಬಾದ ಸೀಮೆಯ ಒಂದು ಗ್ರಾಮವಾದ ದೇವಪುರವನ್ನೇ ಅನೇಕ ಪರ್ಯಾಯನಾಮಗಳಿಂದ ಸೂಚಿಸಿದ್ದಾನೆ ಎಂದು ಅವರು ಒಪ್ಪಿದ್ದಾರೆ. ಈ ಮತವು ರಾಜಪುರೋಹಿತರ ಮತವನ್ನು ಹೋಲುತ್ತದೆ.

**ಗೋವಿಂದ ಪೈಗಳು :** 'ಕವಿ ಲಕ್ಷ್ಮೀಶ' ಎಂಬ ಗ್ರಂಥದಲ್ಲಿ ಪುಟ ೧೦೦ ರಿಂದ ೧೧೫ರ ವರೆಗೆ ಕವಿಯ ನಿವಾಸಸ್ಥಾನವು ಕಡೂರ ತಾಲೂಕಿನಲ್ಲಿಯ ದೇವನೂರೇ ಹೌದು ಎಂದು ವಿವೇಚಿಸಿದ್ದಾರೆ. ಆ ವಿವೇಚನೆಯ ಸಾರವು ಇಂತಿದೆ :

೧. ಕಡೂರು ದೇವನೂರಿನಲ್ಲಿ 'ಲಕ್ಷ್ಮೀಕಾಂತ' ಎಂಬ ವಿಷ್ಣು ದೇವಾಲಯವಿದ್ದು, ಲಕ್ಷ್ಮೀದೇವಿಯ ದೇವಾಲಯವೂ ಇದೆ.

೨. ಅದೇ ಊರಿನ ಸಿದ್ಧೇಶ್ವರ ದೇವಾಲಯದಲ್ಲಿಯ ಕ್ರಿ.ಶ. ೧೨೩೩-೩೪ ನೆಯ ಶಿಲಾಲೇಖದ ಪ್ರಾರಂಭಕ್ಕಿದ್ದ 'ಶ್ರೀ ವಧು'ವೇ ಕವಿಗೆ 'ಶ್ರೀವಧುವಿನ' ಎಂದು ಕಾವ್ಯವನ್ನಾರಂಭಿಸಲು ಸ್ಫೂರ್ತಿಯನ್ನು ಕೊಟ್ಟಿರಬೇಕು.

೩. ಸಂಧಿ ೧೭, ಪದ್ಯ ೩ ರಲ್ಲಿ ಬರುವ 'ವರ ನೀಲಕಂಠ ನೃತ್ಯದಿಂ' ಮತ್ತು 'ಪರಶುರಾಮ ಪ್ರತಾಪವನ್' ಎಂಬ ಪದಗಳಿಗೆ ಶಿವಮೊಗ್ಗಾ ಜಿಲ್ಲೆಯ ಸಾಗರ ತಾಲೂಕಿನಲ್ಲಿರುವ ಅಂಧಾಸುರ ಪ್ರದೇಶ (ಅನಂತಪುರ) ಮತ್ತು ಚಿಕ್ಕಮಗಳೂರು ತಾಲೂಕಿನಲ್ಲಿಯ ಹಿರೇಮಗಳೂರಿನಲ್ಲಿರುವ ಪರಶುರಾಮ ದೇವಸ್ಥಾನ ಇವುಗಳ ಸಂಬಂಧವಿದೆ.

೪. 'ಭದ್ರಾವತಿ' ದೇಶದ ವರ್ಣನೆಯು ಕಡೂರ ದೇವನೂರಿನದೇ ಇರಬಹುದು.

೫. ಸಂಧಿ ೧೧, ಪದ್ಯ ೧೪ 'ಮಳೆಗಳಿಂ ತುದಿ ವಿಶಾಖೆಗೆ........ಅಂಕುರಿಸಲರಿಯದೆ ನಲಿಂತೆಂದನು'ಎಂಬುದರಿಂದ ಲಕ್ಷ್ಮೀಶನಿದ್ದ ನಾಡಿನಲ್ಲಿ ಮಘಾ ಪಂಚಕದ (ಮಘಾ, ಪೂರ್ವಾ, ಉತ್ತರಾ, ಹಸ್ತ, ಚಿತ್ತಾ) ಮಳೆ ಇದ್ದಿತೆಂದೂ ಅದು ವಿಶಾಖಾ ನಕ್ಷತ್ರ ದಲ್ಲಿ ಮುಗಿಯುತ್ತಿತ್ತೆಂದೂ ವ್ಯಕ್ತವಾಗುವುದರಿಂದ ಕವಿಯು ಕಡೂರ ದೇವ ನೂರಿನವನೇ ಆಗಿರಬೇಕೆಂಬುದಕ್ಕೆ ಇನ್ನೂ ಪುಷ್ಟಿ ಸಿಗುತ್ತದೆ.

೬. ಸಂಧಿ ೨೩, ಪದ್ಯ ೩೬ರಲ್ಲಿ ಬರುವ 'ಜಾಜಿನಗಿರಿ' ಅಥವಾ 'ಜಾಕಾಯಿಬೆಟ್ಟ' ವೆಂದರೆ ಕೊಡಗಿನ ಕೆಮ್ಮಣ್ಣ ಬೆಟ್ಟವೆಂಬ ಕಾವಿಗುಡ್ಡ.

೭. ಸಂಧಿ ೩, ಪದ್ಯ ೧೬ ರಲ್ಲಿ ಬರುವ 'ಶ್ವೇತಾದ್ರಿ' ಎಂದರೆ ಮೈಸೂರು ಜಿಲ್ಲೆ ಯಲ್ಲಿರುವ 'ಬಿಳಿಗಿರಿರಂಗನ ಬೆಟ್ಟ'ವಾಗಿರಬಹುದು. ಅಥವಾ ಕಡೂರ ಜಿಲ್ಲೆ ಯಿಂದ ಹಾದು ಹೋಗುವ 'ಬಾಬಾ ಬುಡನ್' ಎಂಬ 'ಚಂದ್ರದ್ರೋಣ'ಪರ್ವತದ ಹಲ ಶಿಖರಗಳಲ್ಲಿಯ ಯಾವುದೊಂದಾಗಲಿ, ಪಶ್ಚಿಮ ಘಟ್ಟವೆಂಬ ಸಹ್ಯಾದ್ರಿಯ ಶಿಖರಗಳಲ್ಲಿ ಯಾವುದೊಂದಾಗಲಿ—ಆಗಿರಬಹುದೇನೋ ?

೮. ಸಂಧಿ ೧೭, ಪದ್ಯ ೪೨ ರಲ್ಲಿ ಬರುವ ದಶಾವತಾರದ ವರ್ಣನೆಯಲ್ಲಿ ಬರುವ 'ಜಿತತಮಂ' 'ಅತಿ ಕಾಂತಿಶೋಭಿತ ದಿಗಂಬರಂ' ಮತ್ತು ಸಂಧಿ ೩೧, ಪದ್ಯ ೪೯ ರಲ್ಲಿ ಬರುವ 'ಸಮ್ಯಗ್‌ಜ್ಞಾನಬೋಧಿತದ' ಎಂಬ ಮಾತುಗಳ ಮೇಲಿಂದ ಕವಿ ಲಕ್ಷ್ಮೀಶನು ಜೈನಧರ್ಮದ ನೆಲೆಯುಳ್ಳ ನಾಡಿನವನಾಗಿರಬೇಕು, ಎಂದು ಅನೇಕ ಪ್ರಮಾಣಗಳನ್ನು ಕೊಟ್ಟು, ಕವಿಯ ವಾಸಸ್ಥಾನ ಕಡೂರ ದೇವನೂರು ಆಗು ತ್ತದೆ, ಎಂದು ಹೇಳಿ ಗೋವಿಂದ ಪೈಗಳು ನಾ. ಶ್ರೀ. ರಾಜಪುರೋಹಿತರ ವಿಚಾರ ಸರಣಿಯನ್ನು ಖಂಡಿಸಿದ್ದಾರೆ.

ಎಂ. ಆರ್. ಶ್ರೀ. : ಪ್ರಬುದ್ಧ ಕರ್ಣಾಟಕ ಸಂಪುಟ ೧೫, ದೀಪಾವಳಿ ಸಂಚಿಕೆ ಯಲ್ಲಿ ಕಾವ್ಯಾವಲೋಕನ ವಿಭಾಗದಲ್ಲಿ 'ಕವಿ ಲಕ್ಷ್ಮೀಶ' ವಿಮರ್ಶೆಯನ್ನು ಮಾಡಿದ್ದು ಅದರಲ್ಲಿ ಗೋವಿಂದ ಪೈಗಳು ನಾ. ಶ್ರೀ. ರಾಜಪುರೋಹಿತರ ವಾದಸರಣಿಯನ್ನು ಖಂಡಿ ಸಿದ ರೀತಿಯನ್ನು ಟೀಕಿಸಿದ್ದಾರೆ.

೧. ಹಸ್ತಾ, ಚಿತ್ರಾ, ವಿಶಾಖಾ ಮಳೆಗಳು ಹಿಂಗಾರಿ ಮಳೆಗಳು ; ಹಿಂಗಾರಿಮಳೆಗಳು ಹೈದರಾಬಾದ ಪ್ರಾಂತದಲ್ಲಿ ಹೆಚ್ಚು.

೨. ಜಾಜಿನ ಗಿರಿ ಶ್ವೇತಾದ್ರಿಗಳ ಬಗೆಗೆ ಹೇಳುವುದಾದರೆ ಶ್ವೇತಾದ್ರಿಯು ಕೈಲಾಸ ಪರ್ವತವನ್ನು ಸೂಚಿಸುತ್ತದಲ್ಲದೆ ಬಿಳಿಗಿರಿರಂಗನಬೆಟ್ಟವನ್ನಲ್ಲ.

೩. 'ಅತಿಕಾಂತಿಶೋಭಿತ ದಿಗಂಬರಂ' ಎಂಬ ಪದಕ್ಕೆ ಗೋಮಟೇಶ್ವರ ಮತ್ತು ಜೈನ ದರ್ಶನದ ಸಂಬಂಧವಿಲ್ಲ. ಪಾತಿವ್ರತ್ಯ ಭಂಗಮಾಡುವ ರೂಪವು—ಅತಿಕಾಂತಿ ಶೋಭಿತ ದಿಗಂಬರ ಎಂದು ಭಾಗವತ ಸಂಪ್ರದಾಯದ ಕವಿಯು ಹೇಳಿರುವುದು ಸಹಜವೇ ಆಗಿದೆ.

೪. 'ಸಮ್ಯಗ್‌ಜ್ಞಾನ' ಎಂಬ ಪದವನ್ನು ಜೈನೇತರರೂ ಉಪಯೋಗಿಸುತ್ತಾರೆ. ಚಾಮರಸನು 'ಪ್ರಭುಲಿಂಗ ಲೀಲೆ'ಯಲ್ಲಿ 'ಸಮ್ಯಗ್‌ಜ್ಞಾನಪೀಠಸ್ಥಲದ' ಎಂದಿದ್ದಾನೆ.

೫. ವರ್ಷಾಕಾಲದ ವರ್ಣನೆಯಲ್ಲಿರುವ 'ವರ ನೀಲಕಂಠ ನೃತ್ಯದಿಂ' ಎಂಬುದರ ಮೇಲಿಂದ ಲಕ್ಷ್ಮೀಶನು ಸಾಗರ ತಾಲೂಕಿನ ಅಂಧಾಸುರ ದೇಶವನ್ನಾಗಲಿ, ಹಿರೇ ಮಗಳೂರಿನ ಪರಶುರಾಮ ದೇವಾಲಯವನ್ನಾಗಲಿ ಉದ್ದೇಶಿಸಿರುವನೆಂದು ನಾವು ಒಪ್ಪುವದಿಲ್ಲ.

೬. ಭದ್ರಾವತಿ ವರ್ಣನೆಯ ಮೇಲಿಂದ ಕವಿಯು ಕಡೂರ ದೇವನೂರಿನವನೆಂದು ಸಾಧಿಸಲು ಬರುವಂತಿಲ್ಲ. ಏಕೆಂದರೆ ಸಂಸ್ಕೃತ ಜೈಮಿನಿ ಭಾರತದಲ್ಲಿರುವ ಭದ್ರಾವತಿಯ ವರ್ಣನೆಯನ್ನೇ ಕವಿಯು ಕನ್ನಡಿಸಿದ್ದಾನೆ. ಪೈಗಳಿಗೆ ಕಡೂರ ಸುತ್ತುಮುತ್ತಲಿನ ಪ್ರಾಂತ ಗೊತ್ತು ಎಂದು ತೋರುತ್ತದೆ. ಎಲ್ಲರ ಊಹಾ ಲೋಕಕ್ಕೆ ಆಧಾರ–ಕಾವ್ಯ, ಶಿಲಾಲೇಖ ಮತ್ತು ಇತರ ಬರೆಹಗಳೇ ಆಗಿವೆ. ನಾ. ಶ್ರೀ. ರಾಜಪುರೋಹಿತರು ಸುರಪುರದ ದಕ್ಷಿಣಕ್ಕೆ ೬ ಮೈಲುಗಳ ಮೇಲಿರುವ ದೇವಪುರವನ್ನು ಸಂದರ್ಶಿಸಿದ್ದರು.

**ದ. ರಾ. ಬೇಂದ್ರೆಯವರು :** ಇವರು ಪ್ರತ್ಯಕ್ಷವಾಗಿ ಹೈದರಾಬಾದ ಸಂಸ್ಥಾನದಲ್ಲಿರುವ ಸುರಪುರ ಮತ್ತು ಕಡೂರ ದೇವನೂರು ಇವೆರಡನ್ನೂ ಸಂದರ್ಶಿಸಿ ಕವಿಯ ನಿವಾಸ ಸ್ಥಾನವು ಕಡೂರ ದೇವನೂರೇ ಎಂಬ ಅಭಿಪ್ರಾಯಕ್ಕೆ ಬಂದಿದ್ದಾರೆ. 'ಶ್ರೀಲಕ್ಷ್ಮೀಶನ ಜೈಮಿನಿ ಭಾರತಕ್ಕೆ ಮುನ್ನುಡಿ' ಎಂಬ ಗ್ರಂಥದಲ್ಲಿ ಕಡೂರ ದೇವನೂರೇ ಕನ್ನಡ ಜೈಮಿನಿಯ ಜನ್ಮಭೂಮಿಯಾಗಿರಬಹುದೆಂಬುದಕ್ಕೆ ದೇವನೂರಿನ ಸುತ್ತುಮುತ್ತಲು ಜನಮೇಜಯನ ಸರ್ಪಯಾಗದ ದಂತಕಥೆಗಳು ಹೇರಳವಾಗಿ ಹರಡಿಕೊಂಡಿರುವುದು, ಒಂದು ಆನುಷಂಗಿಕ ಪ್ರಮಾಣವಾಗಬಹುದು ಎಂದು ಅವರೆಂದಿದ್ದಾರೆ. ಹಿರಿಮಗಳೂರು ಜನಮೇಜಯನ ಸರ್ಪಯಾಗದ ಸ್ಥಳ. ಕುಪ್ಪಗಡ್ಡೆ, ಬೇಗೂರು ಜನಮೇಜಯ ಹಾಕಿ ಕೊಟ್ಟ ಅಗ್ರಹಾರ. ಭೀಮನಕಟ್ಟೆ ಮಠದವರು ಜನಮೇಜಯನ ದಾನಶಾಸನ ತೋರಿಸುವರು. ['ಜನಮೇಜಯ ದತ್ತಿ' ಈ ನಾಡಿನಲ್ಲಿ ಹಲವಾರಿವೆ ಎಂದು ಶಾಸನಗಳಿಂದ ತಿಳಿಯುತ್ತದೆ.] ಕುಬ್ಬಟ್ಟೂರನ್ನು ಚಂದ್ರಹಾಸನ ಊರೆಂದೂ ಬಭ್ರುವಾಹನನ ಮಣಿಪುರವು ಚಾಮರಾಜನಗರದ ಹತ್ತಿರವೆಂದೂ ನೀಲಧ್ವಜನ ಮಾಹಿಷ್ಮತಿಯು ಮೈಸೂರೇ ಆಗಬಹುದೆಂದು ಸಾರುವ ದೇವನೂರಿನ ಸುತ್ತುಮುತ್ತಲಿನ ದಂತಕಥಾ ಪ್ರಪಂಚವೂ ಸುರಪುರದ ದೇವಪುರಕ್ಕಿಂತ ಕಡೂರಿನ ದೇವನೂರನ್ನೇ ಲಕ್ಷ್ಮೀಶನ ವಾಸಸ್ಥಳವೆಂದು ಸೂಚಿಸುತ್ತದೆ ಎಂದಿದ್ದಾರೆ.

**ಕ) ಕವಿಯ ಮತ**

ಕವಿಯ ಮತವು ಶ್ರೀವೈಷ್ಣವ ಆಗಬಹುದೇ? ಆ ಮತದ ವೈಶಿಷ್ಟ್ಯವನ್ನು ಕಾಯ್ದು

ಕೊಂಡು ಕಾವ್ಯರಚನೆ ಆಗಿದೆಯೆ? ಕಾವ್ಯರಚನೆಯ ಮೇಲಿಂದ ಇವನು ದ್ವೈತಿಯೆಂದಾಗಲಿ, ಅದ್ವೈತಿಯೆಂದಾಗಲಿ, ವಿಶಿಷ್ಟಾದ್ವೈತಿಯೆಂದಾಗಲಿ ಸಾಧಿಸಬಹುದೇ? ಎಂಬುದರ ಬಗೆಗೆ ವಿದ್ವಾಂಸರಲ್ಲಿ ಅನೇಕ ರೀತಿಯ ಚರ್ಚೆ ನಡೆದಿದೆ.

**ಗೋವಿಂದ ಪೈಗಳು :** 'ಕವಿ ಲಕ್ಷ್ಮೀಶ' ಪುಸ್ತಕದಲ್ಲಿ ಪುಟ ೧೧೬ ರಿಂದ ೧೩೩ರ ವರೆಗೆ ೨ ಲೇಖನಗಳಿವೆ. ಗೋವಿಂದ ಪೈಗಳು ಮೂಲಸಂಸ್ಕೃತ ಜೈಮಿನಿ ಭಾರತದಲ್ಲಿ ಹೇಳಲ್ಪಟ್ಟಿರುವ ಧರ್ಮವೆಂದರೆ ಶ್ರೀಮದ್‌ಭಗವದ್ಗೀತೆಯಲ್ಲಿಯೂ ಮಹಾಭಾರತದ ಶಾಂತಿಪರ್ವದ ಮೋಕ್ಷಧರ್ಮದ ಭಾಗದಲ್ಲಿಯ 'ನಾರಾಯಣಾಖ್ಯಾನದಲ್ಲಿಯೂ ಕಥಿತವಾದ ಕರ್ಮಮಾರ್ಗಪ್ರಧಾನವಾದ ಭಾಗವತ ಧರ್ಮ.' ಕರ್ಮಮಾರ್ಗಕ್ಕಿಂತ ಭಕ್ತಿ ಸಾಧನವು ಸುಕರವೂ ಸರ್ವಸಾಧ್ಯವೂ ಆಗಿದೆ ಎಂದಿದ್ದಾರೆ ಮತ್ತು ಮೂಲ ಸಂಸ್ಕೃತ ಜೈಮಿನಿ ಕಾವ್ಯದಲ್ಲಿಯೂ ಲಕ್ಷ್ಮೀಶನ ಕಾವ್ಯದಲ್ಲಿಯೂ ಭಾಗವತ ಧರ್ಮವನ್ನೇ ಹೇಳಲಾಗಿದೆ, ಎಂಬುದಕ್ಕೆ ಉದಾಹರಣೆಗಳನ್ನು ಆಯ್ದುಕೊಟ್ಟದ್ದಾರೆ.[1]

**ಗೋಪಾಲ ಕೃಷ್ಣಮಾಚಾರ :** ಗೋಪಾಲ ಕೃಷ್ಣಮಾಚಾರ ಅವರು ಕಾವ್ಯದಲ್ಲಿಯ ಅನೇಕ ಮಾತುಗಳನ್ನು ರಾಮಾನುಜಮತದ ಮಾತುಗಳಿಗೆ ಹೋಲಿಸಿ ತೋರಿಸಿದ್ದಾರೆ ಮತ್ತು ದೇವನೂರಿನಲ್ಲಿ ಲಕ್ಷ್ಮೀಶನ ವಂಶಿಕರು–ಶ್ರೀವೈಷ್ಣವರಾಗಿ ಇದ್ದರು ಎಂಬ ಮಾತನ್ನು ಹೇಳಿ, ದೇವನೂರಿನಲ್ಲಿ ಶ್ರೀವೈಷ್ಣವ ಬ್ರಾಹ್ಮಣರ ಮನೆಯಲ್ಲಿ ಮದುವೆ ಮೊದಲಾದ ಶುಭಕಾರ್ಯಗಳು ನಡೆಯುವಾಗ ಲಕ್ಷ್ಮೀಶನಿಗೆ ತಪ್ಪದೆ ಸಂಭಾವನೆ ಎತ್ತುತ್ತಾರೆ ಎಂದು ಹೇಳಿದ್ದಾರೆ.[2] ಆದರೆ ಈ ಮಾತು ಗೋವಿಂದ ಪೈಗಳಿಗೆ ಒಪ್ಪಿಗೆ ಇಲ್ಲ. ಏಕೆಂದರೆ ರಾಮಾನುಜ ಸಂಪ್ರದಾಯದವರು 'ಶಿವಂ ಮಹಾಭಾಗವತಂ ನಮಾಮಿ' ಎಂದು ಶಿವನನ್ನು ಸ್ತುತಿಸುತ್ತಾರೆ. ವಿಷ್ಣುವಿಗೂ ಶಿವನಿಗೂ ತಾರತಮ್ಯವಿದೆ ಎಂದು ಅವರ ಹೇಳಿಕೆ. ಈ ಮಾತು ಲಕ್ಷ್ಮೀಶನ ಕಾವ್ಯವನ್ನು ಓದಿದಾಗ ಕವಿ ಲಕ್ಷ್ಮೀಶನು ಶ್ರೀವೈಷ್ಣವ ಇರಲಾರ ಎಂಬ ಮತವನ್ನು ಸ್ವೀಕರಿಸಬೇಕಾಗುತ್ತದೆ. ಏಕೆಂದರೆ ಸಂಧಿ ೩೪, ಪದ್ಯ ೪೩ರಲ್ಲಿ ಹರಿ–ಹರರ ಸಮಾನತೆ, ಐಕ್ಯತೆಗಳನ್ನು ಸಾರಿ ಹೇಳಿರುವನು ಎಂದಿದ್ದಾರೆ.

ಗೋವಿಂದ ಪೈಗಳ 'ಲಕ್ಷ್ಮೀಶನು ಶ್ರೀವೈಷ್ಣವನಿರಲಾರ' ಎಂಬ ಮತವು ಅನೇಕರಿಗೆ ಒಪ್ಪಿಗೆಯಾಗಿಲ್ಲ ಎಂಬುದು ಮುಂದಿನ ಚರ್ಚೆಯಲ್ಲಿ ಕಂಡುಬರುತ್ತದೆ. ಕವಿಚರಿತೆಕಾರರು, ರೈಸ ಅವರೂ ಲಕ್ಷ್ಮೀಶನು ಶ್ರೀವೈಷ್ಣವ ಮತದವನು ಎಂದು ಅಭಿಪ್ರಾಯಪಟ್ಟಿದ್ದಾರೆ. ಕವಿಯು ಶ್ರೀವೈಷ್ಣವನೇ ಎಂದು ಸಾಧಿಸುವವರಲ್ಲಿ ದೊಡ್ಡಮನೆ ರಾಘವ ಅಯ್ಯಂಗಾರ ಮತ್ತು ಕೆ. ರಾಮಸ್ವಾಮಯ್ಯಂಗಾರರು ಪ್ರಮುಖರಾಗಿದ್ದಾರೆ.

**ಕೆ. ರಾಮಸ್ವಾಮಯ್ಯಂಗಾರರು :** ಕ. ಸಾ. ಪ. ಪ. ಸಂಪುಟ ೬, ಸಂಚಿಕೆ ೧ರಲ್ಲಿ ಕೆ. ರಾಮಸ್ವಾಮಯ್ಯಂಗಾರರು 'ಲಕ್ಷ್ಮೀಶ ಕವಿಯು ದೇವನೂರ (ಕಡೂರ) ಪ್ರಾಂತ

[1] 'ಕವಿ ಲಕ್ಷ್ಮೀಶ' ಪು. ೧೨೧. [2] 'ಕವಿ ಲಕ್ಷ್ಮೀಶ' ಪು. ೧೨೮–೧೩೩.

ದವನೂ ಅಲ್ಲ ; ಶ್ರೀವೈಷ್ಣವನೂ ಅಲ್ಲ ; ಔತ್ತರೇಯನೂ ಅಲ್ಲ. ಮಾಧ್ವನು ಆಗಿರಬೇಕು' ಎಂಬ ಮಾತಿನ ಮೇಲೆ ರೊಚ್ಚಿಗೆದ್ದು ಬರೆದಿದ್ದಾರೆ. 'ಲಕ್ಷ್ಮೀಕಾಂತ ಹೆಬ್ಬಾರನು ಶ್ರೀವೈಷ್ಣವ ಬ್ರಾಹ್ಮಣನು. ಶ್ರೀವೈಷ್ಣವರು ಶಿವ, ಗಣೇಶ, ಪಾರ್ವತಿ ಇವರನ್ನೂ ಸ್ತುತಿ ಮಾಡುವದಿಲ್ಲವೆಂಬುದು ಸುಳ್ಳು ಎಂದು ಹೇಳಿ, ಲಕ್ಷ್ಮಣಕವಿ ಮತ್ತು ಆನಂದ ರಾಮಾಯಣವನ್ನು ಬರೆದ ತಿರುಮಲಾರ್ಯ ಇಬ್ಬರೂ ಶ್ರೀವೈಷ್ಣವರಾಗಿದ್ದು, ವಿಷ್ಣು, ಶಿವ, ಗೌರಿ, ಗಣೇಶ ಸ್ತುತಿಯನ್ನು ಅವರ ಕಾವ್ಯದಲ್ಲಿ ಕಾಣಬಹುದು ಎಂದು ಉದಾಹರಿಸಿದ್ದಾರೆ.

ಕಾವ್ಯದಲ್ಲಿ ಬರುವ 'ಶಿವ ಶಿವ' ಎಂಬ ಪದಗಳೂ ಮತ್ತು ಹರಿ–ಹರ ಅಭೇದದ ರೀತಿ ಕವಿಯ ಮತಕ್ಕೆ ಸಂಬಂಧಿಸಿದ್ದಲ್ಲ. ಕವಿಯು ಸಂಸ್ಕೃತ ಜೈಮಿನಿ ಭಾರತದ ಅನುವಾದವನ್ನು ಮಾಡಿದ್ದರಿಂದ ಮೂಲದಲ್ಲಿರುವಂತೆ ಶಿವಸ್ತುತಿಯನ್ನು ಮಾಡಿದ್ದಾನೆ. ಮತ್ತು ಖೇದ, ಆಶ್ಚರ್ಯಾದರ್ಥಗಳಲ್ಲಿ 'ಶಿವ ಶಿವ' 'ಹರ ಹರ' ಎಂದು ಅನುಕರಣಧ್ವನಿಯನ್ನು ಪ್ರಯೋಗಿಸಿದ್ದಾನೆ. ಮತ್ತು ಏಕಾದಶಿ ಶ್ರಾದ್ಧದ ವಿಷಯವನ್ನು ವರ್ಣಿಸಿರುವದರಿಂದ ಕವಿಯು ಶ್ರೀವೈಷ್ಣವನಾಗಿರಲಾರ ಎಂಬುದು ಸಮಂಜಸವಲ್ಲ. ಶ್ರೀವೈಷ್ಣವರಲ್ಲಿ ತೆಂಕಲೆ, ವಡಗಲೆ ಎಂಬೆರಡು ಪಂಗಡಗಳಿವೆ. ಇದರಲ್ಲಿ ವಡಗಲೆಯವರು ಏಕಾದಶಿಯ ದಿನ ಶ್ರಾದ್ಧವನ್ನು ತಪ್ಪದೆ ಆಚರಿಸುತ್ತಾರೆ ಎಂದು ವಿವೇಚಿಸಿದ್ದಾರೆ.

**ನಾ. ಶ್ರೀ. ರಾಜಪುರೋಹಿತರು :** ನಾ. ಶ್ರೀ. ರಾಜಪುರೋಹಿತರು 'ಅಣ್ಣಮ' ಎಂಬ ಹೆಸರಿನ ಮೇಲಿಂದ ಕವಿ ಲಕ್ಷ್ಮೀಶನು ಶೈವಬ್ರಾಹ್ಮಣನಾಗಿರಬೇಕು, ವೆಂಗಿ ಮಂಡಲದವನಿರಬೇಕು, ಎಂದು ಸಾಧಿಸಿದ್ದು ಮತ್ತು ಕಾವ್ಯದಲ್ಲಿ ಬರುವ ಅನೇಕ ದೇವತೆಗಳ ಸ್ತುತಿ, ಮುಖ್ಯವಾಗಿ ಶಿವಸ್ತುತಿಯ ಮೇಲಿಂದ ಕವಿಯು ಶೈವನೇ ಇರಬೇಕು ಎಂಬ ಊಹೆ, ದೊಡ್ಡಮನೆ ರಾಘವಯ್ಯಂಗಾರರಿಗೂ ನೋವನ್ನುಂಟುಮಾಡಿದಂತೆ ತೋರುತ್ತದೆ.

**ದೊಡ್ಡಮನೆ ರಾಘವಯ್ಯಂಗಾರರು :** ಜಯಕರ್ನಾಟಕ ಸಂಪುಟ ೭, ಸಂಚಿಕೆ ೭ರಲ್ಲಿ ದೊಡ್ಡಮನೆ ರಾಘವಯ್ಯಂಗಾರರು ಕವಿಯು ಯಜುರ್ವೇದ ಆಪಸ್ತಂಬ ಸೂತ್ರದವನಾಗಿ, ಭಾರದ್ವಾಜ ಗೋತ್ರದವನಾಗಿ, ವೈಷ್ಣವ ಮತದ ವಡಗಲೆ ಸಂಪ್ರದಾಯದವನಾಗಿದ್ದನು ಎಂದು ಕಟ್ಟುನಿಟ್ಟಾಗಿ ಹೇಳಿದ್ದಾರೆ (ಪುಟ ೪೬೮). ಇವರಿಗೆ ಕೆ. ರಾಮಸ್ವಾಮಯ್ಯಂಗಾರರ ವಿವೇಚನೆಯು ಒಪ್ಪಿಗೆಯಾಗಿದ್ದರಿಂದ ಆ ಮಾತುಗಳನ್ನು ಉಲ್ಲೇಖಿಸಿದ್ದಾರೆ. ಶ್ರೀವೈಷ್ಣವರು ಶಿವದ್ವೇಷಿಗಳಲ್ಲ ಎಂದು ಸಾಧಿಸಲು ಶ್ರಮಪಟ್ಟಿದ್ದಾರೆ. ಕಾವ್ಯದಲ್ಲಿ ಬರುವ ಶಿವಸ್ತುತಿ ಮತ್ತು ಶಿವ ಶಿವ, ಹರ ಹರ ಮುಂತಾದ ಪದಗಳು ಸಂಸ್ಕೃತ ಜೈಮಿನಿ ಭಾರತಕ್ಕೆ ಸಂಬಂಧಿಸಿದವುಗಳು ಎಂದಿದ್ದಾರೆ. ಶ್ರೀವೈಷ್ಣವರ ನಿತ್ಯಪಠನ ಗ್ರಂಥವಾದ 'ಮುಕುಂದ ಮಾಲಾ' ಸ್ತೋತ್ರದಲ್ಲಿ 'ತದ್ ಭೃತ್ಯ ಭೃತ್ಯ ಪರಿಚಾರಕ ಭೃತ್ಯ ಭೃತ್ಯ' ಎಂದಿದೆ. ಇದರಂತೆಯೇ ಕವಿಯು 'ಹೃದ್ವನಜದೊಳ್ ದೇವಪುರದರಸಿಯರಸನ ಪದದ್ವಯುವನಾವಗಂ ಧ್ಯಾನಿಸುವರಡಿಗಳಂ ಸದ್ವಿನಯದಿಂ ಭಜಿಪೆ ಬಲ್ಪಿಂದೆ....' ಎಂದಿದ್ದಾನೆ.

ಮತ್ತು ಶ್ರೀವೈಷ್ಣವರಿಗೆ ಮುಖ್ಯವಾದ ಪ್ರಪತ್ತಿಧರ್ಮದಲ್ಲಿಯೂ ನಿತ್ಯಕರ್ಮದಲ್ಲಿಯೂ 'ದ್ವಯ' ಎಂಬ ಮಂತ್ರವು ಕೇವಲ ಪ್ರಧಾನವಾದದ್ದು. ಶ್ರೀಮನ್ನಾರಾಯಣನ ಮಂತ್ರಕ್ಕೆ 'ದ್ವಯ ಮಂತ್ರ' ವೆಂದು ಹೆಸರು. ಹೀಗಿರುವುದರಿಂದ ಕವಿಯು 'ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನ ದ್ವಯ ಮಂತ್ರವನ್ನು ಯಾವಾಗಲೂ ಧ್ಯಾನಿಸುವ ತಮ್ಮ ಪೂರ್ವಾಚಾರ್ಯರುಗಳ ಪಾದಗಳನ್ನು ಭಜಿಸತಕ್ಕ ಬಲದಿಂದ ಈ ಜೈಮಿನಿ ಭಾರತವನ್ನು ರಚಿಸುವೆನು' ಎಂದಿದ್ದಾನೆ. ಮೇಲಿನ ಎರಡು ಪ್ರಮುಖ ಆಧಾರಗಳ ಮೇಲಿಂದ ದೊ. ರಾಘವಯ್ಯಂಗಾರರು ಕವಿ ಲಕ್ಷ್ಮೀಶನ ಶ್ರೀವೈಷ್ಣವ ಸಂಪ್ರದಾಯದ ಸಂಸ್ಕಾರವನ್ನು ಎತ್ತಿ ತೋರಿಸಿದ್ದಾರೆ. ದೇವನೂರಿನಲ್ಲಿ (ಕಡೂರು) ಕವಿಯ ವಂಶಜರಾದ ಶ್ರೀವೈಷ್ಣವರಿದ್ದು, ಅವರು ಪ್ರತಿ ಚೈತ್ರಶುದ್ಧ ಪೌರ್ಣಿಮೆಯ ದಿನ ತಮ್ಮ ಮನೆಯಲ್ಲಿ ಕವಿಜಯಂತಿಯನ್ನು ನಡೆಸುತ್ತಿದ್ದರು ಮತ್ತು ಕವಿಯು ಮಹಾತ್ಮನಾಗಿದ್ದರಿಂದ ಶುಭಶೋಭನಾದಿಗಳಲ್ಲಿ ತಮ್ಮ ಪೂರ್ವಾಚಾರ್ಯರುಗಳ ಜತೆಗೆ ಮರ್ಯಾದೆಯ ತಾಂಬೂಲವನ್ನೆತ್ತುವರು, ಎಂದು ಎರಡು ಸ್ಥಳೀಯ ಆಚಾರಗಳನ್ನು ಹೇಳಿದ್ದಾರೆ.

**ರಾಮರಾವ :** ರಾಮರಾವ್ ಎಂಬುವರು ಕವಿಯು ಶ್ರೀವೈಷ್ಣವನಿರಲಾರ ಎಂಬವರ ಮತ್ತು ಕವಿಯು ಶ್ರೀವೈಷ್ಣವನೇ ಎಂಬವರ ವಾದಗಳು ತಮಗೆ ಒಪ್ಪಿಗೆ ಎಂದು ಹೇಳಿ, ಕಡೂರ ಮೂಡಗೆರೆ ತಾಲೂಕಿನ ೫೯ ಮತ್ತು ೮೮ನೆಯ ನಂಬರಿನ ಶಾಸನ ನೋಡಿದರೆ ಕವಿ ಲಕ್ಷ್ಮೀಶನು ಹೆಬ್ಬಾರ ಶ್ರೀವೈಷ್ಣವನಾಗಿದ್ದು ಸ್ಮಾರ್ತ ಮತಕ್ಕೆ ಸೇರಿದ್ದನೆಂದೂ ಸ್ಮಾರ್ತ ಸಂಪ್ರದಾಯವನ್ನೋ ಅಥವಾ ಭಾಗವತ ಸಂಪ್ರದಾಯವನ್ನೋ ಅನುಸರಿಸಿದ್ದನೆಂದೂ ಸಾಧಿಸಬಹುದಾಗಿದೆ ಎಂದು ವಿವೇಚಿಸಿದ್ದಾರೆ.[1]

**ದ. ರಾ. ಬೇಂದ್ರೆಯವರು :** ಈ ಎಲ್ಲ ವಿವೇಚನೆಗಳ ಮೇಲಿಂದ ಕವಿಯು ಶ್ರೀವೈಷ್ಣವನಾಗಿರಲು ಅಡ್ಡಿಯಿಲ್ಲ ಎಂದು ದ. ರಾ. ಬೇಂದ್ರೆಯವರು ಒಪ್ಪಿದ್ದಾರೆ. 'ಕಾವ್ಯವನ್ನು ಸಂಪೂರ್ಣವಾಗಿ ಓದಿದ ಮೇಲೆ ಕವಿಯು ಶಾಂಕರ, ರಾಮಾನುಜೀಯ; ಮಾಧ್ವ ಮತದವನು ನಿಶ್ಚಿತವಾಗಿಯೂ ಅಲ್ಲ. ಅವನು ಭಾಗವತ ಸಂಪ್ರದಾಯದವನಿರಬೇಕು' ಎಂದು ಅಭಿಪ್ರಾಯವಾಗುವುದನ್ನು ಗೋವಿಂದ ಪೈಗಳು ಉದಾಹರಣೆಗಳೊಂದಿಗೆ ಸ್ಪಷ್ಟಪಡಿಸಿದ್ದು ದ. ರಾ. ಬೇಂದ್ರೆ ಅವರಿಗೂ, ಎಂ. ಆರ್. ಶ್ರೀಯವರಿಗೂ ಒಪ್ಪಿಗೆಯಾಗಿದೆ. 'ಶ್ರೀ ಲಕ್ಷ್ಮೀಶನ ಜೈಮಿನಿ ಭಾರತಕ್ಕೆ ಮುನ್ನುಡಿ' ಎಂಬ ಗ್ರಂಥದಲ್ಲಿ ಪುಟ ೧೧ ರಿಂದ ೧೫ ರವರೆಗೆ ಕವಿ ಲಕ್ಷ್ಮೀಶನ ಕಾವ್ಯದಲ್ಲಿ ಭಾಗವತ ಸಂಪ್ರದಾಯದ ಒಲವು-ನಿಲವುಗಳನ್ನು ಕುರಿತು ಅವು ಹೇಗೆ ಕಂಡು ಬರುತ್ತವೆ ಎಂಬುದರ ಬಗ್ಗೆ ಸುದೀರ್ಘವಾಗಿ ದ.ರಾ. ಬೇಂದ್ರೆಯವರು ವಿವೇಚಿಸಿದ್ದಾರೆ. ಲಕ್ಷ್ಮೀಶನ ಜೈಮಿನಿ ಭಾರತದೊಳಗಿನ ವಸ್ತು ವಿಶಿಷ್ಟವಾದ ಮತ್ತು ಪಾತ್ರ ಸಾಪೇಕ್ಷವಾದ ವಚನಗಳಿಂದ ಕವಿಯ **ಮತ ವಿಷಯ**ವನ್ನು ಹೆಕ್ಕಿ ತೆಗೆಯುವುದು ಕಷ್ಟದ ಕೆಲಸ ಎಂದಿದ್ದಾರೆ. ರುದ್ರಭಟ್ಟ, ಚೌಂಡರಸ,

---

[1] ರಾಮರಾವ್–'ಜೈಮಿನಿ ಭಾರತ ಕಥಾ ಸಂಗ್ರಹ' ಮುನ್ನುಡಿ, ಪು. ೫೦.

ಕುಮಾರವ್ಯಾಸ, ಕುಮಾರ ವಾಲ್ಮೀಕಿ, ಕನಕದಾಸ, ಚಾಟುವಿಟ್ಠಲನಾಥರೇ ಮೊದಲಾದ ಕನ್ನಡ ಭಾಗವತದ ಕವಿಮಂಡಲ ಇವರೆಲ್ಲರಲ್ಲಿ ಕಂಡುಬರುವ ತ್ರಿಮೂರ್ತಿಗಳ ಐಕ್ಯ, ಹರಿ–ಹರರಲ್ಲಿ ಭೇದ ಮಾಡದಿರುವುದು, ಭಕ್ತಿಯ ಪ್ರಾಧಾನ್ಯ, ಪ್ರಸಂಗೋಪಾತವಾಗಿ ಎಲ್ಲ ದೇವತೆಗಳ ಸರ್ವಶ್ರೇಷ್ಠತೆ, ವಿಷ್ಣುವಿಗೂ–ಅವನ ಅವತಾರಗಳಿಗೂ ಒಂದು ಬಗೆಯ ವಿಶಿಷ್ಟ ಮಹತ್ವ ಎಂಬ ವೈಲಕ್ಷಣ್ಯಗಳು ಲಕ್ಷ್ಮೀಶನ ಜೈಮಿನಿ ಭಾರತದಲ್ಲಿಯೂ ಕಂಡು ಬರುತ್ತವೆ. ಇದಲ್ಲದೆ ಯಜ್ಞಹಿಂಸೆಯನ್ನು ಪ್ರಚ್ಛನ್ನವಾಗಿ ವಿರೋಧಿಸುವುದು, ಯದ್ಧವನ್ನು ಗೌಣವಾಗಿ ಎಣಿಸುವುದು, 'ಸರ್ವ ಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ' ಎಂಬ ಗೀತಾವಚನದ ಭಾಗವತ ಮತವನ್ನು ಸರ್ವಾತ್ಮನಾ ಸ್ವೀಕರಿಸುವುದು, ಶ್ರೀಕೃಷ್ಣನಿಂದ ಬಕದಾಲ್ಭ್ಯನವರೆಗೆ ಎಲ್ಲರೂ ಯಜ್ಞವನ್ನು ನಿಂದಿಸುವುದು ಇವು ಕವಿ ಲಕ್ಷ್ಮೀಶನ ಜೈಮಿನಿ ಭಾರತದ ವಿಶೇಷ ಲಕ್ಷಣಗಳಾಗಿವೆ, ಎಂದು ತೋರಿಸಿದ್ದಾರೆ. ಜೈಮಿನಿ ಭಾರತದಲ್ಲಿಯ ಯುದ್ಧ ಮತ್ತು ಯಜ್ಞವು ಕೃಷ್ಣ ಭಕ್ತಿ ಮತ್ತು ಕೃಷ್ಣ ತಂತ್ರದ ಬೇರೆ ಬೇರೆ ಪದರುಗಳನ್ನು ಬಿಚ್ಚಿ ತೋರಿಸುವುದರಿಂದ ಕೃಷ್ಣಭಕ್ತಿಯೇ ಕಾವ್ಯದ ಮತ ಎಂದು ಹೇಳಲು ಯಾವ ಅಭ್ಯಂತರವೂ ಇಲ್ಲ ಎನ್ನುತ್ತಾರೆ. ಕೊನೆಗೆ ಲಕ್ಷ್ಮೀಶನ ಜೈಮಿನಿ ಭಾರತವು ಕವಿಯ ವಿಶಿಷ್ಟಾದ್ವೈತ ಮತಕ್ಕಿಂತ ಜೈಮಿನಿ ಭಾರತದ ಅಶ್ವಮೇಧದ ಭಾಗವತದ ಮತವನ್ನೇ ಎತ್ತಿ ತೋರಿಸಿರುವುದರಿಂದ ಮತ್ತು ಭಾಗವತ ಮತವೇ ಕಾವ್ಯದ ಜೀವಾಳವಾಗಿ ಎಲ್ಲೆಲ್ಲೂ ಸುಳಿದಾಡುವುದರಿಂದ ಕವಿಯ ಮತವೂ **ಭಾಗವತ ಮತ** ಎಂದು ಊಹಿಸುವುದರಲ್ಲಿ ತಪ್ಪಿಲ್ಲ ಎಂದು ಹೇಳಿ ತಮ್ಮ ವಿವೇಚನೆಯನ್ನು ಮುಕ್ತಾಯಗೊಳಿಸಿದ್ದಾರೆ.

**ದೇವುಡು ಮತ್ತು ಬಿ. ಶಿವಮೂರ್ತಿ ಶಾಸ್ತ್ರಿಯವರು :** ದ. ರಾ. ಬೇಂದ್ರೆಯವರ ಈ ವಿವೇಚನೆಯನ್ನು ದೇವುಡು ಮತ್ತು ಬಿ. ಶಿವಮೂರ್ತಿಶಾಸ್ತ್ರಿಯವರು ಈ ಸಂಪಾದಕದ್ವಯರು ಒಪ್ಪಿಕೊಂಡು 'ಕವಿಯ ಮತ'ಎಂಬ ವಿವೇಚನೆಯಲ್ಲಿ ಸೇರಿಸಿದ್ದಾರೆ. ಕವಿಯು ವೀರವೈಷ್ಣವನಲ್ಲ. ಶುದ್ಧವಾದ ಅದ್ವೈತಮತಕ್ಕೆ ಸೇರಿದವನಲ್ಲ. ಆದರೆ ಭಾಗವತ ಧರ್ಮಕ್ಕೆ ಸೇರಿದವನು ಎಂದು ತೋರುತ್ತದೆ, ಎಂದು ಹೇಳಿ ಮೂಲ ಸಂಸ್ಕೃತದಲ್ಲಿ ಇಲ್ಲದಿರುವ ಪಾರ್ವತಿಯ ಸ್ತೋತ್ರವು ಚಂದ್ರಹಾಸನ ಕತೆಯಲ್ಲಿ (ಸಂಧಿ ೩೧, ಪದ್ಯ ೭೨, ೭೩) ಬಂದಿರುವುದನ್ನು ನೋಡಿದರೆ ಕವಿಯು ಆದಿಶಕ್ತಿಯನ್ನು ಅರ್ಚಿಸಿದ ಶಾಕ್ತೇಯ ಪಂಥವನ್ನು ಕೂಡ ಗೌರವಿಸಿದಂತೆ ಕಾಣುತ್ತದೆ, ಎಂಬ ಹೊಸ ವಿಚಾರವನ್ನು ಪೋಣಿಸಿದ್ದಾರೆ. ಕವಿಯು ಯಾವ ಜಾತಿಗೂ ಸೇರಿದವನಲ್ಲ. ಅವನ ಜಾತಿ ಸಾಹಿತಿಯ ಜಾತಿ ; ಅವನ ನೀತಿ ವಿಶ್ವಧರ್ಮದ ನೀತಿ ; ಅವನ ರೀತಿ ಸಹೃದಯರ ರೀತಿ. ಲಕ್ಷ್ಮೀಶನು ನಿಜವಾಗಿಯೂ ಉದಾತ್ತ ಧರ್ಮಕ್ಕೆ ಸೇರಿದವನು ಎಂದಿದ್ದಾರೆ.

**ಡ) ಕವಿಯ ಬಿರುದು**

ಕನ್ನಡ ಜೈಮಿನಿ ಭಾರತದ ಪ್ರತಿಗಳು ಲೆಕ್ಕವಿಲ್ಲದಷ್ಟು ಸಿಗುತ್ತವೆ. ಅವುಗಳಲ್ಲಿ

ಕೆಲವು ಪ್ರತಿಗಳು ಕವಿಯ ಬಿರುದನ್ನು '**ಕರ್ಣಾಟಕವಿಚೈತ್ರವನಚೂತ**' ಎಂದೂ ಕೆಲವು ಪ್ರತಿಗಳು '**ಕರ್ಣಾಟಕವಿಚೂತವನಚೈತ್ರ**' ಎಂದೂ ತೋರಿಸುತ್ತವೆ. ಭಿನ್ನ ಪಾಠಗಳಿದ್ದಲ್ಲಿ ಚರ್ಚೆಗೆ ಸ್ಥಾನ ಉಂಟಾಗುವದು ಸಹಜ.

**ವೆಂಕಟರಾಯಾಚಾರ್ಯರು** : ಶರಣ ಸಾಹಿತ್ಯ ಪುಟ ೧೭, ಸಂಚಿಕೆ ೮ರಲ್ಲಿ ವೆಂಕಟ ರಾಯಾಚಾರ್ಯರು, 'ಡಿ. ಎಲ್. ನರಸಿಂಹಾಚಾರ್ಯರು, ತೀ. ನಂ. ಶ್ರೀಕಂಠಯ್ಯ ನವರು, ಕಪಟರಾಳ ಕೃಷ್ಣರಾಯರು ಮತ್ತು ದೇಸಾಯಿ ಪಾಂಡುರಂಗರಾಯರು ಕಂಡ ಪ್ರತಿಗಳಲ್ಲಿ "ಕರ್ಣಾಟಕವಿಚೈತ್ರವನಚೂತ" ಎಂದಿದೆ. ಆದರೆ ಮುದ್ರಿತ ಪ್ರತಿಗಳಲ್ಲಿ "ಕರ್ಣಾಟಕಕವಿಚೂತವನಚೈತ್ರ" ಎಂದಿದೆಯಲ್ಲ ?' ಎಂದಿದ್ದಾರೆ.

ಶರಣಸಾಹಿತ್ಯ ಪುಟ ೧೭, ಸಂಚಿಕೆ ೬ರಲ್ಲಿ ಪಾಂಡುರಂಗರಾಯರು 'ಕರ್ಣಾಟ ಕವಿಚೈತ್ರವನಚೂತ' ಎಂಬ ಪಾಠವೇ ಸಾಧು, ಏಕೆಂದರೆ ಇದು ಕವಿಯ ವಿನಯವನ್ನು ತೋರಿಸುತ್ತದೆ. ಕವಿಯು 'ಕರ್ಣಾಟಕವಿಚೂತವನಚೈತ್ರ' ಎಂದು ಸ್ವಯಂಪ್ರಶಂಸೆಯನ್ನು ಮಾಡಿಕೊಂಡಿರಲಾರ ಎಂದಿದ್ದಾರೆ.

ಬಿ. ಶಿವಮೂರ್ತಿಶಾಸ್ತ್ರಿಗಳು 'ಕವಿ ಲಕ್ಷ್ಮೀಶನು ಅತ್ಯಂತ ವಿನಯವಂತನೂ ಸುಸಂಸ್ಕೃತನೂ ಆಗಿದ್ದಾನೆ ಎಂಬುದು ಅವನ ಕಾವ್ಯವನ್ನು ಓದುವವರಿಗೆ ಒಪ್ಪಿಗೆ ಯಾಗುವಂಥ ಮಾತು. ಆದಕಾರಣ ಪಾಂಡುರಂಗರಾಯರು ನಿರ್ಧರಿಸಿದ "ಕರ್ಣಾಟಕವಿ ಚೈತ್ರವನಚೂತ" ಎಂಬ ಪಾಠವೇ ಸಾಧು' ಎಂದು ಹೇಳಿ, ಪಾಂಡುರಂಗರಾಯರ ಮತಕ್ಕೆ 'ಮಮ' ಎಂದಿದ್ದಾರೆ.

ದ. ರಾ. ಬೇಂದ್ರೆಯವರು 'ಶ್ರೀ ಲಕ್ಷ್ಮೀಶನ ಜೈಮಿನಿ ಭಾರತಕ್ಕೆ ಮುನ್ನುಡಿ' ಎಂಬ ಪುಸ್ತಕದಲ್ಲಿ 'ನಾವು ಯಾವ ಪಾಠವನ್ನು ಇಟ್ಟುಕೊಂಡರೂ ಅಡ್ಡಿ ಇಲ್ಲ. ಅದು ವಿದ್ವತ್‌ಸಭೆಯವರು ಕವಿಗೆ ಕೊಟ್ಟ ಬಿರುದಿರಬೇಕಲ್ಲದೆ ಕವಿಯು ತಾನೇ ತೊಟ್ಟ ಬಿರುದಾಗಿರಲಾರದು' ಎಂದಿದ್ದಾರೆ.

**ಇ) ಕಾವ್ಯದ ರಚನಾ ಕಾಲ**

ಕವಿಯ ಕಾಲವನ್ನು ನಿರ್ಣಯಿಸುವುದೆಂದರೆ ಒಂದು ಸಮುದ್ರಮಂಥನಕ್ರಿಯೆ, ಊಹಾ ಪ್ರಪಂಚ. ನಿಶ್ಚಿತವಾದ ಆಧಾರಗಳು ದೊರೆಯುವವರೆಗೆ ಊಹಿಸಿದ್ದೆಲ್ಲವೂ ಅನುಮಾನವೇ.

ಕವಿಯ ಕಾಲವನ್ನು ನಿರ್ಣಯಿಸುವುದಕ್ಕಾಗಿ ಶ್ರಮಪಟ್ಟವರಲ್ಲಿ ಎರಡು ಗುಂಪು ಗಳಿವೆ. ಕನ್ನಡ ಭಾಷೆಯನ್ನು ಮೆಚ್ಚಿ, ಅದರೊಡನೆ ಸಂಪರ್ಕವನ್ನು ಮಾಡಿಕೊಂಡ ಆಂಗ್ಲ ವಿದ್ವಾಂಸರಾದ ಎಚ್. ಎಚ್. ವಿಲ್ಸನ್, ಕಿಟೆಲ್ ಮತ್ತು ರೈಸ್ ಇವರು ಮೊದಲನೆಯ ಗುಂಪಿಗೆ ಸೇರಿದವರು. ಕಿಟೆಲ್‌ರ ಶಬ್ದಕೋಶ, ರೈಸರ ಸಾಹಿತ್ಯ ಚರಿತ್ರೆಯ ಕಿರುಹೊತ್ತಿಗೆ ಕನ್ನಡ ನಾಡಿನಲ್ಲಿ ಸುಖದಿಂದ ನೆಲೆನಿಂತಿರುವ ಆಂಗ್ಲರ ಸಂತಾನ. ಕಡೂರ ದೇವನೂರಿ ನಲ್ಲಿಯ ಓಲೆಗರಿಯ ಪ್ರತಿಯನ್ನು ಓದಿ ಕವಿಯ ಕಾಲವು ಶಾ. ಶಕೆ ೧೬೩೭ (ಕ್ರಿ.ಶ.

೧೭೧೫) ಎಂದು ರೈಸ ಅವರು ಊಹಿಸಿದರು. ಕಿಟೆಲ್ ಅವರು ೧೭೬೦ರವರೆಗೆ ಕಾಲವನ್ನು ಜಗ್ಗಿದರೆ, ಎಚ್. ಎಚ್. ವಿಲ್ಸನ್ ಅವರು ೧೨ನೆಯ ಶತಕದ ಆದಿಯವರೆಗೆ ಕಾಲವನ್ನು ಹಿಂದಕ್ಕೆ ತಳ್ಳಿದರು.

ಎರಡನೆಯ ಗುಂಪು : ಕನ್ನಡ ನಾಡಿನ ವಿದ್ವಾಂಸರಾದ ಗೋವಿಂದ ಪೈ,ನಾ.ಶ್ರೀ. ರಾಜಪುರೋಹಿತ, ಡಿ. ಎಲ್. ನರಸಿಂಹಾಚಾರ್, ಕೆ. ರಾಮಸ್ವಾಮಿ ಅಯ್ಯಂಗಾರ, ಎಂ. ಆರ್. ಶ್ರೀ, ದ.ರಾ. ಬೇಂದ್ರೆ, ತಿ. ತಾ. ಶರ್ಮ, ರಂ. ಶ್ರೀ. ಮುಗಳಿ ಮೊದಲಾದವರು.

ಗೋವಿಂದ ಪೈ : ಗೋವಿಂದ ಪೈಗಳು ಕಾಲ ನಿರ್ಣಯದಲ್ಲಿ ಒಂದು ಮಹತ್ವದ ಹೆಜ್ಜೆಯನ್ನು ಇಟ್ಟರು. ಕನ್ನಡ ಜೈಮಿನಿ ಭಾರತದ ಕಾಲವು ೧೩ನೆಯ ಶತಮಾನದ ಆದಿಯಷ್ಟು ಹಳೆಯದೂ ಅಲ್ಲ, ೧೭೬೦ರಷ್ಟು ಹೊಸದೂ ಅಲ್ಲ, ಎಂದು ನಿಶ್ಚಿತಪಡಿಸಿದರು.

'ಕವಿ ಲಕ್ಷ್ಮೀಶ' ಎಂಬ ಪುಸ್ತಕದಲ್ಲಿ ಪುಟ ೫೬ ರಿಂದ ಪುಟ ೯೯ ರಷ್ಟು ವಿಸ್ತೃತವಾದ ಲೇಖನವನ್ನು ಬರೆದು ಜೈಮಿನಿ ಭಾರತದ ರಚನಾ ಕಾಲ ಕ್ರಿ.ಶ. ೧೩೩೫ ರಿಂದ ೧೩೫೩ ರೊಳಗೆ ಆಗಿರಬೇಕು, ಎಂಧು ಊಹಿಸಿದ್ದಾರೆ. ಇಷ್ಟು ಹಿಂದಕ್ಕೆ ಹೋಗಲು ಕಾರಣಗಳು ಇಂತಿವೆ :

೧. 'ಕನ್ನಡ ಕುವಲಯಾನಂದ'ದ ಕಾಲವನ್ನು ಕ್ರಿ. ಶ. ೧೬೭೪ ಎಪ್ರಿಲ್ ೨೬ನೆಯ ತಾರೀಖು ಎಂದು ನಿರ್ಧರಿಸಿ, ಅದರಲ್ಲಿ ಜೈಮಿನಿ ಭಾರತದ ೫೦ಕ್ಕೆ ಮೇಲ್ಪಟ್ಟು ಪದ್ಯಗಳು ಉದಾಹೃತವಾಗಿರುವುದರಿಂದ ಜೈಮಿನಿ ಭಾರತದ ರಚನಾ ಕಾಲವು ಕ್ರಿ. ಶ. ೧೬೭೪ ಕ್ಕಿಂತ ಪೂರ್ವದ್ದು ಎಂಬುದು ಖಂಡಿತ.

೨. ಗುಬ್ಬಿ ಮಲ್ಲಣಾರ್ಯನ 'ಭಾವ ಚಿಂತಾರತ್ನ'ದ ಕಾಲವು ಕ್ರಿ.ಶ. ೧೫೧೩. ಈ ಕಾವ್ಯದಲ್ಲಿ ಬರುವ ತಿರುಕೊಳವಿನಾಚಿಯ ಪ್ರಳಾಪ ಮತ್ತು ಜೈಮಿನಿ ಭಾರತದಲ್ಲಿ ದುಷ್ಟಬುದ್ಧಿಯ ಪ್ರಳಾಪದಲ್ಲಿ ನವಗ್ರಹಗಳನ್ನು ಪವಣಿಸಿ ಮಾಡಿದ ಪದ್ಯ ರಚನೆಯಲ್ಲಿ ಸಾಮ್ಯವಿದ್ದ ಮೂಲಕ ಮತ್ತು ಜೈಮಿನಿ ಭಾರತದ ರಚನೆ ಉತ್ಕೃಷ್ಟವಿರುವುದರಿಂದ ಗುಬ್ಬಿ ಮಲ್ಲಣಾರ್ಯನು ಲಕ್ಷ್ಮೀಶನನ್ನು ಅನುಕರಿಸಿದ್ದಾನೆ, ಎಂದು ಅಭಿಪ್ರಾಯಪಟ್ಟಿದ್ದಾರೆ. ಆದುದರಿಂದ ಕವಿಯ ಕಾಲವು ಕ್ರಿ. ಶ. ೧೫೧೩ಕ್ಕೂ ಹಿಂದೆ ಸರಿಯಬೇಕಾಗುತ್ತದೆ ಎಂದು ಅಂದಿದ್ದಾರೆ.

೩. ಇದೇ ಪ್ರಕಾರ ಬೊಮ್ಮರಸನ 'ಸೌಂದರ ಪುರಾಣ'ದಲ್ಲಿ 'ಗ' ಕಾರದ ಕಾಗುಣಿತ ಪದ್ಯವು ದೊರೆಯುತ್ತದೆ. ಇದು ಜೈಮಿನಿ ಭಾರತದಲ್ಲಿಯ 'ಜ' ಕಾರ ಮತ್ತು 'ಕ'ಕಾರ ಕಾಗುಣಿತವಿದ್ದ ಕೃಷ್ಣಸ್ತುತಿ ಪದ್ಯಗಳ ಪ್ರಭಾವ ಎಂದು ಹೇಳಿ, ಕವಿಯ ಕಾಲವನ್ನು ಬೊಮ್ಮರಸನ ಕಾಲಕ್ಕೂ ಹಿಂದೆ ಎಂದರೆ ಕ್ರಿ. ಶ. ೧೪೫೦ರ ಹಿಂದೆ ಸರಿಸಿದ್ದಾರೆ.

೪. ನಾ. ಶ್ರೀ. ರಾಜಪುರೋಹಿತರು ದೇವಪುರ (ಹೈದರಾಬಾದ–ಸುರಪುರ)ದಲ್ಲಿ ಸಿಕ್ಕ ಕೈಬರೆಹದ ಪ್ರತಿಯ ಆಧಾರದ ಮೇಲಿಂದ 'ಲಕ್ಷ್ಮೀಶನು ಜೈಮಿನಿ ಭಾರತವನ್ನು ಕ್ರಿ. ಶ. ೧೫೨೦ರಲ್ಲಿ ರಚಿಸಿರಬೇಕು. ಅದನ್ನು ತಮ್ಮಣ್ಣನೆಂಬವನು ಕ್ರಿ.ಶ.೧೭೭೫ ರಿಂದ ೧೭೮೨ರಲ್ಲಿ ಪ್ರತಿ ಮಾಡಿಕೊಂಡನು'ಎಂದು ಹೇಳಿದುದನ್ನು ಗೋವಿಂದ ಪೈಗಳು ಅಲ್ಲಗಳೆದು ಕ್ರಿ.ಶ. ೧೫೨೦ ಕೂಡ ಜೈಮಿನಿ ಭಾರತದ ಪ್ರತಿ ಮಾಡಿದ ಕಾಲವೇ ಆಗಿದೆ ಎಂದು ವಿವೇಚಿಸಿದ್ದಾರೆ.

೫. ರೈಸ ಅವರು ಓದಿದ ದೇವನೂರು (ಕಡೂರು) ಓಲೆಗರಿ ಪ್ರತಿಯಲ್ಲಿಯ ಅರ್ಥವಾರ್ಥಕ ಪದ್ಯವು ಲಕ್ಷ್ಮೀಶನ ಕೃತಿಯೇ ಅಲ್ಲ. ರೈಸರು 'ಆ' ಎಂದು ಓದಿದ ಅಕ್ಷರವು ತಮಿಳು 'ಮು' ಕಾರವೇ ಆಗಿದೆ. ಕನ್ನಡ ಕಾವ್ಯ ಬರೆಯುವಾಗ ತಮಿಳು 'ಮು' ಕಾರ ಬರೆಯಲ್ಪಟ್ಟದ್ದು ಪ್ರತಿಕಾರನ ದ್ವಿಭಾಷೆಯ ಸಲಿಗೆಯನ್ನು ತೋರಿಸುತ್ತದೆ ಎಂದಿದ್ದಾರೆ. ಹೀಗಾಗಿ ಅಲ್ಲಿ ನಮೂದಿಸಲ್ಪಟ್ಟ ಕ್ರಿ.ಶ. ೧೪೧೫ (೧೩೩೭) ಕೂಡ ಕಾವ್ಯವನ್ನು ಪ್ರತಿಮಾಡಿದ ಕಾಲವೇ ಆಗಿದೆ.

೬. 'ಫೌಜ' ಮತ್ತು 'ಮೂಗಿಲ್ಲದಾನನಂ, ಲಿಂಗವಿಲ್ಲದ ಪೀಠಂ' ಎಂಬ ಆಧಾರಗಳ ಮೇಲಿಂದ ಲಕ್ಷ್ಮೀಶ ಕವಿಯು ಕ್ರಿ.ಶ. ೧೩೦೦ ರಿಂದ ೧೪೧೫ರ ಕಾಲದಲ್ಲಿ ಜೀವಿಸಿರಬೇಕು ಎಂದು ಅನುಮಾನಿಸಿದ್ದಾರೆ.

೭. 'ಜಿತ ತಮಂ ಭುವನ ಮಧ್ಯ ಪ್ರಕಾಶಂ' ಎಂಬ ಸೂರ್ಯೋದಯದ ವರ್ಣನಾ ಪದ್ಯವು ಶ್ಲೇಷದಿಂದ ಕ್ರಿ.ಶ. ೧೩೩೫-೧೩೫೩ ಕಾಲದಲ್ಲಿ ಆಳಿದ ವಿಜಯನಗರ ಸಾಮ್ರಾಜ್ಯದ ಚಕ್ರವರ್ತಿಯಾದ ಮೊದಲನೆಯ ಹರಿಹರನನ್ನು ಸೂಚಿಸುತ್ತದೆ, ಎಂದು ಸಮರ್ಥಿಸಿದ್ದಾರೆ. ಆದುದರಿಂದ ಕಾವ್ಯದ ರಚನಾ ಕಾಲವು ಕ್ರಿ.ಶ. ೧೩೩೫ ರಿಂದ ೧೩೫೩ರ ಒಳಗೆ ಎಂದಿದ್ದಾರೆ.

೮. ಸಂಧಿ ೨೬ ಪದ್ಯ ೧೬ (ಕನ್ನಡ ಜೈಮಿನಿ ಭಾರತ)ದಲ್ಲಿಯ ಚಂದ್ರೋದಯ ವರ್ಣನೆಯು ವಿಜಯನಗರದ ಯಾವನೊಬ್ಬ ಒಳಅರಸನನ್ನೂ ಸೂಚಿಸುತ್ತಿರಬಹುದೇ ಎಂದು ಶಂಕಿಸಿದ್ದಾರೆ.

ಡಿ. ಎಲ್. ಎನ್ : ಪ್ರಬುದ್ಧ ಕರ್ಣಾಟಕ ಸಂಪುಟ ೧೩, ಸಂಚಿಕೆ ೧ ಮತ್ತು 'ಕವಿ ಲಕ್ಷ್ಮೀಶ'ದಲ್ಲಿ ಡಿ.ಎಲ್. ನರಸಿಂಹಾಚಾರ್ ಅವರು ಬರೆದ 'ಲಕ್ಷ್ಮೀಶನ ಕಾಲ ವಿಚಾರ' ಎಂಬುದು ಕಾಲ ನಿರ್ಣಯಿಸುವಲ್ಲಿ ಮತ್ತೊಂದು ಮಹತ್ವದ ಹೆಜ್ಜೆಯನ್ನು ಇಟ್ಟಿದೆ. ಇಂದಿನವರೆಗೆ ಕವಿಯ ಕಾಲವನ್ನು ನಿರ್ಣಯಿಸುವುದಕ್ಕೆ ಶ್ರಮಪಟ್ಟವರ ಪಟ್ಟಿಯನ್ನು ಮೊದಲಿಗೆ ಕೊಟ್ಟಿದ್ದಾರೆ. ಆ ಬಳಿಕ ಗೋವಿಂದ ಪೈಗಳು ನಿಶ್ಚಯಿಸಿದ ಕನ್ನಡ ಕುವಲಯಾನಂದದ ಕಾಲವು ಕ್ರಿ.ಶ. ೧೬೭೪ ಇದು ನಿಶ್ಚಿತವಾದಲ್ಲಿ ಲಕ್ಷ್ಮೀಶನ ಕಾಲವು ಕ್ರಿ.ಶ. ೧೬೭೪ಕ್ಕಿಂತ ಪೂರ್ವದಲ್ಲಾಗಲು ಯಾವ ಅಭ್ಯಂತರವೂ ಇಲ್ಲ ಎಂದು ಒಪ್ಪಿಕೊಂಡಿದ್ದಾರೆ.

ಕವಿಚರಿತೆಕಾರರು (ಸಂಪುಟ ೨, ಪುಟ ೩೯೪) ಗೋವಿಂದ ಕವಿ (ಗೋಪ ಕವಿ)ಯ ಕಾಲವನ್ನು ಸುಮಾರು ೧೬೫೦ ಎಂದು ಊಹಿಸಿದ್ದಾರೆ ಎಂದು ಹೇಳಿ, ಅವನ ಕಾಲವನ್ನು ಪ್ರಮಾಣವಾದ ಆಧಾರಗಳಿಂದ ನಿಶ್ಚಯಿಸಿದ್ದಾರೆ. ಅವರಿಗೆ ದೊರೆತ 'ನಂದೀ ಮಾಹಾತ್ಮ್ಯ' ಪ್ರತಿಯಲ್ಲಿ ೨೫ ಸಂಧಿಗಳು ೧೨೨೫ ಪದ್ಯಗಳು ಮತ್ತು ೧೫೫ ಓಲೆಗಳು ಇವೆ ಎಂದು ಹೇಳಿದ್ದಾರೆ. ಅವನ ಕಾವ್ಯವನ್ನು ಹೇಳಿಸಿದವನು 'ಇಮ್ಮಡಿ ಹಾವಳೀಂದ್ರ ಭೈರಪೊಡವಿಪನು' ಎಂಬುದಕ್ಕೆ ಆಧಾರವಾದ ಪದ್ಯಗಳನ್ನು ಉದಾಹರಿಸಿದ್ದಾರೆ. ಆ ಪ್ರಭುವು ಅವನಿಗೆ 'ವಿರೂಪಾಕ್ಷಪುರ'ವನ್ನು ದಾನವಾಗಿ ಕೊಟ್ಟನೆಂದು ತಿಳಿದುಬರುತ್ತದೆ. ಅಲ್ಲದೆ ಆ ಕವಿಗೆ 'ಸುಕವಿಕಂಠಾಭರಣ' ಎಂದು ಬಿರುದನ್ನೂ ಆ ಪ್ರಭುವೇ ಕೊಟ್ಟಿರಬಹುದು ಎಂದಿದ್ದಾರೆ. ಈ ಇಮ್ಮಡಿ ಹಾವಳೀಂದ್ರ ಭೈರನ–ಆವತಿ-ನಾಡ ಪ್ರಭುವಿನ ಕ್ರಿ.ಶ. ೧೫೯೮ ಮತ್ತು ೧೬೧೭ರ ಎರಡು ಶಾಸನಗಳು ದೊರೆಯುತ್ತವೆ. ಆದುದರಿಂದ ಇವನ ಆಶ್ರಯವನ್ನು ಪಡೆದ ಗೋವಿಂದ ಕವಿಯ ಕಾಲವು ಸುಮಾರು ಕ್ರಿ.ಶ. ೧೬೦೦ ಎಂದು ಹಿಡಿಯಲು ಅಡ್ಡಿಯಿಲ್ಲ ಎಂದು ನಿಶ್ಚಿತಪಡಿಸಿದ್ದಾರೆ.

ಈ ಗೋವಿಂದ ಕವಿಯು ತನ್ನ 'ನಂದೀ ಮಾಹಾತ್ಮ್ಯ' ಪೀಠಿಕಾ ಸಂಧಿ ಪದ್ಯ ೧೫ರಲ್ಲಿ ಲಕ್ಷ್ಮೀಪತಿ (ಲಕ್ಷ್ಮೀಶ)ಯನ್ನು ಸ್ತುತಿಸಿದ್ದಾನೆ, ಎಂಬುದನ್ನು ತೋರಿಸಿ, ಆ ಪದ್ಯದಲ್ಲಿ ಬಂದಿರುವ ಚತುರಾಸ್ಯನು 'ಚತುರಾಸ್ಯ' ನಿಘಂಟುವಿನ ಕರ್ತೃವಾಗಿದ್ದು, ರುದ್ರನು ಜಗನ್ನಾಥ ವಿಜಯದ ರುದ್ರನಾಗಿದ್ದಾನೆ. ಲಕ್ಷ್ಮೀಪತಿ ಎಂದರೆ ಕವಿ ಲಕ್ಷ್ಮೀಶ ಮತ್ತು ಅನಂತ ಎಂದರೆ ಯಾರು, ಗೊತ್ತಿಲ್ಲ ಎಂದು ಹೇಳಿದ್ದಾರೆ.

ಎಂ. ಆರ್. ಶ್ರೀ : ಪ್ರಬುದ್ಧ ಕರ್ನಾಟಕ ಸಂಪುಟ ೧೫ ದೀಪಾವಳಿ ಸಂಚಿಕೆಯಲ್ಲಿ 'ಕವಿ ಲಕ್ಷ್ಮೀಶ' ಪುಸ್ತಕವನ್ನು ವಿಮರ್ಶಿಸುವಾಗ ಎಂ.ಆರ್. ಶ್ರೀ ಅವರು ಲಕ್ಷ್ಮೀಶನ ಕಾಲವನ್ನು ಕುರಿತು ಚರ್ಚಿಸಿದ್ದಾರೆ. ಅವರು ಗೋವಿಂದ ಪೈಗಳ 'ದೇವನೂರು (ಕಡೂರು) ಓಲೆಗರಿ ಪ್ರತಿಯಲ್ಲಿ ನಮೂದಿಸಿದ ಕ್ರಿ. ಶ. ೧೪೧೫ (೧೩೩೭) ಎಂಬ ಕಾಲದ ಅರ್ಥವಾರ್ಥಿಕ ಪದ್ಯವು ಕವಿಯದಲ್ಲ; ಪ್ರತಿಕಾರನು ಸೇರಿಸಿದ್ದು'ಎಂಬ ಮಾತನ್ನು ಒಪ್ಪುತ್ತಾರೆ. ಆದರೆ 'ಜಿತ ತಮಂ........' ೧೭–೪೨ ಎಂಬ ಸೂರ್ಯೋದಯದ ವರ್ಣನೆಯು ಮೊದಲನೆಯ ಹರಿಹರನನ್ನು ಸೂಚಿಸುತ್ತದೆ, ಎಂಬ ಮಾತನ್ನು ಮತ್ತು ಕನ್ನಡ ಕುವಲಯಾನಂದದ ಕಾಗದದ ಪ್ರತಿಯ ಮೇಲಿಂದ ಲಕ್ಷ್ಮೀಶನ ಕಾಲವನ್ನು ನಿರ್ಣಯಿಸುವದನ್ನು ಒಪ್ಪುವದಿಲ್ಲ.

ಡಿ. ಎಲ್. ಎಸ್. ಅವರು 'ಚತುರಾಸ್ಯ, ರುದ್ರ, ಲಕ್ಷ್ಮೀಪತಿ, ಅನಂತ, ನಾಲ್ವರೂ ಬ್ರಾಹ್ಮಣ ಕವಿಗಳು' ಎಂದದ್ದಕ್ಕೆ ಎಂ. ಆರ್. ಶ್ರೀ ಅವರು ಚತುರಾಸ್ಯನು 'ರೇವಣಸಿದ್ಧೇಶ್ವರ ಪುರಾಣದ ವೀರಶೈವನೇಕಾಗಿರಬಾರದು ? ಮತ್ತು ರುದ್ರನು ಕರಸ್ಥಲದ ನಾಗಯ್ಯನ ಚರಿತ್ರೆ ಬರೆದ ವೀರಶೈವನಾಗಬಹುದಲ್ಲ ? ಮತ್ತೆ ಪಶ್ಚಿಮ ರಂಗಧಾಮ ಸ್ತುತಿಯನ್ನು ಬರೆದ ಲಕ್ಷ್ಮಯ್ಯನು ಲಕ್ಷ್ಮೀಪತಿಯಾಗಿರಲಾರನೆ? ಅನಂತನ ಕಾವ್ಯವಾಗಲಿ, ಉಲ್ಲೇಖವಿದ್ದ ಶಾಸನವಾಗಲಿ ಸಿಗುವುದಿಲ್ಲ. ಆದುದರಿಂದ ಇವನು ಅಷ್ಟು

ಪ್ರಸಿದ್ಧ ಕವಿಯಾಗಿರಲಿಕ್ಕಿಲ್ಲ ಎಂದಿದ್ದಾರೆ. ಮತ್ತು ಚತುರಾಸ್ಯ, ರುದ್ರ, ಲಕ್ಷ್ಮಯ್ಯ-ಈ ಮೂವರೂ ಶ್ರೀರಂಗಪಟ್ಟಣದ ಪ್ರಾಂತದವರಿದ್ದಿರಬಹುದು ಎಂದು ಊಹಿಸಿ, ನಂದೀ ಮಹಾತ್ಮ್ಯದಲ್ಲಿಯ ಈ ಪದ್ಯವು ಲಕ್ಷ್ಮೀಶನ ಕಾಲವನ್ನು ಊಹಿಸಲು ಸಹಾಯಕವಾಗಿದೆಯೇ ಹೊರತು ನಿಶ್ಚಿತಾರ್ಥಕ್ಕೆ ಅಲ್ಲ ಎಂದು ಅನುಮಾನಪಟ್ಟಿದ್ದಾರೆ.

ಡಿ. ಎಲ್. ಎನ್. : ಇದಕ್ಕೆ ಉತ್ತರವಾಗಿ ಡಿ. ಎಲ್. ಎನ್. ಅವರು ಪ್ರಬುದ್ಧ ಕರ್ನಾಟಕ ಸಂಪುಟ ೧೫ ಸಂಚಿಕೆ ೩ರ ಪತ್ರವ್ಯವಹಾರದಲ್ಲಿ ಲೇಖನವನ್ನು ಬರೆದು ಚತುರಾಸ್ಯ, ರುದ್ರ, ಲಕ್ಷ್ಮೀಪತಿ ಈ ಮೂವರೂ ಪ್ರಖ್ಯಾತ ಬ್ರಾಹ್ಮಣ ಕವಿಗಳೇ ಆಗಿದ್ದಾರೆ. ಈ ಪ್ರಖ್ಯಾತ ಕವಿಗಳೊಂದಿಗೆ ಸ್ತುತಿಸಲ್ಪಟ್ಟಿರುವ ಅನಂತ ಕವಿಯೂ ಪ್ರಖ್ಯಾತನಾದ ಕವಿಯೇ ಆಗಿರಲು ಸಾಕು. ಅವನ ಒಂದೂ ಕೃತಿ ಅಥವಾ ಒಂದೂ ಉಲ್ಲೇಖ ದೊರೆಯದೆ ಇರುವುದು ಕನ್ನಡ ನಾಡಿನ ದುರದೃಷ್ಟವೇ ಸರಿ ಎಂದಿದ್ದಾರೆ. ಲಕ್ಷ್ಮಯ್ಯನಿಗೆ ಲಕ್ಷ್ಮೀಪತಿ ಎಂಬ ಹೆಸರು ಇಲ್ಲ. ಲಕ್ಷ್ಮೀಪತಿ ಎಂಬ ಹೆಸರು ಕವಿ ಲಕ್ಷ್ಮೀಶ ಮತ್ತು ಚಿಕ್ಕುಪಾಧ್ಯಾಯ ಇಬ್ಬರಿಗೇ ಇದೆ. ಕ್ರಿ.ಶ. ೧೬೭೨ರ ಚಿಕ್ಕುಪಾಧ್ಯಾಯನನ್ನು ಲಕ್ಷ್ಮೀಪತಿಯೆಂದು ನಂದೀಮಹಾತ್ಮ್ಯದಲ್ಲಿ ಉಲ್ಲೇಖಿಸುವುದು ಅಸಾಧ್ಯ. ಆದುದರಿಂದ ಕವಿ ಗೋವಿಂದನು ಉಲ್ಲೇಖಿಸಿದ ಲಕ್ಷ್ಮೀಪತಿಯು ಕವಿ ಲಕ್ಷ್ಮೀಶನೇ ಆಗಿದ್ದಾನೆ. ಮತ್ತು **ಲಕ್ಷ್ಮೀಶನ ಕಾಲವು ಕ್ರಿ.ಶ. ೧೬೦೦ರಕ್ಕಿಂತ ಹಿಂದಿನದೆಂಬುದು ತ್ರಿವಾರ ಸತ್ಯ**; ಎಷ್ಟು ಹಿಂದಿನವ ಎಂಬುದರ ಬಗ್ಗೆ ಸಂಶೋಧನೆ ಅವಶ್ಯ ಎಂದಿದ್ದಾರೆ.

ಗೋವಿಂದ ಪೈ : 'ಶ್ರೀ ಪಂಜೆಯವರ ನೆನಪಿಗಾಗಿ' ಎಂಬ ಪುಸ್ತಕದಲ್ಲಿ ದಿವಂಗತ ಗೋವಿಂದ ಪೈಗಳು ಪುಟ ೧೮೨ ರಿಂದ ೧೮೯ರಲ್ಲಿ 'ಕವಿ ಲಕ್ಷ್ಮೀಶನ ಕಾಲದ ಮರುವಿಚಾರ'ವನ್ನು ಮಾಡಿದ್ದಾರೆ. ಅದರಲ್ಲಿ—

೧. ಕನ್ನಡ ಕುವಲಯಾನಂದದ ಕಾಲವು ಕ್ರಿ.ಶ. ೧೬೭೪ ಅಲ್ಲ. ೧೭೩೪ ಎಂದು ನಮೂದಿಸಿದ್ದಾರೆ.

೨. ಗೋವಿಂದ ಕವಿಯ ನಂದೀ ಮಹಾತ್ಮ್ಯದ ಕಾಲವು ಕ್ರಿ.ಶ. ೧೬೦೦ ರಿಂದ ಈಚೆ ಎಂದು ನಿರ್ಧರಿಸಿ ಇದಕ್ಕಿಂತಲೂ ೫೦-೬೦ ವರ್ಷ ಮುಂಚೆ ಅಂದರೆ ಸುಮಾರು **ಕ್ರಿ. ಶ. ೧೫೨೫ ಲಕ್ಷ್ಮೀಶನ ಕಾಲದ ಉತ್ತರಾವಧಿಯಾಗುತ್ತದೆ**, ಎಂದಿದ್ದಾರೆ.

೩. ಹುಲ್ಲೂರ ಜೋಯಿಸರು ಬೆಳಕಿಗೆ ತಂದ ಎರಡು ಶಾಸನಗಳ ಆಧಾರದ ಮೇಲಿಂದ ಕೋನಯ್ಯನು (ಕೋನಪ್ಪ) ಕ್ರಿ.ಶ.೧೫೦೯ ರಿಂದ ೧೫೨೯ರ ವಿಜಯನಗರದ ಕೃಷ್ಣರಾಯನ ಆಳೊತ್ತಿನಲ್ಲಿ ಇದ್ದನೆಂದು ಹೇಳಿದ್ದಾರೆ. ಮತ್ತು ಈ ಕೋನಯ್ಯನು ಕಾಳಿದಾಸ, ಮಯೂರ, ದಂಡಿ, ಕುಮಾರವ್ಯಾಸರೊಂದಿಗೆ ಕವಿ ಲಕ್ಷ್ಮೀಶನನ್ನು ಸ್ತುತಿಸಿದ್ದಾನೆ, ಎಂದು ಪದ್ಯಗಳನ್ನು ಉದಹರಿಸಿದ್ದಾರೆ.

೪. ಜೈಮಿನಿ ಭಾರತದ ಪದ್ಯಗಳಿಗೂ ಭಾವಚಿಂತಾರತ್ನ ಮತ್ತು ಸೌಂದರ ಪುರಾಣದಲ್ಲಿಯ ಪದ್ಯಗಳಿಗೂ ಹೋಲಿಕೆಯನ್ನು ತೋರಿಸಿ, ಲಕ್ಷ್ಮೀಶನ ಕಾಲದ ಉತ್ತ

ರಾವಧಿ ಕ್ರಿ. ಶ. ೧೪೦೦ ರಷ್ಟಕ್ಕೆ ಹಿಂದೆ ಹೋಗುತ್ತದೆ (ಪುಟ ೧೯೯) ಎಂದಿದ್ದಾರೆ.

**ದ. ರಾ. ಬೇಂದ್ರೆ :** ದ. ರಾ. ಬೇಂದ್ರೆಯವರಿಗೆ ಗೋವಿಂದ ಕವಿಯ ಪ್ರಥಮ ಕಾವ್ಯವಾದ 'ಚಿತ್ರ ಭಾರತ'ವು ದೊರೆತದ್ದು, ಕವಿ ಲಕ್ಷ್ಮೀಶನ ಕಾಲವನ್ನು ನಿರ್ಣಯಿಸುವಲ್ಲಿ ಅತಿ ಮಹತ್ವದ ಮಾತು. ಗೋವಿಂದ ಕವಿಯು ಸೂಕ್ಷ್ಮವಾಗಿ ಕವಿಚೂತವನ ಚೈತ್ರನಾದ ಲಕ್ಷ್ಮೀಶನ ಉಲ್ಲೇಖವನ್ನು ಮಾಡಿದ್ದಾನೆ. 'ಚಿತ್ರ ಭಾರತ'ದ ರಚನಾ ಕಾಲವು ಕ್ರಿ.ಶ. ೧೫೪೧ ಎಂಬುದಕ್ಕೆ ಆಧಾರವಾದ ಪದ್ಯವನ್ನು ಉದಾಹರಿಸಿದ್ದಾರೆ. ಈ ಭಾಗವನ್ನು ಗೋವಿಂದ ಪೈಗಳು 'ಶ್ರೀ ಪಂಜೆಯವರ ನೆನಪಿಗಾಗಿ' ಎಂಬ ಪುಸ್ತಕದಲ್ಲಿಯ ಲೇಖನದಲ್ಲಿ ಚರ್ಚಿಸಿ, 'ಚಿತ್ರ ಭಾರತ'ದ ಕಾಲವು ಕ್ರಿ.ಶ. ೧೫೪೩ ಆಗುತ್ತದೆ ಎಂದು ತೋರಿಸಿದ್ದಾರೆ. ಅಂದ ಬಳಿಕ ಲಕ್ಷ್ಮೀಶನ ಕಾಲವು ಕ್ರಿ.ಶ. ೧೫೪೩ ಕ್ಕಿಂತ ಮೊದಲಿನದು ಎಂಬುದು ನಿರ್ವಿವಾದವೇ. ಕವಿ ಕನಕದಾಸರ 'ಮೋಹನ ತರಂಗಿಣಿ' ಯಲ್ಲಿ ಕವಿ ಲಕ್ಷ್ಮೀಶನ ಪ್ರಭಾವವು ಕಂಡುಬರುವುದರಿಂದ ಮತ್ತು ಜೈ. ಭಾ. ಸಂಧಿ ೨೮ ಪದ್ಯ ೪೭ ರಲ್ಲಿ ಸಿಡಿ ಗುಂಡಿನ ಮಾತು ಬರುವುದರಿಂದ, **ಕೃಷ್ಣದೇವರಾಯನ ರಾಯಚೂರು ವಿಜಯದ ಕ್ರಿ. ಶ. ೧೫೨೦ರ ವರ್ಷವೇ ಕವಿ ಲಕ್ಷ್ಮೀಶನ ಜೈಮಿನಿ ಭಾರತದ ಕಾಲವಾಗಬಹುದು ಎಂದು ದ. ರಾ. ಬೇಂದ್ರೆಯವರು ಊಹಿಸಿದ್ದಾರೆ.** ಮತ್ತು ದೇವಪುರ ಪ್ರತಿಯಲ್ಲಿ ನಮೂದಿಸಿದ ವಿಕ್ರಮ ಸಂವತ್ಸರ (ಕ್ರಿ.ಶ. ೧೫೨೦) ಲಕ್ಷ್ಮೀಶನ ಜೈಮಿನಿ ಭಾರತವು ಹುಟ್ಟಿದ ಕಾಲ ಎಂಬುದನ್ನು ನಂಬಬಹುದು, ಎಂದಿದ್ದಾರೆ. ಏನಿದ್ದರೂ ಕವಿ ಲಕ್ಷ್ಮೀಶನು ಕುಮಾರವ್ಯಾಸ ಮತ್ತು ಕುಮಾರ ವಾಲ್ಮೀಕಿಯ ಅನಂತರದವನಾಗಿದ್ದು ಪುರಂದರದಾಸ ಮತ್ತು ಕನಕದಾಸರಿಗಿಂತ ಮೊದಲಿನವನಾಗಿದ್ದಾನೆ ಎಂದಿದ್ದಾರೆ. ಲಕ್ಷ್ಮೀಶನು ವಿರೂಪಾಕ್ಷ ಪಂಡಿತನಿಗಿಂತ ಗುಬ್ಬಿಯ ಮಲ್ಲಣಾರ್ಯರಿಗೆ ಹೆಚ್ಚು ಸಮೀಪವಾಗಿರುವುದರಿಂದ **ಕವಿ ಲಕ್ಷ್ಮೀಶನ ಕಾಲದ ಕೆಳಗಿನ ಗಡುವು ಕ್ರಿ.ಶ. ೧೫೨೦, ಮೇಲಿನ ಗಡುವು ಕ್ರಿ.ಶ. ೧೫೪೫** ಎಂದು ಹೇಳಿ ಕವಿಯು ವಿಜಯನಗರದ ಶ್ರೀ ಕೃಷ್ಣದೇವರಾಯನ ಕಾಲದವನಾಗಿರಬಹುದೇ ನೋಡಿ ಎಂದು ಸೂಚಿಸಿ, ಕಾಲದ ಬಗ್ಗೆ ವಿಚಾರ ಮಾಡುವ ವಿಮರ್ಶಕರ ದೃಷ್ಟಿಯು ಕ್ರಿ.ಶ. ೧೫೨೦ ರಿಂದ ೧೫೪೫ರಲ್ಲಿಯೇ ಓಡಾಡುವಂತೆ ಮಾಡಿದ್ದಾರೆ.

**ತಿ. ತಾತಾಚಾರ್ಯ ಶರ್ಮ :** ದ.ರಾ. ಬೇಂದ್ರೆಯವರ ಈ ಲೇಖನದಿಂದ ಸ್ಫೂರ್ತಿ ಪಡೆದ ತಿ. ತಾತಾಚಾರ್ಯ ಶರ್ಮ ಅವರು ತ. ಸು. ಶಾಮರಾಯ ಅವರು ಸಂಪಾದಿಸಿದ ಜೈಮಿನಿ ಭಾರತದ ಸಂಗ್ರಹಕ್ಕೆ ಮುನ್ನುಡಿ ಬರೆಯುವಾಗ 'ಪೇಯಿಸ್, ನೂನಿಜ್, ಬರ್ಬೋಸಾ, ಎಂಬ ಆಂಗ್ಲ ಪ್ರವಾಸಿಕರು ೧೬ನೆಯ ಶತಮಾನದ ವಿಜಯನಗರ, ಅಲ್ಲಿಯ ಗಜ, ಮತ್ತು ಅಶ್ವಗಳ ಸಂಪತ್ತು,- ನಗರ ವಿಸ್ತಾರ ಮೊದಲಾದವುಗಳ ವರ್ಣನೆಯನ್ನು ಮಾಡಿದ್ದನ್ನು ಓದಿದರೆ ಈ ಮೂವರು ವಿಜಯನಗರದ ಮಹೋನ್ನತ ದೆಶೆಯನ್ನು ಕಣ್ಣಾರೆ ಕಂಡವರ ೭ ಎಂದು ನಿಶ್ಚಿತವಾಗುತ್ತದೆ. ನೂನಿಜ್ ವರ್ಣಿಸುವ ವಿಜಯನಗರದ

ಅರಸರ (ಸದಾಶಿವರಾಯ,ರಾಮರಾಯ) ಅಶ್ವ ಸಂಪದಕ್ಕೂ ಮತ್ತು ಲಕ್ಷ್ಮೀಶನು ವರ್ಣಿಸುವ ಯೌವನಾಶ್ವನ ಅಶ್ವ ಸಂಪದಕ್ಕೂ ಹೆಚ್ಚು ಅಂತರವಿಲ್ಲ. ಮತ್ತು ಕವಿ ಲಕ್ಷ್ಮೀಶನು ವರ್ಣಿಸುತ್ತಿರುವ ದ್ವಾರಕಾ ನಗರವು ವಿಜಯನಗರ, ಕೃಷ್ಣದೇವರಾಯನ ಒಡ್ಡೋಲಗ, ಅಲ್ಲಿಯ ನವರಾತ್ರಿ ಉತ್ಸವದ ರಾಜಸಭೆಯ ನೆನಪನ್ನು ತಂದುಕೊಡುತ್ತದೆ. ಕ್ರಿ.ಶ. ೧೫೦೯ ರಿಂದ ೧೫೬೫ರ ವರೆಗಿನ ೬೦ ವರ್ಷಗಳು ವಿಜಯನಗರವು ಸಿರಿ–ಸೌಭಾಗ್ಯಗಳಿಂದ ತುಂಬಿ, ತೂಗಿ, ತೊನೆದಾಡಿದ ದಿನಗಳು. ಕೃಷ್ಣದೇವರಾಯನ ಕ್ರಿ.ಶ. ೧೫೦೯ ರಿಂದ ೧೫೨೯ ರ ಕಾಲನಂತೂ ಸುವರ್ಣಯುಗ. ಕವಿ ಲಕ್ಷ್ಮೀಶನು ಇದನ್ನೆಲ್ಲವನ್ನೂ ಕಂಡವನಾಗಿದ್ದು, ಕ್ರಿ.ಶ. ೧೫೩೦ ರಲ್ಲಿ ಜೈಮಿನಿ ಭಾರತವನ್ನು ರಚಿಸಿರಬೇಕು' ಎಂದು ಊಹಿಸಿದ್ದಾರೆ. ಜೈಮಿನಿ ಭಾರತದಲ್ಲಿಯ ಅರ್ಜುನನ ದಿಗ್ವಿಜಯವು ವಿಜಯನಗರದ ಕೃಷ್ಣದೇವರಾಯನ ದಿಗ್ವಿಜಯವನ್ನು ಸೂಚಿಸುತ್ತದೆ ಎಂದು ಹೇಳಿ, ದ.ರಾ. ಬೇಂದ್ರೆಯವರ 'ಲಕ್ಷ್ಮೀಶನು ಕೃಷ್ಣದೇವರಾಯನ ಕಾಲದವನಾಗಿರಬಹುದೇ ?' ಎಂಬ ಕುತೂಹಲಕ್ಕೆ ಪುಷ್ಟಿಯನ್ನು ಕೊಟ್ಟಿದ್ದಾರೆ.

**ರಂ. ಶ್ರೀ. ಮುಗಳಿ:** ರಂ. ಶ್ರೀ. ಮುಗಳಿ ಅವರು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ, ಎಲ್ಲ ವಿಮರ್ಶಕರ ಲೇಖನಗಳನ್ನು ತೂಗಿನೋಡಿ ದ. ರಾ. ಬೇಂದ್ರೆಯವರು ಸೂಚಿಸಿದ ಕ್ರಿ.ಶ. ೧೫೨೦ ರಿಂದ ೧೫೭೫ರ ಕಾಲದ ಬಂಧದಲ್ಲಿ ವಿಚಾರ ಮಾಡಿ, ಕವಿ ಲಕ್ಷ್ಮೀಶನು ಸುಮಾರು ೧೫೫೦ರ ಆಚೆಯವನಾಗಿರಲಾರ ಎಂದಿದ್ದಾರೆ. ಆದುದರಿಂದ ಕವಿ ಲಕ್ಷ್ಮೀಶನನ್ನು ಕುಮಾರವ್ಯಾಸ ಮತ್ತು ಕುಮಾರ ವಾಲ್ಮೀಕಿಗಳ ಅನಂತರ ತೆಗೆದುಕೊಂಡು ಗೋಪಕವಿ (ಗೋವಿಂದ) ಮತ್ತು ನಾಗರಸರೊಂದಿಗೆ ಸೇರಿಸಿ 'ಇತರ ಭಾಗವತ ಕವಿಗಳು' ಎಂಬ ಗುಂಪಿನಲ್ಲಿ ಸೇರ್ಪಡೆ ಮಾಡಿದ್ದಾರೆ.

**ಕೆ. ರಾಮಸ್ವಾಮಯ್ಯಂಗಾರ್ :** ಕ. ಸಾ. ಪ. ಪ. ಸಂಪುಟ ೬ ಸಂಚಿಕೆ ೧ ರಲ್ಲಿ ಕೆ. ರಾಮಸ್ವಾಮಯ್ಯಂಗಾರರು 'ಕವಿ ಲಕ್ಷ್ಮೀಶನು ಇಂದಿಗೆ ೧೫ ತಲೆ ಹಿಂದಿನವನು, ಎಂದು ದೇವನೂರು (ಕಡೂರ) ಸ್ಥಳದವರು ಹೇಳುವ ಆಧಾರದ ಮೇಲಿಂದ ೧೫ ತಲೆ ಎಂದರೆ–೩೦೦ ವರ್ಷಗಳ ಹಿಂದೆ ಎಂದು ಲೆಕ್ಕ ಹಾಕಿ, ಕವಿಯು ೧೬ನೆಯ ಶತಮಾನದ ಕೊನೆಯಲ್ಲಿ ಜೀವಿಸಿರಬೇಕು' ಎಂದಿದ್ದಾರೆ. ಇದೇ ಲೇಖನದಲ್ಲಿ–ಕವಿ ಷಡಕ್ಷರಿಯು ಜೈಮಿನಿ ಭಾರತದ ಪ್ರಾಶಸ್ತ್ಯವನ್ನು ತಗ್ಗಿಸಲು 'ರಾಜಶೇಖರ ವಿಳಾಸ'ವನ್ನು ಬರೆದನು ಎಂಬ ಉಲ್ಲೇಖವಾಗಲಿ ಮತ್ತು ಷಡಕ್ಷರಿಯು ರುದ್ರಭಟ್ಟನ ಕಾವ್ಯದ ಅಪಮಾನ ಮಾಡಿದ ಸೇಡನ್ನು ತೀರಿಸುವುದಕ್ಕಾಗಿ ಕವಿ ಲಕ್ಷ್ಮೀಶನು ಕ್ರಿ.ಶ. ೧೬೧೩ ರಲ್ಲಿ ಜೈಮಿನಿ ಭಾರತವನ್ನು ರಚಿಸಿದ ನೆಂಬ ಐತಿಹ್ಯವಾಗಲಿ, ಎರಡೂ ಅವಿಶ್ವಸನೀಯ ಎಂದಿದ್ದಾರೆ. ರುದ್ರಭಟ್ಟನ ಕಾಲವು ಸುಮಾರು ೧೨೦೦. ಷಡಕ್ಷರಿಯ ಕಾಲವು ಕ್ರಿ.ಶ. ೧೬೫೦. ಕವಿ ಲಕ್ಷ್ಮೀಶನು ಇವರಿಬ್ಬರ ಮಧ್ಯದವನಾಗಿರುವುದರಿಂದ ಮೇಲೆ ಉದಾಹರಿಸಿದ ಉಲ್ಲೇಖ ಮತ್ತು ಐತಿಹ್ಯವು ಕೇವಲ ದಂತಕತೆ ಎನ್ನದೇ ಗತಿಯಿಲ್ಲ. ಈ ಮೂವರಿಗೂ ಅವರವರ

ಕಾಲಕ್ಕೆ ಜನರ ಮೆಚ್ಚಿಗೆ ಲಭಿಸಿತ್ತು ಎಂಬುದು ಇತಿಹಾಸ. ಕವಿ ರುದ್ರಭಟ್ಟ ಮತ್ತು ಕವಿ ಲಕ್ಷ್ಮೀಶರು ಕಡೂರ ದೇವನೂರಿನವರು ಎಂಬುದು ವಸ್ತುಸ್ಥಿತಿಯಾಗಿದೆ.

ಕಾಲ ನಿರ್ಣಯಕ್ಕಾಗಿ ಶ್ರಮಪಟ್ಟ ಲೇಖಕರ ಲೇಖನಗಳನ್ನು ಓದಿ ಮುಗಿಸಿದಾಗ ಪ್ರತಿಯೊಬ್ಬರೂ ಕವಿಯ ಕಾಲದ ಬಗ್ಗೆ ಇನ್ನೊಬ್ಬರು ಮಾಡಿದ ಊಹೆ, ಅನುಮಾನ ಗಳಲ್ಲಿಯ ದೋಷಗಳನ್ನು ಬದಿಗಿಟ್ಟು, ಗುಣಗಳನ್ನು ಗ್ರಹಿಸಿ, ಕಾಲದ ನಿಶ್ಚಿತಾರ್ಥದತ್ತ ಸಾಗಿದ್ದು ಕಾಣುತ್ತದೆ. ಗೋವಿಂದ ಪೈಗಳು ನಿರ್ಧರಿಸಿದ ಕನ್ನಡ ಕುವಲಯಾನಂದದ ಕಾಲವನ್ನು ಮೆಚ್ಚಿ, ಡಿ. ಎಲ್. ಎನ್. ಅವರು ಕವಿ ಗೋವಿಂದನ ಕಾಲವನ್ನು ನಿರ್ಧರಿಸಲು ಶ್ರಮಪಟ್ಟರು. ಗೋವಿಂದನ ಕಾಲವನ್ನು ನಿರ್ಧರಿಸಿದ್ದನ್ನು ಮೆಚ್ಚಿ, ದ.ರಾ. ಬೇಂದ್ರೆ ಅವರು 'ಚಿತ್ರಭಾರತ' ಕಾಲವನ್ನು ಉದಾಹರಿಸಿದರು. ಗೋವಿಂದ ಪೈಗಳು ಇವರಿಬ್ಬರ ಶ್ರಮವನ್ನು ಉಲ್ಲೇಖಿಸಿ ಪುಷ್ಟೀಕರಿಸಿದರು.

## ಹೊಸ ಸಂಶೋಧನೆಯ ದೃಷ್ಟಿಯಲ್ಲಿ ವಾದವಿವಾದಗಳ ಪುನರ್ವಿಮರ್ಶೆ

### ಅ) ಕವಿಯ ಜೀವನ ಚರಿತ್ರೆ

ಹಿಂದೆ ಆಗಿಹೋದ ಒಬ್ಬ ಕವಿಯ ಜೀವನಚರಿತ್ರೆಯನ್ನು ಖಚಿತಪಡಿಸುವುದಕ್ಕೆ, ಆತನ ಕೃತಿಗಳಲ್ಲಿಯ ಉಲ್ಲೇಖಗಳು, ಗ್ರಂಥಗಳು, ಕಾಗದಪತ್ರಗಳು, ವಂಶಾವಳಿ ಅಥವಾ ಈ ಮಾಹಿತಿಯನ್ನು ಒದಗಿಸಬಲ್ಲ ತೀರ ಸಮೀಪದ ವಂಶಜರು ಸಿಕ್ಕಬೇಕಾಗುತ್ತದೆ. ಇವು ನೇರವಾದ ಸಾಧನಗಳು. ಇವು ದೊರೆಯದೆ ಹೋದಾಗ ಇತರ ಕವಿಗಳ ಕಾವ್ಯಗಳಲ್ಲಿ ದೊರೆಯುವ ನಮ್ಮ ಇಚ್ಛಿತಕವಿಯನ್ನು ಕುರಿತ ಉಲ್ಲೇಖಗಳು, ಅವನ ಸಂಬಂಧವಾದ ದಂತಕಥೆಗಳು, ಪರಂಪರೆಯಿಂದ ನಡೆದುಬಂದ ಸಂಪ್ರದಾಯ ವಿಶೇಷಗಳು ಇತ್ಯಾದಿಗಳು ಕವಿಯ ಚರಿತ್ರಾಂಶಗಳ ಜೋಡಣೆಗೆ ನೆರವಾಗುವ ಸಾಧನಗಳು. ಈ ಇಬ್ಬಗೆಯ ಸಾಧನಗಳಿಂದ, ಇಲ್ಲವೆ ಉಪಲಬ್ಧವಾದ ಒಬ್ಬಗೆಯ ಸಾಧನಗಳಿಂದ ಪೂರ್ವದ ಕವಿಯ ಜೀವನಾಂಶಗಳನ್ನು ಗುರುತಿಸಿ ಅವನ ಚರಿತ್ರವನ್ನು ಹೆಣೆಯಬೇಕಾಗುತ್ತದೆ. ಹೀಗೆ, ಕವಿ ಲಕ್ಷ್ಮೀಶನು ತನ್ನ ಜೈಮಿನಿ ಭಾರತದಲ್ಲಿ ಹೇಳಿಕೊಂಡ ಸ್ವಕೀಯಜೀವನಸಂಬಂಧದ ಮಾತುಗಳ ಆಂತರಿಕ ಪ್ರಮಾಣಗಳಿಂದಲೂ ಬೇರೆ ಬೇರೆ ಕಡೆಗಳಿಂದ ದೊರೆತ ಬಾಹ್ಯಪ್ರಮಾಣಗಳಿಂದಲೂ ಅವನ ಜೀವನ ಚರಿತ್ರೆಯ ರೂಪರೇಷೆಯನ್ನು ಗುರುತಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಇದರಲ್ಲಿ ಅನೇಕ ಪಂಡಿತರು ಪಟ್ಟಿರುವ ಅಭಿಪ್ರಾಯಗಳನ್ನೂ ಊಹೆಗಳನ್ನೂ ಗಮನಕ್ಕೆ ತಂದುಕೊಂಡು ವಿಮರ್ಶಿಸಿ ಒಂದು ನಿರ್ಣಯಕ್ಕೆ ಬರಲಾಗಿದೆ.

ಕವಿ ಲಕ್ಷ್ಮೀಶನು ಪೀಠಿಕಾಸಂಧಿಯ ಒಂದು ಪದ್ಯದಲ್ಲಿ ತನ್ನ ವಿಷಯವನ್ನು ಹೀಗೆ ಹೇಳಿಕೊಂಡಿದ್ದಾನೆ:

ವಿದ್ವತ್ಸಭಾವಲಯಮಣಿಯೆ ವಿರಚಿಸಿದಂ ಭ
ರದ್ವಾಜಗೋತ್ರಭವನಣ್ಣಮಾಂಕನ ಸುತಂ
ಸದ್ವಿನುತಕರ್ಣಾಟಕವಿಚೂತವನಚೈತ್ರ ಲಕ್ಷ್ಮೀಶನೆಂಬೊರ್ವನು

ಹೃದ್ವನಜದೊಳ್ದೇವಪುರದ ಸಿರಿಯೆಱೆಯನ ಪ
ದದ್ವಯವನಾವಗಂ ಧ್ಯಾನಿಸುವರಡಿಗಳಂ
ಸದ್ವಿನಯದಿಂ ಭಜಿಪ ಬಲ್ಪಿಂದೆ ವಿಮಲಜೈಮಿನಿಭಾರತದ ಕಥೆಯನು ॥ (೧. ೧೧)

ಇಲ್ಲಿ ಕವಿ ತನ್ನ ವಿಷಯವಾಗಿ, ಭರದ್ವಾಜ ಗೋತ್ರದವನೆಂದೂ ಅಣ್ಣಮಾಂಕನ ಮಗನೆಂದೂ ಲಕ್ಷ್ಮೀಶ ಎಂದು ತನ್ನ ಹೆಸರೆಂದೂ ಹೇಳಿದ್ದಾನೆ. ತನ್ನ ಕವಿತ್ವದ ವಿಷಯವಾಗಿ 'ಕರ್ಣಾಟಕವಿಚೂತವನಚೈತ್ರ' ಎಂಬ ಬಿರುದನ್ನೂ ತನ್ನ ಈ ಕೃತಿಯ ವಿಷಯವಾಗಿ 'ವಿದ್ವತ್ಸಭಾವಲಯಮಱಿಯೆ' (ಪಂಡಿತರಲ್ಲಿ ಹೆಸರಾಗುವಂತೆ) ವಿರಚಿಸಿದನೆಂದೂ ತನ್ನ ಆಂತರಿಕ ಜೀವನದ ವಿಷಯವಾಗಿ ಸಿರಿಯೆರೆಯನ ಭಕ್ತರ ಭಕ್ತ ತಾನೆಂದೂ ತಿಳಿಸಿದ್ದಾನೆ. ಈ ಒಂದು ಪದ್ಯವನ್ನು ಬಿಟ್ಟರೆ ಬೇರೆಲ್ಲಿಯೂ ಅವನ ಕಾವ್ಯದಲ್ಲಿ ಚಾರಿತ್ರಿಕ ಮಾಹಿತಿ ಸಿಕ್ಕುವುದಿಲ್ಲ. ಕವಿಗಳು ತಮ್ಮ ಜೀವನ ಪರಿಚಯವನ್ನು ಕಾವ್ಯದಲ್ಲಿ ಹೇಳಿಕೊಳ್ಳದಿರುವುದು ಅವರ ವಿನಯಗುಣವೆನ್ನುವುದಕ್ಕಿಂತ ಅದೊಂದು ಕಾವ್ಯ ಸಂಪ್ರದಾಯವೆ ಆಗಿರಬಹುದು ಎನ್ನುವುದು ವಿಹಿತ. ಹೀಗಾಗಿ ಅನೇಕ ಕವಿಗಳ ಜೀವನ ಚರಿತ್ರೆಯನ್ನು ಊಹೆಯಿಂದ ನಿರ್ಮಿಸಿಕೊಳ್ಳಬೇಕಾಗುತ್ತದೆ. ಈ ಮಾತಿಗೆ ಕವಿ ಲಕ್ಷ್ಮೀಶನೂ ಹೊರತಾಗಿಲ್ಲ.

ಕವಿ ಲಕ್ಷ್ಮೀಶನ ಕೀರ್ತನೆಗಳ ಸಂಗ್ರಹದಲ್ಲಿ[1]

೧. ಏಳಯ್ಯ ರಾಕ್ಷಸಾಂತಕ ದನುಜಸಂಹಾರ
ಏಳಯ್ಯ ರಾಜೀವನಯನ ನವನೀತಚೋರ
ಏಳು ಲಕ್ಷ್ಮೀಮನೋಹರ । ಹರಿಯೆ ॥ ಏಳಯ್ಯ ॥ ॥ ಪಲ್ಲ ॥

ದಿನಪನುದಯಂಗೆಯ್ಯೆ ದಿಕ್ಪಾಲಕರ್ನೆರೆಯೆ
ಕನಕಭೂಷಣದ ಕಾಂತೆಯರು ಆರತಿ ಪಿಡಿಯೆ
ಅನುಪಮಗೆ ಜಯವೆಂದು ಬಂದು ನಿಂದ್ಯೆಧಾರೆ
ಇನಕುಲನೆ ನಲಿದುಪ್ಪವಡಿಸು ಶ್ರೀಹರಿಯೆ ॥ ೧ ॥

ಪ್ರಹ್ಲಾದನಾರದರು ವಾಸಿಷ್ಠಗೌತಮರು
ಮಹಮುನಿಗಳತ್ರಿಭಾರದ್ವಾಜಗೌತಮರು
ಬಹುವಿಧದಿ ಕಾಶ್ಯಪರು ಹನುಮಂತ ತುಂಬುರರು
.. ......ಪಾಡುತ್ತಲೈಧಾರೆ ಇನಕುಲನೆ ನಲಿದು ॥ ೨ ॥

ದೇವಗಂಗೆಯ ಕೊಂಡು ದೇವರ್ಕಳೈದಿದರು
ದೇವತಾವಳಿ ಬಂದು ದೇವಜಯವೆನುತಿಹರು
ದೇವಪುರದಲಿ ನಿಂದ ದೇವಕಿಯ ವರಕಂದ
ದೇವ ಲಕ್ಷ್ಮೀಪತಿಯೆ ದೇವ ನೀನೇಳ್ಳೆ ಹರಿಯೆ ॥ ೩ ॥

೨. ನಾರಾಯಣಾಯೋಂ ನಮೋ ನಾರಾಯಣಾಯೋಂ ನಮೋ ।
ನಾರಾಯಣಾಯ ವರನಾಗೇಂದ್ರಶಯನಾಯ
ನಾರದಾದ್ಯಖಿಳ ಮುನಿನುತ ಚರಿತ್ರಾಯ ॥

1. ಮೈಸೂರು ಸಂಸ್ಥಾನ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆಯ 'ಕನ್ನಡ ಜೈಮಿನಿ ಭಾರತ', ಪುಟ ೪೦೪–೪೧೧.

ಘೋರ ಭವದುಃಖಸಂಹಾರಾಯ ಪಾಹಿಮಾಂ
ಕಾರುಣ್ಯಲೋಚನಾಯ ಹರಿಯೆ ನಾರಾಯಣಾಯ ||

೩. ಆವನಿದನುದಯಕಾಲದೊಳೆದ್ದು ಭಕ್ತಿಯಿಂ
ಭಾವಶುದ್ಧಿಯಲಿ ಹೇಳುವನೊ ಕೇಳ್ವನೊ ಅವನ
ಘಾವಳಿಯ ಪರಿಹರಿಸಿ ಸುಜ್ಞಾನಪದವೀವ ದೇಹಾವಸಾನದಲ್ಲಿ
ಶ್ರೀವಾಸುದೇವನಾಜ್ಞಾಪಿಸಿ ಗಜೇಂದ್ರಸಹಿ
ತಾ ವಿಹಂಗಾಧಿಪನ (ತಾ)ನೇರಿ ಬಿಜಯಂಗೆಯ್ದ
ದೇವಪುರ ಲಕ್ಷ್ಮೀವರನ ನೆನೆವ ಭಕ್ತರ್ಗೆ ಭಂಗಬರ್ಪುದೆ ಲೋಕದಿ ||

ಈ ಮೊದಲಾದ ಹಾಡುಗಳನ್ನು ಕಾಣುತ್ತೇವೆ. ಅದಲ್ಲದೆ ಅವನ ಜೈಮಿನಿ ಭಾರತದಲ್ಲಿ,

೧. ಅಸುರಾರಿ ಭಕ್ತರಕ್ಷಾವ್ಯಸನಿ (೧೫.೪೦)
೨. ಆನತರ ನೆನಹಿಗೆ ನಿತ್ಯಂ (೧೩.೨೨)
೩. ಕೃಷ್ಣನಾಮ ಜಪದ ಮುಂದೆ ಪಾಪ ನಿಲ್ಲವು (೨೪.೭೮)
೪. ತನ್ನ ಶರಣರ ಜೀವನವೆ ತನಗೆ ಜೀವನಂ (೩೨.೧೫)
೫. ತನ್ನಂ ಸೇವಿಪರ್ಗೆ ಸೇವಕನೆಂಬುದಂ ತೋರ್ಪುತ (೧೪.೨೬)
೬. ತ್ರಿಭುವನದೊಳಚ್ಯುತನ ಭಕ್ತರ್ಗೆ ಬರ್ಪುದೆ ಪರಿಭವಂ (೨೫.೪೧)
೭. ಪಲವು ಮುಖದಿಂದೆ ಪರಿಪೂರ್ಣನಾದ ಹರಿಯ ನೆಲೆಯಿು (೨೫.೩೩)
೮. ಪಾತಕಂ ಪೋಪುದು ಮುಕುಂದಸ್ಮರಣೆಯಿಂದ (೨೩.೬೩)
೯. ಭಕ್ತರಂ ಪಾಲಿಪುದೆ ನಿನ್ನ ಬಾಳುವೆ (೩೩.೫)
೧೦. ಲಕ್ಷ್ಮೀಕಾಂತನೊಲವಿಂದ ವಿಷವಮೃತವಹುದು (೩೦.೫೪)
೧೧. ಸರ್ವವೇದದ ಮೂಲನೀ ಕೃಷ್ಣ (೩೨.೩೭)
೧೨. ಸಾವಿರ ಮೊಗದ ಪುರುಷನೀತನಲ್ಲವೆ? ಕೃಷ್ಣರೂಪದಿಂ ಕಾಣಿಸುವಂ (೩೨.೪೮)
೧೩. ಮಾಧವನ ಪೂಜೆಗೆಯ್ಯದವಂಗೆ ಸುಗತಿಯುಂಟೆ? (೫.೬೪)
೧೪. ಹರಿಭಕ್ತರಂ ಸಾರ್ದಂಗೆ ತಾಪಮಿರ್ದಪುದೆ? (೧೧.೪೦)
೧೫. ಹರಿಯನುಳಿದಾವು ಬದುಕುವರಲ್ಲ (೧೦.೨೧)
೧೬. ಹರಿಶರಣರ್ಗೆಡರ್ಗಳೆತ್ತೊಳವು? (೧೨.೩)
೧೭. ಹರಿಯನಾಶ್ರೈಸಿದರನಪ್ಪುವುವೆ ಕಲಿತಾಪ ದುಃಖ ಭಯ ಶೋಕ ನರಕಾದಿ ಪೀಡೆಗಳು? (೨೪.೭೭)
೧೮. ಜಲರುಹಾಕ್ಷಂ ಕಣ್ಣ ಮುಂದಿರಲ್ಪಾತಕವೆ? (೨೪.೭೮)

ಇಂತಹ ಹರಿಮಹಿಮೆಯನ್ನು ಸಾರುವ ಉಕ್ತಿಗಳು ತುಂಬಾ ಇವೆ. ಇವುಗಳನ್ನು ನೋಡಿದಾಗ, ಲಕ್ಷ್ಮೀಶನ ಜೀವನವು ಕಡೂರ ದೇವನೂರಿನ ಲಕ್ಷ್ಮೀಕಾಂತನಿಗೆ ಅರ್ಪಿತವಾದ ಭಕ್ತಿಜೀವನವಾಗಿರಲು ಸಾಕು ಎಂಬ ಊಹಾಲೋಕವನ್ನು ನಾವು ಸಹಜವಾಗಿಯೆ ತಲುಪುತ್ತೇವೆ.

ನಾವು ೫-೧೨-೧೯೬೩ರಂದು ಕಡೂರ ದೇವನೂರಿಗೆ ಹೋಗಿ, ಅಲ್ಲಿಯ ಪ್ರಮುಖರನ್ನು, ವಯೋವೃದ್ಧರನ್ನು ಕಂಡು ಅವರಿಂದ ಕೆಲವು ಮಾಹಿತಿಗಳನ್ನು ಸಂಗ್ರಹಿಸಿದೆವು. ಅವುಗಳನ್ನೇ ನಾವಿಲ್ಲಿ ಲಕ್ಷ್ಮೀಶನ ಜೀವನಚರಿತ್ರವನ್ನು ರೂಪಿಸುವುದಕ್ಕೆ ಬಾಹ್ಯ ಪ್ರಮಾಣಗಳೆಂದು ಸ್ವೀಕರಿಸಬೇಕಾಗುತ್ತದೆ. ಅವರಲ್ಲಿ, ದೊಡ್ಡಮನೆ ರಾಘವಯ್ಯಂಗಾರ್ ಎಂಬವರು ಸು. ೭೦ ವರುಷದ ವಯೋವೃದ್ಧರು. ಇವರು ಕ್ರಿ. ಶ. ೧೯೨೧ರಿಂದಲೂ ಕವಿ ಲಕ್ಷ್ಮೀಶನ ಬಗ್ಗೆ, ಜಯಕರ್ನಾಟಕ, ಕಂಠೀರವ, ಸಾಧ್ವಿ, ಕನ್ನಡಿಗ, ವಿಶ್ವಕರ್ಣಾಟಕ ಮೊದಲಾದ ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆಯುತ್ತ ಬಂದಿದ್ದಾರೆ. ಅವರು,ತಮ್ಮ ತಾಯಿಯ ಕಡೆಯಿಂದ ಕವಿ ಲಕ್ಷ್ಮೀಶನ ಬಳಗಕ್ಕೆ ಸೇರಿದವರು ಎಂದು ಹೇಳುತ್ತಾರೆ. ಕಡೂರ ದೇವನೂರಿನ ಸದ್ಯದ ಪಟೇಲರಾದ ಕೇಶವಮೂರ್ತಿಗಳು ತಮ್ಮ ತಂದೆಯ ಕಡೆಯಿಂದ ಲಕ್ಷ್ಮೀಶನ ಬಳಗಕ್ಕೆ ಸೇರಿದವರಂತೆ. ಕವಿ ಲಕ್ಷ್ಮೀಶನ ವಂಶಜರಾದ ಇವರಿಬ್ಬರು ಆತನ ಬಗ್ಗೆ ಹೇಳುವ ಮಾತುಗಳು ಅಧಿಕಾಂಶದಿಂದ ನಂಬಲು ಅರ್ಹವಾದ ಬಾಹ್ಯ ಪ್ರಮಾಣಗಳೆಂದು ಸ್ವೀಕರಿಸಬಹುದೆಂದು ನಮಗೆ ತೋರುತ್ತದೆ.

ಕವಿ ಲಕ್ಷ್ಮೀಶನು ಯಜುರ್ವೇದ ಆಪಸ್ತಂಬ ಸೂತ್ರದವನಾಗಿ, ಭಾರದ್ವಾಜ ಗೋತ್ರದ ಶ್ರೀವೈಷ್ಣವಮತದ ವಡಗಲೆ ಸಂಪ್ರದಾಯದವನೆಂದೂ ಆತನ ತಾಯಿ ಸ್ಮಾರ್ತಳಾಗಿದ್ದುದರಿಂದ ಆತನ ಮನಸ್ಸು ಭಾಗವತ ಸಂಪ್ರದಾಯಕ್ಕೆ ಒಲಿಯಿತೆಂದೂ ದೊಡ್ಡಮನೆ ರಾಘವೈಯ್ಯಂಗಾರ್ ಅವರು ಹೇಳುತ್ತಾರೆ. ಶ್ರೀವೈಷ್ಣವ ಮತಕ್ಕೂ ಶಿವ ದೈವತಕ್ಕೂ ಆಗಿಬರುವುದಿಲ್ಲ ಎಂಬ ಮಾತು ಸರ್ವಶ್ರುತ. 'ಶಿವ' ಎಂಬ ಪದೋಚ್ಚಾರವನ್ನು ಸಹಿಸದ, ಅದು ಕೇಳಿತೆಂದು ಕಿವಿಮುಚ್ಚಿಕೊಳ್ಳುವ, ಗಂಗಾಸ್ನಾನದಿಂದ ಪಾಪ ಪರಿಹಾರವಾಗುವುದೆಂಬುದು ಸುಳ್ಳು ಎಂದು ಪ್ರತಿಪಾದಿಸುವ ಮತನಿಷ್ಠ ಶ್ರೀವೈಷ್ಣವರು ಇಂದಿಗೂ ಇರುವರಂತೆ. ಈ ಹಿನ್ನೆಲೆಯಲ್ಲಿ ವಿಚಾರ ಮಾಡಿದರೆ, ಈ ಮತನಿಷ್ಠೆ ಕವಿ ಲಕ್ಷ್ಮೀಶನಿಗೆ ಮಾನ್ಯವಿಲ್ಲದುದರಿಂದ, ಮತ್ತು ಅವನ ಒಲವು ಭಾಗವತ ಸಂಪ್ರದಾಯದತ್ತ ಇದ್ದುದರಿಂದ ಅವನಿಗೆ ಸಂಸ್ಕೃತ ಜೈಮಿನಿಭಾರತವು ಅಚ್ಚುಮೆಚ್ಚಿನ ಗ್ರಂಥವಾಗಿರಲು ಸಾಕು ಎಂಬ ಊಹೆ ಹೊರಡುತ್ತದೆ. ಭಾಗವತ ಸಂಪ್ರದಾಯದ ವಿಶಾಲ ಭಕ್ತಿಮಾರ್ಗವು ಅವನ ಮನಸ್ಸಿನಲ್ಲಿ ಅಚ್ಚೊತ್ತಿ ನೆಲೆನಿಂತುದರಿಂದ ಅವನು ಜೈಮಿನಿ ಭಾರತವೆಂಬ 'ಕೃಷ್ಣ ಚರಿತಾಮೃತ'ವನ್ನು ರಸಿಕರಿಗೆ ನೀಡಿದ್ದಾನೆ. ಅವನ ಈ ವರ್ತನೆ ಸಮಕಾಲೀನ ಶ್ರೀವೈಷ್ಣವರ ಮನಸ್ಸಿಗೆ ಬಂದಿರಲಿಲ್ಲವೆಂದು ತೋರುತ್ತದೆ. ಜೈಮಿನಿ ಭಾರತದ ಪೀಠಿಕಾ ಸಂಧಿಯಲ್ಲಿ, 'ಕಾವ್ಯಪ್ರಬಂಧಮಂ ಶಾರದೆಯ ಕರುಣದಿಂ ಪೇಳ್ವೆನಾಂ **ದೋಷಮಂ ತೊಱೆದೆಲ್ಲರುಂ** ಕೇಳ್ವುದು' (ಪ. ೫) ಎಂಬಲ್ಲಿಯೂ 'ಜಾಣಿರಿದ ನಱಿದು **ಮತ್ಸರವ ಮಱೆ**ದಾಲಿಸುವುದು' (ಪ. ೭) ಎಂಬಲ್ಲಿಯೂ ಕವಿ ಅದನ್ನು ಧ್ವನಿತಗೊಳಿಸಿದಂತಿದೆ.

ಸಂಸ್ಕೃತ ಜೈಮಿನಿ ಭಾರತವನ್ನು ಕನ್ನಡಕ್ಕೆ ತರುವಂತೆ ಲಕ್ಷ್ಮೀಶನಿಗೆ ದೈವಾಜ್ಞೆಯಾಗಿತ್ತು ಎಂದೂ ಮೊದಲ ಪದ್ಯದಲ್ಲಿಯ 'ಚಕೋರಕಂ ಬಿರಿಯೆ' ಎಂಬ ಲಕ್ಷ್ಮೀಶನ

ಮೂಲಪಾಠವನ್ನು 'ಚಕೋರಕಂ ಪೊರೆಯೆ' ಎಂಬುದಾಗಿ ಶ್ರೀಲಕ್ಷ್ಮೀಕಾಂತನೇ ತಿದ್ದಿದನೆಂದೂ ಒಂದು ದಂತಕಥೆ ಪ್ರಚಾರದಲ್ಲಿದೆ.[1] ಈ ಕಥೆ ಅರ್ಥವಿಲ್ಲದೆ ಹುಟ್ಟಿಕೊಂಡುದು ಎಂದು ತೋರುತ್ತದೆ. ಒಂದರ್ಥದ ಅನೇಕ ಶಬ್ದಗಳನ್ನೂ ಅನೇಕಾರ್ಥದ ಒಂದು ಶಬ್ದವನ್ನೂ ಭಾವಾರ್ಥಗಳಿಗೆ ಪುಷ್ಟಿಕರವಾದ ತಕ್ಕ ಶಬ್ದಗಳನ್ನೂ ಬಳಸುವ ಸಾಮರ್ಥ್ಯವುಳ್ಳ ಲಕ್ಷ್ಮೀಶನು 'ಚಕೋರಕಂ ಬಿರಿಯೆ' ಎಂದು ಪ್ರಯೋಗಿಸಿದನೆಂದಾಗಲಿ, ಆರಂಭದ ಎರಡು ಸಾಲುಗಳಲ್ಲಿಯೆ 'ಬಿರಿಯೆ' ಎಂದು ದ್ವಿರುಕ್ತಿಮಾಡಿದನೆಂದಾಗಲಿ ನಂಬಲಿಕ್ಕಾಗದು. ಕವಿಯ ಪಾಂಡಿತ್ಯ-ಪ್ರತಿಭೆಗಳ ಪರವೆಯಿಲ್ಲದೆ ಈ ಕಥೆ ಹುಟ್ಟಿಕೊಂಡಿರಬೇಕು.

ಕಡೂರು-ದೇವನೂರಿನಲ್ಲಿ ಲಕ್ಷ್ಮೀಕಾಂತನ ಗುಡಿಯಲ್ಲಿ ಪ್ರತಿವರ್ಷ ವೈಶಾಖ ಶುದ್ಧ ಪೂರ್ಣಿಮೆಯ ದಿವಸ ಕೊಠಾರೋತ್ಸವವನ್ನು ಆಚರಿಸುವ ರೂಢಿಯಿತ್ತು. ಅದಕ್ಕೆ ಪರಿಮಳೋತ್ಸವ ಎಂದೂ ಎನ್ನುವರು. ಆ ಉತ್ಸವಕ್ಕೆ ಶ್ರೀಲಕ್ಷ್ಮೀಕಾಂತನ ಒಕ್ಕಲಾದ ಶ್ರೀವೈಷ್ಣವರೆಲ್ಲ ಸೇರುವುದು ವಾಡಿಕೆಯಾಗಿತ್ತು. ಈ ಕೊಠಾರೋತ್ಸವದಲ್ಲಿ ಒಮ್ಮೆ ಕವಿ ಲಕ್ಷ್ಮೀಶನು ಲಕ್ಷ್ಮೀಕಾಂತನಿಗೆ ಚಾಮರಸೇವೆ ಸಲ್ಲಿಸುತ್ತಿದ್ದನು. ಹಾಗೆ ಸೇವೆ ಸಲ್ಲಿಸುತ್ತಿದ್ದಂತೆಯೇ ಅವನು ಆ ದೇವರಲ್ಲಿ ಐಕ್ಯವಾದನು. ಇದನ್ನು ಕಂಡ ಶ್ರೀವೈಷ್ಣವರು, ಲಕ್ಷ್ಮೀಶನು ಬರೆದ ಜೈಮಿನಿ ಭಾರತವು ಭಾಗವತ ಮತವನ್ನು ಪ್ರತಿಪಾದಿಸುವುದರಿಂದ ಅದನ್ನು ಮನ್ನಿಸದೆ, ಕವಿಯನ್ನು ತಿರಸ್ಕರಿಸಿ ಮತ್ಸರಿಸಿದುದಕ್ಕಾಗಿ ಪಶ್ಚಾತ್ತಾಪದಿಂದ ಪರಿತಪಿಸಿದರಂತೆ. ಅವನ ಬಗೆಗೆ ಅವರಲ್ಲಿ ಗೌರವವುಂಟಾಗಿ ಲಕ್ಷ್ಮೀಕಾಂತ ದೇವಾಲಯದಲ್ಲಿ ಆಳ್ವಾರಮೂರ್ತಿಯೊಂದಿಗೆ ಕವಿ ಲಕ್ಷ್ಮೀಶನ ಮೂರ್ತಿಯನ್ನು ಪ್ರತಿಷ್ಠಾಪಿಸಿದರು. (ಅದನ್ನು ಈಗಲೂ ನೋಡಬಹುದು—ಚಿತ್ರ ೧, ಪುಟ xiii) ಮುಂದೆ ಕೊಠಾರೋತ್ಸವದಲ್ಲಿ ಕವಿ ಮೂರ್ತಿಗೆ ಪೂಜೆ ಸಲ್ಲಿಸುವುದು ರೂಢಿಗೆ ಬಂದಿತು. ಆ ಪೂಜಾಕಾಲದಲ್ಲಿ ಮೊದಲು ವೇದಪಠನ, ಆಮೇಲೆ ದ್ರಾವಿಡ ಪ್ರಬಂಧಗಳ ಪಠನ, ತರುವಾಯ ಲಕ್ಷ್ಮೀಶನ ಕನ್ನಡ ಜೈಮಿನಿಭಾರತದೊಳಗಿನ ದೇವತಾಸ್ತೋತ್ರ ಪದ್ಯಗಳ ಪಠನ ಮಾಡುವ ಕ್ರಮವು ಪರಂಪರೆಯಾಗಿ ನಡೆದು ಬಂದಿತು, ಎಂದು ದೊಡ್ಡಮನೆ ರಾಘವೈಯ್ಯಂಗಾರ್ ಅವರು ಹೇಳುತ್ತಾರೆ. ಅವರು ಪಠಿಸಲು ಆಯ್ದುಕೊಂಡ ಜೈಮಿನಿ ಭಾರತದ ಪದ್ಯಗಳಿವು :

| ಸಂಧಿ | ಪದ್ಯ | ಸಂಧಿ | ಪದ್ಯ | ಸಂಧಿ | ಪದ್ಯ | ಸಂಧಿ | ಪದ್ಯ |
|---|---|---|---|---|---|---|---|
| ೧ | ೧, ೨ | ೫ | ೬ ರಿಂದ ೯ | ೧೩ | ೨೬,೨೭ | ೧೫ | ೩೫ರಿಂದ೩೭ |
| ೨ | ೪೮ ರಿಂದ ೫೧ | ೧೧ | ೩೫, ೩೬ | ೧೪ | ೨೭ | ೧೮ | ೨೨ |
| ೧೯ | ೨೧, ೨೨ | ೨೧ | ೫೦ | ೩೧ | ೩೩,೭೨,೭೩ | ೩೪ | ೪೬ |
| ೨೦ | ೪೦,೪೧,೪೨ | ೨೬ | ೬೭ ರಿಂದ ೭೧ | ೩೨ | ೧೦,೧೧,೧೨ | | |

---

[1] ಕನ್ನಡ ಮಹಾಕವಿ ಶ್ರೀ ಲಕ್ಷ್ಮೀಶ ಕವಿಯವರ ಜೀವನಚರಿತ್ರೆ—ದೊಡ್ಡಮನೆ ರಾಘವೈಯ್ಯಂಗಾರ್, ಪುಟ ೧೦–೧೩.

## ದೇವನೂರಿನಲ್ಲಿರುವ ದೇವಾಲಯಗಳು

| | | |
|---|---|---|
| ೧. | ಗಾಣಗಿತ್ತಿಯಮ್ಮ | ಕೆರೆಯ ದಂಡೆಯ ಮೇಲೆ |
| ೨. | ಬ್ರಹ್ಮದೇವರು | |
| ೩. | ಸಿದ್ಧೇಶ್ವರ | ಊರಿನ ಮುಂಭಾಗ |
| ೪. | ಆಂಜನೇಯ | |
| ೫. | ಗೋಗಲ್ಲು | |
| ೬. | ಕೆಂಚಪ್ಪ ಭೂತ | |
| ೧೭. | ವೀರಭದ್ರ | ಊರಿನ ಪ್ರಮುಖ ದೇವಾಲಯಗಳು |
| ೮. | ಬನಶಂಕರಿ | |
| ೯. | ಬೀರಲಿಂಗಸ್ವಾಮಿ | |
| ೦. | ಸಿದ್ಧರಾಮೇಶ್ವರ ಮಠ | |
| ೧೧. | ಚಂದ್ರಮೌಳೀಶ್ವರಿ | |
| ೧೨. | ಬನಶಂಕರಿ ಉತ್ಸವಮೂರ್ತಿ | |
| ೧೩. | ಕೋಟೆ ಆಂಜನೇಯ | |
| ೧೪. | ಲಕ್ಷ್ಮೀಕಾಂತ | |
| ೧೫. | ಲಕ್ಷ್ಮೀದೇವಿ | |

## ದೇವನೂರಿನಲ್ಲಿಯ ದೇವರ ಮನೆಗಳು

೧೬. ಮಳೆಯಮ್ಮ
೧೭. ಕಾರೇಹಳ್ಳಿ ಅಮ್ಮ
೧೮. ಲಕ್ಕಮ್ಮ
೧೯. ಎಲ್ಲಮ್ಮ
೨೦. ಲಕ್ಕಮ್ಮ
೨೧. ಕೆರೆಸಂತೆ ಲಕ್ಕಮ್ಮ
೨೨. ಬೇಲೂರ ಚೆನ್ನಕೇಶವ




ಲಕ್ಷ್ಮೀಶ ಕವಿಯ ಜನ್ಮಸ್ಥಳ



ಸಿದ್ಧೇಶ್ವರ ದೇವಾಲಯ



ಲಕ್ಷ್ಮೀಕಾಂತ ದೇವಾಲಯದ ಒಕ್ಕಲು ಕೃಷ್ಣಪ್ಪಸವರ ಬಾವಿ



ಲಕ್ಷ್ಮೀಕಾಂತ ದೇವಾಲಯದ ಹೊರವಲಯ



ಲಕ್ಷ್ಮೀಶ ಕವಿಯಿಂದ ನಿರ್ಮಿತವಾದ ಆಸ್ಥಾನಮಂಟಪ ಮತ್ತು ಕೊಠಾರಮಂಟಪ



ಲಕ್ಷ್ಮೀಶಕವಿಯ ಪೂಜಾಮೂರ್ತಿ



ಲಕ್ಷ್ಮೀಕಾಂತ ಮೂರ್ತಿ



ಮಂಟಪದೊಳಗಿನ ವೈಶಿಷ್ಟ್ಯಗಳು : ಸಿಂಹ ನರಸಿಂಹ



ಮಂಟಪದೊಳಗಿನ ವೈಶಿಷ್ಟ್ಯಗಳು :
ಹಲಧರ ಬಲರಾಮ



ಮಂಟಪದೊಳಗಿನ ವೈಶಿಷ್ಟ್ಯಗಳು :
ಕಲ್ಕಿ–ಅಶ್ವ



ಜನಮೇಜಯನ ಸರ್ಪಯಾಗಸ್ತಂಭ
ಚಿಕ್ಕಮಗಳೂರು

# ಶ್ರೀ ಲಕ್ಷ್ಮೀಕಾಂತಸ್ವಾಮಿಯವರ ದೇವಸ್ಥಾನ, ದೇವನೂರು

(ಕಡೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ)




ದೇವಾಲಯದ ಒಳಂಗಳ

## ಶ್ರೀ ಲಕ್ಷ್ಮೀಕಾಂತಸ್ವಾಮಿ ದೇವಾಲಯದ ಒಳಂಗಳದ ವಿವರಗಳು

1. ಪದ್ಮಾವತಿಯವರ ವಿಗ್ರಹ : ಬಲಗೈ–ಗಿಳಿ ; ಎಡಗೈ–ನೀಳಹಸ್ತ 2. ವರಾಹಸ್ವಾಮಿ 3. ಪಾರ್ವತಿ : ಬಲಗೈ–ಅಂಕುಶ ಮತ್ತು ಜಪಮಾಲೆ; ಎಡಗೈ–ಪಾಶ ಮತ್ತು ಪುಸ್ತಕ 4. ಶ್ರೀ ಕೋದಂಡರಾಮ : ಬಲಗೈ–ಬಾಣ ; ಎಡಗೈ–ಬಿಲ್ಲು 5. ಆನೆ 6. ಶಂಖ ಮತ್ತು ಚಕ್ರ 7. ? 8. ಶ್ರೀ ನರಸಿಂಹ ಅವತಾರ 9. ಬಲರಾಮ : ಬಲಗೈ–ನೇಗಿಲು ; ಎಡಗೈ–ನೀಳಹಸ್ತ 10. ಲಕ್ಷ್ಮಿ : ಎಡ ಮತ್ತು ಬಲಗೈ–ಕಮಲ ಮತ್ತು ವರದ ಅಭಯಹಸ್ತಗಳು 11. ಅಶ್ವ 12. ಸಿಂಹ 13. ಶ್ರೀನಿವಾಸ ವಿಗ್ರಹ 14. ಸಿಂಹದ ಮುಖ 15. ವೇದಾಂತ ದೇಶಿಕರ್ ವಿಗ್ರಹ 16. ರಾಮನುಜಾಚಾರ್ಯರ ವಿಗ್ರಹ 17. ಕುಲಶೇಖರ ಆಳ್ವಾರ್ 18. ತಿರುಮಂಗೇ ಆಳ್ವಾರ್ 19–20. ಆಳ್ವಾರ್‌ಗಳ ವಿಗ್ರಹ 21. ಮತ್ಸ್ಯಾವತಾರ 22. ಕಲ್ಕ್ಯಾವತಾರ 23. ಕಾಳಿಂಗಮರ್ದನ 24. ಗೋಪಿಕಾ ವಸ್ತ್ರಾಪಹರಣ 25 ಬೆಣ್ಣೆ ಕೃಷ್ಣ 26. ಗರುಡ 27. ಗೋಪಾಲಕೃಷ್ಣ 28. ವಾಮನಾವತಾರ 29–34 ಆಳ್ವಾರ್ ವಿಗ್ರಹಗಳು 35. ಶ್ರೀರಂಗನಾಥ ಶೇಷಶಾಯಿ 36. ಗೋವರ್ಧನಗಿರಿ ಕೃಷ್ಣ 37. ಕೂರ್ಮಾವತಾರ 38. ಸಿಂಹ 39. ವೆಂಕಟರಮಣ 40. ? 41. ? 42. ಆಂಜನೇಯ 43 ? 44 ? 45–46. ಜಯವಿಜಯರು 47. ಗಜಲಕ್ಷ್ಮಿ 48. ಶಂಖ 49. ಆಂಜನೇಯ 50. ಗರುಡ 51. ಚಕ್ರ 52. ಗಣಪತಿ ವಿಗ್ರಹ 53–60. ಆಳ್ವಾರ್ ವಿಗ್ರಹಗಳು 61. ಶ್ರೀ ಲಕ್ಷ್ಮೀಶ ಹೆಬ್ಬಾರ್ 62. ಆಳ್ವಾರ್ 63. ನಾಗರಕಲ್ಲು

# ದೇವನೂರು ಗ್ರೂಪ್ ಪಂಚಾಯ್ತಿ ಹೌಸ್ ಲಿಸ್ಟ್, 1963-64

**ದೇವನೂರು, ಸಕ್ರೆಪಟ್ನ ಹೋಬಳಿ, ಕಡೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ**

| ಸಂಖ್ಯೆ | ನಂಬರು ಅಥವಾ ಸ್ವತ್ತಿನ ಹೆಸರು | ತೆರಿಗೆಯು ವಿಧಿಸಲ್ಪಟ್ಟವನ ಅಥವಾ ಮಾಲೀಕನ ಹೆಸರು | ಕಿಮ್ಮತ್ತು | ವಿಧಾಯಕವಾದ ತೆರಿಗೆ | | ಸೆಕ್ರೆಟರಿಯವರ ಸಹಿ | ಚತುರ್ಗಡಿ | | | |
|---|---|---|---|---|---|---|---|---|---|---|
| | | | | ಪ್ರಾರಂಭದಲ್ಲಿ | ಆಖೈರಿನಲ್ಲಿ | | ಪೂರ್ವ | ಪಶ್ಚಿಮ | ದಕ್ಷಿಣ | ಉತ್ತರ |
| 58 | ಪುರಾತನವಾಗಿ ಬಂದಿರತಕ್ಕ ನಿವೇಶನ | ಮಹಾಕವಿ ಲಕ್ಷ್ಮೀಶ | 250/- ಪೂ. ಪ. ಗಜ 32 ದ. ಉ. ಗಜ 20 | ಮಾಫಿ | ಮಾಡಿದೆ. | ಸೆಕ್ರೆಟರಿಯವರ ಸಹಿ | ಸರ್ಕಾರಿ ದೊಡ್ಡಿ | ರಸ್ತೆ | ಡಿ. ಎಂ. ಗಂಗಾಚಾರ್ ಮನೆ | ರಸ್ತೆ |

ಮುದ್ರೆ

'True Copy'

ಸೆಕ್ರೆಟರಿಯವರ ಸಹಿ

ಈಗ ೫–೬ ವರುಷಗಳ ಹಿಂದಿನವರೆಗೂ ಬಾಣಾವರದ ವಯೋವೃದ್ಧರೊಬ್ಬರು ಕೊಠಾರೋತ್ಸವ ಸಮಯದಲ್ಲಿ ಈ ಪದ್ಯಗಳನ್ನು ಹೇಳುತ್ತಿದ್ದರೆಂದು ಕೇಳಿದ್ದೇವೆ.

ಹೀಗೆ ಪಶ್ಚಾತ್ತಾಪ ಹೊಂದಿದ ಶ್ರೀವೈಷ್ಣವರು ಆಳ್ವಾರರ ಜೊತೆಗೆ ಕವಿ ಲಕ್ಷ್ಮೀಶನಿಗೆ ಸ್ಥಾನಕೊಟ್ಟದು ಮಾತ್ರವಲ್ಲದೆ, ತಮ್ಮ ತಮ್ಮ ಮನೆತನದ ಮಂಗಲ ಕಾರ್ಯಪ್ರಸಂಗಗಳಲ್ಲಿ ದೇವದೇವತೆಗಳಿಗೆ ಅಗ್ರತಾಂಬೂಲವನ್ನಿತ್ತ ತರುವಾಯ ಕವಿ ಲಕ್ಷೀಶನಿಗೆ ದ್ವಿತೀಯ ತಾಂಬೂಲವನ್ನೀಯುವ ಕುಲಾಚಾರವನ್ನಿಟ್ಟುಕೊಂಡಿದ್ದಾರೆ.

ಕವಿ ಲಕ್ಷ್ಮೀಶನ ಹೆಂಡತಿಯ ಹೆಸರು ನಂಗೇರಮ್ಮ ಎಂದಿತ್ತೆಂದೂ ಅಣ್ಣಯ್ಯ ಎಂಬ ಮಗನೂ ಲಕ್ಷ್ಮೀ ಎಂಬ ಮಗಳೂ ಕವಿಗಿದ್ದರೆಂದೂ ದೊಡ್ಡಮನೆ ರಾಘವೈಯ್ಯಂಗಾರ್ ಅವರು ಹೇಳುತ್ತಾರೆ. ಲಕ್ಷ್ಮೀಶನು ಲಕ್ಷ್ಮೀಕಾಂತನಲ್ಲಿ ಲಯವಾದ ಬಳಿಕ ಶ್ರೀವೈಷ್ಣವ ಸಂಪ್ರದಾಯಸ್ಥರು, ನಂಗೇರಮ್ಮನನ್ನು ಮುತ್ತೈದೆತನವನ್ನು ತ್ಯಜಿಸಬೇಕೆಂದು ಹಟದಿಂದ ಕಾಡಿದ್ದೂ ಉಂಟಂತೆ. ಆದರೆ ೫ ವರುಷಗಳ ಅನಂತರ ಮತ್ತೊಂದು ಕೊಠಾರೋತ್ಸವದಲ್ಲಿ ಕವಿ ಲಕ್ಷ್ಮೀಶನು ಮತ್ತೆ ಪ್ರಕಟವಾಗಿ ದೇವರಿಗೆ ಚಾಮರಸೇವೆ ಸಲ್ಲಿಸುತ್ತ, ಜೈಮಿನಿ ಭಾರತವನ್ನು ಪಠಿಸುತ್ತ ಪ್ರದಕ್ಷಿಣೆ ಹಾಕಿ ದೇವರಲ್ಲಿ ಐಕ್ಯವಾದನೆಂಬ ಮತ್ತೊಂದು ಕಥೆಯೂ ಪ್ರಚಾರದಲ್ಲಿದೆ.[1]

ಸವದತ್ತಿ ಎಲ್ಲಮ್ಮನಿಗೆ, ತಿರುಪತಿ ವೆಂಕಟರಮಣನಿಗೆ ನಡೆದುಕೊಳ್ಳುವ ಅನೇಕ ಒಕ್ಕಲುಗಳಿರುವಂತೆ ಕಡೂರು–ದೇವನೂರಿನ ಶ್ರೀಲಕ್ಷ್ಮೀಕಾಂತನಿಗೂ ಇವೆ. ಅವರೇ ಕೊಠಾರೋತ್ಸವವನ್ನು ನಡೆಸುತ್ತಿದ್ದರು. ಅವರೆಲ್ಲ ಈಗ ಹಾಸನ ಶಿವಮುಗ್ಗಾ ಜಿಲ್ಲೆಗಳಿಗೆ ಚದರಿಹೋಗಿ ಜೋಡಿಮತ್ತೂರ, ಹೊಸಹಳ್ಳಿ, ಹೋಚೇಹಳ್ಳಿ ಮೊದಲಾದ ಕಡೆ ನೆಲಸಿದ್ದಾರೆ. ಇವುಗಳಲ್ಲಿ ಜೋಡಿಮತ್ತೂರಿನ ಲಕ್ಷ್ಮೀಕಾಂತ ಉಪಾಧ್ಯಾಯರ ಮನೆತನ ಬಹಳ ಹಳೆಯದು ಎಂದು ದೊಡ್ಡಮನೆ ರಾಘವೈಯ್ಯಂಗಾರರಿಂದ ತಿಳಿಯಿತು. ಅವರಿಂದ ಹೆಚ್ಚಿನ ವಿಷಯ ತಿಳಿದೀತೋ ಎಂದು ಅಲ್ಲಿಗೂ ಹೋದೆವು. ಲಕ್ಷ್ಮೀಕಾಂತ ಉಪಾಧ್ಯಾಯರ ಮೊಮ್ಮಗ ಸುಬ್ರಹ್ಮಣ್ಯ ಉಪಾಧ್ಯಾಯರ ಭೆಟ್ಟಿ ನಮಗಾಯಿತು (ದಿ. ೭-೨-೧೯೬೫). ನಾವು ಕವಿ ಲಕ್ಷ್ಮೀಶನ ಜೀವನಚರಿತ್ರೆಯ ವಿಷಯದಲ್ಲಿ ಸಂಗ್ರಹಿಸಿದ ಮಾಹಿತಿಯ ಬಗ್ಗೆ ಮಾತನಾಡಿದೆವು. ಆದರೆ ಹೊಸ ಮಾತೇನೂ ಅವರಿಂದ ತಿಳಿಯಲಿಲ್ಲ. ಲಕ್ಷ್ಮೀಕಾಂತ ಉಪಾಧ್ಯಾಯರು ೧೦೦ ವರುಷಗಳ ಮೇಲೆ ಬಾಳಿದವರು. ಕಡೂರು–ದೇವನೂರಿಂದ ಜೈಮಿನಿ ಭಾರತದ ಅನೇಕ ಹಸ್ತಪ್ರತಿಗಳನ್ನೂ ಕಾಗದಪತ್ರಗಳನ್ನೂ ಜೋಡಿಮತ್ತೂರಿಗೆ ತಂದಿದ್ದರೆಂದು ಹೇಳುತ್ತಾರೆ. ಆ ಕಾಗದಪತ್ರಗಳಲ್ಲಿ ಕವಿ ಲಕ್ಷೀಶನ ವಂಶಾವಳಿ ಸಿಕ್ಕರೂ ಸಿಗಬಹುದು. ನಮಗೆ ಅವು ದೊರಕಲಿಲ್ಲ. ದೊರೆತರೆ ಕವಿಯ ಜೀವನ ಚರಿತ್ರೆಯ ಮೇಲೆ, ಪರ್ಯಾಯವಾಗಿ ಕನ್ನಡ ಸಾಹಿತ್ಯ ಚರಿತ್ರೆಯ ಮೇಲೂ ಬೆಳಕು ಬಿದ್ದೀತೆಂಬ ಆಸೆ.

---

1 'ಸೊಂಡೀಗಣಪ್ಪಾ ಬಂದಾ'—ಚೈತ್ರಪೂರ್ಣಿಮೆ—ಬಾನುಲಿ ರೂಪಕ ನೋಡಿರಿ. ಲೇ ಡಾ॥ ವಾಮನ ದ. ಬೇಂದ್ರೆ. ಪ್ರಕಾಶಕ : ಸಮಾಜ ಪುಸ್ತಕಾಲಯ, ಧಾರವಾಡ, 1974.

ಸುಬ್ರಹ್ಮಣ್ಯ ಉಪಾಧ್ಯಾಯರು ಹೇಳಿದ ಒಂದು ಹೊಸ ಮಾತೆಂದರೆ, 'ಕವಿ ಲಕ್ಷ್ಮೀಶನು ಲಕ್ಷ್ಮೀಕಾಂತದೇವರಲ್ಲಿ ಐಕ್ಯವಾದುದರಿಂದ ನಾವು ಪ್ರತಿದಿವಸ ಸಂಧ್ಯಾವಂದನೆಯನ್ನು ಪ್ರಾರಂಭಿಸುವಾಗ ಮತ್ತು ಅರ್ಘ್ಯವನ್ನು ಕೊಡುವಾಗ 'ಶ್ರೀಲಕ್ಷ್ಮೀಕಾಂತಃ ಪ್ರೀಯತಾಂ' ಎನ್ನುತ್ತೇವೆ, 'ಶ್ರೀಕೃಷ್ಣಾರ್ಪಣಮಸ್ತು' ಎನ್ನುವುದಿಲ್ಲ. ನಮ್ಮ ಎಲ್ಲ ಮನೆತನಗಳಲ್ಲಿ ಕವಿ ಲಕ್ಷ್ಮೀಶನ ನೆನಪಿಗಾಗಿ ಒಂದಿಲ್ಲೊಂದು ಮಗುವಿಗೆ ಲಕ್ಷ್ಮೀಕಾಂತ ಎಂದು ಹೆಸರಿಡುವ ವಾಡಿಕೆಯಿದೆ. ಹೀಗಾಗಿ ಜೋಡಿಮತ್ತೂರಿನ ಲಕ್ಷ್ಮೀಕಾಂತನ ನಾಲ್ಕು ಒಕ್ಕಲುಮನೆತನಗಳಲ್ಲಿ ಒಬ್ಬೊಬ್ಬ ಲಕ್ಷ್ಮೀಕಾಂತರಿದ್ದಾರೆ. ಮತ್ತು ಮನೆಯ ಮಂಗಲಕಾರ್ಯಗಳಲ್ಲಿ ಕವಿ ಲಕ್ಷ್ಮೀಶನಿಗೆ ತಾಂಬೂಲವನ್ನಿಡುವ ಪದ್ಧತಿ ಇಂದಿಗೂ ಇದೆ.' ಇವರ ಹೇಳಿಕೆಯ ಪ್ರಕಾರ ಸಂಧ್ಯಾವಂದನೆಯಲ್ಲಿಯ 'ಲಕ್ಷ್ಮೀಕಾಂತ' ಪ್ರಯೋಗಕ್ಕೂ ಅವರಿಡುವ ವ್ಯಕ್ತಿಯ ಹೆಸರಿಗೂ ಕವಿ ಲಕ್ಷ್ಮೀಶನ ಸ್ಮರಣೆಯನ್ನು ಸಂಬಂಧಿಸುವಲ್ಲಿ ಸಾಧುತ್ವವು ಎಷ್ಟರಮಟ್ಟಿಗಿದೆಯೋ ಹೇಳಲಿಕ್ಕಾಗದು. ಮಂಗಲಸಮಯದ ತಾಂಬೂಲ ದಾನದ ವಿಷಯದಲ್ಲಿ ಕವಿಗೆ ಈಮನೆತನಗಳ ಭಾವುಕ ಸಂಬಂಧವಿದೆ ಎಂಬುದು ನಿರ್ವಿವಾದ. ಅಂತೂ ರಾಘವೈಯ್ಯಂಗಾರ್ ಮತ್ತು ಸುಬ್ರಹ್ಮಣ್ಯ ಉಪಾಧ್ಯಾಯರು ಹೇಳಿದ ದಂತ ಕಥೆ ಹಾಗೂ ಕುಲಾಚಾರಮಾಹಿತಿಗಳಲ್ಲಿ ಕೆಲವು ಭಾಗ ಕಟ್ಟುಕಥೆ ಇರುವ ಸಂಭವವಿದೆ ಯಾದರೂ ಬಹುಭಾಗ ವಿಶ್ವಾಸಾರ್ಹವಾಗಿದೆ ಎಂದು ನಮಗೆ ತೋರುತ್ತದೆ.

ಮೇಲೆ ವಿವರಿಸಿದ ಆಂತರ ಮತ್ತು ಬಾಹ್ಯ ಪ್ರಮಾಣಗಳಿಂದ, ಕವಿ ಲಕ್ಷ್ಮೀಶನ ಜೀವನ ದಿವ್ಯಜೀವನವಾಗಿತ್ತು; ಅಸಾಮಾನ್ಯಭಕ್ತಿಯಿಂದ ಅವನೊಬ್ಬ ಪವಾಡಪುರುಷರಲ್ಲಿ ಗಣ್ಯನಾಗಿದ್ದನು ಎಂದು ತಿಳಿಯುವುದು. ಜೈಮಿನಿಭಾರತದ ಮೊದಲಿಂದ ಕೊನೆಯವರೆಗೆ ಓತಪ್ರೋತವಾಗಿ ಪ್ರವಹಿಸಿರುವ ಭಕ್ತಿಗಂಗೆ, ಕವಿಯ ಹೃದಯದಿಂದಲೇ ಹೊಮ್ಮಿಬಂದುದಾಗಿದೆ. ಇಂತಹ ಕೃತಿಯನ್ನು ನೀಡಿದ ಕವಿಯ ಜೀವನ ಹೀಗೆಯೇ ಇರಬೇಕು. ಒಬ್ಬ ಆಂಗ್ಲ ವಿದ್ವಾಂಸನು ಕವಿಯ ವ್ಯಕ್ತಿತ್ವ ಮತ್ತು ಕಾವ್ಯದ ಶ್ರೇಷ್ಠತೆಯ ಬಗ್ಗೆ ಚರ್ಚಿಸುತ್ತ,

'The quality which we term personality—the revelation of the man behind the book marks all great literature' (ಎಲ್ಲ ಮಹಾ ಸಾಹಿತ್ಯದ ಲಕ್ಷಣವೆಂದರೆ, ಆ ಆ ಕೃತಿಯ ಬೆಂಬಲಕ್ಕಿರುವ ಮಾನವವಿಶೇಷದ ಅಭಿವ್ಯಕ್ತಿ—ಆ ಗುಣವನ್ನು ಪುರುಷಕಾರ (ವ್ಯಕ್ತಿತ್ವ ಪುರುಷಂಕಾರ, ಅಹಂಕಾರ) ಎಂದು ನಾವು ಸಂಜ್ಞಿಸುತ್ತೇವೆ.'

ಕವಿ ಲಕ್ಷ್ಮೀಶನ ವ್ಯಕ್ತಿತ್ವದ ಉಸಿರು ಶ್ರೇಷ್ಠಭಕ್ತನದಾಗಿತ್ತು, ಎಂಬುದನ್ನು ಅವನ ಜೀವನಚರಿತ್ರೆಯ ಬಗ್ಗೆ ಸಂಗ್ರಹಿಸಿದ ಮಾಹಿತಿ ತೋರಿಸುತ್ತದೆ.

### ಬ) ಕವಿ ಲಕ್ಷ್ಮೀಶನ ನಿವಾಸಸ್ಥಾನ

ಕವಿ ಲಕ್ಷ್ಮೀಶನ ನಿವಾಸಸ್ಥಾನವು ಯಾವುದು ಎಂಬ ವಿಷಯದಲ್ಲಿ ಪಂಡಿತ

ರೊಳಗೆ ಎರಡು ಅಭಿಪ್ರಾಯುಗಳಿವೆ. ಕಡೂರು ಜಿಲ್ಲೆಯ ದೇವನೂರು ಅವನ ನಿವಾಸ ಸ್ಥಾನವೆಂದು ಕೆಲವರೆಂದರೆ ಹಳೆಯ ಹೈದರಾಬಾದ ಸಂಸ್ಥಾನದಲ್ಲಿರುವ ಸುರಪುರವಾಗಲಿ ಅಥವಾ ಸುರಪುರದ ದಕ್ಷಿಣಕ್ಕೆ ೬ ಮೈಲುಗಳ ಮೇಲಿರುವ ದೇವಪುರ ಎಂಬ ಗ್ರಾಮ ವಾಗಲಿ ಅವನ ಊರಿರಬಹುದೆಂದು ಕೆಲವರು ಹೇಳುತ್ತಾರೆ. ಕಡೂರು-ದೇವನೂರೇ ಲಕ್ಷ್ಮೀಶನ ಊರಾಗಿರಬಹುದೆಂಬುದು ಹೆಚ್ಚು ಸಮಂಜಸವೆಂದು ನಮಗೆ ತೋರಿದುದ ರಿಂದ, ಅದು ವಿಚಾರಾರ್ಹ ಅಭಿಪ್ರಾಯವೆಂದು ದ. ರಾ. ಬೇಂದ್ರೆಯವರೊಡನೆ ಅಲ್ಲಿಗೆ ಹೋಗಿದ್ದೆವು (ದಿ. ೫-೧೨-೬೩). ಅಲ್ಲಿಯ ಗ್ರಾಮಪಂಚಾಯತಿಯಲ್ಲಿ ದೊರೆತ ಕೆಲವು ದಾಖಲೆಗಳನ್ನೂ ಲಕ್ಷ್ಮೀಶನು ಕಟ್ಟಿಸಿದ ಮಂಟಪದ ಉಲ್ಲೇಖವಿರುವ ಕಾಗದ, ಕೆಲವು ಭಾವಚಿತ್ರಗಳು ಇತ್ಯಾದಿ ಆಧಾರಸಾಮಗ್ರಿಗಳನ್ನು ಸಂಗ್ರಹಿಸಿದೆವು. ಅವುಗಳನ್ನು ಈ ಪ್ರಬಂಧದ ಕೊನೆಯಲ್ಲಿ ಅನುಕ್ರಮವಾಗಿ ಕೊಡಲಾಗಿದೆ.

ಬಾಣಾವರ ರೈಲ್ವೆನಿಲ್ದಾಣದಿಂದ ದೇವನೂರಿಗೆ ಹೋಗುವ ದಾರಿಯಲ್ಲಿ ತೆಂಗು-ಅಡಕೆ ಬನಗಳ ಮತ್ತು ಎಲೆಬಳ್ಳಿತೋಟಗಳ ರಾಜ್ಯವೇ ಇದೆ. ಬಾಣಾವರ, ಕಡೂರು, ದೇವನೂರು ಈ ಮಲೆನಾಡಿನ ಭಾಗವು ನಿಸರ್ಗಸಂಪತ್ತಿಯಿಂದ ಶ್ರೀಮಂತವಾಗಿದೆ ಎಂಬುದು ನಿದರ್ಶನಕ್ಕೆ ಬರುವುದು. ಇಕ್ಕೆಲಗಳಲ್ಲಿ ಕಂಗೊಳಿಸುವ ಬತ್ತದಗದ್ದೆಗಳೂ ಕಬ್ಬಿನ ತೋಟಗಳೂ ಮನಕ್ಕೆ ಒಂದು ಬಗೆಯ ಆನಂದವನ್ನೀಯುವವು.[1] ಈ ನಿಸರ್ಗದ ಸಿರಿಯನ್ನು ನೋಡುತ್ತ ಒಂದು ವಿಶಾಲವಾದ ಕೆರೆಯನ್ನು ತಲುಪಿದೆವು. ಆ ಕೆರೆಯ ದಂಡೆಗೆ ಎರಡು ಗ್ರಾಮಗಳಿವೆ. ಎರಡೂ ದೇವನೂರುಗಳೇ—ಒಂದು ಚಿಕ್ಕದೇವನೂರು, ಒಂದು ದೊಡ್ಡ(ಹಿರೆ)ದೇವನೂರು. ಇವುಗಳಲ್ಲಿ ಚಿಕ್ಕದೇವನೂರು ಲಕ್ಷ್ಮೀಶನ ದೇವನೂರೆಂದು ಅಲ್ಲಿ ಕೇಳಿ ತಿಳಿದೆವು.

ಮಾಲೆಕಲ್ಲು ತಿರುಪತಿಬೆಟ್ಟ, ಗವಿಮಠದ ಗುಡ್ಡ, ಕೋರನಹಳ್ಳಿ ಗುಡ್ಡ, ಅರಕೆರೆ ಬೆಟ್ಟ ಇವುಗಳು ದೇವನೂರನ್ನು ಸುತ್ತುವರಿದು ಆ ಊರಿಗೆ ಭದ್ರತೆಯ ಅಭಯುವ ನ್ನಿತ್ತಂತೆ ಹೆಗಲಿಗೆ ಹೆಗಲುಹಚ್ಚಿನಿಂತಿವೆ. ಬೆಟ್ಟಗಳ ಸಾಲು ಮತ್ತು ಚಿಕ್ಕದೇವನೂರು ಗಳ ನಡುವೆ ದೊಡ್ಡಕೆರೆ, ಕೆರೆಯ ಮಧ್ಯದಲ್ಲಿ ದೇವನೂರು-ಬಾಣಾವರ ಗ್ರಾಮಸ್ಥರು ನಂಬಿಗೆಯಿಂದ ನಡೆದುಕೊಳ್ಳುತ್ತಿರುವ ಒಂದು 'ಅಮ್ಮನವರ' ದೇವಾಲಯ; ಗಾಣಗಿತ್ತಿ ಯಮ್ಮ ಎಂದು ಆ ದೇವರ ಹೆಸರು. ಸ್ವಲ್ಪ ಅಂತರದಲ್ಲಿಯೇ ಬ್ರಹ್ಮದೇವರು. ಚಿಕ್ಕ ದೇವನೂರನ್ನು ಪ್ರವೇಶಿಸುವಾಗ ಎದುರಿಗೇ ಎಡಕ್ಕೆ ಆಂಜನೇಯ ದೇವಸ್ಥಾನ, ಅದರ ಎದುರು 'ಗೋಗಲ್ಲು', ಅದರ ಮುಂದೆ 'ಕೆಂಚಪ್ಪಭೂತ.' ಬಲಭಾಗದಲ್ಲಿ ಸಿದ್ಧೇಶ್ವರ ದೇವಾಲಯ.(ಇದರ ಭಾವಚಿತ್ರವನ್ನು ಚಿತ್ರ ೫ರಲ್ಲಿ ಕಾಣಬಹುದು.) ಅಲ್ಲಿಂದ ಊರೊಳಗೆ ಹೋದಂತೆ ಅನೇಕ ದೇವಾಲಯುಗಳು.

---

[1] ಬಾಣಾವರ-ಚಿಕ್ಕದೇವನೂರು ಮಾರ್ಗ ಮತ್ತು ಚಿಕ್ಕದೇವನೂರಿನ ನಿಸರ್ಗಸೌಂದರ್ಯ ವನ್ನು ಚಿತ್ರ ೨ರಲ್ಲಿ ಕಾಣಬಹುದು.

ಈ ಊರಿಗೆ ದೇವನೂರು ಎಂದು ಹೆಸರಾದುದಕ್ಕೆ ಒಂದು ಕಥೆಯಿದೆ. ಹಾಲು ಮತದ (ಕುರುಬರ) ದೇವಣ್ಣ ಅಥವಾ ದೇವಪ್ಪ ಎಂಬುವನು ಈ ಸ್ಥಳದಲ್ಲಿ ಮೊದಲು ಒಕ್ಕಲಾಗಿ ನಿಂತನು. ಅವನಿಂದ ಊರು ದೇವನೂರಾಯಿತು ಎಂದು ಹೇಳುತ್ತಾರೆ. ಇದನ್ನು ನಂಬಬಹುದು ಎಂಬುದಕ್ಕೆ ಪ್ರಮಾಣವೆಂದರೆ ಈ ಊರಲ್ಲಿ ಹಾಲುಮತದವರು ಸಾಕಷ್ಟು ಜನರಿರುವುದು. ಅವರು ಕುರಿಗಳನ್ನು ಸಾಕುವುದಲ್ಲದೆ ಒಕ್ಕಲುತನವನ್ನೂ ಮಾಡುತ್ತಾರೆ. ಅವರ ಒಂದೊಂದು ಮನೆಯೂ ಒಂದೊಂದು ದೇವಾಲಯವಾಗಿದೆ. ದೇವರಿಗೆ ಉತ್ಸವ ಸಮಯದಲ್ಲಿ ತೊಡಿಸುವ ವಸ್ತ್ರ ಒಡವೆಗಳಿಂದ ತುಂಬಿದ ದೊಡ್ಡ ದೊಡ್ಡ ಖಜಾನೆಗಳಿವೆ. ಈ ಒಂದು ಚಿಕ್ಕ ಹಳ್ಳಿಯಲ್ಲಿ ೨೨ ದೇವಾಲಯಗಳಿರುವುದನ್ನು ನೋಡಿದರೆ ಇದು ನಿಜವಾಗಿಯೂ ದೇವನೂರು (ದೇವರುಗಳ ಊರು) ಎನಿಸದೆ ಇರದು (ದೇವಾಲಯಗಳ ಪಟ್ಟಿ ಚಿತ್ರ ೪ರಲ್ಲಿ ನೋಡಿರಿ). ಲಕ್ಷ್ಮೀಕಾಂತನ ಗುಡಿಯ ವೈಭವಕಾಲದಲ್ಲಿ ದೇವನೂರು 'ಲಕ್ಷ್ಮೀನಾರಾಯಣಪುರ' ಎಂಬ ನಾಮಾಂತರವನ್ನೂ ಹೊಂದಿತ್ತು.

ಚಿಕ್ಕದೇವನೂರಿನ ಪಟೇಲರಾದ ಕೇಶವಮೂರ್ತಿ ಮತ್ತು ವಯೋವೃದ್ಧರಾದ ದೊಡ್ಡಮನೆ ರಾಘವಯ್ಯಂಗಾರ್[1] ಮತ್ತು ಬೇರೆ ಕೆಲ ಗ್ರಾಮಸ್ಥರೊಡನೆ ಲಕ್ಷ್ಮೀಶನ ನಿವಾಸಸ್ಥಾನದ ಬಗ್ಗೆ ಚರ್ಚೆಮಾಡಿದೆವು. ಆಗ ಅವರಿಂದ ತಿಳಿದ ವಿಷಯ ಮತ್ತು ಆಧಾರವಾಗಿ ತೋರಿಸಲಾದ ಅವಶೇಷಗಳ ವಿಷಯವನ್ನು ಇಲ್ಲಿ ಸಂಗ್ರಹಿಸಿಕೊಟ್ಟಿದೆ.

ಅವರು ಮೊಟ್ಟಮೊದಲು ಕವಿ ಲಕ್ಷ್ಮೀಶನ ಮನೆಯನ್ನು ತೋರಿಸಿದರು (ಚಿ.೬). ಈಗ ಅಲ್ಲಿ ಏನೇನೂ ಇಲ್ಲ. ಕೇವಲ ಒಂದು ಒರಳುಕಲ್ಲು ಡಬ್ಬುಬಿದ್ದಿದೆ. ಇಲ್ಲಿಯೆ ಲಕ್ಷ್ಮೀಶನ ಮನೆ ಇತ್ತು ಎಂಬುದಕ್ಕೆ ಏನು ಆಧಾರ ಎಂದರೆ, ಊರಿನ ಗ್ರಾಮಪಂಚಾಯತಿಯಲ್ಲಿ ಈ ಸ್ಥಳದ ಉದ್ದ-ಅಗಲಗಳನ್ನು ನಿರ್ದೇಶಿಸಿ 'ಇದು ಕವಿಯ ಮನೆ' ಎಂದು ನೋಂದು ಇದೆ ಎಂದು ಅವರು ಹೇಳಿದರು. ಅದರ ಪ್ರತಿಯ ಚಿತ್ರವನ್ನು ಚಿತ್ರಮಾಲಿಕೆಯಲ್ಲಿ ಕೊಟ್ಟಿದೆ (ಚಿ.೧೦). ಈ ಕವಿಯ ಮನೆಯ ಹತ್ತಿರ ಹಿಂದಿನ ಕಾಲದಲ್ಲಿ ಇಲ್ಲಿಯೂ ಮನೆಯಿತ್ತು ಎಂದೆನಿಸುವಂತೆ ಅವಶೇಷಗಳುಳ್ಳ ಒಂದು ಜಾಗೆಯಿದೆ. ಅದಕ್ಕೆ ಹಾಳುಮನೆ ಎನ್ನುತ್ತಾರೆ. ಅದನ್ನು ತೋರಿಸಿ, ಇಲ್ಲಿ ಲಕ್ಷ್ಮೀಕಾಂತನ ಒಕ್ಕಲುಮನೆತನಗಳಿದ್ದವು, (ಅವು ಈಗ ಇಲ್ಲಿಲ್ಲ). ಆ ಒಕ್ಕಲುಮನೆತನದ ಕೃಷ್ಣಪ್ಪ ಶಾನುಭೋಗರ ಮನೆ ಇದು ಎಂದು ವಿವರಿಸಿದರು (ಚಿ. ೮).

ಇನ್ನು ಲಕ್ಷ್ಮೀಕಾಂತನ ದೇವಾಲಯ. ದೇವಾಲಯದ ಹೊರಭಾಗ, ಒಳಭಾಗ, ಲಕ್ಷ್ಮೀಕಾಂತ ದೇವರಮೂರ್ತಿ, ಲಕ್ಷ್ಮೀಕಾಂತನ ಉತ್ಸವಮೂರ್ತಿ ಇವುಗಳನ್ನು ಅನುಕ್ರಮವಾಗಿ ಚಿತ್ರ ೭, ೯, ೧೧, ೧೨ರಲ್ಲಿ ನೋಡಬಹುದು. ದೇವಾಲಯದ ಆವರಣದಲ್ಲಿ ಶಕವರ್ಷ ೧೪೪೦, ೧೪೮೧, ೧೫೩೧ರ ಶಾಸನಗಳಿವೆ. ಅವು ಆ ಕಾಲದ ಲಕ್ಷ್ಮೀಕಾಂತ ದೇವಸ್ಥಾನದ ವೈಭವವನ್ನು ಸಾರಿಹೇಳುತ್ತಿವೆ. ದೇವಾಲಯದ ಶುಕನಾಸಿಯ ಮಂಟಪವ

[1] ದ. ರಾ. ಬೇಂದ್ರೆಯವರೊಡನೆ ಈ ಉಭಯರ ಭಾವಚಿತ್ರವನ್ನು ಚಿತ್ರ ೩ರಲ್ಲಿ ನೋಡಿರಿ.

ಬಲಗಡೆಯಲ್ಲಿ ಕೆಲವು ವಿಗ್ರಹಗಳಿವೆ. ಅವುಗಳನ್ನು ಚಿತ್ರ ೭ರಲ್ಲಿ ೫೨ ರಿಂದ ೬೩ರ ವರೆಗೆ ಅಂಕಿಗಳಿಂದ ಸೂಚಿಸಿದೆ. ಅವು, ೫೨ ಗಣಪತಿವಿಗ್ರಹ, ಕ್ರ. ೫೩–೬೦ ಆಳ್ವಾರಮೂರ್ತಿಗಳು, ಕ್ರ.೬೧ ಲಕ್ಷ್ಮೀಶ ಹೆಬ್ಬಾರರ ಮೂರ್ತಿ, ಕ್ರ. ೬೨ ಇನ್ನೊಂದು ಆಳ್ವಾರಮೂರ್ತಿ ಮತ್ತು ಕ್ರ. ೬೩ ನಾಗರಕಲ್ಲು ಎಂದು ತೋರಿಸುತ್ತಾರೆ. ಲಕ್ಷ್ಮೀಕಾಂತದೇವರ ಈಗಿದ್ದ ಉತ್ಸವಮೂರ್ತಿ ಹಳೆಯುದಲ್ಲ ಎನ್ನುತ್ತಾರೆ. ಮೊದಲಿದ್ದ ಉತ್ಸವಮೂರ್ತಿಯು ಮೇಲೆ ಮದಗಮಾಸೂರಿನ ಒಡೆಯರ ಭಕ್ತಿ ವಿಶೇಷವಾಗಿತ್ತೆಂದೂ ಅದಕ್ಕಾಗಿ ಒಂದು ಕೊಠಾರ ಉತ್ಸವದ ಮೆರವಣಿಗೆಯ ಕಾಲದಲ್ಲಿ ಅದನ್ನವರು ಓಡಿಸಿಕೊಂಡು ಹೋದರೆಂದೂ ಆ ತರುವಾಯ ಈಗಿನ ಈ ಮೂರ್ತಿಯನ್ನು ಮಾಡಿಸಲಾಗಿದೆಯೆಂದೂ ಆಖ್ಯಾಯಿಕೆಯಿದೆ.

ಈ ಎಲ್ಲ ವಿಷಯವನ್ನು ಅಲ್ಲಿಯ ಗ್ರಾಮಸ್ಥರು ಈಗೀಗ ಹುಟ್ಟಿಸಿ ಹೇಳುತ್ತಿರುವರೆಂದು ಹೇಳಲುಬರುವಂತಿಲ್ಲ. ಏಕೆಂದರೆ ಮೈಸೂರು ಆರ್ಕಿಯಾಲಾಜಿಕಲ್ ಇಲಾಖೆಯ ಕ್ರಿ.ವ. ೧೯೨೮–೨೯ರ ವರದಿಯಲ್ಲಿ (ಪು. ೧೦–೧೨) ಡೈರೆಕ್ಟರ್ ಎಂ. ಎಚ್. ಕೃಷ್ಣ, ಎಂ.ಎ., ಡಿ. ಲಿಟ್., ಅವರು ಈ ಅಭಿಪ್ರಾಯಗಳನ್ನು ಅನುಮೋದಿಸಿದ್ದಾರೆ. ಅವರು ಅದರಲ್ಲಿ ಲಕ್ಷ್ಮೀಶನ ಊರು ಕಡೂರು–ದೇವನೂರೇ ಎಂದು ಸಾಧಾರವಾಗಿ ಪ್ರತಿಪಾದಿಸಿ, ಲಕ್ಷ್ಮೀಕಾಂತ ದೇವಾಲಯದ ವರ್ಣನೆ, ಕವಿಯ ಮನೆಯ ವರ್ಣನೆ, ಸಿದ್ಧೇಶ್ವರ ದೇವಾಲಯದ ವರ್ಣನೆಗಳನ್ನು ಕೊಟ್ಟಿದ್ದಾರೆ. ಅಲ್ಲದೆ, 'ಲಕ್ಷ್ಮೀನಾರಾಯಣ ದೇವಾಲಯವು ಶಿಥಿಲವಾಗುತ್ತಿದೆ, ಅದನ್ನು ಕೂಡಲೆ ಭದ್ರಪಡಿಸಬೇಕು. ಇಲ್ಲಿ ಹಾಕಿರುವ ಶಾಸನವನ್ನು ನಿಜವಾಗಿಯೂ ಕವಿಯ ಜನ್ಮಸ್ಥಾನವಾದ ಪ್ರದೇಶದಲ್ಲಿ ಸ್ಥಾಪಿಸಬೇಕು. ಅವನ ಮನೆಯಿದ್ದ ಪ್ರದೇಶದ ಸುತ್ತಲೂ ಅಂದವಾದ ತೋಟವನ್ನು ರಚಿಸಿ, ಅದನ್ನು ಕೆಡದಂತೆ ಚೊಕ್ಕಟವಾಗಿ ಇಟ್ಟುಕೊಂಡರೆ ಉತ್ತಮ. ಏಕೆಂದರೆ, ಮುಂದೆ ಇಲ್ಲಿಗೆ ಕನ್ನಡಿಗರು ಯಾತ್ರಾರ್ಥಿಗಳಾಗಿ ಹೆಚ್ಚು ಹೆಚ್ಚು ಮಂದಿ ಬಂದಾರು' ಎಂದು ಸೂಚನೆ ಮಾಡಿದ್ದಾರೆ. ಇಲ್ಲಿ ಕೃಷ್ಣ ಅವರು ಉಲ್ಲೇಖಿಸಿರುವ ಶಾಸನವೆಂದರೆ ಇಂಜಿನಿಯರ್ ಕರ್ವೆಯವರು 'ಇದು ಜಯಮುನಿ ಭಾರತವನ್ನು ಬರೆದ ಕವಿ ಲಕ್ಷ್ಮೀಶನ ದೇವನೂರು'ಎಂದು ಕೆತ್ತಿಸಿರುವ ಕರಿಯಕಲ್ಲು. ಸದ್ಯದಲ್ಲಿ ಇದನ್ನು ಲಕ್ಷ್ಮೀಕಾಂತ ದೇವಾಲಯದ ಒಳಭಾಗದಲ್ಲಿರುವ ಕವಿ ಕಟ್ಟಿಸಿದುದೆಂದು ತೋರಿಸುವ ಮಂಟಪದ ಮಧ್ಯದಲ್ಲಿ ಸ್ಥಾಪಿಸಿದ್ದಾರೆ (ಚಿ. ೧೩). ಈ ಮಂಟಪವು ಲಕ್ಷ್ಮೀಶ ಹೆಬ್ಬಾರರು ಕಟ್ಟಿಸಿದ್ದೆಂಬ ಉಲ್ಲೇಖವುಳ್ಳ, ಅದರ ಉದ್ದಗಲಗಳ ವರ್ಣನೆಯಿರುವ ಮತ್ತು ಕೊಠಾರೋತ್ಸವವು ವೈಶಾಖದಲ್ಲಿ ನಡೆಯುತ್ತದೆ ಎಂಬ ಮಾತಿರುವ ಒಂದು ಹಳೆಯ ಕಾಗದವನ್ನು ದೊಡ್ಡಮನೆ ರಾಘವೈಯ್ಯಂಗಾರರು ಕೊಟ್ಟರು (ಚಿತ್ರ ೧೪). ಅದರ ವಿವರವನ್ನು ಅವರು 'ಕನ್ನಡ ಮಹಾಕವಿ ಶ್ರೀಲಕ್ಷ್ಮೀಶ ಕವಿಯವರ ಜೀವನ ಚರಿತ್ರೆ'ಯಲ್ಲಿ (ಪು. ೧೪) ಹೀಗೆ ಕೊಟ್ಟಿದ್ದಾರೆ:

'ದೇವಾಲಯದ ವಾಯುವ್ಯಭಾಗದಲ್ಲಿ ಒಂದು ಆಸ್ಥಾನಮಂಟಪ, ಕೆಳಭಾಗದಲ್ಲಿ ಒಂದು ಕೊಠಾರಮಂಟಪವನ್ನು ಕಟ್ಟಿಸಿದರು. ದೇವಾಲಯದ ಮುಂಭಾಗದ ಕೆಲ ಭಾಗವನ್ನೂ ಕಟ್ಟಿಸಿದರು. ಒಟ್ಟು ೬೮ ಅಂಕಣಗಳನ್ನು ಕಟ್ಟಿಸಿದರು. ದೇವಾಲಯದ ದಕ್ಷಿಣ

ಭಾಗದಲ್ಲಿ ಹೂ-ತುಳಸಿಯ ಒಂದು ತೋಟವನ್ನು ಮಾಡಿಸಿದರು. ಆ ತೋಟದಲ್ಲಿ ಒಂದು ಕೊಳವನ್ನು ಮಾಡಿಸಿ ಅದಕ್ಕೆ ಕಾಲುವೆಯಿಂದ ನೀರು ಬರುವಂತೆ ಕೊಳಾಯಿಯನ್ನು ಹಾಕಿಸಿದರು.'

ಕವಿ ಲಕ್ಷ್ಮೀಶನ ದೇವನೂರು ಕಡೂರು-ದೇವನೂರು ಎಂಬುದಕ್ಕೆ ವಿವರಿಸಲಾದ ಈ ಮೇಲಣ ಬಾಹ್ಯಪ್ರಮಾಣಗಳನ್ನು ಆಂತರ ಪ್ರಮಾಣಗಳು ಹೇಗೆ ಪುಷ್ಟೀಕರಿಸುತ್ತವೆ ಎಂಬುದನ್ನು ಇನ್ನು ನೋಡುವ.

ಲಕ್ಷ್ಮೀಶನು ಕಟ್ಟಿಸಿದನೆನ್ನುವ ಮಂಟಪದಲ್ಲಿ ವಿಷ್ಣುವಿನ ದಶಾವತಾರಗಳನ್ನು ಕಂಡರಿಸಲಾಗಿದೆ. ಜೈಮಿನಿ ಭಾರತದಲ್ಲಿ,

ಜಿತ ತಮಂ, ಭುವನಮಧ್ಯಪ್ರಕಾಶಂ, ವಿರಾ
ಜಿತವರಾಹಶ್ರೀಧರಂ, ಪಂಚಮುಖಮೂರ್ತಿ,
ನುತ ಕಾಶ್ಯಪಂ, ರಾಜತೇಜೋಹರಂ, ದೂಷಣಾರಿ ಗೋಕುಲಜಾತನು,
ಅತಿಕಾಂತಿಶೋಭಿತ ದಿಗಂಬರಂ, ಕಲಿತಾಪ
ಹೃತಕುವಲಯಂ ಚಕ್ರಿಯವತಾರದಶಕದು
ನ್ನತಿಗಳಂ ತಳೆದೆಸವ ದಿನಪನುದಯಂಗೈದನಂದು ಪೂರ್ವಾಚಲದೊಳು (೧೭. ೪೨)

ಎಂದು ಸೂರ್ಯನಲ್ಲಿ ವಿಷ್ಣುವಿನ ದಶಾವತಾರಗಳನ್ನು ಆರೋಪಿಸಿ ಶ್ಲೇಷೆಯಿಂದ ವರ್ಣಿಸಲಾಗಿದೆ. ಇಲ್ಲಿ ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಘುರಾಮ ಈ ಅವತಾರಗಳ ವಿಷಯದಲ್ಲಿ ಮತಭೇದವಿಲ್ಲ. ಆದರೆ, ಗೋಕುಲಜಾತ ಅವತಾರದ-ಬಗ್ಗೆ ಮತಭೇದವಿದೆ.

ಗೋಕುಲಜಾತ ಎಂದರೆ ಕೃಷ್ಣ, ದಿಗಂಬರ ಎಂದರೆ ಬೌದ್ಧ ಮತ್ತು ಕಲ್ಕಿ ಎಂದರೆ ಅಶ್ವಾರೋಹಿ ಎಂದು ಎಣಿಸಲಾಗುತ್ತದೆ. ಈ ದೃಷ್ಟಿಯಿಂದ ಲಕ್ಷ್ಮೀಶನ ಮಂಟಪದಲ್ಲಿ ಕೆತ್ತಲಾದ ದಶಾವತಾರ ಚಿತ್ರಗಳನ್ನು (ಚಿ. ೧೩) ಪರಿಶೀಲಿಸಿದರೆ ಕೆಲವು ಕುತೂಹಲಕಾರಿಯಾದ ವ್ಯತ್ಯಾಸಗಳು ಕಂಡುಬರುವವು. ಸರ್ವಸಾಮಾನ್ಯವಾಗಿ, ಅವತಾರಿ ನರಸಿಂಹನು ಕುಳಿತಿರುವುದನ್ನೇ ನೋಡುತ್ತೇವೆ: ಇಲ್ಲಿಯ ನರಸಿಂಹನು ಎದ್ದುನಿಂತಿದ್ದಾನೆ (ಚಿ. ೧೫). ೮ನೆಯ ಅವತಾರವು ಕೃಷ್ಣಾವತಾರವೆನ್ನುವುದು ಪ್ರಸಿದ್ಧ: ಇಲ್ಲಿ ಹಲಧರಮೂರ್ತಿಯನ್ನು ಕೆತ್ತಿದೆ (ಚಿ. ೧೬); ಹಲಧರ ಎಂದರೆ ಬಲರಾಮ, ಕೃಷ್ಣನ ಅಣ್ಣ. ೯ನೆಯ ಅವತಾರವು ದಿಗಂಬರ (ಬೌದ್ಧ) ತಾನೆ: ಇಲ್ಲಿ ಬತ್ತಲೆಯಾದ ಬಾಲಕೃಷ್ಣನ ಮೂರ್ತಿಯಿದೆ. ೧೦ನೆಯ ಅವತಾರವು ಅಶ್ವಾರೋಹಿಯಾಗಿರದೆ, ಕೇವಲ ಅಶ್ವವನ್ನು ಇಲ್ಲಿ ಕೆತ್ತಲಾಗಿದೆ. ಇವು ಲಕ್ಷ್ಮೀಶ ಮಂಟಪದ ವೈಶಿಷ್ಟ್ಯಗಳಾಗಿವೆ.

- ಲಕ್ಷ್ಮೀಶನು ಬರೆದ ಕೀರ್ತನೆಗಳಲ್ಲಿ ದಶಾವತಾರದ ಹಾಡು ಒಂದಿದೆ. ಅದರಲ್ಲಿ

ಹರಿಚರನಾಗಿ ವೇದವ ತಂದೆ। ಹರಿಪತಿಯನು ಮೇಲಾಂತು ನಿಂದೆ।
ಹರಿನಯನನ ಕೊಂದೆ। ಹರಿಯ ರೂಪಾದೆ ನೀ। ಹರಿಪದಕಡಿಯನಿಟ್ಟೆ।

ಹರಿವಂಶಜರನೆಲ್ಲರ ತರಿದೆ। ಹರಿವಾಹಿನಿಯನೀನಾಳ್ದೆ।
ಹರಿಸುತಗೊಲಿದು ಹೆಂಗಳ ವ್ರತ ಕೆಡಿಸಿದೆ। ಹರಿವಾಹನ ಜಯತು ॥[1]

ಎಂದು ವಿವರಿಸಿದೆ. ಲಕ್ಷ್ಮೀಶನು ತನ್ನ ಮಂಟಪದಲ್ಲಿ ಕೆತ್ತಿಸಿದ ದಶಾವತಾರ ಚಿತ್ರಗಳಲ್ಲಿ ಮಾಡಿದ ವ್ಯತ್ಯಾಸವು ಸ್ವಕಲ್ಪಿತವೋ ಪೂರ್ವಾಧಾರವುಳ್ಳದ್ದೋ ಎಂದು ವಿಚಾರಿಸಿದಾಗ ಲಕ್ಷ್ಮೀಕಾಂತದೇವರ ಶಿಲಾ ಪ್ರಭಾವಳಿಯಲ್ಲಿಯೂ ದಶಾವತಾರಚಿತ್ರಗಳಿರುವುವೆಂದು ಗೊತ್ತಾಯಿತು. ಅದನ್ನು ಪರೀಕ್ಷಿಸಲು, ಅಲ್ಲಿಯೂ ೧-ನಿಂತ ನರಸಿಂಹ, ೨-೮ನೆಯ ಅವತಾರ ಹಲಧರ (ಬಲರಾಮ), ೩-೯ನೆಯವತಾರ ಬತ್ತಲೆಯಾದ ಬಾಲಕೃಷ್ಣ ಮತ್ತು ೪-೧೦ನೆಯ ಅವತಾರ ಕೇವಲ ಅಶ್ವ ಇದ್ದುದು ಕಂಡುಬಂದಿತು.

ಈ ಎರಡೂ ಚಿತ್ರಗಳಲ್ಲಿಯ ಸಾಮ್ಯವನ್ನು ನೋಡಿದರೆ ಬಲರಾಮನೂ ಪರಮಾತ್ಮನ ಅವತಾರವೆಂದೂ ತರುವಾಯದ ಅವತಾರ ಬಾಲಕೃಷ್ಣನೆಂದೂ ಅರ್ಥಾತ್ ಬೌದ್ಧಾವತಾರ ಎಂದರೆ ಅದೇ ಎಂದೂ ನಂಬುವ ಒಂದು ಸಂಪ್ರದಾಯಕ್ಕೆ ಈ ಪ್ರದೇಶವು ನೆಲೆಯಾಗಿತ್ತೆಂದು ತೋರುತ್ತದೆ. ಲಕ್ಷ್ಮೀಶನು ಈ ಸಂಪ್ರದಾಯಾನುಸಾರವಾಗಿಯೆ ತನ್ನ ಕಾವ್ಯದಲ್ಲಿಯೂ ಹಾಡಿನಲ್ಲಿಯೂ ದಶಾವತಾರಗಳನ್ನು ವರ್ಣಿಸಿದ್ದಾನೆಯೆ ಎಂಬುದು ವಿಮರ್ಶಾರ್ಹವಾಗಿದೆ. ಕಾವ್ಯದಲ್ಲಿ 'ಗೋಕುಲಜಾತನು' ಎಂದರೆ ಕೃಷ್ಣನೆಂದೂ 'ಅತಿಕಾಂತಿಶೋಭಿತ ದಿಗಂಬರಂ'ಎಂಬುದು ಬೌದ್ಧ (ಅಥವಾ ಜೈನ ದಿಗಂಬರ)ನನ್ನು ಕುರಿತು ಹೇಳಿದುದೆಂದೂ ಸಕೃದ್ದರ್ಶನಕ್ಕೆ ಅರ್ಥವಾಗುತ್ತದೆ. ಇದು ನಾವೆಲ್ಲ ಸರ್ವಸಾಮಾನ್ಯವಾಗಿ ತಿಳಿಯುತ್ತ ಬಂದ ಅರ್ಥ. ಆದರೆ, ಲಕ್ಷ್ಮೀಶನು ಆ ಚಿತ್ರಾನುಸಾರವಾಗಿ ದಶಾವತಾರಗಳನ್ನು ವರ್ಣಿಸಿದ್ದರೆ ಅಲ್ಲಿ ವಿಶಿಷ್ಟಾರ್ಥಗಳನ್ನಿಟ್ಟಿರಬೇಕೆಂಬುದು ನಿಶ್ಚಿತ. ಆ ದೃಷ್ಟಿಯಿಂದ ಕಾವ್ಯದಲ್ಲಿಯ 'ಗೋಕುಲಜಾತ'ನು ಬಲರಾಮನು ; ಕೃಷ್ಣನು ಕಂಸನ ಸೆರೆಮನೆಯಲ್ಲಿ ಹುಟ್ಟಿದನು, ಗೋಕುಲದಲ್ಲಿ ಅಲ್ಲ ; ಆದುದರಿಂದ ಲಕ್ಷ್ಮೀಶನು, ಕೃಷ್ಣನನ್ನಲ್ಲ, ಗೋಕುಲದಲ್ಲಿ ಹುಟ್ಟಿದ ಬಲರಾಮನನ್ನು ಇಲ್ಲಿ ನಿರ್ದೇಶಿಸಿದ್ದಾನೆ ಎನ್ನಬಹುದು. 'ಅತಿಕಾಂತಿಶೋಭಿತ ದಿಗಂಬರಂ' ಎಂಬುದು ಬಾಲಕೃಷ್ಣನ ವರ್ಣನೆ ಎಂದು ತಿಳಿಯಬೇಕು. ಹಾಡಿನಲ್ಲಿ 'ಹರಿಸುತಗೊಲಿದ'ವನು ಬಲರಾಮನೆಂದೂ 'ಹೆಂಗಳ ವ್ರತ ಕೆಡಿಸಿದ'ವನು ಬಾಲಕೃಷ್ಣನೆಂದೂ ಅರ್ಥಮಾಡಬೇಕು. ಅರ್ಜುನ(ಹರಿಸುತ)ನಿಗೆ ಒಲಿದವನು ಕೃಷ್ಣನಲ್ಲದೆ ಬಲರಾಮನು ಹೇಗೆ ಎಂಬ ಶಂಕೆಗೆ, ಕೊನೆಗವನು ಅರ್ಜುನನಿಗೆ ಒಲಿದುದರಿಂದಲೇ, ಆತನ ತಂಗಿ ಸುಭದ್ರೆಯೊಡನೆ ಅರ್ಜುನನ, ಅಭಿಮನ್ಯುವಿನೊಡನೆ ಬಲರಾಮನ ಮಗಳಾದ ವತ್ಸಲೆಯ ಮದುವೆಯಾಯಿತಲ್ಲದೆ ಅನ್ಯಥಾ ಸಾಧ್ಯವಿರಲಿಲ್ಲ. ಮತ್ತು ಭಾರತ ಯುದ್ಧಾನಂತರ ಅವನು ಪಾಂಡವ ಪಕ್ಷಕ್ಕೆ ಒಲಿಯುತ್ತಾನೆ, ಎಂಬುದಾಗಿ ಸಮಾಧಾನ ಹೇಳಬಹುದು. ಈ ಅಸಾಮಾನ್ಯವಾದ ವಿಶಿಷ್ಟಾರ್ಥಗಳು ಲಕ್ಷ್ಮೀಶನು

1. ಮೈ. ಸಂ. ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆಯ 'ಕನ್ನಡ ಜೈಮಿನಿ ಭಾರತ' ಪು. ೪೦೯.

ಕಡೂರು-ದೇವನೂರಿನವನೆಂಬುದಕ್ಕೆ ಪ್ರಬಲಸಾಕ್ಷಿಗಳಾಗುವವು. ಲಕ್ಷ್ಮೀಶನು ತನ್ನ ಕಾವ್ಯ–ಹಾಡುಗಳಲ್ಲಿ ಈ ವಿಶಿಷ್ಟಾರ್ಥವನ್ನೇ ಇಟ್ಟಿರುವನೆಂದು ದ.ರಾ. ಬೇಂದ್ರೆಯವರು ಸಂದರ್ಶನಕಾಲದಲ್ಲಿ ಬೆಂಬಲಿಸಿದರು.[1]

---

1. ದ.ರಾ. ಬೇಂದ್ರೆಯವರು ಕವಿ ಲಕ್ಷ್ಮೀಶನ ಕಾವ್ಯದ ವಿಚಾರಸರಣಿಯ ಮತ್ತು ದೃಷ್ಟಿಕೋನದ ಹಿನ್ನೆಲೆಯಲ್ಲಿ ತಮ್ಮ ಅಭಿಪ್ರಾಯವನ್ನು ಹೀಗೆ ವಿವರಿಸಿದರು: 'ಪುಂಡರೀಕನಂತೆ ಕೀರ್ತಿಯುತನಾಗಿ' ಎಂದು ಚಂದ್ರಹಾಸನನ್ನು ಕವಿ ವರ್ಣಿಸುತ್ತಾನೆ. ಈ ಮಾತು ಮೂಲತಃ ಸಂಸ್ಕೃತ ಜೈಮಿನಿಭಾರತದ್ದಲ್ಲ. ಪುಂಡರೀಕನಿಗೆ ತ್ರಿಪುರಸಂಹಾರಕ ಇಟ್ಟಿಗೆಯ ಮೇಲೆ ನಿಂತ ವಿಠ್ಠಲನು ಒಲಿದುದು ಮಾತಾಪಿತೃಭಕ್ತಿಗಾಗಿ. ಚಂದ್ರಹಾಸ ಮಾತಾಪಿತೃಭಕ್ತ. ಪುಳಿಂದಕರ ಕುಲವನ್ನೇ ಉದ್ಧಾರಮಾಡಿದವ. ಅವನ ಜನ್ಮದ ಜನಕ ಮೇಧಾವಿ; ವಾತ್ಸಲ್ಯದಿಂದ ಒಪ್ಪಿಕೊಂಡ ತಾಯಿ ಮೇಧಾವಿನಿ. ಈ ಮೇಧಾಶಕ್ತಿ ಆನಂದಚಂದ್ರನ ಹಾಸ

ವಿಜಯನಗರದಲ್ಲಿ ವಿಜಯವಿಠ್ಠಲನ ಗುಡಿಯನ್ನು ಕಟ್ಟಿಸುವ ಕಾಲಕ್ಕೆ ಪುಂಡರೀಕಮುನಿಗೆ ಒಲಿದ ವಿಠ್ಠಲನ ಹೆಸರು ಕರ್ನಾಟಕದ ದಿಗ್ದೆಸೆಗೆ ಮತ್ತೆ ಹಬ್ಬಿತು. ವಿಠ್ಠಲನು ಮೂಲತಃ ಕನ್ನಡ, ಕರ್ನಾಟಕ. ಆದರೆ ಉಡುಪಿಯ ಕೃಷ್ಣನ ಉದಯದಿಂದ ತುಂಗಭದ್ರಾತೀರಕ್ಕೆ ಅವನ ಕೀರ್ತಿ ಹರೆದಿರಲಿಲ್ಲ. ವಿಜಯವಿಠ್ಠಲನ ಸ್ಥಾಪನೆಯ ಕಾಲಕ್ಕೆ ಪುರಂದರದಾಸರು, ಕನಕದಾಸರು, ವಾದಿರಾಜರು ಪುಂಡರೀಕನ ಹೆಸರನ್ನು ಎತ್ತುವರಲ್ಲದೆ, ಶ್ರೀಪಾದರಾಯರು ಮತ್ತು ವ್ಯಾಸರಾಯರು ಇವರ ಕೀರ್ತನೆಗಳಿಂದಲೂ ಪಾಂಡುರಂಗ ವಿಠ್ಠಲನ ತ್ರಿಭಂಗಕೃಷ್ಣನು ಕರ್ನಾಟಕದಲ್ಲಿ ಶ್ರುತಿಗೋಚರನಾಗುತ್ತಾನೆ. ಇದೇ ಸಮಯಕ್ಕೆ ಲಕ್ಷ್ಮೀಶನ ಜೈಮಿನಿಭಾರತದಲ್ಲಿ ಪುಂಡರೀಕನ ಕೀರ್ತಿ ಪ್ರಕಟವಾಗುವುದು.

ಜೈಮಿನಿ ಅಶ್ವಮೇಧದ ಕಾಲ ಕಲಿಯುಗದ ಪ್ರಭಾತ. ಎಲ್ಲ ರಾಜರೂ ಕಲಿಗಳು ಎಂದರೆ ಶೂರರು; ಕಾದಾಟದಲ್ಲಿ ಹಿರಿದು ತಮ್ಮ ತಮ್ಮ ಕ್ಷೇತ್ರದಲ್ಲಿ ಯಾವ ದೇವನಿಗೂ ಮಣಿಯರು. ಅವರು ವೀರಸ್ವರ್ಗ ಪಡೆದಾರು ಮಡಿದು, ಅಲ್ಲದೆ ದೇವರಿಗೆ ಮಣಿದು ಬಾಳುವ ಮಾತಿಲ್ಲ, ದೇವರೇ ಅವರನ್ನು ಒಪ್ಪಿಕೊಳ್ಳದಿದ್ದರೆ, ಅಪ್ಪಿಕೊಳ್ಳದಿದ್ದರೆ. 'ನಾ ವಿಷ್ಣುಃ ಪೃಥಿವೀಪತಿಃ'—ಕ್ಷತ್ರಿಯ ರಾಜರೆಲ್ಲರೂ ವೈಷ್ಣವಾಂಶರು. ಇಹದಲ್ಲಿ ಭಕ್ತಿ, ಪರದಲ್ಲಿ ಮುಕ್ತಿ; ಈ ಯುಕ್ತಿಯರಿತು ಬಾಳುವವರು. ಜೈಮಿನಿ ಅಶ್ವಮೇಧದ ರಾಜರು ವ್ಯಾಸಭಾರತಕ್ಕಿಂತ ಬೇರೆಯವರು. ಇಲ್ಲಿಯ ಕೃಷ್ಣಾವತಾರ ಬೇರೆ ಎಂದೇ ಹೇಳಬೇಕು. ಇದು ಅಲೌಕಿಕ ಅಹಿಂಸೆಯದು, ಅಲೌಕಿಕ ಕರುಣೆಯದು; ಇದು ಬಲರಾಮನಿಗೆ ಹೊಂದಿಕೊಳ್ಳುವುದಕ್ಕಿಂತ ತನ್ನದೇ ಆದ ಹೊಸ ಚಾರಿತ್ರ್ಯವನ್ನು ಬೆಳಗುತ್ತದೆ. ಇದು ನವಮೇಧಾವಿತನದ ಬೌದ್ಧಾವತಾರ. ಪುಂಡರೀಕನಿಗೆ ತಾನಾಗಿ ಒಲಿಯುವ ಪಾಂಡುರಂಗವಿಠ್ಠಲನ ಅವತಾರ.

ದೇವನೂರು(ಕಡೂರು) ಲಕ್ಷ್ಮೀನಾರಾಯಣನ ಶಿಲಾಮೂರ್ತಿಯ ಪ್ರಭಾವಳಿಯಲ್ಲಿ ಎಂಟನೆಯ ಅವತಾರ ಹಲಧರರಾಮ; ೯ನೆಯ ಅವತಾರ ದಿಗಂಬರಬೌದ್ಧ–ಬಾಲಕೃಷ್ಣ. ಎಂಟನೆಯ ಅವತಾರವನ್ನು ಕವಿ 'ಗೋಕುಲಜಾತ' ಎನ್ನುತ್ತಾನೆ; ಬಲರಾಮ ಗೋಕುಲದಲ್ಲಿ ಹುಟ್ಟಿದ್ದು. ಕವಿ ಹೇಳಿದ ೯ನೆಯ ಅವತಾರದ ದಿಗಂಬರನು, ಬಕದಾಲ್ಭ್ಯನು ಪ್ರಳಯಕಾಲದಲ್ಲಿ ಕಂಡ ಆಲದೆಲೆಯ ಮೇಲೆ ಪವಡಿಸಿದ 'ಬಾಲಕೃಷ್ಣ'ನೇ ಸರಿ. 'ಅವನೇ ಇಲ್ಲಿ ಇದಿರಿಗೆ ನಿಂತಿದ್ದಾನೆ' ಎಂದು ಆ ಮುನಿ ಹೇಳಿದ್ದೂ ಅರ್ಥಪೂರ್ಣವಾಗಿದೆ.

ಲಕ್ಷ್ಮೀಶನು ಹರಿಹರ ವಿಭೇದವನ್ನು ಎಂದರೆ ಉಚ್ಚ-ನೀಚ, ಪ್ರತಿಷ್ಠೆ–ಅಪ್ರತಿಷ್ಠೆಯನ್ನು ಮಾಡುವುದಿಲ್ಲ. ಇಷ್ಟೇ ಅಲ್ಲ, ಪಂಚಾಯತನವನ್ನು ಏಕೋದೇವನ ಅಭಿವ್ಯಕ್ತಿ ಎಂದೇ ತಿಳಿಯುತ್ತಾನೆ. ಲಕ್ಷ್ಮಿ, ಸರಸ್ವತಿ, ದುರ್ಗೆ, ಪಾರ್ವತಿ, ಗಂಗೆ ಕೂಡ ಏಕೋದೇವನ ಕೀರ್ತಿಪ್ರವಾಹಗಳು. ಅವನಿಗೆ ಶಿವ–ಹರಿ–ಸುರ ಈ ಮೂರರಲ್ಲಿಯೂ ದಶಾವತಾರ ಚರಿತ್ರೆಯೆ ಕಾಣುತ್ತದೆ. ಇವನ್ನು ಅವನ ಒಂದು ಕೀರ್ತನೆ ಪ್ರಕಾಶಗೊಳಿಸುತ್ತದೆ.

ಸಂಧಿ ೨೬ ಪದ್ಯ ೬೧ರಲ್ಲಿ 'ಗರುಡಹನುವಂತರ್ಗೆ ಚಕ್ರಿ ಪಣ್ ಪಂಚಿದಂತೆ' ಎಂಬ ಒಂದು ಕಥಾಸಂದರ್ಭ ಸೂಚನೆಯಿದೆ. ಈ ಪ್ರಯೋಗಕ್ಕೆ ಮೂಲ ಪ್ರೇರಣೆಯನ್ನು ವಂತೆ,ಗರುಡ–ಹನುಮಂತರಿಗೆ ಹಣ್ಣು ಹಂಚುತ್ತಿರುವ ಸಂದರ್ಭಚಿತ್ರವೊಂದು 'ಲಕ್ಷ್ಮೀಶ ಮಂಟಪ'ದಲ್ಲಿದೆ. ಚಿಕ್ಕಮಗಳೂರಿನ ಒಂದು ದೇವಾಲಯದ ಗರ್ಭಗುಡಿಯ ದ್ವಾರದ ಚೌಕಟ್ಟಿನಲ್ಲಿ ಎಡಬಲಗಳಲ್ಲಿ ಜಯವಿಜಯರಾಗಲಿ, ರಿದ್ಧಿಸಿದ್ಧಿಯರಾಗಲಿ ಇಲ್ಲ, ಗರುಡ ಹನುಮಂತರಿದ್ದಾರೆ. ರಥೋತ್ಸವದಲ್ಲಿ ಮೆರೆಸುವ ದೊಡ್ಡಪ್ರಮಾಣದ ಗರುಡ' ಹನು ಮಂತರ ಮೂರ್ತಿಗಳೂ ಅಲ್ಲಿವೆ. ಅದೇ ಊರಲ್ಲಿ ಒಂದು ಪರಶುರಾಮದೇವಾಲಯವಿದೆ. ಅದರ ಮುಂಗಡೆಯಲ್ಲಿ ಜನಮೇಜಯನು ಮಾಡಿದ ಸರ್ಪಯಜ್ಞವನ್ನು ಸಾರುವ ಒಂದು ಯಜ್ಞಸ್ತಂಭವಿದೆ. ಈ ಮಾತೂ ಲಕ್ಷ್ಮೀಶನು ಕಡೂರು–ದೇವನೂರಿನವನು ಎಂಬುದಕ್ಕೆ ಆನುಷಂಗಿಕ ಪ್ರಮಾಣವೆನಿಸುವುದು.

ಕಡೂರು ದೇವನೂರಲ್ಲಿರುವ ಸಿದ್ಧೇಶ್ವರದೇವಾಲಯದಲ್ಲಿ ಶಾಲಿವಾಹನ ಶಕ ೧೧೫೬ (ಕ್ರಿ.ಶ. ೧೨೩೪)ರ ಒಂದು ಶಿಲಾಶಾಸನವಿದೆ.[1] ಅದು 'ಶ್ರೀವಧುಮುತ್ತಿನೆಕ್ಕ ಸರದಂತುರದೊಳು ನಲಿವಂತು ವಿಕ್ರಮಶ್ರೀವಧು' ಎಂದು ಆರಂಭವಾಗುತ್ತದೆ. ಮತ್ತು 'ಹಿರಿಯ ದೇವನೂರು' 'ಲಕ್ಷ್ಮೀನಾರಾಯಣಪುರವೆನಿಸಿದ ದೇವನೂರು' 'ಚೋಳ ಪ್ರತಿಷ್ಠಾಚಾರಿ', 'ಸಿದ್ಧಾಯ' ಎಂಬ ಪ್ರಯೋಗಗಳೂ ಉಂಟು. ಜೈಮಿನಿ ಭಾರತ ಕಾವ್ಯ ವನ್ನು 'ಶ್ರೀವಧು'ವಿನಿಂದ ಪ್ರಾರಂಭಮಾಡಿರುವ ಲಕ್ಷ್ಮೀಶನು ಈ ಶಾಸನವನ್ನು ಓದಿ ರಲು ಸಾಕು. ಅಲ್ಲದೆ ಕೃಷ್ಣನನ್ನು 'ಪಾಂಡವಪ್ರತಿಷ್ಠಾಪನಾಚಾರ್ಯ' ಎಂದಿರುವುದಕ್ಕೂ ಸಿದ್ಧಾಯ ಎಂಬ ಪದವನ್ನು ಕಾವ್ಯದಲ್ಲಿ ಅನೇಕಸಲ ಬಳಸಿರುವುದಕ್ಕೂ ಈ ಶಾಸನದ ಪ್ರಭಾವವೇ ಕಾರಣವೆಂದು ತೋರುತ್ತದೆ. ಆದುದರಿಂದ ಲಕ್ಷ್ಮೀಶನನ್ನು ಅಲ್ಲಿಯವನೆಂದು ತಿಳಿಯಬಹುದು.

ಗೋವಿಂದಪೈಗಳು ಕ. ಜೈ. ಭಾ. ದಲ್ಲಿಯ ಭದ್ರಾವತಿಯ ವರ್ಣನೆಯು ಕಡೂರು–ದೇವನೂರಿನದಾಗಿದೆ ಎಂದು ಊಹಿಸಿದ್ದಾರೆ. ಅವರ ಈ ಊಹೆಯನ್ನು ಎಂ.ಆರ್.ಶ್ರೀ. ಅವರು ಅಲ್ಲಗಳೆದು ಲಕ್ಷ್ಮೀಶನ ಭದ್ರಾವತೀ ವರ್ಣನೆ ಸಂ. ಜೈ. ಭಾ. ದ ವರ್ಣನೆಯ ಅನುವಾದವಾಗಿದೆ ಎಂದೆನ್ನುತ್ತಾರೆ. ಆದರೆ ಪೈಗಳ ಊಹೆಗೆ ಕ.ಜೈ.ಭಾ. ದಲ್ಲಿ ಪ್ರಮಾಣಗಳಿವೆ ಎಂದು ನಮಗೆನಿಸುತ್ತದೆ. ಸಂ. ಜೈ. ಭಾರತದ ಅ. ೩ ಶ್ಲೋ. ೪೩–೬೫ ವರೆಗೆ ಮತ್ತು ಅ. ೪ರಲ್ಲಿ ಸ್ವಲ್ಪ ಭದ್ರಾವತೀವರ್ಣನೆ ಬಂದಿದೆ. ಅಲ್ಲಿಯ

ಗೀತಗೋವಿಂದದಲ್ಲಿ ದಶಾವತಾರಗಳು ಕೃಷ್ಣನವು. ಬಾಲಕ್ರೀಡಾಲೋಲ ಕೃಷ್ಣನೇ ನವಮ ಅವತಾರ. ತ್ರಿಪುರದ ಹೆಂಗಳೆಯರೇ ಏಕೆ, ಗೋಕುಲ, ಮಥುರೆ, ವೃಂದಾವನಗಳ ಗೋಪಿಯರೂ ನರಕಾಸುರನ ಸೆರೆಯಾಳಾಗಿದ್ದ ಅಸಂಖ್ಯ ಕನ್ಯೆಯರೂ ಪುರುಷೋತ್ತಮನಾದ ಇವನನ್ನೇ ಶರಣ ಹೋಗುತ್ತಾರೆ. ಈ ಪ್ರೇಮಲೀಲೆಯೆ ಅಹಿಂಸಾಕಾರುಣ್ಯದ ಬೌದ್ಧ ಚರಿತೆ.

[1] *Epigraphia Carnatica*, Vol VI. Inscriptions in the Kadur District, ಶಾಸನಕ್ರಮಾಂಕ ೧೨.

ಭೀಮನಿಗೆ, ಗಿರಿಶಿಖರದ ಮೇಲೆ ನಿಂತು ನೋಡಿದಾಗ, ಅರಣ್ಯ, ಸರೋವರ, ಹೋಮ ಧೂಮ, ಅಗಸೆಬಾಗಿಲ ಹತ್ತಿರ ದೊಡ್ಡ ದೊಡ್ಡ ಮಠ, ಮಂಟಪ ಕಾಣಿಸುತ್ತವೆ; ಉಪವನದಲ್ಲಿ ಬಾಳೆ, ತೆಂಗು, ಅಡಕೆ, ಹಲಸು, ಖರ್ಜೂರ, ದಾಳಿಂಬ, ನಾರಂಗ, ಜಂಬೀರ, ನೆಲ್ಲಿ, ಹುಣಸೆ ಇತ್ಯಾದಿ ಫಲವೃಕ್ಷಗಳು, ಬಕುಲ, ಪಾಟಲ, ಸಂಪಗೆ, ನಾಗಕೇಸರಾದಿ ಪುಷ್ಪವೃಕ್ಷಗಳು, ಭ್ರಮರ, ನವಿಲು, ಸಾರಿಕೆ ಮೊದಲಾದವುಗಳು ಅಲ್ಲಿದ್ದುವೆಂದು ವರ್ಣಿಸಿದ್ದಾನೆ ಸಂಸ್ಕೃತಕವಿ. ಕನ್ನಡ ಜೈಮಿನಿಭಾರತಕಾರನು ಈ ವರ್ಣನೆಯನ್ನು ಎರಡು ಪದ್ಯಗಳಲ್ಲಿ ಸಂಗ್ರಹಿಸಿಬಿಟ್ಟಿದ್ದಾನೆ (೩.೩೩–೩೪). ಸಂಸ್ಕೃತ ಮೂಲದಲ್ಲಿ ಇಲ್ಲದಿರುವ ಕೋಟಿಕೊತ್ತಳಗಳ, ಪ್ರಪಾಶಾಲೆಗಳ ವರ್ಣನೆಯನ್ನು ಕನ್ನಡ ಕವಿ ಉತ್ತಮವಾಗಿ ಬಿತ್ತರಿಸಿದ್ದಾನೆ. ಸಂಸ್ಕೃತ ಜೈಮಿನಿ ಭಾರತದಲ್ಲಿ,

ಫಲಿತಾ ಯತ್ರ ರಂಭಾಸ್ತಾ ಸ್ವಫಲೈರ್ಭಾಂತಿ ಭೂರಿಶಃ
ನಮ್ರಾಃ ಫಲಾನಿ ಭಾರೇಣ ಸುಗುಣೈಃ ಸಜ್ಜನಾ ಇವ ॥ (೩.೪೭)

ಎಂಬಲ್ಲಿಯ ಬಾಳೆಗಿಡಗಳು ಫಲಭಾರದಿಂದ ಸಜ್ಜನರು ಸುಗುಣಗಳಿಂದ ಬಾಗಿದಂತೆ ಬಾಗಿದ್ದವು ಎಂಬ ಉಪಮೆಯನ್ನು ಕವಿ ಲಕ್ಷ್ಮೀಶನು,

ಕುದ್ದಾಲಹತಿಯನುಱೆ ತಾಳ್ದಿಮ್ಮನಿನ್ನೆಗಂ
ಮುದ್ದುಗೈದೀವಸುಧೆ ಬೆಳೆಯಿಸಿದಳೆಂದು ತುಱು
ಗಿದ್ದ ತನಿವಣ್ಗಳಿಂದೆಸವ ಪೆರ್ಗೊನೆಗಳಂ ಸಲೆ ಸಮರ್ಪಿಸಲೊಡರ್ಚಿ
ಎದ್ದಿರದೆ ಬಾಗಿದುವೊ ಕದಳಿಗಳ್ಧರಣಿಗೆನ
ಲಿದ್ದಪರೆ ಮುಱಿದು ಪುರುಷಾರ್ಥಮಂ ಮಾಡಿದರ
ಸುದ್ದಾಮಗುಣವುಳ್ಳ ಜೀವಿಗಳ್ತನುಜ ನೋಡೆಂದನಾ ಪವನಸೂನು ॥ (೩.೩೧)

ಎಂದು ಉತ್ಪ್ರೇಕ್ಷೆಮಾಡಿ ಕಾವ್ಯಸೌಂದರ್ಯವನ್ನು ಹೆಚ್ಚಿಸಿದ್ದಾನೆ. ಇದರಂತೆಯೆ, ಸಂ. ಜೈ.ಭಾ.ದಲ್ಲಿ ಉಪವನದಲ್ಲಿ ಸಂಪಗೆ ಮತ್ತು ಕೇದಗೆಗಳಿದ್ದುವು ಎಂಬ ಮಾತನ್ನು,

ಬಗೆವೊಡಿವು ಮುನ್ನ ಮಾಡಿರ್ದ ದೈವದ್ರೋಹ
ದಘದಿಂದೆ ಬನದ ಪೊಱವಳಯದೊಳ್ಬಹುಕಂಟ
ಕಿಗಳಾಗಿ ಬರ್ದು ಸಂಭವಿಸಿರಲ್ತಳಿತ ಹೊಂಗೇದಗೆಗಳವಱಿಕೊಳಾಡಿ
ಮಿಗೆ ಮಲಿನಮಾಯ್ತು ಸರ್ವಾಂಗಮುಂ ಭ್ರಮರಾವ
ಳಿಗೆ ತಮಗದಱ ಸಂಗಮೇಕೆಂದು ಪೂತ ಸಂ
ಪಗೆಗಳತಿ ಶುಚಿಗಳಂತೆಸವುತಿವೆ ನೋಡು ನಂದನ ಪುರದ ನಂದನದೊಳು ॥
(೩.೩೮)

ಎಂದು ಕನ್ನಡ ಜೈಮಿನಿ ಭಾರತದ ಕವಿ ಕವಿಸಮಯಾಧಿಷ್ಠಿತ ಉತ್ಪ್ರೇಕ್ಷೆಯಿಂದ ಹೇಳುತ್ತಾನೆ. ಹೀಗಾಗಿ 'ಕ.ಜೈ.ಭಾ. ಭದ್ರಾವತೀವರ್ಣನೆ ಸಂ. ಜೈ.ಭಾ.ದ ವರ್ಣನೆಯ ಅನುವಾದ' ಎಂಬ ಎಂ. ಆರ್. ಶ್ರೀ. ಅವರ ವಾದ ಒಪ್ಪುವಂತಿಲ್ಲ. ಇಷ್ಟೇ ಅಲ್ಲ; ಸಂಸ್ಕೃತದಲ್ಲಿಲ್ಲದ ಇನ್ನೂ ಎಷ್ಟೋ ವಿಷಯಗಳನ್ನು ಲಕ್ಷ್ಮೀಶನು ಉಸಿರಿದ್ದಾನೆ. ಉದಾಹರಣೆಗೆ,

ಶಾಲಿಗಳ ಕೈಗಂಪ ಪೊಲಗಾವ ಪಾಮರಿಯ
ರೋಳಿಗಳ ಮೈಗಂಪ ಸತತಕುಸುಮಿತ ತರುಲ
ತಾಳಿಗಳ ಪೂಗಂಪ ತಿಳಿಗೊಳಂಗಳೊಳಲರ್ದ ಪೊಚ್ಚಪೊಂದಾವರೆಗಳ
ಧೂಳಿಗಳ ತನಿಗಂಪನುಂಡು ಮಿಂಡೆದ್ದ ಭೃಂ
ಗಾಳಿಗಳ ಬಳಗಂ ಪರಿಯಲೊಡನೆ ಸುಳಿವ ತಂ
ಗಾಳಿಗಳ ಕಡುಗಂಪ ಸೇವಿಸುತೆ ಪಥಿಕರಾಸರ್ಗಳೆವರಾ ನಾಡೊಳು ॥ (೩.೮)

ಎಂಬಲ್ಲಿಯೂ 'ಬತ್ತದ ತೆನೆಗಳಿಗೆರಗುವ ಗಿಳಿಗಳಂತೆ ಕಬ್ಬಿನಸೋಗೆಗಳು ಮುತ್ತುತ್ತಿದ್ದುವು' (೩.೫) ಎಂದು ಉತ್ಪ್ರೇಕ್ಷಿಸುವಲ್ಲಿಯೂ 'ಪೊಂಬಣ್ಣಮೆಸವ ಕಳಮಶ್ರೀಯನ್ನು' ವರ್ಣಿಸುವಲ್ಲಿಯೂ (೩.೬)

'ಎಸವ ಚೆಂದೆಂಗಾಯ್ಗಳೊಂದೊಂದ ನೊಡೆಯೊತ್ತ
ಲೊಸರಿ ಸೋರ್ವೆಳನೀರ್ಗಳಘ್ರ್ಯಂಗಳಾಗೆ ರಂ
ಜಿಸುವ ಬನದೇವಿ ಭೂದೇವತೆಯನರ್ಚಿಪವೊಲಿದೆ ಕುವರ ನೋಡೆಂದನು ॥
(೩.೨೭)

ಎಂದು ಚೆಂದೆಂಗಾಯಿಗಳನ್ನು ವರ್ಣಿಸಿರುವಲ್ಲಿಯೂ ಕವಿ ಲಕ್ಷ್ಮೀಶನು ಸಂ. ಜೈ.ಭಾ. ವನ್ನು ಅನುಸರಿಸಿಲ್ಲ. ಇಂತಹ ವಿವರವಾದ ವರ್ಣನಾಚಿತ್ರಗಳನ್ನು ನಿಚ್ಚಳವಾಗಿ ಕೊಡುವ ಕವಿ ಮಲೆನಾಡಿನ ಪ್ರಕೃತಿಸೌಂದರ್ಯದ ಮಡಿಲಲ್ಲಿಯೇ ಬಾಳಿದವನು, ಅರ್ಥಾತ್ ಕಡೂರು–ದೇವನೂರಿನವನು ಎಂದು ಊಹಿಸುವುದು ಸಮಂಜಸವೇ ಸರಿ. ಅವನು ದೇವನೂರಿನ ಸುತ್ತಲಿನ ಗುಡ್ಡಗಳ ಮೇಲಿಂದ ದೇವನೂರನ್ನು, ಬಾಬಾಬುಡನಗಿರಿ ಮಸ್ತಕದಿಂದ ಚಿತ್ರದುರ್ಗವನ್ನು ನೋಡಿರಲು ಸಾಕು. ಆಗಿನ ತನ್ನ ಪ್ರಕೃತಿಸೌಂದರ್ಯದ ಮತ್ತು ಪ್ರಕೃತಿವೈಭವದ ರಸಾನುಭವವನ್ನು ಕವಿ, ಭೀಮಮುಖದಿಂದ ನುಡಿಸಿದ್ದಾನೆ.

'ಲಕ್ಷ್ಮೀಶನ ವಂಶಜರಾದ ವೆಂಕಟರಮಣಯ್ಯ ಹೆಬ್ಬಾರ ಎಂಬವರಿದ್ದರು. ಅವರು ಕವಿಯ ಆಸ್ತಿಯಲ್ಲೊಂದು ಭಾಗವನ್ನು ಅನುಭವಿಸುತ್ತಿದ್ದರು. ಅವರು ೫೫ನೆಯ ವಯಸ್ಸಿನಲ್ಲಿ ಬ್ರಹ್ಮಚಾರಿಗಳಾಗಿ ದೇಹವಿಟ್ಟರು. ಅವರ ದತ್ತಕಪುತ್ರರಾದ ಶ್ರೀನಿವಾಸಯ್ಯಂಗಾರ್ ಎಂಬವರು ಅಪುತ್ರಕರಾಗಿ ತೀರಿಕೊಂಡರು. ಈ ಗ್ರಾಮದ ಕೆಲವು ಅಧಿಕಾರಗಳು ಹಿಂದಕ್ಕೆ ಕವಿಯ ವಂಶಕ್ಕೆ ಸೇರಿದ್ದವು' ಎಂದು ಹೇಳಲಾಗುತ್ತಿದೆ.[1] ಹೀಗೆ ಕವಿಯ ವಂಶವೇ ಮುಗ್ಗುತ್ತಬಂದುದರಿಂದ ಅವನ ವಂಶದ ಸಮೀಪದ ಸಂಬಂಧಿಕರು ಈಗ ದೊರಕುವುದು ಅಸಾಧ್ಯವಾಗಿದೆ. ಸ್ವಲ್ಪ ದೂರದಿಂದ ಕವಿಯ ವಂಶಕ್ಕೆ ಸಂಬಂಧಿಸಿದವರೆಂದು ಹೇಳುವ ದೊಡ್ಡಮನೆ ರಾಘವೈಯ್ಯಂಗಾರರು ಮತ್ತು ಕೇಶವಮೂರ್ತಿಗಳು ಹೇಳುವ ಸಂಗತಿಗಳಲ್ಲಿ ವಿಶ್ವಾಸವಿಡುವುದು ಅಯೋಗ್ಯವಾಗಲಾರದು. ಕವಿವಂಶಕ್ಕೆ ಕೆಲವು ಪೌರಾಧಿಕಾರಗಳಿದ್ದವು ಎಂಬ ಮೇಲಣ ಉಲ್ಲೇಖದಂತೆ ಕೇಶವಮೂರ್ತಿಗಳಿಗೆ ಗ್ರಾಮದ ಪಟೇಲಿಕೆ ವಂಶಪರಂಪರೆಯಿಂದ ಬಂದಿರುವುದು ವಿಚಾರಾರ್ಹವಾಗಿದೆ.

ಯಾವ ಕವಿಯೆ ಆಗಲಿ, ಅವನೆಷ್ಟೇ ಮಹತ್ತ್ವದವನಿರಲಿ, ಅವನನ್ನು ತನ್ನವಂಶ

[1] ಕ.ಸಾ.ಪ.ಪ., ಸಂಪುಟ ೧೬, ಸಂಚಿಕೆ ೪.

ದವನು ಎಂದು ಹೇಳಿಕೊಳ್ಳುವುದಕ್ಕೆ ಯಾರೂ ಹೋಗುವುದಿಲ್ಲ. ಈ ಕವಿ ನಮ್ಮ ನಾಡಿನವನು,ನಮ್ಮ ಪರಿಚಯುದವನು, ನಮ್ಮ ಗುರು, ಆತ್ಮೀಯ ಇತ್ಯಾದಿ ವಿಶೇಷಣಗಳನ್ನು ಬಳಸಬಹುದೇ ಹೊರತು, ಕವಿ ತನ್ನ ವಂಶದವನು ಅಥವಾ ತಾನು ಅವನ ವಂಶಕ್ಕೆ ಸಂಬಂಧಪಟ್ಟವನು ಎಂದು ಸುಮ್ಮನೆ ಹೇಳಿಕೊಳ್ಳುವುದು ಸಹಜವಲ್ಲ.

ದೊಡ್ಡಮನೆ ರಾಘವೈಯ್ಯಂಗಾರರಂತಹ ವಯೋವೃದ್ಧರು ಮತ್ತು ಕೇಶವಮೂರ್ತಿಗಳು ಕವಿ ಲಕ್ಷ್ಮೀಶನ ವಂಶದ ಸಂಬಂಧಿಕರು ಎಂದು ಹೇಳುವುದರಿಂದ, ಈವರೆಗೆ ನಾವು ವಿವರಿಸಿದ ಅಂತರ್ಬಾಹ್ಯಪ್ರಮಾಣಗಳಿಂದ ಕವಿ ಲಕ್ಷ್ಮೀಶನು ಕಡೂರು-ದೇವನೂರವನೇ ಎಂದು ನಮಗೆ ಮನದಟ್ಟಾಯಿತು. ಹೈದರಾಬಾದು ಸಂಸ್ಥಾನದಲ್ಲಿದ್ದ ಸುರಪುರವಾಗಲಿ, ಅದರ ದಕ್ಷಿಣಕ್ಕೆ ೬ ಮೈಲಂತರದಲ್ಲಿದ್ದ ದೇವಪುರಗ್ರಾಮವಾಗಲಿ ಲಕ್ಷ್ಮೀಶನದೆಂದು ಹೇಳುವುದಕ್ಕೆ ಸ್ಥಾನಿಕ ಪ್ರಮಾಣಗಳು ಸಾಲವು; ಸಿಕ್ಕ ಕೆಲವು ಪ್ರಮಾಣಗಳು ಸಮರ್ಥವಾಗಿಲ್ಲ. ಆದುದರಿಂದ, ಈ ಎರಡು ಊರುಗಳಲ್ಲಿ ಕಡೂರು ದೇವನೂರೆ ಲಕ್ಷ್ಮೀಶನ ಊರೆಂಬುದು ಗಟ್ಟಿಯಾದ ಮಾತು.

**ಕ) ಕವಿಯ ಮತ**

ಕವಿ ಲಕ್ಷ್ಮೀಶನು ಶ್ರೀವೈಷ್ಣವನಿದ್ದಿರಬಹುದೇ ಎಂಬ ಜಿಜ್ಞಾಸೆಯಿಂದ ಪ್ರಾರಂಭವಾದ ಚರ್ಚೆ, ಅವನು ದ್ವೈತಿ, ಅದ್ವೈತಿ, ವಿಶಿಷ್ಟಾದ್ವೈತಿ, ಸ್ಮಾರ್ತ, ಶೈವಬ್ರಾಹ್ಮಣ ಮತ್ತು ಶಾಕ್ತೇಯ ಪಂಥವನ್ನು ಗೌರವಿಸುವವ, ಭಾಗವತಸಂಪ್ರದಾಯಿ ಇದ್ದಿರಬಹುದೇ ಎಂಬುದರವರೆಗೆ ಬೆಳೆದುಬಂದಿದೆ.

ಕವಿಯ ಮತವನ್ನು ಕುರಿತು ವಿಚಾರಮಾಡುವಾಗ ಅವನ ಕಾವ್ಯದಲ್ಲಿ ವ್ಯಕ್ತವಾಗುವ ಮತವಿಷಯವನ್ನೂ ಕೂಡಿಸುವುದರಿಂದ ವಿವೇಚನೆ, ಬತ್ತಮೊಸರು ಕಲಸಿದಂತಾಗುವ ಭಯವಿದೆ. ಕವಿ ತನ್ನ ಮತವನ್ನೇ ಕಾವ್ಯದಲ್ಲಿ ಪ್ರತಿಪಾದಿಸಬೇಕು ಅಥವಾ ಪ್ರತಿಪಾದಿಸಿದ್ದಾನೆ ಎನ್ನುವುದಕ್ಕೆ ಅವನಿಗೆ ಅಂತಹ ಬಂಧನವಾಗಲಿ, ನಿಯಮವಾಗಲಿ ಇಲ್ಲ. ಒಂದು ಕಾವ್ಯದಲ್ಲಿ ಯಾವುದೊಂದು ಅಥವಾ ಹಲವು ಮತಗಳ ತತ್ತ್ವಪ್ರಣಾಲಿ ಕಂಡುಬರುತ್ತಿದ್ದರೆ ಕವಿ ಅವನ್ನು ಮೆಚ್ಚಿಕೊಂಡಿದ್ದಾನೆ ಎಂದು ಅರ್ಥಮಾಡೀತೇ ಹೊರತು ಕವಿಯ ಮತವೇ ಅದು ಎಂದು ಸಾಧಿಸಲು ಬರಲಾರದು. ಆದುದರಿಂದ ಚರ್ಚಾಸೌಲಭ್ಯಕ್ಕಾಗಿ ಇಲ್ಲಿ ಕವಿಯ ಮತ ಮತ್ತು ಅವನ ಕಾವ್ಯದಲ್ಲಿ ವ್ಯಕ್ತವಾದ ಮತ ಎಂದು ವಿಂಗಡಿಸಿ ಬೇರೆ ಬೇರೆ ವಿವೇಚಿಸುತ್ತೇವೆ.

**ಕವಿಯ ಮತ :** ಕವಿ ವಂಶದವರೆಂದು ಹೇಳಿಕೊಳ್ಳುವ ದೊಡ್ಡಮನೆ ರಾಘವೈಯ್ಯಂಗಾರರು ಹೇಳುವಂತೆ : 'ಲಕ್ಷ್ಮೀಶನು ಯಜುರ್ವೇದ ಆಪಸ್ತಂಭ ಸೂತ್ರದವನಾಗಿ, ಭಾರದ್ವಾಜ ಗೋತ್ರದವನಾಗಿ, ಶ್ರೀವೈಷ್ಣವಮತದ ವಡಗಲೆ ಸಂಪ್ರದಾಯದವನಾಗಿದ್ದನು' ಎಂಬುದನ್ನು ಒಪ್ಪಿಕೊಳ್ಳಲು ತೊಂದರೆಯಿಲ್ಲ ಎಂದು ನಮಗೆ ತೋರುತ್ತದೆ.

ರಾಮರಾವ್ ಅವರು, 'ಕಡೂರು ಮೂಡಗೆರೆ ತಾಲ್ಲೂಕಿನ ೫೫ನೆಯ ಮತ್ತು ೮೮ನೆಯ ಶಾಸನಗಳ ಮೇಲಿಂದ, ಕವಿ ಲಕ್ಷ್ಮೀಶನು ಹೆಬ್ಬಾರಶ್ರೀವೈಷ್ಣವನಾಗಿದ್ದು ಸ್ಮಾರ್ತ ಮತಕ್ಕೆ ಸೇರಿದ್ದನೆಂದು ಸಾಧಿಸಬಹುದು'[1] ಎಂದು ಹೇಳಿರುವುದು ಅಷ್ಟು ಗಟ್ಟಿ ಮುಟ್ಟಿಯಾದ ಪ್ರತಿಪಾದನೆ ಎಂದೆನಿಸುವುದಿಲ್ಲ. ಇಲ್ಲ ಊಹೆಯ ಭಾಗ ಹೆಚ್ಚಾಗಿದೆ. ಅವರು ಪ್ರಮಾಣಕ್ಕೆ ಕೊಟ್ಟಿರುವ ಎರಡು ಶಾಸನಗಳಲ್ಲಿ ಕವಿ ಲಕ್ಷ್ಮೀಶನ ಹೆಸರಿನ ಉಲ್ಲೇಖವಿಲ್ಲ. ಆ ಶಾಸನಗಳ ಕಾಲದಲ್ಲಿ ದೇವನೂರಲ್ಲಿಯೂ ಅದರ ನೆರೆಹೊರೆಯಲ್ಲಿಯೂ ಹೆಬ್ಬಾರಶ್ರೀವೈಷ್ಣವ ಭಾರದ್ವಾಜ ಗೋತ್ರದವರೇ ಪ್ರಮುಖರಾಗಿದ್ದರು ಎಂಬ ಮಾತು ಇದೆ. ಲಕ್ಷ್ಮೀಶನು ತನ್ನ ಕಾವ್ಯದಲ್ಲಿ ತಾನು ಭಾರದ್ವಾಜ ಗೋತ್ರದವನು ಎಂದು ಹೇಳಿಕೊಳ್ಳುವುದರಿಂದ ಅವನು ಹೆಬ್ಬಾರಶ್ರೀವೈಷ್ಣವನಾಗಿರಬಹುದು ಎಂಬುದು ರಾಮರಾಯರ ಊಹೆ.

ಕವಿ ಲಕ್ಷ್ಮೀಶನು ಪೀಠಿಕಾಸಂಧಿಯ ೫ನೆಯ ಪದ್ಯದಲ್ಲಿ 'ವರಯತಿಗೆ ಭಂಗಮಂ ತಾರದೆ' ಎನ್ನುತ್ತಾನೆ. ಇಲ್ಲಿ ಸಾಮಾನ್ಯವಾಗಿ ಸನ್ಯಾಸಿಯನ್ನು ಶ್ಲೇಷೆಗೆ ತಂದಿದ್ದಾನೋ, ಶ್ರೀಮತಾಚಾರ್ಯರಲ್ಲೊಬ್ಬರನ್ನು 'ಯತಿ' ಎಂದುಲ್ಲೇಖಿಸಿ ಸ್ಮರಿಸಿದ್ದಾನೋ ಎಂಬುದೊಂದು ಪ್ರಶ್ನೆ. ಅದೊಂದು ಲಕ್ಷ್ಮೀಶನ ವಿಶಿಷ್ಟಪ್ರಯೋಗವಾಗಿದ್ದರೆ, ಆ ಯತಿ ಯಾರು ಎಂಬುದು ಸಿದ್ಧವಾಗಬೇಕು. ಅದರಿಂದ ಆ ಕವಿಯ ಮತನಿರ್ಧಾರಕ್ಕೆ ಬಲ ಬರಬಹುದು. ಲಕ್ಷ್ಮೀಕಾಂತ ದೇವಾಲಯದ ಒಕ್ಕಲುಮನೆತನದವರಾದ ಜೋಡಿಮತ್ತೂರಿನ ಸುಬ್ರಹ್ಮಣ್ಯ ಉಪಾಧ್ಯಾಯರು ಕೂಡ 'ಕವಿ ಲಕ್ಷ್ಮೀಶನು ಹೆಬ್ಬಾರ ಶ್ರೀವೈಷ್ಣವ ಭರದ್ವಾಜಗೋತ್ರದವನು' ಎಂದೇ ಹೇಳುತ್ತಾರೆ. ಅಂತೂ ಈವರೆಗಿನ ಪ್ರಮಾಣವಿವರಣೆಯ ಮೇಲಿಂದ ಲಕ್ಷ್ಮೀಶ ಕವಿಯ ಮತ ಹೆಬ್ಬಾರಶ್ರೀವೈಷ್ಣವ ಮತ ಎಂದು ವ್ಯಕ್ತವಾಗುತ್ತದೆ.[2]

**ಕಾವ್ಯದಲ್ಲಿ ವ್ಯಕ್ತವಾದ ಮತ:** ಕನ್ನಡ ಜೈಮಿನಿಭಾರತದಲ್ಲಿ ಲಕ್ಷ್ಮೀಶನು ಯಾವ ಮತವನ್ನು ಪ್ರತಿಪಾದಿಸಿದ್ದಾನೆ, ಅಥವಾ ಎತ್ತಿ ಹಿಡಿದಿದ್ದಾನೆ ಎಂದು ನೋಡುವಾ. ಅದನ್ನು ಸೂಚಿಸುವ ಹಲವಾರು ಉಕ್ತಿಗಳು ಕಾವ್ಯದಲ್ಲಿ ಅಲ್ಲಲ್ಲಿ ಬರುತ್ತವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಎತ್ತಿಕೊಟ್ಟಿದೆ :

೧. ಏವೇಳ್ವೆನಾಶ್ಚರ್ಯಮಂ ಬಳಿಕ ವಾಜಿಯ ಕಳೇವರಂ ಕರ್ಪೂರಮಾದುದತಿ ಶುಭ್ರದಿಂ—(೩೪–೧೯), ಎಂದಿರುವಲ್ಲಿ ಅಹಿಂಸೆಯನ್ನು,

೨. ಪಾತಕಂ ಪೋಪುದು ಮುಕುಂದಸ್ಮರಣೆಯಿಂದ (೨೩–೬೩)ಎಂದಿರುವಲ್ಲಿ ಏಕಾಂತ ಭಕ್ತಿಯನ್ನು,

---

[1] ಜೈ. ಭಾ. ಕಥಾಸಂಗ್ರಹ ಮುನ್ನುಡಿ

[2] ಹೆಚ್ಚಿನ ವಿವರ : ಲಕ್ಷ್ಮೀಶ– 'ಕವಿ, ಕಾಲ, ಸನ್ನಿವೇಶ', ಲೇಖನ, ಡಾ. ವಾಮನ ಬೇಂದ್ರೆ, ಐ. ಬಿ. ಎಚ್. ಪ್ರಕಾಶನ.

೩. ಹರಿಹರಾರ್ಚನೆಯು ಸುಕೃತಂಗಳಾದಪುವು ಜೈಮಿನಿ ಭಾರತದೊಳೊಂದು ವರ್ಣ ಮಂ ಪ್ರೀತಿಯಿಂ ಕೇಳ್ದವರ್ಗೆ (೩೪.೪೩) ಹರಿಹರ ಸಮಾನತೆಯನ್ನು

೪. ಹರಿಹರವಿಭೇದಮಂ ಮಾಡಿ ನಿಂದಿಸಿದವನ ಗತಿಯಾಗಲಿ (೧೩.೪೧)ಎಂದಿರುವಲ್ಲಿ ಹರಿಹರರಲ್ಲಿ ಭೇದವನ್ನು ಬಗೆಯುವುದು ಪಾಪ ಎಂಬ ವಿಚಾರವನ್ನು

ಕವಿ ಲಕ್ಷ್ಮೀಶನು ಸಾರುತ್ತಾನೆ. ಅಲ್ಲದೆ,

೧. ಹಯಮೇಧಫಲವನಚ್ಯುತನ ಕರದೊಳೀಯಲ್ಕೆ ಜಯ ಜಯೆಂದುದು ಲೋಕ (೩೪.೪೧) ಎಂಬಲ್ಲಿ ಕೃಷ್ಣಾರ್ಪಣ ಭಾವವನ್ನು ತೋರಿದ್ದಾನೆ.

೨. ನಿನಗೀ ವಾಜಿಮೇಧಮೇನಚ್ಚರಿಯೆ ? ಕೈಕೊಳಾವಿರ್ದು ನಡೆಸುವೆವು (೨.೬೩) ಎಂದು ಕೃಷ್ಣನು ಯುಧಿಷ್ಠಿರನಿಗೆ ಹೇಳಿರುವುದು,

೩. ಸತಿಸಾಕ್ಷಿನಿಲ್ಲದೆ ಅಧ್ವರಕುಪಕ್ರಮಿಸೆ ನಡೆಯದು (೨.೪೫) ಎಂದು ಯುಧಿಷ್ಠಿರನು ವಿಚಾರಿಸಿರುವುದು

೪. ಕ್ರತುವಂ ನಡೆಸಿ ಮೇಣುಳುಹಿ ನೀವು(೨.೬೧) ಎಂದು ಭೀಮನು ಕೃಷ್ಣನಿಗೆ ನುಡಿದಿರುವುದು,

೫. ಸಾಕ್ಷಾತ್ಸುಯಜ್ಞಸ್ವರೂಪನಚ್ಯುತನೆ ತಾಂ ಸಾಕ್ಷಿಯಾಗಿರ್ದು ಮಾಡಿಸುವವಂ (೩೪.೨೩) ಎಂದು ಯಜ್ಞವೂ ಅದಕ್ಕೆ ಸಾಕ್ಷಿಯೂ ಅದನ್ನು ಮಾಡಿಸುವವನೂ ಕೃಷ್ಣನೇ ಎಂದು ವರ್ಣಿಸಿರುವುದು,

೬. ಹರಿಯನುಳಿದಾವು ಬದುಕುವರಲ್ಲ (೧೦.೨೧) ಎಂದು ಅರ್ಜುನನು ಪಾಂಡವರಿಗೆ ಕೃಷ್ಣನು ಪ್ರಾಣ ಎಂದಿರುವುದು,

ಇವೆಲ್ಲವೂ ಕೃಷ್ಣನೇ ಪರಮಶ್ರೇಷ್ಠನೆಂದೂ ಅನನ್ಯಶರಣನೆಂದೂ ಸ್ಪಷ್ಟಪಡಿಸುತ್ತಿವೆ. ಆದುದರಿಂದ ಲಕ್ಷ್ಮೀಶನು ತನ್ನ ಕಾವ್ಯದಲ್ಲಿ ಪ್ರತಿಪಾದಿಸಿದುದು ಭಾಗವತಮತವೆಂದು ಎದ್ದು ಕಾಣುವಂತಿದೆ.

ಪ್ರಾಚೀನ ವೈದಿಕಧರ್ಮದ ಸ್ವರೂಪವು ಯಜ್ಞಭೂಯಿಷ್ಠವಾಗಿತ್ತು, ಕರ್ಮ ಪ್ರಧಾನವಾಗಿತ್ತು ; ಅದಕ್ಕೆ ಯಜ್ಞೀಯಪಶು ಹಿಂಸೆ ನಿಷಿದ್ಧವಾಗಿರಲಿಲ್ಲ. ಈ ಕರ್ಮ ಪ್ರಧಾನತೆಯಿಂದ ಭಿನ್ನವಾದ ಒಂದು ಚಳವಳಿ ಎದ್ದಿತು. ಅದರ ಫಲವಾಗಿ ಪರಮಾತ್ಮನ ಸ್ವರೂಪವನ್ನು ತಿಳಿಸುವ ತತ್ತ್ವಜ್ಞಾನದ ಉಪನಿಷತ್ತುಗಳು ಹುಟ್ಟಿದವು. ಅವುಗಳ ಮಾರ್ಗ ಜ್ಞಾನಮಾರ್ಗ. ಈ ಜ್ಞಾನಮಾರ್ಗವು ಸರ್ವಸಾಮಾನ್ಯರಿಗೆ ಹಿಡಿಸುವಂತಹ ದಲ್ಲ. ಅದಕ್ಕಾಗಿ ಬ್ರಹ್ಮದ ಸಗುಣಪ್ರತೀಕದ ಕಲ್ಪನೆ ತಲೆದೋರಿ, ಮಾನವರೂಪದ ದೇವತೆಗಳ ಉಪಾಸನೆ ರೂಢಿಗೆ ಬಂದಿತು. ಇದು ಭಕ್ತಿಮಾರ್ಗ. ಮುಂದೆ ಈ ಭಕ್ತಿ ಮಾರ್ಗದೊಳಗೆ ಭಾಗವತಪಂಥದ ಉದಯವಾಯಿತು. ಈ ಪಂಥಕ್ಕೆ ಏಕಾಂತಿಕ, ನಾರಾ ಯಣೀಯ, ಪಾಂಚರಾತ್ರ, ಸಾತ್ವತ ಎಂಬ ಅನೇಕ ಹೆಸರುಗಳಿದ್ದವು. ಅಹಿಂಸೆ, ಏಕಾಂತ

ಭಕ್ತಿ, ಹರಿಹರಸಮಾನತೆ ಇವು ಭಾಗವತಪಂಥದ ಮುಖ್ಯಸೂತ್ರಗಳು ; ಹರಿಹರ ವಿಭೇದ ಮಾಡುವುದು ಪಾಪವೆಂದು ಈ ಪಂಥದವರ ನಂಬಿಕೆ. ಜೈಮಿನಿಭಾರತದಿಂದ ಎತ್ತಿಕೊಟ್ಟಿರುವ ಮೇಲಣ ಅವತರಣಿಕೆಗಳಿಂದ ಕಾವ್ಯದಲ್ಲಿ ಭಾಗವತ ಸಂಪ್ರದಾಯದ ಈ ಲಕ್ಷಣಗಳಿರುವುದನ್ನು ಕಂಡುಕೊಂಡಿದ್ದೇವೆ. ಆದುದರಿಂದ, ಈ ಉದಾರತತ್ತ್ವಗಳನ್ನು ಮೆಚ್ಚಿಕೊಂಡ ಕವಿ ಲಕ್ಷ್ಮೀಶನು ಲೋಕವನ್ನು ಸಂಸ್ಕರಿಸುವುದಕ್ಕೆ ಜೈಮಿನಿಭಾರತದ ಕಥಾನಕವನ್ನು ತನ್ನ ಕಾವ್ಯವಸ್ತುವನ್ನಾಗಿ ತೆಗೆದುಕೊಂಡಿರಲು ಸಾಕು. ಅದರಲ್ಲಿಯ ಭಾಗವತ ಮತವನ್ನು ತನ್ನ ವಿಶಿಷ್ಟವಾದ ಶೈಲಿ ಮತ್ತು ರೀತಿಗಳಿಂದ ಒಳ್ಳೇ ಹೃದಯಂಗಮವಾಗಿ ಕವಿ ಪ್ರತಿಪಾದಿಸಿದ್ದಾನೆ.

ಶ್ರೀಕೃಷ್ಣನು ಹೇಳಿದ ಭಕ್ತಿಮಾರ್ಗ ಎಂದರೆ ಭಾಗವತಧರ್ಮ. ಪಾಂಚರಾತ್ರ ಸಂಹಿತೆ ಈ ಭಾಗವತಧರ್ಮಕ್ಕೆ ಆಧಾರವಾಗಿದೆ. ಪಂಚರಾತ್ರವು ನಿಷ್ಕಾಮಕರ್ಮ ಪ್ರಧಾನವಾದ ಧರ್ಮವನ್ನು ಬೋಧಿಸುತ್ತದೆ. 'ಕರ್ಮಗಳನ್ನು ಮಾಡಿಯೇ ತೀರಬೇಕು, ಅವುಗಳಿಗೆ ಸಂಬಂಧಪಟ್ಟ ಫಲ, ಕರ್ತೃತ್ವ, ಸಂಗ ಈ ಮೂರನ್ನೂ ಈಶ್ವರಾರ್ಪಣ ಮಾಡಬೇಕು. ಇಂತಹ ಭಕ್ತಿಯಿಂದಲೇ ಈಶ್ವರನನ್ನು ವಶೀಕರಿಸಿ, ಅವನ ಸಾಕ್ಷಾತ್ಕಾರವನ್ನು, ಅವನ ಅನುಗ್ರಹವನ್ನು, ಜೀವಾತ್ಮಸಾಕ್ಷಾತ್ಕಾರವನ್ನು ಹೊಂದಿ ಈಶ್ವರಸಾಮ್ಯವೆಂಬ ಕೈವಲ್ಯವನ್ನು ಹೊಂದಬೇಕು ಎಂದು ಭಗವದ್ಗೀತಾಸಿದ್ಧಾಂತದ ಪ್ರಕಾರ ಪಾತಂಜಲಯೋಗಶಾಸ್ತ್ರದ ಸಾರಾರ್ಥವಾಗಿದೆ. ಇದೇ ಭಾಗವತಧರ್ಮವಾಗಿದೆ.'[1]

ಜೈಮಿನಿ ಭಾರತವು ಶಿವಭಾಗವತದಂತೆ ಶಿವಪಾರಮ್ಯವನ್ನಾಗಲಿ, ವಿಷ್ಣುಭಾಗವತದಂತೆ ವಿಷ್ಣುಪಾರಮ್ಯವನ್ನಾಗಲಿ ವ್ಯಕ್ತಪಡಿಸುವುದಿಲ್ಲ. ಅದು ಹರಿಹರ ಸಮಾನತ್ವವನ್ನು, ಹರಿಹರ ಭೇದವನ್ನೆಣಿಸುವುದು ಪಾಪ ಎಂಬುದನ್ನು ಸಾರುವ ಪಾಂಚರಾತ್ರಾಧಿಷ್ಠಿತ ಭಾಗವತವನ್ನು ಅವಲಂಬಿಸಿದೆ, ಅದನ್ನು ಎತ್ತಿಹಿಡಿಯುತ್ತದೆ. ಕೃಷ್ಣಭಕ್ತಿ ಮತ್ತು ಅದರ ಮಹಿಮೆಯನ್ನು ಇಲ್ಲಿ ಬಣ್ಣಿಸಲಾಗಿದೆ. ಮೂಲ ಸಂಸ್ಕೃತ ಜೈಮಿನಿ ಭಾರತದಲ್ಲಿ ಇಲ್ಲದ ಕಡೆಗಳಲ್ಲಿ ಕೂಡ ಕನ್ನಡ ಜೈಮಿನಿ ಭಾರತದಲ್ಲಿ 'ಭಾಗವತ' ಶಬ್ದವನ್ನೇ ಪ್ರಯೋಗಿಸಲಾಗಿದೆ.

ಉದಾ : ೧. ಭೀಷ್ಮನನ್ನು ಕುರಿತು, 'ಸ್ವೇಚ್ಛಾಮರಣಿ **ಭಾಗವತ** ಮಸ್ತಕಮಣಿ' (೯.೩೦)

೨. ಚಂದ್ರಹಾಸನನ್ನು ಕುರಿತು 'ಪರಮ**ಭಾಗವತ**ಕಲೆಗಳಿಂದೆಸೆದಿರ್ದನು' (೨೯.೮)

೩. 'ಸುಲಲಿತ ಚರಿತ **ಭಾಗವತ**ಶಿರೋಮಣಿ' (೨೯.೧೪)

೪. 'ವರ**ಭಾಗವತ** ಶಿರೋಮಣಿಯ ದರುಶನದಿಂದ' (೩೧.೭೯)

ಈ ಸಂದರ್ಭಗಳಲ್ಲಿ ಸಂ. ಜೈ. ಭಾ. ದಲ್ಲಿ 'ಭಾಗವತ' ಪದಪ್ರಯೋಗವಿಲ್ಲ. ಅಲ್ಲದೆ

[1] ಮಾ.ಪು. ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯ, 'ಹಿಂದೂದರ್ಶನಸಾರ', ಪು. ೯೯.

ಇತ್ತೆಂದೂ ಕಾಲಾಂತರದಲ್ಲಿ ಯಾರೋ 'ಕರ್ಣಾಟಕವಿಚೈತ್ರವನಚೂತ'ಎಂದು ವಿಚಾರ ಪೂರ್ವಕವಾಗಿ ತಿದ್ದಿಯೋ ಸಹಜ ಶಬ್ದಪಲ್ಲಟದೋಷದಿಂದಲೋ ಬರೆದಂತೆ ತೋರುತ್ತದೆ. ಲಕ್ಷ್ಮೀಶನನ್ನು ಮೆಚ್ಚಿದ ಗೋಪಕವಿ ಅವನನ್ನು ಕವೀಂದ್ರರಿಗೆ ಉತ್ಸವಕಾರಿಯಾದ ಚೈತ್ರದ ಶುಕ ಎಂದು ಬಾಹ್ಯಾರ್ಥದಲ್ಲಿ ಹೇಳಿದಂತಿದ್ದರೂ 'ಚೈತ್ರನೆಂಬ ಶುಕ (ಮುನಿ)' ಎಂದು ವಿಶೇಷಮನ್ನಣೆಯಿಂದ ಸ್ಮರಿಸಿದ್ದಾನೆ.

### ಇ) ಸಂಸ್ಕೃತ ಜೈಮಿನಿ ಭಾರತದ ರಚನಾಕಾಲ

ಒಂದು ಊಹೆ : 'ಸಂಸ್ಕೃತ ಜೈಮಿನಿ ಭಾರತವನ್ನು ಜೈಮಿನಿ ಮುನಿ ರಚಿಸಿದನು. ಇವನು ವ್ಯಾಸಮುನಿಯ ಶಿಷ್ಯ. ಜೈಮಿನಿಯೂ ಸಂಪೂರ್ಣಭಾರತವನ್ನೇ ಬರೆದು ಗುರುವಿಗೆ ತೋರಿಸಿದನು. ಅವರು ಸಿಟ್ಟಿನಿಂದ ಅದನ್ನು ಸುಟ್ಟುಬಿಟ್ಟರು. ಎಲ್ಲ ಪರ್ವಗಳು ಸುಟ್ಟುಹೋದರೂ ಆಶ್ವಮೇಧಿಕಪರ್ವವು ಸುಡಲಿಲ್ಲ' ಎಂದು ಒಂದು ಆಖ್ಯಾಯಿಕೆ ಇದೆ. ವ್ಯಾಸಮಹರ್ಷಿ ಜೈಮಿನಿಯ ಭಾರತವನ್ನು ಸುಡಲಿಲ್ಲ; 'ಅವರು ಜೈಮಿನಿ ಭಾರತವನ್ನು ಸಮುದ್ರದಲ್ಲಿ ಬೀಸಾಡಿದರು. ಎಲ್ಲ ಪರ್ವಗಳು ಮುಳುಗಿದವು, ಆಶ್ವಮೇಧಿಕಪರ್ವವು ಮುಳುಗಲಿಲ್ಲ' ಎಂಬುದು ಇನ್ನೊಂದು ಆಖ್ಯಾಯಿಕೆ. ಇವುಗಳನ್ನು, ಸುಡಲಿ ಅಥವಾ ನೀರಿಗೆ ಎಸೆಯಲಿ ಆಶ್ವಮೇಧಿಕಪರ್ವದ ಹಿರಿಮೆಯನ್ನು ಸಾರುವ ಪವಾಡಕಥೆಗಳೇ ಇವು ಎಂದೆನ್ನಬಹುದು. ಉಳಿದ ಪರ್ವಗಳು ಸತ್ತ್ವಹೀನವಾಗಿದ್ದರಿಂದ ಸಾಹಿತ್ಯಲೋಕದಿಂದ ಅಸ್ತವಾಗಿ ಹೋಗಿರಬಹುದು.

ವ್ಯಾಸಶಿಷ್ಯನಾದ ಜೈಮಿನಿ ತನ್ನ ಭಾರತವನ್ನು ಗುರುವಿಗೆ ತೋರಿಸಲಾಗಿ, 'ಇದರಲ್ಲಿ ಪಾಂಡವರಿಗಿಂತ ಉಳಿದ ರಾಜರಿಗೆ ಮಹತ್ತ್ವವಿದೆ, ಪಾಂಡವರಿಗೆ ಸಿಕ್ಕಬೇಕಾದ ಗೌರವ ಸಿಕ್ಕಿಲ್ಲ' ಎಂದು ವ್ಯಾಸರು ಅಭಿಪ್ರಾಯಪಟ್ಟರಂತೆ; ಆಶ್ವಮೇಧಿಕ ಪರ್ವವೊಂದು ಅವರಿಗೆ ಸಮ್ಮತವಾದುದರಿಂದ ಅದನ್ನು ಉಳಿಸಿಕೊಂಡು ಮಿಕ್ಕೆಲ್ಲ ಪರ್ವಗಳನ್ನು ಜೈಮಿನಿ ತಾನೇ ನಷ್ಟಪಡಿಸಿದನು ಎಂದೂ ಒಂದು ಕಥೆ ಇದೆ.

ಈ ಮೂರೂ ಕತೆಗಳಲ್ಲಿಯ ವ್ಯಾಸ ಎಂದರೆ ವೇದವ್ಯಾಸ, ಮೂಲ ಸಂಸ್ಕೃತ ಮಹಾಭಾರತವನ್ನು ರಚಿಸಿದ ಕವಿ. ಜೈಮಿನಿ ಆತನ ಶಿಷ್ಯ ಎಂಬುದು ಬಹಳ ದೂರದ ಮಾತು. ವ್ಯಾಸನೆಂದರೆ ಪೂರ್ವಕಾಲದ ವೇದವ್ಯಾಸನಾಗಿರದೆ, ಮತ್ತೊಬ್ಬ ಯಾವನೋ ವ್ಯಾಸನಿರಬೇಕು; ಜೈಮಿನಿ ಅವನ ಶಿಷ್ಯನಿರಬೇಕು, ಎಂದು ತೋರುತ್ತದೆ. ಸಂಸ್ಕೃತ ಜೈಮಿನಿಭಾರತದ ರಚನಾಕಾಲವು ನಿಶ್ಚಿತವಾಗಿಲ್ಲ. ಆದುದರಿಂದ ಅನೇಕ ದಂತಕಥೆಗಳು ಹುಟ್ಟಿಕೊಂಡಿವೆ.

ಸಂಸ್ಕೃತ ಸಾಹಿತ್ಯ ಚರಿತ್ರೆ, ವಾಙ್ಮಯ ಇತಿಹಾಸಗಳಲ್ಲಿ ಸಂಸ್ಕೃತ ಜೈಮಿನಿ ಭಾರತದ ರಚನಾಕಾಲದ ಬಗೆಗೆ ಏನೂ ದೊರೆಯುವುದಿಲ್ಲ.

'Jaimini-Bharatam is an elaborate work dealing with the exploits and character of the Pandavas in verse. Only one Parvan

of this book is extant describing the Aswamedha of Yudhishthira.'[1]

[ಜೈಮಿನಿ ಭಾರತವು ಪಾಂಡವರ ಪರಾಕ್ರಮ ಮತ್ತು ಚಾರಿತ್ರ್ಯದ ಕಥೆಯನ್ನು ವಿಸ್ತಾರವಾಗಿ ಹೇಳುವ ಒಂದು ಪದ್ಯಕಾವ್ಯವಾಗಿದೆ. ಆದರೆ ಇದರಲ್ಲಿ ಯುಧಿಷ್ಠಿರನು ಅಶ್ವಮೇಧಯಾಗವನ್ನು ಮಾಡಿದ ಕಥಾನಕದ ಪರ್ವ ಒಂದೇ ಉಳಿದಿದೆ.]

'Jaimini Bharata of which Book XIV, the asvamedhika parvan alone has come down to us, is intended rather as a text book of Vaisnava sect.'[2]

[ಜೈಮಿನಿ ಭಾರತದಲ್ಲಿ ೧೪ನೆಯ ಅಧ್ಯಾಯ ಆಶ್ವಮೇಧಿಕಪರ್ವ. ಈ ಪರ್ವ ಒಂದೇ ಉಪಲಬ್ಧವಿದೆ. ಇದು ವೈಷ್ಣವ ಪಂಥದ ಪಠ್ಯಪುಸ್ತಕದಂತಿದೆ.]

'Nothing definite can be said regarding the date of the Jaimini Bharata resp. its Asvamedhika Parvan. Judging by the nature of the Vishnu worship appearing in the work, it is probably not earlier than the later works and sections of the Purana literature. *At any rate it is later than the Bhagavata Purana quoted at the end of the Chandrahasa legend.*'[3]

[ಜೈಮಿನಿ ಭಾರತದಲ್ಲಿಯ ಆಶ್ವಮೇಧಿಕಪರ್ವದ **ರಚನಾಕಾಲದ ಬಗ್ಗೆ ನಿಶ್ಚಿತವಾಗಿ ಏನನ್ನೂ ಹೇಳಲು ಬರುವಂತಿಲ್ಲ**. ಈ ಕಾವ್ಯದಲ್ಲಿ ವ್ಯಕ್ತವಾದ ವೈಷ್ಣವ ಪೂಜೆಯನ್ನು ಅನುಲಕ್ಷಿಸಿದರೆ, ಈ ಕಾವ್ಯವು ಪುರಾಣವಾಙ್ಮಯದ **ಇತ್ತೀಚಿನ ಗ್ರಂಥಗಳ** ಜೊತೆಯದಾಗಬಹುದೇ ಹೊರತು ಇವುಗಳಿಗಿಂತ ಮೊದಲಿನದಲ್ಲ. ಚಂದ್ರಹಾಸ ಕಥಾನಕದ ಕೊನೆಗೆ ಭಾಗವತದ ಉಲ್ಲೇಖ ಬರುತ್ತದೆಯಾದುದರಿಂದ ಜೈಮಿನಿಭಾರತವು ಭಾಗವತೋತ್ತರ ಕಾವ್ಯವಾಗಿದೆ.]

ಈ ಮೂರು ಮತಗಳಲ್ಲಿ ಎಂ. ಕೃಷ್ಣಮಾಚಾರಿ ಮತ್ತು ಎ. ಬಿ. ಕೀಥ್ ಅವರ ಅಭಿಪ್ರಾಯಕ್ಕಿಂತ ವಿಂಟರ್‌ನಿಟ್ಸ್ ಅವರ ಅಭಿಪ್ರಾಯವು ನಮಗೆ ಜೈಮಿನಿ ಭಾರತದ ರಚನಾಕಾಲದ ಬಗ್ಗೆ ಒಂದು ನಿಶ್ಚಿತಕಲ್ಪನೆಯನ್ನು ಕೊಡುತ್ತದೆ.

'ಭಾಗವತದಲ್ಲಿ ಜೈನಬೌದ್ಧಮತಗಳ ಹೋರಾಟ, ಶೈವಧರ್ಮದ ಹೋರಾಟ ಮುಂತಾದುವನ್ನೆಲ್ಲ ಹೇಳಿರುವುದರಿಂದಲೂ ದಕ್ಷಿಣದೇಶದಲ್ಲಿ ಇವೆಲ್ಲ ನಡೆದುದರಿಂದಲೂ ಕ್ರಿ.ಶ. ೭೦೦ ರಿಂದ ೯೦೦ರ ಮಧ್ಯಕಾಲದಲ್ಲಿ ವೈಷ್ಣವ ಆಳ್ವಾರರಲ್ಲಿ ಬಹುಮಂದಿ ಹುಟ್ಟಿದುದರಿಂದಲೂ ಭಾಗವತವು ಈ ಸಮಯದಲ್ಲಿಯೆ ದಕ್ಷಿಣದೇಶದಲ್ಲಿಯೆ ರಚಿತವಾಗಿರಬಹುದು' ಎಂದು ಕೆ. ವೆಂಕಟರಾಮಪ್ಪನವರು ಊಹಿಸುತ್ತಾರೆ.[4] ಇದರ ಮೇಲಿಂದ

---

[1] History of classical Sanskrit Literture, Sri M. Krishnamachariar, M.A., M.L. Ph.D., M.R.A.S., p. 43.

[2] A History of Sanskrit Literature, A. B. Keith, p. 480.

[3] A History of Indian Literature, Winternitz (pub. 1927) p. 586.

[4] ಶ್ರೀ ಕೃಷ್ಣಚರಿತ್ರೆ, ಪೀಠಿಕೆ ಪುಟ X.

ನಾವು ಸಂಸ್ಕೃತ ಜೈಮಿನಿ ಭಾರತದ ರಚನಾಕಾಲವು ಕ್ರಿ.ಶ. ೯೦೦ರ ಅನಂತರದ್ದು ಎಂಬ ಊಹೆಯ ಮೊದಲ ಹೆಜ್ಜೆಯನ್ನು ಇಡಬಹುದು.

ಸಂಸ್ಕೃತ ಜೈಮಿನಿ ಭಾರತದ ಅಧ್ಯಾಯ ೨೨, ಶ್ಲೋಕ ೯೦-೯೧ರಲ್ಲಿ,

ಮುಕ್ತಾಶ್ಚ ಕಾಮಿನೀನಾಂ ಹಿ ಹೃದಯೇಽಪಿ ಚ ಮಸ್ತಕೇ।
ನಾಸಾಗ್ರೇ ಭಾಂತಿ ರಾಜೇಂದ್ರ ಸತೋಯಾ ವೃತ್ತಲೋಲಕಾಃ ॥

ಎಂಬ ವರ್ಣನೆಯಿದೆ. ನಾಸಾಗ್ರದಲ್ಲಿರುವ 'ನತ್ತು' ಇಲ್ಲವೆ 'ಬುಲಾಕು' ಎಂಬ ಆಭರಣವು ಎಂದಿನಿಂದ ಪ್ರಚಾರದಲ್ಲಿ ಬಂದಿತು ಎಂಬುದು ವಿಚಾರಮಾಡತಕ್ಕ ಮಾತು. P. K. Gode ಅವರು ನತ್ತಿನ ಬಗೆಗೆ,

'The reference to nose-ornament can be easily assigned to the period 1000 A.D. to 1394 and hence it does not go against the theory of the foreign importation of the nose-ornament after the advent of the Muhammedans'

ಎನ್ನುತ್ತಾರೆ.[1] [ಈ ಬುಲಾಕು ಪ್ರಚಾರದಲ್ಲಿ ಬಂದ ಕಾಲವು ಕ್ರಿ.ಶ. ೧೦೦೦ ದಿಂದ ೧೩೯೪ ರ ಮಧ್ಯವಾಗಿದೆ. ಹೀಗೆಂದರೆ ಬುಲಾಕು ಮುಸಲ್ಮಾನರ ಆಗಮನದ ಅನಂತರ ಪರಕೀಯರಿಂದ ತರಲ್ಪಟ್ಟಿದೆ ಎಂಬ ಮತವನ್ನೂ ಅಲ್ಲಗಳೆದಂತಾಗುವುದಿಲ್ಲ.]

ಈ ವಿಚಾರಸರಣಿಯ ಆಧಾರದ ಮೇಲಿಂದ ಸಂಸ್ಕೃತ ಜೈಮಿನಿ ಭಾರತವು ಕ್ರಿ.ಶ. ೧೦೦೦ ದಿಂದೀಚೆಗೆ ೧೩೯೪ ರಿಂದಾಚೆಗೆ ಹುಟ್ಟಿರಬಹುದೆಂದು ತೋರುತ್ತದೆ.

ಸಂಸ್ಕೃತ ಜೈಮಿನಿ ಭಾರತವನ್ನು ಬರೆದ ಜೈಮಿನಿ ಯಾವನಿರಬಹುದು? ಕ್ರಿ.ಶ. ೧೦೦೦-೧೩೯೪ ರ ನಡುವಿನ ಕಾಲದಲ್ಲಿ ರಚಿತವಾದ ಈ ಭಾರತವನ್ನು ವೇದ-ವ್ಯಾಸ, ಭಾಗವತ ವ್ಯಾಸರ ಶಿಷ್ಯನಾದ ಜೈಮಿನಿ ಬರೆಯುವುದು ಸಾಧ್ಯವಿಲ್ಲ. ಇವನೊಬ್ಬ ಬೇರೆ ಎಂದಾಯಿತು. ಅವನು ಯಾರು?

ಶ್ರೀ ಮಹಾಮುನಿ ಶೌನಕೋಕ್ತ 'ಚರಣ ವ್ಯೂಹ ಪರಿಶಿಷ್ಟಸೂತ್ರಂ' ಎಂಬುದಕ್ಕೆ ಮಹೀದಾಸ ಪಂಡಿತರು ಭಾಷ್ಯವನ್ನು ಬರೆದಿದ್ದಾರೆ. ಅದರ ತೃತೀಯ ಖಂಡ ವ್ಯಾಖ್ಯಾನದಲ್ಲಿ

ಸಾರಣ್ಯಕಾನಿ ಸೌರ್ಯಾಣಿ ಹ್ಯೇತಸ್ತಾಮಗಣಂ ಸ್ಮೃತಮ್।

ಎಂಬುದನ್ನು ಕುರಿತು—ಗಣದಲ್ಲಿ ಷೋಡಶ ಶಾಖೆಗಳಿವೆ. ಅವುಗಳಲ್ಲಿ ಸದ್ಯಕ್ಕೆ ಮೂರೇ ಗುರುತಿಸಲಾಗಿವೆ: ೧. ಗುರ್ಜರದೇಶದಲ್ಲಿ ಕೌಥುಮಿ ಶಾಖೆ, ೨. **ಕರ್ನಾಟಕದಲ್ಲಿ ಜೈಮಿನಿಶಾಖೆ,** ೩. ಮಹಾರಾಷ್ಟ್ರದಲ್ಲಿ ರಾಣಾಯನಿಶಾಖೆ ಎನ್ನಲಾಗಿದೆ. ಈ ವಿಷಯವು ಪ್ರಾಚೀನ ಚರಿತ್ರಕೋಶದಲ್ಲಿಯೂ ಬರುತ್ತದೆ.[1]

---

[1] Studies in Indian Cultural History, Vol II, p. 160, Chapter 12—'The Antiquity of the Hindu nose-ornament Nattu.'

[2] 'ಪ್ರಾಚೀನ್ ಚರಿತ್ರಕೋಶ್,' ಸಿದ್ಧೇಶ್ವರ್‌ಶಾಸ್ತ್ರಿ ಚಿತ್ರಾವ, ಪು. ೨೦೯.

ಜೈಮಿನಿ ಶಾಖೆಯು ಕರ್ನಾಟಕದಲ್ಲಿ ಪ್ರಚುರವಾಗಿತ್ತು. ಆ ಜೈಮಿನಿ ಶಾಖೆಗೆ ಸಂಬಂಧಿಸಿದ ಯಾವನೊಬ್ಬ ಸಾಮವೇದಿ ಬ್ರಾಹ್ಮಣನು ಸಂಸ್ಕೃತ ಜೈಮಿನಿ ಭಾರತವನ್ನು ಏಕೆ ರಚಿಸಿರಬಾರದು? ಇದು ಸಂಭಾವ್ಯವೆಂದು ನನಗೆ ತೋರುತ್ತದೆ. ಈ ಊಹೆಯನ್ನು ಕ್ರಿ.ಶ. ೧೦೦೦-೧೩೯೪ರ ಮಧ್ಯಕಾಲದ ಕರ್ನಾಟಕದ ಇತಿಹಾಸವು ಬೆಂಬಲಿಸುವುದೇ ಎಂದು ಪರಿಶೀಲಿಸುವುದು ಅಗತ್ಯ. *Mysore Gazetteer,* Vol II Part I ರಲ್ಲಿ

'Parikshit, according to a curse, died from the bite of a serpent, in revenge for which it was that Janamejaya performed his celebrated Sarpayaga or serpent sacrifice. This ceremony according to tradition took place at Hiremagalur in the Kadur District, and three agraharas in the Shimoga District Gouja, Kuppagadde and Begur'

ಎಂದು ಹೇಳಿದೆ. ಹಿರೇಮಗಳೂರಿನಲ್ಲಿ-ಚಿಕ್ಕಮಗಳೂರಿನಲ್ಲಿ-ಇಂದಿಗೂ ಜನಮೇಜಯ ಸರ್ಪಯಾಗಸ್ತಂಭವು ನೋಡಲು ದೊರೆಯುತ್ತದೆ.

ಇದೇ ಮೈಸೂರು ಗೆಜಿಟೆಯರಿನ ಪುಟ ೨೯, ೩೦, ೩೨ರಲ್ಲಿ—ಬಭ್ರುವಾಹನನ ಮಣಿಪುರವೆಂದರೆ ಮೈಸೂರಿನ ಚಾಮರಾಜನಗರ, ರತ್ನಪುರವೆಂದರೆ ಕಡೂರು ಜಿಲ್ಲೆಯಲ್ಲಿಯ ಲಕ್ಕವಳ್ಳಿ (ಸೋಮನಾಥಪುರ), ಕುಂತಳವೆಂದರೆ ಶಿವಮೊಗ್ಗಾ ಜಿಲ್ಲೆಯ ಕುಬಟ್ಟೂರು ಎಂದು ವಿವೇಚಿಸಲಾಗಿದೆ. ಇವುಗಳು ಸಂಸ್ಕೃತ ಜೈಮಿನಿ ಭಾರತವು ಕರ್ನಾಟಕ ಪ್ರಾಂತದಲ್ಲಿಯೇ ನಿರ್ಮಾಣಗೊಂಡಿರಬಹುದು ಎಂಬ ಊಹೆಯನ್ನು ಪುಷ್ಟೀಕರಿಸುವ ಪ್ರಮಾಣಗಳಾಗಿವೆ.

ಕಿ.ಶ. ೧೦೦೦ ದಿಂದ ಕ್ರಿ.ಶ. ೧೩೯೪ರ ವರೆಗಿನ ಕಾಲದಲ್ಲಿ ಹೊಯ್ಸಳರ ಇತಿಹಾಸವು ಮಹತ್ತ್ವದ್ದಾಗಿದೆ. ಆ ಇತಿಹಾಸದ ಪುಟಗಳಲ್ಲಿ ನಾಲ್ಕೈದು ಸಂಗತಿಗಳು ಈ ದೃಷ್ಟಿಯಿಂದ ಮಹತ್ತ್ವದವೆಂದು ನಮ್ಮ ಗಮನನನ್ನು ಸೆಳೆಯುತ್ತವೆ. ಅವುಗಳನ್ನು ಅದೇ ಮೈಸೂರು ಗೆಜಿಟೆಯರ್‌ನಿಂದ(Vol. II, Part I) ಇಲ್ಲಿ ಎತ್ತಿಕೊಡುತ್ತಿದ್ದೇವೆ :

1. 'An inscription dated in 1329 A.D. states that he (Somessvara Hoysala) first fought against the famous Krishna-Kandhara. This is doubtless a reference to the Sevuna king of that name who ruled from 1247 to 1260.' (p. 1386)

[ಕ್ರಿ.ಶ. ೧೨೪೭ ರಿಂದ ೧೨೬೦ರ ಕಾಲಾವಧಿಯಲ್ಲಿ ಆಳಿದ ಸೇವುಣ ರಾಜನಾದ ಕೃಷ್ಣಕಂಧರ ಎಂಬ ಪ್ರಖ್ಯಾತ ರಾಜನೊಡನೆ ಸೋಮೇಶ್ವರ ಹೊಯ್ಸಳನು ಮೊಟ್ಟಮೊದಲು ಯುದ್ಧಮಾಡಿದನು ಎಂದು ಕ್ರಿ.ಶ. ೧೩೨೯ರ ಒಂದು ಶಿಲಾಶಾಸನವು ಹೇಳುತ್ತದೆ.]

2. 'Victory over the Sevunas 1191 A. D. 200,000 infantary armed with thunder bolts and 12000 cavalry conspicous with high saddles and jewelled breast plates.' (p. 1363)

[ಕ್ರಿ.ಶ. ೧೧೯೧ರ ಸೇವುಣವಿಜಯದ ಕಾಲಕ್ಕೆ ೨೦೦,೦೦೦ ದಷ್ಟು ವಜ್ರಾಯುಧ ಧಾರಿ ಪದಾತಿ ಸೈನ್ಯವೂ ೧೨೦೦೦ದಷ್ಟು ಎದೆಗೆ ಕವಚಧರಿಸಿದ ಅಶ್ವಾರೋಹಿದಳವೂ ಇದ್ದಿತು.]

3. 'There is all the same, something pathetic in the fall and the final disappearance of the Hoysalas as a ruling race. A dynasty that counted amongst its members such great names as those of ವಿಷ್ಣುವರ್ಧನ, ಬಲ್ಲಾಳ–II, ನರಸಿಂಹ–II, was unable to stem the Muhammedan tide. The perpetual fight against the Sevunas, proved fatal to both sides; the internal dissensions that arose on the death of Somesvara weakened the resisting capacity of the state as a whole against the foreigner.' (p. 1407)

[ಹೊಯ್ಸಳ ವಂಶವು ಇತಿಹಾಸದಲ್ಲಿ ಹಿಂದೆ ಸರಿದ ಅವನತಿಕಾಲದ ಕಥೆ ದುಃಖ ದಾಯಕವಿದೆ. ಯಾವ ವಂಶದಲ್ಲಿ ವಿಷ್ಣುವರ್ಧನನಂತಹ ರಾಜರು ಆಗಿಹೋದರೋ ಅದ ರಲ್ಲಿ ಮುಂದೆ ಆಳಿಕೆಗೆ ಬಂದ ಎರಡನೆಯ ಬಲ್ಲಾಳ ಮತ್ತು ಎರಡನೆಯ ನರಸಿಂಹ ಇವರು ಮುಸಲ್ಮಾನರ ದಾಳಿಯನ್ನು ಎದುರಿಸಲು ಅಶಕ್ತರಾದರು. ಮತ್ತು ಸೇವುಣರೊಡನೆ ನಡೆದ ಅನೇಕ ಯುದ್ಧಗಳ ಮೂಲಕ ಸೇವುಣ-ಹೊಯ್ಸಳರಿಬ್ಬರೂ ಹಾನಿಯನ್ನು ಅನುಭವಿಸಿದರು. ಸೋಮೇಶ್ವರ ಹೊಯ್ಸಳನ ಮರಣದ ಅನಂತರ ಪರರ ದಾಳಿಗಳನ್ನು ಎದುರಿಸುವ ಸಾಮರ್ಥ್ಯವನ್ನೇ ಕಳೆದುಕೊಂಡರು.]

4. Muhammedan Invasions: 1294, 1306, 1309, 1310, 1312, 1318, 1326 A.D.

[ಕ್ರಿ. ಶ. ೧೨೯೪, ೧೩೦೬, ೧೩೦೯, ೧೩೧೦, ೧೩೧೨, ೧೩೧೮ ಮತ್ತು ೧೩೨೬ರಲ್ಲಿ ಮುಸಲ್ಮಾನರ ಆಕ್ರಮಣ ನಡೆಯಿತು.]

5. Break up of Hoysala Kingdom: 1343 A.D.

(ಕ್ರಿ.ಶ. ೧೩೪೩ಕ್ಕೆ ಹೊಯ್ಸಳರ ಕಥೆ ಮುಗಿದಂತಾಯಿತು.]

ಹೀಗೆ, ಹೊಯ್ಸಳರು, ಸೇವುಣರು, ಪಾಂಡ್ಯರು, ಮತ್ತು ಸಾಳ್ವ ತಿಕ್ಕಮ ಇವರು ಹೇಗೆ ವಿರೋಧಿಸಿದರು ಎಂಬುದನ್ನು ಇನ್ನೂ ಅನೇಕ ಐತಿಹಾಸಿಕ ಪ್ರಮಾಣಗಳಿಂದ ಕಾಣುತ್ತೇವೆ. ಸಾಳ್ವ ತಿಕ್ಕಮನು ಸೇವುಣರೊಂದಿಗೆ ಒಂದಾಗಿ ಎರಡನೆಯ ನರಸಿಂಹ ನನ್ನು ಎದುರಿಸಿದುದನ್ನು ಇತಿಹಾಸವು ಹೇಳುತ್ತದೆ. ಇದರಂತೆ ಪಾಂಡ್ಯರು ಕೆಲವು ಸಲ ಹೊಯ್ಸಳರನ್ನು ಕೂಡಿದ್ದಾರೆ, ಕೆಲವು ಸಲ ವಿರೋಧಿಸಿದ್ದಾರೆ.

ಎರಡನೆಯ ನರಸಿಂಹ ಮತ್ತು ಎರಡನೆಯ ಬಲ್ಲಾಳ ಇವರು ತಮ್ಮ ಆಳಿಕೆಯಲ್ಲಿ ಸೇವುಣರನ್ನೂ ಮುಸಲ್ಮಾನರನ್ನೂ ಚೆನ್ನಾಗಿ ತಡೆಗಟ್ಟಿದ್ದಾರೆ. ಇಬ್ಬರೂ ಶೂರರಾಗಿದ್ದು ಜನರ ಬೆಂಬಲವನ್ನು ಗಳಿಸಿದವರಾಗಿದ್ದಾರೆ. ಇದಕ್ಕೆ ನಿದರ್ಶನವಾಗಿ ಮುಂದೆ ಕಾಣಿಸಿದ ಎರಡು ಸಂಗತಿಗಳು *Mysore Gazetteer*, Volume II, Part I ರಲ್ಲಿ ದೊರೆಯು ತ್ತವೆ.

1. 'During Narasimha's-II reign that Hoysala kingdom enjoyed internal peace and external fame.' (p. 1381)

[ಎರಡನೆಯ ನರಸಿಂಹನ ಆಳಿಕೆಯಲ್ಲಿ ದೇಶದಲ್ಲಿ ಶಾಂತಿಯನ್ನೂ ಪರದೇಶದಲ್ಲಿ ಕೀರ್ತಿಯನ್ನೂ ಹೊಯ್ಸಳವಂಶವು ಗಳಿಸಿತು.]

2. 'During the reign of Ballala-II Jainism and Vaishnavism flourished side by side without the exhibition of any ill-will towards each other.' (p. 1371)

[ಎರಡನೆಯ ಬಲ್ಲಾಳನ ಆಳಿಕೆಯಲ್ಲಿ ಜೈನ ಹಾಗೂ ವೈಷ್ಣವ ಪಂಥಗಳು ಯಾವ ಬಗೆಯ ಮನಸ್ತಾಪಗಳನ್ನೂ ತೋರಿಸದೆ ಜೊತೆಜೊತೆಯಾಗಿ ಊರ್ಜಿತಹೊಂದಿದವು.]

ಆದರೆ ಮುಂದಿನ ಕಾಲದಲ್ಲಿ, ಮೂರನೆಯ ನರಸಿಂಹ ಮತ್ತು ರಾಮನಾಥರ ದಾಯಾದ ಜಗಳದಿಂದಲೂ ಸೇವುಣರ ದಾಳಿಯಿಂದಲೂ ಹೊಯ್ಸಳ ರಾಜ್ಯದ ಅಂತಃ ಶಾಂತಿ ನಷ್ಟವಾಯಿತು. ರಾಮನಾಥನು ಮೂರನೆಯ ನರಸಿಂಹನಮೇಲೆ ಕ್ರಿ.ಶ.೧೨೬೦ ೧೨೬೮,೧೨೮೦,೧೨೮೨,೧೨೮೯,೧೨೯೦ ರಲ್ಲಿ ಸತತ ದಾಳಿ ಮಾಡಿದನು. ಮುಸಲ್ಮಾನರಂತೂ ೧೨೯೪ ರಿಂದ ೧೩೦೬, ೧೩೦೯, ೧೩೧೦, ೧೩೧೨, ೧೩೧೮, ೧೩೨೬ ರಲ್ಲಿ ಮತ್ತೆ ಮತ್ತೆ ದಾಳಿಮಾಡಿದರು. ತಮ್ಮ ಮನೆತನದ ಒಳಜಗಳ ಮತ್ತು ಸೇವುಣರ ವಿರೋಧದ ಮೂಲಕ ಮುಸಲ್ಮಾನರನ್ನು ಬಗ್ಗುಬಡಿಯುವುದು ಹೊಯ್ಸಳರಿಗೆ ಸಾಧ್ಯವಾಗಲಿಲ್ಲ. ಹೊಯ್ಸಳರಾಜ್ಯಲಕ್ಷ್ಮಿ ಮುಸಲ್ಮಾನರ ಪ್ರಭಾವಕ್ಕೆ ತಲೆವಾಗಬೇಕಾಯಿತು. ಅಂತೂ ಮೂರನೆಯ ನರಸಿಂಹ ಮತ್ತು ರಾಮನಾಥರ ದಾಯಾದ ಕಲಹ, ಸೇವುಣ ಪಾಂಡ್ಯ ಸಾಳ್ವ ತಿಕ್ಕನಾದಿ ನೆರೆಹೊರೆಯವರ ವಿರೋಧ, ಮುಸಲ್ಮಾನರ ದಾಳಿ ಈ ಮೂರು ಪ್ರಮುಖಕಾರಣಗಳಿಂದ ಕ್ರಿ.ಶ. ೧೩೪೩ಕ್ಕೆ ಹೊಯ್ಸಳ ಸಾಮ್ರಾಜ್ಯವು ಮುಳುಗಿತು.

ಇನ್ನು ಸಾಹಿತ್ಯದ ಕಡೆಗೆ ನೋಡೋಣ. 'ಕುಮಾರವ್ಯಾಸಭಾರತದ ಸಭಾಪರ್ವದಲ್ಲಿ ಬಂದಿರುವ ಪುರುಷಾಮೃಗದ ಕಥೆ ಜೈಮಿನಿಭಾರತದ್ದಿರಬೇಕು' ಎಂದು ಆ ಪರ್ವವನ್ನು ಸಂಗ್ರಹಿಸಿದ ಸಂಪಾದಕರು ಗ್ರಂಥದ ಅವತರಣಿಕೆಯಲ್ಲಿ (ಪು. III) ಸಂಶಯವನ್ನು ವ್ಯಕ್ತಪಡಿಸಿದ್ದಾರೆ. ಇದನ್ನು ಅನುಮೋದಿಸುವಂತೆ ಒಂದು ತಾಳೆಗರಿಯ ಪ್ರತಿಯಲ್ಲಿ (K. 1304 K.R.I.) ಲಕ್ಷ್ಮೀಶನ ಕನ್ನಡ ಜೈಮಿನಿ ಭಾರತಕ್ಕೆ ಕೊನೆಯ ಸಂಧಿಯಾಗಿ ಜೋಡಿಸಲಾಗಿದೆ, ಈ ಕಥೆಯನ್ನು. ಮೂಲ ಸಂಸ್ಕೃತ ಮಹಾಭಾರತದಲ್ಲಿಲ್ಲದ ಈ ಕಥೆಯನ್ನು ಕುಮಾರವ್ಯಾಸನು ಸಂಸ್ಕೃತ ಜೈಮಿನಿ ಭಾರತದಿಂದ ಸಂಗ್ರಹಿಸಿರಬಹುದು. ಆದುದರಿಂದ ಆತನ ಕಾಲ (ಕ್ರಿ.ಶ. ೧೪೦೦) ಕ್ಕಿಂತ ಹಿಂದೆ ಸಂಸ್ಕೃತ ಜೈಮಿನಿ ಭಾರತವು ಪ್ರಚಾರದಲ್ಲಿದ್ದಿತು ಎಂದು ಹೇಳಬೇಕಾಗುತ್ತದೆ.

ಇನ್ನು ಕ್ರಿ.ಶ. ೧೪೦೦ಕ್ಕಿಂತ ಹಿಂದೆ ಯಾವಾಗ ಸಂಸ್ಕೃತ ಜೈಮಿನಿ ಭಾರತವು ಹುಟ್ಟಿತು ಎಂಬ ವಿಚಾರ. ೧೩ನೆಯ ಶತಮಾನದ ಉತ್ತರಾರ್ಧದಲ್ಲಿ ಮತ್ತು ೧೪ನೆಯ ಶತಮಾನದ ಆದಿಯಲ್ಲಿ ಇದ್ದ ಕರ್ನಾಟಕದ ಪರಿಸ್ಥಿತಿಯನ್ನು ಹೊಯ್ಸಳರ ಇತಿಹಾಸಜ

ಮೇಲಣ ಸಿಂಹಾವಲೋಕನದಿಂದ ನಾವು ಕಂಡುಕೊಂಡಿದ್ದೇವೆ. ಆ ಕಾಲವು ನಾಡಿನ ಅತ್ಯಂತ ದುರ್ದೈವದ ಕಾಲ, ರಾಜಕೀಯವಾಗಿ ಸಾಮಾಜಿಕವಾಗಿ ಅಶಾಂತಿಮಯವಾದ ಕಾಲ, ಆತ್ಮಾವನತಿಯ ಕಾಲ. ಈ ಅನಿಷ್ಟಪರಿಸ್ಥಿತಿಯಲ್ಲಿ ಜನತೆಗೆ ಭಾವಸಮನ್ವಯದ ಮಂತ್ರಬೋಧೆಯ ಅಗತ್ಯವಿತ್ತು. ಕಲಹಗಳಿಂದ ಕಲಕಿಹೋಗಿರುವ ದೇಶದ ಜೀವನ ಚಿತ್ರವನ್ನು ಕಂಡ ಕವಿಯು ಸಂಸ್ಕೃತ ಜೈಮಿನಿ ಭಾರತದ ಮೂಲಕ ತಾರಣಮಂತ್ರವನ್ನು ಬೋಧಿಸಿದನೆಂದು ಊಹಿಸಿದರೆ ತಪ್ಪಾಗಲಿಕ್ಕಿಲ್ಲ. ಈ ಊಹೆಯನ್ನು ನಾವು ಈ ರೀತಿ ಸಮರ್ಥಿಸಿಕೊಳ್ಳುತ್ತೇವೆ.

ಜೈಮಿನಿ ಭಾರತದಲ್ಲಿ ಸಮನ್ವಯಮಂತ್ರಬೋಧೆ ಏನಿದೆ :

'**ಯಾದವ** ಸೇವುಣರೆ, ನೀವು ನಮ್ಮ ರಾಜರಾದ ಹೊಯ್ಸಳರೊಂದಿಗೆ ಒಂದಾಗಿ ಸಾಗಿದರೆ, ಪರರು ನಮ್ಮನ್ನು ವಿರೋಧಿಸುವುದು ಸಾಧ್ಯವೆ? ಗೆಲ್ಲುವುದು ಶಕ್ಯವೆ? ಯಾದವ ಕೃಷ್ಣ(ಕಂಧರ)ನು ಪಾಂಡವರೊಂದಿಗೆ ಒಂದಾಗಿ ನಿಂತಾಗ ಅವರನ್ನು ಯಾರಾದರೂ ಗೆದ್ದರೆ?'

'**ಸಾಳ್ವ** ತಿಕ್ಕಮಾದಿಗಳೇ **ಸಾಳ್ವ**ನಂತೆ ವೈಷ್ಣವವಿರೋಧವನ್ನು ಮಾಡಬೇಡಿರಿ. ಅನುಸಾಳ್ವರಾಗಿರಿ; ವಿಷ್ಣುಭಕ್ತರಾಗಿರಿ.'

'ಮೂರನೆಯ ನರಸಿಂಹ ರಾಮನಾಥರೇ, ದೇಹ ಭಿನ್ನ ಜೀವ ಏಕ ಎಂಬಂತಹ ಸ್ನೇಹದ ಮೂರ್ತಿಗಳಾಗಿರಿ—ಅರ್ಜುನ ವೃಷಕೇತುಗಳಂತೆ ಕೂಡಿ ಬಾಳಿರಿ; ಯಾದವ ಸೇವುಣ (ಕೃಷ್ಣ)ರನ್ನು ಹೊಡೆದು ಕೆಡಹುವ ಬುದ್ಧಿಯನ್ನು ಬಿಡಿರಿ,—ಅವರನ್ನು ನಿಮ್ಮೊಡನೆ ಸಹಾಯಕರನ್ನಾಗಿ ಕೂಡಿಸಿಕೊಳ್ಳಿರಿ; ಸಾಳ್ವತಿಕ್ಕಮಾದಿಗಳನ್ನು ಅನುಸಾಳ್ವನಂತೆ ನಿಮ್ಮವರನ್ನಾಗಿ ಮಾಡಿಕೊಳ್ಳಿರಿ. ಎಂದರೆ ನಿಮ್ಮ ಬಲ ಅಜೇಯವಾಗುವುದು.'

'ನಾವು ನಮ್ಮ ನಮ್ಮ ನೆರೆಹೊರೆಯವರೊಂದಿಗೆ ಅಭೇದ್ಯಐಕ್ಯದಿಂದ ಬಾಳುತ್ತಿದ್ದರೆ, ನಮ್ಮ ಮೇಲೆ, ಹೊಯ್ಸಳರ ಮೇಲೆ ಕೈಮಾಡುವ ಎದೆ ಯಾರಿಗಾದೀತು! ಮುಸಲ್ಮಾನರು ನಮ್ಮ ಗೊಡವೆಗೆ ಬಂದಾರೆ!'

'ಆದುದರಿಂದ, ಯೌವನಾಶ್ವ-ಹಂಸಧ್ವಜ-ನೀಲಧ್ವಜ-ಚಂದ್ರಹಾಸಾದಿ ರಾಜರಂತೆ, "ಭಕ್ತ ಪಂಥ ಒಂದು" ಎಂಬ ಉಚ್ಚಾದರ್ಶದಿಂದ ಒಂದಾಗಿರಿ. ಪಾಂಡವರಂತೆ ನೀವೂ (ಹೊಯ್ಸಳರೂ) ಇತರ ರಾಜಬಲವನ್ನು ಜಗಳದಿಂದಲ್ಲ ಸಹಕಾರ ಬುದ್ಧಿಯಿಂದ ಒಳಪಡಿಸಿಕೊಳ್ಳಿರಿ.'

ಇದೇ ಸಂಸ್ಕೃತ ಜೈಮಿನಿ ಭಾರತದಲ್ಲಿ ಅಡಕವಾದ ಗುಪ್ತಮಂತ್ರವಾಗಿದೆ. ಈ ಭಾವಸಮನ್ವಯ ಮಂತ್ರವನ್ನೇ ಜಗದ್ಗುರು ವಿದ್ಯಾರಣ್ಯರು ಬೋಧಿಸಿ, ವಿಜಯನಗರ ರಾಜ್ಯವನ್ನು ಕಟ್ಟಿ-ಕೃಷ್ಣನು ಪಾಂಡವಸ್ಥಾಪನಾಚಾರ್ಯನೆನಿಸಿಕೊಂಡಂತೆ-'ಕರ್ನಾಟಕ ಸಿಂಹಾಸನಸ್ಥಾಪನಾಚಾರ್ಯ'ರೆಂದೆನಿಸಿಕೊಂಡರು ಮುಂದೆ.

ಈ ಮಂತ್ರವನ್ನು ಬೋಧಿಸುವುದಕ್ಕೆ ಸಂಸ್ಕೃತ-ಜೈಮಿನಿಭಾರತ-ಪುರಾಣಕಾವ್ಯದಲ್ಲಿ

ಸೇವುಣ, ಸಾಳ್ವ, ಹೊಯ್ಸಳನರಸಿಂಹ, ಬಲ್ಲಾಳ ಈ ಯಾವ ಹೆಸರನ್ನೂ ವಾಚ್ಯವಾಗಿ ಬಳಸದೆ, ಶ್ರೀಕೃಷ್ಣ, ಅರ್ಜುನ, ವೃಷಕೇತು, ಅನುಸಾಲ್ವ ಇತ್ಯಾದಿ ಕಥೆಗಳನ್ನು ದೃಷ್ಟಾಂತದ ಕಥೆಗಳಂತೆ ಉಪಯೋಗಿಸಿದ್ದಾನೆ ಕವಿ ಎಂದು ತೋರುತ್ತದೆ. ಪ್ರಸ್ತುತ ಪರಿಸ್ಥಿತಿಯನ್ನೇ ಪ್ರತಿಬಿಂಬಿಸುವ, ಸುಖ-ಶಾಂತಿಯ ದಾರಿಯನ್ನು ತೋರಿಸುವ ಈ ಕಾವ್ಯವು ಒಮ್ಮೆಲೆ ಜನಪ್ರಿಯವಾಗಿರಲು ಸಾಕು. ಈ ಕಾವ್ಯವನ್ನು ಕರ್ನಾಟಕ ಇತಿಹಾಸದ ಹಿನ್ನೆಲೆಯಲ್ಲಿ ಮೂಡಿದ ಕಾವ್ಯವೆಂದು ಕರೆಯಬಹುದು.

ಹೀಗೆಂದರೆ, ಸಂಸ್ಕೃತ ಜೈಮಿನಿ ಭಾರತದಲ್ಲಿಯ ಎಲ್ಲ ಕಥಾನಕಗಳಿಗೂ ಕರ್ನಾಟಕದ ಇತಿಹಾಸದ ಸಂಬಂಧ ಜೋಡಿಸಲಾಗುತ್ತದೆ ಎಂದಲ್ಲ. ಆದರೆ,

೧. ಸಂಸ್ಕೃತ ಜೈಮಿನಿ ಭಾರತದ ಯಜ್ಞಾಶ್ವವು ಪರಿಭ್ರಮಣ ಮಾಡುವ ಮಣಿಪುರ (ಮೈಸೂರು ಚಾಮರಾಜನಗರ), ರತ್ನಪುರ (ಲಕ್ಕವಳ್ಳಿ), ಕುಂತಳ (ಕುಬಟೂರು) ಇವು ಕರ್ನಾಟಕ ಪ್ರಾಂತದಲ್ಲಿವೆ.
೨. ಜೈಮಿನಿ ಎಂಬ ಸಾಮವೇದಿ ಬ್ರಾಹ್ಮಣರ ಶಾಖೆ ಕರ್ನಾಟಕದಲ್ಲಿ ಇತ್ತು.
೩. ಹೊಯ್ಸಳ, ಸೇವುಣ, ಸಾಳ್ವ, ಪಾಂಡ್ಯರ ಇತಿಹಾಸವನ್ನು ಸಂ.ಜೈ. ಭಾರತವು ಪ್ರತಿಬಿಂಬಿಸುತ್ತದೆ.
೪. ಚಿಕ್ಕಮಗಳೂರಿನಲ್ಲಿ ಜನಮೇಜಯನ ಸರ್ಪಯಾಗಸ್ತಂಭವಿರುವುದನ್ನು ತೋರಿಸಲಾಗುತ್ತದೆ.
೫. ಸರ್ಪಯಾಗವು ನಡೆದ ಗೌಜ, ಕುಪ್ಪಗಡ್ಡೆ ಮತ್ತು ಬೇಗೂರು ಇವು ಶಿವಮೊಗ್ಗಾ ಜಿಲ್ಲೆಯಲ್ಲಿವೆ.

ಈ ಐದು ಕಾರಣಗಳಿಂದ ಸಂಸ್ಕೃತ ಜೈಮಿನಿ ಭಾರತಕ್ಕೂ ಕರ್ನಾಟಕಕ್ಕೂ ನಿಶ್ಚಯವಾಗಿ ಸಂಬಂಧವಿದೆ ಎಂದು ತೋರುತ್ತದೆ.

ಮೇಲೆ ವಿವರಿಸಿದ ಎಲ್ಲ ಆಧಾರಗಳ ಮೇಲಿಂದ ಸಂಸ್ಕೃತ ಜೈಮಿನಿ ಭಾರತದ ರಚನಾಕಾಲವು ಸ್ಥೂಲವಾಗಿ ಕ್ರಿ.ಶ. ೧೦೦೦–೧೩೫೦ರ ಅಥವಾ ಇದಕ್ಕಿಂತ ಸೂಕ್ಷ್ಮವಾಗಿ ಕ್ರಿ.ಶ. ೧೨೪೭–೧೨೫೩ ಇವುಗಳ ನಡುವಿನ ಕಾಲವಿರಬಹುದು ಎಂದು ಊಹಿಸಿದರೆ ತಪ್ಪಾಗಲಾರದು.

### ೩.ii) ಕನ್ನಡ ಜೈಮಿನಿ ಭಾರತದ ರಚನಾಕಾಲ[1]

ಕನ್ನಡ ಜೈಮಿನಿ ಭಾರತ ಯಾವಾಗ ರಚಿತವಾಯಿತು ಎಂಬುದನ್ನು ನಿರ್ಧರಿಸುವುದು ತೊಡಕಿನವಿಷಯವಾಗಿದೆ. ಕವಿ ಕಾವ್ಯದಲ್ಲಿಯೇ ಅದರ ನಿರ್ಮಿತಿಯ ಕಾಲವನ್ನು ಹೇಳಿಕೊಂಡಿದ್ದರೆ ನಿರ್ವಿವಾದವೇ ಆಗುತ್ತಿತ್ತು. ಆದರೆ ಹೇಳಿಕೊಂಡಿಲ್ಲ. ಅಲ್ಲದೆ ಸಾಧಕ ಪ್ರಮಾಣಗಳ ಇನ್ನೆರಡು ಕೊರತೆಗಳೆಂದರೆ, ಲಕ್ಷ್ಮೀಶನು ತನ್ನ ಜೀವನಪರಿಚಯವನ್ನು ತೀರ ಚುಟುಕದಲ್ಲಿ ಹೇಳಿಕೊಂಡಿದ್ದಾನೆ; ಪೂರ್ವಕವಿಗಳನ್ನು ಒಟ್ಟಾಗಿ ಒಂದು ಮಾತಿ

[1] ಲಕ್ಷ್ಮೀಶ—'ಕವಿ, ಕಾಲ, ಸನ್ನಿವೇಶ'—ವಾಮನ ಬೇಂದ್ರೆ–ಐ.ಬಿ.ಎಚ್. ಪ್ರಕಾಶನ.

ನಲ್ಲಿ ಸ್ಮರಿಸಿದ್ದಾನೆ, ಮೆಚ್ಚಿನ ಕೆಲವರ ಹೆಸರನ್ನಾದರೂ ಎತ್ತಿಕೊಟ್ಟಿರುವುದಿಲ್ಲ. ಆದುದರಿಂದ ಕಾಲಸಾಗರದ ಮಥನದಿಂದಲೇ ಅದನ್ನು ಹೊರಡಿಸಿ ಊಹೆ-ತರ್ಕಗಳಿಂದ ಅರಿತುಕೊಳ್ಳಬೇಕಾಗಿದೆ.

'ಕವಿ ಲಕ್ಷ್ಮೀಶನು ೧೩ ನೆಯ ಶತಮಾನದ ಆದಿಯಷ್ಟು ಪ್ರಾಚೀನನು' ಎಂದು ಎಚ್. ಎಚ್. ವಿಲ್ಸನ್ ಅವರು ಅಭಿಪ್ರಾಯಪಟ್ಟರೆ, ಕಿಟ್ಟೆಲ್ ಅವರು ೧೭೬೦ರಷ್ಟು ಅರ್ವಾಚೀನನೆಂದು ಹೇಳುತ್ತಾರೆ. ಇನ್ನು ಅನೇಕ ವಿದ್ವಾಂಸರ ಅಭಿಪ್ರಾಯಗಳು, ಕವಿಯನ್ನು ಈ ಎರಡು ಗಡುವಿನ ಮಧ್ಯೆ ಬೇರೆ ಬೇರೆ ಕಾಲಗಳಲ್ಲಿ ನಿಲ್ಲಿಸುತ್ತವೆ.

೧೩ನೆಯ ಶತಮಾನದ ಆದಿಯವನೇ ಲಕ್ಷ್ಮೀಶನಾಗಿದ್ದರೆ, ಇವನ ಕಾವ್ಯದ ಮೇಲೆ ಮೊದಲಿನ ಕಾವ್ಯಗಳ ಪ್ರಭಾವವಾಗಲಿ, ಇವನ ಕಾವ್ಯದ ಪ್ರಭಾವವು ಆಮೇಲಣ ಕಾವ್ಯಗಳ ಮೇಲಾಗಲಿ ಆದುದು ಕಂಡುಬರಬೇಕಾಗಿತ್ತು. ಆದರೆ ಹಾಗೆ ತೋರಿಸಲು ಬರುವಂತಿಲ್ಲ. ಷಟ್ಪದಿ ಸಂಪ್ರದಾಯದ ಆದಿಕವಿಯೆನಿಸಿದ ರಾಘವಾಂಕನಿಗಿಂತ ಇವನು ಮೊದಲಿನವನಾಗುವುದಂತೂ ಅಸಂಭವ.

ಮಂಗರಸ(ಮಂಗರಾಜ) ಕವಿ (ಕ್ರಿ.ಶ.ಸು. ೧೩೯೮) ರಚಿಸಿದ ಅಭಿನವಾಭಿಧಾನ ಕೋಶವನ್ನು ಕವಿ ಲಕ್ಷ್ಮೀಶನು ನೋಡಿರಬಹುದು ಎಂದು ಕೆಲವು ಸಾಮ್ಯಗಳಿಂದ ಎನಿಸುತ್ತದೆ. ಅದರಲ್ಲಿಯ ನಾನಾರ್ಥಕಾಂಡವನ್ನು ಮೆಚ್ಚಿದ ಲಕ್ಷ್ಮೀಶನಿಗೆ ಶ್ಲೇಷಚಮತ್ಕೃತಿಯ ಸ್ಫೂರ್ತಿಯುಂಟಾಗಿರಬಹುದು. ಉದಾ :

ಅಭಿನವಾಭಿಧಾನ ಕೋಶ, ಸ್ವರ್ಗಕಾಂಡ, ಪು. ೨—

ಶಾರದೆ ವಿನಾಯಕಂ ನೇರದೆ ವಿಲಾಸಮುಂ
ತೀರದೆ ಕುಶಬ್ದಮುಂ ತಾರದೆ ಪೆರರ್ಗಳಂ
ಪಾರದೆ ಜಡಪ್ರಾಸ ಸೇರದೆ ಸದರ್ಥಕ್ಕೆ ಪೋರದೇ ಶಬ್ದಬಗೆಯಾ ॥

ಕ. ಜೈ. ಭಾ., ೧.೫—

ಪಾರದೆ ಪರಾರ್ಥಮುಂ ವರಯತಿಗೆ ಭಂಗಮುಂ
ತಾರದೆ ನಿಜಾನ್ವಯಕ್ರಿಯೆಗಳ್ಗೆ ದೂಷಣಂ
ಬಾರದೆ ವಿಶೇಷಗುಣಗಣಕಲಾಗೌರವಂ ತೀರದೆ ದುರುಕ್ತಿಗಳ್ಗೆ ॥

ಅಭಿನವಾಭಿಧಾನಕೋಶ, ಸ್ವ. ಕಾ. ಪ. ೭—

ಅಱಿವರಿಗೆ ಮೆಱೆವನವನೇತಱಿವನೆಂದು ಮಿಗೆ
ಜಱೆವರಿಗೆ ಬೆಱೆವನೇ ಜಾಣರಿಗೆ ಸುಕವಿಗಳಿ
ಗುಱುವ ನರಗಬ್ಬಿಗರ ಕುಕವಿಗಳ ಸಂಗಮುಂ ಸಂತತಂ ತೊಱೆದು ಮೆಱೆವಾ
ಅಱಿತ ಸೋಮೇಶನೊಲಿದಿತ್ತನಾಹತಮತಿಯ
ಕುಱುಹಿನಭಿನವ ಮಂಗನುಸುರ್ದ ಸತ್ಕೃತಿಯನಿದ
ಜಱೆವರಾರ್ ಮಱೆವರಾರ್ ಮಿಕ್ಕರೊಳ್ ಮನುಜಶಿಕ್ಷಾಪೇಕ್ಷೆಯಿಂದಾದನೇ ॥

ಕ. ಜೈ. ಭಾ., ೩೧.೭೫—

ಕಾವರಾರ್ ಕೊಲ್ವರಾರ್ ಅಳಿವರಾರ್ ಉಳಿವರಾರ್
ಭಾವಿಪೊಡೆ ವಿಷ್ಣುಮಾಯಾಮಯವಿದೆಂದಱಿದು
ನೀವೆಲ್ಲರುಂ ಕೃಷ್ಣಭಜನೆಗೈದಪುದೆಂದು ಸಾರಿದಂ ಬೇಡಿಕೊಂಡು ॥

ಈ ಪದ್ಯಗಳಲ್ಲಿರುವ ಹೋಲಿಕೆಗಳನ್ನು ಗಮನಿಸಬೇಕು. ಅಲ್ಲದೆ ಮಂಗರಸನು ತನ್ನ ಕಾವ್ಯದ ಪಾತಾಳಕಾಂಡದ ೬–೭ನೆಯ ಪದ್ಯಗಳಲ್ಲಿ ಮೀನುಗಳ ಹೆಸರುಗಳನ್ನು ಹೇಳುತ್ತಾನೆ :

ಮೀನಂ, ತಿಮಿ, ಶಫರ, ಹೆಮ್ಮೀನ, ಕಿಱುಮೀನ
ಮಿಕ್ಕಿಹ ತಿಮಿಂಗಿಳಂ ತಿಮಿಗಳಾದಿಯೊಳದೊಂ
ದಕ್ಕೊಂದು ಹಿರಿದಪ್ಪ ಮೀನಕ್ಕು ಶಕುಳಮತಿ
ಚಿಕ್ಕಮೀನಕ್ಕು ಕ್ಷುದ್ರಾಂಡಮೆನೆ ಮಱಿಮೀನ ಮೊತ್ತಕ್ಕೆ ನಾಮಂ

ಈ ಪದ್ಯದ ಪ್ರಭಾವದಿಂದಲೇ ಕ. ಜೈ. ಭಾರತದ ೬ನೆಯ ಸಂಧಿಯಲ್ಲಿ ಮೀನುಗಳ ವರ್ಣನೆ ರೂಪುಗೊಂಡಿರಬಹುದೆ ?

ಸುಳಿದೊಂದು ಮೀನ್ನುಂಗೆ ನುಂಗಿತಾಮೀನನಾ
ಗಳೆ ನುಂಗಿತೊಂದು ಮೀನಾಮೀನ ನುಂಗಿದುದು
ಬಳಿಕೊಂದು ಮೀನದಂ ಮತ್ತೊಂದು ಮೀನ್ನುಂಗಿತಾಮೀನ ನುಂಗಿತೊಂದು

ಇವೆರಡರ ಹೋಲಿಕೆಗೆ ಕಾರಣ ಮಂಗರಸನ ಪ್ರಭಾವವೇ ಎಂದು ಖಚಿತವಾಗಿ ಹೇಳಲಿಕ್ಕಾಗುವುದಿಲ್ಲ. ಮೀನುಗಳ ವಿಷಯ ಸಂಸ್ಕೃತ ಜೈ. ಭಾ.ದಲ್ಲಿಯೂ ಇದೆ. ಅದನ್ನನುಸರಿಸಿ ಕವಿ ಲಕ್ಷ್ಮೀಶನು ಸ್ವಯಂಪ್ರತಿಭೆಯಿಂದ ಈ ವರ್ಣನೆ ಮಾಡಿರುವುದು ಸಾಧ್ಯವಿದೆ. ಮೊದಲಿನೆರಡು ಪದ್ಯಗಳ ಹೋಲಿಕೆಯಲ್ಲಿ ಮಂಗರಸನ ಶಬ್ದಪ್ರಯೋಗಗಳ ಪ್ರಭಾವ ಸ್ಪಷ್ಟವಾಗಿರುವುದರಿಂದ ಲಕ್ಷ್ಮೀಶನು ಅವನಿಗಿಂತ, ಎಂದರೆ ಕ್ರಿ. ಶ. ೧೫೫೮ಕ್ಕಿಂತ ಈಚೆಯವನು ಎಂದು ತೋರುತ್ತದೆ.

ಕುಮಾರವ್ಯಾಸನು, ತನ್ನ ಭಾರತದಲ್ಲಿ,

ಘನರಥದ ಚೀತ್ಕಾರ ಗಜಱುವ
ಧನುವಿನಬ್ಬರ ಹಯದ ಹೇಷಾ
ನಿನದ ರಥಿಕರ ಬೊಬ್ಬೆ ಸೂತರ ಬಹಳ ಚಪ್ಪರಣೆ
ಅನುವರದೊಳೊದಗಿತ್ತು ವಿಲಯದ
ವಿನುತ ಮೇಘಧ್ವಾನವನು ಸಂ
ಜನಿಸಿತೆನೆ ಹಳಚಿದುವು ರಥರಥವೆರಡು ಸೇನೆಯಲಿ ॥ (ಭೀಷ್ಮ. ೪.೯೬)

ಎಂದು ಸಮರವನ್ನು ವರ್ಣಿಸುತ್ತಾನೆ. ಇದರ ಪಡಿನುಡಿಯೆಂಬಂತೆ ಲಕ್ಷ್ಮೀಶನು,

ಪಟಹ ನಿಸ್ಸಾಳ ತಮ್ಮಟ ಭೇರಿಗಳ ಸಮು
ತ್ಕಟ ನಾದಮುಗ್ರಗಜಘಟೆಯ ಘಂಟಾರವಂ
ಚಟುಲ ವಾಜಿಗಳ ಖುರಪುಟದ ರಭಸಂ ಪರಿವಸುಟಿಯ ರಥಚಕ್ರಧ್ವನಿ

ಲಟಕಟಿಪ ಸಮರ ಲಂಪಟರ ಭುಜಗಳ ಹೊಯ್ಲ
ದಟರ ಚಾಪಸ್ವನಂ ಪಟುಭಟರ ಬೊಬ್ಬೆಯಾ
ರ್ಭಟಿಗಳೊಂದಾಗಿ ಸಂಘಟಿಸಿತೀಬ್ರಹ್ಮಾಂಡಘಟಮಿಂದೊಡೆಯದಿರದೆನೆ ॥
(ಕ.ಜೈ.ಭಾ. ೪.೧೮)

ಸಮರಭೂಮಿಯ ಧ್ವನಿಕೋಲಾಹಲವನ್ನು ಚಿತ್ರಿಸಿ ಬಣ್ಣಿಸುತ್ತಾನೆ. ಈ ಬಗೆಯ ಸಾದೃಶ್ಯಪದ್ಯಗಳು ಕುಮಾರವ್ಯಾಸ-ಲಕ್ಷ್ಮೀಶರಲ್ಲಿ ಸಾಕಷ್ಟು ಇವೆ. ಇವುಗಳಿಂದ ಲಕ್ಷ್ಮೀಶನು ಕನ್ನಡದ ನುಡಿಗಳ ಬಗೆಯರಿದವನೆಂದು ಮೆಚ್ಚಿಕೊಂಡಿದ್ದ ಮುನ್ನಿನ ಕವಿಗಳಲ್ಲಿ ಕುಮಾರವ್ಯಾಸನೂ ಒಬ್ಬನಾಗಿದ್ದನೆಂದೂ ಅವನ ಬೆಡಗಿನ ಪ್ರಭಾವಕ್ಕೆ ಒಲಿದಿದ್ದನೆಂದೂ ಅರ್ಥವಾಗುತ್ತದೆ. ಆದುದರಿಂದ ಕುಮಾರವ್ಯಾಸನ (ಕ್ರಿ.ಶ. ೧೪೦೦-೧೪೩೦) ಭಾರತಕ್ಕಿಂತ ಲಕ್ಷ್ಮೀಶನ ಜೈಮಿನಿ ಭಾರತವು ಈಚಿನದೆಂದು ಅನುಮಾನಿಸಿ ಹೇಳಬಹುದು.

ಕಿಟ್ಟೆಲ್ ಅವರು ಎಂದಂತೆ, ಕನ್ನಡ ಜೈಮಿನಿ ಭಾರತದ ಇತ್ತೀಚೆಯ ಕೊನೆಯ ಗಡುವು ಕ್ರಿ. ಶ. ೧೭೬೦ ಅಲ್ಲ ಎಂಬುದನ್ನು ದ. ರಾ. ಬೇಂದ್ರೆಯವರು ಗೋಪ ಕವಿಯ ಸಾಕ್ಷ್ಯದಿಂದ ತೋರಿಸಿಕೊಟ್ಟಿದ್ದಾರೆ. ಈ ಗೋಪ ಕವಿ ತನ್ನ ನಂದಿಮಾಹಾತ್ಮ್ಯದ ಪೀಠಿಕಾ ಸಂಧಿಯಲ್ಲಿ (ಪ. ೧೫) ಸ್ಮರಿಸುವ ಪೂರ್ವಕವಿ ಮಾಲಿಕೆಯಲ್ಲಿ ಲಕ್ಷ್ಮೀಶನಿದ್ದಾನೆ—'ಚತುರಾಸ್ಯ, ರುದ್ರ, ಲಕ್ಷ್ಮೀಪತಿ, ಅನಂತ'ರನ್ನು ಅವನು ಉಲ್ಲೇಖಿಸುತ್ತಾನೆ. ಆದುದರಿಂದ ಲಕ್ಷ್ಮೀಶನು ಗೋಪಕವಿಗಿಂತ ಹಿಂದಿನವನು. ಈ ಗೋಪಕವಿ ಚಿತ್ರಭಾರತವನ್ನು ರಚಿಸಿದ್ದು, ಅದರ ರಚನಾಕಾಲದ ಉಲ್ಲೇಖವುಳ್ಳ ಕೆಳಗಣ ಪದ್ಯವನ್ನು ದ. ರಾ. ಬೇಂದ್ರೆಯವರು ಕೊಟ್ಟಿದ್ದಾರೆ :

ವಿನುತ ವಿಷ್ಣುನಾಮ ಸಂವತ್ಸರದ ದಕ್ಷಿಣಾ
ಯನದ ಹೇಮಂತರಿತು ಮಾರ್ಗಶಿರ ಮಾಸದೊ
ಳ್ಮಿನುಗುತಿಪ ಶುಕ್ಲಪಕ್ಷದ ಪಂಚಮಿಯಲು ವಿಧುವಾರದಾಪಿಷ್ಣುತಾವೆ
ಜನಿತ ಹರುಷಣನಾಮಯೋಗ ಬಾಲವಕರಣ
ಘನನಿಲಯ ದಿವದ ಭೂತತ್ರಿತಯದಲಿ ನೂ
ತನಮೆನಲ್ಕಾವ್ಯಮಂ ಪೇಳ್ದನಾ ಗೋಪಕವಿ ಸುಕವಿ ಕಂಠಾಭರಣನು

ಇದರ ಮೇಲಿಂದ ಗೋಪಕವಿಯ ಚಿತ್ರಭಾರತವು ಕ್ರಿ. ಶ. ೧೫೮೧ರಲ್ಲಿ ಹುಟ್ಟಿತೆಂದು ಅಭಿಪ್ರಾಯಪಟ್ಟಿದ್ದಾರೆ. ಗೋವಿಂದ ಪೈಗಳು ಇದನ್ನು ಚರ್ಚಿಸಿ, ಇದರ ರಚನಾಕಾಲ ೧೫೮೨ ಎಂದಿದ್ದಾರೆ. ಆದುದರಿಂದ ಲಕ್ಷ್ಮೀಶನು ಕ್ರಿ. ಶ. ೧೫೮೨ರ ಈಚೆಯವನಂತೂ ಆಗಲಾರನು.

ವಿರೂಪಾಕ್ಷಪಂಡಿತನ (ಕ್ರಿ. ಶ. ೧೫೮೪-೮೫) ಚೆನ್ನಬಸವಪುರಾಣದ ಅನಂತರ ಕನ್ನಡ ಜೈಮಿನಿ ಭಾರತದ ರಚನೆಯಾಗಿರಬೇಕು ಎಂಬ ಒಂದು ವಾದವಿದೆ; ಜೈಮಿನಿ ಭಾರತದ ರಚನೆಯನ್ನನುಸರಿಸಿ ಚೆನ್ನಬಸವ ಪುರಾಣದ ರಚನೆಯಿದೆ ಎಂಬ ಇನ್ನೊಂದು ವಾದವಿದೆ. ಕವಿಗಳ ಕಾಲವು ನಿಶ್ಚಿತವಾಗಿ ಗೊತ್ತಿಲ್ಲದಾಗ ಈ ಬಗೆಯ ಭಿನ್ನಾಭಿಪ್ರಾಯಗಳುಂಟಾಗುವುದು ಸ್ವಾಭಾವಿಕ.

ಜೈಮಿನಿ ಭಾರತ ಕಥಾಸಂಗ್ರಹ[1]ದ ಪೀಠಿಕೆ (ಪು. ೨೨-೨೩)ಯಲ್ಲಿ ರಾ. ರಾಮ ರಾವ್ ಅವರು ಎರಡು ದಂತಕಥೆಗಳನ್ನು ಉಲ್ಲೇಖಿಸಿದ್ದಾರೆ :

೧. ತನ್ನ 'ಜಗನ್ನಾಥವಿಜಯ'ವು ವೀರಶೈವಕವಿ ಷಡಕ್ಷರಿಯ 'ರಾಜಶೇಖರ ವಿಳಾಸ'ಕ್ಕಿಂತ ಕೀಳೆಂದು ರಾಜಾಸ್ಥಾನದಲ್ಲಿ ನಿರ್ಣಯಿಸಲ್ಪಟ್ಟುದರಿಂದ ರುದ್ರಭಟ್ಟ ಕವಿ ಖಿನ್ನನಾಗಿರಲು, ಅವನ ಸ್ನೇಹಿತನಾದ ಲಕ್ಷ್ಮೀಶನೆಂಬ ಬ್ರಾಹ್ಮಣನು ಹರಿಕಥೆಯ ನ್ನೊಳಗೊಂಡ ರಸಭರಿತವಾದ ಜೈಮಿನಿ ಭಾರತವನ್ನು ರಚಿಸಿದನು.

೨. ಮಠದಲ್ಲಿ ವಾಸವಾಗಿದ್ದ ವಿರೂಪಾಕ್ಷಪಂಡಿತನು, ಲಿಂಗಾರ್ಚನೆಗೆ ಹೂ ತರುವುದಕ್ಕೆ ವಿಲಂಬಮಾಡಿದ ಶಿಷ್ಯನನ್ನು ಕಾರಣವನ್ನು ವಿಚಾರಿಸಿದನು. ಅದಕ್ಕೆ ಶಿಷ್ಯನು ಮಾರ್ಗದಲ್ಲಿ ಒಂದು ಕಡೆ ಜೈಮಿನಿ ಭಾರತವನ್ನು ಓದುತ್ತಿದ್ದರೆಂದೂ ಅದರ ಸ್ವಾರಸ್ಯಕ್ಕೆ ಮನಸೋತು ಕೇಳುತ್ತ ನಿಂತಿದ್ದೆನೆಂದೂ ಅದಕ್ಕೆ ತಡವಾಯಿತೆಂದೂ ಶಿಷ್ಯನು ಉತ್ತರ ವಿತ್ತನು. ಆಗ ವಿರೂಪಾಕ್ಷಪಂಡಿತನು ಅದಕ್ಕಿಂತಲೂ ಶ್ರೇಷ್ಠವಾದ ಕಾವ್ಯನಿರ್ಮಾಣಕ್ಕೆ ಉಜ್ಜುಗಿಸಿ ಚೆನ್ನಬಸವಪುರಾಣವನ್ನು ಬರೆದನು.[2]

ಇವೆರಡೂ ಯಾವ ಕಾವ್ಯವು ಸ್ವಾರಸ್ಯವಾದುದು ಎಂಬ ಬಗೆಗೆ ಜನರಲ್ಲಿ ಹುಟ್ಟಿ ಕೊಂಡ ಐತಿಹ್ಯಗಳು. ಇಂತಹವು ಯಾವನೊಬ್ಬ ಕವಿಯ ಕಾಲದ ವಿಷಯದಲ್ಲಿ ಸಾಹಿತ್ಯಿಕ ಸಾಕ್ಷ್ಯಗಳು ದೊರೆಯದಿದ್ದಾಗ ಊಹೆಗೆ ಸಹಾಯಕಗಳಾಗಬಹುದೇ ಹೊರತು ಸಾಹಿತ್ಯಿಕ ಸಾಕ್ಷ್ಯಗಳ ಮುಂದೆ ದೃಢವಾಗಿ ನಿಲ್ಲಲಾರವು. ೧೬ನೆಯ ಶತ ಮಾನದ ಕೊನೆಯಭಾಗದ ಗೋಪಕವಿ ಲಕ್ಷ್ಮೀಶನನ್ನು ಸ್ಮರಿಸುವುದರಿಂದ, ೧೭ನೆಯ ಶತಮಾನದ ಉತ್ತರಾರ್ಧದ 'ರಾಜಶೇಖರ ವಿಳಾಸ'ಕ್ಕಿಂತ ಜೈಮಿನಿ ಭಾರತ ಈಚೆಯ ದೆಂದು ಹೇಳುವ ಮೊದಲನೆಯ ಕಥೆ ಸತ್ತ್ವಹೀನವಾಗುವುದು. 'ಚಿತ್ರ ಭಾರತ' ಮತ್ತು 'ಚೆನ್ನಬಸವಪುರಾಣ'ಗಳು ಸುಮಾರಾಗಿ ಸಮಕಾಲೀನವಾಗುವುದರಿಂದ ಎರಡನೆಯ ಕಥೆ ಯನ್ನು ವಿಶ್ವಾಸಾರ್ಹವೆಂದು ವಿಚಾರಿಸಬೇಕಾಗುವುದು. ಈ ದೃಷ್ಟಿಯಿಂದ, ರಾ. ರಾಮ ರಾವ್ ಅವರು ಜೈಮಿನಿ ಭಾರತ ಮತ್ತು 'ಚೆನ್ನಬಸವಪುರಾಣ'ಗಳಲ್ಲಿರುವ ಸಾಮ್ಯಗಳನ್ನು ಪಟ್ಟಿಮಾಡಿಕೊಟ್ಟಿರುವುದು ಗಮನಾರ್ಹವಾಗಿದೆ. ಆ ಸಾಮ್ಯಪಟ್ಟಿ ಇಂತಿದೆ :

| ಜೈಮಿನಿ ಭಾರತ | | ಚೆನ್ನಬಸವ ಪುರಾಣ | | |
|---|---|---|---|---|
| ಸಂಧಿ | ಪದ್ಯ | ಕಾಂಡ | ಸಂಧಿ | ಪದ್ಯ |
| ೨ | ೫ | ೧ | ೬ | ೩೯ |
| ,, | ೬,೭,೮,೯,೧೦,೧೨ | ,, | ,, | ೪೧,೪೨,೪೩,೪೪,೪೬ |
| ,, | ೨,೪,೮,೯,೧೦,೧೨ | ,, | ,, | ೩,೬,೧೨,೧೪,೧೫,೧೬ |

[1] ಮೈಸೂರು ಶ್ರೀನಿವಾಸ ಇಲೆಕ್ಟ್ರಿಕ್ ಪ್ರೆಸ್ ಪ್ರತಿ, ೧೯೨೫.

[2] ೧೯೨೨ನೆಯ ವರ್ಷದ ಮೈಸೂರು ಯುನಿವರ್ಸಿಟಿ ಎಂಟ್ರೆನ್ಸ್ ಟೆಕ್ಸ್ಟ್-ಪೀಠಿಕೆ.

| | | | | |
|---|---|---|---|---|
| ೨೮ | ೪೪ | ೪ | ೧೩ | ೨೪ |
| ,, | ೪೧,೪೫,೪೬,೫೦,೫೧,೫೨ | ,, | ,, | ೨೦,೨೫,೨೬,೩೨,೨೯ |
| ೧೯ | ೩೩ | ೩ | ೮ | ೩೧ |
| ೧೮ | ೧೮,೨೧,೨೨,೨೮,೩೦,೩೨ | ,, | ,, | ೨೪,೨೬,೨೭,೩೩,೩೯ |
| ೧೭ | ೨೩,೨೪,೨೫,೨೭ | | ೯ | ೨೫,೨೬,೨೭,೩೦ |
| ೨೨ | ೪ | ೪ | ೩ | ೩೩ |
| ೨ | ೪೫ | ,, | ,, | ೧೪ |
| ,, | ೫೪ | ೧ | ೪ | ೨೦ |
| ೩ | ೧೫ | ೧ | ೧೧ | ೩೬ |
| ೬ | ೨೨,೨೩,೨೫,೨೬,೨೯, ೩೧,೩೫ | ,, | ೧೦ | ೪೩,೪೯,೪೪,೪೮,೪೫,೪೬, ೪೭,೫೧ |
| ೧೨ | ೪೪ | ೪ | ೩ | ೪೪ |
| ೧೩ | ೫ | ,, | ,, | ೫೦ |
| ೧೫ | ೯,೧೪ | ,, | ೫ | ೪೫,೪೭ |
| ,, | ೧೭ | ೩ | ೭ | ೨೮ |
| ೧೯ | ೮,೯ | ೪ | ೧೩ | ೧೮,೧೯ |
| ೨೦ | ೪೭ | ,, | ೩ | ೧೮ |
| ೨೨ | ೨೩ | ,, | ೮ | ೫೬ |
| ,, | ೩೫ | ,, | ೯ | ೫೫ |
| ೨೬ | ೯,೧೨,೧೬,೧೯,೨೧ | ೧ | ೫ | ೧೨,೧೬,೨೪,೨೭,೬೮ |
| ೨೮ | ೩೭ | ,, | ,, | ೩೮ |
| ೩೦ | ೨,೩,೪,೬,೧೩,೧೭ | ೪ | ೫ | ೩೩,೩೪,೩೬,೬೫,೬೬ |

ಈ ಸಾಮ್ಯಗಳಿಂದ ಕವಿ ಲಕ್ಷ್ಮೀಶನ ಕಾವ್ಯ ಜೈಮಿನಿ ಭಾರತವು ಮೊದಲು ಹುಟ್ಟಿ, ಬಳಿಕ ಅದನ್ನು ಅನುಕರಿಸಿ 'ಚೆನ್ನಬಸವಪುರಾಣ'ವು ಹುಟ್ಟಿತೆಂದು ರಾ. ರಾಮರಾವ್ ಅವರು ಅಭಿಪ್ರಾಯಪಟ್ಟಿದ್ದಾರೆ. ಇದನ್ನು ಅಲ್ಲಗಳೆದು, 'ಚೆನ್ನಬಸವ ಪುರಾಣಕರ್ತೃ ಲಕ್ಷ್ಮೀಶನನ್ನು ಅನುಕರಿಸಿಲ್ಲ, ಅವನೊಬ್ಬ ಮಹಾಕವಿ, ಜೈಮಿನಿ ಭಾರತವು ಚೆನ್ನಬಸವ ಪುರಾಣದ ಅನಂತರ ರಚಿಸಲ್ಪಟ್ಟಿದೆ' ಎನ್ನುವ ಅಭಿಪ್ರಾಯವೂ ಬಂದಿದೆ.

ಈ ಎರಡೂ ಕೃತಿಗಳಲ್ಲಿ ಸಾಮ್ಯಗಳೇನೋ ಸಾಕಷ್ಟಿವೆ. ಆದರೆ ಅದರಿಂದ ಯಾರು ಯಾರನ್ನು ಅನುಕರಿಸಿದರು, ಯಾವ ಕೃತಿ ಮೊದಲು ಎಂದು ನಿರ್ದಿಷ್ಟವಾಗಿ ಸಾಧಿಸಲು ಬರಲಾರದು. ಒಬ್ಬರನ್ನೊಬ್ಬರು ಅನುಕರಿಸಿರಲಿಕ್ಕಿಲ್ಲವಾದರೂ ಗೋಪಕವಿಯ ಸಾಕ್ಷ್ಯದಂತೆ 'ಚೆನ್ನಬಸವ ಪುರಾಣ'ಕ್ಕಿಂತ ಜೈಮಿನಿ ಭಾರತವು ಪೂರ್ವದ್ದೆಂದು ತೋರುತ್ತದೆ.

'Political effects of Krishnaraya's Victories' ಎಂಬ ವಿಷಯವನ್ನು ವಿವೇಚಿಸುತ್ತ ಹಯವದನರಾಯರು, 'In the Vijayanagara Kings a new sense of pride and arrogance became visible, from now, and it made them overbearing towards their neighbours with result that it engendered a spirit of bitter hostility against them on the part of their neighbours, which hastened their eventual downfall'[1] ಎಂದಿದ್ದಾರೆ. ಹೀಗೆ ಸಾಮ್ರಾಜ್ಯದ ವಿನಾಶದ ಲಕ್ಷಣಗಳು ತೋರುತ್ತಿದ್ದ ಪರಿಸ್ಥಿತಿಯಲ್ಲಿ ದೇಶಕ್ಕೆ ಭಾವೈಕ್ಯದ, ಭಾವಸಮನ್ವಯದ, ಒಕ್ಕಟ್ಟಿನ ಆವಶ್ಯಕತೆಯಿತ್ತು. ಲಕ್ಷ್ಮೀಶನ ಜೈಮಿನಿ ಭಾರತವು ಆ ಆವಶ್ಯಕತೆಯನ್ನು ಪೂರೈಸಿತೆಂದು ಅನುಮಾನಿಸಿದರೆ ತಪ್ಪಾಗಲಿಕ್ಕಿಲ್ಲ. ಎಂದರೆ, ಇವೆಲ್ಲ ಪರಿಸರ ಪ್ರಮಾಣಗಳಿಂದ ಲಕ್ಷ್ಮೀಪತಿಯ ಕಾವ್ಯ ರಚನೆಯ ಕಾಲದ ಈಚೆಯ ಗಡುವು ಕ್ರಿ. ಶ. ೧೫೬೫ಕ್ಕೆ ನಿಲ್ಲುತ್ತದೆ.

ಶ್ರೀ ಪುರಂದರದಾಸರ ಒಂದು ಹಾಡಿನಲ್ಲಿ,

'ಕರಪತ್ರದಿಂದ ತಾಮ್ರಧ್ವಜನ ತಂದೆಯನು
ಕೊರಳ ಕೊಯಿಸಿದೆ ನೀನು ಕುಂದಿಲ್ಲದೆ'[2] ಎಂದೂ

ಇನ್ನೊಂದು ಹಾಡಿನಲ್ಲಿ,

'ಅಂದು ಸುಧನ್ವ ಶ್ರೀಕೃಷ್ಣನೆಂದೆನಲಾಗಿ
ಬೆಂದು ಕುದಿವ ಎಣ್ಣೆ ತಣ್ಣೀರಾಯಿತು'[3] ಎಂದೂ

ಬರುತ್ತದೆ. ಕನಕದಾಸರ ಹಾಡಿನಲ್ಲಿಯೂ

'ಎಣ್ಣೆಗೊಪ್ಪರಿಗೆಯೊಳು ಬಿದ್ದು ಸ್ತುತಿಸಿದನಲ್ಲ'[4]

ಎಂಬಲ್ಲಿ ಸುಧನ್ವನ ಉಲ್ಲೇಖ ಬರುತ್ತದೆ. ಇದು ಲಕ್ಷ್ಮೀಶಕವಿಯ ಜೈಮಿನಿ ಭಾರತದ ಲೋಕಪ್ರಿಯ ಪ್ರಾಚುರ್ಯದ ಪರಿಣಾಮವೆಂಬುದು ಸ್ಪಷ್ಟವೇ ಇದೆ. ಎಂದರೆ, ಈ ಕಾವ್ಯವು ಈ ದಾಸದ್ವಯರ ಕಾಲದಲ್ಲಿ ಚೆನ್ನಾಗಿಯೇ ಪ್ರಸಿದ್ಧಿಪಡೆದಿತ್ತು, ಕ್ರಿ. ಶ. ೧೫೫೦ ಕ್ಕಿಂತ ಸಾಕಷ್ಟು ಪೂರ್ವದಲ್ಲಿ ಹುಟ್ಟಿತ್ತು ಎಂಬುದು ಸಿದ್ಧವಾಗುತ್ತದೆ. ಅಲ್ಲದೆ ಮೋಹನತರಂಗಿಣಿಯಲ್ಲಿ ಕನಕದಾಸರು,

'ವಿಜಯ ಲಕ್ಷ್ಮೀಶ ವಿದ್ವಜ್ಜನ ಮೊದಲಾದ
ಪ್ರಜೆಪ್ರಮುಥರು ಕೀರ್ತಿಸುವ ಭಜನೆಗೆ ಮೆಚ್ಚಿ
ಭಾಗ್ಯವ ಕೊಟ್ಟು ಬೀಳ್ಕೊಂಡು ಬಿಜಯಮಾಡಲುದ್ಯೋಗಿಸಿದ'

—ಸಂ. ೪೧, ಪ. ೬೩.

[1] *Mysore Gazetteer*, Vol. II, Part III, p. 1854.
[2] ಶ್ರೀಪುರಂದರ ಸಾಹಿತ್ಯ — ೨ ಆರ್ತಭಾವ, ಹಾಡು ೧೧೭, ನುಡಿ ೨.
[3] ,, ,, ,, ೧೫೬, ನುಡಿ ೭.
[4] ಕನಕದಾಸರ ಭಕ್ತಿಗೀತೆಗಳು—ಹಾಡು ೫೯, ನುಡಿ ೧.

ಎಂದು ಲಕ್ಷ್ಮೀಶನನ್ನು ಹೆಸರೆತ್ತಿ ಸ್ಮರಿಸಿದ್ದಾರೆ. ಆದುದರಿಂದ ಕನ್ನಡ ಜೈಮಿನಿ ಭಾರತವು ಈ ದಾಸರಿಗಿಂತ ನಿಶ್ಚಯವಾಗಿಯೂ ಸಾಕಷ್ಟು ಹಿಂದಿನದು. ಅದರ ರಚನಾಕಾಲವು ಕ್ರಿ.ಶ. ೧೫ನೆಯ ಶತಮಾನದ ಉತ್ತರಾರ್ಧ ಮತ್ತು ಕ್ರಿ.ಶ. ೧೫೫೦ ರ ನಡುವೆ ಎಂದು ಹೇಳಬೇಕಾಗುತ್ತದೆ.

ತಿ. ತಾತಾಚಾರ್ಯ ಶರ್ಮರು, 'A Forgotten Empire' ಎಂಬ ಗ್ರಂಥದಲ್ಲಿ ಉಲ್ಲೇಖಿಸಿರುವ ವಿಜಯನಗರ ಸಾಮ್ರಾಜ್ಯದ ಮಹದೈಶ್ವರ್ಯ ವಿವರಣೆಯಲ್ಲಿ ವರ್ಣಿತ ವಾದ ವಿಜಯನಗರವೂ ಲಕ್ಷ್ಮೀಶನು ಭೀಮಮುಖದಿಂದ ವರ್ಣಿಸಿದ ಭದ್ರಾವತಿಯೂ ಒಂದೇ ಎಂದು ಸಾದೃಶ್ಯಪ್ರಮಾಣಗಳಿಂದ ಅಭಿಪ್ರಾಯಪಟ್ಟಿದ್ದಾರೆ. ನ್ಯೂನಿಜ್ ಎಂಬ ಪ್ರವಾಸಿಯು ವಿಜಯನಗರದ ಅರಸರನ್ನು ಕುರಿತು ಕ್ರಿ. ಶ. ೧೫೩೫-೩೭ರ ಸುಮಾರಿನಲ್ಲಿ ಚಿಕ್ಕ ಚರಿತ್ರೆಯೊಂದನ್ನು ಬರೆದಿದ್ದಾನೆ. ಅದರಲ್ಲಿ ಅವನು ಅರಸರ (ಸದಾಶಿವ ರಾಯ, ರಾಮರಾಯರ) ಅಶ್ವಸಂಪದವನ್ನು ಬಣ್ಣಿಸಿದ್ದಾನೆ. ಲಕ್ಷ್ಮೀಶನು ಬಣ್ಣಿಸಿರುವ ಯೌವನಾಶ್ವನ ಅಶ್ವಸಂಪದಕ್ಕೂ ಇದಕ್ಕೂ ಸಾಕಷ್ಟು ಸಾಮ್ಯವಿದೆ ಎಂದು ತೋರಿಸಿ, ಲಕ್ಷ್ಮೀಶನು ಕ್ರಿ.ಶ. ೧೫೦೦-೧೫೬೫ರ ಮಧ್ಯಂತರ ಕಾಲಾವಧಿಯಲ್ಲಿ ಜೈಮಿನಿ ಭಾರತವನ್ನು ರಚಿಸಿರಬೇಕು ಎನ್ನುತ್ತಾರೆ. ಏಕೆಂದರೆ ರಾಕ್ಷಸತಂಗಡಗಿಯ ಯುದ್ಧಾನಂತರದ ಹಾಳು ಹಂಪೆಯನ್ನು ಭದ್ರಾವತಿಯಲ್ಲಿ ಆರೋಪಿಸಿ ವೈಭವಸಂಪನ್ನವಾಗಿ ವರ್ಣಿಸುವುದು ಸಾಧ್ಯವಿಲ್ಲ. ಹಾಗೆಯೆ, ಲಕ್ಷ್ಮೀಶನು ಚಿತ್ರಿಸಿದ ದ್ವಾರಕೆ ವಿಜಯನಗರದ ಪ್ರತಿಚಿತ್ರವೆಂದೂ ಶ್ರೀಕೃಷ್ಣನ ಒಡ್ಡೋಲಗದ ವರ್ಣನೆ-ಕೃಷ್ಣದೇವರಾಯನ ನವರಾತ್ರಿ ಉತ್ಸವದ ರಾಜಸಭೆಯನ್ನು ನಮ್ಮ ಕಣ್ಣಮುಂದೆ ಪ್ರತಿಬಿಂಬಿಸುವುದೆಂದೂ ಅವರು ಸಾಹಿತ್ಯಪ್ರಮಾಣಗಳಿಂದ ತೋರಿಸಿದ್ದಾರೆ. ಕೃಷ್ಣದೇವರಾಯನ ಆಳಿಕೆಯ ಕಾಲದಿಂದ (೧೫೦೯) ಅಳಿಯ ರಾಮರಾಯನ ಅವಸಾನದ (೧೫೬೫) ವರೆಗೆ ವಿಜಯನಗರವು ಸಿರಿ ಸೌಭಾಗ್ಯಗಳಿಂದ ತೂಗಿತೊನೆದಾಡುತ್ತಿತ್ತು, ಈ ಅವಧಿಯಲ್ಲಿಯೇ—ಅದರಲ್ಲಿಯೂ ಕೃಷ್ಣದೇವರಾಯನ ಆಳಿಕೆಯ ಕಾಲದಲ್ಲಿಯೇ (ಸು. ೧೫೩೦ ರಲ್ಲಿ) ಜೈಮಿನಿ ಭಾರತದ ರಚನೆಯಾಗಿರಬೇಕು ಎಂದು ತಿ. ತಾ. ಶರ್ಮರು ನಂಬುತ್ತಾರೆ.

ಸಿವೆಲ್ಲರು ಚಿತ್ರಿಸಿದ ವಿಜಯನಗರ ಲಕ್ಷ್ಮೀಶನು ವರ್ಣಿಸಿದ ಭದ್ರಾವತೀ ಎರಡೂ ಒಂದೇ ಎಂದು ತಿ.ತಾ. ಶರ್ಮರು ಅನುಮಾನಿಸಿದ್ದರಲ್ಲಿ ತಥ್ಯವಿದೆ. ಏಕೆಂದರೆ, ಸಂಸ್ಕೃತ ಜೈಮಿನಿ ಭಾರತದ ಭದ್ರಾವತೀ ವರ್ಣನೆ ಮತ್ತು ಕನ್ನಡ ಜೈಮಿನಿ ಭಾರತದ ಭದ್ರಾವತೀ ವರ್ಣನೆಗಳನ್ನು ಹೋಲಿಸಿನೋಡಿದಾಗ, ಅಲ್ಲಿಲ್ಲದ ಕೋಟೆಕೊತ್ತಳಗಳ ವಿಶೇಷ ವೈಭವವನ್ನು ಇಲ್ಲಿ ಕಾಣುತ್ತೇವೆ. ಲಕ್ಷ್ಮೀಶನು ಬೆಟ್ಟದ ಮೇಲೆ ನಿಂತು ವಿಜಯನಗರವನ್ನು ನೋಡಿದ ಅನುಭವದಿಂದಲೇ ಭೀಮಾದಿಗಳನ್ನು ಬೆಟ್ಟದ ಮೇಲೆ ನಿಲ್ಲಿಸಿದನೆಂದು ಎನಿಸುತ್ತಿದೆ. ವಿಜಯನಗರವನ್ನು ಸಂದರ್ಶಿಸಿದ ವಿದೇಶೀಯ ಪ್ರವಾಸಿಯೂ ಅದನ್ನು ಒಂದು ಬೆಟ್ಟದ ಮೇಲೆ ನಿಂತು ನೋಡಿದ್ದನೆಂಬ ಮಾತು ಇಲ್ಲಿ ನೆನಪಾಗದಿರದು.

ಕ್ರಿ.ಶ. ೧೫೨೯ರಲ್ಲಿ ಕೃಷ್ಣದೇವರಾಯನು ಅಳಿದ ಮೇಲೆ ಅಚ್ಯುತರಾಯನು

ಪಟ್ಟವೇರಿದನು. ಅವನ ಆಳಿಕೆಯನ್ನು ಕುರಿತು ಬರೆಯುತ್ತ, 'The period of Achyuta's rule was marked by many wars' [ಅಚ್ಯುತರಾಯನ ಕಾಲವೆಂದರೆ ಅನೇಕ ಯುದ್ಧಗಳ ಆಕರ] ಎಂದು ಹಯವದನರಾಯರು ಎನ್ನುತ್ತಾರೆ.* ಇಂತಹ ಅಶಾಂತಿಮಯ ವಾತಾವರಣದಲ್ಲಿ ಲಕ್ಷ್ಮೀಶನ ಕಾವ್ಯರಚನೆ ಆಗಿರಲಾರದು ಎಂದೆನಿಸುತ್ತದೆ. ಕ್ರಿ.ಶ. ೧೫೨೯ರ ಒಳಗಾಗಿ ಜೈಮಿನಿ ಭಾರತವು ಹುಟ್ಟಿರಲು ಸಾಕು ಎನ್ನುವುದಕ್ಕೆ ರಾಷ್ಟ್ರಕವಿ ಗೋವಿಂದಪೈಗಳು ಕೊಟ್ಟಿರುವ ಆಧಾರವು ಹೆಚ್ಚು ವಿಶ್ವಸನೀಯವೆನಿಸುವಂತಿದೆ. ಅದು ಹೀಗಿದೆ:

'ಮೈಸೂರು ಸೀಮೆಯ ಚಿತ್ರದುರ್ಗ ಜಿಲ್ಲೆಯ ಹಿರಿಯೂರು ನಂ. ೫೭ನೆಯ ಆನೆಸಿದ್ರಿ ಗ್ರಾಮದಲ್ಲಿಯ ಶಾಸನದಲ್ಲಿ ಕವಿ ಕೋನಪ್ಪನ ಹೆಸರಿದೆ. ಹಿರಿಯೂರು ನಂ. ೫೮ನೆಯ ಶಾಸನದ ಮೇಲಿಂದ ಕವಿ ಕೋನಪ್ಪನೆಂದರೆ ಗಯಚರಿತ್ರೆಯ ಕವಿ ಕೋನಯ್ಯನೇ ಹೊರತು ಬೇರೊಬ್ಬನಲ್ಲ. (ಈ ಎರಡೂ ಶಾಸನಗಳನ್ನು ಮೊದಲು ಬೆಳಕಿಗೆ ತಂದವರು ಹುಲ್ಲೂರು ಜೋಯಿಸರು.) ಹಾಗಾದರೆ ಆ ಕೋನಯ್ಯನು = ಕೋನಪ್ಪನು ವಿಜಯನಗರದ ಕೃಷ್ಣದೇವರಾಯನ ಆಳ್ವಿಕೆಯಲ್ಲಿ (ಕ್ರಿ. ಶ. ೧೫೦೯-೧೫೨೯) ಇದ್ದನೆಂದು ನಿಷ್ಪನ್ನವಾಗುತ್ತದೆ'† ಎನ್ನುವುದಲ್ಲದೆ ಗೋವಿಂದಪೈಗಳು ಕೋನಯ್ಯನ ಗಯಚರಿತ್ರೆಗೂ ಲಕ್ಷ್ಮೀಶನ ಜೈಮಿನಿ ಭಾರತಕ್ಕೂ ಇರುವ ಸಾಮ್ಯಸಂಬಂಧವನ್ನು ತೋರಿಸುತ್ತಾರೆ.

ಗಯಚರಿತ್ರೆ ಅಥವಾ ಕೃಷ್ಣಾರ್ಜುನಸಂಗರದ ಪೀಠಿಕಾಸಂಧಿಯ ೧೨ನೆಯ ಪದ್ಯ ಹೀಗಿದೆ:

ಕಾಳಿದಾಸ ಮಯೂರ ವರಕವಿ
ಮೌಳಿಮಣಿ ಬಾಣಾಂಕ ದಂಡಿ ವಿ
ಶಾಲಮತಿ ಮಲಹಣಿ ಕುಮಾರವ್ಯಾಸ ಶುಕರೂಪ
ಲೋಲಗುಣ ಲಕ್ಷ್ಮೀಶ ಘನಕವಿ
ಜಾಲ ಮೃದುಪದ ಪಲ್ಲವಗಳಿಗೆ
ಫಾಲವಂ ಚಾಚುತ್ತ ಪೇಳುವೆನೀ ಮಹಾಕೃತಿಯ ॥

ಇಲ್ಲಿ ಕೋನಯ್ಯನು ಲಕ್ಷ್ಮೀಶ ಕವಿಯನ್ನು 'ಲೋಲಗುಣ' ಉಳ್ಳವನೆಂದು ವಿಶೇಷಿಸಿ ಸ್ಮರಿಸಿದ್ದಾನೆ. ಅಲ್ಲದೆ, ಗಯಚರಿತ್ರೆಯ ಸಂ. ೩, ಪದ್ಯ ೩೦, ೩೧, ೩೨ರಲ್ಲಿ ಚಿತ್ರಿತವಾದ

[1]ಮರಕತಂಗಳ ಜಗಲಿ, [2]ನೀಲದಿ
ವಿರಚಿಸಿದ ಭಿತ್ತಿಗಳು, [3]ಪಳುಕಿನ
ತರತರದ ನೆಲಗಟ್ಟು, [4]ಬಜ್ಜರಮಯದ ಕಂಭಗಳು,
[5]ಉರುತರದ ವೈಡೂರ್ಯನಿರ್ಮಿತ
ವರಮದನಕರ ರಾಜಿಯೆಸೆದಿಹ

* *Mysore Gazetteer*, Vol. II, Part III, p. 1982.
† 'ಪಂಜೆಯವರ ನೆನಪಿಗಾಗಿ'—ಲಕ್ಷ್ಮೀಶನ ಕಾಲದ ಮರುವಿಚಾರ, ಪು. ೧೮೫-೧೮೭.

ಪರಿಯನದನೇನೆಂಬೆನಾ ಚಾವಡಿಯ ಚಿತ್ರವನು ;
[6]ಜಗಜಗಿಪಗೋಮೇದಕದ ಬೋ
ದಿಗೆಗಳ[7]ಗಣಿತ ಪುಷ್ಯರಾಗದ
ಹೊಗರೊಗುವ ತೊಲೆ ಜಂತೆ, [8]ಮಾಣಿಕ್ಯದ ಸುಲೋವೆಗಳು,
ಬಗೆಬಗೆಯ [9]ಮೌಕ್ತಿಕದ ಸೂಸಕ,
ನಗುವ [10]ಪವಳದ ಪ್ರತಿಮೆಗಳಲೊಗು
ಮಿಗೆಯ [11]ಸ್ವರ್ಣದ ಪದಕ ರಾಜಿಸುತಿಹವು ಕೇಳೆಂದ ;
[12]ಸಾರಣೆಯ ಕಸ್ತುರಿ ಜವಾಜಿಯ
ಕಾರಣೆಯ, [13]ಕುಂಕುಮದ ವರವಿ
ಸ್ತಾರ, [14]ಚಂದನಧೂಪವಾಸಿತ, [15]ಕಪ್ಪುರಂಗಳಲಿ
ತೋರುತಿಹ ಬೊಂಬಾಳ ದೀಪ್ತಿಯ,
ಚಾರು [16]ಶಸ್ತ್ರಪ್ರಭೆಯಲಾ ಮುರ
ವೈರಿಯೋಲಗಸಾಲೆ ನೆರೆರಾಜಿಸಿತು ನೋಳ್ಪರಿಗೆ.

ಈ ಮುರಹರನ ಓಲಗಸಾಲೆಯನ್ನು ಕನ್ನಡ ಜೈಮಿನಿ ಭಾರತದ ಸಂಧಿ ೧೭, ಪದ್ಯ ೨೩, ೨೪ರಲ್ಲಿ ಚಿತ್ರಿತವಾದ

[3]ಪಳಕುಗಳ ನೆಲಗಟ್ಟು, [1]ಮರಕತಂಗಳ ಜಗಲಿ,
ಪೊಳವ [2]ನೀಲದ ಭಿತ್ತಿ, [4]ಬಜ್ಜರದ ಕಂಬಮುಚಿತ
ತೊಳಪ [5]ವೈಡೂರಿಯದ ಮದನಕೈ, ಮಿಱುಪ[6]ಗೋಮೇಧಿಕದ ಬೋದಿಗೆಗಳು,
ಸಲೆ [7]ಪುಷ್ಯರಾಗದತೊಲೆಗಳೆಸವ [8]ಮಾಣಿಕಂ
ಗಳ ಲೋವೆ, [9]ಮುತ್ತುಗಳ ಸೂಸಕಂ, ಮಿಸುಗುವ [10]ಪ
ವಳದ ಪುತ್ತಳಿ, [11]ಪೊನ್ನ ಪೊದಕೆ ರಂಜಿಸಿತು ಚಾವಡಿಯ ಚೌರಸದೆಡೆಯೊಳು;
[12]ಕಸ್ತುರಿ ಜವಾಜಿಗಳ ಸಾರಣೆಯ, [13]ಕುಂಕುಮ ಪ
ರಸ್ತರಣದಗರು [14]ಚಂದನಧೂಪ ವಾಸಿತದ
ವಿಸ್ತರದ, [15]ಕರ್ಪೂರತೈಲದಿಂದಲ್ಲಲ್ಲಿಗುರಿವ ಬೊಂಬಾಳಂಗಳ,
[16]ರಸ್ತ ರತ್ನಪ್ರದೀಪಜ್ವಾಲೆಗಳ ಸಭೆ ಸ
ಮಸ್ತಸೌಭಾಗ್ಯದಿಂದೊಪ್ಪುತಿರಲಾಗ ಭೂ
ಪಸ್ತೋಮ ಸಹಿತ ಬಂದಾ ಬಭ್ರುವಾಹನಂ ಕುಳ್ಳಿರ್ದನೋಲಗದೊಳು.

ಈ ಬಭ್ರುವಾಹನನ ಓಲಗಶಾಲೆಯ ಎದುರಿಟ್ಟು ನೋಡಬೇಕು. ಹೀಗೆಯೆ ಕೋನಯ್ಯನ ಮತ್ತು ಲಕ್ಷ್ಮೀಶನ ಪ್ರಭಾತವರ್ಣನೆಗಳನ್ನೂ ಹೋಲಿಸಿನೋಡಬಹುದು.
ಗಯಚರಿತ್ರೆ ಸಂಧಿ ೪ರಲ್ಲಿ,

ಅನಿತರೊಳ್ ಚರಣಾಯುಧಾವಳಿ
ಬಿನದದಿಂ ಸ್ವನಗೆಯ್ಯೆ ಜಾರಾಂ
ಗನೆಯರೆದೆ ಜಜ್ಜರಿತವಾಗಲು ಚೋರಸಂಕುಲತೆ
ಘನನಿಶಿತ ಹೃಚ್ಛೂಲವಾಗಲು
ಜನರು ನಿದ್ರೆಯನುಳಿದು ಹರಿಯನು
ವಿನುತಿಸುತಲುಪ್ಪವಡಿಸಿದರಾ ಗೃಹಗೃಹಂಗಳಲಿ || ೨೪ ||
ಹರೆದವುರೆ ತಾರೆಗಳು ತಂಬೆಲ
ರರದೆ ಬೀಸಿತು ಸರಸಿಜಾವಳಿ

ಬಿರಿದುವಾರಡಿ ನಿಚಯವಾಕ್ಷಣ ತೆರಳೆ ಧ್ವನಿಮಾಡಿ
ಮೆರೆದವತಿ ವಿಭವದಲಿ ಚಕ್ರವು
ನೆರೆದುವಾಗಲೆ ಕೈರವದ ರುಚಿ
ಮುರಿಯೆ ಮುದದಿಂ ತರಣಿಯಡರಿದನುದಯ ಪರ್ವತವ || ೨೫ ||
ಒದರಿದುವು ದೇಗುಲದ ವಾದ್ಯಗ
ಳದುರೆ ನೆಲ ಘನ ಭೇರಿಗಳು ಮೊಳ
ಗಿದುವು ಲಕ್ಷ್ಮೀರಮಣನರಮನೆವಾಗಿಲಿದಿರಿನಲಿ || ೨೭ ||

ಜೈಮಿನಿ ಭಾರತದ ಸಂಧಿ ೧೭ ರಲ್ಲಿ,

ಸ್ವರಗೆಯ್ದುದನಿತಱಿಕೊಳ್ ಚರಣಾಯುಧಂ ಜಾಱಿ
ಯರ ಮನಂ ಬೆಚ್ಚಿದುದು ಮೂಡದೆಸೆ ಬೆಳಗಿತು ಪ
ಸರಿಸಿದುದು ತಂಗಾಳಿ ಖಗನಿಕರಮುಲಿದೆದ್ದವರಳಿದುವು ತಾವರೆಗಳು
ಮೊರೆದುವಾಱಡಿ ನೆರೆದುವೆಣೆವಕ್ಕಿ ತಾರೆಗಳ್
ಪರಿದುವಿಡಿದಿರ್ದ ಕತ್ತಲೆ ತೊಲಗಿತುತ್ಪಲಂ
ಕೊರಗಿದುದು ಜನದ ಕಣ್ಣೆವೆ ತೆರೆದುದೊದರಿದುವು ದೇಗುಲದ ವಾದ್ಯಂಗಳು
|| ೪೦ ||

ಇವುಗಳಲ್ಲಿ ತುಂಬಾ ಸಾಮ್ಯ ಕಾಣುವುದಲ್ಲದೆ, ಆ ಈ ಓಲಗಶಾಲೆಗಳಲ್ಲಿ, ವರ್ಣನಾಕ್ರಮದಲ್ಲಿ ಅನುಕರಣವೂ ಚಿತ್ರಣದಲ್ಲಿ ತದ್ರೂಪತೆಯೂ ಎದ್ದು ತೋರುವುದು. ಲಕ್ಷ್ಮೀಶನಲ್ಲಿ ನೆಲಗಟ್ಟು, ಜಗಲಿ, ಭಿತ್ತಿ ಮೊದಲಾದುವು ಪಳಕು, ಮರಕತ, ನೀಲದವಾಗಿದ್ದರೆ, ಕೋನಯ್ಯನಲ್ಲಿಯೂ ಅವು ಪಳಕು, ಮರಕತ ನೀಲದವೇ. ಇವಿಷ್ಟುಮಾತ್ರವಲ್ಲ ಇಬ್ಬರೂ ಉಲ್ಲೇಖಿಸಿರುವ ೧೬ ವಸ್ತುಗಳಲ್ಲಿಯೂ ಸರೂಪತೆಯಿದೆ. ಇದರಿಂದ ಕೋನಯ್ಯನು ಲಕ್ಷ್ಮೀಶನ ಬಭ್ರುವಾಹನನ ಓಲಗವನ್ನೇ ಕೃಷ್ಣನ ಓಲಗಶಾಲೆಯನ್ನಾಗಿ ಮಾಡಿದ್ದಾನೆ ಎಂಬುದು ಸಿದ್ಧವಾಗುತ್ತದೆ. ಇದರಿಂದ, ವಿಜಯನಗರದ ಕೃಷ್ಣದೇವರಾಯ (ಕ್ರಿ. ಶ. ೧೫೦೯–೧೫೨೯)ನಿಂದ ದತ್ತಿಯನ್ನು ಪಡೆದ ಕವಿ ಕೋನಯ್ಯನಿಂದ ಸ್ಮರಿಸಲ್ಪಟ್ಟ ಲಕ್ಷ್ಮೀಶನ ಜೈಮಿನಿ ಭಾರತವು ಆ ಕಾಲದಲ್ಲಿ ಸಾಕಷ್ಟು ಪ್ರಚುರವೂ ಕೋನಯ್ಯನಿಗೆ ಪ್ರಿಯವೂ ಆಗಿದ್ದಿತು ; ಎಂದರೆ ಕ್ರಿ. ಶ. ೧೫೦೯ ರ ಸುಮಾರಿಗೋ ಅಥವಾ ಅದಕ್ಕಿಂತ ಕೊಂಚ ಮೊದಲು ಜೈಮಿನಿ ಭಾರತದ ರಚನೆಯಾಗಿತ್ತು ಎಂದು ಅನುಮಾನಿಸಬೇಕಾಗುವುದು.

'ಚೇರಮಕಾವ್ಯ'ದ ಚೇರಮಾಂಕನು ಗುಬ್ಬಿಯ ಮಲ್ಲಣಾರ್ಯನ (ಕ್ರಿ.ಶ.೧೫೧೩) ಕೃಪೆಯಿಂದ ತನ್ನ ಕಾವ್ಯವನ್ನು ಬರೆದಂತೆ ಹೇಳುತ್ತಾನೆ. ಈ ಗ್ರಂಥದ ನಿರ್ಮಾಣ ಕಾಲವು ಶಕ ೧೪೪೮ನೆಯ ವ್ಯಯಸಂವತ್ಸರ, ಎಂದರೆ ಕ್ರಿ. ಶ. ೧೫೨೬. 'ಸೌಂದರ ನಂಬಿಯ ಸಮಕಾಲೀನನಾದ ಚೇರಮನು ಆತನೊಡನೆ ಕೈಲಾಸಕ್ಕೆ ಹೋಗುವುದು ಇದರ ಕಥಾವಸ್ತು. ಇದೂ ವಾರ್ಧಕಷಟ್ಪದೀಕಾವ್ಯ. ಚೇರಮಾಂಕನು ಒಳ್ಳೆಯ ಕವಿ. ತನ್ನನ್ನು "ನವರಸಭಾವಲಕ್ಷಣನಿಪುಣ" ನೆಂದು ಆತನು ಸಂಬೋಧಿಸಿಕೊಂಡಿರುವುದು ಉಚಿತವಾಗಿದೆ. ಈತನ ಪದ್ಯಗಳನ್ನು ಓದುತ್ತಿದ್ದರೆ ಲಕ್ಷ್ಮೀಶಕವಿಯ ನೆನಪು

**ಬರುತ್ತದೆ.** ಕುವಲಯಾನಂದದ ಕರ್ತೃವಾದ ಜಾಯೇಂದ್ರನು ಈತನ ಪದ್ಯಗಳನ್ನು ಉದಾಹರಿಸಿರುವುದು ಈತನ ಹಿರಿತನಕ್ಕೆ ಒಂದು ಸಾಕ್ಷಿ' ಎಂದು ತ. ಸು. ಶಾಮ ರಾಯರು ಅಭಿಪ್ರಾಯಪಡುತ್ತಾರೆ.[1] 'ಚೇರಮಕಾವ್ಯವು' ಒಂದೆರಡು ವರುಷ ಹಿಂದೆ ಮುಂದೆ ಗಯಚರಿತ್ರೆಯ ಸಮಕಾಲೀನಕೃತಿ. ಈ ಕಾವ್ಯವು ಲಕ್ಷ್ಮೀಶನ ಕನ್ನಡ ಜೈಮಿನಿಭಾರತದಿಂದ ಪ್ರಭಾವಿತವಾಗಿರುವುದಾದರೆ, ಮೇಲೆ ಅನುಮಾನಿಸಿದಂತೆ ಜೈಮಿನಿ ಭಾರತದ ರಚನಾಕಾಲವು ಕ್ರಿ.ಶ. ೧೫೨೮ ಅಥವಾ ಅದಕ್ಕಿಂತ ಮೊದಲೇ ಎಂಬುದು ದೃಢಪಡುತ್ತದೆ.

ಇನ್ನು ಕನ್ನಡ ಜೈಮಿನಿ ಭಾರತವು ಕೃಷ್ಣದೇವರಾಯನ ಆಳಿಕೆಯಲ್ಲಿಯೆ ರಚಿತ ವಾಯಿತೆಂಬುದಕ್ಕೆ ಕಂಡುಬರುವ ಸ್ಪಷ್ಟವಾದ ಪರಿಸ್ಥಿತಿ ಪರಿಸರಗಳನ್ನು ಅವಲೋಕಿಸೋಣ. ಇವನ ಆಳಿಕೆ ವೈಭವಶಾಲಿಯಾಗಿತ್ತು. ಅದನ್ನು ಹಯವದನರಾಯರು,

'From about the end of the year 1521 to about 1524 Krishnadevaraya appears to have engaged in no wars of any importance, which required his personal exertions. To this period too may perhaps, be set down many of the literary and other colloquies that he is said to have held from time to time at his court, where probably assembled the principal wits and wags of the time.'[2] [ಕ್ರಿ. ಶ. ೧೫೨೧ ರಿಂದ ೧೫೨೪ ರ ಕಾಲಾವಧಿಯಲ್ಲಿ ಅಂತಹ ಯಾವ ಹೇಳಿಕೊಳ್ಳುವಂತಹ ಯುದ್ಧಗಳಲ್ಲಿ ಕೃಷ್ಣದೇವರಾಯನು ತೊಡಗಲಿಲ್ಲ, ಕಷ್ಟಪಡಲಿಲ್ಲ. ಈ ಅವಧಿಯಲ್ಲಿ ಅವನು ವಾಙ್ಮಯಾದಿ ಬೇರೆ ಬೇರೆ ಸಭೆಗಳನ್ನು ನೆರೆಯಿಸುತ್ತಿದ್ದನು ಎಂದು ಹೇಳಲಾಗುತ್ತದೆ. ಈ ಸಭೆಗಳಲ್ಲಿ ಆ ಕಾಲದ ಅತ್ಯುತ್ತಮ ಚಾತುರ್ಯ, ಚಮತ್ಕಾರ ಮತ್ತು ಪಾಂಡಿತ್ಯ ಪ್ರಕಟವಾಗುತ್ತಿತ್ತು.] ಎಂದು ವಿವರಿಸಿದ್ದಾರೆ. ಒಂದು ಕಾವ್ಯವು ರಚಿತವಾಗಬೇಕಾದಾಗ ದೇಶದಲ್ಲಿ ಪ್ರಶಾಂತ ವಾತಾವರಣವು ಇರುವುದು ಅವಶ್ಯ. ಅಂತಹ ವಾತಾವರಣವು ಹಯವದನರಾಯರೆಂದಂತೆ ಕ್ರಿ.ಶ. ೧೫೨೧-೧೫೨೪ರ ಅವಧಿಯಲ್ಲಿತ್ತು, ಅರಸನೂ ಸಾಹಿತ್ಯದತ್ತ ಮನಸ್ಸು ಹಾಕುತ್ತಿದ್ದನು. ಅಲ್ಲದೆ, ಕೃಷ್ಣ ದೇವರಾಯನು ಸಂಸ್ಕೃತ-ತೆಲುಗುಗಳಲ್ಲಿ ಪ್ರವೀಣನೂ ಕವಿಯೂ ಆಗಿದ್ದನು. ಅವನ ಆಳಿಕೆ ಧರ್ಮದ ಆಳಿಕೆ. ಪೆದ್ದನ ಮೊದಲಾದ ತೆಲುಗು ಕವಿಗಳು ಅವನ ಆಸ್ಥಾನ ದಲ್ಲಿದ್ದರು. ಇಂತಹ ಈ ಅನುಕೂಲ ಪರಿಸ್ಥಿತಿಯಲ್ಲಿ ಕನ್ನಡ ಜೈಮಿನಿ ಭಾರತವು ಉದಯಹೊಂದಿರುವ ಸಂಭವವಿದೆ. ಸಂಸ್ಕೃತ-ತೆಲುಗುಗಳಲ್ಲಿ ಪಂಡಿತನಾಗಿದ್ದ ಕೃಷ್ಣ ದೇವರಾಯನ ದೃಷ್ಟಿಯನ್ನು ಕನ್ನಡದ ಕಡೆಗೆ—ತನ್ನ ಕಡೆಗೆ—ಸೆಳೆಯುವುದಕ್ಕಾಗಿ ಆ ಎರಡೂ ಭಾಷೆಗಳಲ್ಲಿರುವ ಜೈಮಿನಿ ಭಾರತವನ್ನು ಕನ್ನಡಿಸಬೇಕೆಂದು ಲಕ್ಷ್ಮೀಶನು

---

1 ಜನಪ್ರಿಯ ಸಾಹಿತ್ಯಚರಿತ್ರೆ—ಪುಟ ೬೦೩.

2 *Mysore Gazetteer*, Vol. II, Part III, p. 1881.

ಕಾವ್ಯರಚನೆಗೆ ಉಜ್ಜುಗಿಸಿರಬಹುದೆಂದು ಊಹಿಸಬಹುದು.

ದ. ರಾ. ಬೇಂದ್ರೆಯವರು 'ಲಕ್ಷ್ಮೀಶನ ಜೈಮಿನಿ ಭಾರತಕ್ಕೆ ಮುನ್ನುಡಿ' ಎಂಬ ಪುಸ್ತಕದಲ್ಲಿ, 'ಜೈಮಿನಿ ಭಾರತದ ರಚನೆ ಕೃಷ್ಣದೇವರಾಯನ ರಾಯಚೂರ-ವಿಜಯದ ಕ್ರಿ. ಶ. ೧೫೨೦ರ ವರ್ಷವೇ ಆಗಿರಬಹುದು' ಎಂಬ ಊಹೆಯನ್ನು ವ್ಯಕ್ತಪಡಿಸಿದ್ದಾರೆ. ಈ ಊಹೆಗೆ ಆಧಾರಬಲ ಎಷ್ಟಿದೆ ಎಂಬುದನ್ನು ನೋಡುವಾ :

'The Krishna and Hazara Ramaswami temples were built and the construction of the Vithala temple comenced in his reign. A beautiful image of Krishna is said to have been brought from Udayagiri after his eastern campaign and tradition has it that he brought the image of Vithal from Pandharapura'[1] [ಕೃಷ್ಣದೇವರಾಯನ ಆಳಿಕೆಯಲ್ಲಿಯೆ ಕೃಷ್ಣ ಮತ್ತು ಹಜಾರರಾಮ ದೇವಾಲಯಗಳು ಕಟ್ಟಲಾದವು. ವಿಠ್ಠಲನ ಗುಡಿಯ ನಿರ್ಮಿತಿಯೂ ಈ ಕಾಲದಲ್ಲಿಯೇ ಆಯಿತು. ಸುಂದರವಾದ ಕೃಷ್ಣಮೂರ್ತಿಯನ್ನು ಉದಯಗಿರಿಯಿಂದ ಮತ್ತು ವಿಠ್ಠಲಮೂರ್ತಿಯನ್ನು ಪಂಢರಪುರದಿಂದ ತರಲಾಯಿತೆಂದು ಹೇಳಲಾಗುತ್ತದೆ.]

ಈ ಉಲ್ಲೇಖ ಮತ್ತು,

'In Saka 1442-43 (i.e., 1520-21) a battle was fought between Krishnaraya of Vijayanagara and the Sultan of Bijapur Ismail Adil Shah, in which the latter sustained a crushing defeat at the hands of the former. But before and after the incident there was perfect peace between the two powers. During the period it was quite possible for Krishnaraya to remove the Vithala image of Pandharapura to Vijayanagara.' [ಕ್ರಿ.ಶ. ೧೫೨೦-೨೧ ರ ಕಾಲಕ್ಕೆ ವಿಜಯನಗರದ ಕೃಷ್ಣದೇವರಾಯ ಮತ್ತು ವಿಜಾಪುರದ ಸುಲ್ತಾನ ಇಸ್ಮಾಯಿಲ್ ಆದಿಲ ಶಾಹ ಇವರಲ್ಲಿ ಯುದ್ಧವಾಯಿತು. ಈ ಯುದ್ಧದಲ್ಲಿ ಕೃಷ್ಣದೇವರಾಯನ ಕೈ ಮೇಲಾಯಿತು. ಈ ಯುದ್ಧದ ಪೂರ್ವ ಮತ್ತು ಉತ್ತರ ಕಾಲದಲ್ಲಿ ಎಲ್ಲೆಡೆಯೂ ಸಂಪೂರ್ಣ ಶಾಂತಿ ನೆಲಸಿತ್ತು. ಈ ಕಾಲದಲ್ಲಿ ಕೃಷ್ಣದೇವರಾಯನಿಗೆ ವಿಠ್ಠಲಮೂರ್ತಿಯನ್ನು ಪಂಢರಪುರದಿಂದ ವಿಜಯನಗರಕ್ಕೆ ತರಲು ಸಾಧ್ಯವಾಗಿರಬಹುದು.]

ಎಂಬ ಅನುಮಾನ ಮತ್ತು,

'Saka 1436 and 1438 (i.e., 1514-1516) Krishnadevaraya and his two queens donated i. one gold plate with 991 Pagodas, ii. 25 silver lamps, iii. 200 cows, iv. four villages, v. erection of a 100

---

1 *Vijayanagara Sexcentenary Volume*—'Krishnadevaraya the Man' by K. Raghavacharlu. p. 187.

pillared mandapa, vi. Devasamudra and four other villages in Rayadurga Taluq, vii. the taxes on boats of the Tungabhadra for the worship of Vitthaladeva.'

[ಕ್ರಿ.ಶ. ೧೫೧೪-೧೫೧೬ರಲ್ಲಿ ಕೃಷ್ಣದೇವರಾಯನೂ ಆತನ ಇಬ್ಬರು ರಾಣಿಯರೂ (೧) ೯೯೧ ಪಗೋಡ (ಒಂದು ಸುವರ್ಣನಾಣ್ಯ)ಗಳನಿಟ್ಟು ಒಂದು ಚಿನ್ನದ ತಟ್ಟೆ, (೨) ೨೫ ರಜತ ದೀಪ (ಬೆಳ್ಳಿಸಮೆ), (೩) ೨೦೦ ಆಕಳು, (೪) ನಾಲ್ಕು ಹಳ್ಳಿಗಳು, (೫) ೧೦೦ ಕಂಬಗಳ ಮಂಟಪ, (೬) ರಾಯದುರ್ಗ ತಾಲೂಕಿನಲ್ಲಿಯ ದೇವಸಮುದ್ರ ಮತ್ತು ಇತರ ನಾಲ್ಕು ಹಳ್ಳಿಗಳು, (೭) ತುಂಗಭದ್ರಾ ನದಿಯಲ್ಲಿ ಅಡ್ಡಾಡುವ ನಾವೆಗಳ ಕರ ಇವುಗಳನ್ನು ವಿಠ್ಠಲನ ಪೂಜೆಗಾಗಿ ದಾನಮಾಡಿದರು.][1] ಎಂಬ ಘಟನೆ,

ಇವುಗಳನ್ನು ಪರಿಶೀಲಿಸಿ, ಮತ್ತು ಲಕ್ಷ್ಮೀಶನ ಕಾವ್ಯದಲ್ಲಿ ಬರುವ

'ಸಲೆ ಪುಂಡರೀಕನಾಗಿರುತಿಹಂ ಕೀರ್ತಿಯಿಂ
ಸುಲಲಿತಚರಿತ ಭಾಗವತ ಶಿರೋಮಣಿ ಚಂದ್ರಹಾಸಂ'

ಎಂಬ ವರ್ಣನೆಯಲ್ಲಿ ಕಾಣುವ ವಿಠ್ಠಲಸಂಪ್ರದಾಯ ಸಂಬಂಧವನ್ನು ಗಮನಿಸಿ, ಪುಂಡರೀಕನ ನಾಮೋಲ್ಲೇಖವು ಸಂಸ್ಕೃತ ಜೈಮಿನಿ ಭಾರತದಲ್ಲಿ ಇಲ್ಲದಿರುವುದನ್ನು ಅನುಲಕ್ಷಿಸಿ, ದ. ರಾ. ಬೇಂದ್ರೆಯವರು ಹೀಗೆ ಊಹಿಸುತ್ತಾರೆ :

ಕೃಷ್ಣದೇವರಾಯನ ದಿಗ್ವಿಜಯ, ಅವನ ವಿಠ್ಠಲಭಕ್ತಿ, 'ಏಕಂ ಸತ್ ವಿಪ್ರಾ ಬಹುಧಾ ವದಂತಿ' ಎಂದಿರುವ ಆತನ ಶ್ರದ್ಧೆ, ಆತನ ಸರ್ವಮತ ಸಹಿಷ್ಣುತೆ ಈ ಗುಣಗಳು ಚಂದ್ರಹಾಸನ ಚರಿತ್ರದಲ್ಲಿ ಪ್ರತಿಬಿಂಬಿಸಿದಂತಿವೆ, ಎಂದು ಅವರೆನ್ನುತ್ತಾರೆ. ಆದುದರಿಂದ ಕನ್ನಡ ಜೈಮಿನಿ ಭಾರತದ ರಚನೆ ವಿಠ್ಠಲಮೂರ್ತಿಯ ಪುನಃಪ್ರತಿಷ್ಠೆಯ ಕಾಲಕ್ಕೆ ಎಂದರೆ ಕ್ರಿ.ಶ. ೧೫೨೦-೨೧ಕ್ಕೆ ಆಗಿರಬೇಕು ಎಂದು ಅವರ ಅಭಿಪ್ರಾಯವಾಗಿದೆ.

ಆದರೆ, ಕಾವ್ಯದಲ್ಲಿಯ ವ್ಯಕ್ತಿಚಿತ್ರಣ ಮತ್ತು ಇತಿಹಾಸದಲ್ಲಿಯ ವ್ಯಕ್ತಿಚಿತ್ರಣ ಇವುಗಳಲ್ಲಿ ಕಾಣುವ ಸಾಮ್ಯವನ್ನು ಲಕ್ಷಿಸಿ ಒಂದು ನಿರ್ಣಯಕ್ಕೆ ಬರುವ ಸಂದರ್ಭದಲ್ಲಿ, ಕೋನಯ್ಯನ ಗಯಚರಿತ್ರೆಯಲ್ಲಿ ಪ್ರತ್ಯಕ್ಷವಾಗಿ ಕಾಣುವ ಲಕ್ಷ್ಮೀಶನ ಉಲ್ಲೇಖ, ಆ ಕಾವ್ಯದಲ್ಲಿ ಕಾಣುವ ಲಕ್ಷ್ಮೀಶನ ವರ್ಣನೆಯ ಅವತರಣಿಕೆಯೇ ಎಂಬಂತಿರುವ ಓಲಗಶಾಲೆಯ ವರ್ಣನೆ ಇವುಗಳನ್ನು ಮರೆಯಲಾಗದು ಎಂದು ನಮಗೆನಿಸುತ್ತದೆ. ಕವಿ ಕೋನಯ್ಯನು ಕೃಷ್ಣದೇವರಾಯನ ಆಳಿಕೆಯಲ್ಲಿಯೇ ಕಾವ್ಯವನ್ನು ರಚಿಸಿರುವುದರಿಂದ, ಮತ್ತು ಅದರ ರಚನೆ ೧೫೦೯-೧೫೨೯ ರ ಮಧ್ಯದಲ್ಲಿ—ಸಂಭವತಃ ೧೫೨೦-೨೧ರ ಸುಮಾರಿಗೆ—ಆಗಿರಬಹುದಾದುದರಿಂದ ಜೈಮಿನಿ ಭಾರತದ ರಚನಾಕಾಲದ ಪೂರ್ವದ ಗಡುವು ೧೫೨೦ಕ್ಕಿಂತ ಸ್ವಲ್ಪವಾದರೂ ಹಿಂದಕ್ಕೆ ಹೋಗುತ್ತದೆಂದು ತೋರುತ್ತದೆ. ಏಕೆಂದರೆ, ಕೋನಯ್ಯನ ಮೇಲೆ ಅಷ್ಟೊಂದು ಪ್ರಭಾವ ಬೀಳಬೇಕಾದರೆ, ಕನ್ನಡ

[1] *Vijayanagara Sexcentenary Volume* ...'Krishnadevaraya and the Vitthala Image, by G. H. Khare, p. 194 & 196.

ಜೈಮಿನಿ ಭಾರತವು ತುಂಬಾ ಪ್ರಚುರವಾಗಿರಬೇಕಷ್ಟೆ? ಅಷ್ಟಾಗುವುದಕ್ಕೆ ಸ್ವಲ್ಪ ಅವಕಾಶ ವನ್ನು ಕೊಡಬೇಕಾಗುತ್ತದೆ. ಆ ಅವಕಾಶ ಇಷ್ಟೇ ಎಂದು ಈಗ ಹೇಳುವುದು ಸಾಧ್ಯ ವಿಲ್ಲವಾದರೂ ಕನಿಷ್ಠ ೫–೬ ವರುಷಗಳಾದರೂ ಬೇಕೆಂದು ಇಟ್ಟುಕೊಳ್ಳಬಹುದು. ಅಲ್ಲದೆ, ಯಾವನೊಬ್ಬ ಕವಿ ತನ್ನ ಕಾವ್ಯದಲ್ಲಿ ಪೂರ್ವಕವಿಗಳನ್ನು ಸ್ಮರಿಸುವುದೇ ಸಾಮಾನ್ಯ ವಾಡಿಕೆಯಾಗಿದ್ದುದರಿಂದ ತೀರ ಸಮಕಾಲೀನನಾದ ಲಕ್ಷ್ಮೀಶನನ್ನು ಕೋನ ಯ್ಯನು ಹೊಗಳಿದನೆಂದೆನ್ನುವುದು ಸ್ವಲ್ಪ ಧಾರ್ಷ್ಟ್ಯವೇ ಆದೀತು. ಆದುದರಿಂದ ಕ್ರಿ.ಶ. ಸುಮಾರು ೧೫೧೫ ರಷ್ಟು ಹೊತ್ತಿಗೆ ಕನ್ನಡ ಜೈಮಿನಿ ಭಾರತವು ರಚಿತವಾಗಿತ್ತು ಎನ್ನುವುದು ಸಮಂಜಸವೆಂದು ನಮಗೆ ತೋರುತ್ತದೆ.

## ಸಾರಾಂಶ

ಅಂತೂ, ವಿಮರ್ಶಾದೃಷ್ಟಿಗೆ ಕಾಣುವ ಶಾಬ್ದಿಕ ವೈಚಾರಿಕ ಸಾಮ್ಯಪ್ರಮಾಣ ಗಳು, ಇತಿಹಾಸ ಸಂಶೋಧನ ದೃಷ್ಟಿಗೆ ಕಾಣುವ ಪ್ರತ್ಯಕ್ಷಪ್ರಮಾಣದ ಮುಂದೆ ಮಖಾಳ ವಾಗುವುದರಿಂದ ಲಕ್ಷ್ಮೀಶನ ಕನ್ನಡ ಜೈಮಿನಿ ಭಾರತದ ರಚನಾಕಾಲವು ಕ್ರಿ.ಶ. ೧೫೧೫ ರಿಂದೀಚೆಗೆ ಬರಲಾರದು ಎಂದು ಕೋನಯ್ಯನ ಉಲ್ಲೇಖದಿಂದ ಸ್ಪಷ್ಟವಾಗುತ್ತದೆ. ಈ ಕಾವ್ಯದಲ್ಲಿ ವಿಠ್ಠಲಸಂಪ್ರದಾಯದ ಸಮನ್ವಯ ದೃಷ್ಟಿ ಕಾಣುವುದರಿಂದ ಆ ಸಂಪ್ರದಾಯ ಅತ್ಯಂತ ಪ್ರಭಾವಿಯಾಗಿದ್ದ ಕಾಲದಲ್ಲಿ ಈ ಕಾವ್ಯ ಹುಟ್ಟಿತೆಂದು ಮಾತ್ರ ನಿರ್ವಿವಾದ ವಾಗಿದೆ. ವಿಠ್ಠಲಸಂಪ್ರದಾಯದ ಭಕ್ತಿ ಲಕ್ಷ್ಮೀಶನನ್ನು ಆಕರ್ಷಿಸಿದೆ; ಹಾಗೆಯೇ ವಿಜಯನಗರದ ಕೃಷ್ಣದೇವರಾಯನನ್ನೂ ಆಕರ್ಷಿಸಿದೆ. ಆ ರಾಯನು ಪಟ್ಟವೇರಿದ ಆರಂಭದ ಕಾಲಮಾನದಲ್ಲಿ ಕ.ಜೈ.ಭಾ.ವು ಹುಟ್ಟಿದ್ದರೂ ಹುಟ್ಟಿರಬಹುದು. ವಿಷ್ಣು ಭಕ್ತನಾದ ಕೃಷ್ಣದೇವರಾಯನು ಸಾಮ್ರಾಜ್ಯ ಸಿಂಹಾಸನವನ್ನು ಅಲಂಕರಿಸುವುದೆಂದ ರೆಯೇ ಶ್ರೀಕೃಷ್ಣಭಕ್ತಿಯ ವಿಜಯವೆಂದು ಧ್ವನ್ಯರ್ಥದಲ್ಲಿ ತಿಳಿದುಕೊಳ್ಳಲಡ್ಡಿಯಿಲ್ಲ. ಕಾಲಿಕವಾಗಿ ತಿಮ್ಮಣ್ಣಕವಿ, ಗುಬ್ಬಿ ಮಲ್ಲಣಾರ್ಯ, ನಂಜುಂಡ, ಇನೆಯ ಮಂಗರಸ ಇವರು ಸಮಸಾಮಯಿಕರೋ ಸಮೀಪದವರೋ ಆಗಬಹುದು. ಏನೇ ಇದ್ದರೂ ಕವಿ ಲಕ್ಷ್ಮೀಶನು ಕುಮಾರವ್ಯಾಸನಿಗಿಂತ ಅನಂತರದವನು, ಪುರಂದರದಾಸ ಕನಕದಾಸ ಕೋನಯ್ಯ ಇವರಿಗಿಂತ ಹಿಂದಿನವನು. ಇವನ ಕಾವ್ಯದ ರಚನೆ ಕಾವ್ಯಾಂತರ್ಗತ ವಿಷಯ ವಿವೇಚನೆ ಮತ್ತು ಬಾಹ್ಯಪ್ರಮಾಣಗಳಿಂದ ಕ್ರಿ.ಶ. ೧೫೧೦ ರಿಂದ ೧೫೧೫ ರ ಮಧ್ಯದಲ್ಲಿ ಆಯಿತು ಎಂಬುದು ಸಿದ್ಧವಾಗುತ್ತದೆ.

### ಕವಿ ಲಕ್ಷ್ಮೀಶನ ಇತರ ಕೃತಿಗಳು

ಮೈಸೂರು ಸಂಸ್ಥಾನದ ಸಾಹಿತ್ಯ ಸಂಸ್ಕೃತಿ ಅಭಿವೃದ್ಧಿ ಶಾಖೆಯವರು ಪ್ರಕ ಟಿಸಿದ ಕನ್ನಡ ಜೈಮಿನಿ ಭಾರತ ಗ್ರಂಥದಲ್ಲಿ ಲಕ್ಷ್ಮೀಶವಿರಚಿತಗಳೆಂದು ಕೆಲವು ಕೀರ್ತನೆ ಗಳನ್ನು ಅನುಬಂಧವಾಗಿ ಶೇಖರಿಸಿ ಕೊಟ್ಟಿದ್ದಾರೆ. ಈ ಮೊದಲೇ ಇವು ಸಾಹಿತ್ಯ

ಪರಿಷತ್ಪತ್ರಿಕೆ (೧೯೨೨ರ ಜನೆವರಿ)ಯಲ್ಲಿ ಕುಮಾಂಡೂರ ರಾಮಸ್ವಾಮಯ್ಯಂಗಾರ್ಯ ರಿಂದ ಪ್ರಚುರವಾಗಿದ್ದವು. ಇವುಗಳ ಬಗೆಗೆ 'ಈ ಹಾಡುಗಳು ಲಕ್ಷ್ಮೀಶವಿರಚಿತಗಳಾಗಿರ ಬಹುದು. ಇವು ಒಳ್ಳೆಯ ಕವಿ ಬರೆದ ಹಾಡುಗಳಂತೆ ಕಾಣುತ್ತವೆ. ಕೊಂಚ ಶ್ರಮ ವಹಿಸಿ ಹುಡುಕಿದರೆ ತಾಳೆಯೋಲೆಯ ಸಂಗ್ರಹದಲ್ಲಿ ಈ ಹಾಡುಗಳನ್ನು ಕಾಣಬಹುದು' ಎಂದು ಬಿ. ಶಿವಮೂರ್ತಿಶಾಸ್ತ್ರಿಗಳು ಅಭಿಪ್ರಾಯಪಟ್ಟಿದ್ದಾರೆ.

ಈ ಹಾಡುಗಳು ನಮಗೆ ಯಾವ ತಾಳೆಗರಿ ಪ್ರತಿಯಲ್ಲಿಯೂ ನೋಡಲು ದೊರೆ ಯಲಿಲ್ಲ. ಆದರೆ ದೇವನೂರಿಗೆ ಹೋದಾಗ ಅಲ್ಲಿಯ ಜನರು ಈ ಹಾಡುಗಳು-ಕೀರ್ತನೆ ಗಳು ಲಕ್ಷ್ಮೀಶನು ಬರೆದವುಗಳು, ಇಲ್ಲಿಯ ಕೆಲವು ವಯೋವೃದ್ಧರು ಇವುಗಳನ್ನು ಅನ್ನು ತ್ತಾರೆ ಎಂದು ಹೇಳಿದರು. ಈ ಹತ್ತು ಕೀರ್ತನೆಗಳು ಭಕ್ತಿಗೀತಗಳಾಗಿವೆ. ಇಲ್ಲಿಯ 'ದಶಾವತಾರದ ಹಾಡು' ಜೈಮಿನಿ ಭಾರತದ ಸಂ. ೧೭, ಪ. ೪೨ರ ದಶಾವತಾರ ಪದ್ಯದ ವರ್ಣನಾಸಾದೃಶ್ಯವುಳ್ಳದಾಗಿದೆ. ಹಾಡು ೧,೨,೩ರಲ್ಲಿ ಲಕ್ಷ್ಮೀಕಾಂತನ ಭಜನಕೀರ್ತನ, ೪ ರಲ್ಲಿ ಲಕ್ಷ್ಮೀಕಾಂತನ ಪಾದಾದಿಕೇಶಾಂತ-ವರ್ಣನೆ, ೫ ರಲ್ಲಿ ಲಕ್ಷ್ಮೀಕಾಂತನ ಕೇಶಾದಿ ಪಾದಾಂತವರ್ಣನೆ, ೬ ರಲ್ಲಿ ದಶಾವತಾರ ವರ್ಣನೆ, ೭ ರಲ್ಲಿ ಲಕ್ಷ್ಮೀಕಾಂತನ ಅದ್ಭುತ ರೂಪ, ೮ ರಲ್ಲಿ ಉತ್ಸವಮೂರ್ತಿಯ ವರ್ಣನೆ, ೯–೧೦ ರಲ್ಲಿ ಉದಯರಾಗ ಹೀಗೆ ಬೇರೆ ಬೇರೆ ವಿಷಯಗಳಿವೆ. ಎಲ್ಲ ಹಾಡುಗಳ ಮುಖ್ಯ ವಿಷಯ ಕೃಷ್ಣಸ್ತುತಿ. 'ಕೃಷ್ಣ ಚರಿತಾ ಮೃತಂ' ಆಗುವಂತೆ ಜೈಮಿನಿಭಾರತ ಕಾವ್ಯವನ್ನು ಬರೆದ ಕವಿ ಕೃಷ್ಣಭಕ್ತಿಯ ಹಾಡು ಗಳನ್ನು ಕಟ್ಟಿರಬಹುದು. ಲಕ್ಷ್ಮೀಶಕವಿ ಲಕ್ಷ್ಮೀಕಾಂತ ದೇವಸ್ಥಾನದಲ್ಲಿ ಚಾಮರಸೇವೆ ಯನ್ನು ಸಲ್ಲಿಸುತ್ತಿದ್ದನೆಂದು ಹೇಳುತ್ತಾರೆ. ಆ ಕಾಲದಲ್ಲಿ ಭಕ್ತನ ಹೃದಯದಲ್ಲಿ ಒಡ ಮೂಡಿದ ಭಾವನೆಗಳೇ ಈ ಹತ್ತು ಹಾಡುಗಳಾಗಿ ರೂಪುಗೊಂಡಿವೆ.

ಇನ್ನು K. 1304 ರಲ್ಲಿ ಪುರುಷಾಮೃಗದ ಪ್ರಸಂಗ ಎಂಬ ಒಂದು ಹೆಚ್ಚಿನ ಸಂಧಿ ದೊರಕಿತು. ಇದೂ ಕವಿ ಲಕ್ಷ್ಮೀಶನೇ ಕುಮಾರವ್ಯಾಸ ಭಾರತದ ಸಭಾಪರ್ವದ ೭ನೆಯ ಸಂಧಿಯನ್ನು ಮುಂದಿಟ್ಟುಕೊಂಡು ಭಾಮಿನೀಷಟ್ಪದಿಯಲ್ಲಿಯೇ ರಚಿಸಿದಂತಿದೆ. ಇದರ ವಿವರವಾದ ಚರ್ಚೆಯನ್ನು ಅನುಬಂಧ-ಕುಮಾರವ್ಯಾಸ-ಮತ್ತು ಲಕ್ಷ್ಮೀಶ ಎಂಬಲ್ಲಿ ನೋಡಬಹುದು.

ಈ ಎರಡನ್ನು ಬಿಟ್ಟರೆ, ಉಳಿದ ಮತ್ತಾವ ಕೃತಿಯನ್ನಾದರೂ ಲಕ್ಷ್ಮೀಶ ಬರೆದಿರ ಬೇಕು ಎಂಬಂತೆ ಎಲ್ಲಿಯೂ ಕಂಡುಬಂದಿಲ್ಲ, ಮತ್ತು ಅವು ಯಾವುವೂ ಉಪಲಬ್ಧವಿಲ್ಲ. ಮೇಲೆ ಉಲ್ಲೇಖಿಸಿದ ಕೀರ್ತನೆಗಳು, ಪುರುಷಾಮೃಗದ ಪ್ರಸಂಗ ಇನ್ನೂ ಬೇರೆ ಬೇರೆ ತಾಳೆಗರಿ ಪ್ರತಿಯಲ್ಲಿ ದೊರೆಯುತ್ತ ಹೋದಂತೆ ಅವುಗಳ ಕರ್ತೃತ್ವವನ್ನು ಸ್ಥಾಪಿಸು ವುದು ಸಾಧ್ಯ. ಸದ್ಯಕ್ಕೆ ಗಮನಿಸಬೇಕಾದುವು ಎರಡು ಮಾತ್ರ :

೧. ಕೀರ್ತನೆಗಳು
೨. ಪ್ರಸಂಗ (ಪುರುಷಾಮೃಗ)

**ಸಮಾರೋಪ**

ಸಂಸ್ಕೃತ ಜೈಮಿನಿ ಭಾರತವು ಬಹಳ ಪುರಾತನವಾದುದು, ವ್ಯಾಸರ ಶಿಷ್ಯನಾದ ಜೈಮಿನಿ ಬರೆದುದು ಅಲ್ಲ. ಅದು ಕ್ರಿ.ಶ. ೧೦೦೦ ದ ಅನಂತರದ ರಚನೆ, ಭಾಗವತೋತ್ತರ ಕಾವ್ಯ ಎಂಬುದನ್ನು ಕಂಡುಕೊಂಡೆವು. ಇದನ್ನು ಅನುಸರಿಸಿ ಕನ್ನಡ ಕಾವ್ಯವನ್ನು ಬರೆದ ಲಕ್ಷ್ಮೀಶನು ಸಂಸ್ಕೃತ ಕಾವ್ಯವನ್ನು ಶಬ್ದಶಃ ಅನುವಾದಿಸಿದ್ದಾನೆಯೆ, ಅಥವಾ ತನ್ನ ಹೊಸತನವನ್ನು ತೋರಿಸಿದ್ದಾನೆಯೆ ಎಂಬುದನ್ನು ಇನ್ನೂ ಹೆಚ್ಚಿನ ಅಭ್ಯಾಸದಿಂದ ಶೋಧಿಸುವುದು ಅಗತ್ಯ.

'ಇತಿವೃತ್ತಂ ತು ಕಾವ್ಯಸ್ಯ ಶರೀರಂ ಪರಿಕೀರ್ತಿತಃ
ಪಂಚಭಿಃ ಸಂಧಿಭಿಸ್ತಸ್ಯ ವಿಭಾಗಾಃ ಪರಿಕೀರ್ತಿತಾಃ'

—ಭರತಮುನಿ

## ೨/ಕಾವ್ಯವಸ್ತು

- ಪ್ರಸ್ತಾವನೆ
- ವಸ್ತು ಎಂದರೇನು ?
- ಕಥಾವಸ್ತುವಿನ ವಿಭಜನಾಕ್ರಮ
- ಮುಖಸಂಧಿ (ಶ್ರೀಕೃಷ್ಣ ಶ್ರದ್ಧೆ)
- ಪ್ರತಿಮುಖಸಂಧಿ (ಶೀಲ—ವಿಧಿ)
- ಗರ್ಭಸಂಧಿ (ಪರಿವರ್ತನ ಮತ್ತು ವಿಘಗಳಿಗೆ)
- ಅವಮರ್ಶಸಂಧಿ (ವಿರಿಳಿತ-ದೈವ ದುರ್ವಿಪಾಕ)
- ನಿರ್ವಹಣಸಂಧಿ (ಪುಣ್ಯಮಿದುಕೃಷ್ಣ ಚರಿತಾಮೃತಂ)
- ಸಮಾರೋಪ

### ಕಾವ್ಯವಸ್ತುವಿನ ಬಂಧಸೌಂದರ್ಯ

ಈ ಕಾವ್ಯದಲ್ಲಿ ಬರುವ ಕಥಾನಕಗಳ ವ್ಯಾಪ್ತಿ ಕೆಳಗಿನಂತಿದೆ :

| ಅ. ಸಂ. | ವಿವರ | ಪದ್ಯಗಳು |
|---|---|---|
| ೧ | ಕಾವ್ಯ ಪ್ರಾರಂಭ | ೧೨ |
| ೨ | ಯಜ್ಞ ನಿಶ್ಚಯ | ೬೭ |
| ೩ | ಯೌವನಾಶ್ವನಿಂದ ಅಶ್ವಪ್ರಾಪ್ತಿ | ೧೧೬ |
| ೪ | ಮರುತ್ತನ ಕಥೆ | ೨೩ |
| ೫ | ವ್ಯಾಸ-ಧರ್ಮೋಪದೇಶ | ೪೦ |
| ೬ | ಭೀಮನು ದ್ವಾರಕೆಯಿಂದ ಕೃಷ್ಣನನ್ನು ಕರೆತರುವದು | ೫೫ |
| ೭ | ಅನುಸಾಲ್ವನಿಂದ ಅಶ್ವಾಪಹರಣ | ೬೮ |

(ಮುಂದುವರಿದಿದೆ)




ಲಕ್ಷ್ಮೀಶನ ಋತುಪ್ರಜ್ಞಾವಿಲಾಸವು 'ಕಾವ್ಯವಸ್ತುವಿನ ಬಂಧಸೌಂದರ್ಯ' ಚಿತ್ರನಿರ್ಮಾಣಕ್ಕೆ ಪ್ರೇರಕವಾಗಿದೆ.

| ಅ. ನಂ. | ವಿವರ | ಪದ್ಯ ಗಳು |
|---|---|---|
| ೮ | ನೀಲಧ್ವಜ | ೭೧ |
| ೯ | ಚಂಡಿ (ವಿಂಧ್ಯ) | ೩೬ |
| ೧೦ | ಹಂಸಧ್ವಜ | ೨೧೫ |
| ೧೧ | ಪಾರ್ವತಿಯ ತಪಸ್ಸು | ೨೨ |
| ೧೨ | ಅಕೃತ ವ್ರಣ | ೧೧ |
| ೧೩ | ಪ್ರಮೀಳೆ | ೨೭ |
| ೧೪ | ಭೀಷಣ | ೨೮ |
| ೧೫ | ಬಭ್ರುವಾಹನ | ೨೫೪ |
| ೧೬ | ರಾಮಾಯಣ | ೨೫೨ |
| ೧೭ | ತಾಮ್ರಧ್ವಜ | ೧೪೦ |
| ೧೮ | ವೀರವರ್ಮ | ೫೬ |
| ೧೯ | ಚಂದ್ರಹಾಸ | ೨೭೦ |
| ೨೦ | ಬಕದಾಲ್ಭ್ಯ | ೨೭ |
| ೨೧ | ದುಶ್ಶಳೆ | ೭ |
| ೨೨ | ಯಜ್ಞಾಶ್ವ ಪರಿಭ್ರಮಣ ವೃತ್ತಾಂತ | ೨೬ |
| ೨೩ | ಯಜ್ಞ ಸಿದ್ಧತೆ | ೫೧ |
| ೨೪ | ಯಜ್ಞ ಸಮಾಪ್ತಿ | ೨೮ |
| ೨೫ | ಕಾವ್ಯ ಸಮಾಪ್ತಿ | ೭ |

X ಅಕ್ಷ—(ಪ್ರತ್ಯೇಕವಾಗಿ ಅಚ್ಚಾಗಿರುವ ಚಿತ್ರಪುಟ ನೋಡಿ.) ಈ ಅಕ್ಷದ ಮೇಲೆ ಲಕ್ಷ್ಮೀಶನ ಜೈಮಿನಿ ಭಾರತದಲ್ಲಿ ಬರುವ ಕಥೆಗಳನ್ನು ತಗೆದುಕೊಳ್ಳಲಾಗಿದೆ. X ಅಕ್ಷದ ಮೇಲಿನ ಐದು ಮನೆಗಳಿಗೆ ಒಂದು ಕಥೆ ಎಂದು ಪರಿಗಣಿಸಲಾಗಿದೆ. ಒಂದು ಕಥೆಗೂ ಇನ್ನೊಂದು ಕಥೆಗೂ ಅಂತರವನ್ನು ತೋರಿಸಲು X ಅಕ್ಷದಗುಂಟ ಐದು ಮನೆಗಳ ಅಂತರವನ್ನು ಬಿಡಲಾಗಿದೆ.

ಮೊದಲನೆಯ ಘಟಕವು (೧) ಕಾವ್ಯ ಪ್ರಾರಂಭ. ಇಪ್ಪತ್ತೈದನೆಯ ಘಟಕವು (೨೫) ಕಾವ್ಯ ಸಮಾಪ್ತಿ. ಈ ಚಿತ್ರದಲ್ಲಿ ಕಥೆಗಳನ್ನು ಋತುಗಳ ಹಿನ್ನೆಲೆಯಲ್ಲಿ ವಿಭಜಿಸಲಾಗಿದೆ. ಕಾವ್ಯ ಪ್ರಾರಂಭ ಹಾಗೂ ಕಾವ್ಯ ಸಮಾಪ್ತಿಗಳನ್ನು ಋತುಗಳಿಂದ ಬೇರ್ಪಡಿಸಿ, ಕಾವ್ಯ ಪ್ರಾರಂಭದಿಂದ (೧) ಮೊದಲನೆಯ ಕಥೆಗೆ ೧೫ ಮನೆಗಳನ್ನು ತೆರವು ಬಿಡಲಾಗಿದೆ. ಇದರಂತೆಯೆ ಕೊನೆಯ (೨೪) ಕಥೆ ಮತ್ತು ಕಾವ್ಯಸಮಾಪ್ತಿ (೨೫) ಇವುಗಳ ನಡುವೆ ೧೫ ಮನೆಗಳನ್ನು ತೆರವು ಬಿಡಲಾಗಿದೆ. ಚೈತ್ರ ಉತ್ತರ (1) ವಸಂತ ಗ್ರೀಷ್ಮ(2

ವರ್ಷಾ ಶರತ್ (3) ಹೇಮಂತ ಶಿಶಿರ (4) ಚೈತ್ರ ಪೂರ್ವ (5) ಹೀಗೆ ಕಾವ್ಯದಲ್ಲಿ ಬಳಸಿದ ಅನುಕ್ರಮದಲ್ಲಿಯೇ ಋತುಮಾನಗಳ ವಿಭಜನೆಯನ್ನು ಇಲ್ಲಿ ತೋರಿಸಲಾಗಿದೆ. ಒಂದು ಋತು ವಿಭಾಗಕ್ಕೂ ಮತ್ತು ಇನ್ನೊಂದು ಋತು ವಿಭಾಗಕ್ಕೂ ನಡುವೆ ೨೦ ಮನೆಗಳ ಅಂತರವನ್ನು ತೆರವು ಇಡಲಾಗಿದೆ. ಒಂದೊಂದು ಋತುಮಾನವನ್ನೂ ಪ್ರತ್ಯೇಕವಾಗಿ ಗುರುತಿಸಲಾಗಿದೆ. ಚೈತ್ರ ಉತ್ತರ, ವಸಂತ ಗ್ರೀಷ್ಮ, ವರ್ಷಾ ಶರತ್, ಹೇಮಂತ ಶಿಶಿರ, ಚೈತ್ರ ಪೂರ್ವ, ಈ ಋತು ಬದಲಾವಣೆಯನ್ನು ಋತು ವಿಭಾಗಗಳ ಅಂತರದಲ್ಲಿಯ ತೆರವು ಸ್ಥಳದಲ್ಲಿ ತೋರಿಸಿದೆ.

Y ಅಕ್ಷದ ಮೇಲೆ ಕಥೆಯ ವಿಸ್ತಾರವನ್ನು ಪದ್ಯಗಳ ಮಾನದಿಂದ ತೋರಿಸಲಾಗಿದೆ. Y ಅಕ್ಷದ ಮೇಲೆ ಒಂದು ಮನೆ=ಎರಡು ಪದ್ಯ ಎಂದು ತೆಗೆದುಕೊಳ್ಳಲಾಗಿದೆ. ಉದಾ : ಕಾವ್ಯ ಪ್ರಾರಂಭ(೧)ರಲ್ಲಿ ೧೨ ಪದ್ಯಗಳಿವೆ. ಇದಕ್ಕೆ Y ಅಕ್ಷದ ಮೇಲೆ ೬ ಮನೆಗಳನ್ನು ತೆಗೆದುಕೊಳ್ಳಲಾಗಿದೆ. ಕಾವ್ಯಪ್ರಾರಂಭದ X ಅಕ್ಷದ ೫ ಮನೆಗಳು Y ಅಕ್ಷದ ೬ ಮನೆಗಳು ಆಯತಾಕೃತಿಯಲ್ಲಿ ತೋರಿಸಲಾಗಿದೆ. ಈ ಆಯತಾಕೃತಿಗಳು ಕಪ್ಪುಬಣ್ಣವಿದ್ದು ಅಕ್ಷಕ್ಕೆ ಲಂಬಸ್ಥಿತಿಯಲ್ಲಿವೆ. ಈ ನಕ್ಷೆಯಲ್ಲಿ ೫ ಶಿಖರಗಳನ್ನು ತೋರಿಸಿದೆ. ಯೌವನಾಶ್ವದ ಕಥೆಯ ಮೇಲಿನ ಶಿಖರ—I, ಸುಧನ್ವ ಸುರಥ ಕಥಾನಕ ಶಿಖರ—II, ಬಭ್ರುವಾಹನ ಮತ್ತು ರಾಮಾಯಣ ಶಿಖರ—III, ಚಂದ್ರಹಾಸ ಶಿಖರ—IV, ಯಜ್ಞ ಸಿದ್ಧತೆ—V. ಲಕ್ಷ್ಮೀಶನ ಜೈಮಿನಿ ಭಾರತದಲ್ಲಿ ಬರುವ ಕಥಾನಕಗಳಲ್ಲಿ ಶಿಖರವನ್ನು ತೋರಿಸಿದ ಕಥಾನಕಗಳಿಗೆ ವಿಶಿಷ್ಟವಾದ ಮಹತ್ವವಿದೆ: I—ಯೌವನಾಶ್ವನ ರಾಜ್ಯದಿಂದ ಅಶ್ವಮೇಧಯಜ್ಞಕ್ಕಾಗಿ ಬೇಕಾಗುವ ಯಜ್ಞಾಶ್ವ; II—ಕೃಷ್ಣಸಾಯುಜ್ಯವನ್ನು ಪಡೆದ ಮತ್ತು ಶಿವನ ರುಂಡಮಾಲೆಯಲ್ಲಿ ಸ್ಥಾನವನ್ನು ಪಡೆದ ಸುಧನ್ವ ಸುರಥರು; III—ಅರ್ಜುನ,ವೃಷಕೇತು ಇವರ ಮರಣ,ಪುನರುಜ್ಜೀವನ ಮತ್ತು ಮಹೋಪಮೆಯಾಗಿ ಬಂದ ರಾಮಾಯಣ. IV—ಪರಿಪೂರ್ಣ ಪಾತ್ರಚಿತ್ರಣ ವಿಶಿಷ್ಟ ಚಂದ್ರಹಾಸ ಕಥಾನಕ; V—ರಾಜಾಧಿರಾಜರು, ಋಷಿಮುನಿಗಳು, ಉಪಸ್ಥಿತರಾಗುವ ಶ್ರೀ ಕೃಷ್ಣ ಭಕ್ತ ಸಮಾಗಮದ ಸ್ಥಾನ. ಯಜ್ಞಸಿದ್ಧತೆ, ಯಜ್ಞಮುಕ್ತಾಯ ಇದುವೇ ಈ ಕಾವ್ಯದ ಕಥಾಬೀಜ.

ಈ ಐದು ಶಿಖರಗಳು ಲಕ್ಷ್ಮೀಶನ ಜೈಮಿನಿ ಭಾರತವೆಂಬ ಕಾವ್ಯಸೌಧದ ಕಾಂತಿಯನ್ನು ಬೆಳೆಸುವ ಸ್ಥಾನಗಳಾಗಿವೆ. ಈ ಕಥಾನಕ ಶಿಖರಗಳೆಂದರೆ ಇಡೀ ಕಾವ್ಯದ ಶಿಖರ ಸ್ಥಾನಗಳೇ ಆಗಿವೆ.

## ಪ್ರಸ್ತಾವನೆ

'ಸಂಸ್ಕೃತ ಜೈಮಿನಿ ಭಾರತದ ಕಥಾಭಾಗವನ್ನು ತೆಗೆದುಕೊಂಡು ಅದನ್ನು ಕಾವ್ಯ ಲಕ್ಷಣಸಹಿತವಾಗಿ ಕನ್ನಡಕ್ಕೆ ಪರಿವರ್ತಿಸುವ ಕಾಲದಲ್ಲಿ, ಕಾವ್ಯಶೋಭೆಯನ್ನು ಹೆಚ್ಚಿಸುವುದಕ್ಕಾಗಿ ಲಕ್ಷ್ಮೀಶನು ತನ್ನ ಶೈಲಿಗೆ ತಕ್ಕಂತೆ ಮಾರ್ಪಡಿಸಿಕೊಂಡು, ವರ್ಣನಾ

ಚಾತುರ್ಯದಿಂದ ಚತುರೋಕ್ತಿ ಚಮತ್ಕಾರಸಹಿತವಾಗಿ ಪ್ರಾಸಾನುಪ್ರಾಸ ಶಬ್ದಾಲಂಕಾರಗಳನ್ನು ಸೇರಿಸಿ ತನ್ನ ಕಾವ್ಯರತ್ನವನ್ನು ನಿರ್ಮಿಸಿದನು. ಈ ಕಾರಣದಿಂದ ಸಂಸ್ಕೃತ ಜೈಮಿನಿ ಭಾರತಕ್ಕಿಂತಲೂ ಲಕ್ಷ್ಮೀಶನ ಕನ್ನಡ ಜೈಮಿನಿಯು ಕಾವ್ಯಾಲಂಕಾರ ಮಂಡಿತವಾಗಿ ಮನೋಹರವಾಗಿರುವುದು' ಎಂದು ಹೆಚ್. ನಾಗಪ್ಪ ಅವರು ಕಂಡುಕೊಂಡಿದ್ದಾರೆ. ಇವರ ಕಾಣ್ಕೆಯನ್ನು ಸಮರ್ಥಿಸುವುದಕ್ಕಾಗಿ 'ಕಾವ್ಯವಸ್ತು' ಎಂಬ ಪ್ರಕರಣ ರೂಪಗೊಂಡಿದೆ.

ಕಾವ್ಯಕ್ಕೆ ಮೂಲ-ಕಥಾವಸ್ತು-ಇತಿವೃತ್ತ. ಕನ್ನಡ ಜೈಮಿನಿ ಭಾರತದ ಕಥಾವಸ್ತುವಿನ ಬಂಧಸೌಂದರ್ಯ, ಕಥಾವಸ್ತುವಿನ ಏರಿಳಿತ, ಕಥಾವಸ್ತುವಿನ ವಿಭಜನಾಕ್ರಮ ಇವುಗಳನ್ನು ಭಾರತೀಯ ಕಾವ್ಯಶಾಸ್ತ್ರ ಮತ್ತು ಪಾಶ್ಚಿಮಾತ್ಯ ಕಾವ್ಯಶಾಸ್ತ್ರಗಳ ತತ್ತ್ವಗಳ ಹಿನ್ನೆಲೆಯಲ್ಲಿ ತೂಗಿ ನೋಡುವುದು ಅವಶ್ಯ. ಧನಂಜಯ ವಿರಚಿತ ದಶರೂಪಕ ಮತ್ತು ಪಾಶ್ಚಿಮಾತ್ಯ ಕಥಾತಂತ್ರ ಇವುಗಳನ್ನು ಆಧಾರವಾಗಿಟ್ಟುಕೊಂಡು ಕನ್ನಡ ಜೈಮಿನಿ ಭಾರತದ ಕಥಾವಸ್ತುವಿನ ಮೇಲ್ಮೆಯನ್ನು ಈ ಪ್ರಕರಣದಲ್ಲಿ ಸಮರ್ಥಿಸಿದ್ದೇವೆ. ಇದೊಂದು ಹೊಸ ಪ್ರಯತ್ನ.

'ಚಿತ್ರಕಲೆ ಮೂಕ ಕಾವ್ಯ ; ಕಾವ್ಯ ಮಾತನಾಡುವ ಕಲೆ' ಎಂದು ಒಂದು ಗ್ರೀಕ್ ಉಕ್ತಿಯುಂಟು. ಇದು ಯಥಾರ್ಥವಾದ ಮಾತು. ಚಿತ್ರವು ಮಾತನಾಡುವದಿಲ್ಲ, ಪ್ರೇಕ್ಷಕನ ಹೃದಯದಲ್ಲಿ ಭಾವವನ್ನು ಜಾಗೃತಗೊಳಿಸುತ್ತದೆ. 'ಆಡದೇ ಮಾಡುವನು ರೂಢಿಯೊಳಗುತ್ತಮನು' ಎಂಬ ಜಾತಿ ಚಿತ್ರಕಲೆಯದು. ಕಾವ್ಯವು ಭಾವವನ್ನು ಭಾಷೆಗೆ ತರುತ್ತದೆ. ಶಬ್ದಾರ್ಥವರ್ಣದಿಂದ ರಸಮೂರ್ತಿಯನ್ನು ಅದು ಚಿತ್ರಿಸುತ್ತದೆ. ಆ ರಸಮೂರ್ತಿಯ ಸ್ಪರ್ಶವು ರಸಿಕನಿಗೆ ಆನಂದವನ್ನು ದಯಪಾಲಿಸುತ್ತದೆ. ಕಾವ್ಯದಲ್ಲಿ ನಾಟ್ಯಾಂಶವಿದ್ದಾಗ ಶ್ರಾವ್ಯಕಾವ್ಯಕ್ಕೂ ದೃಶ್ಯಕಾವ್ಯದ ಕಳೆ ಏರುತ್ತದೆ. ಲಕ್ಷ್ಮೀಶನ ಜೈಮಿನಿ ಭಾರತವು ಇಂಥ ಒಂದು ನಾಟ್ಯ ಕಾವ್ಯವಾಗಿದೆ.

'ಕಾವ್ಯವಸ್ತು' ಎಂಬ ಈ ಪ್ರಕರಣದಲ್ಲಿ ಜೈಮಿನಿ ಭಾರತದ ವಸ್ತುವಿಚಾರವನ್ನು ಕೂಲಂಕಷವಾಗಿ ಮಾಡಿದ್ದೇವೆ. ಈ ಕಾವ್ಯದ ವಿಷಯ : ವಸ್ತು : ಅಶ್ವಮೇಧಯಜ್ಞ. ಯಜ್ಞವನ್ನು ಮಾಡುವವನು ಧರ್ಮರಾಜ ; ಅಶ್ವಪರಿಭ್ರಮಣದೊಂದಿಗೆ ಅಲೆಯುವವ ಅದರ ರಕ್ಷಕನಾದ ಅರ್ಜುನ ; ಈ ಧರ್ಮ ಮತ್ತು ಅರ್ಜುನ ಇಬ್ಬರಿಗೂ ಬೆಂಬಲ ಯಜ್ಞಪತಿಯಾದ ಶ್ರೀಕೃಷ್ಣ-ಎಂಬುದನ್ನು 'ಶ್ರೀಕೃಷ್ಣ ಚರಿತಾಮೃತ'ವಾದ ಈ ಕಾವ್ಯವು ಮಂಡಿಸಿದೆ.

'ವಸ್ತು' ಎಂದರೆ ಮನೆಯ ತಳಹದಿ ಹಾಕುವಿಕೆ ಎಂದು ಒಂದು ಅರ್ಥ. ಈ ಕಾವ್ಯವಸ್ತುವಿಗೆ ತಳಹದಿ ಯಾವುದು ಎಂಬುದನ್ನು ಭರತನಾಟ್ಯಶಾಸ್ತ್ರ ಮತ್ತು ದಶರೂಪಕ ಗ್ರಂಥಗಳಲ್ಲಿ ವಿವರವಾಗಿ ಹೇಳಿದೆ. ಯಾವುದೇ ಕಾವ್ಯಕಥಾವಸ್ತುವಿಗೆ-ಬೀಜ, ಬಿಂದು, ಕಾರ್ಯ, ಪತಾಕಾ, ಪ್ರಕರಿ ಎಂಬ ಪಂಚ ಅರ್ಥಪ್ರಕೃತಿಗಳು ; ಆರಂಭ, ಯತ್ನ, ಪ್ರಾಪ್ತ್ಯಾಶೆ, ನಿಯತಾಪ್ತಿ, ಫಲಾಗಮ ಎಂಬ ಪಂಚ ಅವಸ್ಥೆಗಳು ಮತ್ತು ಮುಖ,

ಪ್ರತಿಮುಖ, ಗರ್ಭ, ಅವಮರ್ಶ ಮತ್ತು ನಿರ್ವಹಣ ಎಂಬ ಪಂಚ ಸಂಧಿಗಳು ಇರಬೇಕು ಎಂದು ಲಾಕ್ಷಣಿಕರು ವಿಧಿಸಿದ್ದಾರೆ.

ಪಂಚಸಂಧಿಗಳಲ್ಲಿ ೬೪ ಸಂಧ್ಯಂಗಗಳು ಇರಬೇಕು. ಇವುಗಳಲ್ಲಿ ಕೆಲವನ್ನು ಉಪಯೋಗಿಸಬಹುದು, ಕೆಲವನ್ನು ಬಿಡಬಹುದು ಆದರೆ ಇವುಗಳ ಉಪಯೋಗವನ್ನು ಕಾವ್ಯಕ್ಕೆ ರಸಪುಷ್ಟಿಯಾಗುವಂತೆ ಬಳಸಬೇಕು ಎಂಬುದು ಶಾಸ್ತ್ರಕಾರರ ಆದೇಶ.




ಈ ವಾಸ್ತುವಿನ ಎಂದರೆ ತಳಹದಿಯ ಮೇಲೆ ಕನ್ನಡ ಜೈಮಿನಿ ಭಾರತ ಎಂಬ ಕಾವ್ಯಭವನವನ್ನು ಲಕ್ಷ್ಮೀಶನು ಹೇಗೆ ನಿಲ್ಲಿಸಿದ್ದಾನೆ ಎಂಬುದನ್ನು ಈ ಪ್ರಕರಣದಲ್ಲಿ ತೋರಿಸಿದೆ. ಅವನ ಈ ಕಾವ್ಯದಲ್ಲಿ ಪ್ರತಿಯೊಂದು ಸಂಧಿಯಲ್ಲಿ ಎಷ್ಟೆಷ್ಟು ಸಂಧ್ಯಂಗ ಲಕ್ಷಣಗಳು ಒಡಮೂಡಿವೆ ಎಂಬುದನ್ನು ಲಕ್ಷ್ಯ-ಲಕ್ಷಣ ಸಮನ್ವಯಯುಕ್ತವಾಗಿ ತೋರಿಸಲು ಯತ್ನಿಸಿದ್ದೇವೆ. ಈ ಸಂಧಿಸಂಧ್ಯಂಗ ಬಂಧವೇ ಕಾವ್ಯಮಂದಿರ ನಿರ್ಮಾಪಕರ ವಾಸ್ತು ವಿದ್ಯೆ ಅಥವಾ ಶಿಲ್ಪಕಲಾನೈಪುಣ್ಯವಾಗಿದೆ.

ಈ ಪ್ರಕರಣದಲ್ಲಿ ಮೂರು ಪ್ರಯತ್ನಗಳನ್ನು ಮಾಡಿದೆ ಎಂದು ಸ್ಥೂಲವಾಗಿ ಹೇಳಬಹುದು: ೧. ಭಾರತೀಯ ಹಾಗೂ ಪಾಶ್ಚಾತ್ಯ ಸಾಹಿತ್ಯಶಾಸ್ತ್ರದೃಷ್ಟಿಯಿಂದ ಲಕ್ಷ್ಮೀಶನ ಕಥನಕಲೆಯ ಮೌಲ್ಯವೆಷ್ಟು? ಎಂದು ಇಂದಿನ ದೃಷ್ಟಿಕೋನದಿಂದ ತೂಗಿನೋಡುವುದು. ೨. ಒಟ್ಟು ಕಾವ್ಯವನ್ನು ಮುಖ, ಪ್ರತಿಮುಖಾದಿ ಪಂಚ ಸಂಧಿಗಳಲ್ಲಿ ವಿಭಜಿಸಿ ಪರಾಮರ್ಶಿಸುವುದು ಮತ್ತು ಆ ಆ ಸಂಧಿಗಳಲ್ಲಿ ಯಾವ ಯಾವ ಸಂಧ್ಯಂಗಗಳು ಅಳವಟ್ಟಿವೆ ಎಂಬುದನ್ನು ಪರೀಕ್ಷಿಸುವುದು. ೩. ಜೈಮಿನಿ ಭಾರತದಲ್ಲಿ ಹಂಸಧ್ವಜ, ಬಭ್ರುವಾಹನ, ರಾಮಾಯಣ, ಮತ್ತು ಚಂದ್ರಹಾಸ ಕಥಾನಕಗಳು ದೊಡ್ಡವು; ಉಳಿದೆಲ್ಲ ಕಥಾನಕಗಳು ಸಣ್ಣವು. ಈ ದೊಡ್ಡ ಕಥಾನಕಗಳನ್ನು ಪಂಚ

ಸಂಧಿಗಳಲ್ಲಿ ವಿಭಾಗಿಸಿ ಸಂಧ್ಯಂಗಗಳನ್ನು ತೋರಿಸುವುದು.

ಯಜ್ಞಾಶ್ವವು ಭ್ರಮಣಮಾಡಿದ ದೇಶಗಳು ಯಾವವು ಎಂಬುದನ್ನು ನಿಶ್ಚಿತವಾಗಿ ಹೇಳಲು ಬರುವಂತಿಲ್ಲ. ರಾ. ನ. ಮುಳಗಿ ಮತ್ತು ನಂದುಲಾಲ ಡೇ ಅವರು ಮಾಡಿದ ಊಹೆಗಳನ್ನು ಈ ವಿವೇಚನೆಯಲ್ಲಿ ಉಪಯೋಗಿಸಿಕೊಂಡಿದ್ದೇವೆ.

## ವಸ್ತು

ಕಾವ್ಯವನ್ನು ವಸ್ತುಕ ಮತ್ತು ವರ್ಣಕ, ದೃಶ್ಯ ಮತ್ತು ಶ್ರಾವ್ಯ, ಓದುಗಬ್ಬ ಮತ್ತು ಹಾಡುಗಬ್ಬ ಎಂದು ಬೇರೆ ಬೇರೆ ರೀತಿಯಿಂದ ವಿಂಗಡಿಸಿದ್ದಾರೆ. ಗದ್ಯಪದ್ಯ ಮಿಶ್ರಿತವಾದ ಚಂಪೂಕಾವ್ಯವು ವಸ್ತುಕವೆಂದೂ ಜಾತಿವೃತ್ತಗಳಲ್ಲಿ ಕಾವ್ಯವನ್ನು ಬೆಳಸುವುದು ವರ್ಣಕವೆಂದೂ ಸಾಮಾನ್ಯವಾಗಿ ತಿಳಿಯಲಾಗುತ್ತಿದೆ. ಆದರೆ ಮಹಾಕಾವ್ಯಕ್ಕೆ ಎಂತಹ ವೃತ್ತವನ್ನು ಬಳಸಲಾಗಿದೆ ಎಂಬುದು ಅಷ್ಟು ಮಹತ್ತ್ವದ ಮಾತಲ್ಲ. ಹಾಗೆಯೆ ಕಥಾ ವಸ್ತುವರ್ಧನೆಗೆ ಗದ್ಯವನ್ನು ಬಳಸಬೇಕು, ವರ್ಣನಾಂಗವಿಸ್ತಾರಕ್ಕೆ ಪದ್ಯವನ್ನು ಬಳಸ ಬೇಕು ಎಂಬ ನಿಶ್ಚಿತವಾದ ನಿಯಮವೇನೂ ಇಲ್ಲ. ಈ ಬಗೆಯ ನಿರ್ಬಂಧವಿಲ್ಲದೆಯೆ ಅನೇಕ ಕವಿಗಳು ನಡೆದಿರುವುದನ್ನು ಕಾಣಬಹುದು. ಹರಿಹರಕವಿ ಒಂದು ಆಶ್ವಾಸವನ್ನು ಗದ್ಯದಲ್ಲಿಯೂ ಒಂದು ಆಶ್ವಾಸವನ್ನು ರಗಳೆಯಲ್ಲಿಯೂ ಹೇಳಿ ಕಥೆಯನ್ನು ಹಬ್ಬಿಸಿ ದ್ದಾನೆ. ಕವಿ ಲಕ್ಷ್ಮೀಶನು ತನ್ನ ಕನ್ನಡ ಜೈಮಿನಿ ಭಾರತದಲ್ಲಿ ಕಥಾವಸ್ತುವೃದ್ಧಿ ಮತ್ತು ವರ್ಣನಾಂಗ ವಿಸ್ತಾರ ಎರಡಕ್ಕೂ ಷಟ್ಪದಿ ಪದ್ಯಗಳನ್ನೇ ಬಳಸಿದ್ದಾನೆ. ವರ್ಣನಾಂಗ ಚಾತುರಿಯ ಅಂಗಗಳು ಅಲಂಕಾರಗಳಾಗಿರುವಂತೆ ವಸ್ತುವರ್ಧನ ಕ್ರಮಗಳು ಲಕ್ಷಣ ಗಳಾಗಿವೆ. ವಸ್ತು ವಿಸ್ತಾರಕ್ರಮಶಾಸ್ತ್ರವು ಲಕ್ಷಣಯುಕ್ತವಾಗಿದೆ.

ವಸ್ತುವಿಸ್ತಾರಕ್ರಮದ ಶಾಸ್ತ್ರೀಯ ವಿವೇಚನೆಯನ್ನು ಭರತನು ನಾಟ್ಯಶಾಸ್ತ್ರ ದಲ್ಲಿ ಕೊಡುತ್ತಾನೆ : 'ವಸ್' (ಎಂದರೆ ಇರು) ಎಂಬ ಸಂಸ್ಕೃತ ಶಬ್ದದಿಂದ ವಸ್ತು ಎಂಬ ಪದವಾಗಿದೆ. 'ವಸ್ತು' ಎಂದರೆ ಇದ್ದುದು. ನಾವು ಮಾತಿನಲ್ಲಿ ಬಳಸುವ 'ವಸ್ತುಸ್ಥಿತಿ' ಎಂಬುದಕ್ಕೆ ಯಾವುದು ಇರುವುದೋ ಅದರ ಸ್ಥಿತಿ ಎಂದೇ ಅರ್ಥ. ಆದರೆ ನಾಟ್ಯಶಾಸ್ತ್ರ ದಲ್ಲಿ ವಸ್ತು ಎಂಬುದರ ಅರ್ಥವು ಸ್ವಲ್ಪ ಭಿನ್ನವಾಗಿದೆ. ನಾಟಕ, ಕಥೆ, ಕಾದಂಬರಿ ಕಾವ್ಯ ಇವುಗಳನ್ನುದ್ದೇಶಿಸಿ 'ವಸ್ತು' ಎಂಬ ಪದಪ್ರಯೋಗ ಮಾಡಿದಾಗ ಅದರ ಅರ್ಥ ಕಥಾ ವಸ್ತು ಎಂದೇ ಆಗುತ್ತದೆ. ಪ್ರತಿಯೊಬ್ಬನ ಜೀವಕಳೆ ಅವನವನ ಶರೀರದಲ್ಲಿ ಅಡಗಿರು ವಂತೆ, ಕಥಾವಸ್ತು ಶಬ್ದಶರೀರವನ್ನು ಧರಿಸಿ ನಾಟಕ, ಕಥೆ, ಕಾದಂಬರಿ, ಕಾವ್ಯಗಳಲ್ಲಿ ಅಡಗಿರುತ್ತದೆ. ನಾಟ್ಯಶಾಸ್ತ್ರಕಾರ ಭರತನು 'ವಸ್ತು' ಎಂಬ ಪದದ ಬದಲಾಗಿ ಕೆಲವೆಡೆ 'ಇತಿವೃತ್ತ' ಎಂಬ ಪದವನ್ನು ಬಳಸುತ್ತಾನೆ : 'ಇತಿವೃತ್ತಂ ತು ಕಾವ್ಯಸ್ಯ ಶರೀರಂ ಪರಿ ಕೀರ್ತಿತಂ' ನಾ.ಶಾ. (೨೧.೧). ಭರತನು ನಾಟ್ಯವನ್ನು ಕುರಿತು ಈ ಮಾತನ್ನು ಹೇಳಿ ದ್ದರೂ ಇದು ಕಾವ್ಯಕ್ಕೂ ಅನ್ವಯಿಸುತ್ತದೆ. ಏಕೆಂದರೆ ನಾಟಕವು ಕಾವ್ಯದ ಒಂದಂಗ ವಾಗಿ 'ದೃಶ್ಯಕಾವ್ಯ' ಎಂದೆನಿಸಿದೆ. ಲಕ್ಷ್ಮೀಶನು ತನ್ನ ಜೈಮಿನಿ ಭಾರತವನ್ನು, ನಾಟಕದ

ಬಗೆಗೆ ನಾಟ್ಯಶಾಸ್ತ್ರದಲ್ಲಿ ಹೇಳಿರುವ ಅನೇಕ ಲಕ್ಷಣಗಳನ್ನು ಅಳವಡಿಸಿಕೊಂಡು ರಚಿಸಿರುವುದರಿಂದ, ಈ ಕಾವ್ಯದಲ್ಲಿ ನಾಟಕೀಯತೆಯನ್ನು ಸಾಕಷ್ಟು ಕಾಣುತ್ತೇವೆ. ಲಕ್ಷ್ಮೀಶನು ಮೂಲ ಸಂಸ್ಕೃತದಿಂದ ಕಥಾವಸ್ತುವನ್ನು ಮಾತ್ರ ತೆಗೆದುಕೊಂಡಿದ್ದಾನೆ. ಸಂಸ್ಕೃತ ಜೈಮಿನಿ ಭಾರತದಲ್ಲಿಯ ವಸ್ತುವಿಸ್ತಾರಕ್ರಮವನ್ನು ಅನುಲಕ್ಷಿಸಿದರೆ, ಆ ಕವಿ ಸಂಸ್ಕೃತ ನಾಟಕ, ಕಾವ್ಯ ಮತ್ತು ಅಲಂಕಾರಶಾಸ್ತ್ರಗಳನ್ನು ಅರಿತು ಅರಗಿಸಿಕೊಂಡು ಸಂಸ್ಕಾರ ಸಂಪನ್ನನಾಗಿದ್ದನು ಎಂಬುದು ನಮಗೆ ಮನವರಿಕೆಯಾಗುವುದು. ಸಂಸ್ಕೃತ ಮತ್ತು ಕನ್ನಡ ಕಾವ್ಯಗಳ ಕಥಾನಕವು ಒಂದೇ ಆಗಿದೆ. ಆದರೆ ವಸ್ತುವಿರಚನಾಕ್ರಮವು ಬೇರೆ ಬೇರೆಯಾಗಿದೆ. ಸಂಸ್ಕೃತ ಜೈಮಿನಿ ಭಾರತದಲ್ಲಿಯೂ ಕಾವ್ಯಲಕ್ಷಣಗಳಿವೆ. ಆದರೆ ಕನ್ನಡ ಕಾವ್ಯದಲ್ಲಿ ಅವು ಹೆಚ್ಚಾಗಿವೆ ಎಂಬುದನ್ನು ಕಾಣುತ್ತೇವೆ.

ಕಥಾವಸ್ತುವಿನಲ್ಲಿ ಆಧಿಕಾರಿಕ ಮತ್ತು ಪ್ರಾಸಂಗಿಕ ಎಂದು ಎರಡು ಪ್ರಕಾರಗಳನ್ನು ದಶರೂಪಕಕಾರನು ಹೇಳುತ್ತಾನೆ. ಜೈಮಿನಿ ಭಾರತ ಕಾವ್ಯದಲ್ಲಿ ಅಶ್ವಮೇಧಯಜ್ಞ ಕಥಾಭಾಗವು ಆಧಿಕಾರಿಕವಾಗಿದ್ದು ಅಲ್ಲಲ್ಲಿ ಆನುಷಂಗಿಕವಾಗಿ ಬರುವ ಕಥಾನಕಗಳು ಪ್ರಾಸಂಗಿಕವಾಗಿವೆ. ಈ ಪ್ರಾಸಂಗಿಕ ಕಥಾವಸ್ತುವಿನಲ್ಲೂ ಸಾನುಬಂಧ-ಪತಾಕೆ ಮತ್ತು ಪ್ರದೇಶಭಾಕ್-ಪ್ರಕರಿ ಎಂಬ ಎರಡು ಉಪಭೇದಗಳನ್ನು ದಶರೂಪಕಕಾರನು ಹೇಳುತ್ತಾನೆ. ಉದಾಹರಣಾರ್ಥವಾಗಿ, ನೀಲಧ್ವಜ, ಹಂಸಧ್ವಜ, ಬಭ್ರುವಾಹನ, ಮಯೂರಧ್ವಜ, ವೀರವರ್ಮ, ಚಂದ್ರಹಾಸ, ಬಕದಾಲ್ಭ್ಯ ಇವರ ಕಥೆಗಳು ಸಾನುಬಂಧಪ್ರಕಾರದ ಪ್ರಾಸಂಗಿಕ ಕಥಾವಸ್ತುಗಳು. ಹಾಗೆಯೇ, ಚಂಡಿಯ ಕಥೆ, ಯಜ್ಞಾಶ್ವವು ಹೆಣ್ಣುದುರೆಯಾದ ಕಾರಣದ ಕಥೆ, ಹುಲಿಯಾದ ಕಾರಣದ ಕಥೆ ಮೊದಲಾದುವು ಪ್ರದೇಶಭಾಕ್ ಕಥೆಗಳ ಸಾಲಿಗೆ ಸೇರುತ್ತವೆ. ಯೌವನಾಶ್ವ, ಮರುತ್ತ, ಭೀಮನ ಕೃಷ್ಣಸಂದರ್ಶನ, ಅನುಸಾಲ್ವ ಮುಂತಾದ ಕಥೆಗಳೂ ಪ್ರದೇಶಭಾಕ್ ಪ್ರಕಾರದವೇ. ಮೇಲೆ ಹೇಳಿದ ಸಾನುಬಂಧಪ್ರಕಾರದ ಕಥೆಗಳಿಗೂ ಟಿಸಿಲುಗಳು ಒಡೆದು ಪ್ರದೇಶಭಾಕ್ ಕಥೆಗಳುಂಟಾಗಿವೆ. ಅದು ಹೀಗೆ :

೧. ನೀಲಧ್ವಜನ ಕಥಾನಕವು ಸಾನುಬಂಧ; ದೂರದವರೆಗೆ ಸಾಗಿದ್ದು ; ಹೆಚ್ಚು ವ್ಯಾಪ್ತಿಯನ್ನು ಪಡೆದಿದೆ. ಪವೀರ, ಜ್ವಾಲೆ, ಸ್ವಾಹೆಯರ ಕಥೆಗಳು ಪ್ರದೇಶಭಾಕ್, ಎಂದರೆ ಸ್ವಲ್ಪ ಸ್ವಲ್ಪ ಸ್ಥಾನವನ್ನು ಆಕ್ರಮಿಸುವಂತಹವಾಗಿವೆ.

೨. ಹಂಸಧ್ವಜನ ಕಥೆ : ಸಾನುಬಂಧ
ಸುಧನ್ವ, ಸುರಥ, ಗರುಡ ನಂದಿಗಳ ಸೆಣಸಾಟ—ಇವು ಪ್ರದೇಶಭಾಕ್.

೩. ಬಭ್ರುವಾಹನನ ಕಥೆ : ಸಾನುಬಂಧ.
ನಾಗಲೋಕದ ಕಥಾನಕ ಪ್ರದೇಶಭಾಕ್.

೪. ಮಯೂರಧ್ವಜನ ಕಥೆ : ಸಾನುಬಂಧ.
ತಾಮ್ರಧ್ವಜ, ಕೃಷ್ಣನು ವಿಪ್ರವೇಷದಿಂದ ದಾನ ಬೇಡಿದ್ದು-ಪ್ರದೇಶಭಾಕ್.

೫. ಚಂದ್ರಹಾಸನ ಕಥೆ : ಸಾನುಬಂಧ.
ಕುಂತಳಾಧಿಪತಿ, ಚಂದನಾವತಿ, ದುಷ್ಟಬುದ್ಧಿ—ಪ್ರದೇಶಭಾಕ್.

೬. ವೀರವರ್ಮನ ಕಥೆ : ಸಾನುಬಂಧ.
ಮಾಲಿನೀಪರಿಣಯ ಪ್ರದೇಶಭಾಕ್.

೭. ಬಕದಾಲ್ಭ್ಯನ ಕಥೆ : ಸಾನುಬಂಧ.
ಅನೇಕ ಬ್ರಹ್ಮರ ಸಂದರ್ಶನ ಪ್ರದೇಶಭಾಕ್.

ಇವಲ್ಲದೆ ಕಥಾನಕಗಳಲ್ಲಿ ಪ್ರಖ್ಯಾತ, ಉತ್ಪಾದ್ಯ, ಮಿಶ್ರ, ದಿವ್ಯ, ಮರ್ತ್ಯ ಎಂಬ ಪರಿಭೇದಗಳನ್ನೂ ದಶರೂಪಕದಲ್ಲಿ ಕಲ್ಪಿಸಲಾಗಿದೆ. ಜೈಮಿನಿ ಭಾರತದ ಕಥಾನಾಯಕನು ಶ್ರೀಕೃಷ್ಣಪರಮಾತ್ಮನಾಗಿರುವುದರಿಂದ ಈ ಕಥಾನಕವು ದಿವ್ಯ ಎಂಬ ವರ್ಗಕ್ಕೆ ಸೇರುತ್ತದೆ.

ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಮ್ ।
ದ್ವಯಮೇತದ್ಧಿ ಜಂತೂನಾಮಲಂಘ್ಯಂ ದಿನರಾತ್ರಿವತ್ ॥[1]

ಎಂಬಂತೆ ಜೈಮಿನಿ ಭಾರತವು ಹಲವಾರು ಯುದ್ಧಗಳ ಮೂಲಕ ಸುಖದುಃಖ ಸಮ್ಮಿಶ್ರಣವನ್ನೊಳಗೊಂಡಿದೆ. ಅಶ್ವಮೇಧಯಾಗವು ಸಂಪೂರ್ತಿಗೊಂಡು, ಕೈಕೊಂಡ ಕಾರ್ಯವು ಯಶಸ್ವಿಯಾಗಿ ನೆರವೇರಿದುದು ಸುಖದ ಮಾತಾಗಿದ್ದರೆ, ಅನೇಕ ವೀರರ ಅಕಾಲ ಮರಣವು ದುಃಖಪೂರಿತವಾಗಿದೆ. ಮರಣವು ಸಾಮಾನ್ಯವಾಗಿ ದುಃಖದ ವಿಷಯವಾಗಿದ್ದರೂ ಇಲ್ಲಿ ಅರ್ಜುನನನ್ನು ಎದುರಿಸಿ ಹೋರಾಡಿದ ಮುಖ್ಯ ಪ್ರತಿಪಕ್ಷಿಗಳೆಲ್ಲ ಒಬ್ಬರಿಗಿಂತ ಒಬ್ಬರು ಮಿಗಿಲಾದ ಭಕ್ತರಾಗಿದ್ದಾರೆ. ಅರ್ಜುನನಿಗೆ ಶ್ರೀಕೃಷ್ಣನ ಬೆಂಬಲವಿದೆ, ಶ್ರೀಕೃಷ್ಣಸಾನ್ನಿಧ್ಯದಲ್ಲಿ ಸಾವಿಲ್ಲ–ಮೋಕ್ಷವಿದೆ, ಮತ್ತೊಂದಿಲ್ಲವೆಂದು ಉಳಿದವರು ಬಲ್ಲವರಾಗಿದ್ದಾರೆ. ಅವರ ವೀರಶ್ರೀ ನಿಸ್ಸೀಮ ಅಸಾಧಾರಣ ಭಕ್ತಿಯಿಂದ ಸುರಂಜಿತವಾಗಿ, ಸುರಭಿತವಾಗಿ, ಸುಮಂಗಲವಾಗಿದೆ. ಇದರಿಂದ ಆ ಸಾವೂ ಸುಖಸ್ಪರ್ಶವನ್ನೀಯುತ್ತದೆ. ಅರ್ಜುನನಿಗೆ ಅಡಿಗಡಿಗೆ ಕಷ್ಟಗಳೊದಗಿ, ಮುಂದೆ ಹೇಗೋ ಎಂಬ ಚಿಂತೆ ಓದುಗರಿಗುಂಟಾಗುತ್ತದೆ; ಮುಂದೆ ಕೃಷ್ಣಮಹಿಮೆಯಿಂದ ಎಲ್ಲವೂ ಸರಿಹೋಗಲು ಎದೆಯ ಮೇಲಿನ ಗುಡ್ಡ ಇಳಿದಂತಾಗಿ ಸುಖವೆನಿಸುತ್ತದೆ. ಈ ಸುಖದುಃಖದ ಸಮ್ಮಿಶ್ರಣವು ಬೇರೆ ಬೇರೆ ಕಥಾನಕಗಳಲ್ಲಿ ಯಾವ ರೀತಿಯಲ್ಲಿ ಆಗಿದೆ ಎಂಬುದನ್ನು ನೋಡೋಣ :

ಕಾವ್ಯದಲ್ಲಿ ಮೊದಲನೆಯ ಕಥೆ ಧರ್ಮರಾಯನು ಅಶ್ವಮೇಧಯಜ್ಞವನ್ನು ಮಾಡಲು ಒಪ್ಪಿದ್ದು. 'ಕಡುಬೇಸಗೆಯ ಬಿಸಿಲಿಂದೆ ಬಸವಳಿದ ಕೋಮಲ ರಸಾಲದಂತೆ' ಮ್ಲಾನವಾದ ವದನದ ಧರ್ಮನು ವ್ಯಾಸನ ಉಪದೇಶವನ್ನು ಒಪ್ಪಿ ಶ್ರೀಕೃಷ್ಣನ ಬೆಂಬಲದಿಂದ ಅಶ್ವಮೇಧಯಾಗಕ್ಕೆ ಸಿದ್ಧನಾದನು. ಆದರೆ ಇವನಲ್ಲಿ ಯಜ್ಞಕ್ಕೆ ತಕ್ಕ ಲಕ್ಷಣವುಳ್ಳ ಅಶ್ವವೇ ಇಲ್ಲ; ಭದ್ರಾವತಿಯಿಂದ ಅದನ್ನು ತರಬೇಕು. ಅದಕ್ಕಾಗಿ ಅಲ್ಲಿ

[1] 'ಭರತಮುನೀಚೆ ನಾಟ್ಯಶಾಸ್ತ್ರ'—ಗೋದಾವರೀ ಕೇತಕರ್, ಪು. 259.

ಯೌವನಾಶ್ವ ಸುವೇಗರೊಡನೆ ಯುದ್ಧ. ಅಂತೂ ಕುದುರೆಯನ್ನು ಪಡೆದು ಹಸ್ತಿನಾವತಿಗೆ ಅದನ್ನು ತಂದರೆ, ಎಲ್ಲರೂ ಆನಂದಭರಿತರಾಗಿ ಸ್ತ್ರೀಯರು ಅದನ್ನು ಪೂಜಿಸುತ್ತಿರುವಾಗ ಅನುಸಾಲ್ವನು ಅಪಹರಿಸುತ್ತಾನೆ. ಮತ್ತೆ ಅನುಸಾಲ್ವನೊಡನೆ ಕಾಳಗ, ಸಾವು-ನೋವು; ಕೊನೆಗೆ ಪಾಂಡವರಿಗೆ ಗೆಲವು. ಇಷ್ಟೆಲ್ಲ ಕಥೆ ೭ ಸಂಧಿಗಳಲ್ಲಿ ಆಗಿ ೮ನೆಯ ಸಂಧಿಯ ೧೩ನೆಯ ಪದ್ಯದಲ್ಲಿ ಯಜ್ಞಾಶ್ವವು ಪರಿಭ್ರಮಣಕ್ಕೆ ಹೊರಡುತ್ತದೆ.

ಪ್ರಥಮತಃ ಯಜ್ಞಾಶ್ವವು ನೀಲಧ್ವಜನ ಪಟ್ಟಣಕ್ಕೆ ಬರುತ್ತದೆ. ಅಲ್ಲಿ ಯುದ್ಧ, ಸಾವು ನೋವು ಒದಗುವುದು ಮಾತ್ರವಲ್ಲದೆ, ಮಹಾಛಲಿಯಾದ ಜ್ವಾಲೆ ಅರ್ಜುನನ ಮರಣಕ್ಕೆ ಪೂರ್ವಪೀಠಿಕೆ ಬರೆಸುತ್ತಾಳೆ. ನೀಲಧ್ವಜನ ಅಳಿಯನಾಗಿ ಕಾದುತ್ತಿದ್ದ ಸಾಕ್ಷಾತ್ ಅಗ್ನಿಯ ಉರವಣೆ ಅಗ್ನಿಸೂಕ್ತದಿಂದ ಶಮನಗೊಂಡು, ಯಜ್ಞಾಶ್ವವು ಮುಕ್ತವಾಗಿ ಮುಂದುವರಿಯುತ್ತದೆ. ಮುಂದೆ ಶಿಲೆಯಲ್ಲಿ ಕಾಲುಸಿಲುಕಿ ನಿಂತ ಕುದುರೆಯು ಆ ಸಿಕ್ಕಿನಿಂದಲೂ ಶಿಲೆಯಾಗಿ ಬಿದ್ದಿದ್ದ ಚಂಡಿಯು ಶಾಪದಿಂದಲೂ ವಿಮೋಚನೆಗೊಂಡಬಳಿಕ, 'ಒದವಿದ ಸಮಸ್ತಜನಂ ಆಗ ವಿಸ್ಮಿತಮಾದುದು, ಉದುರಿತು ಕುಸುಮವೃಷ್ಟಿ' (ಸಂ. ೧೦, ಪ. ೩೩). ವಿಸ್ಮಯವು ಅದ್ಭುತವನ್ನು ಕಂಡಾಗ, ಕುಸುಮವೃಷ್ಟಿ ಸಾನಂದಾದ್ಭುತವನ್ನು ಕಂಡಾಗ ಆಗುವ ಪರಿಣಾಮಗಳು. ಇನ್ನು ಮುಂದಿನ ಘಟನೆಗಳು ಅದ್ಭುತರಮ್ಯವಾದವುಗಳು ಎಂಬುದನ್ನು ಸೂಚಿಸುವಂತೆ ಬಂದಿರುವ ಈ ಮಾತುಗಳು ಇಲ್ಲಿ ಒಳ್ಳೇ ಔಚಿತ್ಯವನ್ನು ಪಡೆದಿವೆ ಎಂದು ಹೇಳಬಹುದು. ಯಜ್ಞಾಶ್ವವು ಹೆಣ್ಣುದುರೆಯಾಗಿ, ಹುಲಿಯಾಗಿ, ಮರಳಿ ಮೊದಲ ರೂಪವನ್ನು ಪಡೆಯಲಿಕ್ಕೆ ಶ್ರೀಕೃಷ್ಣ ನಾಮಸ್ಮರಣೆಯೆ ಕಾರಣವಾಗುತ್ತದೆ. ನಾಮಸ್ಮರಣದ ಈ ಮಹಿಮೆಯನ್ನು ಕಂಡು ಜನರಿಗೆ ವಿಸ್ಮಯವಾಗುತ್ತದೆ. ಮುಂದೆ ಬರುವ ಸುಧನ್ವ-ಸುರಥರ ಮೇಲೆ ಪುಷ್ಪವೃಷ್ಟಿ ಸುರಿದರೂ ಕವಿಗೆ ಸಂತೃಪ್ತಿಯಿಲ್ಲ; ಅವರ ಭಕ್ತಿಯ ಹಿರಿಮೆಗೆ ಅಷ್ಟೇ ಗೌರವ ಸಾಲದು. ಅವರ ಪುಣ್ಯಮಯವಾದ ಶಿರಸ್ಸುಗಳನ್ನು ಶಿವನು ಅಪೇಕ್ಷೆಪಟ್ಟು ಸಂಪಾದಿಸಿ ತನ್ನ ರುಂಡಮಾಲೆಯಲ್ಲಿ ಪವಣಿಸಿಕೊಳ್ಳುತ್ತಾನೆ. ಇಲ್ಲಿ ಪ್ರತ್ಯಕ್ಷವಾಗಿ ಕೃಷ್ಣನ ಮಹಿಮೆ ಕೃಷ್ಣನೆದುರಿನಲ್ಲಿ ತಮ್ಮ ಶಪಥವನ್ನು ಪೂರೈಸುವ ಸುಧನ್ವ-ಸುರಥರ ವೀರ, ಅತಿ ವಿಸ್ಮಯವನ್ನುಂಟುಮಾಡುವ ಸಂದರ್ಭಗಳಾಗಿವೆ.

ಸಂಧಿ ೧೫, ಪದ್ಯ ೪೦ ರಲ್ಲಿ—

> ಈ ವ್ಯಾಳರಾಜಶಾಯಿಗೆ ಬಂದ ಬಂದ ನಾ
> ನಾ ವ್ಯಥೆಯನಪಹರಿಸಿ ಪಾಂಡುಸುತರಂ ಪೊರೆವು
> ದೇ ವ್ಯವಹರಣೆಯೆಂದು ಕೃಷ್ಣನಂ ಕೊಂಡಾಡಲು

ಎಂಬ ವರ್ಣನೆಯಿದೆ. ಈ ಮಾತು ಮುಂದೆ ಒದಗಲಿರುವ ಪ್ರಮೀಲೆಯೊಡನೆ ಕಾದಬೇಕಾಗುವ ಪ್ರಸಂಗದ ಪೂರ್ವಸೂಚನೆಯಾಗಿ ಬಂದಂತಿದೆ. ಹೇಗೆಂದರೆ, ಪ್ರಮೀಳಾ ರಾಜ್ಯದಲ್ಲಿ ಎಲ್ಲರೂ ಹೆಂಗಸರು, ವಿಷಕನ್ಯೆಯರು; ಅಲ್ಲಿಗೆ ಹೋಗುವ ಪುರುಷರನ್ನು ಮೋಹಗೊಳಿಸಿ ಕೂಡುವ ಸೊಬಗುಗಾತಿಯರು; ಕೂಡಿದ ಪುರುಷನ ಆಯುಷ್ಯವನ್ನು

ಮುಗಿಸಿಬಿಡುವವರು. ಇಂತಹ ವಿಷಗಳಿಗೆಯಲ್ಲಿ ಎಲ್ಲರನ್ನೂ ಹೊರೆಯುವುದು ಕೃಷ್ಣನ ಹೊಣೆ. ಆದುದರಿಂದ ವೃಷಕೇತುವಿನ ಬಾಯಿಯಿಂದ ಎಲ್ಲರಿಗೂ ಎಚ್ಚರಿಕೆ ಕೊಡಿಸುತ್ತಾನೆ. ಅರ್ಜುನ ಲೋಕೈಕವೀರನಾದ ಗಂಡಸು, ಸ್ತ್ರೀಯರೊಂದಿಗೆ ಯುದ್ಧಮಾಡಲಾರ, ಆದರೆ ಮಾಡದೆಯೂ ಇರಲಾರ. ಇಂತಹ ಇರುಕಿನಲ್ಲಿ ಸಿಕ್ಕಾಗ ಆಕಾಶವಾಣಿಯಿಂದ ಕೃಷ್ಣನು ಅರ್ಜುನನನ್ನು ಪೊರೆಯುತ್ತಾನೆ. ಹೀಗೆ ಎಲ್ಲ ಪಾಂಡುಸುತರಂ ಪೊರೆವುದೇ ಪ್ರಮೀಳಾಕಥಾನಕದಲ್ಲಿ ಶ್ರೀಕೃಷ್ಣನ ವ್ಯವಹರಣೆಯಾಗಿದೆ.

ಸಂಧಿ ೧೬, ಪದ್ಯ ೧೯ರಲ್ಲಿ—

ಭೀಷಣ ರಾಕ್ಷಸನ ರಾಜ್ಯವೇ ಅದ್ಭುತಗಳ ಆಗರವಾಗಿದೆ. ಅಲ್ಲಿ,

> ಕುಜಕುಜಂಗಳ ಪೊದರೊಳತಿ ಸೂಕ್ಷ್ಮಜೀವರಂ
> ಬುಜಮಿತ್ರನುದಯಕುದ್ಭವಿಸಿ, ಮಧ್ಯಾಹ್ನದೊ
> ಳ್ನಿಜದ ಜವ್ವನದಿಂದೆ ಬಾಳ್ದಸ್ತಮಯಕಳಿಯುತಿರೆ ಕಂಡು

ಅರ್ಜುನನು ಬೆರಗಾದನು ಎಂದು ವರ್ಣಿಸಿದೆ. ಇದು ಆ ನಾಡಿನ ರಕ್ಕಸರ ಭೀಷಣತ್ವವನ್ನು ಸೂಚಿಸುವಂತಿದೆ. ಒಂದೇ ದಿನದಲ್ಲಿ ಜೀವಿಗಳ ಉತ್ಪತ್ತಿ, ಸ್ಥಿತಿ, ಲಯ ಎಂಬುದು ಅಸಾಮಾನ್ಯವಾಗಿರುವಂತೆ, ಭೀಷಣನ ರಾಜ್ಯದಲ್ಲಿಯ ರಕ್ಕಸರ ವೈಭವವೂ ಅಸಾಮಾನ್ಯವಾಗಿತ್ತು. ಹಲವಾರು ಸಂದರ್ಭಗಳಲ್ಲಿ ಅನೇಕ ದೇಶಗಳನ್ನು ಸುತ್ತಿಬಂದಿರುವ ಅರ್ಜುನನಿಗೆ ಇಂತಹದೊಂದೂ ರಾಜ್ಯವು ಈ ಮೊದಲು ಕಾಣಸಿಕ್ಕಿರಲಿಲ್ಲ.

ಸಂಧಿ ೧೭, ಪದ್ಯ ೧ರಲ್ಲಿ—

'ಮುಂದೆ ಶೋಭಿಸಿತು ವರ್ಷಾಗಮಂ ಧರೆಯ ಬೇಸಗೆಯ ಬೇಸಱಂ ತವೆತವಿಸುತೆ' ಎಂಬ ಮಾತು ಬಭ್ರುವಾಹನನ ಕಥಾನಕದ ಸಾರಸಂಗ್ರಹವನ್ನು ಗರ್ಭೀಕರಿಸಿಕೊಂಡಿದೆ. ಬೇಸಗೆಯ ಬೇಸರವು ಇಲ್ಲದಂತಾಗುವುದಕ್ಕೆ ಮಳೆಗಾಲವು ಕಾರಣವಾಗುವಂತೆ, ಕೃಷ್ಣನ ನಿರಂತರ ಸಾನ್ನಿಧ್ಯವು ದೊರೆಕೊಳ್ಳುವುದಕ್ಕೆ ಅರ್ಜುನ ವೃಷಕೇತುಗಳ ಮರಣದಿಂದುಂಟಾದ ಮಳೆಗಾಲವು ಕಾರಣವಾಗುತ್ತದೆ. ಚಿತ್ರಾಂಗದೆ, ಉಲೂಪಿ, ಕುಂತಿ ಮೊದಲಾದವರ ಕಣ್ಣೀರು ಮಳೆಗಾಲದ ಮಳೆಯಂತೆ ಭೋರೆಂದು ಸುರಿಯುತ್ತದೆ. ಸತ್ತಿದ್ದ ಅರ್ಜುನ ವೃಷಕೇತುಗಳು ಪುನರುಜ್ಜೀವಿತರಾದ ಬಳಿಕ ಎಲ್ಲರಿಗೂ ಘನಘೋರ ಯುದ್ಧವೆಂಬ ಬೇಸಗೆಯ ಬೇಸರು ಕಳೆದು ಆನಂದದ ತಣಿವು ಪ್ರಾಪ್ತವಾಗುತ್ತದೆ. ಹೀಗೆ ಮುಂದೊದಗುವ ಘಟನೆಯ ಮೇಲೆ ಬೆಳಕು ಕೆಡಹುವುದು ಕನ್ನಡ ಜೈಮಿನಿ ಭಾರತದ ಕವಿಯ ವರ್ಣನಾ ವೈಶಿಷ್ಟ್ಯವಾಗಿದೆ.

ಸಂಧಿ ೨೫, ಪದ್ಯ ೧ ರಲ್ಲಿ—

'ಪಾಲ್ಗಡಲು, ಮಲಯಾನಿಲ, ಬೆಳ್ದಿಂಗಳು, ಸುಮನೋವಾಸಿತ, ಶ್ರೀಕೃಷ್ಣ ಚರಿತಾಮೃತಂ' ಎಂಬ ಇಂಪು–ಕಂಪು–ತಂಪು–ಪೆಂಪು ಬೀರುವ ಶಬ್ದಗಳ ಪುಂಜವು ಅರ್ಜುನನ ಮುಂದಣ ಪ್ರವಾಸವು ಸುಖಮಯವಾಗಿದೆ ಎಂಬುದನ್ನು ಸೊಗಸಾಗಿ ಸೂಚಿಸುತ್ತದೆ.

ಸಂಧಿ ೨೭, ಪದ್ಯ ೫೬ ರಲ್ಲಿ—

'ಘೋರನಕ್ರಾಕುಲದ ಪೆರ್ಮಡುಗಳಿಂದೆ ಗಂ
ಭೀರವಾಗಿಹ ಮಹಾನದಮಿರ್ದುದೊಂದದಂ
ಭೂರಿ ಪೋತಪ್ರಕರದಿಂ ಕಳಿದನಮರನಗರೀ ಶ್ರೀಶನಾಜ್ಞೆಯಿಂದೆ ||'

ಎಂಬಲ್ಲಿಯ ವರ್ಣನಾವಿಶೇಷವು ಮುಂದಿನ ಚಂದ್ರಹಾಸನ ಕಥೆಗೆ ಸಂಬಂಧಿಸಿದ್ದು, ಅವನ ಜೀವನವೃತ್ತವನ್ನು ಸೂಚ್ಯವಾಗಿ ತಿಳಿಸುತ್ತದೆ. ಇಲ್ಲಿಯ 'ಘೋರನಕ್ರಾಕುಲದ ಪೆರ್ಮಡು' ಎಂದರೆ ದುಷ್ಟಬುದ್ಧಿಯೆ ಹೊರತು ಬೇರೇನೂ ಅಲ್ಲ. ಅವನ ಅನೇಕ ಕುಟಿಲ ಕ್ರೂರ ತಂತ್ರಗಳ ಮಹಾನದವನ್ನುತ್ತರಿಸಿ ಚಂದ್ರಹಾಸನು ಅಭಿವೃದ್ಧಿಹೊಂದಲು ಕಾರಣ, ಅವನು ಯಾವಾಗಲೂ ಶ್ರೀಕೃಷ್ಣನಾಜ್ಞೆಯಲ್ಲಿದ್ದನು.

ಹೀಗೆ ಮುಂದಾಗಲಿರುವ ಸಂಗತಿಯನ್ನು ಅನ್ಯೋಕ್ತಿಯಿಂದ ಸೂಚಿಸುವುದು ಈ ಕಾವ್ಯದ ವಿಶಿಷ್ಟ ಲಕ್ಷಣವಾಗಿದೆ. ಇದರ ಮರ್ಮವನ್ನು ಅರಿತು ಓದುಗನಿಗೆ ಒಂದು ಬಗೆಯ ಭಾವಾನಂದವುಂಟಾಗುತ್ತದೆ. ಅನ್ಯೋಕ್ತಿಯಿಂದ ಭವಿಷ್ಯವನ್ನು ಸೂಚಿಸುವ ಈ ಬಗೆಯನ್ನು 'ಪತಾಕಾಸ್ಥಾನಕ' ಎಂದು ಲಾಕ್ಷಣಿಕರು ಹೆಸರಿಸಿದ್ದಾರೆ :

ಪ್ರಸ್ತುತಾಗಂತು ಭಾವಸ್ಯ ವಸ್ತುನೋಽನ್ಯೋಕ್ತಿ ಸೂಚಕಂ ।
ಪತಾಕಾಸ್ಥಾನಕಂ ತುಲ್ಯಸಂವಿಧಾನವಿಶೇಷಣಾತ್ ||[1]

ಜೈಮಿನಿ ಭಾರತದಲ್ಲಿ ಲಕ್ಷ್ಮೀಶನು ಅಲ್ಲಲ್ಲಿ ಧ್ವಜವಿಟ್ಟು ಮುಂಗತೆಯನ್ನು ಸೂಚಿಸಿರುವ 'ಪತಾಕಾಸ್ಥಾನಕ'ಗಳನ್ನು ಮೇಲೆ ವಿವರವಾಗಿ ತೋರಿಸಲಾಗಿದೆ. ಈ ಪತಾಕಾಸ್ಥಾನಕಗಳ ಮೂಲಕ ಕಥಾನಕಕ್ಕೆ ಒಂದು ಮೆರುಗು, ಕಾಂತಿ ಬರುತ್ತದೆ.

ಕಥಾವಸ್ತು ವಿಸ್ತಾರವನ್ನು ಕುರಿತು ನಾಟ್ಯಶಾಸ್ತ್ರಜ್ಞರು ಹೀಗೆಂದು ಹೇಳುತ್ತಾರೆ: ಕಥಾವಸ್ತು ವಿಸ್ತಾರದಲ್ಲಿ ಐದು ಅರ್ಥಪ್ರಕೃತಿಗಳು, ಐದು ಅವಸ್ಥೆಗಳು, ಐದು ಸಂಧಿಗಳು ಇರಬೇಕು ಎಂದು ಅವರ ಅಭಿಪ್ರಾಯ.

ಪಂಚ ಅರ್ಥಪ್ರಕೃತಿಗಳು : ಬೀಜ, ಬಿಂದು, ಪತಾಕೆ, ಪ್ರಕರಿ, ಕಾರ್ಯ.

ಪಂಚ ಅವಸ್ಥೆಗಳು : ಆರಂಭ, ಯತ್ನ, ಪ್ರಾಪ್ತ್ಯಾಶೆ, ನಿಯತಾಪ್ತಿ, ಫಲಾಗಮ.

ಪಂಚಸಂಧಿಗಳು : ಮುಖ, ಪ್ರತಿಮುಖ, ಗರ್ಭ, ಅವಮರ್ಶ, ಉಪಸಂಹೃತಿ (ನಿರ್ವಹಣ).

ಹೀಗೆ ಮೂರು ಶಾಖೆಗಳಲ್ಲಿ, ೧೫ ಉಪಶಾಖೆಗಳಲ್ಲಿ ಕಥಾವಸ್ತು ಹಬ್ಬಿ ಹರಿಯಬೇಕು. ಅಲ್ಲದೆ ಪಂಚ ಸಂಧಿಗಳಲ್ಲಿ ೬೪ ಅಂಗಗಳುಂಟೆಂದು ವಿವರಿಸಿದ್ದಾರೆ. ಈ ವಸ್ತು ವಿಸ್ತಾರ ಕ್ರಮವನ್ನು ಕುರುಡರಂತೆ ಅನುಕರಿಸಬಾರದು ಎಂಬ ಎಚ್ಚರಿಕೆಯನ್ನೂ ಶಾಸ್ತ್ರಕಾರರು ಕೊಟ್ಟಿದ್ದಾರೆ. ಕವಿ ಶಾಸ್ತ್ರಚ್ಛಲದ ಪ್ರವೃತ್ತಿಗೆ ಸಿಲುಕಿ ಉಳಿದ ಲಕ್ಷಣ

1 'ದಶರೂಪಕ', ೧,೨೨.

ಗಳನ್ನು ಅಸಡ್ಡೆ ಮಾಡಿದರೆ 'ಕಾವ್ಯದ ಬದನೇಕಾಯಿ' ಆದೀತೆಂದು ಈ ಕಡಿವಾಣವನ್ನು ಹಾಕಿದ್ದಾರೆ.

ನಾಟಕವೇ ಆಗಲಿ, ಕಾವ್ಯವೇ ಆಗಲಿ ಅವೆರಡಕ್ಕೂ ರಸವೇ ಆತ್ಮ. ರಸಕ್ಕೆ ಬಾಧೆ ಬರದಂತೆ ವಸ್ತುವಿಸ್ತಾರ ಕ್ರಮ ಶಾಸ್ತ್ರವನ್ನು ಅನುಸರಿಸಬೇಕು ಎಂಬುದನ್ನು—

ಸಂಧಿ ಸಂಧ್ಯಂಗ ಘಟನಂ ರಸಾಭಿವ್ಯಕ್ತ್ಯಪೇಕ್ಷಯಾ ।
ನ ತು ಕೇವಲಯಾ ಶಾಸ್ತ್ರಸ್ಥಿತಿ ಸಂಪಾದನೇಚ್ಛಯಾ ॥[1]

ಎಂದು ಧ್ವನ್ಯಾಲೋಕಕಾರರು ಹೇಳಿದ್ದಾರೆ. ಈ ಶಾಸ್ತ್ರಜ್ಞರು ಶಾಸ್ತ್ರಕ್ಕಾಗಿ ಶಾಸ್ತ್ರವನ್ನು ಹೇಳುವವರಾಗಿರದೆ 'ನಾಟ್ಯಂ ಭಿನ್ನರುಚೇರ್ಜನಸ್ಯ ಬಹುಧಾಪೇಕಂ ಸಮಾರಾಧನಂ' ಎಂದೂ 'ವಾಕ್ಯಂ ರಸಾತ್ಮಕಂ' ಎಂದೂ ಒಪ್ಪಿದವರೇ ಆಗಿದ್ದು, ಕವಿ ಸೃಷ್ಟಿಯ ರಸ ಪುಷ್ಟಿಗಾಗಿಯೇ ವಸ್ತು ವಿಸ್ತಾರಕ್ರಮವನ್ನು ಶಾಸ್ತ್ರವಾಗಿ ನಿರೂಪಿಸಿದರು. ಶಾಸ್ತ್ರೀಯ ಕ್ರಮವನ್ನು ಅನುಸರಿಸಿ ಕೃತಿರಚನೆ ಮಾಡುವಾಗ ರಸಹಾನಿಯಾಗುತ್ತಿದ್ದರೆ ಅಥವಾ ಅದಕ್ಕೆ ಅಡ್ಡಿಬರುತ್ತಿದ್ದರೆ ಕೆಲವು ಸಂಧ್ಯಂಗಗಳನ್ನು ಹಿಂದು-ಮುಂದು ಮಾಡಿಕೊಳ್ಳಲೂ ಬಿಟ್ಟುಬಿಡಲೂ ಶಾಸ್ತ್ರವು ಕವಿಗೆ ಸ್ವಾತಂತ್ರ್ಯವನ್ನು ನೀಡಿದೆ. ಈ ಸ್ವಾತಂತ್ರ್ಯವನ್ನು ಕನ್ನಡ ಜೈಮಿನಿ ಭಾರತಕಾರನು ಚೆನ್ನಾಗಿಯೇ ಉಪಯೋಗಿಸಿಕೊಂಡಿದ್ದಾನೆ. ಸಂದರ್ಭಾನುಸಾರವಾಗಿ ರಸಪೋಷಣೆಗೆ ಅಗತ್ಯವಾದ ಸಂಧ್ಯಂಗಗಳನ್ನು ಬಳಸಿಕೊಂಡೊ, ಕೆಲವು ಸಂಧ್ಯಂಗಗಳನ್ನು ಹಿಂದು-ಮುಂದು ಮಾಡಿಯೋ ಕೆಲವನ್ನು ಒಂದಕ್ಕೊಂದನ್ನು ಬೆಸೆದೋ ಸ್ವಾರಸ್ಯವನ್ನು ಕಾಯ್ದುಕೊಂಡುದನ್ನು ಲಕ್ಷ್ಮೀಶನಲ್ಲಿ ಕಾಣುತ್ತೇವೆ.

೬೪ ಸಂಧ್ಯಂಗಗಳನ್ನೂ ವಿವರಿಸುವ ಸಂದರ್ಭಗಳಲ್ಲಿ ಅದರಿಂದ ಆರು ಬಗೆಯ ಪ್ರಯೋಜನಗಳುಂಟೆಂದು ಶಾಸ್ತ್ರಕಾರರು ಹೇಳುತ್ತಾರೆ.

ಇಷ್ಟಸ್ಯಾರ್ಥಸ್ಯ ರಚನಾ ಗೋಪ್ಯಗುಪ್ತಿಃ ಪ್ರಕಾಶನಮ್ ।
ರಾಗಃ ಪ್ರಯೋಗಸ್ಯಾಶ್ಚರ್ಯಂ ವೃತ್ತಾಂತಸ್ಯಾನುಪಕ್ಷಯಃ ॥[2]

[ಅರವತ್ತುನಾಲ್ಕು ಸಂಧ್ಯಂಗಗಳ ಪ್ರಯೋಜನಗಳು ಈ ಆರು: ಉದ್ದಿಷ್ಟ ವಿಷಯದ (ಯೋಗ್ಯವಾದ) ರಚನೆ, ರಹಸ್ಯವಾದುದರ ಮುಚ್ಚಿಕೆ, (ಪ್ರಕಟಿಸಬೇಕಾದ ವಿಷಯದ) ಪ್ರಕಟನೆ, ರಾಗ, ಪ್ರಯೋಗದ ಆಶ್ಚರ್ಯ, ಕಥೆ ಕುಂದದಂತೆ ಮಾಡುವದು.] ಎಂದರೆ (೧) ಉದ್ದಿಷ್ಟವಾದ ವಿಷಯದ ಸರಿಯಾದ ರಚನೆ (೨) ಹುದುಗಿಸಬೇಕಾದುದನ್ನು ಹುದುಗಿಸುವದು (೩) ಪ್ರಕಟಿಸಬೇಕಾದುದನ್ನು ಪ್ರಕಟಿಸುವದು (೪) ರಾಗ (೫) ಪ್ರಯೋಗದ ಆಶ್ಚರ್ಯ (೬) ಕಥೆ ಕುಗ್ಗದಂತೆ ಮಾಡುವದು–ಇವು ಸಂಧ್ಯಂಗಗಳಿಂದ ಪಡೆಯುವ ಪ್ರಯೋಜನಗಳು. ಶಾಸ್ತ್ರಕಾರರು ತೋರಿಸಿರುವ ಈ ಆರು ಪ್ರಯೋಜನಗಳನ್ನು ಸಾಧಿಸುವದನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿಸಿದ ರಚನೆ ಸಾರ್ಥಕವಾಗಲೇಬೇಕು. ಕಥೆ ಕುಂದದಂತೆ ರಚನೆ ಮಾಡುವುದೇ ಕತೆಗಾರನ ಕಥನ ಕೌಶಲ. ಪಂಚ ಅರ್ಥ ಪ್ರಕೃತಿ,

---

1 'ಧ್ವನ್ಯಾಲೋಕ', ೩, ೧೨. 2 'ದಶರೂಪಕ', ೧, ೧೧೨.

ಪಂಚ ಅವಸ್ಥೆ, ಪಂಚ ಸಂಧಿ ಮತ್ತು ೬೪ ಸಂಧ್ಯಂಗಗಳು ಗ್ರಥನ ಕೌಶಲಕ್ಕೆ ಜೀವಾಳ ವಾಗಿದೆ. ಆದುದರಿಂದಲೇ 'ಭಾರತೀಯ ಕಾವ್ಯಮೀಮಾಂಸೆ'ಕಾರರು—

ತ ಏವ ಪದ ವಿನ್ಯಾಸಾಸ್ತ ಏವಾರ್ಥ ವಿಭೂತಯಃ।
ತಥಾಪಿ ನವ್ಯಂ ಭವತಿ ಕಾವ್ಯಂ ಗ್ರಥನ ಕೌಶಲಾತ್ ॥

ಎಂದಿದ್ದಾರೆ. ಈ ಭಾರತೀಯ ಶಾಸ್ತ್ರೀಯ ದೃಷ್ಟಿಯಿಂದ ಕನ್ನಡ ಜೈಮಿನಿ ಭಾರತ ವನ್ನು ಓದಿದಾಗ ಕವಿ ಲಕ್ಷ್ಮೀಶನ ಸಂಸ್ಕಾರ ಸಂಪನ್ನತೆಗೆ ನಾವು ತಲೆದೂಗದೆ ಇರ ಲಾರೆವು.

ಈ ಕಾವ್ಯವು ಅನೇಕ ಸಣ್ಣ ಸಣ್ಣ ಕಥೆಗಳಿಂದ ಕೂಡಿದ ಕಥಾಗುಚ್ಛವಾಗಿರುವದ ರಿಂದ, ಇಂಗ್ಲಿಷ್ ವಿಮರ್ಶಾ ತತ್ತ್ವಗಳಿಂದಲೂ ಈ ಕಥಾನಕಗಳ ಮೌಲ್ಯವನ್ನು ಇನ್ನು ಮುಂದೆ ನಿರೀಕ್ಷಿಸೋಣ:

'Plot is the management of the continuous line of action underlying the whole progress of the story ...... Novelty and interest in the situations throughout the story, with an increasing interest in the denouement are the essential demands of plot. Complexity of plot is extremely undesirable for the short story'[1] ಎಂದು ಆಲ್‌ಬ್ರೈಟ್ ಎಂಬ ಪಾಶ್ಚಾತ್ಯ ಕಥಾತಂತ್ರ ಮೀಮಾಂಸಕರು ಕಥಾವಸ್ತುವಿನ ಬಗೆಗೆ ಹೇಳಿದ್ದಾರೆ. [ಕಥೆಯ ಬೆಳವಣಿಗೆಯಾಗುವಂತೆ, ಘಟನೆಗಳಲ್ಲಿ ಏಕಸೂತ್ರತೆ ಉಂಟಾಗುವಂತೆ ಮಾಡುವದೇ ಕಥಾವಸ್ತುವಿನ ಕಾರ್ಯವಾಗಿದೆ. (plot) ಬೇರೆ ಬೇರೆ ಅವಸ್ಥೆಗಳಲ್ಲಿ ನಾವೀನ್ಯ ಮತ್ತು ಕುತೂಹಲವನ್ನು ಕೆರಳಿಸುವ ಸಾಮರ್ಥ್ಯವಿದ್ದು, ಕಥಾ ವಸ್ತುವಿನ ಅಂತ್ಯ ಪರಿಣಾಮವು ಚಿತ್ತವೇಧಕವಾಗಿರಬೇಕು. ಇದು ಸಣ್ಣ ಕಥೆಯ ಕಥಾವಸ್ತುವಿನ ಆವಶ್ಯಕತೆಯಾಗಿದೆ. ಸಣ್ಣ ಕಥೆಯಲ್ಲಿ ಸಂಕೀರ್ಣತೆ, ಸಮ್ಮಿಶ್ರತ್ವ ಬೇಕಾ ಗಿಲ್ಲ] ಎಂದು ಅವರು ಪಟ್ಟ ಅಭಿಪ್ರಾಯವು ಭಾರತೀಯರಿಗೂ ಒಪ್ಪಿಗೆಯಾಗುವಂತಹ ಮಾತೇ ಆಗಿದೆ. ಜೈಮಿನಿ ಭಾರತದ ಕಥಾವಸ್ತು ಅಖಂಡವಾದುದಲ್ಲವೆಂದು ಕೆಲವರಿಗೆ ತೋರಿದರೂ; ಜನ್ನಗುದುರೆಯ ಸಂಚಾರಕಥನವೆಂಬ ಒಂದೇ ಎಳೆಯಲ್ಲಿ ಪೋಣಿಸಿದ ಅನೇಕ ಲಘು ಕಥಾಮಣಿಗಳ ಕಥಾರತ್ನ ಹಾರವಾಗಿದೆ ಈ ಕಾವ್ಯ. ಔಚಿತ್ಯಕ್ಕೂ ಕುತೂಹಲಕ್ಕೂ ಭಂಗಬಾರದಂತೆ ಕಥಾನಕಗಳನ್ನು ಬೆಳಸಿಕೊಂಡು, ಪೋಣಿಸಿಕೊಂಡು ಬಂದಿದ್ದಾನೆ ಕವಿ.

Elliott Blackiston ಎಂಬುವನು ಸಣ್ಣ ಕಥೆಗಳನ್ನು ಚಿತ್ರಿಸುವ ಒಂದು ಚೌಕಟ್ಟನ್ನು ಎಂದರೆ ವಸ್ತು ವಿಸ್ತಾರವನ್ನು ತಕ್ಕಂತೆ ಅಳವಡಿಸುವ ಕ್ರಮವನ್ನು ಕೊಟ್ಟಿದ್ದಾನೆ. ಭಾರತೀಯ ಕಾವ್ಯ ಮೀಮಾಂಸಕರು ಪಂಚಸಂಧಿಗಳಲ್ಲಿ ವಸ್ತು ವಿಸ್ತರಣೆ ಯನ್ನು ಒಳಪಡಿಸಿದಂತೆ ಈತನು ಒಂಬತ್ತು ಹೆಜ್ಜೆಗಳನ್ನು ಕೊಟ್ಟಿದ್ದಾನೆ. ಅವು ಇವು:

---

[1] *The Short Story— Its Principles and Structure,* E. M. Albright.

1. *Setting*—It is well to make under this heading a note of the time of the year.

[೧. ಹಿನ್ನೆಲೆ—ಇಲ್ಲಿ ವರ್ಷದ ಕಾಲವನ್ನು ಸೂಚಿಸುವುದು ಒಳಿತು.]

2. *Chief Female Characters* —Write in detail all that is necessary to a complete picture of your character. (i) physical description (ii) her likes and dislikes (iii) her individual character traits (iv) explain why she is a person of individuality and not merely a type (v) tell something of her background-her parents, her ancestry, her education, her hobbies, the type of clothes she wears, her philosophy. Set down everything which makes her a real person and not merely a character in a story.

[೨. ಪ್ರಮುಖ ಸ್ತ್ರೀ ಪಾತ್ರಗಳು : ಸ್ತ್ರೀ ಪಾತ್ರದ ಪರಿಪೂರ್ಣ ಚಿತ್ರಕ್ಕೆ ಬೇಕಾಗುವ ಎಲ್ಲ ವಿವರಗಳನ್ನು ಗುರುತು ಹಾಕಿಕೊಳ್ಳಬೇಕು. ಉದಾಹರಣಾರ್ಥ : (i) ಅಂಗಾಂಗವರ್ಣನೆ (ii) ಬೇಕು ಬೇಡಗಳು (iii) ವ್ಯಕ್ತಿನಿಷ್ಟ ಗುಣಲಕ್ಷಣಗಳು (iv) ಯಾವುದೇ ಪ್ರಕಾರಕ್ಕೆ ಸೇರದೆ ಸ್ವತಂತ್ರ ಪಾತ್ರವೆನಿಸಿಕೊಳ್ಳುವ ಕಾರಣವೇನು ? (v) ಅವಳ ತಂದೆ–ತಾಯಿ, ವಂಶ, ವಿದ್ಯಾಭ್ಯಾಸ, ಒಲವು, ಬಯಸುವ ವೇಶ–ಭೂಷಣ ಗಳು, ಜೀವನದ ತತ್ತ್ವಜ್ಞಾನ ಇತ್ಯಾದಿ ವಿವರಗಳನ್ನು ಕೂಡಿಸಿಕೊಂಡು ಪ್ರತಿಯೊಂದು ಸ್ತ್ರೀಪಾತ್ರವೆಂದರೆ ಒಂದು ಜೀವಂತ ವ್ಯಕ್ತಿ ಎಂಬಂತೆ ಪಾತ್ರಚಿತ್ರಣವನ್ನು ಮಾಡಬೇಕೇ ಹೊರತು ಒಂದು ನಿರ್ಜೀವವಸ್ತು ಎಂಬಂತೆ ಪಾತ್ರವನ್ನು ಚಿತ್ರಿಸಬಾರದು.]

3. *Chief Male Characters*—If the story is written from the point of view of the heroine, the writer should not tell the thoughts of the hero or of any other character in the story. The thoughts of all but the view point character should be expressed to the reader through the character's actions, speech etc.

[೩. ಪ್ರಮುಖ ಪುರುಷಪಾತ್ರಗಳು : ಸ್ತ್ರೀ ಪಾತ್ರವನ್ನು ಪ್ರಮುಖವಾಗಿ ಚಿತ್ರಿಸುವದು ಉದ್ದೇಶವಿದ್ದಾಗ ಪುರುಷ ಪಾತ್ರದ ವಿಚಾರ ಹಿಂದೆ ನಿಲ್ಲಬೇಕು. ಅದ ರಂತೆಯೇ ಪುರುಷ ಪಾತ್ರಪ್ರಧಾನವಾದ ಕಥಾವಸ್ತುವಿನಲ್ಲಿ ಸ್ತ್ರೀ ಪಾತ್ರ ಹಿಂದೆ ನಿಲ್ಲ ಬೇಕು. ಏನೇ ಇರಲಿ ಯಾವ ಪಾತ್ರಗಳು ಪ್ರಧಾನವಾಗಿರುವವೋ ಅವುಗಳು ಓದುಗನ ಚಿತ್ರದಲ್ಲಿ ಸ್ಥಿರವಾಗಿ ನಿಲ್ಲುವಂತೆ ಆ ಪಾತ್ರದ ಭಾಷೆ, ಕೃತಿ, ರೀತಿ, ನೀತಿ, ನಡಾವಳಿ ಗಳೆಲ್ಲ ಪೂರ್ಣವಾಗಿ ಅರಳಿ ನಿಲ್ಲಬೇಕು.]

4. Story problem—ಕಥಾ ಸಮಸ್ಯೆ.

5. Conflict—ಮಾನಸಿಕ ಹೋರಾಟ.

6. Hindrances—ಅಡ್ಡಿ-ಆತಂಕಗಳು.

7. Solution of problem—ಸಮಸ್ಯಾ ಪರಿಹಾರ.

8. A. *Climax* (ಕಥಾಶಿಖರ ಆರೋಹಣ ಕ್ರಿಯೆ)—When the Problem has been solved, the climax of the story has been reached, climax means a steady heightening of interest to its full close, rather than the mental or emotional jerk occasioned by surprise.

[ಅ. (ಅ) ಕಥಾಶಿಖರ (ಆರೋಹಣ ಕ್ರಿಯೆ): ಕಥಾ ಸಮಸ್ಯಾಪರಿಹಾರವಾದ ಬಳಿಕ ಕಥಾವಸ್ತು, ಕಥಾ ಶಿಖರವನ್ನು ತಲಪುತ್ತದೆ. ಕಥಾ ಶಿಖರವೆಂದರೆ ಕ್ಷಣಿಕವಾಗಿ ಆಶ್ಚರ್ಯದಿಂದಾಗುವ ಭಾವೋದ್ದೀಪನವಲ್ಲ; ನಿಧಾನವಾಗಿ ಚಿತ್ತವೇಧಕತೆಯಿಂದ ತೃಪ್ತಿಭಾವವನ್ನು ಕೊಡುವ ಅಮೃತಸ್ಪರ್ಶವಾಗಿದೆ.]

B. *Denouement* (ಅಂತ್ಯ ಪರಿಣಾಮ ಅವರೋಹಣ ಕ್ರಿಯೆ)— Should be swift and the ending, the kind that makes the reader glad to have read the story.

[ಬ. ಅಂತ್ಯ ಪರಿಣಾಮ ಅವರೋಹಣ ಕ್ರಿಯೆ : ಅವರೋಹಣ ಕ್ರಿಯೆಯು ದ್ರುತಗತಿಯಿಂದ ಆಗಬೇಕು. ಅಂತ್ಯ ಪರಿಣಾಮವು ಸುಖವನ್ನುಂಟುಮಾಡಬೇಕು.]

9. *Theme*—Significant *theme*.[1]

[ಪ್ರಮುಖವಾದ ಕಥಾನಕದ ಜೀವಾಳ]

1. ಕನ್ನಡ ಜೈಮಿನಿ ಭಾರತಕಾರನಾದ ಕವಿ ಲಕ್ಷ್ಮೀಶನು ಪ್ರತಿಯೊಂದು ಕಥಾವಸ್ತುವನ್ನು ಋತುವರ್ಣನೆಯಿಂದ ಪ್ರಾರಂಭಿಸುತ್ತಾನೆ. ಆ ಋತು ವರ್ಣನೆಯು ಆಯಾ ಕಥಾವಸ್ತುವಿನ ಮೇಲೆ ಒಳ್ಳೆಯ ಬೆಳಕನ್ನು ಚೆಲ್ಲುತ್ತದೆ. ಇಲ್ಲಿ ಪಾಶ್ಚಾತ್ಯ ಲೇಖಕನು ಹೇಳಿರುವ Setting (ಹಿನ್ನೆಲೆ) ಎಂಬ ಸೂತ್ರದ ವ್ಯಾಖ್ಯೆಯ ವಿಚಾರವನ್ನು ಲಕ್ಷ್ಮೀಶನು ಸಾಧಿಸಿದ್ದಾನೆ, ಎಂದು ಹೇಳಬಹುದು.

2. *Chief Female Characters*— ನೀಲಧ್ವಜನ ಕಥಾನಕದಲ್ಲಿ ಅವನ ಹೆಂಡತಿ ಜ್ವಾಲೆಯೆ ಪ್ರಮುಖ ಪಾತ್ರವಾಗಿರುವದರಿಂದ ಅವಳ ಸ್ವಭಾವ ವಿಶೇಷವಾದ ಛಲವನ್ನು ಚಿತ್ರಿಸುವಲ್ಲಿ ಕವಿ ಗಮನವನ್ನು ಕೇಂದ್ರೀಕರಿಸಿದ್ದಾನೆ. ಇದರಂತೆ-ಸುಧನ್ವನ ತಾಯಿ-ತಂಗಿ, ಪತ್ನಿ ಪ್ರಭಾವತಿ, ಪ್ರಮೀಳೆ, ಚಿತ್ರಾಂಗದೆ, ಉಲೂಪಿ, ಸೀತೆ, ಕುಮುದ್ವತಿ, ಮೇಧಾವಿನಿ, ವಿಷಯೆ, ಚಂಪಕಮಾಲಿನಿ, ದುಃಶಳೆ, ಸತ್ಯಭಾಮೆ, ಜಾಂಬುವತಿ- ಈ ಮಹತ್ವದ ಸ್ತ್ರೀ ಪಾತ್ರಗಳ ವ್ಯಕ್ತಿತ್ವವನ್ನು ಚೆನ್ನಾಗಿ ಮೂಡಿಸಿದ್ದಾನೆ. ಒಂದೊಂದು ಚಿತ್ರ ಒಂದೊಂದು ಪರಿ. ಪ್ರತಿಯೊಂದು ಚಿತ್ರವೂ ಅವರವರ ಗುಣ-ಸ್ವಭಾವ ವಿಶೇಷವನ್ನು ಅನುಸರಿಸಿ ಚಿತ್ರಿತವಾಗಿದೆ.

3. *Chief Male Characters* —ಮುಖ್ಯ ಪುರುಷ ಪಾತ್ರಗಳು : 'ನೀಲಧ್ವಜ', 'ಪ್ರಮೀಳೆ', 'ಚಂಡಿ', 'ಪಾರ್ವತಿಯ ತಪಸ್ಸು', 'ರಾಮಚಂದ್ರನ ಅಶ್ವಮೇಧ',

---

[1] *Short Story Writing for Profit*—Elliott Blackiston.

'ದುಃಶಳೆ'—ಈ ಕಥಾನಕಗಳಲ್ಲಿ ಸ್ತ್ರೀ ಪಾತ್ರಗಳಿಗೆ ಮಹತ್ತ್ವವಿರುವಂತೆ; 'ಹಂಸಧ್ವಜ', 'ಭೀಷಣ', 'ಬಭ್ರುವಾಹನ', 'ಮಯೂರಧ್ವಜ', 'ವೀರವರ್ಮ', 'ಚಂದ್ರಹಾಸ', 'ಬಕದಾಲ್ಭ್ಯ'—ಈ ಕಥಾನಕಗಳು ಪುರುಷಪಾತ್ರ ಪ್ರಧಾನವಾಗಿವೆ. ಈ ಕಥಾನಕಗಳಲ್ಲಿ ಪುರುಷಪಾತ್ರಗಳನ್ನು ಯಥೋಚಿತವಾಗಿ ರಮ್ಯವಾಗಿ ಚಿತ್ರಿಸುವಲ್ಲಿ ತನ್ನ ಕಾವ್ಯಶಕ್ತಿಯ ಸರ್ವಸ್ವವನ್ನು ವ್ಯಯಿಸಿದ್ದಾನೆ. ನೀಲಧ್ವಜನ ಕಥಾನಕದಲ್ಲಿ ಜ್ವಾಲೆ ಮಹತ್ತ್ವದ ವ್ಯಕ್ತಿ. ಆದುದರಿಂದ ಅಲ್ಲಿ ಆಕೆಯ ಪಾತ್ರಚಿತ್ರ ಎದ್ದುಕಾಣುತ್ತದೆ. ನೀಲಧ್ವಜನದು ಸಾಮಾನ್ಯ ಪಾತ್ರ–ಸಾಮಾನ್ಯ ಚಿತ್ರ. ಮಯೂರಧ್ವಜನ ಕಥಾನಕದಲ್ಲಿ ಮಯೂರಧ್ವಜನದು ಮುಖ್ಯಪಾತ್ರ; ಕುಮುದ್ವತಿಯದು ಸಾಮಾನ್ಯ ಪಾತ್ರ–ಈ ಪ್ರಾಧಾನ್ಯತೆ, ಅಪ್ರಾಧಾನ್ಯತೆಗಳನ್ನು ಆಯಾ ವ್ಯಕ್ತಿಚಿತ್ರಗಳಲ್ಲಿ ಸೊಗಸಾಗಿ ತೋರಿಸುವಲ್ಲಿ ಕವಿ ತನ್ನ ಪ್ರತಿಭೆಯನ್ನು ಚೆನ್ನಾಗಿ ಪ್ರದರ್ಶಿಸಿದ್ದಾನೆ. ಈ ಬಗೆಯ ಕೌಶಲವನ್ನು ಪ್ರತಿ ಕಥೆಯಲ್ಲಿಯೂ ನಾವು ಕಾಣುತ್ತೇವೆ.

4. *Story Problem* (ಕಥಾಸಮಸ್ಯೆ) : ನೀಲಧ್ವಜನ ಪತ್ನೀವಶತೆ ಮತ್ತು ಜ್ವಾಲೆಯ ಛಲ, ಹಂಸಧ್ವಜ–ಸುಧನ್ವರ ಕ್ಷಾತ್ರ ತಾಮಸ, ಪ್ರಮೀಳೆಯ ವಿಷಕನ್ಯಾತ್ವ, ಭೀಷಣನ ಭೀಕರತೆ, ಬಭ್ರುವಾಹನನ ಸಾರಳ್ಯ, ಮಯೂರಧ್ವಜನ ಅಸದೃಶ ಭಕ್ತಿ, ಚಂದ್ರಹಾಸನ ದೈವದುರ್ವಿಲಾಸ, ಬಕದಾಲ್ಭ್ಯನ ಧ್ಯಾನ ತಾದಾತ್ಮ್ಯ–ಇವು ಜೈಮಿನಿ ಭಾರತ ಕಾವ್ಯದಲ್ಲಿಯ ಕಥಾನಕಗಳ ವಿವಿಧ ಸಮಸ್ಯೆಗಳಾಗಿವೆ.

5. *Conflict* (ಮಾನಸಿಕ ವಿರೋಧ) : ಯುದ್ಧವು ಕ್ಷತ್ರಿಯರ ಧರ್ಮ; ಯಜ್ಞಾಶ್ವ ಬಂದರೆ ಕಟ್ಟಬೇಕು, ಕಾದಬೇಕು ಇದು ಅವರ ಕರ್ತವ್ಯ. ಯುದ್ಧಕ್ಕೆ ಹಿಂಜರಿಯುವದು, ಕಾದುವಾಗ ಸೋತು ಬೆನ್ನು ತೋರಿಸುವುದು ಅಥವಾ ವೈರಿಗೆ ತ್ರಾಹಿ ಎಂದು ಶರಣು ಹೋಗುವುದು ಕ್ಷತ್ರಿಯನಿಗೆ ಮಹಾಕಲಂಕ. ಅವನು ಸಮರದಲ್ಲಿ ಗೆದ್ದಾನು, ಸತ್ತಾನು; ಕಲಂಕಿತವಾದ ಮುಖವನ್ನಿಟ್ಟುಕೊಂಡು ಜೀವಿಸಲಾರ. ಈ ತಿಳಿವಳಿಕೆ ನಮ್ಮಲ್ಲಿ ಪುರಾತನ ಕಾಲದಿಂದಲೂ ದೃಢಮೂಲವಾಗಿದೆ. ಈ ತಿಳಿವಳಿಕೆಯ ಮಾನಸಿಕವಾದ, ಭಾವನಾತ್ಮಕವಾದ ವಿರೋಧವೇ ಯುದ್ಧಕ್ಕೆ ಕಾರಣವಾಗುತ್ತದೆ ಎಂಬುದನ್ನು ಈ ಕಾವ್ಯದ ಎಲ್ಲ ಕಥೆಗಳಲ್ಲಿ ಚಿತ್ರಿಸಲಾಗಿದೆ.

6. *Hindrances* (ಅಡ್ಡಿ–ಆತಂಕಗಳು) : ಪರಿಭ್ರಮಿಸುತ್ತ ಹೊರಟಿದ್ದ ಯಜ್ಞಾಶ್ವವನ್ನು ಯಾವ ಅರಸೂ ಕಟ್ಟದೆ ಇದ್ದಿದ್ದರೆ ಈ ಎಲ್ಲ ಕಥಾನಕಗಳಲ್ಲಿಯ ವೈವಿಧ್ಯ–ವೈಶಿಷ್ಟ್ಯಗಳೇ ಲುಪ್ತವಾಗುತ್ತಿದ್ದವು; ಕಥಾನಕಗಳ ಔಚಿತ್ಯವೇ ನಷ್ಟವಾಗುತ್ತಿತ್ತು. ಇಲ್ಲಿ ಸಂಭವಿಸುವ ಅನೇಕ ಸಂಗ್ರಾಮಗಳೇ ಕಥಾವಸ್ತು ವಿಸ್ತಾರದಲ್ಲಿಯ ಅಡ್ಡಿ ಆತಂಕಗಳು.

7–8. A. *Solution of Problem and Climax* (ಸಮಸ್ಯಾ ಪರಿಹಾರ ಮತ್ತು ಕಥಾಶಿಖರ ಆರೋಹಣ ಕ್ರಿಯೆ) : ಜೈಮಿನಿ ಭಾರತದಲ್ಲಿ ಕಥಾಸಮಸ್ಯಾ ಪರಿಹಾರವೇ ಕಥಾಶಿಖರವಾಗಿದೆ. ಜ್ವಾಲೆಯ ಛಲವು ಅವಳು ಅಗ್ನಿಯನ್ನು ಪ್ರವೇಶಿಸುವಂತೆ

ಮಾಡುತ್ತದೆ. ಅದರಂತೆ ಹಂಸಧ್ವಜನ ಕ್ಷಾತ್ರ ತಾಮಸವು ಸುಧನ್ವ-ಸುರಥರನ್ನು ಕಳೆದುಕೊಳ್ಳುತ್ತದೆ; ಪ್ರಮೀಳೆಯ ವಿಷಕನ್ಯಾತ್ವ ಆಕಾಶವಾಣಿಗೆ ಮಣಿಯುತ್ತದೆ; ಭೀಷಣನ ಭೀಕರತೆ ಅರ್ಜುನನ ಮುಂದೆ ನಿಲ್ಲುವದಿಲ್ಲ; ಬಭ್ರುವಾಹನನ ಸಾರಳ್ಯ ಯುದ್ಧ ದಿಂದ ಶಾಂತಿಯತ್ತ ಸಾಗುತ್ತದೆ; ಚಂದ್ರಹಾಸನ ವಿಧಿವಿಲಾಸ ಅನಂತಮುಖವನ್ನು ತಾಳಿದೆ; ಬಕದಾಲ್ಭ್ಯನಿಗೆ ಅವನು ಕುಳಿತಲ್ಲಿ ಶ್ರೀಕೃಷ್ಣನ ದರ್ಶನವು ಲಭಿಸುತ್ತದೆ. ಈ ಕಾವ್ಯದಲ್ಲಿ ಬರುವ ಎಲ್ಲ ಕಥೆಗಳಲ್ಲಿ ಶ್ರೀಕೃಷ್ಣನ ಈ ತತ್ತ್ವವನ್ನು ಅರಿಯುವುದೇ ಸಮಸ್ಯಾ ಪರಿಹಾರ. ಈ ತತ್ತ್ವವನ್ನು ಅರಿಯುವ, ಪರಿವರ್ತನವಾಗುವ ಸ್ಥಾನವೇ ಕಥಾವಸ್ತುವಿನ ಶಿಖರವಾಗಿದೆ. ಈ ಕಾವ್ಯದಲ್ಲಿ ಎಷ್ಟು ಕಥಾನಕಗಳೋ ಅಷ್ಟು ಶಿಖರ ಗಳು ಅನಿವಾರ್ಯ. ಹೀಗಾಗಿ ಜೈಮಿನಿ ಭಾರತ ಕಾವ್ಯದ ಕಥಾವಸ್ತುವು ಅನೇಕ ಗೋಪುರಗಳುಳ್ಳ ವಾಸ್ತುಶಿಲ್ಪ ಕೌಶಲದಿಂದ ಪರಿಪೂರ್ಣವಾದ ಭವ್ಯದೇವಾಲಯದಂತೆ ಶೋಭಿಸುತ್ತದೆ.

8 B. *Denouement* (ಅವರೋಹಣ): ಕೃಷ್ಣನ ಸರ್ವೇಶತ್ವವು ಪ್ರಸ್ಥಾಪಿತವಾಗುತ್ತಲೆ ಕಥೆಯು ಮುಗಿಯುವದನ್ನು ಇಲ್ಲಿ ನೋಡುತ್ತೇವೆ. ಆಮೇಲೆ ಆಯಾ ದೇಶದ ರಾಜನಿಂದ ಪಾರ್ಥನಿಗೆ ಗೌರವದ ಸ್ವಾಗತ ಮತ್ತು ಅಶ್ವವಿಮೋಚನೆ ಯಿಂದ ಮುಂದಿನ ಕಥೆಗೆ ಸಾಗುತ್ತೇವೆ. ಈ ರೀತಿ ಕಥಾ ತಂತ್ರದ ದೃಷ್ಟಿಯಿಂದ ಜೈಮಿನಿ ಭಾರತವು ಪರಿಪೂರ್ಣವಾದುದು.

9. *Theme* (ಕಥಾನಕದ ಜೀವಾಳ): ಅಶ್ವಮೇಧ ಯಾಗವು ಇಲ್ಲಿ ಕಥಾವಸ್ತು (plot). ಈ ಕಥಾವಸ್ತುವಿನಲ್ಲಿ ಅಡಕಗೊಂಡಿರುವ ಅನೇಕ ಕಥಾನಕಗಳ ಜೀವಾಳವು ಬೇರೆಬೇರೆಯಾಗಿರುವುದರಿಂದ ಅವೂ, ಕಥಾವಸ್ತುವಿನ ಸಫಲತೆಯಲ್ಲಿ ಸಹ- ಭಾಗಿಯಾಗುತ್ತವೆ. ನೀಲಧ್ವಜನ ಕಥಾನಕದಲ್ಲಿ ಜ್ವಾಲೆಯ ಛಲವೇ ಜೀವಾಳ. ಹಂಸಧ್ವಜನ ಕಥಾನಕದಲ್ಲಿ ಸುಧನ್ವ-ಸುರಥರ ಪೌರುಷ, ಮಯೂರಧ್ವಜನ ಕಥಾ ನಕದಲ್ಲಿ ಅವನ ಕೃಷ್ಣಶ್ರದ್ಧೆ, ಚಂದ್ರಹಾಸನ ಕಥಾನಕದಲ್ಲಿ ಆತನ ಭಕ್ತಿ ವಿಲಾಸ ಇವು ಜೀವಾಳ.

ಭಾರತೀಯ ಕಾವ್ಯಮೀಮಾಂಸಕಾರರು ೬೪ ಸಂಧ್ಯಂಗಗಳನ್ನು ಹೇಳಿರುವಂತೆ Elliott Blackiston ನು ಲಘುಕಥೆಯಲ್ಲಿರಬೇಕಾದ ೩೪ ಘಟಕಗಳನ್ನು ಕೊಡುತ್ತಾನೆ:

1. Plot (ಕಥಾವಸ್ತು)
2. Point of View (ದೃಷ್ಟಿಕೋನ)
3. Story Problem (ಕಥಾಸಮಸ್ಯೆ)
4. Style (ಶೈಲಿ)
5. Characterisation (ಪಾತ್ರ ಚಿತ್ರಣ)
6. Moral (ನೀತಿ ತಾತ್ಪರ್ಯ)
7. Mood (ಮನಃಸ್ಥಿತಿ, ಭಾವ)
8. Convincingness (ಮನವರಿಕೆ ಮಾಡುವದು)
9. Motivation (ಪ್ರೇರಕ ಶಕ್ತಿ)
10. Action (ಕಥೆಯ ಓಟ, ಗತಿ)
11. Drama (ನಾಟ್ಯ)
12. Dialogue (ಸಂಭಾಷಣೆ)

13. Struggle (ಹೋರಾಟ)
14. Complication (ಸಂಕೀರ್ಣತೆ)
15. Implication (ಸಿಕ್ಕು)
16. Restraint (ನಿಗ್ರಹ, ನಿಯಂತ್ರಣ)
17. Suspense (ಸಂದೇಹ)
18. Unity (ಐಕ್ಯ)
19. Time (ಕಾಲ)
20. Setting (ಹಿನ್ನೆಲೆ)
21. Humour (ಹಾಸ್ಯ)
22. Pathos (ದುಃಖ)
23. Sentiment (ರಸ)
24. Dialect (ಭಾಷೆ)
25. Realism (ವಾಸ್ತವಿಕತೆ)
26. Knowledge of the subject (ವಿಷಯ ಜ್ಞಾನ)
27. Editorial Policies (ಸಂಪಾದಕೀಯ ಚಾತುರ್ಯ)
28. Taboos (ನಿರೋಧಿಸು)
29. Trend of the times (ಕಾಲದ ಒಲವು)
30. Slanting (ಇಳಿಜಾರು)
31. Background(ಪಾರ್ಶ್ವಭೂಮಿ)
32. Adaptability (ಹೊಂದಿಕೆ)
33. Preparation (ಸಿದ್ಧತೆ)
34. Talent [1] (ಪ್ರತಿಭೆ)

ಈ 34 ಘಟಕಗಳಲ್ಲಿ ಆರು ಘಟಕಗಳು ಎಂದರೆ (1) Point of view (2) Style (3) Mood (4) Editorial Policies (5) Talent (6) Knowledge of the subject—ಇವು ಲೇಖಕನಲ್ಲಿ ಇರಬೇಕಾದ ಗುಣಗಳು. ಉಳಿದ 28 ಘಟಕಗಳು ಕೃತಿಯಲ್ಲಿ ಇರಬೇಕಾದುವು. ಕವಿ ಲಕ್ಷ್ಮೀಶನಲ್ಲಿ ಮೇಲೆ ಹೇಳಿದ ವ್ಯಕ್ತಿ ವಿಶಿಷ್ಟ ಷಡ್ಗುಣಗಳು ಉಂಟೆಂಬುದನ್ನು ಅವನ ಕಾವ್ಯದಲ್ಲಿ ಕಾಣುತ್ತೇವೆ. (೧) ಮೂಲ ಸಂಸ್ಕೃತ ಅಶ್ವಮೇಧ ಪರ್ವದ ಸಂಪೂರ್ಣ ಮತ್ತು ಸರಿಯಾದ ಜ್ಞಾನವು ಅವನಿಗಿದೆ. (೨) ಅದನ್ನು ಯಾವ ರೀತಿಯಲ್ಲಿ ಕನ್ನಡಕ್ಕೆ ಅನುವಾದಿಸಿಕೊಡಬೇಕು ಎಂಬ ವಿಚಾರ ದಲ್ಲಿ ವಿಶಿಷ್ಟ ದೃಷ್ಟಿಯನ್ನು ಅವನು ಪಡೆದಿದ್ದಾನೆ. (೩) ಮನಸ್ಸಿನ ಒಲವೂ ಉಲ್ಲಾಸವೂ ಇದೆ. (೪) ತನ್ನದೇ ಆದ ವಿಶಿಷ್ಟ ಶೈಲಿ ಅವನಿಗುಂಟು. (೫) ಮೂಲದ ೬೮ ಸಂಧಿಗಳ ಕಥೆಯನ್ನು ೩೪ ಸಂಧಿಗಳಿಗೆ ಇಳಿಸುವಲ್ಲಿ ಅವನು ಸಂಪಾದಕೀಯ ಪರಿಜ್ಞಾನವನ್ನು ತೋರಿದ್ದಾನೆ. (೬) ಇವೆಲ್ಲವುಗಳಿಗಿಂತ ಮುಖ್ಯವಾಗಿ ಲಕ್ಷ್ಮೀಶನಿಗೆ ಪ್ರತಿಭೆ ಎಂಬುದು ದೇವದತ್ತ ದೇಣಿಗೆಯಾಗಿದೆ. ಇವಲ್ಲದೆ ಅವನ ಜೈಮಿನಿ ಭಾರತದಲ್ಲಿ Blackiston ವಿವೇಚಿಸಿದ ೨೮ ಕೃತಿ ಸಂಬಂಧದ ಘಟಕಗಳು ಇರುವದನ್ನೂ ತೋರಿಸಬಹುದು.

ಒಟ್ಟಾರೆ ಲಕ್ಷ್ಮೀಶನ ಕಾವ್ಯವನ್ನು ಭಾರತೀಯ ಹಾಗೂ ಪಾಶ್ಚಾತ್ಯ ಎರಡೂ ತಂತ್ರದೃಷ್ಟಿಗಳಿಂದ ವಿಮರ್ಶಿಸಿದಾಗ ಅವನ ಕಥಾವಿಸ್ತಾರಕ್ರಮವು ಶಾಸ್ತ್ರೀಯ ಮೌಲ್ಯವುಳ್ಳದುದಾಗಿದೆ ಎಂದೂ ಬಹುಮಟ್ಟಿಗೆ ಅವನ ಕೃತಿ ಪರಿಪೂರ್ಣ ಕೃತಿ ಎಂದೂ ಹೇಳುವಲ್ಲಿ ಹೆಮ್ಮೆ ಎನಿಸದಿರದು. ಕವಿ ಲಕ್ಷ್ಮೀಶನಿಗೆ ಪಾಶ್ಚಾತ್ಯ ವಿಮರ್ಶಾ ತತ್ತ್ವಗಳೂ

[1] *Short Story Writing for Profit*—Elliott Blackiston.

ಗೊತ್ತಿದ್ದವು ಎಂದು ನಮ್ಮ ಅಭಿಪ್ರಾಯವಲ್ಲ. ದೇಶವು ಭಾರತವೇ ಇರಲಿ, ಪಾಶ್ಚಾತ್ಯ ದೇಶವೇ ಇರಲಿ ಮಾನವ ಒಬ್ಬನೇ. ಆದುದರಿಂದ ಮಾನವನ ಜೀವನದ ಪ್ರತಿಬಿಂಬ, ವಿಮರ್ಶನರೂಪವಾದ ಸಾಹಿತ್ಯವು ಒಂದೇ ಆಗುತ್ತದೆ. ಆ ಆ ದೇಶದ ಸಾಹಿತ್ಯಶಾಸ್ತ್ರವು ಸ್ವಲ್ಪ ಭಿನ್ನಭಿನ್ನವಾಗಿರುತ್ತದೆ. ಭಾರತೀಯ ಸಾಹಿತ್ಯಶಾಸ್ತ್ರ ಮತ್ತು ಪಾಶ್ಚಾತ್ಯ ಸಾಹಿತ್ಯಶಾಸ್ತ್ರ ಈ ಎರಡೂ ದೃಷ್ಟಿಯಿಂದ ಲಕ್ಷ್ಮೀಶನ ಜೈಮಿನಿ ಭಾರತದ ಮೌಲ್ಯವನ್ನು ಇಂದಿನವರಾದ ನಾವು ತೂಗಿನೋಡಿದಾಗ—ಇದೊಂದು ಪರಿಪೂರ್ಣ ಕೃತಿ ಎಂದು ಕಂಡುಬರುವುದು ಒಂದು ಯೋಗವೇ ಸರಿ.

## ಕಥಾವಸ್ತುವಿನ ವಿಭಜನಾಕ್ರಮ

### ೧. ವಸ್ತು

ಲಕ್ಷ್ಮೀಶನ ಜೈಮಿನಿ ಭಾರತದ ಕಥಾವಸ್ತು ಪ್ರಖ್ಯಾತವಾದುದು. ಭಾರತ ಯುದ್ಧಾನಂತರದಲ್ಲಿ ಧರ್ಮರಾಜನು ಜರುಗಿಸಿದ ಅಶ್ವಮೇಧಯಾಗದ ವೃತ್ತಾಂತವು ಇಲ್ಲಿ ವರ್ಣಿತವಾಗಿದೆ. ಇದರಲ್ಲಿ ಕೃಷ್ಣನೇ ನಾಯಕನಾಗಿರುವದರಿಂದ ಇದು 'ದಿವ್ಯ' ಕಥಾವಸ್ತುವೆನಿಸಿದೆ. ಜೈಮಿನಿ ಮುನಿಯು ಸಂಸ್ಕೃತದಲ್ಲಿ ಬರೆದ ೬೮ ಅಧ್ಯಾಯಗಳನ್ನುಳ್ಳ ಅಶ್ವಮೇಧಿಕ ಪರ್ವವೇ ಈ ಕಾವ್ಯಕ್ಕೆ ಮೂಲಾಧಾರವೆಂದು ಹಿಂದೆಯೆ ಹೇಳಿದೆ. ಕನ್ನಡ ಜೈಮಿನಿ ಭಾರತ ಮುಖ್ಯತಃ ಶ್ರಾವ್ಯಕಾವ್ಯವಾಗಿದ್ದರೂ ಇದರಲ್ಲಿ ದೃಶ್ಯಕಾವ್ಯ ಗುಣಗಳು ಸಾಕಷ್ಟಿವೆ. ನಾಟಕೀಯತೆ, ಸಂಭಾಷಣ ಚಾತುರಿ ಹೃದ್ಯವಾಗಿರುವುದರಿಂದಲೇ 'ಸುರಥ–ಸುಧನ್ವ', 'ಸೀತಾ ಪರಿತ್ಯಾಗ', 'ಅರ್ಜುನ–ಬಭ್ರುವಾಹನ ಕಾಳಗ', 'ಲವ–ಕುಶರ ಆಖ್ಯಾನ' ಮೊದಲಾದ ಪ್ರಸಂಗಗಳು ಅತ್ಯುತ್ತಮ ಯಕ್ಷಗಾನಗಳಾಗಿ ಅಭಿನಯಿಸಲ್ಪಟ್ಟವು. ಜೈಮಿನಿ ಭಾರತ ಸಂಧಿ ೨ ಪದ್ಯ ೨೦, ೨೧, ೩೫, ೩೭, ೩೮, ೪೦, ೪೯ ; ೪–೪೯, ೫೯ ; ೫–೪ ; ೭–೧೮, ೩೯ ; ೮–೧೨ ; ೧೨–೩೩ ; ೧೭–೫೦ ; ೧೮–೧೮ ; ೨೦–೧೯ ; ೨೩–೩೦, ೬೦ ; ೨೫–೫೪ ; ೩೩–೩, ೨೭, ೫೯ ಇಂತಹ ಅನೇಕ ಪದ್ಯಗಳಲ್ಲಿ ಅಭಿನಯಕ್ಕೆ ತಕ್ಕುದಾದ ಮಾತುಗಾರಿಕೆ ಮೆರೆಯುತ್ತದೆ.

ಈ ಕಾವ್ಯದ ಕಥಾವಸ್ತು ಅನೇಕ ಉಪಕಥಾನಕಗಳ ಬಳ್ಳಿಗಳು ಹಬ್ಬಿರುವ ಒಂದು ಹಂದರವಾಗಿದೆ. ಪ್ರತಿಯೊಂದು ಕಥಾನಕದಲ್ಲಿ ಬೇರೆಬೇರೆ ಪಾತ್ರಗಳು ನಾಯಕರಾಗಿ ತೋರುತ್ತಾರೆ. 'ಅಧಿಕಾರಿಕ' ಕಥಾಭಾಗಕ್ಕೆ ಕಥಾನಾಯಕನು ಧರ್ಮನೊ, ಅರ್ಜುನನೊ, ಕೃಷ್ಣನೊ? ಇದೊಂದು ವಿಚಾರಾರ್ಹ ಪ್ರಶ್ನೆಯಾಗಿದೆ. ಅಶ್ವಮೇಧ ಯಜ್ಞವೇ ಕಥಾಬೀಜವಾಗಿರುವದರಿಂದ ಮತ್ತು ಯುಧಿಷ್ಠಿರನು ಯಜ್ಞದೀಕ್ಷಿತನಾಗಿರುವದರಿಂದ ಯಜ್ಞಭಾಗಕ್ಕೆ ಅವನೇ ನಾಯಕನೆಂದು ಸಕೃದ್ದರ್ಶನಕ್ಕೆ ತೋರುತ್ತದೆ. ಅಶ್ವರಕ್ಷಕನಾಗಿ ಹೊರಟಿದ್ದ ಅರ್ಜುನನೇ ಯುದ್ಧಗಳಲ್ಲಿ ಪ್ರಮುಖನಾಗಿರುವದರಿಂದ ರಣಾಂಗಣದ ಭಾಗಕ್ಕೆ ಅವನು ಕಥಾನಾಯಕ. ಈ ನಾಯಕರಿಬ್ಬರೂ ಕೃಷ್ಣ ಭಕ್ತರು ಎಂಬುದು ಕಾವ್ಯದಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಇವರು ಕಿಂಕರರು. ಇವರನ್ನು ನಡೆಯಿ

ಸುವ ಹಾಗೂ ರಕ್ಷಿಸುವ ಹೊಣೆಹೊತ್ತಿರುವ ಶ್ರೀಕೃಷ್ಣನು ಇಡೀ ಕಥಾವಸ್ತುವಿನ ಬೆನ್ನೆಲುಬಾಗಿದ್ದಾನೆ. ಆದುದರಿಂದ ಅಂತರ್ಯಾಮಿ ಕೃಷ್ಣನೇ ಇಲ್ಲಿ ನಾಯಕನೆಂದು ನಿಸ್ಸಂಶಯವಾಗಿ ಹೇಳಬಹುದು. ಸಂಧಿ ೩೪ ಪದ್ಯ ೪೦ರಲ್ಲಿ ಕವಿ ಈ ಮಾತನ್ನೇ 'ಪಾಂಡವಸ್ಥಾಪನಾಚಾರ್ಯನೆನಿಸಿಕೊಂಬುದೆ ಪೆರ್ಮೆಯೆಂದು ಮನುಜೋಚಿತದ ಲೀಲೆಯಂ ತಳೆದ ಯಾದವ ಸಾರ್ವಭೌಮಂ' 'ಕೃತಿಗೆ ನಾಯಕನಾದನಮರಪುರದೊಡೆಯ ಲಕ್ಷ್ಮೀ ಕಾಂತನು' ಎಂದು ಹೇಳಿರುವನು.

ಕನ್ನಡ ಜೈಮಿನಿ ಭಾರತದಲ್ಲಿ ೩೪ ಸಂಧಿಗಳಿವೆ. ಇದರಲ್ಲಿ ನಾಟ್ಯಶಾಸ್ತ್ರದ ಪ್ರಕಾರ ಅರ್ಥಪ್ರಕೃತಿಗಳಾದ ಬೀಜ, ಬಿಂದು, ಪತಾಕಾ, ಪ್ರಕರಿ, ಕಾರ್ಯಗಳನ್ನು ಮತ್ತು ಅವಸ್ಥೆಗಳಾದ ಆರಂಭ, ಯತ್ನ, ಪ್ರಾಪ್ತ್ಯಾಶೆ, ನಿಯತಾಪ್ತಿ, ಫಲಾಗಮಗಳನ್ನು ತೋರಿಸ ಬಹುದು. ಆದುದರಿಂದಲೇ ವಸ್ತುವಿನಲ್ಲಿ ದಶರೂಪಕಕಾರನು ಹೇಳಿರುವ ಮುಖ, ಪ್ರತಿ ಮುಖ, ಗರ್ಭ, ಅವಮರ್ಶ, ಉಪಸಂಹೃತಿ (ನಿರ್ವಹಣ)[1] ಎಂಬ ಸಂಧಿಗಳನ್ನು ಮಾಡು ವದು ಸಾಧ್ಯ. ೩೪ ಸಂಧಿಗಳಲ್ಲಿ ಹಬ್ಬಿರುವ ಕಥಾವಸ್ತುವು ಈ ಐದು ಸಂಧಿಗಳಲ್ಲಿ ಈ ಕೆಳಗಿನಂತೆ ಅಳವಟ್ಟಿದೆಯೆಂದು ಕಂಡುಬರುತ್ತದೆ :

೧. ಮುಖ ಸಂಧಿ : ಆರಂಭದಿಂದ ಸಂಧಿ ೮ ಪದ್ಯ ೧೨ರ ವರೆಗೆ.
೨. ಪ್ರತಿಮುಖ ಸಂಧಿ : ೮.೧೩ ರಿಂದ ೧೬ನೆಯ ಸಂಧಿ ಪೂರ್ಣ.
೩. ಗರ್ಭ ಸಂಧಿ : ೧೭ನೆಯ ಸಂಧಿಯಿಂದ ೨೪ನೆಯ ಸಂಧಿ ಪೂರ್ಣ.
೪. ಅವಮರ್ಶ ಸಂಧಿ : ಸಂಧಿ ೨೫ ರಿಂದ ೩೨ ಪೂರ್ಣ
೫. ಉಪಸಂಹೃತಿ ಸಂಧಿ : ಕೊನೆಯ ೩೩-೩೪ನೆಯ ಎರಡು ಸಂಧಿಗಳು.

**ಮುಖಸಂಧಿ**

ಮುಖಸಂಧಿಯ ಹರವು ೪೦೦ ವಾರ್ಧಕ ಷಟ್ಪದಿಗಳು. ಅದರಲ್ಲಿ ಕಾವ್ಯಪ್ರಾರಂಭ, ಯಜ್ಞ ನಿಶ್ಚಯ, ಯಜ್ಞಾಶ್ವ ಸಂಪಾದನೆ, ವ್ಯಾಸ ಮುನಿಯ ಧರ್ಮೋಪದೇಶ, ದ್ವಾರಕೆ

---

[1] ಮುಖ : ಮುಖಂ ಬೀಜಸಮುತ್ಪತ್ತಿರ್ನಾನಾರ್ಥ ರಸಸಂಭವಾ ।
ಅಂಗಾನಿ ದ್ವಾದಶೈತಸ್ಯ ಬೀಜಾರಂಭ ಸಮನ್ವಯಾತ್ ॥೨೪॥ ಪು. ೧೯

ಪ್ರತಿಮುಖ : ಲಕ್ಷ್ಯಾಲಕ್ಷ್ಯತಯೋದ್ಭೇದಸ್ತಸ್ಯ ಪ್ರತಿಮುಖಂ ಭವೇತ್ ।
ಬಿಂದು ಪ್ರಯತ್ನಾನುಗಮಾದಂಗಾನ್ಯಸ್ಯ ತ್ರಯೋದಶ ॥೩೦॥ ಪು. ೨೮

ಗರ್ಭ : ಗರ್ಭಸ್ತು ದೃಷ್ಟನಷ್ಟಸ್ಯ ಬೀಜಾಸ್ಯಾನ್ವೇಷಣಂ ಮುಹುಃ ।
ದ್ವಾದಶಾಂಗಃ ಪತಾಕಾಸ್ಯಾನ್ನ ವಾ ಸ್ಯಾತ್ಪ್ರಾಪ್ತಿ ಸಂಭವಃ ॥೩೬॥ ಪು. ೩೭

ಅವಮರ್ಶ : ಕ್ರೋಧೇನಾವಮೃಶೇದ್ಯತ್ರ ವ್ಯಸನಾದ್ವಾ ವಿಲೋಭನಾತ್ ।
ಗರ್ಭ ನಿರ್ಭಿನ್ನ ಬೀಜಾರ್ಥಃ ಸೋಽವಮರ್ಶೋಽಂಗ ಸಂಗ್ರಹಃ ॥೪೩॥ ಪು. ೪೭

ಉಪಸಂಹೃತಿ : ಬೀಜವಂತೋ ಮುಖಾದ್ಯರ್ಥಾ ವಿಪ್ರಕೀರ್ಣಾ ಯಥಾಯಥಮ್ ।
ಐಕ್ಯಾರ್ಥಮುಪನೀಯಂತೇ ಯತ್ರ ನಿರ್ವಹಣಂ ಹಿ ತತ್ ॥೪೮॥ ಪು. ೫೯

—'ದಶರೂಪಕ' (ಅನು: ಕೆ.ವಿ. ಸುಬ್ಬಣ್ಣ)

ಯಲ್ಲಿ ಭೀಮನ ಕೃಷ್ಣ ಸಂದರ್ಶನ, ಅನುಸಾಲ್ವಾಖ್ಯಾನ—ಇವು ಒಳಗೊಂಡಿವೆ.

'ವನರುಹ ಭವಾಂಡದೊಳಗೆ........ಕನಕಾಚಲಂ ಕಣ್ಗೆಸೆದುದು'ಎಂಬ ಪದ್ಯದಿಂದ ಹಸ್ತಿನಾವತಿಯ ಭೌಗೋಲಿಕ ಸ್ಥಾನವನ್ನು ನಿರ್ದೇಶಿಸುವದರಿಂದ ಕಥಾವಸ್ತುವಿನ 'ಆರಂಭ'ವಾಗುತ್ತದೆ. ಕುರುಕ್ಷೇತ್ರದಲ್ಲಿ ಕೌರವರನ್ನು-ದ್ರೋಣ ಭೀಷ್ಮ ಕರ್ಣಾದಿಗಳನ್ನು ಸಹಿತವಾಗಿ ಸಂಹರಿಸಿ, ಧರ್ಮರಾಜನು ಹಸ್ತಿನಾವತಿಯಲ್ಲಿ ರಾಜ್ಯವನ್ನಾಳುತ್ತಿರುವನು. ಆಗ ವೇದವ್ಯಾಸರು ಅಲ್ಲಿಗೆ ಬರುವರು. ಕಳೆದುಕೊಂಡ ರಾಜ್ಯವನ್ನು ಗೆದ್ದುಕೊಂಡು ಸಕಲ ವೈಭವಗಳಿಂದ ತಮ್ಮಂದಿರೊಡನೆ ರಾಜ್ಯವಾಳುತ್ತಿದ್ದ ರಾಜನ ಮುಖದಲ್ಲಿ ಎಷ್ಟು ಸಂತೋಷವುಕ್ಕುತ್ತಿರಬೇಕು ! ಆದರೆ ಧರ್ಮರಾಜನ ಮುಖದಿರವು ತದ್ವಿಪರೀತವಾಗಿದೆ. 'ಅನಿಲಸಂಚಾರವೊಂದಿನಿತಿಲ್ಲದುರಿವ ಕಡುವೇಸಗೆಯ ಬಿಸಿಲಿಂದೆ ಬಸವಳಿದ ಕೋಮಲ ರಸಾಲದಂತೆ' ಅವನಾಗಿದ್ದಾನೆ. ಇಲ್ಲಿಯ ವರ್ಣನೆ ವ್ಯಾಸರ ಮಾತ್ರವಲ್ಲ, ಓದುಗರ ಔತ್ಸುಕ್ಯವನ್ನು ಕೆರಳಿಸುತ್ತದೆ. ಭಾರತ ಯುದ್ಧಾರಂಭದಲ್ಲಿ ಅರ್ಜುನನಂತೆ ಈಗ ರಾಜ್ಯಾರಂಭದಲ್ಲಿ ಯುಧಿಷ್ಠಿರನು ವಿಷಾದಯೋಗದಲ್ಲಿದ್ದಾನೆ. ಗುರುಬಾಂಧವರನ್ನೆಲ್ಲಾ ಹೇಗೆ ಕೊಲ್ಲಲಿ? ಎಂಬುದು ತಮ್ಮನ ಚಿಂತೆಯಾಗಿದ್ದರೆ, ಕೊಂದೆನಲ್ಲಾ ಎಂಬುದು ಅಣ್ಣನ ಚಿಂತೆ. ಕೃಷ್ಣನು ಗೀತೆಯನ್ನು ಹೇಳಿ ಅರ್ಜುನನ ವಿಷಾದವನ್ನು ಬಿಡಿಸಿದಂತೆ, ವ್ಯಾಸರೂಪಿ ಕೃಷ್ಣನು ಧರ್ಮೋಪದೇಶದಿಂದ ಧರ್ಮರಾಜನ ಖೇದವನ್ನು ಪರಿಹರಿಸಿ ರಾಜ್ಯ ವ್ಯವಹಾರದತ್ತ ಹುರಿದುಂಬಿಸುತ್ತಾನೆ. ವ್ಯಾಸ ವಚನದಂತೆ ಅಶ್ವಮೇಧಯಾಗವನ್ನು ಮಾಡಲು ಒಪ್ಪಿಕೊಂಡು, ಅದರ ಮಾಳ್ಕೆಯ ವಿವರವನ್ನೂ ಯಜ್ಞಾಶ್ವದ ಲಕ್ಷಣವನ್ನೂ ಕೇಳಿಕೊಳ್ಳುವನು. ಅಂತಹ ಮಹಾಯಾಗವನ್ನು ನಡೆಸುವದಕ್ಕೆ ತನಗಿರುವ ಕೊರತೆ ತೊಂದರೆಗಳನ್ನು ಧರ್ಮರಾಜನು ಆ ಮುನಿಯಲ್ಲಿ ಹೇಳಿಕೊಳ್ಳುವನು—ತನ್ನಲ್ಲಿ ಅಂತಹ ಉತ್ತಮ ಕುದುರೆ ಇಲ್ಲ; ಧನವಿಲ್ಲ; ಸೋದರರು ದಣಿದಿದ್ದಾರೆ ಇತ್ಯಾದಿ. ಆಗ ವ್ಯಾಸನು ಭದ್ರಾವತಿಯ ಯೌವನಾಶ್ವದಲ್ಲಿ ಅಂತಹ ಕುದುರೆ ಇದೆ ತಂದುಕೊಳ್ಳಬೇಕೆಂದೂ ಮರುತ್ತನೆಂಬುವನು ಯಜ್ಞದಲ್ಲಿ ದಾನವಾಗಿ ಕೊಟ್ಟ ಧನವನ್ನು ಹೊತ್ತೊಯ್ಯಲಾರದೆ ಹಿಮಾಲಯದಲ್ಲಿ ಚೆಲ್ಲಿಹೋಗಿರುವರೆಂದೂ ಅದನ್ನು ತರಿಸಿಕೊಳ್ಳೆಂದೂ ಹೇಳುವನು. ತದಾನುಷಂಗಿಕವಾಗಿ ಮರುತ್ತ ನೃಪತಿಯ ಕಥೆಯನ್ನು ವ್ಯಾಸನು ಬಿತ್ತರಿಸುತ್ತಾನೆ. ಭೀಮ, ವೃಷಕೇತು, ಮೇಘನಾದರು ಕುದುರೆಯನ್ನು ತರುವೆವೆಂದು ಪ್ರತಿಜ್ಞೆಗೈಯುವರು. ಯಜ್ಞಕ್ಕಾಗಿ ಯುಧಿಷ್ಠಿರನು ಕೃತನಿಶ್ಚಯನಾಗಲು ವ್ಯಾಸನು ಹೊರಟುಹೋಗುವನು. ತರುವಾಯ ಈ ಮಹಾಕಾರ್ಯದ ನಿರ್ವಹಣೆ ಕೃಷ್ಣನಿಲ್ಲದೆ ಆಗದ ಮಾತೆಂದು ಧರ್ಮಜನು ನೆನೆಯುತ್ತಿರುವಾಗಲೇ ಶ್ರೀಕೃಷ್ಣನ ಆಗಮನವಾಗುವದು. ಧರ್ಮರಾಯ, ಭೀಮಸೇನರೊಡನೆ ಕೊಂಚ ವಿನೋದದ ಮಾತುಕತೆಯಾದ ಬಳಿಕ ಕೃಷ್ಣನು 'ಈ ವಾಜಿಮೇಧವೇನಚ್ಚರಿಯೆ ಕೈಕೊಳಾವಿರ್ದು ನಡಸುವೆನೆಂದನು.' ಇಲ್ಲಿಗೆ ಲಕ್ಷ್ಮೀಶನ ಜೈಮಿನಿ ಭಾರತದ ಎರಡನೆಯ ಸಂಧಿ ಮುಗಿಯುತ್ತದೆ.

೩ ಮತ್ತು ೪ ನೆಯ ಸಂಧಿಗಳು ಯೌವನಾಶ್ವನ ಕಥೆಗೆ ಮೀಸಲು. ಭದ್ರಾವತಿಗೆ

ಭೀಮ, ವೃಷಕೇತು, ಮೇಘವರ್ಣರ ಪಯಣ, ಮೇಘವರ್ಣ ಕುದುರೆಯನ್ನು ಹಿಡಿಯು ವದು, ವೃಷಕೇತು–ಯೌವನಾಶ್ವರಲ್ಲಿ ಕದನ, ವೃಷಕೇತುವಿನ ಸುಸಂಸ್ಕೃತ ಸೌಹಾರ್ದತೆ ಯಿಂದ ಯೌವನಾಶ್ವನ ಮಾನಸಿಕ ಸೋಲು, ಪಾಂಡವರೊಡನೆ ಮೈತ್ರಿ, ಆತನೊಬ್ಬ ತಮ್ಮ, ಆರನೆಯ ಸೋದರನೆಂದು ಭೀಮನಿಂದ ಮಿತ್ರತ್ವಮನ್ನಣೆ, ಕೃಷ್ಣದರ್ಶನಕ್ಕಾಗಿ ಹಸ್ತಿನಾವತಿಗೆ ತಾನು ಬರುವದಾಗಿ ಯೌವನಾಶ್ವನ ಒಪ್ಪಿಗೆ—ಈ ವಿಷಯ ಈ ಎರಡು ಸಂಧಿಗಳಲ್ಲಿ ನಿರೂಪಿತವಾಗಿದೆ.

೫ ನೆಯ ಸಂಧಿಯಲ್ಲಿ ಯೌವನಾಶ್ವನು ಕೃಷ್ಣದರ್ಶನವನ್ನು ಪಡೆಯುವನು; ಆತನ ಮಗ ಸುವೇಗನು ಯಜ್ಞಾಶ್ವವನ್ನು ಒಪ್ಪಿಸುವನು ; ಕೃಷ್ಣನು ದ್ವಾರಕೆಗೆ ತೆರಳು ವನು ; ವ್ಯಾಸನು ಮತ್ತೊಮ್ಮೆ ಬಂದು ಮರುತ್ತನ ಯಾಗ ವೃತ್ತಾಂತವನ್ನು ಹೇಳಿ, ಧರ್ಮನಿಗೆ ಧರ್ಮೋಪದೇಶವನ್ನು ಮಾಡುವನು. ಅಷ್ಟರಲ್ಲಿ ಯಾಗಾರಂಭದ ಕಾಲ ಸಮೀಪಿಸಲು ಹಿಮಾಲಯದಲ್ಲಿದ್ದ ದ್ರವ್ಯವನ್ನು ತರುವರು.

೬ ನೆಯ ಸಂಧಿಯಲ್ಲಿ ಅಶ್ವಮೇಧಕ್ಕೆ ಕೃಷ್ಣನನ್ನು ಕರೆಯುವುದಕ್ಕಾಗಿ ಭೀಮನು ದ್ವಾರಕೆಗೆ ಹೋಗುವನು. ಇಲ್ಲಿ ಕಥಾನಾಯಕನಾದ ಕೃಷ್ಣನ ಗೃಹಜೀವನವು ಶೃಂಗಾರ, ವಾತ್ಸಲ್ಯ, ಹಾಸ್ಯ ಮೊದಲಾದ ಬಣ್ಣಗಳಿಂದ ಸೊಗಸಾಗಿ ಚಿತ್ರಿತವಾಗಿದೆ. ಇಡೀ ಕಾವ್ಯ ದಲ್ಲಿ ಮತ್ತೆಲ್ಲಿಯೂ ಯಾವ ಪಾತ್ರದ ಗೃಹಜೀವನವೂ ಚಿತ್ರಿತವಾಗಿಲ್ಲ. ಇಲ್ಲಿ ಕೃಷ್ಣ–ಭೀಮರ ವಿಶಿಷ್ಟವಾದ ಸಲುಗೆಯ ಸಖ್ಯವು ವ್ಯಕ್ತವಾಗಿದೆ. ಕೊನೆಗೆ ಕೃಷ್ಣನು ಪರಿವಾರ ಸಹಿತವಾಗಿ ಹಸ್ತಿನಾವತಿಗೆ ಹೊರಡುವ ಏರ್ಪಾಟು ಮಾಡುವನು.

೭ ನೆಯ ಸಂಧಿಯಲ್ಲಿ ಹಸ್ತಿನಾವತಿಗೆ ಬಂದ ಯಾದವ ಪರಿವಾರವನ್ನು ಪಾಂಡವ ಪರಿವಾರವು ಇದಿರುಗೊಂಡು ಸ್ವಾಗತಿಸುವುದು ; ಆಗ ಹೆಣ್ಣು ಮಕ್ಕಳು ಯಜ್ಞಾಶ್ವ ವನ್ನು ಪೂಜಿಸುವರು. ಆ ಸಮಯದಲ್ಲಿ ಹಿಂದಣ ಹಗೆಯನ್ನು ನೆನೆದು ಅನುಸಾಲ್ವ ನೆಂಬುವನು ಯಜ್ಞಾಶ್ವವನ್ನು ಅಪಹರಿಸುವನು. ಇದು ಕಥಾವಸ್ತುವಿನ ನಡೆಯಲ್ಲಿ ಬಂದ ಎರಡನೆಯ ಅಡ್ಡಿ. ಇದನ್ನು ಯುದ್ಧದಿಂದ ನೀಗುವರು. ಅನುಸಾಲ್ವನು ರಾಕ್ಷಸನಾಗಿ ದ್ದರೂ ವಿರೋಧ ಭಕ್ತಿಯುಳ್ಳ ಕೃಷ್ಣ ಭಕ್ತನೇ ಆಗಿದ್ದನು ಎಂಬುದು ಈ ಪ್ರಸಂಗದಲ್ಲಿ ಬೆಳಕಿಗೆ ಬರುವುದು. ಈ ಪ್ರಸಂಗ ಮುಗಿವ ಹೊತ್ತಿಗೆ ಯಜ್ಞಾಶ್ವವನ್ನು ಬಿಡಬೇಕಾದ ಮಿತಿ–ಚೈತ್ರ ಪೌರ್ಣಿಮೆ–ಬರುತ್ತದೆ. ಧರ್ಮರಾಜನು ಅಶ್ವವನ್ನು ಪೂಜಿಸಿ, ಅದರ ಹಣೆಗೆ ತನ್ನ ಬಿರುದಾವಳಿಯ ಪಟ್ಟವನ್ನು ಕಟ್ಟಿಬಿಡುವನು. ಅದರ ಕಾಪಿಗಾಗಿ ಅರ್ಜುನ ಮೊದಲಾದ ಅನೇಕ ಪ್ರಮುಖ ವೀರರೂ ಅಪರಿಮಿತ ಸೈನ್ಯವೂ ಹೊರಡುವುದು. ಇಲ್ಲಿಗೆ ಮುಖಸಂಧಿ ಕೊನೆಗೊಳ್ಳುವುದು.

### ಪ್ರತಿಮುಖ ಸಂಧಿ

ಮುಂದೆ ಪ್ರತಿಮುಖ ಸಂಧಿ; ಇದರಲ್ಲಿ ೪೨೦ ಪದ್ಯಗಳುಂಟು. ನೀಲಧ್ವಜ, ಸುರಥ–ಸುಧನ್ವ, ಪ್ರಮೀಳೆ, ಭೀಷಣ ರಾಕ್ಷಸ ಇವರ ಆಖ್ಯಾನಗಳು ಇಲ್ಲಿ ಕಥಿತವಾಗಿವೆ.

ಅಲ್ಲದೆ ಯಜ್ಞಾಶ್ವಕ್ಕೆ ಸಂಬಂಧಿಸಿದಂತೆ ಚಂಡಿ, ಪಾರ್ವತಿಯ ತಪಸ್ಸು, ಅಕೃತವ್ರಣ ಇವರ ಪ್ರಕರಿಯ ಜಾತಿಗೆ ಸೇರಿದ ಕಥಾನಕಗಳು ಹೇಳಲ್ಪಟ್ಟಿವೆ. ಈ ಭಾಗದಲ್ಲಿ ಪಾಂಡವರ ಜನ್ನಗುದುರೆಯನ್ನು ಹೋದ ಹೋದಲ್ಲೆಲ್ಲ ಎಲ್ಲ ರಾಜರೂ ಕಟ್ಟುತ್ತಾರೆ. ಯಜ್ಞದ ಕಟ್ಟಳೆಯ ಮೇರೆಗೆ ಅವರೊಡನೆ ಯುದ್ಧವನ್ನೆಸಗಿಯೇ ಕುದುರೆಯನ್ನು ಬಿಡಿಸಿಕೊಳ್ಳುವುದು ಅರ್ಜುನನಿಗೆ ಅನಿವಾರ್ಯವಾಗುತ್ತದೆ. ಯಾವುದೊಂದು ಸಂಗ್ರಾಮ ದಲ್ಲಿ ಅಶ್ವಪಕ್ಷದವರು ಸೋತರೆ, ಅಶ್ವಮೇಧ ಯಜ್ಞವನ್ನು ಮಾಡುವುದಕ್ಕೇ ಅವರು ಅಯೋಗ್ಯರೆಂದಾಗುವರು.

ವಸಂತ ಋತುವಿನಲ್ಲಿ ಯಜ್ಞಾಶ್ವವು ಮಾಹಿಸ್ಮತೀ ಪಟ್ಟಣಕ್ಕೆ ಹೋಗುತ್ತದೆ. ಅಲ್ಲಿ ನೀಲಧ್ವಜನು ಆಳುತ್ತಿರುವನು. ಆತನ ಮಗ ಪ್ರವೀರ. ಆ ನೀಲಧ್ವಜನಿಗೆ ಅಗ್ನಿಯೇ ಮನೆಯಳಿಯನಾಗಿರುತ್ತಾನೆ. ಪ್ರವೀರನು ಕುದುರೆಯನ್ನು ಕಟ್ಟುತ್ತಾನೆ. ಪ್ರಬಲನಾಗಿದ್ದ ನೀಲಧ್ವಜನನ್ನು ಅರ್ಜುನ ಎದುರಿಸಬೇಕಾಗುತ್ತದೆ. ಯುದ್ಧದಲ್ಲಿ ಅಗ್ನಿಯ ದಾವರ ಅಸಹ್ಯವಾಗಲು, ಅರ್ಜುನನು ಅಗ್ನಿಸೂಕ್ತದಿಂದ ಸ್ತುತಿಸಿ ಅವನನ್ನು ಒಲಿಸಿಕೊಳ್ಳುತ್ತಾನೆ. ಆಗ ಕುದುರೆಯನ್ನು ಬಿಟ್ಟುಬಿಡುವಂತೆ ಅಗ್ನಿ ತನ್ನ ಮಾವನಿಗೆ ಸಲಹೆ ನೀಡುತ್ತಾನೆ. ಅದರಂತೆ ಅರ್ಜುನನಿಗೆ ತಿಳಿಸಿಯೂ ಆಗುತ್ತದೆ. ಆದರೆ ಈ ಮಾತು ನೀಲಧ್ವಜನ ಧರ್ಮಪತ್ನಿಯಾದ ಧುರಭಿಮಾನದ ಜ್ವಾಲೆಗೆ ಹಿಡಿಸದೆ ಹೋಗುತ್ತದೆ. ಅವಳು ಗಂಡನಿಗೆ ಮೂದಲಿಸಿ, ಧಟ್ಟಿಸಿ ಮಾತನಾಡಿ ಆತನನ್ನು ಆ ವಿಚಾರದಿಂದ ಪರಾವೃತ್ತನನ್ನಾಗಿ ಮಾಡುತ್ತಾಳೆ. ಪುನಃ ಯುದ್ಧವಾಗುತ್ತದೆ. ನೀಲಧ್ವಜನು ಅದರಲ್ಲಿ ಪ್ರವೀರಾದಿ ಪುತ್ರರನ್ನು ಕಳೆದುಕೊಂಡು ತಾನು ಮೂರ್ಛೆಹೊಂದುತ್ತಾನೆ. ಎಚ್ಚತ್ತ ಮೇಲೆ ಅವನು ಜ್ವಾಲೆಯನ್ನು ಬಯ್ದು, ಯಜ್ಞಾಶ್ವವನ್ನು ಅರ್ಜುನನಿಗೆ ಒಪ್ಪಿಸುತ್ತಾನೆ. ಈ ಘಟನೆಯಿಂದ ಕಿಡಿಕಿಡಿಯಾದ ಜ್ವಾಲೆ ಉನ್ಮುಖನೆಂಬ ಅಣ್ಣನ ಕಡೆಗೆ ಹೋಗುತ್ತಾಳೆ. ಅವನನ್ನು ಅರ್ಜುನನ ಮೇಲೆ ಎತ್ತಿಕಟ್ಟಲು ಹವಣಿಸುತ್ತಾಳೆ. ಅವಳ ಮಾತಿನ ಬಲೆಗೆ ಅವನು ಬೀಳುವದಿಲ್ಲ. ಅಲ್ಲಿ ಹತಾಶಳಾದ ಜ್ವಾಲೆ ಗಂಗೆಗೆ ಮನಸಿಗೆ ಹತ್ತುವಂತೆ ಏಡಿಸಿ ಮಾತನಾಡಿ, ನಿನ್ನ ಮಗನನ್ನು ಅರ್ಜುನ ಕೊಂದನೆಂದೂ, ನೀನು ಅಪುತ್ರವತಿಯಾದೆಯೆಂದೂ ಹೇಳಿ ಕೋಪವನ್ನು ಬರಿಸುವಳು. ಆಗ ಗಂಗೆ 'ಅರ್ಜುನನ ತಲೆಯನಾತನ ಸುತಂ ಕೊಚ್ಚಿ ಕೆಡಹಲಿ ತಿಂಗಳಾಱಕಾಹವದೊಳು' ಎಂದು ಶಾಪವನ್ನು ಕೊಡುವಳು. ಹೀಗೆ ತನ್ನ ಛಲವನ್ನು ತೀರಿಸಿಕೊಂಡ ಜ್ವಾಲೆ ಅಗ್ನಿ ಪ್ರವೇಶಮಾಡಿ ಮಡಿದು, ಬಾಣವಾಗಿ ಬಭ್ರುವಾಹನನ ಬತ್ತಳಿಕೆಯಲ್ಲಿ ಸೇರಿಕೊಳ್ಳುವಳು. ಈ ಶಾಪದ ಮೂಲಕ ಬಭ್ರುವಾಹನನ ಸಂದರ್ಭವೊದಗಲು ಇನ್ನೂ ಆರು ತಿಂಗಳು ಉಂಟೆಂದಾಯಿತು. ಈ ಅವಧಿಯಷ್ಟು ಕಥೆ ಬೆಳೆಯಲೇಬೇಕಲ್ಲ. ಇದು ಕಥಾವಿರಚನಾತಂತ್ರ ಚಾತುರ್ಯ.

೧೦ ನೆಯ ಸಂಧಿಯಲ್ಲಿ ಯಜ್ಞಾಶ್ವವು ವಿಂಧ್ಯಪರ್ವತಕ್ಕೆ ಬರುತ್ತದೆ. ಅಲ್ಲಿ ಒಂದು ವಿಶಾಲವಾದ ಹಾಸುಗಲ್ಲು. ಅದರ ಮೇಲೆ ಕಾಲಿಟ್ಟೊಡನೆ ಅಡಿಗಳು ಬೆಸೆದಂತೆ ಕೀಲಿಸಿ

ಮುನ್ನಡೆಯಲಾರದೆ ಅಶ್ವ ನಿಂತುಬಿಡುತ್ತದೆ. ಆಗ ಸೌಭರಿ ಮುನಿ ಚಂಡಿಯ ಕಥೆಯನ್ನು ಹೇಳಿ, ಗಂಡನ ಶಾಪದಿಂದ ಅವಳು ಈ ಬಂಡೆಯಾಗಿ ಬಿದ್ದಿರುವಳೆಂದೂ, ಕೃಷ್ಣಸ್ಮರಣೆ ಮಾಡಿ ಕುದುರೆಯನ್ನು ಮುಟ್ಟಲು ಅದರ ಬಿಡುಗಡೆ ಎಂದೂ ಚಂಡಿಯ ಶಾಪವಿಮೋಚನೆಯೆಂದೂ ತಿಳಿಸುವನು. ಆಮೇರೆಗೆ ಅರ್ಜುನನು ಕುದುರೆಯನ್ನು ಬಿಡಿಸಿಕೊಂಡು ಮುಂದುವರಿಯುವನು. ಮುಂದೆ ಕುದುರೆ ಚಂಪಕನಗರಿಗೆ ಹೋಗುವುದು.

ಚಂಪಕನಗರದ ಅರಸು—ಹಂಸಧ್ವಜನು ಅತ್ಯಂತ ನ್ಯಾಯನಿಷ್ಠುರನು. ಅವನಂತೆಯೇ ನ್ಯಾಯನಿಷ್ಠುರರೂ ಕರ್ಮಠರೂ ಆಗಿದ್ದ ಶಂಖಲಿಖಿತರೆಂಬುವರು ಆತನ ಪುರೋಹಿತರು. ದ್ವಾಪರದಲ್ಲಿ ಇವರ ಸ್ಮೃತಿಯೇ ಮುಖ್ಯವಾಗಿತ್ತು. ಹಂಸಧ್ವಜನೂ ಅವನ ಮನೆತನದವರೆಲ್ಲರೂ ಕೃಷ್ಣನಲ್ಲಿ ಭಕ್ತಿಯುಳ್ಳ ವೀರವೃತ್ತಿಯವರು. ಇಲ್ಲಿ ಯಜ್ಞಾಶ್ವಕ್ಕೆ ಮತ್ತೆ ಬಂಧನವಾಗುವದು. ಹಂಸಧ್ವಜನಿಗೆ ಕೃಷ್ಣಭಕ್ತರಾದ ಸುಧನ್ವ, ಸುರಥ, ಸುದರ್ಶನ, ಸುಮನಸ್ಸು ಎಂಬ ನಾಲ್ವರು ವೀರಪುತ್ರರು. ಇವರು ರಣರಂಗದಲ್ಲಿ ಹೇಗೋ, ಕೃಷ್ಣಭಕ್ತಿಯಲ್ಲಿಯೂ ಹಾಗೆಯೇ ಅವಿಚಲ ವೀರರು, ನಿಶ್ಚಲ ಭಕ್ತರು. ಸುಧನ್ವನನ್ನು ಯುದ್ಧಕ್ಕೆ ಬೀಳ್ಕೊಡುವ ಸನ್ನಿವೇಶದಲ್ಲಿ ಅವನ ತಾಯಿ, ತಂಗಿ, ಹೆಂಡತಿ ಇವರ ಕೃಷ್ಣಶ್ರದ್ಧೆಯೂ ವೀರಭಾವವೂ ಮನದಟ್ಟುವಂತೆ ಪ್ರಕಟವಾಗಿವೆ. ಅಸಾಮಾನ್ಯ ವೀರನೂ ಭಕ್ತನೂ ಆದ ಸುಧನ್ವನನ್ನು ಕೊಲ್ಲುವುದಕ್ಕೆ ಕೃಷ್ಣನು ತನ್ನ ಪುಣ್ಯಸರ್ವಸ್ವವನ್ನು ಸೂರೆಗೊಡುವುದಲ್ಲದೆ, ಅಲ್ಲಿ ತ್ರಿಮೂರ್ತಿಗಳ ದಿವ್ಯಶಕ್ತಿಯನ್ನೂ ಉಪಯೋಗಿಸಬೇಕಾಯಿತು. ಬಳಿಕ ಸುರಥ–ಅರ್ಜುನರಲ್ಲಿ ಅದ್ಭುತವಾದ ಯುದ್ಧವಾಗಿ ಕೊನೆಗೆ ಸುರಥನೂ ರಣಾಂಗಣದಲ್ಲಿ ಮಡಿಯುವನು. ಕೃಷ್ಣನು ಹಂಸಧ್ವಜನೆಡೆಗೆ ತಾನೇ ನಡೆದು ಹೋಗಿ, ಅವನಿಗೆ ಕ್ಷಾತ್ರ ತಾಮಸವನ್ನು ಬಿಡುವಂತೆ ಉಪದೇಶಿಸಿ, ಪ್ರೇಮಾಲಿಂಗನವನ್ನಿತ್ತು, ಧರ್ಮರಾಯನೊಡನೆ ಮೈತ್ರಿಯನ್ನು ಪ್ರಸ್ತಾಪಿಸುತ್ತಾನೆ; ಮತ್ತು ಅವನಿತ್ತ ಕಾಣಿಕೆಯ ವಸ್ತುಗಳನ್ನು ತೆಗೆದುಕೊಂಡು ಹಸ್ತಿನಾವತಿಗೆ ತೆರಳುತ್ತಾನೆ. ವಸಂತಋತು ಮುಗಿದು ಗ್ರೀಷ್ಮರ್ತುವಿನ ಆಗಮನವಾಗಲು ಯಜ್ಞಾಶ್ವವು ಪಾರಿಪ್ಲವಕ್ಕೆ ಹೋಗುವದು. ಅಲ್ಲಿ ಅದು ಹೆಣ್ಣು ಕುದುರೆಯಾಗಿ, ಬಳಿಕ ಹುಲಿಯಾಗಿ, ಕೃಷ್ಣನಾಮಸ್ಮರಣೆಯಿಂದ ಮತ್ತೆ ಮುನ್ನಿನಂತೆ ಯಜ್ಞಾಶ್ವವಾಗುತ್ತದೆ. ಇದು ಕಥಾವಸ್ತುವಿನಲ್ಲಿಯ ಅದ್ಭುತ ಘಟನೆಗಳ ಭಾಗ; ಅಘಟಿತಘಟನಾ ಸಮರ್ಥನಾಯಕನಾದ ಕೃಷ್ಣನ ಮಹಿಮೆಯನ್ನು ಅದ್ಭುತ ದೃಶ್ಯಗಳಿಂದ ಪ್ರಕಟಗೊಳಿಸುವ ಸನ್ನಿವೇಶಗಳಿಂದ ಕೂಡಿದ ಭಾಗ.

ಗ್ರೀಷ್ಮ ಋತುವಿನಲ್ಲಿಯೆ ಯಜ್ಞಾಶ್ವವು ಪ್ರಮೀಳೆಯ ರಾಜ್ಯವನ್ನು ಪ್ರವೇಶಿಸುವುದು. ಆಕೆ ಕುದುರೆಯನ್ನು ಕಟ್ಟುವಳು. ಹೆಂಗಸಿನೊಡನೆ ಹೇಗೆ ಕಾದಲಿ ಎಂಬ ಚಿಂತೆಯಲ್ಲಿ ಅರ್ಜುನ ಇರುವಷ್ಟರಲ್ಲಿ, 'ಪ್ರಮೀಳೆಯನ್ನು ಹೆಂಡತಿಯಾಗಿ ವರಿಸೆಂ'ದು ಆಕಾಶವಾಣಿಯಾಗಿ ಯುದ್ಧಪ್ರಸಂಗ ತಪ್ಪುತ್ತದೆ. ಯಾಗ ಸಮಾಪ್ತಿಯ ತರುವಾಯ ಮದುವೆ

ಯಾಗಬೇಕೆಂಬ ವಾಙ್ನಿಶ್ಚಯದೊಡನೆ ಅವರಿಬ್ಬರಲ್ಲಿ ಒಡಂಬಡಿಕೆಯಾಗುತ್ತದೆ. ಮುಂದೆ ಭೀಷಣ ರಾಕ್ಷಸನ ಪ್ರಸಂಗ. ಬಕನನ್ನು ಕೊಂದ ಭೀಮನ ತಮ್ಮನಾದ ಅರ್ಜುನನನ್ನು ಸೈನ್ಯ ಸಮೇತವಾಗಿ ಬಲಿಗೊಟ್ಟು ನರಮೇಧವನ್ನು ಮಾಡುವ ಉದ್ದೇಶದಿಂದ ಭೀಷಣನು ದಾಳಿಯಿಡುವನು. ಯುದ್ಧದಿಂದ ಜಯಿಸುವುದು ಅಸಾಧ್ಯವೆಂದೆನಿಸಲು, ಮಾಯೆಯಿಂದ ಋಷಿಯಾಗಿ ಋಷ್ಯಾಶ್ರಮವನ್ನು ಸೃಜಿಸಿ ಮೋಸದಿಂದ ಅರ್ಜುನನನ್ನು ಬಂಧಿಸಲು ಹವಣಿಸುತ್ತಾನೆ. ಆದರೆ ಅರ್ಜುನನಿಗೆ ಈ ಕೃತಕ ಗೊತ್ತಾಗಿ ಅವನನ್ನು ಹೊಡೆದು ಸೋಲಿಸುತ್ತಾನೆ. ಇಲ್ಲಿಗೆ ಪ್ರತಿಮುಖಸಂಧಿ ಮುಗಿಯುವುದು.

ಈ ಭಾಗದಲ್ಲಿ ಕಾಲದ ಮತ್ತು ನಡೆದ ಘಟನೆಗಳ ಪರಸ್ಪರ ಸಂಬಂಧವು ಎಷ್ಟು ಔಚಿತ್ಯಪೂರ್ಣವಾಗಿದೆ ಎಂಬುದನ್ನು ಕಾಣಬಹುದು. ವಸಂತ—ಗ್ರೀಷ್ಮಗಳಂತಹ ಕಟ್ಟುಗ್ರವಾದ ಬೇಸಗೆ—ಕಿಚ್ಚು ಸುರಿದಂತೆ ಬಿಸಿಲು ; ಆ ಸಮಯದಲ್ಲಿ ಅರ್ಜುನನಿಗೊದಗಿದ ಅಡ್ಡಿಗಳೂ, ಪ್ರತಿಭಟನೆಗಳೂ ಅಷ್ಟೇ ಮಹೋಗ್ರ. ನೀಲಧ್ವಜನ ಪ್ರಸಂಗದಲ್ಲಿ ಅರ್ಜುನನನ್ನು ಎದುರಿಸಿದವನು ಅವನ ಮನೆಯಳಿಯ—**ಸ್ವಾಹೆ**ಯ ಗಂಡ—ಸರ್ವಭಕ್ಷಕ ಅಗ್ನಿ ; ಅರ್ಜುನನಿಗೆ ಆರು ತಿಂಗಳಿಗೆ ಮರಣ ಸಂಭವಿಸುವಂತೆ ಮಾಡಿದವಳು, ಪ್ರಶಾಂತ ಭಾಗೀರಥಿಯನ್ನೂ ತಳಮಳಗೊಳಿಸಿದ ಅತ್ಯಂತ ಛಲದಿಂದ ಉರಿಯುವ **ಜ್ವಾಲೆ.** ಹಂಸಧ್ವಜನ ಪ್ರಸಂಗದಲ್ಲಿ ಎದುರಾದ ಸುಧನ್ವನ—ಅವನೊಡನೆ ಕಾದಿ ಸಾಕುಬೇಕಾಗಿ ಕೈ ಸೋಲುವಂತಾದ—ವೀರತ್ವದ **ತೇಜ** ; ಕೃಷ್ಣನ ಎದುರಿನಲ್ಲಿಯೇ ಪ್ರತಿಜ್ಞೆಯನ್ನು ಪೂರೈಸಿ ಅರ್ಜುನನನ್ನು ಮೂರ್ಛೆಗೀಡು ಮಾಡಿದ ಸುರಥನ ಸಾಹಸಯುಕ್ತವಾದ **ಪ್ರತಾಪ** ; ಮುಂದೆ ಪೂರ್ವ ವೈರದ ಸೇಡಿನಿಂದ ಎರಗಿದವನು ರಾಕ್ಷಸ **ಭೀಷಣ.** ಅವನ ಪ್ರಜೆಗಳೂ ಭೀಷಣ, ಅವನು ಅರ್ಜುನನನ್ನು ಬಲಿಗೊಡಲು ಹಮ್ಮಿದ ನರಮೇಧ ಮಹಾಭೀಷಣ ; ಈ ಅತ್ಯುಗ್ರ ಕಾಲವನ್ನು ಅರ್ಜುನನು ಕೃಷ್ಣನ ಕೃಪಾವಲಂಬನದಿಂದ ದಾಟುವನು. ಆದರೂ ಮುಂದಿನದು ದುರ್ದಿನ—ಮಳೆಗಾಲ. ಈಗ ಅರ್ಜುನನಿಗೆ ಮರಣ ಜಾಲವನ್ನು ಒಡ್ಡಿದ್ದ ಮಣಿಪುರಕ್ಕೆ ಕುದುರೆ ಬರುವುದು. ಕಿಚ್ಚಿನಿಂದ ಪಾರಾಗಿ ಕರ್ಮಡುವಿನಲ್ಲಿ ಧುಮ್ಮಿಕ್ಕಿದಂತೆ ! ಎರಡೂ ಪ್ರಾಣಸಂಕಟದ ಸನ್ನಿವೇಶಗಳೇ. ಬದುಕುವುದು ಭಾಗ್ಯವಿಶೇಷದಿಂದಲೇ ! ದೈವಾನುಗ್ರಹದಿಂದಲೇ !

**ಗರ್ಭಸಂಧಿ**

ಗರ್ಭಸಂಧಿ ೫೦೧ ಪದ್ಯಗಳನ್ನು (ಬಭ್ರುವಾಹನ ಕಥೆ ೨೫೩+ರಾಮಾಯಣದ ಕಥೆ ೨೪೮) ಒಳಗೊಂಡಿದೆ. ಇಲ್ಲಿ ಅಧಿಕಾರಿಕ ಕಥಾವಸ್ತುವಿಗೆ ಸಂಬಂಧಿಸಿದ ಬಭ್ರುವಾಹನ–ಅರ್ಜುನರ ಕಾಳಗವೂ, ಪತಾಕಾರೂಪವಾದ ರಾಮಾಶ್ವಮೇಧದ ಕುಶಲ ವ್ಯಾಖ್ಯಾನವೂ, ಸಂಗ್ರಹವಾಗಿ ಮಹೋಪಮೆಯಂತೆ ಬಳಸಲ್ಪಟ್ಟಿವೆ. ಅರ್ಜುನ–ಬಭ್ರುವಾಹನರ ಕಾಳಗವು ರಾಮ–ಲವಕುಶರ ಕಾಳಗದಂತೆ (ತಂದೆ ಮಕ್ಕಳಲ್ಲಿ) ಆಯಿತು ಎಂದು ಮಹೋಪಮೆಯನ್ನು ಕವಿ ಸಾಧಿಸಿದ್ದಾನೆ. ಅಲ್ಲಿ ರಾಮನಿಗೆ ಕೇಡೊದಗಿದಂತೆ

ಇಲ್ಲಿ ಅರ್ಜುನನಿಗೆ ಮೃತ್ಯು. ಇದು ದೈವದುರ್ವಿಲಾಸದ ಘಟನೆ. ರಾಮನು ವಾಲ್ಮೀಕಿಯ ಕೃಪೆಯಿಂದ ಎದ್ದ ಹಾಗೆ, ಅರ್ಜುನನು ಕೃಷ್ಣನ ಕೃಪೆಯಿಂದ ಬದುಕುವನು. ಆದರೆ ಇಲ್ಲಿ, ಪುರುಷಪ್ರಯತ್ನದ ಯೋಜನೆಯನ್ನು ಮಾಡಲಾಗಿದೆ. ಅದೇಂದರೆ, ನಾಗಲೋಕ ದಿಂದ ಸಂಜೀವಕ ಮಣಿಯನ್ನು ತರುವುದು. ಈ ಉಪಾಯಯೋಜನೆ 'ಪ್ರತ್ಯಾಶಾ' ಅವಸ್ಥೆಯ ಲಕ್ಷಣವಾಗಿದೆ. ವರ್ಷಋತುವಿನಲ್ಲಿ ಅರ್ಜುನನು ಮಣಿಪುರವನ್ನು ಪ್ರವೇಶಿ ಸುತ್ತಾನೆ. ಕುದುರೆಯನ್ನು ಕಟ್ಟಿದ ಬಭ್ರುವಾಹನನು, ತಾಯಿಯ ಮಾತಿನಂತೆ ಯುದ್ಧದ ವಿಚಾರವನ್ನು ಬಿಟ್ಟು ತಂದೆಯಾದ ಅರ್ಜುನನಿಗೆ ಕಪ್ಪಕಾಣಿಕೆಗಳನ್ನು ಅರ್ಪಿಸಲು ಬರುತ್ತಾನೆ. ಆದರೆ ಅರ್ಜುನನು ಸತ್ಯವನ್ನು ಅರಿಯದೆ, 'ಜಂಬುಕಂ ಜನಿಸುವುದೆ ಸಿಂಗ ದುದರದೊಳಕಟ' 'ಹೆಂಬೇಡಿ' 'ಕುಲಗೇಡಿ' 'ಖೂಳ' 'ಪಂದೆ' 'ಅಹಹ ನರ್ತಕಿಯಲಾ ಗಂಧರ್ವನಾಯಕನ ದುಹಿತೃವಲಾ ನಿನ್ನ ಮಾತೆ-ಚಿತ್ರಾಂಗದೆ?' ಇತ್ಯಾದಿಯಾಗಿ ಹೇಡಿ ಯೆಂದು ಹೀಯಾಳಿಸಿ ದಬ್ಬಿಬಿಡುವನು. ಇದರಿಂದ ಖತಿಗೊಂಡ ಬಭ್ರುವಾಹನನು ಯುದ್ಧಕ್ಕೆ ನಿಲ್ಲುವನು. ಯುದ್ಧದಲ್ಲಿ ಮಳೆಗಾಲದ ಧಾರಾಕಾರ ವೃಷ್ಟಿಯಂತೆ, ರಣರಂಗ ದಲ್ಲಿ ಅವ್ಯಾಹತವಾದ ಶರವರ್ಷವಾಗಿ, ಕೊನೆಗೆ ವೃಷಕೇತು ಮಡಿದ ಬಳಿಕ, ಅರ್ಜುನನ ತಲೆ, ಕಾರ್ತಿಕ ಏಕಾದಶಿ ಮಂಗಳವಾರ ಉತ್ತರಾನಕ್ಷತ್ರದಂದು ಸೂರ್ಯಾಸ್ತಸಮಯಕ್ಕೆ ನೆಲಕ್ಕುರುಳುತ್ತದೆ. ಹೀಗಾಗಿ ಈ ಶರತ್ಕಾಲವು ಚಿತ್ರಾಂಗದೆ, ಉಲೂಪಿ, ಕುಂತಿ, ದ್ರೌಪದಿ, ಧರ್ಮಾದಿಗಳಿಗೆಲ್ಲರಿಗೂ, ಸಾಕ್ಷಾತ್ ಶ್ರೀಕೃಷ್ಣನಿಗೂ, ದುರ್ದಿನವಾಗಿ ಪರಿಣ ಮಿಸಿ ಎಲ್ಲರೂ ದುಃಖಿಗಳಾಗುತ್ತಾರೆ. ಆಗ ಭೀಮನು ಕೃಷ್ಣನಿಗೆ 'ರವಿಗಂಧಕಾರವೆ? ಕೃಪಾವಲೋಕನದಿಂದ' ಅರ್ಜುನ ವೃಷಕೇತುಗಳನ್ನು ನೋಡಬೇಕೆಂದು ಎಚ್ಚರಿಸು ತ್ತಾನೆ. ಉಲೂಪಿಯ ಸೂಚನೆಯಂತೆ ಬಭ್ರುವಾಹನನು ನಾಗಲೋಕಕ್ಕೆ ದಾಳಿಯಿಟ್ಟು ಶೌರ್ಯಸಾಹಸಗಳಿಂದ ಸಂಜೀವಕದ ಮಣಿಯನ್ನು ತರುತ್ತಾನೆ. ಆದರೆ ಅಷ್ಟರಲ್ಲಿ, ಮೊದಲಿನಿಂದಲೂ ವಿಘ್ನಕಾರಿಗಳಾಗಿದ್ದ ದುರ್ಬುದ್ಧಿ-ದುಸ್ಸ್ವಭಾವ ಎಂಬ ನಾಗರು ಅರ್ಜುನನ ರುಂಡವನ್ನು ಕದ್ದೊಯ್ದು ಬಕದಾಲ್ಭ್ಯನ ಅಡವಿಯಲ್ಲಿ ಬಚ್ಚಿಟ್ಟಿರುತ್ತಾರೆ. ಅದನ್ನು ಗೊತ್ತು ಹಚ್ಚಿ ಸುದರ್ಶನವು ಆ ದುಷ್ಟರನ್ನು ಕೊಂದು ರುಂಡವನ್ನು ತರುತ್ತದೆ. ಅರ್ಜುನ ವೃಷಕೇತುಗಳ ರುಂಡಗಳನ್ನು ಅವರವರ ದೇಹಗಳಿಗೆ ಹೊಂದಿಸಿ, ಸಂಜೀವಕ ಮಣಿಯಿಂದ ಇಬ್ಬರನ್ನೂ ಕೃಷ್ಣನು ಸಪ್ರಾಣಗೊಳಿಸುತ್ತಾನೆ. ಅರ್ಜುನನ ಸಾವಿಗೆ ಗಂಗೆಯ ಶಾಪವು ಕಾರಣವೆಂದು ಎಲ್ಲರಿಗೂ ಇಲ್ಲಿ ಗೊತ್ತಾಗುತ್ತದೆ. ಇಲ್ಲಿ ಸಂಧಿ ೨೪ರಲ್ಲಿ ಸೂಚಿತನಾದ ಬಕದಾಲ್ಭ್ಯ ಮುನಿಯ ದರ್ಶನವು ಸಂಧಿ ೩೨ ರಲ್ಲಿ ಅರ್ಜುನನಿಗೆ ಆಗು ತ್ತದೆ. ಹೀಗಾಗಿ ಕಾವ್ಯವು ೩೨ ಸಂಧಿಯವರೆಗೆ ವಿಸ್ತಾರಗೊಂಡಿತು.

ಇನ್ನು ಉಪಕಥೆಯಾಗಿ ಬಂದಿರುವ ರಾಮಾಯಣವು ಕಥಾವಸ್ತುವಿನ ಐದೂ ಸಂಧ್ಯಂಗಗಳಿಂದ ಕೂಡಿದ ಒಂದು ಸ್ವತಂತ್ರವಾದ ಪೂರ್ಣಕಥೆ. ರಾಮನ ಜನನಾದಿ ಯಾಗಿ ರಾಜ್ಯಾಭಿಷೇಕದವರೆಗಿನ ರಾಮಾವತಾರ ಸಂಗತಿಯ ಸಂಕ್ಷಿಪ್ತಕಥನ, ಅವನಿಗೆ ಬಂದ ಲೋಕಾಪವಾದ, ಅದಕ್ಕಾಗಿ ಸೀತಾಪರಿತ್ಯಾಗ, ವಾಲ್ಮೀಕಿಯಾಶ್ರಮದಲ್ಲಿ ಸೀತೆ

ಅವಳಿ ಮಕ್ಕಳನ್ನು ಹೆತ್ತುದು, ಆ ಲವಕುಶರಿಗೆ ವಾಲ್ಮೀಕಿಯಿಂದ ಧನುರ್ವೇದಾದಿ ಸಕಲ ವಿದ್ಯಾಶಿಕ್ಷೆ, ಆಶ್ರಮಕ್ಕೆ ವಾಲ್ಮೀಕಿಯಿಲ್ಲದ ಕಾಲದಲ್ಲಿ ರಾಮನ ಅಶ್ವಮೇಧದ ಕುದುರೆಯ ಆಗಮನ, ಲವನು ಅದನ್ನು ಕಟ್ಟಲು ಕುಶಲವರೊಡನೆ ರಾಮನ ಯುದ್ಧ, ರಾಮನ ಸೋಲು, ವಾಲ್ಮೀಕಿಯ ಕೃಪೆಯಿಂದ ಎಲ್ಲರೊಡಗೂಡಿ ಅಯೋಧ್ಯೆಗೆ ರಾಮನ ಪ್ರಯಾಣ. ಈ ಕಥೆಗೂ ಅರ್ಜುನ ಬಭ್ರುವಾಹನ ಪ್ರಸಂಗಕ್ಕೂ ಇರುವ ಸಾಮ್ಯವನ್ನು ಕವಿ ಚೆನ್ನಾಗಿ ಎತ್ತಿ ತೋರಿದ್ದಾನೆ.

**ಅವಮರ್ಶ ಸಂಧಿ**

ಅವಮರ್ಶ ಸಂಧಿಯಲ್ಲಿ ೪೯೭ ಪದ್ಯಗಳ ಕಥಾಭಾಗವು ಸಮಾವಿಷ್ಟವಾಗಿದೆ. ರತ್ನಪುರದ ತಾಮ್ರಧ್ವಜ, ಮಯೂರಧ್ವಜ; ಸೌರಾಷ್ಟ್ರ ಸಾರಸ್ವತಪುರದ ವೀರವರ್ಮ; ಕುಂತಳದ ಭಕ್ತಶ್ರೇಷ್ಠ ಚಂದ್ರಹಾಸ; ಋಷಿಶ್ರೇಷ್ಠ ಬಕದಾಲ್ಭ್ಯ, ಸಿಂಧುದೇಶದ ದುಶ್ಶಳೆ ಇವರ ಕಥೆಗಳು ಪ್ರಾಸಂಗಿಕವಾಗಿ ಪ್ರಕರಿಯಂತೆ ಬರುತ್ತವೆ. ಈ ಸಂಧಿಯಲ್ಲಿ ಅರ್ಜುನನಿಗೆ ಅಪಾಯವಿಲ್ಲ; ಅಭಯಪ್ರದನಾದ ಕೃಷ್ಣನೇ ಅವನ ಜೊತೆಯಲ್ಲಿರುವನು. ಮಾರ್ಗದಲ್ಲಿ ಎದುರಾಗುವ ರಾಜರು ಬಲಿಷ್ಠರಾಗಿದ್ದರೂ ನಿಸ್ಸೀಮ ಕೃಷ್ಣಭಕ್ತರಾಗಿದ್ದುದರಿಂದ ಸಮರ ಪ್ರಸಂಗವಿರುವುದಿಲ್ಲ.

ಮಯೂರಧ್ವಜ: ಅಶ್ವರಕ್ಷೆಗೆ ಕೃಷ್ಣ ಸಹಿತನಾಗಿ ಅರ್ಜುನನು ಬಂದಿರಲು, ತನ್ನ ಮಗನು ಅವನ ಕುದುರೆಯನ್ನು ಕಟ್ಟಿದನೆಂಬುದು ತಿಳಿದಾಗ ಮಯೂರಧ್ವಜ ಎನ್ನುತ್ತಾನೆ:

> 'ಆಕಟ! ಕಿಡಿಸಿದನಲಾ ಕಾರ್ಯಮಂ; ನಮಗಿದೇ
> ತಕೆ ಯಜ್ಞಮಿನ್ನು? ನಮಗೀ ಮಗಂ ಪಗೆಯಲ್ತೆ?
> ಸ್ವಕರಸ್ಥನಾದ ಹರಿಯಂ ಬಿಟ್ಟು ಕಟ್ಟಿದಂ ಗರ್ದಭಾಕೃತಿಯ ಹರಿಯ॥'

'ಕೃಷ್ಣನನ್ನು ವಶಮಾಡಿಕೊಳ್ಳಬೇಕಲ್ಲದೆ ಕತ್ತೆಯಂತಹ ಯಜ್ಞಾಶ್ವವನ್ನು ಕಟ್ಟಿಕೊಂಡರೆ ಆಗುವದೇನು?' ಎಂದು ಮಗನನ್ನು ಬಯ್ಯುತ್ತಾನೆ. ಕೃಷ್ಣಸಾನ್ನಿಧ್ಯವಿರುವಾಗ ಕುದುರೆಯನ್ನು ಕಟ್ಟುವದು, ಕಾದುವುದು, ಮೊದಲಾದ ಕ್ಷಾತ್ರಧರ್ಮವು ತಾಮಸವೇ; ಯಜ್ಞಸ್ವರೂಪನಾದ ಕೃಷ್ಣನು ದೊರೆಕೊಂಡ ಮೇಲೆ ತಾನು ಯಜ್ಞಮಾಡುವುದೂ ತಾಮಸವೇ, ಎಂಬುದು ಮಯೂರಧ್ವಜನ ಭಕ್ತಿಯ ನಿಲವು. ಇವನ ಭಕ್ತಿ ಕೇವಲ ವಾಚಿತವಲ್ಲ, ಹಾರ್ದಿಕವೆಂಬುದನ್ನು ಕೃಷ್ಣನು ಒರೆಗೆ ಹಚ್ಚಿ ಅರ್ಜುನನಿಗೆ ತೋರಿಸುತ್ತಾನೆ. ಕೃಷ್ಣನು ವೃದ್ಧ ಬ್ರಾಹ್ಮಣನ ವೇಷದಿಂದ ಬಂದು, ಅವನ ದೇಹದ ದಕ್ಷಿಣಾರ್ಧವನ್ನು ಬೇಡಲು ಸಂತೋಷದಿಂದ ಕೊರೆದು ಕೊಡುತ್ತಾನೆ. ಆಗ ದೇಹದ ವಾಮಾರ್ಧವು ಪರಾರ್ಥಕ್ಕಾಗಿ, ಪರಮಾರ್ಥಕ್ಕಾಗಿ, ಪರಮಾತ್ಮಾರ್ಥವಾಗಿ ವಿನಿಯೋಗವಾಗದೆ ವ್ಯರ್ಥವಾಗುತ್ತಿದೆಯಲ್ಲಾ ಎಂದು ಅವನ ಎಡಗಣ್ಣು ಕಂಬನಿಗರೆಯುತ್ತದೆ. ಇಲ್ಲಿ ಮಯೂರಧ್ವಜನ ಅನುಪಮ ಭಕ್ತಿಯ ಪರಾಕಾಷ್ಠೆ ವ್ಯಕ್ತವಾಗಿದೆ.

ವೀರವರ್ಮ: ಕೃಷ್ಣದರುಶನವಾಗುವವರೆಗೂ ತನಗೆ ಸಾವು ಬಾರದಿರಲಿ ಎಂದು

ಅಂತಕನಿಂದ ವರವನ್ನು ಪಡೆದವನೀತ. ಆಮೇಲೆ ಸತ್ತರೂ ಸರಿಯೆ ! ಆದರೆ ಅರ್ಜುನ ನೊಡನೆ ಉಂಟಾದ ಯುದ್ಧ ಪ್ರಸಂಗದಲ್ಲಿ ವೀರನಾದ ಇವನು ಕೃಷ್ಣಾರ್ಜುನರಿಬ್ಬರನ್ನೂ ತೋಳ್ತೆಕ್ಕೆಯಲ್ಲಿ ಹಿಡಿದಾಗ ಕೃಷ್ಣನು ಎದೆಗೆ ಒದೆಯುತ್ತಾನೆ. ಆಗ ವೀರವರ್ಮನಿಗಾದ ಆನಂದಕ್ಕೆ ಪಾರವಿಲ್ಲ.

'ಮುರಹರನ ದರ್ಶನಂ ದೊರೆಕೊಳ್ವಿನಂ ತನಗೆ
ಮರಣವಿಲ್ಲಂತಕನ ವರದಿಂದೆ ಬಳಿಕೀಗ
ಪುರುಷೋತ್ತಮನ ಪದಸ್ಪರ್ಶನಾಯ್ತೆನಗಿನ್ನು ಮೃತ್ಯುವೆತ್ತಣದು?' ೨೭.೪೯

ಎನ್ನುತ್ತಾನೆ ಅವನು. ಕೃಷ್ಣ ಒದೆದುದರಿಂದ ಅವನು ಅಮರನಾಗಿ ಅವನ ಜನ್ಮ ಸಾರ್ಥಕವಾಗಿದೆಯಂತೆ!

ಚಂದ್ರಹಾಸ : ಬಾಲ್ಯದಿಂದಲೂ ಶಾಲಿಗ್ರಾಮದ ಮಹಿಮೆಯಿಂದ ಸಕಲ ಕಂಟಕ ಗಳನ್ನು ನೀಗಿ ಬೆಳೆದು, ಕೃಷ್ಣಭಕ್ತಿಯಲ್ಲಿಯೇ ಮುಪ್ಪಾದ ಜೀವ ಇದು. ಇವನ ಕಥೆ ಯನ್ನು ಕವಿ ಸಕಲ ವಿವರಗಳೊಡನೆ ವಿಸ್ತರಿಸಿದ್ದಾನೆ. ಈ ಮಹಾಭಕ್ತನಿಗೆ 'ಸಿಕ್ಕಿದೊಡೆ ಕೃಷ್ಣದರ್ಶನದ ಪುಣ್ಯವೆ ಸಾಕು', ಇತರ ಪುಣ್ಯಗಳೆಲ್ಲಾ ಕಃಪದಾರ್ಥ.

ಬಕದಾಲ್ಭ್ಯ : ನಶ್ವರವಾದ ಪ್ರಪಂಚವನ್ನು ತೊರೆದು, ಸಮುದ್ರಮಧ್ಯದಲ್ಲಿ ತರಗೆಲೆಯನ್ನು ಕೊಡೆವಿಡಿದು ನಿಂತು, ತಪಸ್ಸು ಮಾಡುತ್ತಾ ಅನೇಕ ಕಲ್ಪಗಳನ್ನು ಕಳೆ ದವನು. ಪರಮಾತ್ಮಸ್ವರೂಪನಾದ ಕೃಷ್ಣನೇ ಇವನ ತಪಸ್ಸಿನ ಗುರಿಯಾಗಿದ್ದನೆಂಬು ದನ್ನು ಇಲ್ಲಿ ತಿಳಿಯುತ್ತೇವೆ. ಇಷ್ಟು ಕಾಲ ತಪವನ್ನಾಚರಿಸಿದ ತರುವಾಯ ಕೃಷ್ಣನನ್ನು ಸಮಕ್ಷದಲ್ಲಿ ಕಂಡು ಕೃತಕೃತ್ಯನಾದಂತೆ ತಪವನ್ನು ಮುಗಿಸುತ್ತಾನೆ. 'ಸದಾವಾಸಕೆ ಈ ಹರಿಯ ದೇಹವಿಮಿದು ಗೇಹವೆನಗೆ' ಎಂದು ಕೃಷ್ಣನೊಡನೆ ಹಸ್ತಿನಾವತಿಗೆ ತೆರಳುತ್ತಾನೆ.

ದುಶ್ಶಳೆ : ಈ ಭಕ್ತೆ 'ನಿನ್ನ ಕಲ್ಯಾಣ ಮೂರ್ತಿಯ ದರ್ಶನದೊಳಾಂ ಕೃತಾರ್ಥೆ ಯಲ್ಲವೆ?' ಎಂದು ಆನಂದದಿಂದ ಶರಣೆನ್ನುತ್ತಾಳೆ.

ಹೀಗೆ ಇಲ್ಲಿಯ ಪ್ರತಿಯೊಂದು ಪಾತ್ರವೂ ಕೃಷ್ಣದರ್ಶನಕ್ಕಾಗಿ ಕಾತರಗೊಂಡಿರುವ ಜೀವಿಯಾಗಿರುವುದರಿಂದ ಯಜ್ಞಾಶ್ವಕ್ಕೆ ನಿಮಿತ್ತಮಾತ್ರ ಬಂಧನ ಮತ್ತು ತೊಂದರೆ. ಅರ್ಜುನನಿಗಂತೂ ಅಪಾಯವಿಲ್ಲ. ಹೀಗಾಗಿ ಧರ್ಮನಿಗೆ ಅಶ್ವಮೇಧದ ಫಲಪುಣ್ಯಪ್ರಾಪ್ತಿ ನಿಶ್ಚಿತವಾಗುತ್ತದೆ. ಈ ಭಾಗದಲ್ಲಿ ಪ್ರತಿಯೊಂದು ಕಥೆಯೂ ಕಥಾತಂತ್ರದ ದೃಷ್ಟಿಯಿಂದ ಪರಿಪೂರ್ಣವಾಗಿದೆಯೆಂದು ಎನಿಸದೆ ಇರದು.

ಇನ್ನು ಕೊನೆಯದಾಗಿ ನಿರ್ವಹಣ (ಉಪಸಂಹೃತಿ) ಸಂಧಿಯಲ್ಲಿ ೧೧೨ ಪದ್ಯಗಳ ಸಣ್ಣ ಕಥಾಭಾಗವು ಬರುತ್ತದೆ. ಇಲ್ಲಿ ಯಜ್ಞಾಶ್ವದ ಪರಿಭ್ರಮಣವು ಕೊನೆಗೊಂಡುದ ರಿಂದ ಧರ್ಮನ ಯಜ್ಞಕಾರ್ಯ ಪರಿಸಮಾಪ್ತಿಯನ್ನೈದುವುದು. ಇದರ ಫಲವಾದ ಪುಣ್ಯವನ್ನು ಧರ್ಮನು ಕೃಷ್ಣಾರ್ಪಣ ಮಾಡುತ್ತಾನೆ. ಈ ಭಾಗದಲ್ಲಿ ಕೃಷ್ಣನು ಯಜ್ಞಾಶ್ವದ ಸಂಚಾರವೃತ್ತಾಂತವನ್ನು ಸಂಗ್ರಹವಾಗಿ ಧರ್ಮನಿಗೆ ಹೇಳುತ್ತಾನೆ. ಬಳಿಕ ಯಜ್ಞಸಿದ್ಧತೆಯಾಗಿ ಯಜ್ಞವು ಸಾಂಗವಾಗಿ ನೆರವೇರುತ್ತದೆ. ಕೊನೆಯ ಆರು

ಪದ್ಯಗಳನ್ನು ಕಾವ್ಯಸಮಾಪ್ತಿಯನ್ನು ಹೇಳುವುದಕ್ಕಾಗಿಟ್ಟುಕೊಂಡು, ಕೊನೆಯ ಪದ್ಯದಲ್ಲಿ 'ಪುಣ್ಯಮಿದು ಕೃಷ್ಣ ಚರಿತಾಮೃತಂ' ಎಂದು ಕವಿಯೇ ಹೇಳಿ, ಈ ಕಾವ್ಯದ ಕಥಾನಾಯಕನು ಕೃಷ್ಣ ಎಂಬ ಮಾತನ್ನು ದೃಢಪಡಿಸಿದ್ದಾನೆ.

ಹೀಗೆ ಅನೇಕ ಕಥಾವಸ್ತುಗಳಿಂದ ಕೂಡಿದ ವರ್ಣರಂಜಿತ ಇಂದ್ರಧನುಸ್ಸವು ಅಧಿಕಾರಿಕ ವಸ್ತುವಿನಲ್ಲಿ ಮೂಡಿದೆ. ಏಳು ಬಣ್ಣಗಳುಳ್ಳ ತಟ್ಟೆ ಭರದಿಂದ ತಿರುಗಲಾಗಿ ೭ ಬಣ್ಣಗಳು ಅಡಗಿ ಒಂದೇ ಒಂದು ಬಿಳಿಯ ಬಣ್ಣವಾಗಿ ಕಾಣುತ್ತದೆ; ತಿರುಗುವಿಕೆ ನಿಂತಾಗ ಏಳು ಬಣ್ಣಗಳು ಪ್ರತ್ಯೇಕವಾಗಿ ಕಾಣುತ್ತವೆ ಎಂಬುದು ಪ್ರಯೋಗಸಿದ್ಧ. ಹಾಗೆ ಇಲ್ಲಿ ಅನೇಕ ರಾಜರ ಹಾಗೂ ಇತರರ ಪವಿತ್ರ ಚಾರಿತ್ರ್ಯ ವೈವಿಧ್ಯವು ಕೃಷ್ಣ ಚರಿತದಲ್ಲಿ ಅಡಕವಾಗಿದೆ. ಯಜ್ಞಾಶ್ವದ ಪರಿಭ್ರಮಣದಲ್ಲಿ ಕಂಡುಬರುವುದು ಕೃಷ್ಣ ಚಾರಿತ್ರ. ಪ್ರತಿಯೊಂದು ಕಥೆಯನ್ನು ಪ್ರತ್ಯೇಕವಾಗಿ ನೋಡಿದಾಗ ನೀಲಧ್ವಜನಿಂದ ಬಕದಾಲ್ಭ್ಯನವರೆಗೆ ಎಲ್ಲರೂ ಸ್ವಯಂ ಪ್ರಕಾಶವುಳ್ಳ ವೀರಾಗ್ರಣಿಗಳೂ, ಭಾಗವತಾಗ್ರಣಿಗಳೂ ಆಗಿದ್ದಾರೆ.

ಕಥಾವಸ್ತುವಿಗಿಂತ ವಿರಚನೆಗೆ ಪ್ರಾಧಾನ್ಯವೆಂದು ಹೇಳುತ್ತಾರೆ. ಇಲ್ಲಿ ಕತೆಗಾರನಾದ ಲಕ್ಷ್ಮೀಶನ ತಂತ್ರಕೌಶಲ ಯಾವುದೆಂಬುದನ್ನು ನೋಡೋಣ. ಯಜ್ಞಾಶ್ವ ಪರಿಭ್ರಮಣ ಒಂದು ನಿಮಿತ್ತಮಾತ್ರ. ಇದರಿಂದ ಅನೇಕ ಭಗವದ್ಭಕ್ತರ ಚರಿತ್ರಗಳು ಬೆಳಕಿಗೆ ಬಂದಿವೆ. ಅಶ್ವವನ್ನು ಕ್ಷಾತ್ರ ಅಹಂಕಾರದ ಪ್ರತೀಕವಾಗಿ ಇಲ್ಲಿ ಬಳಸಲಾಗಿದೆ. ಈ ಅಹಂಕಾರವೇ ಪಾಂಡವರನ್ನು ಯಜ್ಞಕ್ಕೆ ಪ್ರೇರಿಸಿ, ನಾಡನ್ನು ತಿರುಗಲು ಕುದುರೆಯನ್ನು ಬಿಡಿಸುತ್ತದೆ. ಪ್ರತಿಯೊಬ್ಬ ರಾಜನು ಈ ಅಹಂಕಾರದಿಂದಲೇ ಅದನ್ನು ಕಟ್ಟುತ್ತಾನೆ. ಕೃಷ್ಣನು ಅರ್ಜುನಸಹಿತವಾಗಿ ಎಲ್ಲರ ಅಹಂಕಾರದ ಮೇಲೂ ಏಟು ಹಾಕುತ್ತಾನೆ. ಅಹಂಕಾರವು ನಷ್ಟವಾದೊಡನೆ ಎಲ್ಲರೂ ಪೂರ್ಣಚಂದ್ರ—ಭಕ್ತಶ್ರೇಷ್ಠರೇ ಎಂಬುದು ನಮಗೆ ಸ್ಪಷ್ಟವಾಗುತ್ತದೆ.

ರಾಜರೆಲ್ಲರೂ ರಾಜಸ, ತಾಮಸ ಪ್ರಕೃತಿಯವರು. ಹೀಗಿದ್ದರೂ ಕೂಡ ಕೃಷ್ಣಭಕ್ತಿ ಎಂಬ ಸಾತ್ವಿಕ ಗುಣದ ಮೊಳಕೆ ಅವರಲ್ಲಿತ್ತು. ಆ ಅಂಕುರ ಬೆಳೆಯುವುದಕ್ಕೆ ಈ ಯಜ್ಞಾಶ್ವದ ಪರಿಭ್ರಮಣ, ಕೃಷ್ಣದರ್ಶನ ಪೋಷಕವಾಗುತ್ತದೆ. ದೈವಯೋಗದಿಂದಲೋ, ಕ್ಷಾತ್ರಧರ್ಮದ ನಿಯಮದಿಂದಲೋ ರಾಜರು ಕುದುರೆಯನ್ನು ಕಟ್ಟುತ್ತಾರೇನೋ ನಿಜ. ಆದರೆ, ಕೊನೆಯಲ್ಲಿ ಪೌರುಷಕ್ಕಿಂತ ಮಿಗಿಲಾದ ದೇವಶಕ್ತಿ ಎಂಬುದು ಇದೆ ಎಂಬುದನ್ನು ಪ್ರತಿಯೊಬ್ಬನೂ ಅರಿತುಕೊಳ್ಳುತ್ತಾನೆ. ಯಜ್ಞಾಶ್ವ ಪರಿಭ್ರಮಣ ತಂತ್ರದ ಮೂಲಕ ಅನೇಕ ವೀರ ಭಕ್ತಶ್ರೇಷ್ಠರ ಚರಿತ್ರಚಿತ್ರಗಳನ್ನು ಬಹು ಸೊಗಸಾಗಿ ಕಣ್ಣಮುಂದೆ ನಿಲ್ಲಿಸುತ್ತಾನೆ ಕಥನ ಕುಶಲ ಲಕ್ಷ್ಮೀಶ.

ಇಡೀ ಕಥಾವಸ್ತುವಿನ ವ್ಯಾಪ್ತಿಯು, ಕಾಲದ ತಾಲಗತಿಗೆ ಅನುಗುಣವಾಗಿದೆ. ಬೇಸಗೆಯ ಉಗ್ರಕಾಲದಲ್ಲಿ, ಜ್ವಾಲೆ, ಅಗ್ನಿ, ಸುರಥ, ಸುಧನ್ವ, ಪ್ರಮೀಳೆ, ಭೀಷಣರ ಉಗ್ರಕಥಾನಕವಿದ್ದರೆ, ಮಳೆಗಾಲದಲ್ಲಿ ಅರ್ಜುನನ ಮರಣಪ್ರಾಪ್ತಿಯ ದುರ್ದಿನ,

ಮಯೂರಧ್ವಜನ ಅರ್ಧಶರೀರಾರ್ಪಣದ ದುರ್ದಿನ, ಯಮನು ಅಳಿಯನಾಗುವ ವೀರವರ್ಮನ ಕಥಾನಕಗಳಿಂದ ಕೂಡಿದೆ. ಚಳಿಗಾಲದಲ್ಲಿ ಚಂದ್ರಹಾಸ, ಬಕದಾಲ್ಭ್ಯ, ದುಶ್ಶಳೆಯರ ಭೆಟ್ಟಿಯಾಗುತ್ತದೆ.

ಜೈಮಿನಿ ಭಾರತದ ಕಥಾವಸ್ತು ಸ್ವರ್ಗ, ಮರ್ತ್ಯ, ಪಾತಾಳ ಎಂಬ ಮೂರೂ ಲೋಕಗಳಿಗೆ ಹಬ್ಬಿರುವುದು—ಗಂಗೆಯಂತೆ ತ್ರಿಪಥಗಾಮಿಯಾಗಿ ಕಂಗೊಳಿಸುವುದು. ಸ್ವರ್ಗಲೋಕದ ಇಂದ್ರಾದಿ ದೇವತೆಗಳ ವಿಷಯವನ್ನೂ, ಭೂಲೋಕದ ಅನೇಕ ರಾಜ ಮಹಾರಾಜರ, ರಾಕ್ಷಸರ, ಸಾಮಾನ್ಯಜನಗಳ ಪರಿಚಯವನ್ನೂ, ಪಾತಾಳದ ನಾಗೇಶನ ಆಸ್ಥಾನದ ಆಗುಹೋಗುಗಳನ್ನೂ ಈ ಕಥಾನಕವು ನಮಗೆ ತಿಳಿಸುತ್ತದೆ.

ತ್ರಿಲೋಕ ಸುಂದರಿ ಮತ್ತು ತ್ರಿಪಥಗಾಮಿನಿಯಂತಿರುವ ಜೈಮಿನಿ ಭಾರತದ ಕಾವ್ಯಶರೀರವು ಅನೇಕ ಮನೋರಂಜಕ ಕಥಾನಕಗಳಿಂದ ಅಲಂಕೃತವಾಗಿದೆ. ಈ ಕಾವ್ಯದ ಕಥಾವಸ್ತು = ಇತಿವೃತ್ತ= ಶರೀರವು ಯಜ್ಞವಾಗಿದೆ. ಇಲ್ಲಿ ಬರುವ ಬೇರೆ ಬೇರೆ ಕಥಾನಕಗಳು, ಅನೇಕ ವೀರರನ್ನು, ಭಕ್ತರನ್ನು ಮತ್ತು ಋಷಿಗಳನ್ನು ಸಂಗ್ರಹಿಸಿ ವೈಭವಯುಕ್ತವಾದ ಯಜ್ಞಸಮಾಪ್ತಿಗೆ ಕಾರಣವಾಗುತ್ತವೆ. ಆದುದರಿಂದ ಈ ಎಲ್ಲ ಕಥಾನಕಗಳು ಮೂಲಕಥಾವಸ್ತುವಿಗೆ ಪೋಷಕವಾಗಿವೆಯೆ ಹೊರತು ಅಡ್ಡಿ ಆತಂಕಗಳಾಗಿಲ್ಲ. ಇನ್ನುಮುಂದೆ ಪ್ರತಿಯೊಂದು ಸಂಧಿಯ ವಿವರವಾದ ಅಭ್ಯಾಸವನ್ನುಮಾಡೋಣ.

### ಮುಖಸಂಧಿ (ಶ್ರೀ ಕೃಷ್ಣಶ್ರದ್ಧೆ)

ಆದಿಯಲ್ಲಿ ದೇವತಾಪ್ರಾರ್ಥನೆ, ಸುಜನರಲ್ಲಿ ಬಿನ್ನಹ, ಅರಸಿಕರ ನಿಂದೆ, ಪೂರ್ವ ಸತ್ಕವಿಗಳಿಗೆ ನಮನ ಮಾಡಿ, ಕಾವ್ಯಕಥನದ ಸಂಕಲ್ಪವನ್ನು ಹೇಳಿ ಪೀಠಿಕಾ ಸಂಧಿಯನ್ನು ಮುಗಿಸಿ, ಬ್ರಹ್ಮಾಂಡದಲ್ಲಿ ಐವತ್ತುಕೋಟಿ ಯೋಜನ ವಿಸ್ತೀರ್ಣದ ಇಳೆ, ಅದಕ್ಕೆ ಸಪ್ತಶರನಿಧಿಗಳ ಅನುವೇಷ್ಟನ, ಅದರ ಮಧ್ಯದಲ್ಲಿ ಜಂಬೂದ್ವೀಪ, ಅದರ ನಡುವೆ ಕಣ್ಗೆಸೆವ ಕನಕಾಚಲ, ಆ ಕನಕಗಿರಿಯ ತೆಂಕಣ ದಿಶೆಯಲ್ಲಿ ಹಸ್ತಿನಾವತಿ–ಎಂಬ ಭೌಗೋಲಿಕ ಸ್ಥಾನ ವಿವರಣೆಯೊಂದಿಗೆ ಕಥೆಯನ್ನು ಕವಿ ಆರಂಭಿಸುತ್ತಾನೆ. ಪ್ರಸ್ತುತ ಅಶ್ವಮೇಧಯಾಗವನ್ನಾಚರಿಸಿದ ಪಾಂಡವರ ರಾಜಧಾನಿಯದು. ಈಗಿನ ದಿಲ್ಲಿಯ ಈಶಾನ್ಯ ದಿಕ್ಕಿನಲ್ಲಿ ೫೭ ಮೈಲುಗಳ ದೂರದಲ್ಲಿ ಗಂಗಾನದಿಯ ಶಾಖೆಯೊಂದರ ದಡದಲ್ಲಿ ಹಸ್ತಿನಾವತಿ ಇದೆ. ಇಂದಿನ ದಿಲ್ಲಿಯೆಂದರೆ ದೇವಬಡಗಿಯಾದ ವಿಶ್ವಕರ್ಮನು ನಿರ್ಮಿಸಿದ ಇಂದ್ರಪ್ರಸ್ಥವೆಂದು ರಾ. ನ. ಮುಳಗಿಯವರು ಹೇಳಿದ್ದಾರೆ.[1] 'Hastinapura–the Capital of Kuru's north-east of Delhi entirely diluviated by the Ganges. It was situated 22 miles north-east of Mirat and south-west of Bijnor on the right bank of the Ganges'[2] ಎಂದೂ ನಂದುಲಾಲ ಡೇ ಅವರ ಅಭಿಪ್ರಾಯವಿದೆ.

---

[1] 'ಅಶ್ವಪಥ', ರಾ. ನ. ಮುಳಗಿ, ಪುಟ ೧.

[2] *The Geographical Dictionary of Ancient and Mediaeval, India*—Nandolal Day, p. 74.

[ಅನು: ದಿಲ್ಲಿಯ ಈಶಾನ್ಯಕ್ಕಿರುವ, ಕೌರವರ ರಾಜಧಾನಿಯಾದ, ಹಸ್ತಿನಾಪುರವು ಗಂಗಾನದಿಯ ಪ್ರಲಯದ ಮೂಲಕ ಪೂರ್ಣವಾಗಿ ಬದಲಾಗಿದೆ. ಅದು ಮೊದಲು ಗಂಗಾನದಿಯ ಬಲದಂಡೆಯ ಮೇಲೆ, ಮಿರತದ ಈಶಾನ್ಯಕ್ಕೆ ೨೨ ಮೈಲುಗಳ ಮೇಲೆ ಮತ್ತು ಬಿಜನೂರದ ನೈಋತ್ಯ ದಿಕ್ಕಿಗೆ ಇತ್ತು.]

ಕೌರವರನ್ನು ಕೊಂದು ಪಾಂಡವರು ಹಸ್ತಿನಾವತಿಯಲ್ಲಿ ರಾಜ್ಯವಾಳುತ್ತಿದ್ದರೂ ಧರ್ಮರಾಜನ ಮನಸ್ಸಿಗೆ ನೆಮ್ಮದಿಯಿಲ್ಲ. ಗೋತ್ರಹತ್ಯಾಪಾತಕ ತಮ್ಮನ್ನು ಆವರಿಸಿದೆಯೆಂದು ವಿಷಣ್ಣನಾಗಿದ್ದಾನೆ. ಆಗ ವ್ಯಾಸರು ಬಂದು, ಈ ದೋಷ ಅಶ್ವಮೇಧಯಾಗದಿಂದ ಪರಿಹಾರವಾಗುವುದೆಂದು ಹೇಳಿ, ಅದರ ವಿಧಿವಿಧಾನಗಳನ್ನು ವಿವರಿಸುತ್ತಾರೆ. ಅದಕ್ಕೆ ಧರ್ಮರಾಜನು ಮನಸ್ಸಿಲ್ಲದ ಮನಸ್ಸಿನಿಂದ ಒಪ್ಪುತ್ತಾನೆ. ಭೀಮ, ವೃಷಕೇತು, ಮೇಘನಾದರು ಅಶ್ವವನ್ನು ತರುವಂತೆ ಪ್ರತಿಜ್ಞೆ ಮಾಡಿದಾಗ, ಯಜ್ಞಕ್ಕೆ ಬೇಕಾಗುವ ಧನವನ್ನು ವ್ಯಾಸರು ತೋರಿಸಿದಾಗ, ಯಜ್ಞಾಧಿಪತಿಯಾದ ಕೃಷ್ಣನು ತಾನಿದ್ದು ಅದನ್ನು ನಡಸಿ ಕೊಡುವುದಾಗಿ ಹೇಳಿದಾಗ ಧರ್ಮರಾಯನ ಮನಸ್ಸಿಗೆ ಹಾಯೆನಿಸುತ್ತದೆ. ಮುಖ್ಯ ಕಥಾನಕ ಇಲ್ಲಿಂದ ಆರಂಭವಾಗುತ್ತದೆ.

ಕಥಾಪ್ರಾರಂಭದಲ್ಲಿ ಅಥವಾ ಆರಂಭದ ಅವಸ್ಥೆಯಲ್ಲಿ ಔತ್ಸುಕ್ಯವೇ ಅದರ ಮುಖ್ಯ ಲಕ್ಷಣವಾಗಿರಬೇಕೆಂದು ಲಾಕ್ಷಣಿಕರು ಹೇಳುತ್ತಾರೆ:

'ಔತ್ಸುಕ್ಯಮಾತ್ರಮಾರಂಭಃ ಫಲಲಾಭಾಯ ಭೂಯಸೇ '[1]

ಇದೇ ಕಾರಣದಿಂದ ಕಥಾವಸ್ತುವಿನ ಆರಂಭವು ಸಂಧಿ ೮ ಪದ್ಯ ೧೨ರವರೆಗೆ ೪೦೦ ಪದ್ಯಗಳನ್ನು ವ್ಯಾಪಿಸುತ್ತದೆ. ಮಾರ್ಗದರ್ಶನಕ್ಕೆ ವ್ಯಾಸರಿದ್ದು, ಭೀಮಾದಿಗಳು ಯಜ್ಞಾಶ್ವವನ್ನು ತರಲು ಸಿದ್ಧರಾಗಿದ್ದು–ಧರ್ಮರಾಯನಿಗೆ ಇನ್ನೂ ಉತ್ಸಾಹವಿಲ್ಲ. ಭೀಮಾದಿಗಳು ಭದ್ರಾವತಿಗೆ ಹೋಗಿ, ಪ್ರಖರವಾದ ಬಿಸಿಲಿನಲ್ಲಿ ಮಧ್ಯಾಹ್ನದವರೆಗೆ ಹೊಂಚುಹಾಕಿ ಕಾದರೂಯಜ್ಞಾಶ್ವವು ಕಾಣಿಸುವುದಿಲ್ಲ. ಅದು ಕಂಡಮೇಲೆ ಮೇಘನಾದನು ಮಾಯಾದೃಷ್ಟಿಯಿಂದ ಅದನ್ನು ಅಪಹರಿಸಿದರೂ ಯೌವನಾಶ್ವನನ್ನು ಎದುರಿಸಿ, ಕಾದಿ ಗೆಲ್ಲಬೇಕಾಗುತ್ತದೆ. ಮುಂದೆ, ಕಷ್ಟದಿಂದ ಸಂಪಾದಿಸಿ ತಂದ ಕುದುರೆಯನ್ನು ಅನುಸಾಲ್ವನೆಂಬ ರಕ್ಕಸನು ಅಪಹರಿಸುವನು. ಕೃಷ್ಣಭಕ್ತನಾಗಿದ್ದರೂ ಅನುಸಾಲ್ವನನ್ನು ಸೆರೆಹಿಡಿಯಬೇಕಾದರೆ ಪಾಂಡವರಿಗೆ ಸಾಕುಬೇಕಾಗುತ್ತದೆ.ಈ ಎಲ್ಲ ಘಟನೆಗಳ ಔಚಿತ್ಯದ ಮೂಲಕ ಓದುಗನ ಔತ್ಸುಕ್ಯ ಬುಗ್ಗೆಯಂತೆ ಪುಟಿಯುತ್ತದೆ.

ಇಡೀ ಕಾವ್ಯದ ಕಥಾಬೀಜವು ಅಶ್ವಮೇಧಯಜ್ಞವಾಗಿದ್ದರೂ ಕಥಾ ಆರಂಭದ ಅವಸ್ಥೆಯಲ್ಲಿ ಯಜ್ಞಾಶ್ವಪ್ರಾಪ್ತಿಯೆ ಕಥಾಬೀಜವಾಗಿದೆ ಎಂಬುದು ನಿಸ್ಸಂಶಯ. ಈ ಅವಸ್ಥೆಯ ಕಥಾನಕವೂ ಮುಖ, ಪ್ರತಿಮುಖ ಮೊದಲಾದ ಸಂಧಿ ಸಂಧ್ಯಂಗಗಳಿಂದ ಪರಿಪೂರ್ಣವಾದದ್ದನ್ನು ನಾವು ಕಾಣಬಹುದು.

---

1 'ದಶರೂಪಕ'; ೧–೨೯, ಪು. ೧೬.

ಮುಖಸಂಧಿ : ಸಂಧಿ ೨ ಪದ್ಯ ೪ ರಿಂದ ೧೩ರ ವರೆಗೆ ಧರ್ಮನ ಧರ್ಮರಾಜ್ಯದ ಗುಣಗಾನವಿದೆ. ಇದು ವಿಲೋಭನದ ಲಕ್ಷಣ : 'ಗುಣಾಖ್ಯಾನಂ ವಿಲೋಭನಂ.'[1] ಸಂಧಿ ೨ ಪದ್ಯ ೧೩ ರಿಂದ ೩೫ರ ವರೆಗೆ, ಅಶ್ವಮೇಧಯಜ್ಞದ ಪ್ರಸ್ತಾಪ, ಅದರ ವಿಧಿ ವಿಧಾನಕ್ರಮ, ಆ ಸಲ್ಲಕ್ಷಣದ ಕುದುರೆಯಿದ್ದ ಠಾವು, ಯಾಗ ನಿರ್ವಹಣೆಗೆ ಅಗತ್ಯವಾದ ಧನದ ಸಂಪಾದನೆ—ಇವುಗಳನ್ನು ಕುರಿತು ವ್ಯಾಸ ಮತ್ತು ಧರ್ಮರಾಯರಲ್ಲಿ ಮಾತು ಕತೆ ನಡೆದಿದೆ. ಯಜ್ಞಾಶ್ವವನ್ನು ಪಡೆಯುವುದೇ ಮೊದಲ ಕರ್ತವ್ಯವಾಗಿರುವುದರಿಂದ, ಅದನ್ನು ದೊರಕಿಸುವ ಪ್ರಯತ್ನದಲ್ಲಿಯೇ ಕಥಾನಕವು ೮ನೆಯ ಸಂಧಿಯವರೆಗೆ ಹಬ್ಬಿರು ವುದರಿಂದ ಯಜ್ಞಾಶ್ವದ ವಿವೇಚನೆಯೆ ಇಲ್ಲಿ ಕಥಾಬೀಜವಾಗಿದೆ. ಇದು ಉಪಕ್ಷೇಪದ ಲಕ್ಷಣ: 'ಬೀಜನ್ಯಾಸ ಉಪಕ್ಷೇಪಃ.'[2]

೨ನೆಯ ಸಂಧಿಯ ೩೬ ರಿಂದ ೪೨ರ ವರೆಗಿನ ಪದ್ಯಗಳಲ್ಲಿ ಭೀಮ, ವೃಷಕೇತು, ಮೇಘನಾದರೊಡನೆ ಧರ್ಮರಾಜನ ಸಂಭಾಷಣೆ ನಡೆದಿದೆ. ಮೂವರೂ ಯಜ್ಞಾಶ್ವ ವನ್ನು ದೊರಕಿಸಿ ತರುವ ಹೊಣೆಯನ್ನು ಹೊತ್ತು ಅದಕ್ಕಾಗಿ ಅಪ್ಪಣೆಯನ್ನು ಬೇಡು ತ್ತಾರೆ. ಇದು ಕಥಾಬೀಜದಲ್ಲಾದ ಹೆಚ್ಚಳ, ಎಂದರೆ ಪರಿಕ್ರಿಯೆಯ ಲಕ್ಷಣ: 'ತದ್ಬಾ ಹುಲ್ಯಂ ಪರಿಕ್ರಿಯಾ.'[3]

ಸಂಧಿ ೨ ಪದ್ಯ ೬೩–೬೪ರಲ್ಲಿ ಯಜ್ಞಾಧಿಪತಿಯಾದ ಕೃಷ್ಣನೇ ಯಜ್ಞವನ್ನು ಮಾಡುವುದಕ್ಕೆ ಒಪ್ಪಿಗೆಯನ್ನು ಕೊಟ್ಟು, ಭೀಮನಿಗೆ ಅಶ್ವವನ್ನು ತರಲು ಅನುಮತಿ ಯನ್ನು ಧರ್ಮರಾಯನಿಂದ ಕೊಡಿಸುತ್ತಾನೆ. ಇದು ಕಥಾಬೀಜದ ಸಿದ್ಧಿ ಎಂದರೆ ಪರಿ ನ್ಯಾಸದ ಲಕ್ಷಣ: 'ತನ್ನಿಷ್ಪತ್ತಿಃ ಪರಿನ್ಯಾಸೋ.'[4]

ಯಜ್ಞಾಶ್ವವನ್ನು ತರುವವರು ಯಾರೆಂಬ ಚರ್ಚೆ ನಡೆದ ಸಂದರ್ಭದಲ್ಲಿ ವ್ಯಾಸರು 'ಭೀಮ, ವೃಷಕೇತು, ಮೇಘನಾದರೇನು ಸಾಮಾನ್ಯರೇ ? ಅವರು ತರಬಲ್ಲರು' ಎಂದು ಸೂಚಿಸುತ್ತಾರೆ, ಸಂಧಿ ೨ ಪದ್ಯ ೪೪ ರಲ್ಲಿ. ಇಚ್ಛಿತವಸ್ತುವನ್ನು ದೊರಕಿಸುವ ಸಲು ವಾಗಿ ಮಾಡಿದ ನಿಶ್ಚಿತ ಯೋಜನೆಗೆ ಲಾಕ್ಷಣಿಕರು ಯುಕ್ತಿ ಎಂದು ಹೆಸರಿಸಿದ್ದಾರೆ : 'ಸಂಪ್ರಧಾರಣಮರ್ಥಾನಾಂ ಯುಕ್ತಿಃ.'[5]

ನಿಶ್ಚಿತವಾದ ಮೇರೆಗೆ ಮೂವರೂ ಭದ್ರಾವತಿಗೆ ಹೋಗಿ ನೆರೆಯ ಬೆಟ್ಟದ ಮೇಲೆ ನಿಲ್ಲುತ್ತಾರೆ. ಅಲ್ಲಿಂದ ಶೋಭಾಯಮಾನವಾಗಿ ಕಾಣುವ ನಗರವನ್ನು ಭೀಮನು ವೃಷ ಕೇತುವಿಗೆ ತೋರಿಸುತ್ತ ವರ್ಣಿಸುತ್ತಾನೆ. ಇಲ್ಲಿ ಭೀಮನ ಮನಸ್ಸಿನ ಅತ್ಯಂತ ಸಂಭ್ರಮ ವನ್ನು ತೋರಿದ್ದಾನೆ ಕವಿ. ಆದರೆ, ತನಗೆ ಬೇಕಾಗಿದ್ದ ಕುದುರೆಯೇ ಕಾಣುವುದಿಲ್ಲ. ತಾವು ಬಂದ ಕಾರ್ಯೋದ್ದೇಶವೇ ವಿಫಲವಾಗುವುದೋ ಎಂಬ ಚಿಂತೆ ಅವನನ್ನಾವರಿಸುವದು. ಸಂಧಿ ೩ ಪದ್ಯ ೪೨ ಮತ್ತು ಸಂಧಿ ೪ರ ಮೊದಲೈದು ಪದ್ಯಗಳು ಆ ದುಮ್ಮಾನವನ್ನು

1 'ದಶರೂಪಕ', ೧–೪೨, ಪುಟ ೨೧. 2 ಅದೇ, ೧–೩೯, ಪುಟ ೨೦.
3 ಅದೇ, ೧–೪೦, ಪುಟ ೨೦. 4 ಅದೇ, ೧–೪೧, ಪುಟ ೨೧.
5 ಅದೇ, ೧–೪೩, ಪುಟ ೨೨.

ವರ್ಣಿಸುತ್ತವೆ. ಹೀಗೆ ಭದ್ರಾವತಿ ದರ್ಶನದ ಸುಖವನ್ನೂ ಅಶ್ವಾಭಾವದ ದುಃಖವನ್ನೂ ಭೀಮನು ಏಕಕಾಲಕ್ಕೆ ಅನುಭವಿಸುವನು. ಇದು ವಿಧಾನದ ಲಕ್ಷಣ: 'ವಿಧಾನಂ ಸುಖದುಃಖಕೃತ್.'[1]

ಸಂಧಿ ೪ ಪದ್ಯ ೨೩ ರಿಂದ ೫೦ ರಲ್ಲಿ ಭದ್ರಾವತಿಯವರಿಗೂ ಭೀಮಾದಿಗಳಿಗೂ ನಡೆದ ಯುದ್ಧದ ವರ್ಣನೆ ಇದೆ. ಮೇಘನಾದನು ಎಸಗಿದ ಮಾಯಾಸೃಷ್ಟಿ, ಯೌವನಾಶ್ವನ ಗಗನಪಡೆಯವರು ಗೈದ ಆಕಾಶಯುದ್ಧ, ಭೀಮ–ಸುವೇಗರ ಆನೆಯೇರಾಟದ ಯುದ್ಧ, ವೃಷಕೇತು–ಯೌವನಾಶ್ವರ ಶರಸಂಧಾನ ಯುದ್ಧ ಇವುಗಳ ಅದ್ಭುತರಮ್ಯತೆಯಿಂದ ಓದುಗರ ಮನಸ್ಸನ್ನು ಸೆರೆಹಿಡಿಯುವುದು ಈ ವರ್ಣನೆ. ಇದು ಪರಿಭಾವದ ಲಕ್ಷಣ : 'ಪರಿಭಾವೋಽದ್ಭುತಾವೇಶಃ.'[2]

ವೃಷಕೇತುವಿನ ಅದ್ಭುತ ಧನುರ್ವೇದ ಕೌಶಲದ ಮೂಲಕ ಯೌವನಾಶ್ವನು ಮೂರ್ಛೆಹೋಗುತ್ತಾನೆ. ಮೂರ್ಛಿತನಾದ ಶತ್ರುವನ್ನು ಉಪಚಾರಗಳಿಂದ ವೃಷಕೇತು ಎಚ್ಚರಿಸಿ ಮಾನವೀಯ ದಯೆಯನ್ನು ತೋರುತ್ತಾನೆ. ಇದರಿಂದ ಯೌವನಾಶ್ವನ ಕ್ಷಾತ್ರಾವೇಶವು ಇಳಿದುಹೋಗಿ ಅವನು ವೃಷಕೇತುವಿನ ಸಖ್ಯವನ್ನು ಕೋರುತ್ತಾನೆ. ಇದರಿಂದ ಯುದ್ಧ ನಿಲ್ಲುತ್ತದೆ. ಇಬ್ಬರೂ ಭೀಮನೆಡೆಗೆ ಬರುತ್ತಾರೆ. ಧರ್ಮರಾಯನೊಡನೆ ಸಂಧಿಯನ್ನೂ , ಕೃಷ್ಣನ ದರ್ಶನವನ್ನೂ ಒದಗಿಸಿಕೊಡಬೇಕೆಂದೂ ಯೌವನಾಶ್ವನು ಬೇಡುತ್ತಾನೆ. ಸಂಧಿ ೫ ಪದ್ಯ ೧೩ ರಲ್ಲಿ ಯೌವನಾಶ್ವನು ಯಜ್ಞಾಶ್ವವನ್ನು ಧರ್ಮರಾಯನಿಗೆ ಒಪ್ಪಿಸುವನು. ಯಜ್ಞಾಶ್ವವು ದೊರಕಿದ ಸಂತೋಷ ಯುಧಿಷ್ಠಿರನಿಗೆ, ಕೃಷ್ಣದರ್ಶನದ ಸಂತೋಷ ಯೌವನಾಶ್ವನಿಗೆ. ಇದು ಪ್ರಾಪ್ತಿಯ ಲಕ್ಷಣ : 'ಪ್ರಾಪ್ತಿಃ ಸುಖಾಗಮಃ.'[3]

ಅಶ್ವಪ್ರಾಪ್ತಿಯ ತರುವಾಯ ಧನದ ಚಿಂತೆ ಧರ್ಮರಾಯನಿಗೆ. ಹಿಂದಕ್ಕೆ ಮರುತ್ತನೆಂಬ ರಾಜನು ದಾನಮಾಡಿದ ಧನವನ್ನು ಬ್ರಾಹ್ಮಣರು ಹೊರಲಾರದೆ ಬಿಟ್ಟು ಹೋಗಿರುವ ಧನವು ಹಿಮಾಲಯದಡಿಯಲ್ಲಿ ಒಟ್ಟಿದೆ ಎಂದೂ ಅದನ್ನು ತಂದುಕೊಳ್ಳಬೇಕೆಂದೂ ವ್ಯಾಸರು ಸೂಚಿಸುತ್ತಾರೆ. ಇಲ್ಲಿ ಸಂಧಿ ೫ ಪದ್ಯ ೨೨ ರಿಂದ ೪೭ರ ವರೆಗೆ ಪ್ರಾಸಂಗಿಕವಾಗಿ ಮರುತ್ತನ ಕಥಾನಕವು ಬರುತ್ತದೆ. ಪದ್ಯ ೪೮ ರಿಂದ ೭೦ರ ವರೆಗೆ ವ್ಯಾಸರು ಧರ್ಮರಾಯನಿಗೆ ಮಾಡಿದ ಧರ್ಮೋಪದೇಶವಿದೆ. ಹಿಮಾಲಯದಿಂದ ದ್ರವ್ಯವನ್ನು ತರಲಾಗುತ್ತದೆ. ಬಳಿಕ ಯಜ್ಞಾಧಿಪತಿಯೂ ಸೂತ್ರಧಾರನೂ ಆದ ಕೃಷ್ಣನನ್ನು ಕರೆತರುವುದಕ್ಕಾಗಿ ಭೀಮನನ್ನು ದ್ವಾರಕೆಗೆ ಕಳಿಸಲಾಗುತ್ತದೆ. ಈ ದ್ವಾರಕೆ ಗುಜರಾತದಲ್ಲಿದೆ. ಲಕ್ಷ್ಮೀಶನು ದ್ವಾರಕೆಯನ್ನು ವರ್ಣಿಸುವಾಗ ದ್ವಾರಸಮುದ್ರವು ಅವನ ಕಣ್ಣ ಮುಂದೆ ಇದ್ದಿರಬೇಕೆಂದು ತೋರುತ್ತದೆ. ಈಗಿನ ಹಾಸನ ಜಿಲ್ಲೆಯಲ್ಲಿರುವ ಹಳೇ

---

1 'ದಶರೂಪಕ', ೧–೪೬, ಪುಟ ೨೪. 2 ಅದೇ, ೧–೪೭, ಪುಟ ೨೫.

1 ಅದೇ, ೧–೪೪, ಪುಟ ೨೩.

ಬೀಡೇ ಆಗಣ ದ್ವಾರಸಮುದ್ರಂ. ಸಂಧಿ ೬ ಪದ್ಯ ೧ ರಿಂದ ೩೯ರ ವರೆಗೆ ಭೀಮನು ಕಂಡ ಸಮುದ್ರದ, ನಗರದ, ವೇಶ್ಯಾವಾಟಿಕೆಯ ವರ್ಣನೆಯಿದೆ. ಇಲ್ಲಿಗೆ ಮುಖಸಂಧಿ ಮುಗಿಯುತ್ತದೆ.

ಪ್ರತಿಮುಖ : ಸಂಧಿ ೬ ಪದ್ಯ ೪೦ರಲ್ಲಿ ಭೀಮನಿಗೆ ಕೃಷ್ಣನ ಬಗೆಗಿರುವ ಭಕ್ತಿ, ಪ್ರೀತಿ, ಅನುರಕ್ತಿ ಉಕ್ತವಾಗಿದೆ. 'ತನ್ನೊಳಿರ್ದಚ್ಯುತಂ ದ್ವಾರಕೆಗೆ ಬಂದಿರಲ್' ಅವನನ್ನು ಕಾಣುವ ಮೊದಲು ಪನ್ನಗಾರಿಧ್ವಜನ ರಾಜಗೃಹಮಂ ಕಂಡು ಮೈಯಿಕ್ಕುತ್ತಾನೆ. ಶ್ರೀಕೃಷ್ಣನನ್ನು ಕಂಡು ಸುಖಪಡಬೇಕೆಂಬ ಭೀಮನ ಇಚ್ಛೆಯೂ ಒಂದು ಬಗೆಯ ರತಿಯಾಗಿರುವುದರಿಂದ ಇದು ವಿಲಾಸದ ಲಕ್ಷಣ : 'ರತ್ಯರ್ಥೇಹಾ ವಿಲಾಸಃ ಸ್ಯಾತ್.'[1] ಭೀಮನನ್ನು ರಾಜಗೃಹದ ಬಾಗಿಲುಗಳಲ್ಲಿ ತಡೆಯುವವರು ಯಾರೂ ಇಲ್ಲ. ಇದು ಯಾದವ ಪಾಂಡವ ವಂಶಗಳಲ್ಲಿಯ ಸಂಬಂಧದ ಗಾಢತೆಯ ದ್ಯೋತಕವಾಗಿದೆ. ಭೀಮನು ಕೃಷ್ಣನ ಊಟದ ಮನೆಯವರೆಗೂ ಸಲೀಸಾಗಿ ಹೋಗುತ್ತಾನೆ. ಆಗ ಕೃಷ್ಣನು ತಾಯಿ-ಮಡದಿಯರ ಆದರಣೆಯಲ್ಲಿ ಸಂತೋಷದಿಂದ ಊಟಮಾಡುತ್ತಾನೆ. ಭೀಮನನ್ನು ಕೆರಳಿಸಿ ವಿನೋದವಾಡುವುದಕ್ಕಾಗಿ ಅವನು ಸೈರಂಧ್ರಿಯಿಂದ ಭೀಮನನ್ನು ತಡೆಯಿಸುತ್ತಾನೆ. ಇದರಿಂದ ಕುಪಿತನಾದ ಭೀಮನು ಆತ್ಮೀಯತೆಯ ಸಲಿಗೆಯಿಂದ ಕೃಷ್ಣನನ್ನು ಹೀಯಾಳಿಸಿ ಆಡುವ ಮಾತುಗಳು ಅವನ ಮನಸ್ಸಿಗೆ ಹಿತವನ್ನುಂಟುಮಾಡುತ್ತವೆ. ಹಿತಕ್ಕಾಗಿ ತಡೆಯುವುದು ನಿರೋಧದ ಲಕ್ಷಣ : 'ಹಿತರೋಧೋ ನಿರೋಧನಂ.'[2]

ಸಂಧಿ ೬ ಪದ್ಯ ೫೧ ರಿಂದ ೫೪ರ ವರೆಗೆ ಕೃಷ್ಣಭೀಮರಲ್ಲಿ ಪರಸ್ಪರ ಗುಣಸ್ವಭಾವಗಳನ್ನು ಕುರಿತು ವಾದ ನಡೆಯುತ್ತದೆ. ಭೀಮನು ಕೃಷ್ಣನನ್ನು ಕೂಳಬಕ್ಕನೆಂದು ಧಟ್ಟಿಸಿ ನುಡಿಯುವಾಗ ಕೃಷ್ಣನು ಸುರಿಯುವ ಸದ್ದನ್ನು ಹೆಚ್ಚಿಸಿ ಪ್ರತ್ಯುತ್ತರ ಕೊಡುತ್ತಾನೆ. ಇದರಿಂದ ಭೀಮನ ಕೋಪ ಮತ್ತಿಷ್ಟು ಏರುತ್ತದೆ. ಅವನು ಇನ್ನಷ್ಟು ಹೀಗಳೆದು ಮಾತನಾಡುತ್ತಾನೆ. ಆಗ ಕೃಷ್ಣನು ಊಟದ ರಭಸದ ಸದ್ದನ್ನು ಒಮ್ಮೆಲೆ ನಿಲ್ಲಿಸಿ ಪ್ರತಿನುಡಿದಾಗ ಭೀಮನು ಅದನ್ನೂ ಟೀಕಿಸುತ್ತಾನೆ. ಈ ನುಡಿಪ್ರತಿನುಡಿಗಳಿಗೆ ಪ್ರಗಮನ ಎಂದು ಹೆಸರು : 'ಉತ್ತರಾವಾಕ್ ಪ್ರಗಮನಂ.'[3] ಕೊನೆಗೆ ಭೀಮನು ಸಂಧಿ ೬ ಪದ್ಯ ೫೫ರಲ್ಲಿ, 'ದೇವ ನಿಮ್ಮರ್ಜುನನ ಸಲುಗೆ ನಮಗುಂಟೆ? ಸಂಭಾವಿಸುವರಿಲ್ಲೆಮ್ಮ ನಿಲ್ಲಿ!' ಎಂದು ಮೂಲ ಆಕ್ಷೇಪವನ್ನು ಎತ್ತಿ ನುಡಿಯುತ್ತಾನೆ. ಆಗ ಕೃಷ್ಣನು ಅವನನ್ನು ಸಂತಯಿಸಿ, ಬಾಯೆಂದು ಸೆರಗುವಿಡಿದು ಕುಳ್ಳಿರಿಸಿ, ಭೋಜನ ತಾಂಬೂಲಾದಿಗಳಿಂದ ಆದರಿಸುತ್ತಾನೆ. ಈ ವಿಶೇಷ ರೀತಿಯ ಮಾತು ಪುಷ್ಪದ ಲಕ್ಷಣ : 'ಪುಷ್ಪಂ ವಾಕ್ಯಂ ವಿಶೇಷವತ್.'[4] ಸಂಧಿ ೭ ಪದ್ಯ ೪, ೬ರಲ್ಲಿ ಕೃಷ್ಣನೊಡನೆ ಹಸ್ತಿನಾವತಿಗೆ ತೆರಳಿದ 'ನಾನಾ ಜಾತಿನೆರವಿಯ' ವರ್ಣನೆಯಿದೆ. ಆ ಜನಸಮುದಾಯದಲ್ಲಿ ನಾಲ್ಕು ವರ್ಣಗಳ

---

1 'ದಶರೂಪಕ', ೧–೫೩, ಪುಟ ೩೦.  2 ಅದೇ, ೧–೬೦, ಪುಟ ೩೪.

3 ಅದೇ, ೧–೫೯, ಪುಟ ೩೩.  4 ಅದೇ, ೧–೬೩, ಪುಟ ೩೫.

ಬೆರಕೆಯಂತೂ ಇದ್ದೇ ಇತ್ತು; ಅಲ್ಲದೆ ಉಳಿದ ವರ್ಣಗಳ ಜನರೂ ನೆರವಿಯಲ್ಲಿದ್ದರು. ಇದು ವರ್ಣಸಂಹಾರದ ಲಕ್ಷಣ: 'ಚಾತರ್ವರ್ಣ್ಯೋಪಗಮನಂ ವರ್ಣಸಂಹಾರ ಇಷ್ಯತೇ.'[1] ಇಲ್ಲಿಗೆ ಪ್ರತಿಮುಖಸಂಧಿ ಸಮಾಪ್ತವಾಗುತ್ತದೆ.

ಗರ್ಭ: ಶ್ರೀ ಕೃಷ್ಣನನ್ನು ಕೂಡಿಕೊಂಡು ಪಾಂಡವರೆಲ್ಲರೂ ಯಾದವರನ್ನು ಎದುರುಗೊಳ್ಳಲು ಹೋಗುತ್ತಾರೆ. ಪರಸ್ಪರಾಲಿಂಗನಾದಿಗಳಿಂದ ಎದುರುಗೊಳ್ಳುವುದಾದ ಬಳಿಕ ಯಾದವ-ಪಾಂಡವ ಸುಮಂಗಲೆಯರು ಯಜ್ಞಾಶ್ವವನ್ನು ಪೂಜಿಸುವರು. ಈ ಸಡಗರದಲ್ಲಿ ಅನುಸಾಲ್ವನು ಯಜ್ಞಾಶ್ವವನ್ನು ಅಪಹರಿಸುತ್ತಾನೆ. 'ಮೋಸದೊಳಾ ತುರಂಗಮುವನೆಳೆದೊಯ್ವು....'(ಸಂ. ೭ ಪ. ೩೨), ಚಾತುರ್ಯದಿಂದ ಮಾಡಿದ ಇಂತಹ ಮೋಸಕ್ಕೆ ಅಧಿಬಲವೆಂದೆನ್ನುತ್ತಾರೆ.'ಅಧಿಬಲಮಭಿಸಂಧಿಃ.'[2] ಗರ್ಭಸಂಧಿಯ ಇದೊಂದು ಲಕ್ಷಣವು ಈ ಕಾವ್ಯದಲ್ಲಿ ಕಂಡು ಬರುತ್ತದೆ.

ಅವಮರ್ಶ: ಅನುಸಾಲ್ವನನ್ನು ಎದುರಿಸಿ ಕುದುರೆಯನ್ನು ಬಿಡಿಸಿಕೊಂಡು ಬರಲು ಪ್ರದ್ಯುಮ್ನನು ವೀಳ್ಯವನ್ನೆತ್ತುತ್ತಾನೆ. ಯುದ್ಧದಲ್ಲಿ ಮೂರ್ಛಿತನಾದ ಅವನನ್ನು ಸಾರಥಿ ಬೀಡಿಗೆ ತರುತ್ತಾನೆ. ಆಗ ಕೃಷ್ಣನು ಅವನನ್ನು ಶಿಥಿಲ ಪೌರುಷದವನೆಂದು ಹೀಯಾಳಿಸಿ ಎಡಗಾಲ ತುದಿಯಿಂದ ಒದೆಯುತ್ತಾನೆ. ಇದು ಅಪವಾದದ ಲಕ್ಷಣ: 'ದೋಷಪ್ರಖ್ಯಾಽಪವಾದಃ ಸ್ಯಾತ್.'[3] ಮುಂದೆ ಕೃಷ್ಣನು ಕೂಡ ಹೀಗೆಯೆ ಮೂರ್ಛಿತನಾಗಿ ತಿರುಗಿ ಬರಲು ಇದೇ ಮಾತನ್ನು ಪ್ರತ್ಯಾರೋಪಿಸಿ ಸತ್ಯಭಾಮೆ ಕೃಷ್ಣನನ್ನು ಜರಿಯುತ್ತಾಳೆ. ಇದೂ ಅಪವಾದ ಲಕ್ಷಣವೆ. ಕೊನೆಗೆ ವೃಷಕೇತು ಅನುಸಾಲ್ವನನ್ನು ಸೆರೆಹಿಡಿದು ತಂದು ಕೃಷ್ಣನಿಗೆ ಒಪ್ಪಿಸುತ್ತಾನೆ. ಇದು ವಿದ್ರವದ ಲಕ್ಷಣ: 'ವಿದ್ರವೋ ವಧಬಂಧಾದಿಃ.'[4] ಇಲ್ಲಿಗೆ ಅವಮರ್ಶಸಂಧಿ ಮುಗಿಯುತ್ತದೆ.

ನಿರ್ವಹಣೆ: ಸಂಧಿ ೭ ಪದ್ಯ ೬೬ ರಲ್ಲಿ 'ಪ್ರದ್ಯುಮ್ನನುಳಿದ ಸೇನೆಗಳೆಲ್ಲಮಂ ಗೆಲ್ದು ತುರಗಮಂ ಬಿಡಿಸಿಕೊಂಡಗಧರನ ಸಮ್ಮುಖಕೆ ತಂದು ನಿಲ್ಲಿಸಿದನಿತ್ತ ಭಾಷೆಗುತ್ತರವಾಗೆ' ಎಂದು ಹೇಳಿದೆ. ಇದು ಆನಂದದ ಲಕ್ಷಣ: 'ಆನಂದೋವಾಂಛಿತಾವಾಪ್ತಿಃ.'[5] ಇಲ್ಲಿಗೆ ನಿರ್ವಹಣ ಸಂಧಿ ಮುಗಿಯುತ್ತದೆ.

ಅನುಸಾಲ್ವನಿಂದ ಸಂಧಿ ೭ ಪದ್ಯ ೬೬ರಲ್ಲಿ ಯಜ್ಞಾಶ್ವವನ್ನು ಪಡೆಯಲಾಗಿದೆ. ಯಜ್ಞಾಶ್ವವೆಂದರೆ ಕಥಾಬೀಜ; ಇಲ್ಲಿ ಅದರ ಆಗಮನವಾಗಿದೆ. ಆದುದರಿಂದ ಇದು ಸಮಾಧಾನದ ಲಕ್ಷಣ: 'ಬೀಜಾಗಮಃ ಸಮಾಧಾನಂ.'[6]

ಅಶ್ವಮೇಧಯಜ್ಞಕ್ಕಿಂತ ಮೊದಲು ಯಜ್ಞಾಶ್ವವು ಒಂದು ವರ್ಷ ಸ್ವೇಚ್ಛಾಪರಿಭ್ರಮಣ ಮಾಡಬೇಕು. ಯಜ್ಞಾಶ್ವವನ್ನು ದೊರಕಿಸಿಯಾದ ಬಳಿಕ ಅದರ ಪರಿಭ್ರಮಣವೇ

---

1 'ದಶರೂಪಕ', ೧-೬೫, ಪುಟ ೩೬.
2 ಅದೇ, ೧-೭೬, ಪುಟ ೪೨.
3 ಅದೇ, ೧-೮೩, ಪುಟ ೪೮.
4 ಅದೇ, ೧-೮೫, ಪುಟ ೪೯.
5 ಅದೇ, ೧-೧೦೪, ಪುಟ ೬೪.
6 ಅದೇ, ೧-೪೫, ಪುಟ ೨೩.

ಪ್ರಸ್ತುತ ವಿಷಯ. ಅದು ಸಂಧಿ ೮ ಪದ್ಯ ೧ ರಿಂದ ೧೨ರ ವರೆಗೆ ತಿಳಿಸಲ್ಪಟ್ಟಿದೆ. ಪ್ರಸ್ತುತ ವಿಷಯದ ಆರಂಭಕ್ಕೆ ಕರಣ ಎಂದು ಹೆಸರು. 'ಕರಣಂ ಪ್ರಕೃತಾರಂಭೋ.'[1]

ಈ ರೀತಿಯಾಗಿ ಮುಖಸಂಧಿಯಲ್ಲಿರಬೇಕಾದುವೆಂದು ಶಾಸ್ತ್ರಕಾರರು ಹೇಳಿರುವ ೧೨ ಸಂಧ್ಯಂಗಗಳಲ್ಲಿ ೮ ಸಂಧ್ಯಂಗಗಳನ್ನು ಜೈಮಿನಿ ಭಾರತದ ಮುಖಸಂಧಿಯಲ್ಲಿ ಕಾಣುತ್ತೇವೆ. ಕಥಾನಕದ ಆರಂಭದ ಅವಸ್ಥೆಯಲ್ಲಿ ನಾವು—ಧರ್ಮಜನ ಕೃಷ್ಣಶ್ರದ್ಧೆ, ಭೀಮ ವೃಷಕೇತು ಮೇಘನಾದ ಪ್ರದ್ಯುಮ್ನ ಮತ್ತು ಸುವೇಗರ ಯುದ್ಧಕೌಶಲ, ಭೀಮ-ಕೃಷ್ಣರ ಆತ್ಮೀಯತೆ, ಭೀಮನ ಹೃದಯದಲ್ಲಿದ್ದ ಅಚ್ಯುತನೇ ಕೃಷ್ಣನೆಂಬ ಮಾತು, ಯೌವನಾಶ್ವನ ಕೃಷ್ಣದರ್ಶನ-ಲಾಲಸೆ, ಶ್ರೀಕೃಷ್ಣನ ಸರಸವಾದ ಗೃಹಜೀವನ, ಅನುಸಾಲ್ವನ ವಿರೋಧಭಕ್ತಿ ಮೊದಲಾದುವನ್ನು ಕಾಣುತ್ತೇವೆ.

ಈ ಕಥಾನಕದ ಪದರುಪದರಿನಲ್ಲಿಯೂ ಶ್ರೀಕೃಷ್ಣ ಎಂಬ ನಾಡಿಯೇ ಮಿಡಿಯುತ್ತಿದೆಯೆಂಬುದು ಈ ಆರಂಭದ ಅವಸ್ಥೆಯಲ್ಲಿ ಕಂಡುಬರುತ್ತಿದೆ. ಪಾಂಡವರೆಲ್ಲರೂ ಆತನನ್ನೇ ನಂಬಿದವರು; ಯೌವನಾಶ್ವ, ಅನುಸಾಲ್ವರು ಕೃಷ್ಣಭಕ್ತಿಗೆ ವಿರೋಧಿಗಳಲ್ಲ, ಕೃಷ್ಣದರ್ಶನದಿಂದ ಆನಂದಸಾಗರದಲ್ಲಿ ಮುಳುಗಾಡುತ್ತಾರೆ ಅವರು. ಯಜ್ಞಾಧಿಪತಿ ಶ್ರೀಕೃಷ್ಣನು-ಹರಿ, ಯಜ್ಞಾಶ್ವವೂ-ಹರಿಯೆ. ವರ್ತುಲಕ್ಕೆ ಮಧ್ಯಬಿಂದು ಸ್ಥಿರವಾಗಿರುವಂತೆ, ಈ ಕಥಾನಕದಲ್ಲಿ ಪರಿಚಿತವಾದ ಎಲ್ಲ ಪಾತ್ರಗಳಿಗೂ ಶ್ರೀಕೃಷ್ಣನೇ ಮಧ್ಯಬಿಂದು-ಧ್ರುವನಕ್ಷತ್ರ. ಸಂಚಾರೀಸ್ವರದಿಂದ ಸ್ಥಾಯಿಸ್ವರಕ್ಕೆ ಸಂಗೀತದಲ್ಲಿ ಬರುವಂತೆ ಕಥಾನಕವು ಭದ್ರಾವತಿ, ದ್ವಾರಕೆ, ಗಂಗಾತೀರಗಳನ್ನು ಬಳಸಿಕೊಂಡು ಮತ್ತೆ ಹಸ್ತಿನಾವತಿಗೆ ಬರುತ್ತದೆ. 'ಹರಿಯನುಳಿದಾವು ಬದುಕುವರಲ್ಲ ಚಿತ್ತದೊಳ್ಭರಿತನಾಗಿಹನಾವಗಂ' (೧೦-೨೧) ಎಂಬುದು ಅರ್ಜುನನ ಕೃಷ್ಣಶ್ರದ್ಧೆ.

### ಪ್ರತಿಮುಖಸಂಧಿ

ಜೈಮಿನಿ ಭಾರತದ ಸಂಧಿ ೮ ಪದ್ಯ ೧೩ ರಿಂದ ೧೬ನೆಯ ಸಂಧಿಯು ಮುಗಿತಾಯದವರೆಗಿನ ೪೨೦ ಪದ್ಯಗಳ ಕಥಾಭಾಗವು ಪ್ರತಿಮುಖಸಂಧಿಯಲ್ಲಿ ಬರುತ್ತದೆ. ಕಥಾಬೀಜವು ಹಲವೊಮ್ಮೆ ಕಂಡು, ಹಲವೊಮ್ಮೆ ಗುಪ್ತವಾಗುವುದರಿಂದ ಉಂಟಾಗುವ ಬೀಜದ ಒಡೆಯುವಿಕೆಯೇ ಪ್ರತಿಮುಖ ಸಂಧಿ ಎಂದು ಲಾಕ್ಷಣಿಕರು ಹೇಳುತ್ತಾರೆ. 'ಲಕ್ಷ್ಯಾಲಕ್ಷ್ಯತಯೋದ್ಭೇದಸ್ತಸ್ಯ ಪ್ರತಿಮುಖಂ ಭವೇತ್.'[2] ಕಂಡಂತೆಯೂ ಕಾಣದಂತೆಯೂ ಬೀಜವು ಈ ಸಂಧಿಯಲ್ಲಿ ಮೊಳಕೆಯೊಡೆಯುವುದು. ಕಥಾನಕಕ್ಕೆ ಬೀಜವು ಅಶ್ವಮೇಧಯಜ್ಞವಾಗಿದ್ದರೂ ಯಜ್ಞಾಶ್ವವೇ ಯಜ್ಞಕ್ಕೆ ಮೂಲ. ಈ ಯಜ್ಞಾಶ್ವವು ಹಲವು ರಾಜರ ಅಧೀನವಾಗಿ ಪ್ರೇಕ್ಷಕರಿಗೆ ಕಾಣದಂತಾಗಿ, ಕದನವಾಗಿ ಗೆಲುವುಂಟಾದ ಬಳಿಕ ಮತ್ತೆ ಗೋಚರಿಸುವುದು ಈ ಎಲ್ಲ ಸಂಧಿಗಳ ಮುಖ್ಯ ಲಕ್ಷಣವಾಗಿದೆ. ಮೊದಲು ನೀಲಧ್ವಜ, ಆಮೇಲೆ ಹಂಸಧ್ವಜ, ಪ್ರಮೀಳೆ, ಭೀಷಣರಿಂದ ಯಜ್ಞಾಶ್ವವು ಕಟ್ಟ

---

1 'ದಶರೂಪಕ', ೧-೪೯, ಪುಟ ೨೭. 2 ಅದೇ, ೧-೩೧, ಪುಟ ೨೮.

ಳ್ಪಡುತ್ತದೆ; ಅದು ಕಣ್ಮರೆಯಾಗುತ್ತದೆ. ಈ ಎಲ್ಲ ರಾಜರು ಕಾದಿ ಸೋತು ಕೃಷ್ಣಭಕ್ತರಾಗಿ ಅಶ್ವವನ್ನು ಒಪ್ಪಿಸಿದ ಬಳಿಕ ಅದು ಮುಂದೆ ಸಾಗುತ್ತದೆ.

ಕಥಾನಕದ ಬೆಳೆವಣಿಗೆಯಲ್ಲಿಯ ಎರಡನೆಯ ಅವಸ್ಥೆಯೆ ಪ್ರಯತ್ನ: 'ಪ್ರಯತ್ನಸ್ತು ತದಪ್ರಾಪ್ತೌ ವ್ಯಾಪಾರೋಽತಿತ್ವರಾನ್ವಿತಃ.'[1] ಕಳೆದುಹೋದುದನ್ನು ಅಥವಾ ದೊರೆಯದಿದ್ದುದನ್ನು ಪಡೆಯುವುದಕ್ಕೆ ಭರದಿಂದ ನಡೆಸುವ ಕಾರ್ಯವೇ ಪ್ರಯತ್ನ. ಕುದುರೆ ಒಂದು ವರ್ಷದೊಳಗಾಗಿ ಎಲ್ಲ ರಾಜ್ಯಗಳನ್ನು ಸಂಚರಿಸಿ, ಅದರ ರಕ್ಷಕರು ಆ ಆ ರಾಜರಿಂದ ಆ ಅವಧಿಯೊಳಗಾಗಿ ಧನಸಂಗ್ರಹಿಸುವುದಿರುವುದರಿಂದ ಪಾಂಡವರು ತ್ವರೆಯಿಂದ ಅದನ್ನು ಬಿಡಿಸಿ ಮುಂದುವರಿಸುವಂತೆ ವ್ಯವಹರಿಸುತ್ತಾರೆ.

ನೀಲಧ್ವಜನ ಆಖ್ಯಾನವು ಸಂಯುಕ್ತಸ್ವರೂಪದ್ದಾಗಿದೆ. ಪ್ರವೀರನ ವಿಲಾಸ ಜೀವನ, ಜ್ವಾಲೆಯ ಛಲ, ಸ್ವಾಹೆಯ ವ್ರತ ನಿಷ್ಠೆ ಮುಪ್ಪುರಿಗೊಂಡ ಈ ಕಥಾನಕವು ವೈಶಿಷ್ಟ್ಯಪೂರ್ಣವಾಗಿದೆ. ಜ್ವಾಲೆಯ ಮಾತಿಗೆ ಮನಸೋತು ಅರ್ಜುನನೊಡನೆ ಕಾದಾಟಕ್ಕೆ ನಿಂತು ಮಕ್ಕಳನ್ನು ಕಳೆದುಕೊಳ್ಳುತ್ತಾನೆ ನೀಲಧ್ವಜ. ಸಾಕ್ಷಾತ್ ಅಗ್ನಿಯೆ ಮನೆಯಳಿಯನಾಗಿ ನಿಂತಿರುವುದೇ ಅವನಿಗಿರುವ ದೊಡ್ಡ ಬೆಂಬಲ. ನೀಲಧ್ವಜನ ಮಕ್ಕಳ ಪರಾಕ್ರಮ ಎಲ್ಲಿಯೂ ವರ್ಣಿತವಾಗಿಲ್ಲ. ಮುಖ್ಯ ವಿರೋಧಿ ಅಗ್ನಿ. ಅವನನ್ನು ಅರ್ಜುನನು ಸ್ತುತಿಯಿಂದ ಒಲಿಸಿಕೊಳ್ಳುತ್ತಾನೆ. ಇಲ್ಲಿ ಅಗ್ನಿಯ ಮೂರು ಗುಣಗಳು ವ್ಯಕ್ತವಾಗಿವೆ: (೧) ಸ್ವಾಹೆಯನ್ನು ವರಿಸುವ ಪ್ರಸಂಗದಲ್ಲಿ ಕನ್ಯಾರ್ಥಿಯಾಗಿ ಬಂದು ಗೃಹಸ್ಥಗುಣವನ್ನು, (೨) ಯುದ್ಧ ಪ್ರಸಂಗದಲ್ಲಿ ರೌದ್ರಗುಣವನ್ನು, ಮತ್ತು (೩) ಧರ್ಮರಾಯನ ಯಜ್ಞಕ್ಕೆ ವಿಘ್ನವಾಗಬಾರದೆಂಬ ಉದ್ದೇಶದಿಂದ ಯಜ್ಞಾಶ್ವವನ್ನು ಬಿಟ್ಟುಕೊಡುವಂತೆ ಮಾವನಿಗೆ ಹೇಳುವಲ್ಲಿ **ಧರ್ಮಗುಣ**ವನ್ನು ಅಗ್ನಿ ತೋರಿದ್ದಾನೆ. ಅಗ್ನಿಯು ಯಜ್ಞವಿರೋಧಿಯಲ್ಲ, ಅವನ ಮುಖಾಂತರವಾಗಿಯೇ ದೇವತೆಗಳಿಗೆ ಹವಿರ್ಭಾಗ ಸಲ್ಲಬೇಕು, ಹವ್ಯವಾಹನ ಅವನು. ನೀಲಧ್ವಜ, ಜ್ವಾಲೆ, ಸ್ವಾಹೆ ಇವರೆಲ್ಲರೂ ಅಗ್ನಿಕುಲದವರು ಎಂದು ಅವರ ಹೆಸರುಗಳಿಂದ ಊಹಿಸುವುದಕ್ಕೆ ತುಂಬಾ ಎಡೆ ಇದೆ. ಬೀಜದ ಗುಣ ಮರದಲ್ಲಿ ಕಾಣುವಂತೆ, ಸ್ವಾಹೆಗೆ ಅಗ್ನಿಯಲ್ಲಿ ಒಲವುಂಟಾಗಲು ಅವಳು ಅಗ್ನಿವಂಶಕ್ಕೆ ಸಂಬಂಧಪಟ್ಟವಳೆಂಬುದೇ ಕಾರಣವಾಗಿರಬೇಕು. ಜ್ವಾಲೆಯ ಛಲವು ಗಂಗೆಯಿಂದ ಅರ್ಜುನನಿಗೆ ಶಾಪಕೊಡಿಸಿ, ಅವನು ಉರಿಹಾಯ್ದು ಸತ್ತು ಬಭ್ರುವಾಹನನ ಬತ್ತಳಿಕೆಯಲ್ಲಿ ಅಂಬಾಗಿ ಸೇರುವುದರಲ್ಲಿ ಸ್ಥಿರವಾಗುತ್ತದೆ. ಈ ಕಥಾವಿಲಾಸದ ವಿನ್ಯಾಸವನ್ನು ಸಂಧಿ ೮ ಪದ್ಯ ೧೩ ರಿಂದ ೯ನೆಯ ಸಂಧಿಯ ಕೊನೆಯವರೆಗೆ ೭೧ ಪದ್ಯಗಳಲ್ಲಿ ಕಾಣಬಹುದು.

ನೀಲಧ್ವಜನ ಮಾಹಿಷ್ಮತೀ ನಗರವಿದ್ದುದು ನರ್ಮದೆಯ ಬಲದಂಡೆಯ ಮೇಲೆ. ಅಲ್ಲಿಂದ ದಕ್ಷಿಣಕ್ಕೆ ಹೊರಟ ಅಶ್ವವು ವಿಂಧ್ಯಾದ್ರಿಯನ್ನು ದಾಟಿ ಬರುತ್ತಿರುವಾಗ ಒಂದು

---

1 'ದಶರೂಪಕ', ೧–೩೦, ಪುಟ ೧೬.

ಬಂಡೆಗಲ್ಲಮೇಲೆ ಕಾಲುಗಳನ್ನು ಕೀಳಲಾಗದೆ ನಿಂತುಬಿಡುತ್ತದೆ. ಯಾರು ಎಷ್ಟು ಪ್ರಯತ್ನಪಟ್ಟರೂ ಅಲ್ಲಿಂದ ಚಲಿಸುವುದಿಲ್ಲ. ಯಜ್ಞಕ್ಕೆ ಮೂಲವಾದ ಅಶ್ವವೇ ಹೀಗೆ ಅಲುಗಾಡದಂತೆ ನಿಲ್ಲುವುದು, ಅರ್ಜುನನಿಗೆ ಸಾವೊದಗಿದಷ್ಟೇ ಮಹತ್ತ್ವದ ಆತಂಕ. ಆಗ ಸಂಧಿ ೧೦ ಪದ್ಯ ೧೭ ರಿಂದ ೨೨ ರ ವರೆಗಿನ ೬ ಪದ್ಯಗಳಲ್ಲಿ ಸೌಭರಿಮುನಿಯ ಸಂದರ್ಶನದ ವೃತ್ತಾಂತ ಬರುತ್ತದೆ. ಯಜ್ಞಾಶ್ವದ ಕಾಲುಗಳನ್ನು ಹಿಡಿದು ನಿಲ್ಲಿಸಿದ ಆ ಬಂಡೆ, ಶಾಪಗ್ರಸ್ತಳಾದ ಚಂಡಿ ಎಂಬುದನ್ನು ಆ ಮುನಿ ತಿಳಿಸಿ ಅವಳ ಕಥೆಯನ್ನು ಅರ್ಜುನಾದಿಗಳಿಗೆ ಹೇಳುತ್ತಾನೆ. ಅವನ ಹೇಳಿಕೆಯಂತೆಯೇ ಕೃಷ್ಣಸ್ಮರಣೆಯಿಂದ ಅರ್ಜುನನು ಕುದುರೆಯನ್ನು ಮುಟ್ಟಲು ಅದರ ಬಿಡುಗಡೆಯಾಗಿ, ಚಂಡಿಯ ಶಾಪ ವಿಮೋಚನೆಯಾಗುತ್ತದೆ.

ಇಲ್ಲಿಂದ ಬಿಡುಗಡೆಯಾದ ಯಜ್ಞಾಶ್ವವು ಚಂಪಕ ನಗರಕ್ಕೆ ಹೋಗುತ್ತದೆ. ಅಲ್ಲಿ ಅರಸನಾಗಿದ್ದವನು ಹಂಸಧ್ವಜ. ಆತ ಕುದುರೆಯನ್ನು ಕಟ್ಟುವುದು, ಸುಧನ್ವ ಸುರಥರಿಗೆ ಕಾಳೆಗದಲ್ಲಿ ಸಾವು, ಕೊನೆಗೆ ಹಂಸಧ್ವಜನು ಕೃಷ್ಣನ ಪ್ರತ್ಯಕ್ಷರಾಯಭಾರ ದಿಂದ ಪಾಂಡವರನ್ನು ಕೂಡಿಕೊಳ್ಳುವುದು—ಇದೊಂದು ಸಂಪೂರ್ಣವಾದ ಕಥೆಯಾಗಿದೆ (ಸಂ. ೧೦ ಪ. ೩೪ ರಿಂದ ಸಂಧಿ ೧೪ ಪೂರ್ಣ). ಇದರ ಬೆಳವಣಿಗೆಯು ಪ್ರತ್ಯೇಕ ವಾಗಿದೆ. ಹಂಸಧ್ವಜನ ಕಥಾನಕದ ವಿಶ್ಲೇಷಣೆಯನ್ನು ಅನಂತರ ನೋಡೋಣ.

ಚಂಪಕ ನಗರದಿಂದ ಹೊರಟ ಯಜ್ಞಾಶ್ವವು ಪಾರಿಪ್ಲವ ದೇಶಕ್ಕೆ ಹೋಗುತ್ತದೆ. ಈ ಪಾರಿಪ್ಲವವು ಹಿಮಾಲಯದ ಒಂದು ಭಾಗವು ಎಂದರೆ ಗೌರೀಶಂಕರ ಶಿಖರದ ಅಡಿ ಯಿಂದ ಈಗಿನ ಭೂತಾನದವರೆಗಿನ ಭೂಭಾಗವೆಂದು ಮತವಿದೆ.[1] ಈ ಪಾರಿಪ್ಲವ ಪಾರ್ವತಿಯ ತಪೋಭೂಮಿ. ತನ್ನ ತಪವನ್ನು ಭಗ್ನಪಡಿಸಿದ ರಾಕ್ಷಸನನ್ನು ಕೊಂದು, ಈ ಪ್ರದೇಶವನ್ನು ಹೊಕ್ಕ ಗಂಡು, ಹೆಣ್ಣಾಗಲಿ ಎಂದು ಪಾರ್ವತಿಯು ಶಾಪ ಕೊಟ್ಟಿರು ತ್ತಾಳೆ. ಅದರ ಫಲವಾಗಿ ಯಜ್ಞಾಶ್ವವು ಹೆಣ್ಣುಗುದುರೆಯಾಗುತ್ತದೆ. ಇಲ್ಲಿಯೂ ಹರಿ ನಾಮಸ್ಮರಣೆಯಿಂದ ಅಶ್ವವು ಮೊದಲಿನಂತಾಗಿ ಮುಂದುವರಿಯುವಷ್ಟರಲ್ಲಿ, ಒಂದು ಸರೋವರದಲ್ಲಿ ನೀರು ಕುಡಿದು ಅದು ಹುಲಿಯಾಗಿಬಿಡುತ್ತದೆ. ಅಲ್ಲಿ ಯಾರು ನೀರು ಕುಡಿಯುವರೋ ಅವರು ಹುಲಿಯಾಗಲೆಂದು ಅಕೃತವ್ರಣ ಎಂಬ ಬ್ರಾಹ್ಮಣನು ಕೆರೆಗೆ ಶಾಪಕೊಟ್ಟಿರುತ್ತಾನೆ. ಪರಿಭ್ರಮಣಕ್ಕಾಗಿ ಬಿಟ್ಟ ಯಜ್ಞಾಶ್ವವು ವರ್ಷದವರೆಗೂ ನೀರು ಕುಡಿಯಬಾರದೆಂಬುದು ಶಾಸ್ತ್ರ ನಿಯಮ. ಆ ನಿಯಮವನ್ನು ಮೀರಿದುದಕ್ಕಾಗಿ ಹಾಗೂ ಬ್ರಾಹ್ಮಣನ ಶಾಪದಿಂದಾಗಿ ಹುಲಿಯಾದ ಕುದುರೆ, ಹರಿನಾಮಸ್ಮರಣೆಯಿಂದ ಮರಳಿ ಮುನ್ನಿನಂತಾಗುತ್ತದೆ. ಪಾರ್ವತಿಯ ಶಾಪ, ಅಕೃತವ್ರಣನ ಶಾಪದ ಕಥೆಗಳು- ಸಂಧಿ ೧೫, ಪದ್ಯ ೨ ರಿಂದ ೪೦ ರ ವರೆಗೆ ೩೯ ಪದ್ಯಗಳಲ್ಲಿ ಬಿತ್ತರಿಸಿದೆ.

ಇಲ್ಲಿಂದ ಮುಂದುವರಿದ ಕುದುರೆ ಹೋಗುವುದು ಪ್ರಮೀಳಾರಾಜ್ಯಕ್ಕೆ. ಆಕೆ ಕುದುರೆಯನ್ನು ಕಟ್ಟಿ ಕಾಳಗಕ್ಕೆ ಅಣಿಯಾಗುವಳು. ಆದರೆ, ಅರ್ಜುನನು ಆಕೆಯನ್ನು

[1] 'ಅಶ್ವಪಥ', ರಾ.ನ. ಮಳಗಿ, ಪುಟ ೯.

ಮದುವೆಯಾಗುವುದು ವಿಹಿತವೆಂದು ಆಕಾಶವಾಣಿಯಾಗಿ ಯುದ್ಧವು ತಪ್ಪುವುದು. ಯಜ್ಞಾನಂತರದಲ್ಲಿ ಮದುವೆಯೆಂದು ಮಾತಾಗಿ, ಪ್ರಮೀಳೆ ಹಸ್ತಿನಾವತಿಗೆ ಯಜ್ಞಕ್ಕಾಗಿ ಹೋಗುವಳು. ಪ್ರಮೀಳೆಯ ಚತುರಂಗ ಸೈನ್ಯವೈಭವ, ಆ ರಾಜ್ಯದಲ್ಲಿಯ ವಿಷ ಕನ್ನೆಯರ ನಡೆನುಡಿ ಮೊದಲಾದವುಗಳ ವರ್ಣನೆಯನ್ನು ಸಂಧಿ ೧೫ ಪದ್ಯ ೪೧ ರಿಂದ ಸಂಧಿ ೧೬ ಪದ್ಯ ೧೮ರ ವರೆಗೆ ೨೮ ಪದ್ಯಗಳಲ್ಲಿ ಕಾಣಬಹುದು.

ತರುವಾಯ ಭೀಷಣನೆಂಬ ರಕ್ಕಸನ ರಾಜ್ಯಕ್ಕೆ ಕುದುರೆ ಬರುತ್ತದೆ. ಅಲ್ಲಿಯ ರಕ್ಕಸರ ಜೀವನದಿರವು ಭೀಷಣಮನೋಹರವಾಗಿದೆ. ಅಲ್ಲಿ ನಡೆದ ಯುದ್ಧವು ಚಮತ್ಕೃತಿಯುಕ್ತವಾಗಿದ್ದು ಮನೋರಂಜಕವಾಗಿದೆ. ಕೊನೆಗೆ, ಭೀಷಣನು ಯುದ್ಧವನ್ನು ತೊರೆದು, ಮಾಯೆಯಿಂದ ಆಶ್ರಮವನ್ನು ಸೃಜಿಸಿ, ತಾನು ಋಷಿಯಾಗಿ ಅರ್ಜುನನಿಗೆ ವೈರಾಗ್ಯವನ್ನು ಬೋಧಿಸುವನು. ಆದರೆ ಅರ್ಜುನನು ರಕ್ಕಸನ ಮೋಸವನ್ನು ಗುರುತಿಸಿ ಅವನನ್ನು ಗೆಲ್ಲುತ್ತಾನೆ. ಇಲ್ಲಿಗೆ ಪ್ರತಿಮುಖ ಸಂಧಿಯು ಮುಗಿಯುತ್ತದೆ.

ಪ್ರತಿಮುಖ ಸಂಧಿಯು ಅನೇಕ ಕಥಾನಕಗಳ ಪುಂಜವಾಗಿದೆ. ನೀಲಧ್ವಜನ ಕಥೆಯಲ್ಲಿ ಪ್ರವೀರ, ಜ್ವಾಲೆ, ಸ್ವಾಹೆಯರ ಪ್ರಾಸಂಗಿಕ ಕಥಾನಕಗಳು ಅಡಕವಾಗಿವೆ. ಹಂಸಧ್ವಜನ ಕಥಾನಕದಲ್ಲಿ ಸುಧನ್ವ–ಸುರಥ, ಶಂಖ–ಲಿಖಿತ, ನಂದಿ–ಭೃಂಗಿ–ಗರುಡ ಇವರ ಕಥಾನಕಗಳು ಅಡಕವಾಗಿವೆ. ಹೀಗೆ ಒಂದು ಕಥೆಯ ಪದರು ಪದರಿನಲ್ಲಿಯೂ ಒಂದು ರಮ್ಯಕಥಾನಕವು ಹುದುಗಿರುವುದು. ಪ್ರಮೀಳೆಯ ಕಥಾನಕ ಒಂದೇ ಇದ್ದರೂ ಅದರಲ್ಲಿ ವಿಷಕನ್ಯೆಯರ ಗುಣಘಟಕ ಅಡಗಿದೆ. ಅದರಂತೆ ಭೀಷಣನ ಕಥಾನಕದಲ್ಲಿ ರಾಕ್ಷಸ ಜೀವನದ ಅದ್ಭುತಚಿತ್ರಗಳನ್ನು ಕಾಣುವೆವಲ್ಲದೆ, ಯೋಜನಸ್ತನಿ ಮೊದಲಾದ ರಕ್ಕಸಿಯರು ಮತ್ತು ಅವರ ಸಂಭಾಷಣೆ ಒಂದು ಘಟಕವಾಗಿದೆ.

ವಿಂಧ್ಯದ ಮತ್ತು ಪಾರಿಪ್ಲವದ ಕಥಾನಕಗಳು ಕೇವಲ ಯಜ್ಞಾಶ್ವಕ್ಕೆ ಸಂಬಂಧಪಟ್ಟುವು. ಕುದುರೆ ಕಾಲುಕೀಳದಂತಾದ ಕಾರಣದಿಂದಾಗಿ ಸೌಭರಿ ಮುನಿಯ ಮತ್ತು ಆತ ಹೇಳಿದ ಚಂಡಿಯ ಕಥಾನಕಗಳು ಬಂದಿವೆ. ಯಜ್ಞಾಶ್ವ ಹೆಣ್ಣುಗುದುರೆಯಾಗುವುದಕ್ಕೆ ಮತ್ತು ಹುಲಿಯಾಗುವುದಕ್ಕೆ ಕಾರಣವೆಂದು ಪಾರ್ವತಿ ಮತ್ತು ಅಕೃತವ್ರಣರ ಶಾಪದ ಕಥಾನಕಗಳು ಬಂದಿವೆ.

ಅರ್ಜುನನಿಗೆ ಶಾಪದ ಮೂಲಕ ಮರಣದ ಕುತ್ತ ಬಂದಂತೆ ಯಜ್ಞಾಶ್ವಕ್ಕೂ ಶಾಪದ ದೆಸೆಯಿಂದಾಗಿ ರೂಪಭಗ್ನತೆ, ವಿವಿಧ ರೂಪಾವೇಶ ಪ್ರಾಪ್ತವಾಗುತ್ತದೆ. ಈ ಎರಡೂ ಸನ್ನಿವೇಶಗಳು ಯಜ್ಞವು ನಿಂತುಹೋಗುವ ಚಿಹ್ನಗಳಾಗಿವೆ. ಆದರೆ ಎರಡರೊಳಗಿಂದಲೂ ಪಾರಗಾಣಿಸುವವನು ಶ್ರೀಕೃಷ್ಣನೇ. ಹಂಸಧ್ವಜನ ಕಥಾನಕದಲ್ಲಿಯ ಶ್ರೀಕೃಷ್ಣನ ಮಹಿಮೆಯನ್ನು ಇನ್ನು ಮುಂದೆ ನೋಡೋಣ.

## ಶೀಲ—ವಿಧಿ (Character is Destiny)

ವಿಂಧ್ಯಾದ್ರಿಯಿಂದ ತೆರಳಿದ ಯಜ್ಞಾಶ್ವವು ದಕ್ಷಿಣಕ್ಕೆ ಸಾಗಿ ಹಂಸಧ್ವಜನ ಚಂಪಕಾ

ನಗರಿಗೆ ಬರುತ್ತದೆ. ಈ ಚಂಪಕಾನಗರಿಯು ಗಂಗಾನದಿಯ ಬಲದಂಡೆಯ ಮೇಲಿದ್ದು ಬಂಗಾಲದಲ್ಲಿರುವ ಈಗಿನ ಭಾಗಲಪುರವೇ ಎಂದು ಮತವಿದೆ.[1]

'Champaka—same as Champaranya five miles to the north of Rajim in Central India. It was the capital of Raja Hamsadhwaja *(Jaimini Bharat,* Ch. 17*)* ; it is a place of piligrimage to the Budhists and Jains' ಎಂಬ ಮತವೂ ಇದೆ.[2] ಈ ನಗರಿಗೆ ಯಜ್ಞಾಶ್ವವು ಬಂದುದು ಗ್ರೀಷ್ಮಋತುವಿನಲ್ಲಿ. ಈ ಕಥಾಭಾಗವು ಸಂಧಿ ೧೦ ಪದ್ಯ ೩೪ ರಿಂದ ಸಂಧಿ ೧೪ಕ್ಕೆ ಮುಗಿಯುತ್ತದೆ. ಈ ೨೧೦ ಪದ್ಯಗಳಲ್ಲಿ ೩೪ ಪದ್ಯಗಳ ಮುಖಸಂಧಿ, ೨೪ ಪದ್ಯಗಳ ಪ್ರತಿಮುಖಸಂಧಿ, ೧೧೧ ಪದ್ಯಗಳ ಗರ್ಭಸಂಧಿ, ೩೨ ಪದ್ಯಗಳ ಅವಮರ್ಶಸಂಧಿ ಮತ್ತು ೧೦ ಪದ್ಯಗಳ ಉಪಸಂಹೃತಿ (ನಿರ್ವಹಣ) ಸಂಧಿಗಳಾಗಿ ಕಥಾನಕವನ್ನು ವಿಂಗಡಿಸಿ ಕವಿ ಕೊಟ್ಟಿರಬಹುದೆಂದು ತೋರುತ್ತದೆ.

ಹಂಸಧ್ವಜನ ಪರಿವಾರದ ಪರಿಚಯವನ್ನು ಕೊಂಚಮಾಡಿಕೊಳ್ಳುವದು ಪ್ರಸ್ತುತ. ಆತನ ತಮ್ಮಂದಿರು ಏಳು ಜನ: ಧನಬಲ, ಚಂದ್ರಸೇನ, ಚಂದ್ರಕೇತು, ವರಚಂದ್ರ ದೇವ, ವಿದೂರಥ, ಧರ್ಮವಾಹ, ನ್ಯಾಯಮೂರ್ತಿ; ನಾಲ್ವರು ಮಕ್ಕಳು: ಸುದರ್ಶನ ಸುಧನ್ವ, ಸುಮನಸ್ಸು, ಸುರಥ; ಮಂತ್ರಿಗಳು: ಶ್ರದ್ಧಾಳು, ಸುಮತಿ, ಪ್ರಮತಿ; ಪುರೋಹಿತರು: ಶಂಖ, ಲಿಖಿತ.

ಕಾವ್ಯದಲ್ಲಿ ಹೇಳಲಾಗಿರುವ ಹಂಸಧ್ವಜನ ಪರಿವಾರದವರ ಈ ಹೆಸರುಗಳ ಮೇಲಿಂದ ಹಂಸಧ್ವಜನ ಪರಿವಾರವು ಒಳ್ಳೆಯ ಸತ್ತ್ವವುಳ್ಳದಾಗಿತ್ತು ಎಂದು ಹೇಳ ಲಡ್ಡಿಯಿಲ್ಲ. ಕುಂತಳ ದೇಶದ ಅರಸನಿಗೆ ದುಷ್ಟಬುದ್ಧಿ ಎಂಬವನು ಮಂತ್ರಿಯಾಗಿದ್ದುದರಿಂದ ಅರಸನು ಹೆಸರಿಗೆ ಅರಸನಾಗಿ ಉಳಿದನು. ಹಂಸಧ್ವಜನಿಗೆ ಇಲ್ಲಿ ಸುಮತಿ ಪ್ರಮತಿಗಳು ಮಂತ್ರಿಗಳಾಗಿದ್ದುದರಿಂದ ಯಾವ ಕೆಲಸವೂ ಪರಿಪೂರ್ಣ ವಿಚಾರದಿಂದಲೇ ನಿಷ್ಕರ್ಷಿತವಾಗುತ್ತಿತ್ತು. ಅಲ್ಲದೆ ಹಂಸಧ್ವಜನಿಗೆ ಧರ್ಮದಲ್ಲಿ ಅಪಾರ ಶ್ರದ್ಧೆ; ಕರ್ತವ್ಯದಲ್ಲಿ ನಿಷ್ಠುರ ನಿಷ್ಠೆ. ಈ ವಿಷಯದಲ್ಲಿ ಅವನಿಗೆ ಸಲಹೆಗಾರರಾಗಿದ್ದ ಶಂಖ ಲಿಖಿತರು ಅಷ್ಟೇ ಕಠೋರ ಧಾರ್ಮಿಕರು. ಯಾರಿಂದಲೇ ಆಗಲಿ ತನ್ನ ರಾಜ್ಯದಲ್ಲಿ ಕರ್ತವ್ಯಚ್ಯುತಿ, ಧರ್ಮೋಲ್ಲಂಘನೆ ಆದರೆ ರಾಜನು ಅವರಿಗೆ ಕಠೋರ ಶಿಕ್ಷೆಯನ್ನು ವಿಧಿಸುತ್ತಿದ್ದನು. ಸಾಮಾನ್ಯವಾಗಿ ಪಾತ್ರ ಎಂದರೆ ವ್ಯಕ್ತಿ ಎಂದು ನಾವು ಅರ್ಥ ಮಾಡುತ್ತೇವೆ. ಅರಿಸ್ಟಾಟಲನ ಅರ್ಥದಲ್ಲಿ ಪಾತ್ರ ಎಂದರೆ ಶೀಲ. 'ಪಾತ್ರ' ಎಂಬ ಶಬ್ದದಲ್ಲಿ ಇದೇ ಪರ್ಯಾಯಾರ್ಥ ಸೂಚಿತವಾಗುತ್ತದೆ.[3] ಶೀಲವೆಂದರೆ ನಿರ್ದಿಷ್ಟ ವ್ಯಕ್ತಿಯು ನಡೆದುಕೊಳ್ಳುವ

---

1 'ಅಶ್ವಪಥ', ರಾ.ನ. ಮಳಗಿ, ಪು. ೯.

2 *The Geographical Dictionary of Ancient and Mediaeval India*, Nundulal Day, p. 43.

3 'ಅರಿಸ್ಟಾಟಲನ ಕಾವ್ಯಮೀಮಾಂಸೆ', ಎಸ್. ಬಾಲಸುಬ್ರಹ್ಮಣ್ಯಂ, ಪುಟ ೧೪೧.

ವಿಶಿಷ್ಟ ರೀತಿ. ಯೋಗ್ಯವಾಗಿ ನಡೆದುಕೊಳ್ಳುವ ವ್ಯಕ್ತಿ 'ಪಾತ್ರ' ಎನಿಸಿಕೊಳ್ಳುತ್ತದೆ. ಸರಿಯಾಗಿ ನಡೆಯದವನು ಅಪಾತ್ರನಾಗುತ್ತಾನೆ. ಈ ಹಂಸಧ್ವಜನ ಕಥಾನಕದಲ್ಲಿಯ ವ್ಯಕ್ತಿಗಳ ಶೀಲ ಮತ್ತು ಅವರು ಎದುರಿಸಬೇಕಾದ ವಿಧಿ ಎರಡರಲ್ಲಿಯೂ ನಿಕಟವಾದ ಸಂಬಂಧವಿರುವದು.

ಹಂಸಧ್ವಜನು ಕುದುರೆಯನ್ನು ಕಟ್ಟಿದುದು ಶೌರ್ಯದ ಅಹಂಕಾರದಿಂದಲ್ಲ, ಪರಾಕ್ರಮವನ್ನು ತೋರಿಸುವ ಹಂಬಲದಿಂದಲ್ಲ; ಐಹಿಕ ವಿಜಯದ ಆಶೆ ಅವನಿಗಿರಲಿಲ್ಲ.

'ಈ ಧನಂಜಯನ ತುರಗವನೀಗ ಕಟ್ಟಿದೊಡೆ,  
ಮಾಧವಂ ತಾನೆ ಮೈದೋಱುವನೆಮಗೆ, ಕೃಷ್ಣ  
ನೀಧರೆಯೊಳಿರುತಿರ್ದುಮಿನ್ನಗಂ ಕಂಡುದಿಲ್ಲಚ್ಯುತನ ಮೂರುತಿಯನು ।  
ಬಾಧಿಸುವದೀ ದೇಹಮಂ ನರೆತೆರೆಗಳಿನ್ನು,  
ಸಾಧಿಸುವದೇನಸುರರಿಪು ಬಂದು ತನ್ನೊಳ್ ವಿ  
ರೋಧಿಸಿದೊಡಿನಿತಱಿಂದಳಿದೊಡೇನುಳಿದೊಡೇನೆಂದನಾ ನೃಪತಿ ನಗುತ ॥'

—ಸಂ. ೧೦, ಪ. ೩೮

ಎಂಬುದು ಅವನ ವಿಚಾರ. ಇದುವೇ ಕಥಾನಕದ ಬೀಜ ಮಾತು. ಬೀಜವನ್ನು ಇರಿಸುವದು ಉಪಕ್ಷೇಪ ಎಂದು ದಶರೂಪಕಕಾರನು ಮುಖಸಂಧಿಯೊಳಗಿನ ಮೊದಲನೆಯ ಸಂಧ್ಯಂಗದ ಲಕ್ಷಣವನ್ನು ಹೇಳಿದ್ದಾನೆ. 'ಬೀಜನ್ಯಾಸ ಉಪಕ್ಷೇಪಃ' (—೧, ೩೯). ಕೃಷ್ಣದರ್ಶನ ಘಟಿಸುತ್ತದೆ. ಸಾಕು, ಯುದ್ಧದಲ್ಲಿ ಮರಣವನ್ನೈದಿದರೂ ಸರಿಯೆ ಎಂಬ ದೃಢಭಕ್ತಿಯುಳ್ಳವನಾಗಿದ್ದಾನೆ ಹಂಸಧ್ವಜ. ಮಂತ್ರಿಗಳಾದ ಸುಮತಿ, ಪ್ರಮತಿ ಮತ್ತು ಇತರ ಪರಿವಾರದೊಂದಿಗೆ ಪರ್ಯಾಲೋಚಿಸಿ ಕೃಷ್ಣದರ್ಶನಕ್ಕಾಗಿ ಯುದ್ಧವನ್ನು ನಿಶ್ಚಯಿಸುತ್ತಾನೆ. ಇದು ಕಥಾಬೀಜದಲ್ಲಾದ ಹೆಚ್ಚಳವು. ಇದು ಪರಿಕ್ರಿಯೆಯ ಲಕ್ಷಣ : 'ತದ್ಬಾಹುಲ್ಯಂ ಪರಿಕ್ರಿಯಾ.'[1] ಹಂಸಧ್ವಜನಲ್ಲಿ ಪುರೋಹಿತರಾಗಿದ್ದ ಶಂಖ ಲಿಖಿತರ ಹೇಳಿಕೆಯ ಪ್ರಕಾರ 'ಪೊಱಮಡುವ ದುಂದುಭಿಯ ಸನ್ನೆಯ ಮಹಾಶಬ್ದಮಂ ಕೇಳ್ದು ಹಿಂದುಳಿದ ಭಟನಂ ಕಾಯ್ದುಕ್ಕುವ ಎಣ್ಣೆಗೊಪ್ಪರಿಗೆಯಲ್ಲಿ ಹಾಕಿಸಬೇಕು' ಎಂಬ ಕಟ್ಟಪ್ಪಣೆಯನ್ನು ಹಂಸಧ್ವಜನು ಸಾರಿಸುತ್ತಾನೆ. ನ್ಯಾಯನಿಷ್ಠುರನಾದ ದೊರೆಯ ಈ ಆಜ್ಞೆಯಂತಿರಲಿ, ಅವನ ಸೈನಿಕರಿಗೂ ಕೃಷ್ಣದರ್ಶನದ ಅಪೇಕ್ಷೆ- ಉತ್ಕಟವಾಗಿದೆ. ಅವರೂ :

'ಕಂಸಾರಿ ಬಾರದೆ ನರಂಗೆ ಸೋಲ್ವವನಲ್ಲ  
ಹಂಸಧ್ವಜಂ ಧುರದೊಳಿನ್ನು ಕೃಷ್ಣನ ದರ್ಶ  
ನಂ ಸುಲಭಮೆಲ್ಲರ್ಗೆ, ಸಂದೇಹಮಿಲ್ಲ...'

ಎಂಬ ಪರಿತೋಷದಿಂದ ಸಮರಕ್ಕೆ ಹೊರಡುತ್ತಾರೆ. ಪ್ರಯೋಜನಗಳ ಸರಿಯಾದ ನಿಶ್ಚಯಕ್ಕೆ 'ಯುಕ್ತಿ' ಎಂದು ಹೆಸರಿಸಲಾಗಿದೆ. 'ಸಂಪ್ರಧಾರಣಮರ್ಥಾನಾಂಯುಕ್ತಿಃ.'[2]

---

[1] 'ದಶರೂಪಕ', ೧-೪೦. [2] ಅದೇ, ೧-೪೩.

ಹೀಗೆ ರಣರಂಗಕ್ಕೆ ಹೊರಟ ಸುಭಟರನ್ನು ಅವರ ಸತಿಯರು ಆದರಿಸಿ ಕಳಿಸುತ್ತಾರೆ. ಆಗ ಆ ಸತಿಯರಲ್ಲಿ ನಡೆದ ಸಂವಾದವೂ ಶ್ಲೇಷೆಯಿಂದ ಕೃಷ್ಣಭಕ್ತಿಯನ್ನೇ ಸೂಚಿಸುತ್ತದೆ. ಉದಾ : 'ಕೃಷ್ಣಾಂತವಿಲ್ಲದ ವದನ ಮನ್ನಿಸಲ್ ಬಿಲಕೆ ಸರಿ.'

ಸುಧನ್ವನು ತಾಯಿಯನ್ನು ಯುದ್ಧಕ್ಕಾಗಿ ಬೀಳ್ಕೊಳ್ಳುವಾಗ ಇಬ್ಬರಲ್ಲಿಯೂ ನಡೆದ ಮಾತುಕತೆ ವೀರೋಚಿತವಾಗಿರುವುದು. ಅಲ್ಲದೆ ಆ ವೀರಮಾತೆಗೆ ಪುತ್ರಮೋಹಕ್ಕಿಂತ ಕೃಷ್ಣಭಕ್ತಿ ಮಿಗಿಲಾಗಿದೆ. 'ಅವನಂ (ಕೃಷ್ಣನಂ) ಕಂಡಬಳಿಕ ಹಿಮ್ಮೆಟ್ಟದಿರ್, ಪೋಗು' ಎಂದು ಮಗನನ್ನು ಕಳಿಸಿಕೊಡುತ್ತಾಳೆ. ಈ ಅಸಾಮಾನ್ಯವಾದ, ಅನಿರೀಕ್ಷಿತವಾದ ಮಾತು ಅವಳ ಅಸದೃಶವಾದ ಸತ್ವವನ್ನು ವ್ಯಕ್ತಪಡಿಸುತ್ತದೆ. ಇಂತಹ ವಿಶೇಷ ರೀತಿಯ ಮಾತಿಗೆ ಪುಷ್ಪ ಎಂದೆನ್ನುತ್ತಾರೆ : 'ಪುಷ್ಪಂ ವಾಕ್ಯಂ ವಿಶೇಷವತ್.'[1] ಆಮೇಲೆ ಸುಧನ್ವನು ಕುವಲೆ ಎಂಬ ತನ್ನ ಸೋದರಿಯನ್ನು ಭೆಟ್ಟಿಯಾಗುವನು. ಅವಳು ಕೂಡ ತವರು ಮನೆ, ಅತ್ತೆಯ ಮನೆ–ಎರಡು ಕಡೆಯ ಜನಗಳೂ ತನ್ನನ್ನು ಜರೆಯದ ರೀತಿಯಲ್ಲಿ ಯುದ್ಧವನ್ನು ನಿರ್ವಹಿಸಿ 'ವನಜಾಕ್ಷನಂ ಮೆಚ್ಚಿಸಾಹವದೊಳು' ಎಂದು ಹೇಳಿ 'ಚಂದನದ ನುಣ್ಪಿಟ್ಟು ಕಪ್ಪುರ ವೀಳೆಯಂಗೊಟ್ಟು ಸೇಸೆದಳಿದು ಕಳುಹಿದಳು.' ಆಮೇಲೆ ಸುಧನ್ವನು ತನ್ನ ಪತ್ನಿ ಪ್ರಭಾವತಿಯಿಂದ ಬೀಳ್ಕೊಳ್ಳಲು ಹೋಗುತ್ತಾನೆ. ಆಗವಳು ಯುದ್ಧಕ್ಕೆ ಹೋಗುವವನಿಗೆ ಸಂತಾನವಿರಬೇಕೆಂದು ಧರ್ಮಸೂಕ್ಷ್ಮದ ಆಕ್ಷೇಪವನ್ನು ಎತ್ತುತ್ತಾಳೆ :

ಯುಕ್ತಮಲ್ಲದು ರಮಣ ನಿನಗೆ, ಕೇಳ್, ಕಾದುವಾ
ಸಕ್ತಿಯಿಂ ಚಕ್ರಿಗಭಿಮುಖನಾದ ಬಳಿಕ, ಅಲ್ಲಿ
ಮುಕ್ತಿಯಲ್ಲದೆ ಬೇಱೆ ಜಯಮುಂಟೆ ? ಜನಿಸದು ವಿವೇಕ ಸಂತತಿ ನಿನ್ನೊಳು !
ವ್ಯಕ್ತದಿಂ ತನಗೊಂದಪತ್ಯಮುದಯಿಸದೊಡೆ ವಿ
ರಕ್ತಿಯಿಂ ಕೈವಲ್ಯಮಾದಪುದೆ ? ಸಮರಕೆ ಉ
ದ್ಯುಕ್ತನಪ್ಪಾತಂಗೆ ಸಂತಾನಮಿಲ್ಲದಿರಲಪ್ಪುದೇ?

ಹೇಳು ಎಂದಳು (ಸಂ. ೧೧, ಪ. ೧೩). ಈ ಧರ್ಮಕಾರಣಕ್ಕಾಗಿ ಅವಳು ರತಿಯನ್ನು ಅಪೇಕ್ಷಿಸುವಳು. ರತಿಯ ಇಚ್ಛೆಗೆ ವಿಲಾಸ ಎಂದು ಹೆಸರು : 'ರತ್ಯರ್ಥೇಹಾ ವಿಲಾಸಃ ಸ್ಯಾತ್.'[2] ಆಗ ಸತಿ–ಪತಿಯರಲ್ಲಿ ಈ ಬಗ್ಗೆ ವಾದ ನಡೆಯುತ್ತದೆ. ಎಲ್ಲ ವೀರರೂ ಯುದ್ಧಕ್ಕಾಗಿ ಸೇರಿದ್ದಾರೆ; ತಂದೆ ಕೊಟ್ಟ ಸಮಯ ಸಮೀಪಿಸಿದೆ. ಇಂಥ ಸಮಯದಲ್ಲಿ ರತಿಗೆ ಸ್ಥಾನವಿಲ್ಲ. 'ಮುಂದೆ ಬೆದೆಗಾಲವುಂಟು. ಗಮನಕನುಕೂಲೆಯಾಗೆಂದು ನಲ್ಲೆಯ ಗಲ್ಲವಿಡಿದು ಮುದ್ದುಗೈದು' ಹೊರಡಲು ಸುಧನ್ವನು ಹವಣಿಸುತ್ತಾನೆ. ಆಗ ಪ್ರಭಾವತಿ ಮಳೆಗಳನ್ನು ಎಣಿಸಿ 'ತುದಿ ವಿಶಾಖೆಗೆ ಬಂದಿದೆ, ಇನ್ನು ಅಂಕುರಿಸಲರಿಯದು' ಎಂದು ಹೇಳಿದಾಗ ಸುಧನ್ವನು ಪೂರ್ವಾಪರವನ್ನು ವಿಚಾರಿಸಿ 'ಧರ್ಮಪದ್ಧತಿಯನ್ನು ನೋಡಲಾಗಿ ಇಂದು ಇವಳನ್ನು ಮೀರುವದು ಮತವಲ್ಲ' ಎಂಬ ನಿರ್ಣಯಕ್ಕೆ ಬರುತ್ತಾನೆ.

---

[1] 'ದಶರೂಪಕ', ೧–೬೨. [2] ಅದೇ, ೧–೫೩.

ಈ ಬಗೆಯ ಉತ್ತರ ಪ್ರತ್ಯುತ್ತರ ನಡೆಯುವುದಕ್ಕೆ ಪ್ರಗಮನ ಎನ್ನುತ್ತಾರೆ : 'ಉತ್ತರಾ ವಾಕ್ ಪ್ರಗಮನಂ.'[1] ಕೊನೆಗೆ ಅವರು ರತಿಕ್ರೀಡೆಯಲ್ಲಿ ತೊಡಗಿ, 'ಸುರತದ ನವರಸವನ್ನು ಉರೆ ಸವಿದು ಸೊಕ್ಕಿ, ಅವರುಗಳು ಅನ್ಯೋನ್ಯ ಭಾವವನ್ನು ಮರೆದರು' ಎಂದು ಕವಿ ಹೇಳುತ್ತಾನೆ. ಪ್ರಭಾವತಿ ತಣಿದಳೆಂಬುದನ್ನು ಸಂ. ೧೧, ಪ. ೨೫ರಲ್ಲಿ ವರ್ಣಿಸಲಾಗಿದೆ. ಇದಕ್ಕೆ ಶಮ ಎನ್ನುತ್ತಾರೆ. 'ತಚ್ಛಮಃ ಶಮಃ.'[2] ಈ ಹೊತ್ತಿಗೆ ಯುದ್ಧ ಸನ್ನಾಹದಿಂದ ಊರಹೊರಗೆ ನೆರೆದಿದ್ದ ಸಮಸ್ತ ಸೈನ್ಯದೊಳಗೆ ಹಂಸಧ್ವಜನು ಸುಧನ್ವನನ್ನೇ ಕಾಣಲಿಲ್ಲ. ಆಗ ಅವನನ್ನು ಹಿಡಿತರಲು ಕಡುಗಡಿಶರಾದ ಚರರನ್ನು ಅಟ್ಟಿದನು. ಸಂತೋಷದಿಂದ ನಗುತ್ತಿರುವ ಆ ರಾಜಪುತ್ರನನ್ನು ಅವರು 'ಕದ್ದಾತನಂ ಕೊಂಡು ಬಪ್ಪಂತೆ' ನಿಷ್ಠುರತನದಿಂದ ಹಿಡಿದು ತಂದರು. ಸುಧನ್ವನಿಗೆ ತಡವಾದುದರ ಕಾರಣವನ್ನು ಹಂಸಧ್ವಜನು ಕೇಳಿ ತಿಳಿದುಕೊಳ್ಳುವನು. ತನ್ನ ಕಟ್ಟಳೆ, ಅಪರಾಧಿ ಮಗ, ಧರ್ಮ ಸೂಕ್ಷ್ಮ, ರಾಜದಂಡ ಈ ತಿರುಗಣಿಯಲ್ಲಿ ಹಂಸಧ್ವಜನು ಸಿಕ್ಕಿಕೊಳ್ಳುತ್ತಾನೆ. ಇವನಿಗೆ ಯಾವ ಶಿಕ್ಷೆ ಎಂದು ಯೋಚಿಸುತ್ತಾನೆ—ಶಂಖ ಲಿಖಿತರೊಡನೆ. ಅವರು,—ಕಟ್ಟಳೆ ಎಂದರೆ ಕಟ್ಟಳೆ, ಅವರ ದೃಷ್ಟಿಯಲ್ಲಿ—ಹೇಳುತ್ತಾರೆ :

................'ಎಲೆ ಹಂಸಕೇತು ನೀನೇನನಾ
ಲೋಚಿಸುವೆ? ನಿನ್ನ ತನಯನ ಮೇಲಾಸೆಯಿಂ ಭಾಷೆತಪ್ಪಿದೆಯಾದೊಡೆ,
ಈ ಚಂಪಕಾಪುರದೊಳಿಹುದಿಲ್ಲ ನಾವು ಸ
ತ್ಯಾಚರಣೆಗಾಗಿ ರುಕ್ಮಾಂಗದ ಹರಿಶ್ಚಂದ್ರ
ಭೂಚಕ್ರಪಾಲರಾತ್ಮಜರ ಮೊಗ ನೋಡಿದರೆ?'

ಈ ನಿರ್ಧಾರದ ನುಡಿಗೆ ಒಪ್ಪಿ, ಸುಧನ್ವನನ್ನು

'ಈ ಖಳನಂ ಕಟಾಹಪೂರಿತ ತಪ್ತ ತೈಲದೊಳ್ ಮುಳುಗಿಸು'

ಎಂದು ಮಂತ್ರಿ ಸುಮತಿಗೆ ಆಜ್ಞಾಪಿಸುತ್ತಾನೆ ರಾಜ. ಈ ಬಗೆಯ ಕಠೋರ ನಿಷ್ಠುರ ಮಾತಿಗೆ ವಜ್ರ ಎನ್ನುತ್ತಾರೆ. 'ವಜ್ರಂ ಪ್ರತ್ಯಕ್ಷ ನಿಷ್ಠುರಂ.'[3] ರಾಜಾಜ್ಞೆಯನ್ನು ಮಂತ್ರಿ ನಡೆಯಿಸಲೇಬೇಕು. ಆ ಸುಕುಮಾರನನ್ನು ಈ ಘೋರ ಶಿಕ್ಷೆಗೆ ಗುರಿಪಡಿಸುವದಕ್ಕೆ ಅವನು ಕಳವಳಿಸಿ ಮರುಗುತ್ತಾನೆ. ಆಗ ಅವನನ್ನು ಸುಧನ್ವನೇ ಸಂತಯಿಸುತ್ತಾನೆ.

'ಅಂಜಬೇಡೆಲೆ ಸುಮತಿ, ನೀನೀಗಳಿದಕೆ, ಮನ
ಮಂ ಜಱಿವಿಡುವನಲ್ಲ ತಾಂ ; ಇನ್ನೆಗಂ ಧರ್ಮ
ಮಂ ಜಡಿದು ನಡೆದುದಿಲ್ಲ, ಆಹವದೊಳಹಿತರೊಳ್ ಪೊಯ್ದಾಡಿ ಮಡಿವ ಒಡಲಿದು.'
೧೧–೩೩

ಎಂದು ಮೊದಲಾಗಿ ಸಮಾಧಾನದ ಮಾತನ್ನು ಹೇಳಿದಾಗ ಸುಮತಿ ಸುಧನ್ವನನ್ನು ಕಟಾಹದ ಕುದಿಯುವ ಎಣ್ಣೆಯಲ್ಲಿ ದೂಡಿಸುತ್ತಾನೆ. ಆಗ ಅಲ್ಲಿ ನೆರೆದಿದ್ದ ಎಲ್ಲಾ ವರ್ಣಗಳ ಜನರೂ ಭೋಯೆಂದು ಮರುಗಿ 'ನೆರೆ ಸುಡಲಿ ಶಂಖಲಿಖಿತರೆಂಬೀಯಮೋಪರೇಕೆ

1 'ದಶರೂಪಕ', ೧–೫೯. 2 ಅದೇ, ೧–೫೬. 3 ಅದೇ, ೧–೬೪, ಪುಟ ೩೬.

ಜನಿಸಿದರೊ ಭೂಸುರರೊಳು?' ಎಂದು ಗೋಳಿಡುವರು. ಹೀಗೆ ನಾಲ್ಕು ವರ್ಣದವರು ಒತ್ತಟ್ಟಿಗೆ ಕೂಡಿದಾಗ ವರ್ಣಸಂಹಾರ ಲಕ್ಷಣವಾಗುತ್ತದೆ. 'ಚತುರ್ವರ್ಣ್ಯೋಪಗಮನಂ ವರ್ಣಸಂಹಾರ ಇಷ್ಯತೇ.'[1] ಇಲ್ಲಿಗೆ ಮುಖ ಪ್ರತಿಮುಖ ಸಂಧಿಗಳು ಕೊನೆಗೊಳ್ಳುತ್ತದೆ.

ಗರ್ಭ : ಸುಧನ್ವನು 'ಜಯ ಜಯ ಜನಾರ್ದನ ಮುಕುಂದ' ಇತ್ಯಾದಿಯಾಗಿ ಕೃಷ್ಣನಾಮ ಸ್ಮರಣೆ ಮಾಡಲು ಕುದಿಯುತ್ತಿದ್ದ ಕಟಾಹದ ತೈಲವು 'ಸೊಗಯಿಸುವ ಬಾವನ್ನದಣ್ಪಾಗಿ, ಸುಧನ್ವನ ಮುಖಾಂಬುಜವು ಇನೋದಯದ ಕಮಲದಂತೆ ಶೋಭಾಯಮಾನ'ವಾಗುತ್ತದೆ. ಇದು ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡುತ್ತದೆ. ಆದರೆ ಲಿಖಿತನು 'ಇವನು ಅಗ್ನಿಸ್ತಂಭವನ್ನು ಬಲ್ಲನು' ಎಂದು ವಿತರ್ಕದಿಂದ ಆಕ್ಷೇಪಿಸಿ, ಎಳೆ ನೀರಕಾಯಿಗಳನ್ನು ತರಿಸಿ ತಪ್ತತೈಲದಲ್ಲಿ ಹಾಕಿಸಿ ಪರೀಕ್ಷಿಸುತ್ತಾನೆ. ಆಗ ತೆಂಗಿನಕಾಯಿ ಒಡೆದು ಸಿಡಿದು, ಹೋಳುಗಳು ಲಿಖಿತನ ಗಂಡಸ್ಥಳಕ್ಕೆ ಅಪ್ಪಳಿಸುತ್ತವೆ. ಒಬ್ಬರ ಮೇಲೆ ಆರೋಪಮಾಡಿ ವಿತರ್ಕ ಮಾಡುವುದಕ್ಕೆ ಅಭೂತಾಹರಣ ಮತ್ತು ರೂಪ ಎನ್ನುತ್ತಾರೆ. 'ಅಭೂತಾಹರಣಂ ಛದ್ಮ.'[2] 'ರೂಪಂ ವಿತರ್ಕವದ್ವಾಕ್ಯಂ.'[3] ಆದರೆ ಅಲ್ಲಿ ನೆರೆದಿದ್ದ ಜನಕ್ಕೆ ಗೊತ್ತು ಸುಧನ್ವನು ತಪ್ತ ತೈಲದಲ್ಲಿ ಆನಂದದಿಂದ ನಲಿಯುತ್ತಿದ್ದುದರ ಕಾರಣ. ಅವರು ಪುಂಡರೀಕಾಕ್ಷನನ್ನು ಸ್ತುತಿಸುತ್ತಾರೆ. ಪುಂಡರೀಕಾಕ್ಷನ ನಾಮಸ್ಮರಣೆಯೇ ಸುಧನ್ವನಿಗೆ ರಕ್ಷಾಕವಚವೆಂದು ಲಿಖಿತನಿಗೆ ಮನವರಿಕೆಯಾದಾಗ ಅವನು ಪಶ್ಚಾತ್ತಾಪದಿಂದ ಆ ಕಟಾಹದಲ್ಲಿ ಹಾರಿಕೊಳ್ಳುತ್ತಾನೆ. ಆಗ ಲಿಖಿತನಿಗೂ ಆ ಕಾದೆಣ್ಣೆ ತಂಪಾಗಿ ಆನಂದವನ್ನೇ ಕೊಡುತ್ತದೆ. ಅದಕ್ಕೆ ಕವಿ 'ಹರಿಭಕ್ತರಂ ಸಾರ್ದಂಗೆ ತಾಪಮಿರ್ದಪುದೆ?' ಎಂದು ಮಾರ್ಮಿಕವಾಗಿ ಇದ್ದ ಮಾತನ್ನು ಹೇಳುತ್ತಾನೆ. ಇಂತಹ ಮಾತಿಗೆ ಮಾರ್ಗ ಎಂದು ಹೆಸರಿಸಲಾಗಿದೆ. 'ಮಾರ್ಗಸ್ತತ್ತ್ವಾರ್ಥಕೀರ್ತನಂ.'[4] ಆಮೇಲೆ ಹಂಸಧ್ವಜನು ಸುತ-ಪುರೋಹಿತರನ್ನು ಕಟಾಹದಿಂದ ಹೊರಕ್ಕೆ ತೆಗೆಯಿಸಿ ಆದರಿಸುತ್ತಾನೆ. ಸುಧನ್ವನು 'ಲಕ್ಷ್ಮೀಪತಿಯನ್ನು ಕಂಡಪೆನೆಂಬ ಹರ್ಷದಿಂದ' ಅಲಂಕರಿಸಿಕೊಂಡು ಯುದ್ಧಕ್ಕೆ ಹೊರಡುತ್ತಾನೆ.

ಸಂಧಿ ೧೨ ಮತ್ತು ೧೩ರಲ್ಲಿ ಪಾಂಡವ ಪಕ್ಷದ ಅನೇಕ ವೀರರೊಡನಾದ ಸುಧನ್ವನ ಸಮರವನ್ನು ಕವಿ ವರ್ಣಿಸಿದ್ದಾನೆ. ಸಂಧಿ ೧೩, ಪದ್ಯ ೨೦ರಲ್ಲಿ ಸುಧಾನ್ವಾರ್ಜುನರ ಯುದ್ಧದಲ್ಲಿ ಅರ್ಜುನನಿಗೊದಗಿದ ಚಿಂತಾಜನಕ ಸ್ಥಿತಿ ವರ್ಣಿತವಾಗಿದೆ. ಆಗ ಅರ್ಜುನನು ಕೃಷ್ಣನನ್ನು ಧ್ಯಾನಿಸುತ್ತಾನೆ (೧೩-೨೧). ಹಸ್ತಿನಾವತಿಯಲ್ಲಿದ್ದ ಶ್ರೀಕೃಷ್ಣನಿಗೆ ಇದರ ಅರಿಕೆಯಾಗಿ ಕಿರೀಟಿಗೆ ಆಹವ ತೆರಳದೆಂದು ಗರುಡನನ್ನೇರಿ 'ಆನತರ ನೆನಹಿಗೆ ನಿತ್ಯನೆಂಬುದನ್ನು ತೋರುವಂತೆ' ಯುದ್ಧಭೂಮಿಗೆ ಕೃಷ್ಣನು ಬರುತ್ತಾನೆ.

'ಕಶ್ಯಪ ವಶಿಷ್ಠಾದಿ ಪರಮ ಋಷಿಗಳು ಆ
ಲಸ್ಯಮಿಲ್ಲದೆ ಮಾಡುವ ಧ್ಯಾನಕೊಮ್ಮೆಯುಂ

---

1 'ದಶರೂಪಕ', ೧-೬೫. 2 ಅದೇ, ೧-೬೮. 3 ಅದೇ, ೧-೭೦
4 ಅದೇ, ೧-೬೯.

ದೃಶ್ಯಮಿಲ್ಲದ ಚಿನ್ಮಯಾನಂದ ರೂಪನೀ ಕುಂತೀಕುಮಾರಕರ್ಗೆ ;
ವಶ್ಯನಾಗಿಹನೆಂತೊ? ಶಿವ ಶಿವಾ ನೀಲ ಮೇ
ಘಶ್ಯಾಮಲನ ಲೀಲೆ ಪೊಸತು!'

ಎಂದು ಸುರರು ಉಲಿಯುತ್ತಾರೆ. ಕೃಷ್ಣನು ಮೈದುನನಾದ ಅರ್ಜುನನ ರಥಕ್ಕೆ ಇಳಿದು ಬಂದು ಸಾರಥಿಯಾಗಲು ಅರ್ಜುನನಿಗೆ ಕಾದುವ ಹುರುಪು ಉಂಟಾಗುತ್ತದೆ. ಸುಧನ್ವನು:

........................................'ಅನು
ದಿನಮುಂತರಂಗದೊಳ್ ಧ್ಯಾನಿಸುವ ನಿರ್ಮಲಾ
ತ್ಮನ ದಿವ್ಯ ಮೂರ್ತಿಯಂ ಪಾರ್ಥನ ರಥಾಗ್ರದೊಳ್ಕಂಡು ಪುಳಕೋದ್ಗಮದೊಳು ॥
ತನುವನೀಡಾಡಿ ಸಾಷ್ಟಾಂಗ ಪ್ರಣಾಮದಿಂ
ಮನದೊಳಗೆ ಹಿಗ್ಗಿ ತನ್ನಾಳ್ತನಕೆ ಸಾಕಿನ್ನು
ನೆನೆದೆಣಿಕೆ ಕೈಸಾರ್ದುದೆಂದು ಕಣ್ದಣಿಯದಚ್ಯುತನಂ ನಿರೀಕ್ಷಿಸಿದನು ॥ (೧೩-೨೫)

ಮನದೆಣಿಕೆ ಕೈಸಾರ್ದುದಕ್ಕೆ ಕ್ರಮ ಲಕ್ಷಣ ಎನ್ನುತ್ತಾರೆ. 'ಕ್ರಮಃ ಸಂಚಿಂತ್ಯಮಾನಾಪ್ತಿಃ.'[1] ಇಷ್ಟೇ ಅಲ್ಲದೆ ಸುಧನ್ವನು ಆನಂದಭಕ್ತಿಯಿಂದ ಮೂರು ಪದ್ಯಗಳಲ್ಲಿ ಕೃಷ್ಣನನ್ನು ಸ್ತುತಿಸುತ್ತಾನೆ (ಸಂ. ೧೩, ಪ. ೨೬-೨೭-೨೮). ಆಮೇಲೆ ಅರ್ಜುನ-ಸುಧನ್ವರಲ್ಲಿ ಅದ್ಭುತವಾದ ಯುದ್ಧ ನಡೆಯುತ್ತದೆ. ಅರ್ಜುನನ ಬಾಣದಿಂದ ಸುಧನ್ವನ ರುಂಡ ಧರೆಗೆ ಬೀಳಬೇಕಾದರೆ ಶ್ರೀಕೃಷ್ಣನು ತನ್ನ ರಾಮಾವತಾರದ ಮತ್ತು ಕೃಷ್ಣಾವತಾರದ ಪುಣ್ಯಸರ್ವಸ್ವವನ್ನೂ ಅದಕ್ಕೆ ಕೊಡಬೇಕಾಗುತ್ತದೆ. ಅಲ್ಲದೆ ಕೊನೆಗೆ ತ್ರಿಮೂರ್ತಿಗಳ ಶಕ್ತಿಯನ್ನೂ ಆವಾಹನ ಮಾಡಬೇಕಾಗುತ್ತದೆ. ಆಗ ಸುಧನ್ವನ ತಲೆ ಬೀಳುತ್ತದೆ, ಕೃಷ್ಣನ ಪಾದಗಳೆಡೆಯಲ್ಲಿ (ಸಂ. ೧೩, ಪ. ೧೮); ಅವನದನ್ನು ಹಂಸಧ್ವಜನತ್ತ ಬಿಸುಡುತ್ತಾನೆ. ಹಂಸಧ್ವಜನು ಅದನ್ನೆತ್ತಿಕೊಂಡು ಪರಿಪರಿಯಾಗಿ ದುಃಖಿಸುತ್ತಾನೆ. ಇಲ್ಲಿಗೆ ಗರ್ಭಸಂಧಿ ಮುಗಿಯುತ್ತದೆ.

**ಅವಮರ್ಶ ಸಂಧಿ :** ಹಂಸಧ್ವಜನು ದುಃಖದಲ್ಲಿ 'ಸುಧನ್ವ, ಕಾದೆಣ್ಣೆಯೊಳ್ದೀಹಮಂ ಕಾದ ಕೃಷ್ಣಂ ಕಾದಲಹಿತನೇಕಾದನೈ ನಿನಗೆ?' ಎಂದು ಕೃಷ್ಣನ ಗುಣದೋಷಗಳನ್ನೆತ್ತಿ ಆಡುತ್ತಾನೆ. ಇದಕ್ಕೆ ಅಪವಾದ ಎನ್ನುತ್ತಾರೆ. 'ದೋಷ ಪ್ರಖ್ಯಾಽಪವಾದಃ ಸ್ಯಾತ್.'[2] ಹಂಸಧ್ವಜನ ದುಃಖವನ್ನು ಕಂಡ ಸುರಥನು ರೋಷದಿಂದ ನುಡಿಯುತ್ತಾನೆ :

'ತಾತ, ಚಿತ್ತೈಸಿದಱಿಂದೊಳೇನಹುದು? ತಿರುಗಿ ಬಿಸು
ಡೀ ತಲೆಯ ಅಸುರಾಂತಕನ ಚರಣದೆಡೆಗೆ. ಸಹ
ಜಾತನಂ ಕೊಂದಾತನಂ ಕೊಲ್ವೆನು!'

ಈ ಬಗೆಯ ರೋಷದ ಮಾತಿಗೆ ಸಂಫೇಟ ಎಂದು ಹೆಸರು. 'ಸಂಫೇಟೋರೋಷಭಾಷಣಂ.'[3] ಇಲ್ಲಿಗೆ ಅವಮರ್ಶಸಂಧಿ ಮುಗಿಯುತ್ತದೆ.

---

1 'ದಶರೂಪಕ', ೧-೭೨, ಪುಟ ೪೦. 2 ಅದೇ, ೧-೮೩, ಪುಟ ೪೮.
3 ಅದೇ, ೧-೮೪, ಪುಟ ೪೯.

ನಿರ್ವಹಣ : ಸುರಥನು 'ಸೊಕ್ಕಾನೆ ಪೊಕ್ಕು ಕಾಸಾರಮಂ ಕಲಕುವಂತೆ' ಯುದ್ಧ ಮಾಡುತ್ತಾನೆ. ಕೃಷ್ಣನ ಸಲಹೆಯಂತೆ ಅರ್ಜುನನು ದಿವ್ಯಾಸ್ತ್ರಗಳಿಂದ ಅವನ ತೊಡೆ, ತೋಳುಗಳನ್ನು ಕಡಿಯುತ್ತಾನೆ. ಆದರೂ ಸುರಥನ ದೇಹವು 'ಭುಜಗೇಂದ್ರ ನಂದದಿಂ ಧರೆಯೊಳ್ ಪೊರಳ್ದು ಉರುಳ್ದು ಪೊಯ್ದುದು ಉಱಿಕೊಂದುದು ಆಕ್ಷಣಂ ಪರಬಲವನು.' ಕೊನೆಗೆ ಕೃಷ್ಣನ ಅಪ್ಪಣೆಯಂತೆ ಅರ್ಜುನನು ಅವನ ತಲೆಯನ್ನು ಹಾರಿಸಿದನು. ಆಗ ಆ ರುಂಡವು ಜಿಗಿದು ಬಂದು ಅರ್ಜುನನ ಎದೆಗೆ ಬಡಿಯಲು ಅವನು ಮೈಮರೆದು ರಥದಿಂದ ಬಿದ್ದುದು ಆಶ್ಚರ್ಯವೇ ಸರಿ. ಅರ್ಜುನನು ಯುದ್ಧಾವಸರದಲ್ಲಿ ಸುರಥನಿಗೆ 'ತಲೆ ಬಲ್ಲಿತ್ತೆಂದು ಕಲ್ಲ ಪಾಯ್ದೆಲಾ' ಎಂದು ಜರಿದು ಆಡಿರುತ್ತಾನೆ. ಅದಕ್ಕೆ ಪ್ರತ್ಯುತ್ತರವೆಂಬಂತೆ ಅದು ಅವನ ಎದೆಗೆ ಅಪ್ಪಳಿಸುತ್ತದೆ. ಸುರಥನ ರುಂಡವನ್ನು ಕೃಷ್ಣನು ಪ್ರಯಾಗದಲ್ಲಿ ಗಂಗೆಯೊಳಗೆ ಹಾಯ್ಕೆಂದು ಗರುಡನಿಗೆ ವಿಧಿಸುತ್ತಾನೆ. ಶಿವನು 'ಸುಧನ್ವನ ರುಂಡ ತನ್ನ ರುಂಡಮಾಲೆಯಲ್ಲಿದೆ, ಅದರ ಜೊತೆಗೆ ಸುರಥನದೂ ಇರಲಿ, ಕೊಂಡು ಬಾ' ಎಂದು ಭೃಂಗಿಯನ್ನು ಕಳಿಸುತ್ತಾನೆ. ಆ ಕೆಲಸ ಅವನಿಗೆ ಅಸಾಧ್ಯ ವಾಗುತ್ತದೆ. ಶಿವನು ನಂದಿಯನ್ನು ಕಳಿಸುತ್ತಾನೆ. ಗರುಡ–ನಂದಿಗಳಲ್ಲಿ ಸೆಣಸಾಟ ನಡೆಯುತ್ತದೆ. ಆದರೆ ಗರುಡ ತನ್ನ ಒಡೆಯನ ಆಜ್ಞೆಯ ಪ್ರಕಾರ ಅಂತಿಂತು ಆ ರುಂಡ ವನ್ನು ಪ್ರಯಾಗದಲ್ಲಿ ಬಿಸುಟರೂ ನಂದಿ ಅದನ್ನು ತಂದು ಶಿವನಿಗೆ ಒಪ್ಪಿಸುತ್ತಾನೆ. ಸುಧನ್ವ–ಸುರಥರನ್ನು ಹರಿಹರ ಇಬ್ಬರೂ ಮೆಚ್ಚಿದ್ದರು ಎಂಬುದು ಇಲ್ಲಿ ಸ್ಪಷ್ಟ ವಾಗುತ್ತದೆ.

ಈ ಎಲ್ಲ ಘಟನೆಗಳನ್ನು ನೋಡಿದ ಹಂಸಧ್ವಜನು ಶೋಕವನ್ನು ಬಿಟ್ಟು ಯುದ್ಧವನ್ನು ನಿಶ್ಚಯಿಸುತ್ತಾನೆ (ಸಂ. ೧೪, ಪ. ೨೪).

> 'ಚಿತ್ತದೊಳ್ ಕಡುನೊಂದು ಅಳಲ್ದು ಮಿಗೆ ರಣಮಂ ನಿಶ್ಚೈಸಿ ರೋಷದಿಂದ
> ತತ್ತ ರಣದೊಳ್ ಕಾದಿ ಮುರಹರಂ ಮೆಚ್ಚಲ್ ಅಂ
> ಉತ್ತಮದ ಉತ್ತಮದ ಗತಿವಡೆವೆ'

ಎಂದು ಅವನು ರಣಾಂಗಣಕ್ಕೆ ಹೊರಡುವನು. ಇಂತು ಹಂಸಧ್ವಜನಿಗೆ ತನ್ನ ಇಷ್ಟ ವಾದ ಕೃಷ್ಣದರ್ಶನ ಸಮೀಪವಾಗುತ್ತದೆ. ಇದಕ್ಕೆ ಸಂಧಿ ಲಕ್ಷಣ ಎನ್ನುತ್ತಾರೆ. 'ಸಂಧಿರ್ಬೀಜೋಪಗಮನಮ್.'[1] ಹಂಸಧ್ವಜನನ್ನು ರಣರಂಗದಲ್ಲಿ ಕಂಡಾಗ ಕೃಷ್ಣನು ತಾನೇ ರಥದಿಂದಿಳಿದು ಅವನಿಗಿದಿರಾಗಿ ಹೋಗುವುದನ್ನು ಕವಿ ಸಂಧಿ ೧೪ ಪದ್ಯ ೨೬ರಲ್ಲಿ ಬಣ್ಣಿಸುತ್ತಾನೆ :

> ..............................ಜಗುಳ್ದ ಪೀತಾಂಬರವನು ॥
> ಅಂಸದೊಳ್ ಸಾರ್ಚುತೆ ವರೂಥಮಂ ಇಳಿದು, ಸಿಂಹ
> ಮಂ ಸೋಲಿಸುವ ಗತಿಯೊಳ್ ಐತಂದಂ ಆಗ, ತ
> ನ್ನಂ ಸೇವಿಪರ್ಗೆ ಸೇವಕನೆಂಬುದಂ ತೋಱುತ ಆತನ ಸಮೀಪಕಾಗಿ ॥

---

[1] 'ದಶರೂಪಕ', ೧–೯೪, ಪುಟ ೬೦.

ಇದನ್ನು ನೋಡಿದ ಹಂಸಧ್ವಜನು ತನ್ನ ವರೂಥದಿಂದ ಧುಮ್ಮಿಕ್ಕಿ ಬಂದು ಕೃಷ್ಣನಿಗೆ ವಂದಿಸುತ್ತಾನೆ. ಆಗ ಕೃಷ್ಣನು ಅವನನ್ನು, ಕ್ಷಾತ್ರತಾಮಸವನ್ನು ಬಿಟ್ಟು ಮಿತ್ರಭಾವದಿಂದ ಅಪ್ಪಿಕೊಳ್ಳೆಂದು ಕರೆಯುತ್ತಾನೆ. ಆ ಮೇರೆಗೆ ಹಂಸಧ್ವಜನು ಕೃಷ್ಣಾಲಿಂಗನದೊಡನೆ ಧರ್ಮರಾಯನೊಡನೆ ಸಖ್ಯವನ್ನು ಸ್ಥಾಪಿಸುತ್ತಾನೆ. ಅವನು ಕೊಟ್ಟ ಕಪ್ಪ-ಕಾಣಿಕೆಗಳನ್ನು ತೆಗೆದುಕೊಂಡು ಕೃಷ್ಣನು ಹಸ್ತಿನಾವತಿಗೆ ತೆರಳುತ್ತಾನೆ. ಅರ್ಜುನನು ಚಂಪಕ ನಗರಿಯಲ್ಲಿ ಐದು ದಿನ ಹಂಸಧ್ವಜನ ಆತಿಥ್ಯವನ್ನು ಸ್ವೀಕರಿಸಿ ಕುದುರೆಯೊಡನೆ ಮುಂದುವರಿಯುತ್ತಾನೆ. ಈ ಸಂದರ್ಭದಲ್ಲಿ ಕೃಷ್ಣ-ಹಂಸಧ್ವಜರಲ್ಲಿ ನಡೆದ ಮಾತು ಪರಿಭಾಷಣ ಲಕ್ಷಣ : 'ಪರಿಭಾಷಾ ಮಿಥೋ ಜಲ್ಪಃ.'[1] ಹಂಸಧ್ವಜನ ಬಯಕೆ ಅಚ್ಯುತನ ಮೂರ್ತಿಯನ್ನು ಕಾಣಬೇಕೆಂಬುದಾಗಿತ್ತು : ಅದು ಪೂರ್ಣವಾಯಿತು. ಬಯಸಿದುದನ್ನು ಪಡೆಯುವದಕ್ಕೆ ಆನಂದ ಲಕ್ಷಣ ಎನ್ನುತ್ತಾರೆ. 'ಆನಂದೋ ವಾಂಛಿತಾವಾಪ್ತಿ.'[2] ಇಲ್ಲಿಗೆ ನಿರ್ವಹಣ ಸಂಧಿ ಮುಗಿಯುತ್ತದೆ.

ಈ ರೀತಿ ೬೪ ಸಂಧ್ಯಂಗಗಳಲ್ಲಿ ೧೪ ಸಂಧ್ಯಂಗಗಳು ಈ ಕಥಾನಕದಲ್ಲಿ ಸ್ಪಷ್ಟವಾಗಿ ಕಂಡುಬರುತ್ತವೆ. ಹಂಸಧ್ವಜನ ಕಥಾನಕದಲ್ಲಿ ಪ್ರಕರಿಯಂತಹ ಪ್ರಾಸಂಗಿಕ ಕಥಾನಕಗಳು, ಶಂಖ ಲಿಖಿತರ ಪರಿಚಯ (೧೦-೪೫), ಗರುಡ-ನಂದಿಗಳ ಸೆಣಸಾಟಗಳು (೧೪-೧೯,೨೩) ಅಡಕವಾಗಿವೆ. ಹಂಸಧ್ವಜನ ಕರ್ತವ್ಯನಿಷ್ಠೆ ಕಠೋರವೃತ್ತಿಯನ್ನು ಸೂಚಿಸುವುದಕ್ಕಾಗಿ ಶಂಖ ಲಿಖಿತರ ಕಥೆಯೂ, ಸುಧನ್ವ-ಸುರಥರಲ್ಲಿ ಶಿವನಿಗಿದ್ದ ಪ್ರೀತಿಯನ್ನು ತೋರಿಸುವುದಕ್ಕಾಗಿ ಗರುಡ-ನಂದಿಗಳ ಕಥೆಯೂ ಸ್ಥಾನವನ್ನು ಪಡೆದಿವೆ.

ಹಂಸಧ್ವಜನು ಕ್ಷಾತ್ರಧರ್ಮದ ಮೇರೆಗೆ ಕ್ಷಾತ್ರಶೀಲವುಳ್ಳವನಾದನು. ಲಿಖಿತನು ಕಠೋರ ಕರ್ಮನಿಷ್ಠೆಯ ಮೂಲಕ ತಪ್ತ ತೈಲವನ್ನು ತೆಂಗಿನಕಾಯಿಯಿಂದ ಪರೀಕ್ಷಿಸಿದಾಗ ಅದು ಒಡೆದು ತನಗೇ ಬಡಿದು,ಪಶ್ಚಾತ್ತಾಪವುಂಟಾಗಿ ತಪ್ತ ತೈಲದಲ್ಲಿ ಬೀಳುವಂತೆ ವಿಧಿಮಾಡಿತು. ಸುಧನ್ವ-ಸುರಥರಿಗೆ ಕ್ಷಾತ್ರ ಶೀಲದ ಅತಿಶಯದಿಂದ ಕೃಷ್ಣಸಾಯುಜ್ಯವೂ, ಅವರ ರುಂಡಗಳಿಗೆ ಶಿವನ ಕೊರಳಲ್ಲಿ ಸ್ಥಾನವೂ ದೊರೆಯುವಂತೆ ಮಾಡಿತು-ವಿಧಿ. ಯೋಗ್ಯ ಸಮಯದಲ್ಲಿ ಕೃಷ್ಣನನ್ನು ಸ್ಮರಿಸಿ ಅವನ ಸಹಾಯವನ್ನು ಪಡೆದುದರಿಂದ, ವಿಧಿ ಅರ್ಜುನನನ್ನು ಬದುಕಿಸಿತು. ಗರುಡ-ನಂದಿಗಳು ತಮ್ಮ ತಮ್ಮ ಪತಿಗಳ ಅಪ್ಪಣೆಯನ್ನು ಈಡೇರಿಸಿದುದರಿಂದ ವಿಧಿ ಅವರಿಗೆ ಸಚ್ಛಿಷ್ಯ ಪದವಿಯನ್ನು ಕೊಟ್ಟಿತು. ಕೃಷ್ಣನೇ ತನ್ನೆಡೆಗೆ ನಡೆದು ಬರುತ್ತಿರುವುದನ್ನು ಕಂಡು ಹಂಸಧ್ವಜನು ಅಹಂಕಾರವನ್ನು ತೊರೆದು, ರಥದಿಂದ ಜಿಗಿದು ಬಂದು ಕೃಷ್ಣನ ಕಾಲುಹಿಡಿದುಕೊಂಡುದರಿಂದ ವಿಧಿ ಅವನಿಗೆ ಕೃಷ್ಣಸ್ನೇಹವನ್ನು ದಯಪಾಲಿಸಿತು. ಈ ಬಗೆಯಾಗಿ ಈ ಕಥಾನಕದಲ್ಲಿ ವ್ಯಕ್ತಿಯ ಶೀಲವೇ ಅವನ ವಿಧಿಯಾಗಿದೆ. ಶೀಲ ಬದಲಾದಂತೆ ವಿಧಿ ಬದಲಾಗಿದೆ. ಹಂಸಧ್ವಜನು ಕ್ಷಾತ್ರಶೀಲದ ಮೂಲಕ ಎರಡು ಪುತ್ರರತ್ನಗಳನ್ನು ಕಳೆದುಕೊಂಡನು. ಅವನಲ್ಲಿ ಭಕ್ತಿಯುತ ಶೀಲವು ಉದ್ಭವಿಸಿದಾಗ ಕೃಷ್ಣಸ್ನೇಹಕ್ಕೆ ಪಾತ್ರನಾದನು.

---

1 'ದಶರೂಪಕ್', ೧-೧೦೨, ಪುಟ ೬೨. 2 ಅದೇ, ೧-೧೦೪, ಪುಟ ೬೪.

## ಗರ್ಭಸಂಧಿ

### ಪರಿವರ್ತನ

ಸಂಧಿ ೧೭ ರಿಂದ ೨೪ರ ವರೆಗಿನ ಕಥಾಭಾಗವು ಗರ್ಭಸಂಧಿಗೆ ಸೇರುವುದು. ಯಜ್ಞದ ಪ್ರಾರಂಭ ಮತ್ತು ಸಮಾಪ್ತಿಯೇ ಜೈಮಿನಿ ಭಾರತ ಕಾವ್ಯದ ಕಥಾಬೀಜವಷ್ಟೆ? ಹಸ್ತಿನಾವತಿಯಲ್ಲಿ ಕೃಷ್ಣನನ್ನು ಇದಿರುಗೊಂಡ ಸಂದರ್ಭದಲ್ಲಿ, ವಿಂಧ್ಯಾದ್ರಿಯಲ್ಲಿ, ಚಂಪಕನಗರದಲ್ಲಿ, ಪ್ರಮೀಳೆಯ ರಾಜ್ಯದಲ್ಲಿ, ಭೀಷಣನ ರಾಜ್ಯದಲ್ಲಿ ಯಜ್ಞಾಶ್ವಕ್ಕೆ ಬಂಧನವುಂಟಾಗಿ ಕಥಾಬೀಜ ಅದೃಶ್ಯವಾಗಿರುತ್ತದೆ. ಅದರ ಬಿಡುಗಡೆಯಾದೊಡನೆ ಕಥಾಬೀಜ ಮತ್ತೆ ಕಾಣಿಸಿಕೊಳ್ಳುತ್ತದೆ. ಹೀಗೆ ಹಲವು ಸಲ ಅಡಗುತ್ತ ಕಾಣುತ್ತ ಇದ್ದ ಕಥಾಬೀಜವು ಭೀಷಣನನ್ನು ಗೆದ್ದಾಗ ಸ್ಪಷ್ಟವಾಗಿ ಕಾಣುತ್ತದೆ. ಆದರೆ ಯಜ್ಞಾಶ್ವವು ಮಣಿಪುರಕ್ಕೆ ಬಂದೊಡನೆ ಮತ್ತೆ ಬಂಧನಕ್ಕೊಳಗಾಗಿ ಕಥಾಬೀಜವು ಪುನಃ ಅಡಗುತ್ತದೆ. ಕಥಾಬೀಜದ ಈ ಕಣ್ಣುಮುಚ್ಚಾಟವೇ ಗರ್ಭಸಂಧಿಯ ಪ್ರಮುಖ ಲಕ್ಷಣ.[1] ಈ ಸಂಧಿಯಲ್ಲಿ ಮೂಲಕಥೆಯೊಂದಿಗೆ ದೀರ್ಘವಾಗಿ ಮುಂದುವರಿಯುವ (ಸಾನುಬಂಧ) ಕಥೆ ಇರಬಹುದು ಎಂದೂ ಹೇಳುತ್ತಾರೆ. ಜೈಮಿನಿ ಭಾರತದಲ್ಲಿ ಮೂಲಕಥೆಯೊಂದಿಗೆ ದೀರ್ಘವಾಗಿ ಮುಂದುವರಿಯುವ ಸಂಗ್ರಹ ರಾಮಯಾಣದ ಕಥಾಭಾಗವು ಇದೆ. ಇದಕ್ಕೆ ಪತಾಕಾ ಎಂದು ಹೆಸರು.[2] ಇದಲ್ಲದೆ ಪ್ರಾಸಂಗಿಕವಾಗಿ (ಪ್ರದೇಶಭಾಕ್ಕಾಗಿ) ಇನ್ನೂ ಒಂದು ಕಥಾಭಾಗ ಬರಬಹುದು ಎಂದು ಎನ್ನುತ್ತಾರೆ. ಅದಕ್ಕೆ ಪ್ರಕರಿ ಎಂದು ಹೆಸರು.[3] ಇದಕ್ಕೆ ಅನುಸಾರವಾಗಿ ಜೈಮಿನಿ ಭಾರತ ಸಂಧಿ ೨೪ ರಲ್ಲಿ ಪದ್ಯ ೨ ರಿಂದ ៤೧ರ ವರೆಗೆ ಪಾತಾಳ(ನಾಗ)ಲೋಕದ ಕಥೆ ಪ್ರಾಸಂಗಿಕವಾಗಿ ಬರುತ್ತದೆ. ಸಂಧಿ ೧೭, ೨೨, ೨೩, ೨೪ರಲ್ಲಿ ಮೂಲಕಥೆಗೆ ಸಂಬಂಧಿಸಿದ ಅರ್ಜುನ–ಬಭ್ರುವಾಹನರ ಕಾಳಗದ ವಿಷಯವಿದ್ದು, ಮೇಲೆ ಉಲ್ಲೇಖಿಸಿದ ನಾಗಲೋಕದ ಉಪಕಥೆ ಪ್ರಕರೀಜಾತಿಗೆ ಸೇರಿದುದಾಗಿದೆ. ಸಂಧಿ ೧೮ ರಿಂದ ೨೧ರ ವರೆಗಿನ ರಾಮಾಯಣ ಕಥಾಭಾಗವು ಮೂಲ ಕಥೆಗೆ ಸಂಬಂಧಿಸಿದುದಲ್ಲ. ಅದಕ್ಕೆ ಅನುರೂಪವಾದ ಪ್ರತಿಕಥೆಯಾಗಿದೆ. ಇದು ಪತಾಕಾ ಜಾತಿಯ ಕಥೆ.

ಕಥಾನಕದ ಫಲಪ್ರಾಪ್ತಿಯ ಆಶೆ ಅಥವಾ ಪ್ರಾಪ್ತಿಸಂಭವವೇ ಗರ್ಭಸಂಧಿಯ ಹುರುಳು. ಅರ್ಜುನ–ಬಭ್ರುವಾಹನರ ಕಾಳಗದ ಈ ಕಥಾನಕದಲ್ಲಿ ಅರ್ಜುನನು ಮೂಲ ಕಥಾನಕದ ನಾಯಕನಾಗಿದ್ದಾನೆ. ಉಪನಾಯಕ ವೃಷಕೇತುವೂ, ನಾಯಕ ಅರ್ಜುನನೂ ರಣಾಂಗಣದಲ್ಲಿ ಮಡಿದಮೇಲೆ ಫಲಪ್ರಾಪ್ತಿಯ ಆಸೆ ಮೋಡದ ನೀರು. ಆದರೆ

[1] ಗರ್ಭಸ್ತು ದೃಷ್ಟನಷ್ಟಸ್ಯ ಬೀಜಸ್ಯಾನ್ವೇಷಣಂ ಮುಹುಃ ।
ದ್ವಾದಶಾಂಗಃ ಪತಾಕಾ ಸ್ಯಾನ್ನ ವಾ ಸ್ಯಾತ್ಪ್ರಾಪ್ತಿ ಸಂಭವಃ ॥
—'ದಶರೂಪಕ', ೧–೩೬, ಪು ೩೭.

[2–3] ಸಾನುಬಂಧನ್ ಪತಾಕಾಖ್ಯಂ ಪ್ರಕರೀ ಚ ಪ್ರದೇಶಭಾಕ್ ।
—ಅದೇ. ೧–೨೧, ಪು. ೧೦.

ಅರ್ಜುನನಿಗೆ ಕೃಷ್ಣನ ಬೆಂಬಲವಿರುವುದರಿಂದ ಉಲೂಪಿಗೆ ಸಂಜೀವಕದ ಮಣಿಯು ಉಪಾಯ ತೋರುವುದರಿಂದ ಫಲಪ್ರಾಪ್ತ್ಯಾಸೆಗೆ, ಫಲಪ್ರಾಪ್ತಿ ಸಂಭವಕ್ಕೆ ಎಡೆಯುಂಟು. ಆದರೆ ಸಂಜೀವಕ ಮಣಿಯನ್ನು ನಾಗಲೋಕದಿಂದ ತರುವಲ್ಲಿ ಅಪಾಯವುಂಟು. ಸಾಹಸದಿಂದ ಅದನ್ನು ತಂದಮೇಲೆ ಅರ್ಜುನ–ವೃಷಕೇತುಗಳ ರುಂಡಗಳು ಕಾಣೆಯಾಗುವುದೂ ಒಂದು ದೊಡ್ಡ ಆತಂಕ. ಹೀಗೆ ಪ್ರಾಪ್ತ್ಯಾಸೆಯಲ್ಲಿ ಉಪಾಯ ಸೂಚನೆ ಮತ್ತು ಅಪಾಯ ಶಂಕೆ ಎರಡೂ ಇರುವವೆಂದು ಲಾಕ್ಷಣಿಕರು ಹೇಳುತ್ತಾರೆ.[1]

ಪತಾಕಾ, ಪ್ರಕರಿ, ಕಥಾಬೀಜದ ದೃಶ್ಯಾದೃಶ್ಯತೆ ಮತ್ತು ಪ್ರಾಪ್ತ್ಯಾಶೆಯ ಲಕ್ಷಣಗಳಿಂದ ಕೂಡಿದ ಈ ಕಥಾಭಾಗವು (ಸಂಧಿ ೧೭ ರಿಂದ ೨೪) ಗರ್ಭಸಂಧಿ ಎನಿಸುವುದೆಂದು ನಿಶ್ಚಿತವಾಗಿ ಹೇಳಬಹುದು.

ಭೀಷಣನ ರಾಜ್ಯದಿಂದ ಹೊರಬಿದ್ದ ಯಜ್ಞಾಶ್ವವು ತೆಂಕದೆಸೆಗೆ ಸಾಗುತ್ತದೆ (೧೬–೪೬). ಅಲ್ಲಿ ಮಣಿಪುರದ ಬಭ್ರುವಾಹನನು ಅದನ್ನು ಕಟ್ಟುತ್ತಾನೆ. ಮಣಿಪುರವು ಆಸಾಮಿನಲ್ಲಿದೆ (ಉ.ಅ. ೨೪.೩/೪, ಪೂ.ರೇ. ೯೪) ಎಂದು ರಾ. ನ. ಮುಳಗಿಯವರು ಹೇಳಿದ್ದಾರೆ ('ಅಶ್ವಪಥ', ಪು. ೧೨). ಮಣಿಪುರವು ಕಲಿಂಗ ದೇಶದ ರಾಜಧಾನಿ ಎಂದು ನಂದುಲಾಲ ಡೇ ಅವರು ಅಭಿಪ್ರಾಯಪಟ್ಟಿದ್ದಾರೆ. ಯಜ್ಞಾಶ್ವವು ಇಲ್ಲಿಗೆ ಬಂದಾಗ 'ಧರೆಯ ಬೇಸಗೆಯ ಬೇಸರಂ ತಪಿಸುತ್ತ ವರ್ಷಾಗಮವು ಶೋಭಿಸಿತು' (೧೭–೧). ಸಂಧಿ ೧೭ ಮತ್ತು ೨೨, ೨೩, ೨೪ರ ಕಥಾಭಾಗದ ವಿಭಜನಾಕ್ರಮವನ್ನು ಪರೀಕ್ಷಿಸಿದಾಗ ಕೆಳಗಿನ ಅಂಶಗಳು ಕಂಡುಬರುತ್ತವೆ :

೧. ಮುಖಸಂಧಿ : ಸಂ. ೧೭, ಪ. ೧ ರಿಂದ ೪೫
೨. ಪ್ರತಿಮುಖಸಂಧಿ : ಸಂ. ೧೭, ಪ. ೪೬ ರಿಂದ ೪೮
೩. ಗರ್ಭಸಂಧಿ : ಸಂ. ೧೭, ಪ. ೪೯ ರಿಂದ ಸಂ. ೨೪, ಪ. ೫೩
 (i) ಯುದ್ಧವರ್ಣನೆ ೯೬ ಪದ್ಯ.
 (ii) ಪ್ರಕರಿ (ನಾಗಲೋಕದ ಕಥೆ) ೪೦ ಪದ್ಯ.
೪. ಅವಮರ್ಶಸಂಧಿ : ಸಂ. ೨೪, ಪ. ೫೪ ರಿಂದ ೬೪
೫. ಉಪಸಂಹೃತಿ ಸಂಧಿ : ಸಂ. ೨೪, ಪ. ೬೫ ರಿಂದ ೮೨.

ಈ ಕಥಾಭಾಗಕ್ಕೆ ಬಭ್ರುವಾಹನನೇ ನಾಯಕನಾಗಿದ್ದು ಅರ್ಜುನನು ಪ್ರತಿನಾಯಕನಾಗಿ ವೃಷಕೇತು ಉಪಪ್ರತಿನಾಯಕನಾಗಿದ್ದಾರೆ. ಬಭ್ರುವಾಹನನು ಅಸಾಮಾನ್ಯ ವೀರ, 'ಮಾತೃದೇವೋ ಭವ' ಎಂಬ ಶ್ರದ್ಧೆಯ ಮಾತೃಭಕ್ತ, ಅತ್ಯಂತ ಸಾತ್ವಿಕ. ಕ್ಷಾತ್ರವೃತ್ತಿಯ ಕೆಚ್ಚೆನಿಸಿದ ಹಂಸಧ್ವಜನು ಧನುರ್ವಿದ್ಯಾ ವಿಶಾರದನಾದ ಅರ್ಜುನನ ಎದುರಿನಲ್ಲಿ ಈ ಕಥಾನಾಯಕನ ಗುಣಗಾನ ಮಾಡುವದು ಈ ಕಾವ್ಯದಲ್ಲಿಯ

---

1 'ಉಪಾಯಾಪಾಯಶಂಕಾಭ್ಯಾಂ ಪ್ರಾಪ್ತ್ಯಾಶಾ ಪ್ರಾಪ್ತಿ ಸಂಭವಃ ।'
—'ದಶರೂಪಕ', ೧–೩೧, ಪು. ೧೭.

ಒಂದು ಸೊಗಸು. ಈ ಗುಣಗಾನವೂ ಬಭ್ರುವಾಹನನ ಆಸ್ಥಾನದ ವರ್ಣನೆಯೂ ಸಂಧಿ ೧೭ ಪದ್ಯ ೧೨, ೨೩, ೨೬, ೨೮ರಲ್ಲಿ ಬಂದಿದೆ.

'ಬಭ್ರುವಾಹನಂ ಪ್ರಖ್ಯಾತ ಭೂನಾಥಂ' ಇಲ್ಲಿಗೆ ಅರಸು; ಅವನಿಪರೊಳಗೆ ಅಗ್ಗಳೆಯಂ. ಏನೆಂಬೆ? ಇವನ ಸಿದ್ಧಾಯಕಾಗಿ ಒಂದು ಸಾಸಿರ ಬಂಡಿ ಕನಕವಂ ನಾವೆಲ್ಲರುಂ ನ್ಯೂನವಿಲ್ಲದೆ ಪ್ರತಿದಿನದೊಳು ತಪ್ಪದೆ ತೆತ್ತು ಬಹೆವು—ಹೀನವಾದಡೆ ದಂಡಿಸುವೆನೆಂಬ ಭೀತಿಯಿಂದ.'

ಅವನ ಆಸ್ಥಾನ ಶಾಲೆ 'ಸುರವನೋಲಗದ ಮಂಟಪದ ಸೌಭಾಗ್ಯಕ್ಕೆ ಎಂಟು ಮಡಿಯಾದುದು ಅಚ್ಚರಿ! ಎನ್ನುವಂತೆ' ಇದ್ದಿತು. ಇದು ವಿಲೋಭನ ಎಂಬ ಮುಖ ಸಂಧಿಯೊಳಗಿನ ಸಂಧ್ಯಂಗವಾಗಿದೆ.[1]

ತನ್ನಲ್ಲಿಗೆ ಬಂದ ಯಜ್ಞಾಶ್ವವನ್ನು ಬಭ್ರುವಾಹನನು ಕಟ್ಟಿಹಾಕುವುದು 'ಸ್ವಧರ್ಮೇ ನಿಧನಂ ಶ್ರೇಯಃ' ಎಂಬ ಶ್ರದ್ಧೆಯಿಂದ ಕ್ಷಾತ್ರಧರ್ಮೋಚಿತ ಕರ್ತವ್ಯ ವೆಂದು. ಹಂಸಧ್ವಜನಂತೆ ಕೃಷ್ಣದರ್ಶನಾಪೇಕ್ಷೆಯಿಂದಲ್ಲ ಎಂಬುದು

......................'ಯಜ್ಞ ತುರಗವುಂ ಕಟ್ಟಿಕೊಂಡೆವು ಮನೆಯೊಳು ।
ಕೊಳುಗುಳಕೆ ಮಿಡುಕುಳ್ಳವರ್ನಾವು, ನಾಳೆ ಹಿಂ—
ದುಳಿಯಬಾರದು, ಕದನಕನುವಾಗಿರಲಿ ಪಾಯ
ದಳಮೆಂದು ನುಡಿದಂ ಸುಬುದ್ಧಿ ಮೊದಲಾಗಿಹ ಶಿರಃಪ್ರಧಾನಿಗಳ ಕೂಡೆ ॥'

ಎಂಬ ಮಾತಿನಿಂದ ವ್ಯಕ್ತವಾಗುತ್ತದೆ. ಈ ಬಗೆಯ ಅಪೇಕ್ಷೆಯಿಂದ ಶಿರಃಪ್ರಧಾನಿಗಳೊಡನೆ ಮಾತನಾಡಿ ಯುದ್ಧವನ್ನು ನಿಶ್ಚಯಿಸುತ್ತಾನೆ. ಇದು ಯುಕ್ತಿ ಎಂಬ ಸಂಧ್ಯಂಗದ ಲಕ್ಷಣ.[2]

ಮಗ ಬಭ್ರುವಾಹನನ ಯುದ್ಧ ನಿಶ್ಚಯದ ಸುದ್ದಿ ಅಂತಃಪುರದಲ್ಲಿದ್ದ ಚಿತ್ರಾಂಗದೆಗೆ ತಿಳಿದಾಗ ಸುಖದಷ್ಟೇ ತೀವ್ರವಾದ ದುಃಖವೂ ಅವಳಿಗಾಗುತ್ತದೆ. ತಾನು ಅನೇಕ ವರ್ಷಗಳಿಂದ ಚಿಂತಿಸುತ್ತಿದ್ದ ಪತಿಯಾದ ಅರ್ಜುನನು ಸುದೈವದಿಂದ ಮಣಿಪುರಕ್ಕೆ ಬಂದಿದ್ದಾನೆಂಬ **ಸುಖ**ದಲ್ಲಿದ್ದ ಚಿತ್ರಾಂಗದೆಯನ್ನು ಮಗನೇ ಕೊತುಕೊಂಡು ತಂದೆಯೊಡನೆ ಕಾದುವುದಕ್ಕೆ ಕೃತನಿಶ್ಚಯನಾಗಿದ್ದಾನೆ ಎಂಬುದು **ದುಃಖ**ದ ಆಳಕ್ಕೆ ತಳ್ಳುತ್ತದೆ. ಇದು ವಿಧಾನ ಲಕ್ಷಣ.[3]

ಆಗವಳು ಆಸ್ಥಾನಕ್ಕೆ ಬಂದು, ಮಗನಿಗೆ ಪ್ರೀತಿಯಿಂದ ಬಯ್ದು ಬುದ್ಧಿ ಹೇಳುತ್ತಾಳೆ. 'ಕುಂತೀಸುತನ ವಾಜಿಯಂ ಕಟ್ಟಿದೈ, ಮಗನೆ, ಲೇಸುಮಾಡಿದೆ' ಎಂಬ ತಾಯಿಯ ಕೊಂಕುನುಡಿ ಬಭ್ರುವಾಹನನಿಗೆ ಅರ್ಥವಾಗುವದಿಲ್ಲ. ಅವನು ಒಂದು ಕ್ಷಣ ಆನಂದದಿಂದ ಉಬ್ಬಿರಬಹುದು—ಅಷ್ಟರಲ್ಲಿ ತಾಯಿಯ ಸಿಡಿಲು ನುಡಿ ಅವನ ಕಿವಿಗೆರಗುತ್ತದೆ. ಆಗವನು ವಿನಮ್ರನಾಗಿ :

1 'ಗುಣಾಖ್ಯಾನಂ ವಿಲೋಭನಂ'—'ದಶರೂಪಕ', ೧–೪೨.

2 'ಸಂಪ್ರಧಾರಣಮರ್ಥಾನಾಂ ಯುಕ್ತಿಃ'—ಅದೇ. ೧–೪೩.

3 'ವಿಧಾನಂ ಸುಖದುಃಖ ಕೃತ್'—ಅದೇ. ೧–೪೬.

......................'ನಿಮ್ಮ ಚಿತ್ತಕೆ ಬಾರದಿರ್ದ ಬಳಿಕ।
ನೀತಿಯಾದಪುದೆ ತನಗಿನ್ನು? ನಿಮ್ಮಡಿಗೆ ಸಂ—
ಪ್ರೀತಿಯೆಂತಾದಪುದದಂ ಬೆಸಸಿದೊಡೆ ಮಾಳ್ಪೆ'

ಎಂದು ವಿಹ್ವಲಚಿತ್ತದಿಂದ ಕೈಮುಗಿದು ಕೇಳಿಕೊಳ್ಳುತ್ತಾನೆ. ಸಂಧಿ ೧೭ ಪದ್ಯ ೩೨ ಮತ್ತು ೩೪ ರಿಂದ ಬಭ್ರುವಾಹನನಿಗೆ ಅರ್ಜುನನು ತನ್ನ ತಂದೆ ಎಂಬ ಅಜ್ಞಾತ ಸಂಗತಿ ಗೊತ್ತಾಗುತ್ತದೆ.

'ನಿನ್ನ ಸರ್ವಸ್ವಮಂ ತಾತನಂಘ್ರಿಗೆ ಸಮರ್ಪಿಸಿದೊಡಾಂ ಮಾಡಿದ ತಪೋನಿಷ್ಠೆ ಸಫಲ ಮಾದಪುದು'

ಎಂದು ಚಿತ್ರಾಂಗದೆ ತನ್ನ ಇಚ್ಛೆಯನ್ನು ವ್ಯಕ್ತಪಡಿಸುತ್ತಾಳೆ. ಇದು ಉದ್ಭೇದ ಲಕ್ಷಣ.[1]

ಮಾತೃಭಕ್ತನಾದ ಬಭ್ರುವಾಹನನು ಈ ಸಂದರ್ಭದಲ್ಲಿ ಹೇಗೆ ನಡೆಯಬೇಕೆಂದು ಸುಬುದ್ಧಿಯಲ್ಲಿ ಹಾದಿ ಕೇಳುತ್ತಾನೆ. ಆಗವನು 'ನಿನಗೇಣಿಕೆ ಬೇಡ; ಮೊದಲಜ಼ಿಯ ದಾದೆವು; ಧರ್ಮತನಯಂಗೆ ನಿಮ್ಮಯ್ಯನನುಜಂ, ಆತನ ರಕ್ಷೆ ವಿನುತ ಹಯಕೆ. ಇದನಿನ್ನು ಕಲಿತನದಿ ಕಟ್ಟುವುದು ನೀತಿಪಥವಲ್ಲ' ಎಂದನು. ಹೀಗೆ ಚಿತ್ರಾಂಗದೆಯ ಇಚ್ಛೆಗೆ ಪ್ರೋತ್ಸಾಹ ಕೊಡಲ್ಪಡುತ್ತದೆ. ಇದು ಭೇದ ಲಕ್ಷಣ.[2]

'ಇನ್ನು ಕಟ್ಟಿಸು ಗುಡಿಗಳಂ, ನಾಗರಿಕಜನಮಲಂಕರಿಸಿಕೊಳ್ಳಲಿ, ಸಂದರ್ಶನಕೆ ಸನ್ನುತ ಸುವಸ್ತುಗಳನೆಲ್ಲಮಂ ತೆಗಸು, ತಡವೇಕೆ!' ಎಂದು ಸುಬುದ್ಧಿಯಿಂದ ಪ್ರೋತ್ಸಾಹ ದೊರೆತುದರಿಂದ ಬಭ್ರುವಾಹನನು, ಅರ್ಜುನನ ಸ್ವಾಗತವೇ ಪ್ರಸ್ತುತ ವಿಷಯವೆಂದಿಟ್ಟು ಕೊಂಡು ಸ್ವಾಗತ ಸಿದ್ಧತೆಯನ್ನು ಭರದಿಂದ ಆರಂಭಿಸುತ್ತಾನೆ (೧೭–೩೪). ಇದು ಕರಣ ಲಕ್ಷಣ.[3]

ಮಣಿಪುರದಲ್ಲಿ ಅರ್ಜುನನ ಸ್ವಾಗತದ ಸಡಗರದ ಸಿದ್ಧತೆ ನಡೆದಿರುವಾಗ ಅತ್ತ ಅರ್ಜುನನು ಬಭ್ರುವಾಹನನೊಡನೆ ಕಾದುವ ಸಿದ್ಧತೆಯಲ್ಲಿ ತೊಡಗಿರುತ್ತಾನೆ. ಅನು ಸಾಲ್ವ, ವೃಷಕೇತು, ಯೌವನಾಶ್ವ, ಹಂಸಕೇತು, ನೀಲಧ್ವಜ ಮತ್ತು ಯಾದವರು— ಎಲ್ಲರನ್ನೂ ಕೂಡಿಕೊಂಡು ಅವನು ಯುದ್ಧಕ್ಕೆ ಅಣಿಯಾಗುತ್ತಾನೆ. ಇಲ್ಲಿಗೆ ಮುಖ ಸಂಧಿಯು ಮುಕ್ತಾಯವಾಗುತ್ತದೆ.

ಪ್ರತಿಮುಖ ಮತ್ತು ಗರ್ಭ: ಪ್ರತಿಮುಖ ಸಂಧಿಯ ಆರಂಭವು 'ವಿಲಾಸ' ಎಂಬ ಸಂಧ್ಯಂಗದಿಂದ ಆಗುತ್ತದೆ. ರತಿಯ ಇಚ್ಛೆಯೆ ವಿಲಾಸ ಎಂದು ಲಾಕ್ಷಣಿಕರು ಹೇಳು ತ್ತಾರೆ. ಇದು ಯುದ್ಧದ ಪ್ರಸಂಗ. ಇಲ್ಲಿ ವಿಲಾಸಕ್ಕೆ, ಶೃಂಗಾರಕ್ಕೆ, ರತಿಗೆ ಸ್ಥಾನವಿಲ್ಲ. ಆದರೆ ಮಗನಿಗೆ ತಂದೆಯನ್ನು ಕಾಣುವ ಆತುರವಿದೆ. ತಂದೆಯನ್ನು ಸಡಗರದಿಂದ ಸ್ವಾಗತಿಸಿ ತಂದೆ–ತಾಯಿಗಳಿಬ್ಬರನ್ನೂ ಮನದಣಿಸುವ ಸಂಭ್ರಮವಿದೆ. ಆದರೆ ಅವನ

---

1 'ಉದ್ಭೇದೋ ಗೂಢ ಭೇದನಂ'—'ದಶರೂಪಕ', ೧–೪೮.
2 'ಭೇದಃ ಪ್ರೋತ್ಸಾಹನಾ ಮತಾ'— ಅದೇ. ೧–೫೦.
3 'ಕರಣಂ ಪ್ರಕೃತಾರಂಭೋ' — ಅದೇ. ೧–೪೯, ಪು. ೨೭.

ಈ ಇಚ್ಛೆಗೆ ಅಡ್ಡಿ ಒದಗುವದು. ಅದೇ ದೈವ ದುರ್ವಿಪಾಕ. ಬಭ್ರುವಾಹನನು ಸಕಲ ಮಂತ್ರಿ ಸಮೇತನಾಗಿ, ಪರಿವಾರಸಹಿತವಾಗಿ, ಸೇನಾಸಮನ್ವಿತನಾಗಿ, ಕಳಸಕನ್ನಡಿ ವಿಡಿದ ವಿಳಾಸಿನೀಜನದೊಡಗೂಡಿ ಅರ್ಜುನನನ್ನು ಕಾಣಲು ಹೋಗುತ್ತಾನೆ. ಇದು ವರ್ಣಸಂಹಾರದ ಲಕ್ಷಣ.[1] ಬಭ್ರುವಾಹನನು :

> ................'ಸಂಭ್ರಮದೊಳೆ ನಡೆತಂದು ಮೈ
> ಝುಲ್ಲವಿಸೆ ಹರ್ಷದಿಂ ಪಾರ್ಥನಂ ಕಂಡು ನಿಜ ಮೌಳಿಯಂ ತೆಗೆದು ನರನ ॥
> ಮೆಲ್ಲಡಿಗನರ್ಘ್ಯ ರತ್ನಂಗಳಂ ಸುರಿದು ಕರ–
> ಪಲ್ಲವದ್ವಿತಯಮಂ ಮುಗಿದು ಭಯಭಕ್ತಿಯಿಂ
> ಚೆಲ್ಲಿದನೊಡಲನಿಳೆಯೊಳಾ ಬಭ್ರುವಾಹನಂ ನೀಡಿ ಸಾಷ್ಟಾಂಗದಿಂದೆ॥'

ಇದೂ ಒಂದು ರೀತಿಯ ರತಿವಿಲಾಸದ ಲಕ್ಷಣ.[2] ಈ ರತಿಗೆ ಶಮ, ನರ್ಮ, ನರ್ಮದ್ಯುತಿ ಸುಖವು ಸಿಕ್ಕದೆ, ಅರ್ಜುನ–ಬಭ್ರುವಾಹನರಲ್ಲಿ ವಾದವಿವಾದವೇ ಪ್ರಾರಂಭವಾಗುತ್ತದೆ. ಇದರಲ್ಲಿ ಸಂಧಿ ೧೭ ಪದ್ಯ ೪೮ ರಿಂದ ೫೬ರವರೆಗೆ ಇಬ್ಬರೂ ಒಬ್ಬರನ್ನೊಬ್ಬರನ್ನು ಹೀಯಾಳಿಸುವುದು ಪ್ರಗಮನ ಲಕ್ಷಣ.[3]

ಪ್ರತಿಮುಖಸಂಧಿ ಮತ್ತು ಗರ್ಭ ಸಂಧಿಗಳ ಸಂಧ್ಯಂಗಗಳು ಒಂದರಲ್ಲೊಂದು ಕೂಡಿರುವುದನ್ನು ನಾವಿಲ್ಲಿ ಕಾಣುತ್ತೇವೆ. ಅರ್ಜುನನು ಬಭ್ರುವಾಹನನನ್ನು 'ನೀನಾರು' ಎಂದು ಕೇಳುವಷ್ಟು ತಂದೆ–ಮಗ ಅಪರಿಚಿತರಾಗಿದ್ದಾರೆ. ಅದಕ್ಕೆ ಬಭ್ರುವಾಹನನು 'ತಾತ, ಚಿತ್ತೈಸು, ನಿನ್ನಾತ್ಮಜಂ ತಾನು....' ಎಂದು ಮುಂತಾಗಿ ಸತ್ಯಸ್ಥಿತಿಯನ್ನು ಸಂಕೋಚವಿಲ್ಲದೆ ನಮ್ರತೆಯಿಂದ ಹೇಳುತ್ತಾನೆ. ಇದು ಗರ್ಭಸಂಧಿಯಲ್ಲಿಯ ಮಾರ್ಗ ಎಂಬ ಸಂಧ್ಯಂಗದ ಲಕ್ಷಣ.[4] ಈ ನಮ್ರವಾದ ವಚನಗಳು ಅರ್ಜುನನ ಮನಸ್ಸಿನಮೇಲೆ ವಿಪರೀತವಾಗಿ ಪರಿಣಮಿಸಿ ಅವನು ಉರಿದೇಳುತ್ತಾನೆ. ಬಭ್ರುವಾಹನನನ್ನು 'ನೀ ಪಂದೆ, ಚಿತ್ರಾಂಗದೆಗೆ ವೈಶ್ಯನಿಂದ ಸಂಭವಿಸಿದ ಪುತ್ರ, ಜಂಬುಕಂ ಜನಿಸುವುದೆ ಸಿಂಗ ದುದರದೊಳು? ಹೆಂಬೇಡಿ! ಕುಲಗೇಡಿ! ಡೊಂಬಿನ ಚತುರ್ಬಲ; ಇದೇಕೆ ನಿನಗೆ? ಗಂಧರ್ವನಾಯಕನ ದುಹಿತೃವಲ್ಲಾ ನಿನ್ನ ಮಾತೆ! ವಿರಹಿತವಲ್ಲ ನಿನಗೆ, ಭೂಮಿಪರ ವೇಷಮಂ ತಳೆದ ಈ ನಾಟಕದ ರಚನೆ!'—ಇತ್ಯಾದಿಯಾಗಿ ದುಷ್ಕೃತಿಯ ಕುಹಕದಿಂದ ಇದಿರಿದಿರೆ ಬಯ್ದು ಮುಖಭಂಗಗೊಳಿಸುತ್ತಾನೆ ಅರ್ಜುನ. ಇದು ವಜ್ರಲಕ್ಷಣ.[5] ಅರ್ಜುನನ ಮೇಲಿನ ಮಾತುಗಳಲ್ಲಿ ಹಲವು ವಿತರ್ಕದ ಮತ್ತು ಅತಿಶಯೋಕ್ತಿಯ

---

1 'ಚಾತುರ್ವರ್ಣ್ಯೋಪಗಮನಂ ವರ್ಣಸಂಹಾರ ಇಷ್ಯತೇ'—'ದಶರೂಪಕ', ೧–೬೫.

2 'ರತ್ಯರ್ಥೇ ಹಾ ವಿಲಾಸಃ ಸ್ಯಾತ್'—ಅದೇ. ೧–೫೩.

3 'ಉತ್ತರಾ ವಾಕ್ ಪ್ರಗಮನಂ'—ಅದೇ. ೧–೫೯.

4 'ಮಾರ್ಗಸ್ತತ್ತ್ವಾರ್ಥ ಕೀರ್ತನಂ'—ಅದೇ. ೧–೬೯.

5 'ವಜ್ರಂ ಪ್ರತ್ಯಕ್ಷ ನಿಷ್ಠುರಂ'—ಅದೇ. ೧–೬೪.

ಮಾತುಗಳಿವೆ. ಇದು ರೂಪ ಮತ್ತು ಉದಾಹರಣದ ಲಕ್ಷಣ.[1] ಅವನಾಡಿದ ಈ ಮಾತುಗಳ ಫಲವಾಗಿ ಬಭ್ರುವಾಹನನು ಮತ್ತೆ ಯುದ್ಧವನ್ನೇ ನಿಶ್ಚಯಿಸುತ್ತಾನೆ. ಅಭಿಮಾನದಿಂದ ಕೆರಳಿದ ಅವನು :

**..................'ಪಳಿದೆಲಾ ಮಾತೆಯಂ ! ತನಗೆ ಸೀವರಿಸಿದೆಯಲಾ !'**
**ಅಱಿಯಬಹುದಿನ್ನು, ಕೇಳ್ನಿನ್ನ ತಲೆಗೆಡಹದೊಡೆ**
**ಕುಱುಹಿಟ್ಟು ನೀನಾಡಿದಿನಿತೆಲ್ಲಮುಂ ದಿಟಂ !**
**ಮಱೆಯದಿರ್ ! ಸಾಕು !'**

ಎನ್ನುತ್ತ ತಂದಿದ್ದ ಕುದುರೆ, ಅಖಿಳ ವಸ್ತುಗಳು, ಸ್ತ್ರೀಜನ ಎಲ್ಲವನ್ನೂ ಪಟ್ಟಣಕ್ಕೆ ಸಾಗಿಸಿಬಿಡುತ್ತಾನೆ. ಕದನ ಆರಂಭವಾಗುತ್ತದೆ. ಅನುಸಾಲ್ವ, ಪ್ರದ್ಯುಮ್ನ ಮೊದಲಾದ ಅನೇಕ ವೀರರನ್ನು ಸೋಲಿಸುತ್ತ ಹಂಸಧ್ವಜ ಸುವೇಗರೊಂದಿಗೂ ಬಭ್ರುವಾಹನನು ಕಾದಾಡಿ ಶೌರ್ಯವನ್ನು ಪ್ರಕಟಿಸುತ್ತಾನೆ. 'ಇವನಂ ಜಯಿಸುವ ಬಗೆಗಾಣೆ' ಎಂಬ ಅಂಜಿಕೆ ಅರ್ಜುನನಲ್ಲಿ ತಲೆಎತ್ತುತ್ತದೆ. ಆಗವನು ವೃಷಕೇತುವಿಗೆ 'ಹಸ್ತಿನಾವತಿಗೆ ಹೋಗಿ ಈ ಯುದ್ಧವಾರ್ತೆಯನ್ನು ಅಗಧಗ—ಯುಧಿಷ್ಠಿರರಿಗೆ ಅರಿಕೆಮಾಡು' ಎಂದು ಹೇಳುತ್ತಾನೆ. ಆದರೆ ವೃಷಕೇತು ಇದನ್ನೊಪ್ಪದೆ ರಣಾಂಗಣಕ್ಕೆ ಹೋಗಿ ಬಭ್ರುವಾಹನನೊಡನೆ ಹೋರಾಡಿ ಮಡಿಯುತ್ತಾನೆ. ಬಭ್ರುವಾಹನನನ್ನು ವಿಡಂಬನ ಮಾಡುತ್ತ, 'ನಿನ್ನ ತಲೆಯ ಬೆಲೆಗಿದೇ ಸಾಹಸದ್ರವ್ಯಂ' ಎಂದು ಘೋಷಿಸುತ್ತ ಅರ್ಜುನನು ಕಾದುವನು. ಇಬ್ಬರಲ್ಲಿಯೂ ಘನಘೋರವಾದ ಸಮರವಾಗಿ ಕೊನೆಗೆ ಅರ್ಜುನನ ರುಂಡವೂ ಉರುಳುತ್ತದೆ.

ಬಭ್ರುವಾಹನನು ಗೆಲವಿನ ಆನಂದದಿಂದ ಪಟ್ಟಣಕ್ಕೆ ಮರಳುವಷ್ಟರಲ್ಲಿ ಈ ಸುದ್ದಿ ಅರಮನೆಗೆ ಮುಟ್ಟಿರುತ್ತದೆ. ಎಲ್ಲರೂ ಶೋಕಮಗ್ನರಾಗಿರುತ್ತಾರೆ. ವಿಜಯಿಯಾದ ಬಭ್ರುವಾಹನನಿಗೆ ಆರತಿ ಸಂಭ್ರಮದ ಸ್ವಾಗತದ ಬದಲು ಕರ್ಣಕಠೋರವಾದ ದುಃಖಾಕ್ರಂದನವೂ ಕೇಳಿಬರುತ್ತದೆ. ಇದರ ಕಾರಣವನ್ನು ವಿಚಾರಿಸಿದ ಬಭ್ರುವಾಹನನಿಗೆ ದುಃಖಿತೆಯಾದ ತಾಯಿಯಿಂದ ಮತ್ತೆ ಬಯ್ಸಿಕೊಳ್ಳುವುದೇ ಆಗುತ್ತದೆ.

**'ಪಿತೃಘಾತಮಂ ಹೇಸದೆಸಗಿದರುಂಟೆ? ಸುಡಲಿ! ಸುತರೇಕೆ?'** **(೨೩–೫೪, ೫೫).**
**'ಸೆಳೆದು ಪೊಡೆ ಖಡ್ಗದಿಂ ಎಮ್ಮೀ ಶಿರಂಗಳಂ! ಬಳಿಕ್ಕೈದೆ ಭಾರ್ಗವಂ ಕೊಂದುದಿಲ್ಲವೆ ತಾಯ? ಅಳುಕದಿರ್! ಪಿತನ ಮಾತೃದ್ವಯದ ವಧೆ ನಿನಗೆ ಸಫಲವಾದಪುದು?'** **(೨೩-೬೧)**

ಹೀಗೆ ಚಿತ್ರಾಂಗದೆ ಪ್ರಕ್ಷುಬ್ಧಳಾಗಿ ನುಡಿಯುವುದು ತೋಟಕ ಲಕ್ಷಣ.[2] ಆಗ ಉಲೂಪಿಯು :

---

1 'ರೂಪಂ ವಿತರ್ಕವದ್ವಾಕ್ಯಂ'
'ಸೋತ್ಕರ್ಷಂ ಸ್ಯಾದುದಾಹೃತಿಃ' } 'ದಶರೂಪಕ', ೧–೭೦,೭೧.

2 'ಸಂರಬ್ಧಂ ತೋಟಕಂ ವಚಃ'—ಅದೇ. ೧–೭೨.

'ದೇವಿ ನಿಲ್ಲು ; ಇನ್ನುಂ ಅರ್ಜುನನ ಮೃತಿ ಸಂಶಯಂ,
ಭಾವಿಸುವೊಡೆ ಎನಗೊಂದು ಕುಱುಪುಂಟು ತನ್ನ ಕೇ—
ಳೀವನದೊಳು ಅಂದು ಪಾರ್ಥಂ ತನಗೆ ತೋಱಿದಂ ದಾಡಿಮದ್ರುಮಂ....'
(೨೩-೫೬)

ಎಂದು ಹೇಳಿ ಆ ಗಿಡಕ್ಕೆ ಜೀವಕಳೆ ಇದೆಯೇ ಎಂದು ನೋಡಲು ಧಾವಿಸಿಹೋಗಿ, ಅದು ಒಣಗಿದ್ದುದನ್ನು ಕಂಡು, ಅರ್ಜುನನು ಮಡಿದಿದ್ದಾನೆಂದು ನಿಶ್ಚಯಿಸಿ ಕಾತರಗೊಂಡು ಮರುಕ್ಷಣವೇ ತಿರುಗಿ ಬರುತ್ತಾಳೆ. ಕೂಡಲೇ ಉಲೂಪಿ–ಚಿತ್ರಾಂಗದೆಯರು ರಣ ಭೂಮಿಗೆ ಬಂದು ಅರ್ಜುನ–ವೃಷಕೇತುಗಳ ಮೃತದೇಹಗಳ ಮೇಲೆ ಬಿದ್ದು ಪರಿಪರಿ ಯಾಗಿ ಶೋಕಿಸುತ್ತಾರೆ. ಹೀಗೆ ಚಿಹ್ನೆಯಿಂದ (ಮರಣವನ್ನು) ನಿಶ್ಚಯಿಸುವುದು ಅನುಮಾನ ಲಕ್ಷಣ.[1] ಈ ಘಟನೆಯಿಂದ ಬಭ್ರುವಾಹನನಿಗೆ ತನ್ನ ಕೃತಿಗಾಗಿ ಹೇಯ ವುಂಟಾಗುತ್ತದೆ. ಪ್ರಾಯಶ್ಚಿತ್ತವೆಂದು ಅಗ್ನಿಪ್ರವೇಶವನ್ನು ನಿರ್ಧರಿಸುತ್ತಾನೆ. ಆಗ ಚಿತ್ರಾಂಗದೆ 'ನರನ ಜೀವಕ್ಕೆ ದೇವಪುರ ಲಕ್ಷ್ಮೀಶ ಹೊಣೆ.' ಆದುದರಿಂದ ಕೃಷ್ಣ ಬರುವ ವರೆಗೆ ತಡೆ ಎಂದು ಮಗನನ್ನು ತಡೆಯುತ್ತಾಳೆ. ಅಲ್ಲದೆ ಸಂಜೀವಕ ಮಣಿಯ ಉಪಾ ಯವೂ ಹೊಳೆಯುತ್ತದೆ. ಇಲ್ಲಿ ಅರ್ಜುನನು ಜೀವಂತನಾಗುವ ಮತ್ತು ಯಜ್ಞವು ಸಂಪೂರ್ಣವಾಗುವ ಪ್ರಾಪ್ತ್ಯಾಶೆಯಿದೆ.

ರಣಾಂಗಣಕ್ಕೆ ನಾಯಕನಾದ ಅರ್ಜುನನು ಮಡಿದುಬಿಟ್ಟರೆ ಅಶ್ವಮೇಧ ಯಜ್ಞವು ಕನಸಿನ ಮಾತೇ ಸರಿ. ಅದಕ್ಕಾಗಿ ಅವನು ಬದುಕಲೇಬೇಕು. ಅದಕ್ಕೆ ನಾಗಲೋಕ ದಿಂದ ಸಂಜೀವಕ ಮಣಿಯನ್ನು ಪಡೆಯಲು ಸೂಚಿಸುತ್ತಾಳೆ. ಸಂಜೀವಕ ಮಣಿಯ ನೆಪದಿಂದ ಬಭ್ರುವಾಹನನೊಡನೆ ನಾವು ನಾಗಲೋಕವನ್ನು ಸಂದರ್ಶಿಸಿ ಆದಿಶೇಷ, ಧೃತರಾಷ್ಟ್ರ, ಪುಂಡರೀಕ, ದುಃಸ್ವಭಾವ, ದುರ್ಬುದ್ಧಿ ಮೊದಲಾದ ನಾಗರನ್ನು ಪರಿ ಚಯ ಮಾಡಿಕೊಳ್ಳುತ್ತೇವೆ.

ಮಣಿಯನ್ನು ದೊರಕಿಸಲು ಮೊದಲು ಸಾಮೋಪಾಯದಿಂದ ಪ್ರಯತ್ನಿಸ ಬೇಕೆಂದು ಪುಂಡರೀಕ ಎಂಬ ನಾಗನನ್ನು ಉಲೂಪಿ ಆದಿಶೇಷನ ಕಡೆಗೆ ಕಳಿಸುತ್ತಾಳೆ. ಆತನ ಆಸ್ಥಾನದ ಧೃತರಾಷ್ಟ್ರ ಮೊದಲಾದ ನಾಗರಿಗೆ ಮಣಿಯನ್ನು ಕೊಡಲು ಇಷ್ಟ ವಿಲ್ಲ.

'ಮಾನವರು ಖೂಳರು, ಕೃತಘ್ನರು, ಉಪಕಾರಮಂ ಬಲ್ಲರೆ ? ಇದಕ್ಕೆ ವೃಥಾಲೋಚನೆ ಗಳು ಏತಕ್ಕೆ ? ಮಣಿಯಂ ಕುಡಿದರ್ !'

ಎಂದು ವಿರೋಧಿಸುತ್ತಾರೆ. ಗರುಡನ ದಾಳಿಯಿಂದ ತನ್ನ ಪ್ರಜೆಗಳನ್ನು ರಕ್ಷಿಸಲು ಸಂಜೀವಕ ಅತ್ಯಂತ ಅಗತ್ಯದ ವಸ್ತು; ಅದನ್ನು ಒಳ್ಳೇ ಜತನವಾಗಿ ಇಟ್ಟುಕೊಳ್ಳ ಬೇಕು. ಮಂದಿಗೆ ಕೊಟ್ಟದ್ದು ತಿರುಗಿ ಬಾರದಿದ್ದರೆ ?—ಆದಿಶೇಷನು ಧೃತರಾಷ್ಟ್ರಾದಿ ಗಳ ಸಲಹೆಯಂತೆ ಅದನ್ನು ಕೊಡಲು ನಿರಾಕರಿಸುತ್ತಾನೆ. ಆಗ ಬಭ್ರುವಾಹನನು

---

1 'ಅಭ್ಯೂಹೋ ಲಿಂಗತೋಽನುಮಾ'—'ದಶರೂಪಕ', ೧–೭೫.

ಪಾತಾಳಕ್ಕೆ ದಾಳಿಯಿಟ್ಟು ನಾಗರನ್ನು ಸೋಲಿಸಿ ಸಂಜೀವಕ ಮಣಿಯನ್ನು ತರುತ್ತಾನೆ.

ಅರ್ಜುನ ಮಡಿದ ಸಮಯಕ್ಕೆ ಹಸ್ತಿನಾವತಿಯಲ್ಲಿ ಕುಂತಿಗೆ ದುಃಸ್ವಪ್ನ ಬೀಳುತ್ತದೆ. ಅದರಿಂದ ಅರ್ಜುನನಿಗೆ ಪ್ರಾಣಾಪಾಯ ಒದಗಿದೆಯೆಂದು ತಿಳಿದು ಕೃಷ್ಣನು ಭೀಮ, ಕುಂತಿ, ಯಶೋದೆಯರೊಡನೆ ರಣಾಂಗಣಕ್ಕೆ ಧಾವಿಸಿಬರುತ್ತಾನೆ. ಕೃಷ್ಣನು ಬರುವವರೆಗೆ, ಸಂಜೀವಕ ಮಣಿ ಬರುವವರೆಗೆ ಉಲೂಪಿ–ಚಿತ್ರಾಂಗದೆಯರು ಅರ್ಜುನ ವೃಷಕೇತುಗಳ ಶವಗಳನ್ನು ಕಾಯುತ್ತ ದುಃಖಿತೆಯರಾಗಿ ಸಂದೇಹ ಬಳಲಿಕೆಗಳಲ್ಲಿ ಮುಳುಗಾಡುತ್ತಿರುತ್ತಾರೆ (೨೪–೪೫,೪೭). ಇದು ಸಂಭ್ರಮ ಲಕ್ಷಣ.[1]

ಕೃಷ್ಣನೂ ರಣಾಂಗಣಕ್ಕೆ ಬಂದಿದ್ದಾನೆ; ಬಭ್ರುವಾಹನನು ಸಂಜೀವಕ ಮಣಿಯನ್ನೂ ತಂದಿದ್ದಾನೆ. ಆದರೆ ದುಃಸ್ವಭಾವ, ದುರ್ಬುದ್ಧಿಗಳ ಕೈತವಕದಿಂದ ಅರ್ಜುನ ವೃಷಕೇತುಗಳ ರುಂಡಗಳು ಕಾಣೆಯಾಗಿರುತ್ತವೆ. ಈ ರೀತಿಯ ಮೋಸವು ಅಧಿಬಲದ ಲಕ್ಷಣ.[2] ಇಲ್ಲಿಗೆ ಪ್ರತಿಮುಖ ಮತ್ತು ಗರ್ಭಸಂಧಿಗಳು ಮುಗಿಯುತ್ತವೆ.

**ಅವಮರ್ಶ ಮತ್ತು ಉಪಸಂಹೃತಿ ಸಂಧಿಗಳು :** ಇವು ಒಂದರಲ್ಲೊಂದು ಸೇರಿಕೊಂಡಿವೆ. ಅರ್ಜುನ–ವೃಷಕೇತುಗಳ ರುಂಡಗಳನ್ನು ಕಾಣದೆ ಎಲ್ಲರೂ ಚಿಂತೆಯಿಂದ ದಿಗ್ಭ್ರಾಂತರಾಗಿದ್ದಾರೆ. ಬಭ್ರುವಾಹನನು ಮೂರ್ಛಿತನಾಗಿದ್ದಾನೆ. ಎರಡೂ ರುಂಡಗಳು ಇಲ್ಲದಿದ್ದುದನ್ನು ಕೃಷ್ಣನು ಆಕಾಶಮಾರ್ಗದಲ್ಲಿರುವಾಗಲೇ ಕಾಣುತ್ತಾನೆ. ಅವನು ಭೀಮಾದಿಗಳೊಡನೆ ರಣಾಂಗಣಕ್ಕಿಳಿದು ಬರುತ್ತಾನೆ. ಬಭ್ರುವಾಹನನನ್ನು ಶೈತ್ಯೋಪಚಾರಗಳಿಂದ ಎಚ್ಚರಿಸಿದಾಗ ಅವನು ಭೀಮನಿಗೆರಗಿ ಆಡುವ ಮಾತಿದು :

‘ಜನಕನಂ ಕೊಂದವಂ ಪಾಪಿಯಲ್ಲವೆ ? ತನ್ನನು ಅನುಮಜಿಸದೆ ಗದೆಯೊಳು ಅಪ್ಪಳಿಸು!’ (೨೪_೫೫)

ಕೃಷ್ಣನಿಗೆ ವಂದಿಸಿ ಬೇಡಿಕೊಳ್ಳುವುದೂ ಇದನ್ನೇ :

‘ಶಿಕ್ಷೆ ರಕ್ಷೆಗೆ ಕರ್ತೃ, ವೈಷ್ಣವ ದ್ರೋಹಿಗಳಿಗೆ ಅಕ್ಷಮಂ ನೀನು. ಅದಱಿಂ ಅರ್ಜುನಂ ಭಾಗವತ ಪಕ್ಷಕೆ ಅಗ್ರೇಸರಂ; ತನಗೆ ಪಿತಂ. ಆತನಂ ಕೊಂದ ಕತದಿಂ ಕೊಲೆಗೆ ದಕ್ಷ ನಾಂ. ಮೀಱಿದೊಡೆ ರಾಹುವಿನ ಕಂಠಮಂ ತಕ್ಷಣದೊಳು ಅರಿದಂತೆ ಪಕ್ಷಿವಾಹನ ಕತ್ತರಿಸು ಚಕ್ರದಿಂ ತನ್ನ ಕೊರಲ !’ (೨೪–೫೬)

ಹೀಗೆ ಪಶ್ಚಾತ್ತಾಪಪಟ್ಟು ಬಭ್ರುವಾಹನನು ಗುರುಹಿರಿಯರನ್ನು ಮನ್ನಿಸುತ್ತಾನೆ. ಇದು ಪ್ರಸಂಗ ಲಕ್ಷಣ.[3] ಕುಂತಿ ಅರ್ಜುನನನ್ನು ನೆನೆದು ಕೃಷ್ಣನಿಗೆ ‘ನೀನಾರ ಭಂಡಿಯಂ ಪೊಡೆದಪ್ಪೈ ?’ (೨೪–೫೯) ‘ಅನುಜಾಗ್ರಜರ ನಡುವೆ ಚಂಡ ತೇಜದೊಳ್ ಎಸೆವರುಂಟೆ ?’ ‘ಧರ್ಮಜನಾರನಪ್ಪುವಂ?’ ಎಂದು ಶೋಕಿಸುತ್ತಾಳೆ. ಅರ್ಜುನನ ಪುನರುಜ್ಜೀವನದ ವಿಷಯದಲ್ಲಿ ಕೃಷ್ಣನೂ ಸಂಶಯಿತನಾಗಿ ಮಾನವರಂತೆ ದುಃಖಿಸು

---

1 ‘ಶಂಕಾತ್ರಾಸೌ ಚ ಸಂಭ್ರಮಃ’—‘ದಶರೂಪಕ’, ೧–೨೯.

2 ‘ಅಧಿಬಲಮಭಿಸಂಧಿಃ’ — ಅದೇ, ೧–೨೬.

3 ‘ಗುರುಕೀರ್ತನಂ ಪ್ರಸಂಗಃ’ — ಅದೇ, ೧–೪೯.

ವನು. ಆಗ 'ಶ್ವೇತವಾಹನನ ತಲೆಯಂ ತರಿಸು, ಜಗದೊಳಜ್ಞಾತವಾವುದು ನಿನಗೆ? ಸರ್ವಗತನಪ್ಪೆ ನೀನು' ಎಂದು ಅಹಿಪತಿಯಾದ ಆದಿಶೇಷನು ಹೇಳುತ್ತಾನೆ. ಅದಕ್ಕೆ ಶ್ರೀಕೃಷ್ಣನು ಪ್ರತಿಜ್ಞಾಪೂರ್ವಕವಾಗಿ ಹೇಳುತ್ತಾನೆ:

................'ನೀವೆಲ್ಲರುಂ ಕೇಳ್ವುದೀ
ಭಾಷೆಯಂ ಬ್ರಹ್ಮಚರ್ಯದೊಳಿಂದ್ರಿಯಂಗಳಂ ತಾನಿನ್ನೆಗಂ ಧರೆಯೊಳು ।
ಶೋಷಿಸಿದೆನಾದೊಡಾ ಪುಣ್ಯದಿಂ ಕುಂಡಲ ವಿ
ಭೂಷಿತದ ಪಾರ್ಥನ ಶಿರಂ ಬರಲಿ, ಕಳ್ದೊಯ್ದ
ದೋಷಿಗಳ್ ತನ್ನಾಜ್ಞೆಯಿಂದೆ ಹತರಾಗಲಿ; ಅಱಿದಿಹುದು ಸಾರಿದೆನೆಂದನು ॥'

ಹೀಗೆಂದು ಘೋಷಿಸಿ ಅವನು ಸುದರ್ಶನ ಚಕ್ರವನ್ನು ಬಿಡುತ್ತಾನೆ. ತನ್ನ ಶಕ್ತಿಯ ಬಗೆಗೆ ಆಡುವ ಮಾತಿಗೆ ಅಥವಾ ಪ್ರತಿಜ್ಞೆಗೆ ವ್ಯವಸಾಯವೆಂದು ಹೆಸರು.[1] ಆಗ ಸುದರ್ಶನವು ದುಃಸ್ವಭಾವ, ದುರ್ಬುದ್ಧಿಗಳನ್ನು ಕೊಂದು, ಬಕದಾಲ್ಭ್ಯನ ಅರಣ್ಯದಿಂದ ಅರ್ಜುನನ ರುಂಡವನ್ನು ತರುತ್ತದೆ. ಆಗ ಕೃಷ್ಣನು ರುಂಡಗಳನ್ನು ಶರೀರಗಳಿಗೆ ಜೋಡಿಸಿ ಸಂಜೀವಕದ ಮಣಿಯಿಂದ ಅರ್ಜುನ ವೃಷಕೇತುಗಳನ್ನು ಬದುಕಿಸುತ್ತಾನೆ. ಎಲ್ಲರಿಗೂ ಅಪೇಕ್ಷಣೀಯವಾದದ್ದು—ಅರ್ಜುನ, ವೃಷಕೇತುಗಳ ಪುನರುಜ್ಜೀವನ—ಪ್ರಾಪ್ತವಾದುದರ ಉಲ್ಲೇಖವು ಸಂಧಿ ೨೪ ಪದ್ಯ ೬೫ರಲ್ಲಿ ಬಂದಿದೆ. ಬಯಸಿದುದನ್ನು ಪಡೆಯುವದು ಆನಂದ ಲಕ್ಷಣ.[2] ಕೃಷ್ಣನು ನಿನಗೆ ಈ ಮರಣವು ಜಾಹ್ನವಿಯ ಶಾಪ ದಿಂದ ಆಯಿತು ಎಂದು ಅರ್ಜುನನಿಗೆ ತಿಳಿಸುವನು. ಎಲ್ಲರಿಗೂ ಕೃಷ್ಣದರ್ಶನದಿಂದ ಆನಂದವಾಗುತ್ತದೆ. 'ಪರೆದುವು ಸಮಸ್ತ ಸಂತಾಪಗಳು ಎಲ್ಲರ್ಗೆ ಕೃಷ್ಣದರ್ಶನದೊಳಂದು' (೨೪-೭೦). ದುಃಖ ಹೊರಟುಹೋಗುವುದು ಸಮಯದ ಲಕ್ಷಣ.[3]

ಈಗ ಬಭ್ರುವಾಹನನು ಮತ್ತೊಮ್ಮೆ ತನ್ನ ತಪ್ಪನ್ನೊಪ್ಪಿಕೊಂಡು ಅರ್ಜುನನಿಗೆ ನಮಸ್ಕರಿಸುತ್ತಾನೆ. ಆದರೆ ಅರ್ಜುನನಲ್ಲಿ ಇನ್ನೂ ವಾತ್ಸಲ್ಯದ ಸೆಲೆ ಒಡೆದಿರುವುದಿಲ್ಲ. ಹೀಗಾಗಿ ಬಭ್ರುವಾಹನನು,

......................'ಈ ರಾಜ್ಯಮಂ
ಮಜ್ಜನಕನಂಘ್ರಿಗೊಪ್ಪಿಸಿ ನಿಜ ಶರೀರಮಂ ಕೆಡಹಿ ತುಹಿನಾಚಲದೊಳು ॥
ಸಜ್ಜನರ ಗತಿವಡೆವೆನಲ್ಲದೊಡೆ ಗುರುಧರ್ಮ
ಕೃಜ್ಜನಾರ್ದನ ಭಕ್ತನೀತನ ಘಾತಿಸಿದ
ಕಜ್ಜದಿಂದೊದವಿದ ಮಹಾಪಾತಕಂ ಪೋಗದು (೨೪-೭೬)

ಎಂದು ಪಶ್ಚಾತ್ತಾಪ ಪಡುತ್ತಾನೆ. ಆಗ ಭೀಮನು,

'ತಪ್ಪನಾಡಿದೆ ಮಗನೆ, ಕೃಷ್ಣನಿರುತಿರೆ ಮುಂದೆ
ಬಪ್ಪುದೇ ಪಾತಕಂ ?...................

1 'ವ್ಯವಸಾಯಃ ಸ್ವಶಕ್ತ್ಯುಕ್ತಿಃ'—'ದಶರೂಪಕ', ೧-೯೧.
2 'ಆನಂದೋ ವಾಂಛಿತಾವಾಪ್ತಿಃ'—ಅದೇ. ೧-೧೦೪.
3 'ಸಮಯೋ ದುಃಖ ನಿರ್ಗಮಃ'—ಅದೇ. ೧-೧೦೫.

ಬಭ್ರುವಾದಿತ್ಯನಂ ಕಂಡಬಳಿಕ ಇರ್ದಪುದೆ
ಕಪ್ಪಿನ ತಮಂ?'

ಇತ್ಯಾದಿಯಾಗಿ ಪದ್ಯ ೭೭, ೭೮, ೭೯ರಲ್ಲಿ ಬುದ್ಧಿ ಹೇಳುತ್ತಾನೆ. ಈ ಉಪದೇಶವು ಅರ್ಜುನನನ್ನೂ ಎಚ್ಚರಿಸುತ್ತದೆ. ತಂದೆ-ಮಕ್ಕಳಲ್ಲಿ ವಿರೋಧವು ಶಮನವಾಗುತ್ತದೆ. ಅರ್ಜುನನ ನಡೆವಳಿಕೆ ಪರಿವರ್ತನ ಹೊಂದುತ್ತದೆ. ವಿರೋಧಶಮನವು ಶಕ್ತಿಯ ಲಕ್ಷಣ.[1] ಇಬ್ಬರೂ ವಾತ್ಸಲ್ಯದಿಂದ ಕೂಡಿಕೊಳ್ಳುತ್ತಾರೆ. ಬಭ್ರುವಾಹನನು ಎಲ್ಲರನ್ನೂ ಮಣಿಪುರಕ್ಕೆ ಕರೆದೊಯ್ದು ಸತ್ಕರಿಸುತ್ತಾನೆ. ಎಲ್ಲರೂ ಐದು ದಿನಗಳನ್ನು ಅಲ್ಲಿ ಆನಂದ ದಿಂದ ಕಳೆಯುತ್ತಾರೆ. ಬಳಿಕ ಕೃಷ್ಣನು ಎಲ್ಲರನ್ನು ಹಸ್ತಿನಾವತಿಗೆ ಕಳುಹಿ ತಾನು ಅರ್ಜುನನೊಂದಿಗೆ ಉಳಿಯುತ್ತಾನೆ. ಈ ಆಖ್ಯಾನವನ್ನು ಕೇಳಿದವರಿಗೆ—

'ಸಂಜೀವಕದ ಮಣಿಯ ಫಣಿಪತಿಯ ಕೃಷ್ಣನ ಧ
ನಂಜಯನ ಪುಣ್ಯಪ್ರಸಂಗದಿಂದಪಮೃತ್ಯು
ನಂಜು ದುಷ್ಕೃತಿ ಶತ್ರುಪೀಡೆಗಳ್ಪೊರ್ದವೆಂಬೀ ಮಹಾಮಹಿಮೆಯಿಂದೆ ॥
ರಂಜಿಪೀಕಥೆಗೇಳ್ದೊಡಾಯುರಾರೋಗ್ಯ ಮತಿ
ಮಂಜುಳ ಸುಕೀರ್ತಿಸುಖ ಸಂಪತ್ಕಳತ್ರಸುತ
ಸಂಜಾತ ಹರಿಭಕ್ತಿ ಸಮನಿಪುದು ದೇವಪುರ ಲಕ್ಷ್ಮೀಶನಾಜ್ಞೆಯಿಂದೆ ||'

ಎಂದು ಫಲಶ್ರುತಿಯನ್ನು ಹೇಳಿದ್ದಾನೆ. ಹೀಗೆ ಶುಭವನ್ನು ಕೋರುವುದು ಪ್ರಶಸ್ತಿಯ ಲಕ್ಷಣ.[2] ಇಲ್ಲಿಗೆ ಐದು ಸಂಧಿಗಳು, ೨೩ ಸಂಧ್ಯಂಗಗಳಿಂದ ಕೂಡಿದ ಅರ್ಜುನ-ಬಭ್ರು ವಾಹನ ಕಾಳಗದ ಕಥಾನಕವು ಮುಗಿಯುತ್ತದೆ.

ಈ ಕಥಾನಕಕ್ಕೆ ಹೊಂದಿಕೊಂಡೇ ಪತಾಕಾರೂಪದ ಸಂಗ್ರಹ ರಾಮಾಯಣವು ಬರುತ್ತದೆ. ಬಭ್ರುವಾಹನನು ಅರ್ಜುನನೊಡನೆ ಯುದ್ಧಮಾಡಿದುದು ಹಿಂದಕ್ಕೆ ಲವ-ಕುಶರು ರಾಮನೊಡನೆ ಕಾದಿದಂತಾಯಿತು ಎಂದು ತಿಳಿಸುವ ನಿಮಿತ್ತದಿಂದ ಕವಿ, ಇಡೀ ರಾಮಾಯಣವನ್ನು ಸಂಗ್ರಹವಾಗಿ ೪ ಸಂಧಿಗಳಲ್ಲಿ ಹೇಳುತ್ತಾನೆ. ಒಂದು ಸಂಧಿಯಲ್ಲಿ ಕಾಳಗವನ್ನು ವರ್ಣಿಸುತ್ತಾನೆ. ಇಲ್ಲಿ ಕವಿಯ ಸಂಗ್ರಹಕೌಶಲವನ್ನು ಕಾಣುತ್ತೇವೆ. ಈ ಕಥಾನಕದಲ್ಲಿ ಸೀತೆಯ ಪಾತ್ರ ಆಕರ್ಷಣೀಯವಾಗಿದೆ. ಲವ-ಕುಶರಿಗೆ ವಾಲ್ಮೀಕಿಯಂತಹ ಋಷಿಶ್ರೇಷ್ಠನು ಧನುರ್ವಿದ್ಯಾದಿ ಸಕಲ ವಿದ್ಯೆಗಳಿಗೆ ಗುರುವಾಗಿದ್ದರೆ, ಬಭ್ರುವಾಹನನಿಗೆ ತಾಯಿಯೇ ಗುರು. ಅವಳೇ ಮಾರ್ಗದರ್ಶಕಳು.

'ಮಾತೃದೇವೋ ಭವ' ಎಂಬುದನ್ನು ನಂಬಿದ್ದ ಬಭ್ರುವಾಹನನಿಗೆ ಕೃಷ್ಣದರ್ಶನದ ಲಾಭವನ್ನು ಒದಗಿಸುವುದೇ ಈ ಕಥಾನಕದ ಉದ್ದೇಶ. ಬಭ್ರುವಾಹನನು ಕೃಷ್ಣದರ್ಶನಕ್ಕೆ ಆತುರನಲ್ಲವಾದರೂ ತಾಯಿಯನ್ನೇ ನಂಬಿ, ಸುಬುದ್ಧಿಯನ್ನು ಪ್ರಧಾನವಾಗಿ ಆರಿಸಿದ ಸುಬುದ್ಧಿವಂತನಾದ ಸಾತ್ವಿಕ ಮತ್ತು ಕ್ಷಾತ್ರಧರ್ಮಶೀಲ ಬಾಲಕನೆಂದು ಹೇಳಲಡ್ಡಿ

1 'ವಿರೋಧ ಶಮನಂ ಶಕ್ತಿಃ'—'ದಶರೂಪಕ', ೧-೪೭.
2 'ಪ್ರಶಸ್ತಿಃ ಶುಭಶಂಸನಂ'— ಅದೇ. ೧-೧೧೦.

ಯಿಲ್ಲ. ತಾಯಿಯನ್ನು ಆದರಿಸಿದ ಪುಣ್ಯಸಂಚಯದಿಂದಲೇ ಅವನಿಗೆ ಕೃಷ್ಣದರ್ಶನದ ಲಾಭ ದೊರಕಿತು.

## ಸಂಗ್ರಹ ರಾಮಾಯಣ

**ವಿಷಗಳಿಗೆ**

ಪ್ರಸ್ತುತವಾದ ಅರ್ಜುನ-ಬಭ್ರುವಾಹನರ ಕಾಳಗಕ್ಕೆ ಮಹೋಪಮೆಯಾಗಿ, ಸಂಗ್ರಹವಾಗಿ ರಾಮಾಯಣವನ್ನು-ಲವಕುಶರ ಹುಟ್ಟು, ಬೆಳವಣಿಗೆ, ರಾಮನೊಡನೆ ಅವರ ಯುದ್ಧಗಳನ್ನು-ಇಲ್ಲಿ ಕವಿ ತಿಳಿಯಪಡಿಸಿದ್ದಾನೆ. ಮೂಲಕಥಾನಕದೊಂದಿಗೆ ಸಮಭಾಗಿಯಾದ ಈ ಕಥಾನಕವು ೨೪೮ ಪದ್ಯಗಳಲ್ಲಿ ಚಿತ್ರಿತವಾಗಿದೆ.

ಈ ಕಥಾನಕಕ್ಕೆ ದ್ವಿದಲ ಬೀಜವುಂಟು. ಸಂತಾನಾಪೇಕ್ಷೆ ಕಥಾಬೀಜದ ಒಂದು ದಲವಾದರೆ ಅಶ್ವಮೇಧ ಯಜ್ಞಾಪೇಕ್ಷೆ ಆದರ ಇನ್ನೊಂದು ದಲವಾಗಿದೆ. ಕಥಾನಾಯಕನಾದ ರಾಮನ ಅಯೋಧ್ಯಾಜೀವನ, ವನವಾಸ, ರಾವಣವಧ, ತನಯರೊಡನೆ ಯುದ್ಧ, ವಾಲ್ಮೀಕಿಯ ದರ್ಶನ, ಸಾನಂದದಿಂದ ಯಜ್ಞಸಮಾಪ್ತಿ ಇಷ್ಟು ವಿಷಯ ಇಲ್ಲಿ ಬಂದಿದೆ. ಸಂಧಿ ೧೮ ಮತ್ತು ೧೯ ಶ್ರೀರಾಮನ ಗೃಹಸ್ಥಜೀವನವನ್ನು ಚಿತ್ರಿಸಿದರೆ, ಸಂಧಿ ೨೦ ಮತ್ತು ೨೧ ಶ್ರೀರಾಮನ ಪಾತ್ರಜೀವನವನ್ನು ಒಳಗೊಂಡಿವೆ. ಸಂಧಿ ೧೮ರ ಆರಂಭದ ೧೧ ಪದ್ಯಗಳಲ್ಲಿ ರಾಮಚಂದ್ರನ ೯೦೦೦ ವರ್ಷಗಳ ಜೀವನವನ್ನು ಚಿತ್ರಿಸಿರುವುದು ಕ್ಷಣಮಾತ್ರ ಮಿಂಚುವ ಮಿಂಚಿನಲ್ಲಿ ಅಡಕವಾದ ತೇಜದಂತೆ ಬೆಳಗುತ್ತಿದೆ. ಇದು ಕವಿಯ ಸಂಗ್ರಹಕೌಶಲದ ದ್ಯೋತಕವಾಗಿದೆ. ಕ್ಷಾತ್ರಜೀವನವನ್ನು ವರ್ಣಿಸುವ ೧೨೯ ಪದ್ಯಗಳಲ್ಲಿ ೧೦೧ ಪದ್ಯಗಳು ಯಜ್ಞಾರಂಭ ಮತ್ತು ಯುದ್ಧವರ್ಣನೆಗಳಿಂದ ಕೂಡಿದ್ದು ಇನ್ನುಳಿದ ೨೮ ಪದ್ಯಗಳಲ್ಲಿ ಯಜ್ಞಸಮಾಪ್ತಿ, ಸತಿಸುತರೊಡನೆ ರಾಮನ ಮಿಲನ, ಅಯೋಧ್ಯಾಗಮನಗಳನ್ನು ಹೇಳಿದೆ.

ಮುಖಸಂಧಿ: ಸಂಧಿ ೧೮ ಪದ್ಯ ೧೬,೧೭, ೧೮ರಲ್ಲಿ ಶ್ರೀರಾಮನು ಸೀತೆಯ ಎದುರು

> 'ಕಾಂತೆ, ಕೇಳಿಕ್ಷ್ವಾಕುವಂಶಮೆನ್ನಲ್ಲಿ ಬಂ
> ದಾಂತುದಿಲ್ಲಿಂದೆ ಸಂತತಿ ನಡೆಯದಿರ್ದೊಡೆ ಕು
> ಲಾಂತಕಂ ತಾನಾದಪೆಂ ; ಸಾಕದಂತಿರಲಿ, ಮನುಜಗಳ ಸಂಸಾರದ
> ಭ್ರಾಂತಿಯಂ ಬಿಡಿಸುವೊಡಪತ್ಯದೇಳ್ಗೆಗಳೆ ವಿ
> ಶ್ರಾಂತಿಯಿಲ್ಲದೆ ಪೆಱತದೇನುಂಟು ? ಮುಂದೆ ಪು
> ತ್ರಾಂತರವನೈದದಿರ್ದಪೆನೆಂತೊ?'

ಎಂದು ಬಿಸುಸುಯ್ಯುವನು. ರಾಮನಂತಹ ಪತಿಯು ಸಂತಾನಾಪೇಕ್ಷೆಯನ್ನು ವ್ಯಕ್ತಪಡಿಸಿದ್ದು ಸಂಭವನೀಯವಾಗಿದ್ದರೂ ಅಷ್ಟು ಸಮಂಜಸವಲ್ಲ. ಈ ರೀತಿ ಸಂತಾನಾಪೇಕ್ಷೆಯ ಬೀಜ ಇರಿಸುವುದು ಉಪಕ್ಷೇಪದ ಲಕ್ಷಣ.[1] ಸಂಧಿ ೧೮ ಪದ್ಯ ೧೯, ೨೦, ೨೧ರಲ್ಲಿ ಸೀತೆ,

---

[1] 'ಬೀಜವಿನ್ಯಾಸ ಉಪಕ್ಷೇಪಃ'—'ದಶರೂಪಕ', ೧-೩೯.

...............'ಪುತ್ರವತಿಯಹುದು ಜ
ನ್ಮಾಂತರದ ಪುಣ್ಯವೈಸಲೆ ಪೆಣ್ಗೆ ಮುನ್ನ ತಾಂ
ನೋಂತುದಲ್ಲದೆ ಬಂದಪುದೆ ಬಱಿದೆ ಬಯಸಿದೊಡೆ....
ಒಳಗೆ ಪುದುಗಿರ್ದ ಪರಿಮಳದೊಳೊಪ್ಪುವಲ
ತಾಂತಕುಟ್ಮಲದಂತೆ ನರಕುವರ ಲಾಂಛನದ
ಕಾಂತಿಯಂ ತಳೆವುದಂಗನೆಯರೆಲ್ಲರ್ಗೆ ದೊರೆವುದೇ ಮೇದಿನಿಯೊಳು'

ಎಂದು ನುಡಿದು, ಕಂದನಿಂದ ಮಾತೆಗಾಗುವ ಆನಂದವನ್ನು ವರ್ಣಿಸುತ್ತಾ, 'ಆಯೆಂದು ಪಂಚೇಂದ್ರಿಯ ಪ್ರೀತಿಯಂ ಪಡೆವರಿನ್ನಾವ ಕೃತರೊ !' ಎಂದು ಆ ಸಂತಾನಾಪೇಕ್ಷೆಯ ಬೀಜಕ್ಕೆ ನೀರೆರೆಯುತ್ತಾಳೆ. ಇದು ಪರಿಕ್ರಿಯಾ ಲಕ್ಷಣ.[1]

ಹೀಗೆ ಇಬ್ಬರೂ ಚಿಂತಾತುರರಾಗಿ ಸಂತಾನಾಪೇಕ್ಷೆಯು ಪ್ರಬಲವಾಗಿದ್ದಾಗ ಸಂಧಿ ೧ಲ ಪದ್ಯ ೨೨ರಲ್ಲಿ ವಶಿಷ್ಠ ಮುನಿಗಳು ಬಂದು 'ಸಂತಾನಾಭ್ಯುದಯಮಾದಪುದು' ಎಂದು ಆಶೀರ್ವದಿಸುತ್ತಾರೆ. ಎಂದರೆ ಸಂತಾನಾಪೇಕ್ಷೆ ಸಿದ್ಧಿಸುವುದೆಂಬ ಭರವಸೆ. ಇದು ಪರಿನ್ಯಾಸದ ಲಕ್ಷಣ.[2] ಸಂಧಿ ೧ಲ ಪದ್ಯ ೧೨ ರಿಂದ ೧ಳರ ವರೆಗೆ ಶ್ರೀರಾಮನ ೯೦೦೦ ವರ್ಷಗಳ ಆಳಿಕೆಯ ಗುಣಕೀರ್ತನವಿದೆ. ಇದು ವಿಲೋಭನ ಲಕ್ಷಣ.[3] ವಶಿಷ್ಠ ಮುನಿಯ ಆಶೀರ್ವಾದ ದೊರಕಿದ ಬಳಿಕ ವಸಂತ ಕಾಲವು ಪ್ರಾಪ್ತವಾಗುತ್ತದೆ. ಆಗ ಸೀತೆ ಋತುಮತಿಯಾಗುತ್ತಾಳೆ. ಇದು ಸಂತಾನಾಪೇಕ್ಷಿಗಳಿಗೆ ಸುಖದ ಸಂವೇದನೆಯನ್ನುಂಟು ಮಾಡುವ ಸನ್ನಿವೇಶ. ಸುಖದ ಆಗಮನವು ಪ್ರಾಪ್ತಿಯ ಲಕ್ಷಣ.[4] ಸಂಧಿ ೧ಲ ಪದ್ಯ ೨ಳ-೨೫ ಋತುಮತಿ ಸೀತೆಯ ವರ್ಣನೆಯನ್ನು ಒಳಕೊಂಡಿವೆ. ಹಿಂದೆ ಎಷ್ಟೋ ಸಲ ಆಕೆ ಋತುಮತಿಯಾಗಿದ್ದರೂ ಈಗಿನ ಸೊಬಗು, ಸೊಗಸು, ಸಮಾಧಾನ ಆಗಿರಲಿಕ್ಕಿಲ್ಲ. ಏಕೆಂದರೆ, ಈಗ ವಶಿಷ್ಠರ ಆಶೀರ್ವಾದದ ಸುಖಸಂವೇದನೆಗಳಿವೆ ; ಅವು ಹಿಂದೆ ಇರಲಿಲ್ಲ. ಇಲ್ಲಿಗೆ ಮುಖ ಸಂಧಿಮುಗಿಯುತ್ತದೆ.

ಪ್ರತಿಮುಖ : ಸಂಧಿ ೧ಲ ಪದ್ಯ ೨೬ ರಿಂದ ೨೯ರ ವರೆಗೆ ರಾಮ ಸೀತೆಯರ ರತೀಚ್ಛೆ ಪ್ರಕಟವಾಗಿ ಚಿತ್ರಿಸಲಾಗಿದೆ. ಸಂಧಿ ೧ಲ ಪದ್ಯ ೨೭ರಲ್ಲಿ 'ಮಳೆಗಾಲದಿರವನೆಚ್ಚರಿಪ ಅರಸಿಯಂ ಕಂಡು ರಾಮನ ಮನಶ್ಚಾತಕಂ ನಲಿದುದು.' ಇದು ವಿಲಾಸದ ಲಕ್ಷಣ.[5] ಸಂಧಿ ೧ಲ ಪದ್ಯ ೨ಲರಲ್ಲಿ 'ಮಂದಗಮನೆಯ ಮಂದಹಾಸದ ವಿಲಾಸಮಂ' ಎಂಬಲ್ಲಿ ಬಳಸಿದ 'ವಿಲಾಸ' ಶಬ್ದದ ಪ್ರಯೋಗವೂ ಲಾಕ್ಷಣಿಕ ಪರಿಭಾಷೆಯ ಪ್ರಭಾವವನ್ನು ಎತ್ತಿ ತೋರಿಸುತ್ತದೆ. ಸಂಧಿ ೧ಲ ಪದ್ಯ ೩೧, ೩೨, ೩೩ ರಲ್ಲಿ ರಾಮ ಸೀತೆಯರ ರತಿ ಕ್ರೀಡೆಯ ತೃಪ್ತಿಯನ್ನು 'ಪರಸ್ಪರ ವಿಚಾರಮಂ ಮಱೆದೈಕ್ಯಭಾವದಿಂ ಸೊಗಸು

1 'ತದ್ಬಾಹುಲ್ಯಂ ಪರಿಕ್ರಿಯಾ'—'ದಶರೂಪಕ', ೧–ಳ೦.
2 'ತನ್ನಿಷ್ಪತ್ತಿಃ ಪರಿನ್ಯಾಸಃ'—ಅದೇ. ೧–ಳ೧.
3 'ಗುಣಾಖ್ಯಾನಂ ವಿಲೋಭನಂ'— ಅದೇ. ೧–ಳ೨.
4 'ಪ್ರಾಪ್ತಿಃ ಸುಖಾಗಮಃ'—ಅದೇ. ೧–ಳಳ.
5 'ರತ್ಯರ್ಥೇಹಾ ವಿಲಾಸಃ ಸ್ಯಾತ್'—ಅದೇ. ೧–೫೩.

ಗೊಳಿಸಿ' ಮತ್ತು 'ರಸದಾಳಾಪದಿಂದೆಸೆದರೊಂದಿನಿಸುಭಂಗವಿಲ್ಲದೆ ವೀರಭಟರೊದಗುವಂತೆ ಸಮರತಿಯೊಳಾ ದಂಪತಿಗಳು' ಎಂದು ವರ್ಣಿಸಲಾಗಿದೆ. ಇದು ಶಮನದ ಲಕ್ಷಣ.[1] 'ವರವಿಷ್ಣುನಕ್ಷತ್ರದಂತದೊಳ್ ವೈದೇಹಿಗಾಯ್ತು ಗರ್ಭಾದಾನ' ಎಂದು ರತಿಯ ಫಲದ ಉಲ್ಲೇಖವೂ ಇದೆ. ಸಂಧಿ ೧೪ ಪದ್ಯ ೩೪ ರಲ್ಲಿ ಸೀತೆಯು ಗರ್ಭಕ್ಕೆ ೪ ತಿಂಗಳಾದಾಗ ರಾಮನು,

'ಯೋಜನತ್ರಯದಗಲದುತ್ಸವದ ಶಾಲೆಯಂ
ರಾಜಿಸಲ್ ಕೈಗೈಸಿ ಬಳಿಕಲ್ಲಿ ನೆರೆದ ನಾ
ನಾಜನಕೆ ದಿವಿಜರ್ಗೆ ಸುಗ್ರೀವ ಮೊದಲಾದ ಕಪಿಗಳ್ಗೆ ಭೂಸುರರ್ಗೆ
ರಾಜವರ್ಗಕೆ ವಿಭೀಷಣಮುಖ್ಯ ದೈತ್ಯರ್ಗೆ
ಭೋಜನ ಸುಗಂಧ ತಾಂಬೂಲ ಪುಷ್ಪಾಕ್ಷತೆಯ
ಪೂಜೆ ವಸ್ತ್ರಾಭರಣದುಡುಗೊಱೆಗಳಂ ಕೊಟ್ಟು ರಾಘವಂ ಮನ್ನಿಸಿದನು'

ಎಂದು ಹೇಳಿದೆ. ನಾಲ್ಕೂ ವರ್ಣಗಳ ಬೆರಕೆ ವರ್ಣಸಂಹಾರದ ಲಕ್ಷಣ.[2] ಇಲ್ಲಿಗೆ ಪ್ರತಿಮುಖಸಂಧಿ ಮುಗಿಯುತ್ತದೆ.

**ಗರ್ಭ :** ಸಂಧಿ ೧೪ ಪದ್ಯ ೩೯ರಲ್ಲಿ ಸೀತೆ, 'ನಿಜಕಾಂತನೇಕಾಂತಕೈದಿ, "ಕುತ್ಸಿತಂ ಪೊದ್ದದ ಆಶ್ರಮದ ಋಷಿಪತ್ನಿಯರ ಸತ್ಸಂಗದೊಳ್ ತನ್ನ ಬೇಸಱಂ ತವಿಸುವೆಂ; ಇದು ಉತ್ಸುಕಂ ತನಗೆ; ಅದಱಿಂ ಇನ್ನೊಮ್ಮೆ ಬನಕೆ ತನ್ನಂ ಕಳುಹಬೇಕು"' ಎಂದು ತನ್ನ ಬಯಕೆಯನ್ನು ಅರುಹುತ್ತಾಳೆ. ಇರುವ ವಿಷಯವನ್ನು ಹೇಳುವುದು ಮಾರ್ಗದ ಲಕ್ಷಣ.[3] ಮುಂದೆ ಪದ್ಯ ೪೩ರಲ್ಲಿ ನಗರ ಶೋಧನೆಯ ಚಾರನೊಬ್ಬನು ಬಹಳ ಒತ್ತಾಯದಿಂದ ಕೇಳಿದಾಗ ರಾಮನಿಗೆ,

'ದೇವ, ನಿನ್ನಂ ಪೆಸರಿಸಿದನೀಶನಾದಪಂ,
ಸೇವಿಸಿದವಂ ಚತುರ್ಮುಖನಾಗಲುಳ್ಳಪಂ,
ಕಾವುದೆಂದೈದೆ ಮಱೆವೊಕ್ಕವಂ ಜಗದೊಳಾಚಂದ್ರಾರ್ಕಮಾಗಿ ಬಾಳ್ವ
ಶ್ರೀವಿಭವದಿಂ ಶಕ್ರಪದವಿಯಂ ಜಱೆದಪಂ;
ಭೂವಲಯದೊಳ್ ನಿಂದಿಸುವರುಂಟೆ? ತರಣಿಯುಂ
ಕಾವಳಂ ಮುಸುಕಿರ್ದೊಡೇನಪ್ಪುದು?'

ಎಂದು ಅತಿಶಯವಾಗಿ ಹೊಗಳುತ್ತಾನೆ. ಇದು ಉದಾಹರಣದ ಲಕ್ಷಣ.[4] ಇಲ್ಲಿಗೆ ಗರ್ಭಸಂಧಿಯು ಸಮಾಪ್ತಿ.

**ಅವಮರ್ಶ :** ಸಂಧಿ ೧೪ ಪದ್ಯ ೪೬ರಲ್ಲಿ ನಗರಶೋಧಕನು, ರಾಮನ ಮೇಲೆ ಅಪವಾದವಿಟ್ಟ, ಅಗಸನಾಡಿದ ಮಾತನ್ನು ಅರುಹುತ್ತಾನೆ. ಅದು ರಾಮನಿಗೆ ಅಸಹನೀಯವಾಗುತ್ತದೆ. ಆಗ ರಾಮನು ತನ್ನ ತಮ್ಮಂದಿರನ್ನು ಕರೆಸಿಕೊಂಡು, 'ಎನಗೆ

---

1 'ತಚ್ಛಮಃ ಶಮಃ'—'ದಶರೂಪಕ' ೧–೫೬.
2 'ಚಾತುರ್ವರ್ಣ್ಯೋಪಗಮನಂ ವರ್ಣಸಂಹಾರ ಇಷ್ಯತೇ'—ಅದೇ. ೧–೬೫.
3 'ಮಾರ್ಗಸ್ತತ್ತ್ವಾರ್ಥಕೀರ್ತನಂ'—ಅದೇ. ೧–೬೯.
4 'ಸೋತ್ಕರ್ಷಂ ಸ್ಯಾದುದಾಹೃತಿಃ'—ಅದೇ. ೧–೭೧.

ಪೊದ್ದಿದ **ಅಪವಾದವಂ** ನೀವಱಿದುದಿಲ್ಲಕಟ! ಸಾಕಿನ್ನು! ನೆರವಿಗಳೊಳು ಕದ್ದ ಕಳ್ಳನವೊಲ್ ಆಡಿಸಿಕೊಳಲ್ಕಾಱೆಂ! ಒಡಲಿದ್ದಲ್ಲಿ ನಿಂದೆಗೊಳಗಾಗಿ ಬದುಕುವನಲ್ಲ; ತಿದ್ದಿತೀರದ ವಿಲಗಕೆ ಅಂಜುವೆಂ; ಸೀತೆಯುಂ ಬಿಟ್ಟಲ್ಲದಿರೆಂ!' ಎಂದು ತಿಳಿಸುತ್ತಾನೆ. ಇದು ಅಪವಾದದ ಲಕ್ಷಣ.[1] ಅಪವಾದ ಶಬ್ದದ ಪ್ರಯೋಗವಿರುವುದೂ ಇಲ್ಲಿ ಗಮನಾರ್ಹ. ಸಂಧಿ ೧೮ ಪದ್ಯ ೪೭ ರಿಂದ ೬೦ರವರೆಗೆ ಈ ವಿಷಯವನ್ನು ಕುರಿತು ಅಣ್ಣತಮ್ಮಂದಿರಲ್ಲಿ ವಾದವಾಗುತ್ತದೆ. ರಾಮನು 'ಸೀತೆಯನ್ನು ಬಿಡುವುದೇ ಸರಿ' ಎಂದು ನಿರ್ಧಾರವನ್ನು ಪ್ರಕಟಿಸಿದಾಗ ಭರತ ಲಕ್ಷ್ಮಣಾದಿಗಳು ಬೆದರುತ್ತಾರೆ, ಉದ್ವೇಗಗೊಳ್ಳುತ್ತಾರೆ; ಸೀತೆ ಶುದ್ಧಳು, ಅವಳನ್ನು ಶಿಕ್ಷಿಸುವುದು ತರವಲ್ಲ ಎಂದು ಮನಗಾಣಿಸಲು ಶ್ರಮಿಸುತ್ತಾರೆ. ಆದರೂ ಕೊನೆಗೆ ರಾಮನು 'ಮಮತೆಯಂ ಮಹಾಯೋಗಿ ಬಿಡುವಂತೆ ಇವಳಂ ಉಳಿವೆ' ಎಂದೆನ್ನುತ್ತಾನೆ. ಬೆದರಿಸುವುದು, ಉದ್ವೇಗಗೊಳಿಸುವುದು ದ್ಯುತಿಯ ಲಕ್ಷಣ.[2] ಇಲ್ಲಿಗೆ ಅವಮರ್ಶ ಸಂಧಿ ಮುಗಿಯುತ್ತದೆ.

ನಿರ್ವಹಣ: ಸಂಧಿ ೧೯ ಪದ್ಯ ೪,೫,೬ ಇವು ಗಂಗಾನದೀ ವರ್ಣನೆಯ ಅತ್ಯಂತ ಸುಂದರವಾದ ಪದ್ಯಗಳು. ಸಂಧಿ ೧೯ ಪದ್ಯ ೧೨ರಿಂದ ೧೮ರವರೆಗೆ ಲಕ್ಷ್ಮಣ-ಸೀತೆಯರಲ್ಲಿ ಮಾತುಕತೆ ನಡೆಯುತ್ತದೆ. ಸತ್ಯವನ್ನರಿಯದ ಸೀತೆಯ ಮುಗ್ಧ ಪ್ರಶ್ನೆಗಳು ಲಕ್ಷ್ಮಣನ ಹೃದಯವನ್ನು ಸೀಳುತ್ತವೆ. ಕೊನೆಗೆ ಲಕ್ಷ್ಮಣನು ವಿಧಿಯಿಲ್ಲದೆ ತಾನವಳನ್ನು ಅಡವಿಗೆ ಕರತಂದ ನೈಜ ಕಾರಣವನ್ನು ಹೇಳಬೇಕಾಗುತ್ತದೆ. ಇದು ಸೀತೆಗೆ ವಜ್ರದ ಆಘಾತವೇ ಸರಿ. ಪರಸ್ಪರರಲ್ಲಿ ನಡೆವ ಮಾತು ಪರಿಭಾಷಣದ ಲಕ್ಷಣ.[3] ಸಂಧಿ ೧೯ಪದ್ಯ ೧೯ ರಿಂದ ೨೩ರವರೆಗೆ ಸೀತೆ ಲಕ್ಷ್ಮಣನೆದುರು ರಾಮನ ಗುಣಗಾನವನ್ನು ಮಾಡುತ್ತ, ತಾನು ಅವನೊಂದಿಗೆ ಅನುಭವಿಸಿದ ಸುಖದುಃಖಗಳನ್ನು ತೋಡಿಕೊಳ್ಳುತ್ತ ಮೈಮರೆಯುತ್ತಾಳೆ. ಅನುಭವಿಸಿದುದನ್ನು ಹೇಳುವುದು ನಿರ್ಣಯದ ಲಕ್ಷಣ.[4] ಸಂಧಿ ೧೯ ಪದ್ಯ ೪೦-೪೧ರಲ್ಲಿ ವಾಲ್ಮೀಕಿಮುನಿ ಬಂದು ದುಃಖಿತೆಯಾದ ಸೀತೆಯನ್ನು ಪ್ರೀತಿಯಿಂದ ಮಾತನಾಡಿಸಿ ಸಂತೈಸುತ್ತಾನೆ. ಆಕೆ ಭಕ್ತಿಯಿಂದ ಮುನಿಪದಕ್ಕೆ ಎರಗುತ್ತಾಳೆ. ವಾಲ್ಮೀಕಿ ತನ್ನನ್ನು ಆಶ್ರಮಕ್ಕೆ ಕರೆದುದರಿಂದಲೂ, ಆ ಮೂಲಕ ತನ್ನಿಚ್ಛೆ ಈಡೇರಿದುದರಿಂದಲೂ ಸೀತೆ ಪ್ರಸನ್ನಳಾಗುತ್ತಾಳೆ. ಪ್ರಸನ್ನಗೊಳಿಸುವ ಉದ್ದೇಶದಿಂದ ಭಕ್ತಿ-ಪ್ರೇಮಗಳಿಂದ ಮಾಡುವ ಶುಶ್ರೂಷೆ ಅಥವಾ ಆರಾಧನೆ ಪ್ರಸಾದದ ಲಕ್ಷಣ.[5] ಸಂಧಿ ೧೯ ಪದ್ಯ ೪೫ರಲ್ಲಿ 'ಅವನಿಜೆಯ ಗರ್ಭಕ್ಕೆ ತುಂಬಿದುದು ನವಮಾಸದ ಅವಧಿ; ಬಳಿಕ ಒಂದಿರುಳು ಶುಭಲಗ್ನದೊಳು ಪಡೆದಳು ಅವಳಿಮಕ್ಕಳನು ಉಪಚರಿಸೆವಿದಗ್ಧಾಂಗನೆಯರು ಸೂತಿ

---

1 'ದೋಷಪ್ರಖ್ಯಾಽಪವಾದಃ ಸ್ಯಾತ್'—'ದಶರೂಪಕ', ೧-೪೩.
2 'ತರ್ಜನೋದ್ವೇಜನೇ ದ್ಯುತಿಃ'—ಅದೇ. ೧-೪೮.
3 'ಪರಿಭಾಷಾ ಮಿಥೋ ಜಲ್ಪಃ'—ಅದೇ. ೧-೧೦೨.
4 'ಅನುಭೂತಾಖ್ಯಾತು ನಿರ್ಣಯಃ—ಅದೇ. ೧-೧೦೧.
5 'ಪ್ರಸಾದಃ ಪರ್ಯುಪಾಸನಂ'—ಅದೇ. ೧-೧೦೩.

ಕಾಗ್ರಹದೊಳು' ಎಂಬ ಸಂಗತಿ ಹೇಳಿದೆ. ಇಲ್ಲಿ ರಾಮ ಸೀತೆಯರ ಸಂತಾನವಾಂಛೆ ಪೂರ್ಣವಾಗಿರುವುದರಿಂದ ಇದು ಆನಂದ ಲಕ್ಷಣ.[1] ಸಂಧಿ ೧೯ ಪದ್ಯ ೪೬ರಲ್ಲಿ ರಾಮ ಸೀತೆಯರ ಸಂತಾನಾಭಾವದ ಕೊರಗು ಸರಿದುಹೋಗಿ ಇಚ್ಛೆ ಸಫಲವಾದ ಸಮಯ ವಿದೆಂಬುದು ಸೃಷ್ಟಿಯ ವಿಲಾಸದಲ್ಲಿ ಸೂಚಿತವಾಗಿದೆ. ಆ ವರ್ಣನೆ ಇಂತಿದೆ:

'ದೆಸೆಗಳ್ ಪ್ರಸನ್ನತೆಯೊಳ್ ಎಸೆದುವು, ಆಗಸದೊಳ್ ಉಡು–
ವಿಸರಂಗಳ್ ಒಪ್ಪಿದುವು, ಪೊಸಗಂಪಿಡಿದು ಗಾಳಿ
ಪಸರಿಸಿತು, ತವೆ ಸುಪ್ರದಕ್ಷಿಣದೊಳ್ ಉರಿದುದು ಅಗ್ನಿಜ್ವಾಲೆ, ಕಡಲುಕ್ಕಿತು॥'

ಇದು ಸಮಯ[2] ಮತ್ತು ಕೃತಿಯ[3] ಲಕ್ಷಣ. ಇಲ್ಲಿಗೆ ನಿರ್ವಹಣ ಸಂಧಿ ಮತ್ತು ಕಥಾ ವಸ್ತುವಿನ ಒಂದು ಬೀಜದ ಸಿದ್ಧಿ ಪೂರೈಸುತ್ತದೆ.

ಕಥಾವಸ್ತುವಿನ ಬೀಜದ ಎರಡನೆಯ ದಳವಾದ ಅಶ್ವಮೇಧ ಯಜ್ಞದ ವಿಚಾರವು ಸಂಧಿ ೨೦ ರಿಂದ ಆರಂಭವಾಗಿ ಸಂಧಿ ೨೧ರಲ್ಲಿ ಮುಕ್ತಾಯಗೊಳ್ಳುತ್ತದೆ. ಈ ಭಾಗದಲ್ಲಿ ಮುಖ, ಪ್ರತಿಮುಖ, ಗರ್ಭ, ಅವಮರ್ಶ, ನಿರ್ವಹಣ ಸಂಧಿಗಳು ಇಲ್ಲಿಗೆ ಮುಗಿಯು ತ್ತವೆ ಎಂದು ಕಟ್ಟುನಿಟ್ಟಾಗಿ ಹೇಳಲು ಬರುವಂತಿಲ್ಲ. ಆದರೆ ಎಲ್ಲ ಸಂಧಿಗಳಲ್ಲಿಯ ಸಂಧ್ಯಂಗಗಳ ಲಕ್ಷಣಗಳನ್ನು ಸೂಚಿಸುವ ಪದ್ಯಗಳು ಮಾತ್ರ ಸ್ಪಷ್ಟವಾಗಿ ಕಂಡುಬರು ತ್ತವೆ. ಹಾಗೆ ಸ್ಪಷ್ಟವಾಗಿ ಕಂಡುಬರುವ ಸಂಧ್ಯಂಗಗಳನ್ನು ಮಾತ್ರ ಕೆಳಗೆ ತೋರಿ ಸಿದ್ದೇವೆ.

ಸಂಧಿ ೨೦ ಪದ್ಯ ೨ ರಲ್ಲಿ,

'ರಾವಣವಧೆಯೊಳಂದು ಬಂದಾ ಬ್ರಹ್ಮಹತಿ ತನ್ನನು
ಅವಗಡಿಸಲದಕೆ ನಿಷ್ಕೃತಿಯಾವುದೆಂದು ಸಾ
ಱುವ ನಿಗಮದರ್ಥಮಂ ತಿಳಿದು ಹಯಮೇಧಮಂ
ತವೆ ನೆಗಳ್ಚುವನಾಗಿ ನಿಶ್ಚೈಸಿ ಕರಸಿದಂ ವರವಸಿಷ್ಠಾದಿಗಳನು ||'

ಎಂದು ಹೇಳಿದೆ. ಇಲ್ಲಿ ಕಥಾಬೀಜವನ್ನು ಇರಿಸಿದುದರಿಂದ ಇದು ಉಪಕ್ಷೇಪದ ಲಕ್ಷಣ.[4] ಪದ್ಯ ೩ ಮತ್ತು ೪ರಲ್ಲಿ ರಾಮನ ಯಜ್ಞಸಿದ್ಧತೆ, ಋಷಿಗಳ ಆಗಮನ, ಮೂರು ಅಕ್ಷೋ ಹಿಣಿಸೈನ್ಯಸಮೇತನಾದ ಶತ್ರುಘ್ನನ ರಕ್ಷಣೆಯಲ್ಲಿ ಯಜ್ಞಾಶ್ವದ ಪ್ರಸ್ಥಾನ ಇವುಗಳ ವರ್ಣನೆಯಿದೆ. ಈ ರೀತಿ ಬೀಜದ ಹೆಚ್ಚಳ ಮತ್ತು ಸಿದ್ಧಿ ಪರಿಕ್ರಿಯೆಯ ಮತ್ತು ಪರಿನ್ಯಾಸದ ಲಕ್ಷಣಗಳು.[5]

ಸಂಧಿ ೨೦ ಪದ್ಯ ೧೦ ರಿಂದ ಸಂಧಿ ೨೧ ಪದ್ಯ ೩೬ರ ವರೆಗೆ ಲವಕುಶರು ಕುದುರೆ

---

1 'ಆನಂದೋ ವಾಂಛಿತಾವಾಪ್ತಿಃ'—'ದಶರೂಪಕ', ೧–೧೦೪.

2 'ಸಮಯೋ ದುಃಖನಿರ್ಗಮಃ'
3 'ಕೃತಿರ್ಲಬ್ಧಾರ್ಥಶಮನಂ' —ಅದೇ. ೧–೧೦೫,೧೦೬.

4 'ಬೀಜನ್ಯಾಸ ಉಪಕ್ಷೇಪಃ'—ಅದೇ. ೧–೩೯.

5 'ತದ್ಬಾಹುಲ್ಯಂ ಪರಿಕ್ರಿಯಾ', 'ತನ್ನಿಷ್ಪತ್ತಿಃ ಪರಿನ್ಯಾಸಃ'—ಅದೇ. ೧–೪೦,೪೧.

ಗಾಹಿಗಳಾದ ಶತ್ರುಘ್ನಾದಿ ಅನೇಕರೊಡನೆ ಕಾದಿದ ಯುದ್ಧವು. ಅದರಲ್ಲಿ ರಾಮನು ಮೈಮರೆದವರೆಗಿನ ಸನ್ನಿವೇಶವು ಚಿತ್ರಿತವಾಗಿದೆ. ಸಂಧಿ ೨೧ ಪದ್ಯ ೧ರಲ್ಲಿ ರಾಮನ ಮನಸ್ಥಿತಿಯನ್ನು

'ಜಾಹ್ನವಿಯ ತೀರದೊಳ್ ದೀಕ್ಷೆಗೊಂ
ಡಿರುತಿರ್ದ ರಾಘವಂ ಚಿತ್ತದನುತಾಪದಿಂ
ಭರತನಂ ಕರೆದು, ಶತ್ರುಘ್ನನೇಗೆಯ್ದನೆಂಬುದನುಸಿರರಾರು ಮೆನಗೆ
ತರಳರಂ ಪಿಡಿದಪನೊ, ಕೊಂದಪನೊ ? ಲಕ್ಷ್ಮಣಂ
ಧುರದೊಳ್ ಬಳಲ್ದಪನೊ ? ಸೋಲ್ದಪನೊ?
ತುರಗಮಂ ಬಿಡಿಸಿ ತಂದಪನೊ ? ತಾನಱಿಯೆನೆಂದಾಸಱಿಂ ಚಿಂತಿಸಿದನು ॥'

ಎಂದು ಬಣ್ಣಿಸಲಾಗಿದೆ. ಹೀಗೆ ರಾಮನು ಶಂಕೆ ಬಳಲಿಕೆಗಳಿಗೆ ತುತ್ತಾಗುವುದು ಗರ್ಭ ಸಂಧಿಯ ಸಂಭ್ರಮ ಎಂಬ ಸಂಧ್ಯಂಗದ ಲಕ್ಷಣ.[1] ಸಂಧಿ ೨೧ ಪದ್ಯ ೧೬ ರಲ್ಲಿ ಲವ ಕುಶರೊಂದಿಗೆ ಸಾಮದಾನಗಳ ಮಾತನ್ನಾಡಿದ ಉಲ್ಲೇಖವಿದೆ. ಇದು ಗರ್ಭಸಂಧಿಯ ಸಂಗ್ರಹ ಎಂಬ ಸಂಧ್ಯಂಗದ ಲಕ್ಷಣವಾಗಿದೆ.[2] ಸಂಧಿ ೨೧ ಪದ್ಯ ೨೭ರಲ್ಲಿ ಲವಕುಶರು,

'ಈ ತಪೋವನದೊಳೆಮ್ಮೀರ್ವರನವಳಿಯಾಗಿ
ಸೀತೆಯೊರ್ವಳೆ ಪಡೆದವಳನುದಿನದೊಳಾರೈದು
ಜಾತೋಪನಯನಾದಿ ಕರ್ಮಂಗಳಂ ಮಾಡಿ ನಿಗಮಾಗಮ ಸ್ಮೃತಿಗಳ
ವ್ರಾತಮಂ ಬರಿಸಿ, ಕಾರ್ಮುಕವೇದಮಂ ಕಲಿಸಿ,
ನೀತಿಗಳನಱುಹಿ, ರಾಮಾಯಣವನೋದಿಸಿ, ಮ
ಹಾತಿಬಲರೆನಿಸಿದಂ ವಾಲ್ಮೀಕಿ ಮುನಿಪಂ'

ಎಂದು ಇದ್ದ ವಿಷಯವನ್ನು ತಿಳುಹುತ್ತಾರೆ. ಇದು ಗರ್ಭಸಂಧಿಯ ಮಾರ್ಗ ಎಂಬ ಸಂಧ್ಯಂಗದ ಲಕ್ಷಣ.[3] ಸಂಧಿ ೨೧, ಪದ್ಯ ೫೦,೫೧ ರಲ್ಲಿ ವಾಲ್ಮೀಕಿ ಮುನಿ ಕಮಂಡಲು ವಿನ ಉದಕವನ್ನು ಮೈಮರೆದ ರಾಮನ ಮೇಲೆ ಸಿಂಪಡಿಸಲು ಅವನು ಎಚ್ಚರಿಯುವನು. ಮಂತ್ರಪೂತಜಲದಿಂದ ಭರತಾದಿಗಳು ಜೀವಿಸುವರು. ಸಮಸ್ತ ಸೈನ್ಯವು ಏಳುವುದು. ಪರೆಗಳಿದ ಫಣಿಕುಲದಂತೆ ಚತುರ್ಬಲ ನಲಿಯುವುದು. ಹೀಗೆ ದುಃಖವು ಹರಿಯುವುದು ನಿರ್ವಹಣ ಸಂಧಿಯ ಸಮಯವೆಂಬ ಸಂಧ್ಯಂಗದ ಲಕ್ಷಣವಾಗಿದೆ.[4] ಮುಂದಿನ ೫೨ನೆಯ ಪದ್ಯದಲ್ಲಿ ವಾಲ್ಮೀಕಿ ರಾಮನಿಗೆ ಮಾಡಿದ ಸತ್ಕಾರದ ವರ್ಣನೆಯಿದೆ. ಇದು ನಿರ್ವಹಣ ಸಂಧಿಯ ಭಾಷಣ ಎಂಬ ಸಂಧ್ಯಂಗದ ಲಕ್ಷಣವಾಗಿದೆ.[5] ಸಂಧಿ ೨೧ ಪದ್ಯ ೫೩ ರಲ್ಲಿ ವಾಲ್ಮೀಕಿಯು, ಲವಕುಶರು ರಾಮನ ತನಯರೆಂಬುದನ್ನು ಸ್ಪಷ್ಟಪಡಿಸುವನು. ರಾಮ ನಿಗೆ ಅವರು ತನ್ನ ಮಕ್ಕಳಾಗುವುದು ಎಂದರೆ ಅದ್ಭುತವಾದುದೊಂದು ದೊರಕಿದಂತೆಯೆ

1 'ಶಂಕಾತ್ರಾಸೌ ಚ ಸಂಭ್ರಮಃ'— 'ದಶರೂಪಕ', ೧–೭೯.
2 'ಸಂಗ್ರಹಃ ಸಾಮದಾನೋಕ್ತಿಃ'—ಅದೇ. ೧–೭೪.
3 'ಮಾರ್ಗಸ್ತತ್ತ್ವಾರ್ಥ ಕೀರ್ತನಂ'—ಅದೇ. ೧–೬೯.
4 'ಸಮಯೋ ದುಃಖನಿರ್ಗಮಃ'—ಅದೇ. ೧–೧೦೫.
5 'ಮಾನಾದ್ಯಾಪ್ತಿಶ್ಚ ಭಾಷಣಂ'— ಅದೇ. ೧–೧೦೭.

ಸರಿ. ಇದು ಉಪಗೂಹನದ ಲಕ್ಷಣ.[1] ಸಂಧಿ ೨೧ ಪದ್ಯ ೬೧, ೬೨ರಲ್ಲಿ ತನಯರ ಮಿಲನದಿಂದ ರಾಮನಿಗಾದ ಆನಂದವನ್ನೂ ಪದ್ಯ ೬೩ ರಲ್ಲಿ ರಾಮನು ಮೂಜಗಂ ಪೊಗಳಲ್ಕೆ ಯಜ್ಞಮಂ ನಡೆಸಿದುದನ್ನು ಚಿತ್ರಸಲಾಗಿದೆ. ಪುತ್ರಲಾಭ ಮತ್ತು ಅಶ್ವ ಮೇಧ ಯಜ್ಞ ಎಂಬ ಎರಡೂ ವಾಂಛಿತಗಳು ಇಲ್ಲಿ ಪೂರ್ಣವಾದುದನ್ನು ಕಾಣಬಹುದು. ಇದು ಆನಂದದ ಲಕ್ಷಣ.[2] ಸಂಧಿ ೨೧ ಪದ್ಯ ೬೬ ರಲ್ಲಿ ಈ ಕಥಾಶ್ರವಣದ ಫಲಶ್ರುತಿ ಯನ್ನು ಹೇಳಿದೆ : 'ಆಲಿಪರ್ಗೆ ಆಯುರಾರೋಗ್ಯಂ ಐಶ್ವರ್ಯಂ ವಿಶಾಲಮತಿ, ಸತ್ಕೀರ್ತಿ, ವಿಮಲಸಂತತಿ, ಸುಗತಿ ದೊರೆಕೊಂಬುದು ಇಹಪರದೊಳು.' ಹೀಗೆ ಶುಭವನ್ನು ಕೋರು ವುದು ಪ್ರಶಸ್ತಿಯ ಲಕ್ಷಣ.[3]

ಇಲ್ಲಿ ಚಿತ್ರಿಸಿರುವ ರಾಮಾಯಣದ ಕಥಾವಸ್ತು ವೈದಿಕ ಪರಂಪರೆಯ ಪ್ರಸಿದ್ಧ ರಾಮಾಯಣದ್ದೇ ಆದರೂ ಅದನ್ನು ಸಂಗ್ರಹವಾಗಿ ಹೇಳಿರುವುದು ಈ ಕಾವ್ಯದ ವೈಶಿಷ್ಟ್ಯ. ಅಲ್ಲದೇ ಪೂರ್ವ ಮತ್ತು ಉತ್ತರ ರಾಮಾಯಣ ಕಥೆಯನ್ನು ಇಲ್ಲಿ ಒತ್ತಟ್ಟಿಗೆ ಕೂಡಿಸಿ ಹೇಳಿರುವುದು ಇದರ ಇನ್ನೊಂದು ವೈಶಿಷ್ಟ್ಯ. ಈ ಸಂಗ್ರಹ ರಾಮಾಯಣವು ಮೂಲ ಕಥಾವಸ್ತುವಿನಲ್ಲಿ ಪತಾಕಾ ಜಾತಿಗೆ ಸೇರುವುದರಿಂದ ಈ ಕಥಾಭಾಗವೂ ಮೂಲಕಥಾ ನಕದ ಗರ್ಭಸಂಧಿಗೆ ಸೇರಿದುದಾಗಿದೆ.

ಈ ಕಥಾನಕದಲ್ಲಿ ಬರುವ ಪ್ರಮುಖ ಪಾತ್ರಗಳು ರಾಮ, ಲಕ್ಷ್ಮಣ, ಸೀತೆ, ವಾಲ್ಮೀಕಿ ಮತ್ತು ಲವಕುಶರು. ರಾಮಸೀತೆಯರ ದಾಂಪತ್ಯಜೀವನದಲ್ಲಿ ವಿಷಗಳಿಗೆ ಯೆಂದರೆ ಅಗಸನೊಬ್ಬನು ಸೀತೆಗೆ ಕುಂದಿಟ್ಟು ನುಡಿದ ಅಪವಾದದ ಮಾತು ರಾಮನ ಕಿವಿಗೆ ಬಿದ್ದುದು. ಈ ಅಪವಾದದ ಮೂಲಕ, ಸೀತಾಪರಿತ್ಯಾಗವು ಅನಿವಾರ್ಯ ಎಂಬು ದನ್ನು ರಾಮನು ಸಂಧಿ ೧೮ ಪದ್ಯ ೫೦ ರಲ್ಲಿ ಹೇಳುತ್ತಾನೆ :

'ಇವಳಯೋನಿಜೆ, ರೂಪಗುಣಶೀಲಸಂಪನ್ನೆ,<br>
ಭುವನಪಾವನೆ, ಪುಣ್ಯಚರಿತೆ, ಮಂಗಳಮಹೋ<br>
ತ್ಸವೆ, ಪತಿವ್ರತೆ ಎಂಬುದಂ ಬಲ್ಲೆನಾದೊಡಂ ನಿಂದೆಗೊಳಗಾದ ಬಳಿಕ<br>
ಅವನಿಸುತೆಯಂ ತನಗೆ ಬಿಡುವುದೇ ನಿಶ್ಚಯಂ<br>
ರವಿಕುಲದ ರಾಯರಪಕೀರ್ತಿಯಂ ತಾಳ್ದಪರೆ ?<br>
ಕುವರನಾಗಿರ್ದ ತನ್ನಂ ತಾತನುಳಿದುದಿಲ್ಲವೆ ಸತ್ಯಭಾಷೆಗಾಗಿ?'

ರಾಮಚಂದ್ರನು ಧರ್ಮಪಾಲನೆಯಲ್ಲಿ ಅಗ್ರಗಣ್ಯನಾಗಿ ಆದರ್ಶಪುರುಷನಾಗಿದ್ದಾನೆ. ತಂದೆಯ ವಚನಪೂರ್ತಿಗಾಗಿ ರಾಜ್ಯವನ್ನೇ ತ್ಯಜಿಸಿದ ರಾಮನು ಪಿತೃಭಕ್ತನಾಗಿದ್ದರೆ, ಬಭ್ರುವಾಹನನು ಆದರ್ಶಮಾತೃಭಕ್ತನಾಗಿದ್ದಾನೆ. ಆಪತ್ಸಮಯದಲ್ಲಿ ಅಧರ್ಮದಿಂದ ನಡೆದು ಸುಖದಲ್ಲಿದ್ದಾಗ ಧರ್ಮದಿಂದ ನಡೆದರೆ ಅದು ಧರ್ಮ ಎನಿಸೀತೆ? ಸುಖದುಃಖ ಗಳೆರಡರಲ್ಲೂ ಧರ್ಮವನ್ನು ನಡಸುವವನೇ ನಿಜವಾದ ಧಾರ್ಮಿಕಪುರುಷನೆನ್ನಬೇಕು.

---

1 'ಅದ್ಭುತಪ್ರಾಪ್ತೀ ಪೂರ್ವಭಾವೋಪಗೂಹನೇ'—'ದಶರೂಪಕ', ೧–೧೦೮.

2 'ಆನಂದೋ ವಾಂಛಿತಾವಾಪ್ತಿಃ'—ಅದೇ. ೧–೧೦೪.

3 'ಪ್ರಶಸ್ತಿಃ ಶುಭಶಂಸನಂ'—ಅದೇ. ೧–೧೧೦.

ಪತಿಯ ವಾಕ್ಯವನ್ನು ವೇದವಾಕ್ಯವೆಂದು ಪರಿಗಣಿಸುವ, ಪತಿಯ ಸುಖವೇ ತನ್ನ ಸುಖವೆಂದು ಬಗೆಯುವ ತನ್ನ ನಲ್ಮೆಯ ಪತ್ನಿಯಾದ ಸೀತೆಯನ್ನು ತ್ಯಜಿಸುವುದೇನೂ ರಾಮನಿಗೆ ಪ್ರಿಯವಾದುದಲ್ಲ. ಈ ಕಾರ್ಯ ಅವನಿಗೆ ಸಕ್ಕರೆಯ ಗುಳಿಗೆಯಂತಲ್ಲ. ವಿಷದ ಗುಳಿಗೆ. ಅವನ ವಿಚಾರ ದೃಢ, ಗಟ್ಟಿ. ವಜ್ರದ ಹಲ್ಲುಗಳಂತೆ ಕಬ್ಬಿಣದ ಕಡಲೆಗಳನ್ನೂ ನುರಿಸಬಲ್ಲುದು. ಸೀತೆಯನ್ನು ತ್ಯಜಿಸಿದಾಗ ಮಾನವನಂತೆ ರಾಮನು ಅಳುತ್ತಾನೇನೋ ನಿಜ; ಆದರೆ ಯಜ್ಞಕ್ಕೆ ದೀಕ್ಷಿತನಾಗುವ ಸಮಯದಲ್ಲಿ ಪತ್ನಿಯ ಆವಶ್ಯಕತೆಯುಂಟಾಗಲು, ಸೀತೆಯ ಮೂರ್ತಿಯನ್ನು ಮಾಡಿಸಿ ಪಕ್ಕದಲ್ಲಿ ಕುಳ್ಳಿರಿಸಿಕೊಂಡಾನೇ ಹೊರತು, ಅವಳನ್ನು ಕರೆಸಿಕೊಳ್ಳಲಾರ. ಇನ್ನೊಬ್ಬಳನ್ನು ಪತ್ನಿಯಾಗಿ ವರಿಸಲೊಲ್ಲದ ಏಕಪತ್ನೀವ್ರತಸ್ಥ. ಸೀತೆಯ ಮೂರ್ತಿಯನ್ನು ಮಾಡಿಸಿಟ್ಟುಕೊಂಡಲ್ಲಿ ಅವಳ ಪತ್ನಿತ್ವವನ್ನು ಅಲ್ಲಗಳೆದಿಲ್ಲವೆಂದೇ ಅರ್ಥವಾಗುತ್ತದೆ. ಅಪವಾದಕ್ಕಾಗಿ ಅವಳನ್ನು ಅಗಲಬೇಕಾಗಿ ಬಂದಿದೆ. ಪವಿತ್ರಳಾದ ಪತ್ನಿಯನ್ನು, ಪ್ರಿಯೆಯನ್ನು ಬಿಡುವಾಗ ಅವನಿಗಾದ ಅಪಾರವೇದನೆ ಅವನು ಆಕೆಯನ್ನು ತಮ್ಮಂದಿರೆದುರು ಬಣ್ಣಿಸುವಲ್ಲಿ ವ್ಯಕ್ತವಾಗುತ್ತದೆ. ರಾಜ್ಯದ ಒಬ್ಬಾನೊಬ್ಬ ಯಃಕಶ್ಚಿತ್ ಪ್ರಜೆಯಿಂದಲೂ ಅಲ್ಲೆನಿಸಿಕೊಳ್ಳಲಾರದೆ, ರಾಜಧರ್ಮದ ಅಸಾಮಾನ್ಯ ಆದರ್ಶಕ್ಕಾಗಿ ತನ್ನ ಸುಖವನ್ನು, ಪ್ರಿಯವಸ್ತುವನ್ನು, ಉತ್ತಮ ವ್ಯಕ್ತಿಯನ್ನು ಬಿಡುತ್ತಾನೆ ರಾಮಚಂದ್ರ.

ರಾಮನಿಗೆ ೯೦೦೦ ವರ್ಷಗಳ ಅನಂತರ ಸಂತಾನಾಪೇಕ್ಷೆಯಾದುದು ಇಲ್ಲಿ ಒಂದು ಮೋಜಿನ ಮಾತಾಗಿ ತೋರುತ್ತದೆ. ಆದರೆ, ಇಷ್ಟು ತಡವಾಗಿ ಈ ಅಪೇಕ್ಷೆ ಹುಟ್ಟಿದುದು ಸಂತಾನಮೋಹದಿಂದಲ್ಲ, 'ಅಪುತ್ರಸ್ಯ ಗತಿರ್ನಾಸ್ತಿ' ಎಂಬ ಕೊರಗಿನಿಂದ. ಸೀತೆ ಕೂಡ 'ಪುತ್ರವತಿಯಹುದು ಜನ್ಮಾಂತರದ ಪುಣ್ಯಮೈಸಲೆ' ಎಂದು ನಂಬಿದವಳು. ಅವರ ಇಚ್ಛೆಯು ವಶಿಷ್ಠರ ಆಶೀರ್ವಾದದಿಂದ ಪೂರ್ತಿಗೊಳ್ಳುವುದು ಯುಕ್ತವೇ ಆಗಿದೆ.

ಸೀತೆಯ ಜೀವನವನ್ನು ನೋಡಿದಾಗ ಅವಳ ಜೀವ ಒಂದು ತಿರುಗಣಿ ಮಡುವಿನಲ್ಲಿ ಸಿಕ್ಕಿದೆ ಎಂದು ಕಂಡುಬರುವುದು. ಸುಖದ ಅಲೆಗಳು ಮೇಲೆಮೇಲೆ ತೋರುತ್ತಿದ್ದರೂ ದುಃಖದ ಆಳವು ಅಪರಂಪಾರವಾಗಿದೆ. ರಾಮನಿಗೆ ಪಟ್ಟಾಭಿಷೇಕವಾಗಿ ತಾನು ರಾಣಿಯಾಗುವ ಸುಮುಹೂರ್ತವನ್ನು ಕಾಣುವೆನೆಂದಿರುವಾಗ, ಯೌವನಾರಂಭದ ದಶೆಯಲ್ಲಿ ನಾರುಮಡಿಯುಟ್ಟು ಕಾನನಪ್ರಾಂತದಲ್ಲಿ ಜೀವನವನ್ನು ಸವೆಸಬೇಕಾಗುತ್ತದೆ; ಅರಣ್ಯವೇ ಆಗಲಿ, ತನ್ನ ಮನೋವಲ್ಲಭನ ಸಾನಿಧ್ಯದಲ್ಲಿ ಹಾಯಾಗಿ ಇರುತ್ತೇನೆ ಎಂದರೆ ರಾವಣನ ಕಪಟಕ್ಕೆ ಒಳಗಾಗಿ ಅಗಲಿಕೆಯನ್ನು ಅನುಭವಿಸಬೇಕಾಗುತ್ತದೆ; ವನವಾಸ ಮುಗಿದು, ವಿಯೋಗ ಹಿಂಗಿ ರಾಮನು ರಾಜ್ಯವನ್ನು ಸ್ವೀಕರಿಸಿದ ಮೇಲೆ ಮಕ್ಕಳಿಲ್ಲದ ಕೊರಗು. ಅದು ಪೂರೈಸಿತು, ಇನ್ನು ಕಷ್ಟವಿಲ್ಲ ಎಂದಾಗಲಿಲ್ಲ. ಗರ್ಭಿಣಿಯಾದ ಸೀತೆ ತಪೋವನದ ಶಾಂತ ವಾತಾವರಣದಲ್ಲಿ ಕಾಲಕಳೆಯಬೇಕೆಂದು ಬಯಸಿದರೆ ಘೋರಾರಣ್ಯದ ವಾಸ ಅವಳಿಗೆ ಪ್ರಾಪ್ತವಾಗುತ್ತದೆ.

ಸೀತೆಯ ಪತಿಭಕ್ತಿಯ ಬಗ್ಗೆ ಹೇಳಬೇಕಾದುದೇ ಇಲ್ಲ. ನಿತ್ಯಸ್ಮರಣೀಯವಾದ

ನಾರೀಪಂಚಕದಲ್ಲಿ ಅವಳೊಬ್ಬಳಾಗಿದ್ದಾಳೆ. ರಾಮನು ತನ್ನನ್ನು ತ್ಯಜಿಸಿದನು ಎಂಬ ಘೋರ ವೃತ್ತಾಂತವನ್ನು ಲಕ್ಷ್ಮಣನಿಂದ ತಿಳಿದಾಗಲೂ ಸೀತೆಯ ಪತಿಭಕ್ತಿ ಅಣು ಮಾತ್ರವೂ ಕುಗ್ಗುವುದಿಲ್ಲ. 'ರಾಮನಂ ಭುವನಾಭಿರಾಮನಂ ಗುಣರತ್ನಧಾಮನಂ' (೧೯-೨೨) ಇತ್ಯಾದಿಯಾಗಿ ಪತಿಯ ಗುಣಗಾನ ಮಾಡುತ್ತ ಮೈಮರೆಯುತ್ತಾಳೆ. ಆಗ ಲಕ್ಷ್ಮಣನು ಸೀತೆಗೆ ಜೊತೆಯಲ್ಲಿ ಇರುವೆನೆಂದು ಹೇಳಿದರೆ ಅವಳು,

> 'ಏಕೆ ನಿಂದಿಹೆ, ಪೋಗು ಸೌಮಿತ್ರಿ, ಕೋಪಿಸನೆ ಕಾಕುತ್ಸ್ಥನು, ಇಲ್ಲಿ ತಳುವಿದೊಡೆ?
> ನೆರವುಂಟು ತನಗೆ ಈ ಕಾಡೊಳು; ಉಗ್ರಜಂತುಗಳು. ಅಲ್ಲಿ ರಘುನಾಥನು ಏಕಾಕಿಯಾಗಿರ್ಪನು'

ಎಂದು ನುಡಿದ ಮಾತು ಮಾರ್ಮಿಕವಾಗಿದೆ. ಪತಿ ತನ್ನನ್ನು ತೊರೆದು ಘೋರಾರಣ್ಯಕ್ಕೆ ಅಟ್ಟಿದರೂ ಅವನ ನಾಮಸ್ಮರಣೆಯೆ ತನಗೆ ಜೀವನ ಎಂಬುದು ಸೀತೆಯ ಜೀವನದ ಶ್ರದ್ಧೆಯಾಗಿದೆ. ಅವಳ ಶಾಂತ ಸ್ವಭಾವ, ಪತಿಭಕ್ತಿ, ಧೈರ್ಯದ ತೇಜಸ್ಸು, ವಾತ್ಸಲ್ಯ ಎಲ್ಲವೂ ಆದರ್ಶಪ್ರಾಯವಾಗಿವೆ.

ಲಕ್ಷ್ಮಣನಿಗೆ ಸ್ವತಂತ್ರವಾದ ವ್ಯಕ್ತಿತ್ವವಿಲ್ಲ. ರಾಮ ಸೀತೆಯರ ಹೃದಯದೇಗುಲದ ಕಾವಲುಗಾರನವನು. ಅವರಿಬ್ಬರ ಮಾತು ಅವನಿಗೆ ವೇದವಾಕ್ಯ. ಹನುಮಂತನಂತೆ ಲಕ್ಷ್ಮಣನೂ ಒಬ್ಬ ಭಕ್ತನು. ರಾಮನು ಸೀತೆಯನ್ನು ತ್ಯಜಿಸುವುದು ಅವನಿಗೆ ಸಮ್ಮತ ವಲ್ಲ. ತನ್ನ ರೀತಿಯಿಂದ ಸೀತೆ ಪರಿಶುದ್ಧಳು ಎಂಬುದನ್ನು ರಾಮನಿಗೆ ಮನವರಿಕೆ ಮಾಡಿಕೊಡಲು ಪ್ರಯತ್ನಿಸುತ್ತಾನೆ. ಆದರೆ ರಾಮನು ಸೀತೆಯನ್ನು ಬಿಡುವುದು ರಾಜಧರ್ಮಕ್ಕಾಗಿ ಮತ್ತು ಅವಳನ್ನು ಬಿಡುವುದರಿಂದ ರಾಮನಿಗೂ ಸುಖವಿಲ್ಲ ಎಂಬುದು ತಿಳಿದುಬಂದಾಗ, ಲಕ್ಷ್ಮಣನು ಅಣ್ಣನಾಜ್ಞೆಯನ್ನು ಶಿರಸಾವಹಿಸಿ ಸೀತೆಯನ್ನು ಅಡವಿಯಲ್ಲಿ ಬಿಟ್ಟುಬರಲು ಒಪ್ಪುತ್ತಾನೆ. ಏನೇ ಇದ್ದರೂ ಲಕ್ಷ್ಮಣನು ರಾಮನ ಪ್ರೀತಿಯ ತಮ್ಮ ಮತ್ತು ಸೀತೆಯ ಆತ್ಮೀಯ ಮೈದುನನಾಗಿದ್ದನು ಎಂಬುದರಲ್ಲಿ ಸಂದೇಹವಿಲ್ಲ.

ಘೋರಾರಣ್ಯದಲ್ಲಿ ಸೀತೆಗೆ ವಾಲ್ಮೀಕಿಯ ಭೆಟ್ಟಿಯಾದುದು ಮಳಲುಗಾಡಿನಲ್ಲಿ ಅಮೃತದ ಝರಿ ಸಿಕ್ಕಿದಂತೆಯೆ ಸರಿ. ಆ ಋಷಿಯ ಕೃಪಾಛತ್ರದಡಿಯಲ್ಲಿ ದಿನತುಂಬಿ, ಲವಕುಶರನ್ನು ಹೆತ್ತಳು. ವಾಲ್ಮೀಕಿ ಸೀತೆಗೆ 'ಜನಕಂಗೆ ತಾವನ್ಯರಲ್ಲ' ಎಂದು ಪಿತೃಸ್ಥಾನ ದಲ್ಲಿ ನಿಂತು ಲವಕುಶರಿಗೆ ವಿದ್ಯಾಗುರುಗಳೂ ಆದರು. ಬಾಲಕರು ಆ ಋಷಿಯಿಂದ ರಾಮಾಯಣವನ್ನು ಸರಾಗವಾಗಿ ಹಾಡಲು ಕಲಿತರಲ್ಲದೆ, ರಾಮನನ್ನೂ ಯುದ್ಧದಲ್ಲಿ ಮೈಮರೆಸುವಂತಹ ಧನುರ್ವಿದ್ಯಾಕೌಶಲವನ್ನೂ ಪಡೆದರು. ರಾಮಸೀತೆಯರ ಪುನರ್ಮಿಲ ನಕ್ಕೆ ವಾಲ್ಮೀಕಿಮುನಿ ಸೇತುವಾಗಿದ್ದಾರೆ. ಲಂಕಾಪ್ರಸಂಗದಲ್ಲಿ ಹನುಮಂತನು ಅವರಿಬ್ಬರ ಮಿಲನಕ್ಕಾಗಿ ಸೇತುಬಂಧನ ಮಾಡಿದರೆ, ಇಲ್ಲಿ ದೈವವು ವಾಲ್ಮೀಕಿಯೆಂಬ ಸೇತುವೆಯನ್ನು ನಿರ್ಮಾಣ ಮಾಡಿರುವಂತೆ ತೋರುತ್ತದೆ.

ಬಾಲಕರಾದ ಲವಕುಶರ ಪಾತ್ರಗಳಂತೂ ಅವರ ಪರಾಕ್ರಮದಿಂದ ಜನರ ಮನ ವನ್ನು ಗೆಲ್ಲುತ್ತವೆ. ಮಧುರ ಕಂಠದಿಂದ ರಾಮಾಯಣವನ್ನು ಹಾಡುವವರಾಗಿಯೂ

ರಾಮನನ್ನೇ ಅರಿಯದ ಮುಗ್ಧಬಾಲಕರವರು. ರಾಮ ಮತ್ತು ಸೀತೆಯ ಆನಂದದ ಗಂಟು ಲವಕುಶರಾಗಿದ್ದಾರೆ.

ಈ ಸಂಗ್ರಹ ರಾಮಾಯಣದ ಕಥಾನಕಕ್ಕೆ ಜೈಮಿನಿಭಾರತ ಕಾವ್ಯದಲ್ಲಿ ಸ್ವತಂತ್ರ ವಾದ ಸ್ಥಾನವಿದೆ. ಮಹಾಭಾರತದ ಕಥೆಯಲ್ಲಿ ರಾಮಾಯಣದ ಕಥೆಯ ಕಸೂತಿ ಹಾಕಲು ತಾತ ತನಯರಲ್ಲಿಯ ಯುದ್ಧದ ಸಾಮ್ಯವೇ ಕಾರಣವಾಗಿದೆ. ಇದು ಜೈಮಿನಿ ಭಾರತ ಕಾವ್ಯದಲ್ಲಿಯ ಒಂದು ವೈಶಿಷ್ಟ್ಯವಾಗಿದೆ.

## ಅವಮರ್ಶ ಸಂಧಿ

ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ ।
ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ॥

—'ಭಗವದ್ಗೀತೆ', ೧೮-೭೮.

ಮಣಿಪುರದಿಂದ ಹೊರಬಿದ್ದ ಯಜ್ಞಾಶ್ವವು ಶರದೃತುವಿನಲ್ಲಿ ರತ್ನಪುರಕ್ಕೆ ಬರುತ್ತದೆ. ಅಲ್ಲಿ ಆಳುತ್ತಿದ್ದ ಮಯೂರಧ್ವಜನು, ಆನೆಯ ಅಶ್ವಮೇಧವನ್ನು ನರ್ಮದಾ ತೀರದಲ್ಲಿ ಹಮ್ಮಿದ್ದಾನೆ. ಅವನ ಮಗ ತಾಮ್ರಧ್ವಜನು ಯಜ್ಞಾಶ್ವದ ಕಾವಲುಗಾರ ನಾಗಿದ್ದಾನೆ. ಈ ಕಥಾನಕವು ಸಂಧಿ ೨೫-೨೬ರಲ್ಲಿ ಪೂರ್ತಿಗೊಂಡು, ಸಂಧಿ ೨೭ರಲ್ಲಿ ಸೌರಾಷ್ಟ್ರದ ವೀರವರ್ಮನ ಕಥಾನಕವಿದೆ. ಸಂಧಿ ೨೮ ರಿಂದ ಸಂಧಿ ೩೨ರ ೨೨ನೆಯ ಪದ್ಯದವರೆಗೆ ಸ್ವಯಂಪೂರ್ಣವಾದ ಚಂದ್ರಹಾಸನ ಆಖ್ಯಾನ ಬರುತ್ತದೆ. ಸಂಧಿ ೩೨ರ ೩೫ ಪದ್ಯಗಳಲ್ಲಿ ಬಡಗಣ ಪಯೋನಿಧಿಯ ಬಕದಾಲ್ಭ್ಯನ ಹಾಗೂ ಸಿಂಧು ದೇಶದ ದುಶ್ಶಳೆಯ ಕಥಾನಕಗಳಿವೆ.

ಮಣಿಪುರದಿಂದ ಯಜ್ಞಾಶ್ವವು ಹೊರಡುವಾಗ 'ನರನ ಜೀವಕ್ಕೆ ಪೊಣೆಯಾದ ದೇವಪುರಲಕ್ಷ್ಮೀಶ' (ಶ್ರೀಕೃಷ್ಣ)ನೂ ಅರ್ಜುನನೊಂದಿಗೆ ತೆರಳುತ್ತಾನೆ. ಎಂದಮೇಲೆ, ಯಜ್ಞಾಶ್ವದ ಇನ್ನು ಮುಂದಣ ಪರಿಭ್ರಮಣದಲ್ಲಿಯ ಅಡ್ಡಿಆತಂಕಗಳನ್ನು ಸಹಜ ವಾಗಿ ದಾಟಲಾಗುತ್ತದೆ. ಪಾಂಡವರ ಗೆಲವು ಸುಲಭವಾಗುತ್ತದೆ ಎಂಬ ಬಗ್ಗೆ ಸಂಶಯ ಪಡಬೇಕಾಗಿಲ್ಲ. ಮುಖ್ಯ ಕಥಾನಕದ ರಣಾಂಗಣನಾಯಕನಾದ ಅರ್ಜುನನು ಮರಣಕ್ಕೆ ಅಂಜಬೇಕಾಗಿಲ್ಲ. ಮರಣ ಬಂದರೂ ಪುನರುಜ್ಜೀವಿಸಲು ಶಕ್ತನಾದ ಶ್ರೀಕೃಷ್ಣನು ಜೊತೆಗಿದ್ದಾನೆ. ಈ ಕಾವ್ಯದ ಕಥಾನಕ ಬೀಜವು ಅಶ್ವಮೇಧಯಜ್ಞವಾಗಿದ್ದು, ಯಜ್ಞ ಸಮಾಪ್ತಿಯು ಕಥಾನಕದ ಫಲವಾಗಿದೆ. ನಿರಪಾಯ ಮತ್ತು ಫಲಪ್ರಾಪ್ತಿ ನಿಶ್ಚಿತವಾಗುವುದೇ ಕಥಾನಕದ ಪಂಚ ಅವಸ್ಥೆಗಳಲ್ಲಿ ಚತುರ್ಥ ಅವಸ್ಥೆ. ಅದಕ್ಕೆ ನಿಯತಾಪ್ತಿ ಎಂದು ಹೆಸರು. 'ಅಪಾಯಾಭಾವತಃ ಪ್ರಾಪ್ತಿರ್ನಿಯತಾಪ್ತಿಃ ಸುನಿಶ್ಚಿತಾ' (ದ.ರೂ. ೧-೩೨) ಎಂದು ಲಾಕ್ಷಣಿಕರು ಹೇಳಿದ್ದಾರೆ. ಈ ಲಕ್ಷಣವುಳ್ಳ ಕಥಾಭಾಗವನ್ನು ಕವಿಯು ಅವ ಮರ್ಶಸಂಧಿಗೆ ಸೇರಿಸಿದ್ದಾನೆ. ಗರ್ಭಸಂಧಿಯಲ್ಲಿ ಪ್ರಕಟವಾದ ಬೀಜಕ್ಕೆ ಸಂಬಂಧಿಸಿ, ನಿಶ್ಚಿತ ಫಲಪ್ರಾಪ್ತಿಯ ನಿರ್ಧಾರವನ್ನು ಕುರಿತು ಒತ್ತಿ ಪರಿಶೀಲನ ಮಾಡುವುದು ಅವ

ಮರ್ಶಸಂಧಿ ಎಂದೂ ಮತ್ತು ಈ ಪರ್ಯಾಲೋಚನೆಯು ಕೋಪ, ವ್ಯಸನ, ಲೋಭದಿಂದ ನಡೆಯುವುದೆಂದೂ ಲಾಕ್ಷಣಿಕರು ಹೇಳುತ್ತಾರೆ :

ಕ್ರೋಧೇನಾವಮೃಶೇದ್ಯತ್ರ ವ್ಯಸನಾದ್ವಾ ವಿಲೋಭನಾತ್ ।
ಗರ್ಭನಿರ್ಭಿನ್ನಬೀಜಾರ್ಥಃ ಸೋಽವಮರ್ಶೋಽಂಗ ಸಂಗ್ರಹಃ ॥

—'ದಶರೂಪಕ,' ೧–೮೧, ಪು. ೪೭.

[ಅನು: ಕೋಪ, ವ್ಯಸನ ಅಥವಾ ಲೋಭದಿಂದ ಪರ್ಯಾಲೋಚಿಸುವಲ್ಲಿ (ಇರುವ) ಅಂಗಗಳ ಸಂಗ್ರಹವು 'ಅವಮರ್ಶ (ಸಂಧಿ)', ಗರ್ಭದಲ್ಲಿ ಚೆನ್ನಾಗಿ ಒಡೆದು ಪ್ರಕಟವಾದ ಬೀಜವು (ಅಲ್ಲಿನ) ವಿಷಯವಾಗಿದೆ] ಸಂಧಿ ೨೫ ರಿಂದ ೩೨ರ ಕೊನೆಯವರೆಗಿನ ಕಥಾನಕವು ಅವಮರ್ಶಸಂಧಿಯ ಲಕ್ಷಣವನ್ನೊಳಕೊಂಡಿರುವುದನ್ನು ಸ್ಪಷ್ಟವಾಗಿ ತೋರಿಸುತ್ತದೆ.

ಮೃತನಾದ ಅರ್ಜುನನನ್ನು ಬದುಕಿಸಿದ ಶ್ರೀಕೃಷ್ಣನು, ಯಜ್ಞಪೂರ್ತಿಯಾಗುತ್ತದೆ ಎಂಬ ನಿಶ್ಚಿತವಾದ ನಿಶ್ಚಿಂತತೆಯಿಂದಲೇ ಅರ್ಜುನನೊಂದಿಗೆ ಹೊರಟು ಮುಂದಿನ ದೇಶಗಳಿಗೆ ಭೆಟ್ಟಿಕೊಡುತ್ತಾನೆ. ಆ ಕಥಾನಕಗಳ ನಾಯಕರಾದ ಮಯೂರಧ್ವಜ, ವೀರವರ್ಮ, ಚಂದ್ರಹಾಸ, ಬಕದಾಲ್ಭ್ಯ, ದುಶ್ಶಳೆ—ಎಲ್ಲರೂ ಶ್ರೇಷ್ಠ ಕೃಷ್ಣಭಕ್ತರಾಗಿದ್ದುದರಿಂದ ಅಪಾಯದ ಭಯವೇ ಇಲ್ಲ. ಹೀಗಿದ್ದೂ ಕೃಷ್ಣನು ಕೋಪದಿಂದ ತಾಮ್ರಧ್ವಜನೊಂದಿಗೆ ಯುದ್ಧ ಮಾಡುತ್ತಾನೆ; ಭಕ್ತವ್ಯಸನದ ಮೂಲಕ ಮಯೂರಧ್ವಜನನ್ನು ಪರೀಕ್ಷಿಸುತ್ತಾನೆ; ವೀರವರ್ಮನಿಗೆ ತುಷ್ಟಿಯನ್ನು ದಯಪಾಲಿಸುತ್ತಾನೆ. ಭಕ್ತಲೋಭಿಯಾದ ಶ್ರೀಕೃಷ್ಣನು ಚಂದ್ರಹಾಸನೊಡನೆ ಯುದ್ಧಕ್ಕೆ ಹೋಗದೆ ಪ್ರೇಮದಿಂದ ಅಪ್ಪಿಕೊಳ್ಳುತ್ತಾನೆ. ಈ ಬಗೆಯಾಗಿ, ಮೂರು ಕಥಾನಕಗಳಲ್ಲಿ ಮೂರು ರೀತಿಯಿಂದ ಕಥಾನಕದ ನಿಶ್ಚತಫಲಪ್ರಾಪ್ತಿಯ ನಿರ್ಧಾರವನ್ನು ಕುರಿತು ಶ್ರೀಕೃಷ್ಣನು ಪರಿಶೀಲನೆ ಮಾಡಿದ್ದಾನೆ. ಯಜ್ಞಾಶ್ವವು ಸಿಂಧುದೇಶಕ್ಕೆ ಬರುವಷ್ಟರಲ್ಲಿ ಒಂದು ವರ್ಷದ ಅವಧಿಯೇ ಮುಗಿದುದರಿಂದ ಶ್ರೀಹರಿಯೇ ಯಜ್ಞಾಶ್ವವನ್ನು ಯಜ್ಞಶಾಲೆಗೆ ಒಯ್ಯುವದಕ್ಕಾಗಿ ಕಟ್ಟುತ್ತಾನೆ. ಹೀಗಾಗಿ ಕಥಾನಕದ ಫಲಪ್ರಾಪ್ತಿಯು ನಿಶ್ಚಿತವಾಗುತ್ತದೆ.

ಮಯೂರಧ್ವಜನ ರತ್ನಪುರವು ನರ್ಮದಾನದಿಯ ದಂಡೆಯ ಮೇಲಿದೆ. ಆ ನದಿ ರೀವಾಸಂಸ್ಥಾನದಲ್ಲಿ ಜನಿಸಿದೆ, ಮಾಹಿಷ್ಮತಿಯಿಂದ ಪೂರ್ವಕ್ಕೆ ಸುಮಾರು ೨೦೦ ಮೈಲುಗಳ ಅಂತರಮಾತ್ರ ಇರಬಹುದು, ಎಂದು ರಾ. ನ. ಮಳಗಿಯವರು ವಿವೇಚಿಸಿದ್ದಾರೆ.[1] 'Ratnapura, 15 miles north of Bilaspur in the Central Provinces, was the capital of Dakshinakosala or Gondwana. It was perhaps the capital of Mayuradhwaja and his son Tamradhwaja who fought with Arjuna and Krishna for the sacrificial horse *(Jaimini Bharat,* ch. 41*)*. Ratnapura became the capital of the Haihaya kings of Chhatisgad, where they ruled for fifty generations.'

[1] 'ಅಶ್ವಪಥ', ಪು. ೧೨, ೧೩.

[ಅನು : ರತ್ನಪುರವು, ದಕ್ಷಿಣಕೋಸಲ ಅಥವಾ ಗೊಂಡವನದ ರಾಜಧಾನಿಯಾಗಿತ್ತು. ಇದು ಮಧ್ಯಪ್ರದೇಶದ ಬಿಲಾಸಪುರದ ಉತ್ತರಕ್ಕೆ ೧೫ ಮೈಲುಗಳ ಮೇಲಿದೆ. ಇದು, ಅರ್ಜುನ ಮತ್ತು ಕೃಷ್ಣನೊಂದಿಗೆ ಯಜ್ಞಾಶ್ವಕ್ಕಾಗಿ ಕಾದಾಡಿದ ಮಯೂರಧ್ವಜ ಮತ್ತು ತಾಮ್ರಧ್ವಜರ ರಾಜಧಾನಿಯಾಗಿರಲು ಸಾಕು ('ಜೈಮಿನಿ ಭಾರತ', ಅ. ೪೧). ರತ್ನಪುರವು, ಛತ್ತಿಸಗಡದ ಹೈಹಯ ರಾಜರು ೫೦ ವಂಶಗಳಿಂದ ಆಳಿದ ಪ್ರದೇಶವೂ ಆಗಿದೆ] ಎಂದು ನಂದುಲಾಲ್ ಡೇ ಅವರು ಊಹಿಸಿದ್ದಾರೆ.[1] ಈ ರತ್ನಪುರದ ಆಖ್ಯಾನಕ್ಕೆ ಮಯೂರಧ್ವಜ ತಾಮ್ರಧ್ವಜರೇ ನಾಯಕರು. ಈ ಕಥಾನಕವನ್ನು ಪಂಚ ಸಂಧಿಗಳಲ್ಲಿ ಕಟ್ಟುನಿಟ್ಟಾಗಿ ವಿಭಜಿಸಲು ಬಾರದಿದ್ದರೂ, ಹಲಕೆಲವು ಸಂಧ್ಯಂಗಗಳ ಲಕ್ಷಣಗಳನ್ನು ಇಲ್ಲಿ ಕಾಣುತ್ತೇವೆ.

ಸಂಧಿ ೨೫ ಪದ್ಯ ೧೦ರಲ್ಲಿ ತಾಮ್ರಧ್ವಜನು ಯಜ್ಞಾಶ್ವವನ್ನು 'ಕನಲ್ದು' ಕಟ್ಟುತ್ತಾನೆ ಎಂದು ಹೇಳಿದೆ ಮತ್ತು ಶ್ರೀಕೃಷ್ಣನು ತಾಮ್ರಧ್ವಜನೊಂದಿಗೆ ಕೋಪದಿಂದ ಯುದ್ಧ ಮಾಡುತ್ತಾನೆ, ಎಂಬುದು ಮುಂದೆ ಕಂಡುಬರುತ್ತದೆ. ತಾಮ್ರಧ್ವಜನು ಯಜ್ಞಾಶ್ವವನ್ನು ಯಾವ ಮನೋಗತದಿಂದ ಕಟ್ಟಿದನೆಂಬುದು ಅವನ ಮಾತಿನಲ್ಲಿ ತಿಳಿದು ಬರುತ್ತದೆ:

'ಏಳಧ್ವರಂ ಪಿಂತೆ ಕೃಷ್ಣವರ್ಜಿತಮಾಯ್ತು
ಪೇಳಲೇನಿದು ಕೃಷ್ಣಸಂಯುಕ್ತಮಾದಪುದು.'

ಕೃಷ್ಣಪ್ರಾಪ್ತಿಯ ಅಪೇಕ್ಷೆ ಅವನಿಗೆ. ಕುದುರೆಯನ್ನು ಕಟ್ಟಿ ಅದನ್ನು ಸಾಧಿಸಬೇಕು. ಈ ಕಥಾನಕದ ಫಲವು ಕೃಷ್ಣಪ್ರಾಪ್ತಿಯಾಗಿರುವುದರಿಂದ ಅಪೇಕ್ಷೆಯೆ ಕಥಾನಕದ ಬೀಜವೆನ್ನಲು ಅಡ್ಡಿಯಿಲ್ಲ. ಈ ಅಪೇಕ್ಷೆ ಫಲಿಸಬೇಕಾದರೆ ಯುದ್ಧವು ಅನಿವಾರ್ಯವಾಗುತ್ತದೆ. ಸಂಧಿ ೨೫ ಪದ್ಯ ೧೯ ರಿಂದ ೫೫ರ ವರೆಗೆ ೩೭ ಪದ್ಯಗಳ ಯುದ್ಧ ವರ್ಣನೆ, ಸಂಧಿ ೨೬ ಪದ್ಯ ೭ ರಿಂದ ೨೬ರ ವರೆಗೆ ೨೦ ಪದ್ಯಗಳ ವೇಶ್ಯಾವಾಟಿಯ ವರ್ಣನೆ ಮತ್ತು ಸಂಧಿ ೨೬ ಪದ್ಯ ೨೮ ರಿಂದ ೬೭ರ ವರೆಗೆ ೩೯ ಪದ್ಯಗಳ ಮಯೂರಧ್ವಜನ ಸತ್ವಪರೀಕ್ಷೆಯ ವಿವರಣೆ ಇವು ಈ ಕಥಾನಕದಲ್ಲಿಯ ಮುಖ್ಯಾಂಶಗಳಾಗಿವೆ. ಇಲ್ಲಿ ವೇಶ್ಯಾವಾಟಿಯ ವರ್ಣನೆ ಅಪ್ರಸ್ತುತವಾದರೂ ಮಹಾಕಾವ್ಯದ ಕಟ್ಟಳೆಗೆ ಕಟ್ಟುಬಿದ್ದು ಬಂದುದಾಗಿದೆ ಎಂದು ಕೆಲವರ ಮತವಿದೆ. ಈ ಕಥಾನಕದಲ್ಲಿ ರತಿಗೆ ಸ್ಥಾನವಿಲ್ಲದೆ ಪ್ರತಿಮುಖ ಸಂಧಿ ಲೋಪವಾಗಿದೆ. ಅಲ್ಲದೆ ಗರ್ಭಸಂಧಿಗೆ ಸ್ವತಂತ್ರವಾದ ಸ್ಥಾನವಿಲ್ಲ. ಯುದ್ಧ ಪ್ರಸಂಗದಲ್ಲಿ ರೋಷದ ಮಾತು (ಸಂರಬ್ಧವಚನಂ)[2], ಶತ್ರುಗಳ ದೆಸೆಯಿಂದ ಉಂಟಾಗುವ ಭೀತಿ (ಉದ್ವೇಗೋಽರಿಕೃತಾ ಭೀತಿಃ)[3], ಪರಸ್ಪರ ನಿಂದಾವ್ಯಂಜಕ ಭಾಷಣ

[1] *The Geographical Dictionary of Ancient and Mediaeval India*, p. 168.

[2] 'ದಶರೂಪಕ', ೧–೭೭. [3] ಅದೇ. ೧–೭೮.

(ಪರಿಭಾಷಾ ಮಿಥೋಜಲ್ಪಃ)[1], ಸಂಶಯ ಬಳಲಿಕೆಗಳು (ಶಂಕಾತ್ರಾಸೌ ಚ ಸಂಭ್ರಮಃ)[2] ಇತ್ಯಾದಿ ಲಕ್ಷಣಗಳಿರುವುದು ಸಹಜವಾಗಿರುವುದರಿಂದ ಗರ್ಭಸಂಧಿಯ 'ಸಂರಬ್ಧವಚನಂ' ಮತ್ತು 'ತೋಟಕಂ ತದುದಾಹೃತಂ' ಎಂಬ ತೋಟಕ ಲಕ್ಷಣ, ಉದ್ವೇಗ ಲಕ್ಷಣ, ಸಂಭ್ರಮ ಲಕ್ಷಣಗಳನ್ನು ಕವಿ ತೋರಿದ್ದಾನೆ. ಈ ರೀತಿ ಕಥಾನಕದ ಗರ್ಭಸಂಧಿಯು ಸೂಚ್ಯವಾಗಿ ಗೋಚರಿಸುತ್ತದೆ.

ಇನ್ನು ಮುಖಸಂಧಿ, ಅವಮರ್ಶಸಂಧಿ, ಉಪಸಂಹೃತಿಸಂಧಿಗಳ ಲಕ್ಷಣಗಳು ಹಲ ಕೆಲವುಂಟು. ಸಂ. ೨೫, ಪ. ೧೦ರಲ್ಲಿ ತಮ್ಮ ಲನೆಯ ಅಶ್ವಮೇಧವು ಕೃಷ್ಣ ಸಹಿತವಾಗ ಲೆಂದು ತಾಮ್ರಧ್ವಜನ ಇಚ್ಛೆ ವ್ಯಕ್ತವಾಗಿರುವುದು ಕಥಾಬೀಜ. ಯುದ್ಧ ಪ್ರಾರಂಭ ವಾಗುವುದೇ ಕಥಾಬೀಜದ ಹೆಚ್ಚಳವಾಗಿ, ಕೃಷ್ಣಪ್ರಾಪ್ತಿಯೇ ಕಥಾಬೀಜದ ಫಲಸಿದ್ಧಿ ಯಾಗಿದೆ. ಸಂಧಿ ೨೫ ಪದ್ಯ ೧೫ರಲ್ಲಿ 'ಅನಸೂಯಕಂ ಉದಿತಕಾಮಂ, ಸತ್ಯವಾದಿ ಶುಚಿ ವೈಷ್ಣವಂ' ಇತ್ಯಾದಿಯಾಗಿ ತಾಮ್ರಧ್ವಜನನ್ನು ವರ್ಣಿಸಲಾಗಿದೆ. ಅವನು ಕಥಾನಾಯಕ ನಲ್ಲದಿದ್ದರೂ ರಣಾಂಗಣದ ನಾಯಕನಾಗಿದ್ದಾನೆ. ಅವನ ಗುಣಕೀರ್ತನವು ವಿಲೋ ಭನದ ಲಕ್ಷಣವಾಗಿದೆ (ಗುಣಾಖ್ಯಾನಂ ವಿಲೋಭನಂ).[3] ಇಲ್ಲಿಗೆ ಮುಖಸಂಧಿ ಮುಗಿ ಯುತ್ತದೆ.

ಸಂಧಿ ೨೫ ಪದ್ಯ ೬೦-೬೧ರಲ್ಲಿ ಮಗನು ಪಾಂಡವರ ಯಜ್ಞಾಶ್ವವನ್ನು ಕಟ್ಟಿ ತಂದುದನ್ನು ನೋಡಿ ಮಯೂರಧ್ವಜನು, 'ಸ್ವಕರಸ್ಥನಾದ ಹರಿಯಂ ಬಿಟ್ಟು ಕಟ್ಟಿದಂ ಗರ್ಧಭಾಕೃತಿಹರಿಯನು,' 'ನಮಗಿದೇತಕೆ ಯಜ್ಞಮಿನ್ನು ! ನಮಗೀ ಮಗಂ ಪಗೆ ಯಲ್ತೆ?' ಎಂದು ಪರಿಪರಿಯಾಗಿ ಅವನನ್ನು ಬಯ್ಯುತ್ತಾನೆ ; ದೋಷವನ್ನು ಹೊರಿಸು ತ್ತಾನೆ. ಇದು ಅವಮರ್ಶ ಸಂಧಿಯಲ್ಲಿಯ ಅಪವಾದ ಎಂಬ ಲಕ್ಷಣವಾಗಿದೆ (ದೋಷ ಪ್ರಖ್ಯಾಽಪವಾದಃಸ್ಯಾತ್).[4] ಸಂಧಿ ೨೬ ಪದ್ಯ ೨೮ ರಿಂದ ೬೬ರ ವರೆಗೆ ಕೃಷ್ಣನು ಅರ್ಜುನನೊಂದಿಗೆ ವೇಷಾಂತರದಿಂದ ಮಯೂರಧ್ವಜನ ಆಸ್ಥಾನಕ್ಕೆ ಹೋಗುವುದು ಮೋಸವಲ್ಲ ; ಭಕ್ತಪರೀಕ್ಷೆ. ಆದುದರಿಂದ ಒಂದೇ ಒಂದು ಅಪವಾದ ಲಕ್ಷಣದಿಂದ ಅವಮರ್ಶ ಸಂಧಿ ಮುಗಿಯುತ್ತದೆ.

ಇನ್ನು ಉಪಸಂಹೃತಿಸಂಧಿಯಲ್ಲಿ, ಸಂಧಿ ೨೬ ಪದ್ಯ ೬೭ರಲ್ಲಿ ಶ್ರೀಕೃಷ್ಣ ಮಯೂರ ಧ್ವಜನನ್ನು 'ಕಾರುಣ್ಯದಿಂ ನೈದಡವಿ, ತಕ್ಕೈಸಿ' ಭಕ್ತಪ್ರೇಮದ ಶುಶ್ರೂಷೆ ಮಾಡು ತ್ತಾನೆ. ಇದು ಪ್ರಸಾದದ ಲಕ್ಷಣ (ಪ್ರಸಾದಃ ಪರ್ಯುಪಾಸನಮ್).[5] ಸಂಧಿ ೨೬ ಪದ್ಯ ೬೮ ಮತ್ತು ೭೦ ರಲ್ಲಿ ಕೃಷ್ಣದರ್ಶನದಿಂದ ಪುಲಕಿತನಾದ ಮಯೂರಧ್ವಜನು, 'ವರ ಸುಪ್ರಸನ್ನವದನದ ಕಮಲನೇತ್ರದ ಸರ್ವಾಭರಣ ಭೂಷಿತದ' ಆ ಮೂರ್ತಿಯನ್ನು 'ಜಯಜಯ ಜಗನ್ನಾಥ ವರಸುವರ್ಣವರೂಥ' ಎಂದು ಮೊದಲಾಗಿ ಸ್ತುತಿಸುತ್ತಾನೆ.

---

[1] 'ದಶರೂಪಕ', ೧-೭೯. [2] ಅದೇ. ೧-೧೦೨. [3] ಅದೇ. ೧-೪೨.
[4] ಅದೇ. ೧-೮೩. [5] ಅದೇ. ೧-೧೦೩.

ಇದು ಆನಂದದ ಲಕ್ಷಣ (ಆನಂದೋ ವಾಂಛಿತಾವಾಪ್ತಿಃ).[1] ಇಲ್ಲಿ ಅವಮರ್ಶ ಸಂಧಿಯ ಪ್ರಸಂಗ ಲಕ್ಷಣದ ಛಾಯೆಯೂ ಇದೆ (ಗುರುಕೀರ್ತನಂ ಪ್ರಸಂಗಃ).[2]

ಹೀಗೆ ಕೆಲವೇ ಪದ್ಯಗಳಿಂದ ಒಂದೊಂದು ಸಂಧಿಯನ್ನು ಸೂಚಿಸಿದ್ದು ಈ ಕಥಾನಕದ ವೈಶಿಷ್ಟ್ಯವಾಗಿದೆ. ತಾಮ್ರಧ್ವಜನು ಅಸಮಸಾಹಸಿ, ಕೃಷ್ಣಾರ್ಜುನರನ್ನು ಮೈಮರೆಸಿ ವೀರವನ್ನು ಮೆರೆದವನು. ಮಯೂರಧ್ವಜನೋ ಏಳು ಅಶ್ವಮೇಧಗಳನ್ನು ಮಾಡಿದ ರಾಜಶ್ರೇಷ್ಠ. ಆದರೂ ಅವನಿಗೆ ಗರ್ವವಿಲ್ಲ. ಅಧಿಯಜ್ಞನನ್ನು ವಿರೋಧಿಸುವ ಸೊಕ್ಕಿಲ್ಲ. 'ನಿನ್ನಂ ಕಂಡಬಳಿಕ ಅದಱ ಮರ್ಮವಂ ಬಲ್ಲೆಂ ಆಂ, ಎಲೆ ದೇವ' ಎನ್ನುತ್ತಾನೆ ಅವನು. ಶ್ರೀಕೃಷ್ಣನು ಆತನಿಗೆ ಯಜ್ಞವನ್ನು ಮಾಡೆಂದು ಹೇಳಿದರೆ, ಆತನು ಕೊಟ್ಟ ಉತ್ತರದಲ್ಲಿ ಮಯೂರಧ್ವಜನ ವ್ಯಕ್ತಿತ್ವ ಎದ್ದು ಕಾಣುತ್ತದೆ :

'ವಿಶ್ವೇಶ, ನಿನ್ನ ಶಾಶ್ವತ ಮೂರ್ತಿಯಂ ತಳೆವ
ವಿಶ್ವಾಸದಿಂದೆ ನಿನಗೊಪ್ಪಿಸಿದೆನೀಗಳೀ
ನಶ್ವರ ಶರೀರಮಂ.........ತಾಂ ಕರ್ಮಕರ್ತೃವಾಗಿ
ಅಶ್ವಮೇಧಂಗಳಂ ಮಾಡಿದೊಡೆ ನಗವೆ, ನಿ
ನ್ನ ಶ್ವಾಸದಿಂದೊಗೆದ ಮಂತ್ರಾಳಿಗಳ್ ? ಮಾತ
ರಿಶ್ವಮಿತ್ರಜ್ವಾಲೆ ಪೊರೆಯೊಳಿರೆ ಭೇಷಜವನಱಸುವರೆ ಹಿಮಕೆ?'

'ಧನ್ಯರಾವು, ನರನಾರಾಯಣರ್ಕಳಂ ಕಂಡೆವು; ಇನ್ನಾವ ಕಲ್ಪಿತವೆಮಗೆ' ? ಇಂತಹ ಭಕ್ತಶ್ರೇಷ್ಠನನ್ನು ಶ್ರೀಕೃಷ್ಣನು ಕಠೋರವಾಗಿಯೆ ಪರೀಕ್ಷಿಸುತ್ತಾನೆ. ಹೆಂಡತಿ ಕುಮುದ್ವತಿ, ಮಗ ತಾಮ್ರಧ್ವಜ ಕೂಡಿಕೊಂಡು ಮಯೂರಧ್ವಜನ ಶರೀರವನ್ನು ಕೊರೆದು ಇಬ್ಭಾಗ ಮಾಡಿ ಬ್ರಾಹ್ಮಣನಿಗೆ ಕೊಡಬೇಕಾಗುತ್ತದೆ. ಮಯೂರಧ್ವಜನು ಆತ್ಮಜ್ಞಾನಿ. ಅವನಿಗೆ ಗೊತ್ತು–ಇಂತಹ ಪರೀಕ್ಷೆ ಮಾಡುವುದಕ್ಕೆ ದೇವನೊಬ್ಬನೇ ಸಮರ್ಥನೆಂದು. ಅಂತೆಯೇ ತನ್ನ ಶರೀರದ ದಕ್ಷಿಣಭಾಗವನ್ನು ದಾನವಾಗಿ ಕೊಡಲು ಸಿದ್ಧನಾಗುತ್ತಾನೆ. ಶರೀರವನ್ನು ಕೊರೆಯುವಾಗ ಮಯೂರಧ್ವಜನ ಎಡಗಣ್ಣಿಂದ ಎರಡು ಹನಿ ನೀರು ಬಂದಿತಂತೆ. ಅದನ್ನು ಕಂಡ ಬ್ರಾಹ್ಮಣನು, ಅಳುತ್ತ ಕೊಡುವ ದಾನವನ್ನು ಒಲ್ಲೆನೆಂದು ಹೊರಡುತ್ತಾನೆ. ಆಗ ಮಯೂರಧ್ವಜನು ಅವನನ್ನು ಕರೆಸಿ, 'ಉಪಕಾರಕಾಯ್ತು ದಕ್ಷಿಣಭಾಗಂ, ಉಳಿದುದು ನಿರರ್ಥಕಂ ವಾಮಾಂಗಂ ಎಂದೊಸರಿತು ಎಡಗಣ್ಣ ಜಲಂ!' ಎಂದು ಹೇಳುತ್ತಾನೆ. ಈ ನಿಚ್ಚಟದ ಭಕ್ತಿಯನ್ನು ಮೆಚ್ಚಿ ವೇಷಧಾರಿ ಕೃಷ್ಣನು ತನ್ನ ಸಾಕಾರ ಮೂರ್ತಿಯನ್ನು ಮಯೂರಧ್ವಜನಿಗೆ ತೋರಿಸುತ್ತಾನೆ. ಈ ಕಥಾನಕದಲ್ಲಿ ಭಕ್ತಿರಸವು ಸ್ಥಾಯಿಯಾಗಿದ್ದು, ವೀರ ಕರುಣ ಅದ್ಭುತ ರಸಗಳು ಸಂಚಾರಿಯಾಗಿವೆ.

ರತ್ನಪುರದಿಂದ ಮುಂದುವರಿದ ಯಜ್ಞಕುದುರೆ ವೀರವರ್ಮನ ಸಾರಸ್ವತಾಖ್ಯ ನಗರ (ಸೌರಾಷ್ಟ್ರಕ್ಕೆ) ಬರುತ್ತದೆ. ಸೌರಾಷ್ಟ್ರವೆಂದರೆ ಈಗಿನ ಸೂರತ್–ಕಾಠೇವಾಡಗಳ

---

[1] 'ದಶರೂಪಕ', ೧–೧೦೪. [2] ಅದೇ. ೧–೪೯.

ಭಾಗವೆಂದು ಅಭಿಪ್ರಾಯವಿದೆ.[1] 'Saraswata or Saraswatapura was situated on the north-west of Hastinapura. It was the capital of Viravarma of the *Jaimini Bharata*.'[2] [ಅನು : 'ಸಾರಸ್ವತ ಅಥವಾ ಸಾರಸ್ವತ ಪುರವು ಹಸ್ತಿನಾಪುರದ ವಾಯುವ್ಯಕ್ಕೆ ಇದೆ. ಇದು ಜೈಮಿನಿ ಭಾರತದಲ್ಲಿಯ ವೀರ ವರ್ಮನ ರಾಜಧಾನಿಯಾಗಿತ್ತು' ಎಂಬ ಅಭಿಪ್ರಾಯವೂ ಇದೆ.]

ಈ ಕಥಾನಕದಲ್ಲಿ ೨೮ ಪದ್ಯಗಳ ಯುದ್ಧ ವರ್ಣನೆ, ೨೦ ಪದ್ಯಗಳ ಮಾಲಿನೀ ಪರಿಣಯದ ಕಥನ ಬರುತ್ತವೆ. ಈ ಕಥಾನಕದಲ್ಲಿ ಯಾವ ಸಂಧಿಯನ್ನೂ ಸ್ಪಷ್ಟವಾಗಿ ಎತ್ತಿ ತೋರಿಸಲಾಗುವುದಿಲ್ಲ. ಸಂಧಿ ೨೭ ಪದ್ಯ ೩ರಲ್ಲಿ ವೀರವರ್ಮನ ರಾಜ್ಯದ ವರ್ಣನೆಯ ನಿಮಿತ್ತದಿಂದ ಅವನ ಗುಣಕೀರ್ತನೆ ಮಾಡಲಾಗಿದೆ. ಇದು 'ಗುಣಾಖ್ಯಾನಂ ವಿಲೋಭನಂ (ದ.ರೂ. ೧-೪೨)' ಎಂಬಂತೆ ವಿಲೋಭನ ಲಕ್ಷಣವನ್ನು ಸೂಚಿಸುತ್ತದೆ ಎನ್ನಬಹುದು. ಮಯೂರಧ್ವಜನ ಕಥಾನಕದಲ್ಲಿದ್ದಂತೆಯೆ ಇಲ್ಲಿಯೂ ಯುದ್ಧ ಸಂಪರ್ಭದಲ್ಲಿ ರೋಷವಚನ, ಶತ್ರುಭೀತಿ, ಪರಸ್ಪರ ನಿಂದೋಕ್ತಿಗಳಿಗೆ ಆಸ್ಪದವಿದೆ.

'ಕೃಷ್ಣಾರ್ಜುನರ ಸಾಹಸವನು ನಾವು ಅಱಿದುಕೊಂಬೆವು; ಅಶ್ವಂಗಳಂ ಕಟ್ಟುವುದು ನೀವು' ಎಂದು ವೀರವರ್ಮನು ಹೇಳಿದಾಗ, ಅವನು ಕ್ಷಾತ್ರತಾಮಸಿ, ಸಮರಸಾಹಸದಲ್ಲಿ ಆತ್ಮ-ವಿಶ್ವಾಸಿ, ಅಹಂಕಾರಿ ಎಂದು ತೋರುತ್ತದೆ. ಅದರಂತೆ ಯುದ್ಧದಲ್ಲಿ ಅದ್ಭುತವೀರವನ್ನು ತೋರಿಸಿಯೂ ತೋರಿಸುತ್ತಾನೆ. ಕೊನೆಗೆ ಶ್ರೀಕೃಷ್ಣನು

> 'ಇವನೊಳು ಸಹಸ್ರವರ್ಷಂ ಪೊಣರ್ದೊಡೆ ತೀರದು ಎಂದಿಗುಂ; ಲಘು ಹಸ್ತಂ ಅತಿಬಲಂ. ಶಸ್ತ್ರಾಸ್ತ್ರದಿಂದ ಅಧಿಕಂ, ಅಖಿಳವೀರರ್ಕಳಂ ಗೆಲ್ವಂ ಇವನನಾಂ ತೋಷಿಸುವೆನು.'

ಎಂದು ಭಕ್ತವಾತ್ಸಲ್ಯವನ್ನು ವ್ಯಕ್ತನಡಿಸುವನು. ಮಯೂರಧ್ವಜನ ಭಕ್ತಿಯನ್ನು ಕಂಡುಬಂದಿದ್ದ ಅರ್ಜುನನು ಕೃಷ್ಣನೊಡನೆ ವಾದಕ್ಕೆ ಹೋಗದೆ,

> 'ದೇವ; ನೀನು ಆವನಂ ತೋಷಿಸುವೆ ಜಗದೊಳವನೇ ವಿಜಯಿ; ಮೇಣವನೆ ಬಲವಂತ'

ಎಂದು ನಮ್ರತೆಯಿಂದ ಒಪ್ಪಿಕೊಳ್ಳುತ್ತಾನೆ.

ವೀರವರ್ಮನಿಗೆ ಶ್ರೀಕೃಷ್ಣನಲ್ಲಿದ್ದ ಶ್ರದ್ಧೆ, 'ಮುರಹರನ ದರ್ಶನಂ ದೊರೆಕೊಳ್ವಿನಂ ತನಗೆ ಮರಣಮಿಲ್ಲಂ ಅಂತಕನ ವರದಿಂದೆ. ಬಳಿಕ, ಈಗ ಪುರುಷೋತ್ತಮನ ಪದಸ್ಪರ್ಶ ಮಾಯ್ತು. ಎನಗಿನ್ನು ಮೃತ್ಯು ಎತ್ತಣದು?' (೨೭-೪೯) ಎಂಬಲ್ಲಿ ವ್ಯಕ್ತವಾಗಿದೆ. ಇಂತಹ ಭಕ್ತಶ್ರೇಷ್ಠನು ನರನಾರಾಯಣರ ಸಂವಾದವನ್ನು ಕೇಳಿ ಸಂತುಷ್ಟನಾಗಿ ಗಾಂಡೀವಿಗೆ ಅಭಿನಮಿಸುತ್ತಾನೆ. ಆಗಿನ ಅವನ ರೀತಿ ಮತ್ತು ಮಾತನ್ನು ಕವಿ ಇಂತು ನಿರೂಪಿಸಿದ್ದಾನೆ:

---

[1] ರಾ. ನ. ಮುಳಗಿ,—'ಅಶ್ವಪಥ', ಪು. ೧೪.

[2] *The Geographical Dictionary of Ancient and Mediaeval India*, Nundolal Day, p. 180.

'......................ಕಾದುವೆನೆಂಬ
ಛಲಮಿಲ್ಲ ತನಗೆ ಎನುತೆ ಕರದ ಚಾಪವನಿಳುಹಿ,
ನಲವಿಂದೆ ಬಂದು ಕೃಷ್ಣನ ಪಾದಕೆಱಗಿದಂ ವೀರವರ್ಮಂ ಪ್ರಿಯದೊಳು'

ಇದನ್ನು ಮನದಂದಾಗ, 'ಕೃಷ್ಣಾರ್ಜುನರ ಸಾಹಸವನ್ನು ನಾವು ಕಂಡುಕೊಳ್ಳುತ್ತೇವೆ' ಎಂದು ವೀರವರ್ಮನು ಆಡಿದುದು ಅಹಂಕಾರದಿಂದಲ್ಲ, ಶ್ರೀಕೃಷ್ಣನೆದುರಿನಲ್ಲಿ ತನ್ನ ಸತ್ವ ಪರೀಕ್ಷೆ ಕೊಡುವುದಕ್ಕಾಗಿ ಎಂಬುದು ಸ್ಪಷ್ಟವಾಗುತ್ತದೆ. ಇಂತು ವೀರವರ್ಮನೂ ಶ್ರೀಕೃಷ್ಣನ ಶಕ್ತಿ ಮಹತ್ತ್ವವನ್ನು ಅರಿತ ಭಕ್ತಾಗ್ರಣಿಯಾಗಿದ್ದಾನೆ.

ಅವಮರ್ಶ ಸಂಧಿಯಲ್ಲಿಯ ಅನೇಕ ಸಂಧ್ಯಂಗಗಳು ಸ್ಪಷ್ಟವಾಗಿ ಕಂಡುಬರುವುದು ಚಂದ್ರಹಾಸ ಕಥಾನಕದಲ್ಲಿ ಮಾತ್ರ. ದುಷ್ಟಬುದ್ಧಿ ಮದನನ ಮೇಲೆ ಆರೋಪವಿಟ್ಟು ಸಿಟ್ಟಿಗೆದ್ದು ಒದರಾಡುವಲ್ಲಿ ಅಪವಾದ ಲಕ್ಷಣ; ಅನೇಕ ರೋಷದ ಮಾತುಗಳಲ್ಲಿ ಸಂಫೇಟ ಲಕ್ಷಣ ; ದುಷ್ಟಬುದ್ಧಿಯ ಕುತಂತ್ರದಲ್ಲಿ, ಮದನನ ಕೊಲೆ ಸಂಭವಿಸಿದ್ದರಲ್ಲಿ ಮತ್ತು ಚಂದನಾವತಿಯ ಕುಳಿಂದ ಮೇಧಾವಿನಿ (ಚಂದ್ರಹಾಸನ ಸಾಕಿದ ತಂದೆ-ತಾಯಿ) ಯರನ್ನು ಸೆರೆಹಿಡಿಯುವಲ್ಲಿ ವಿದ್ರವ ಲಕ್ಷಣ; ದುಷ್ಟಬುದ್ಧಿ ಚಂದ್ರಹಾಸನನ್ನು ಕಾಡುವಲ್ಲಿ ದ್ರವಲಕ್ಷಣ; ಚಂದ್ರಹಾಸನು ಶ್ರೀಕೃಷ್ಣನನ್ನು ಹೊಗಳುವಲ್ಲಿ ಪ್ರಸಂಗಲಕ್ಷಣ; ಮತ್ತು ಕೊನೆಗೆ ಚಂದ್ರಹಾಸನ ಮೇಲಣ ದುಷ್ಟಬುದ್ಧಿಯ ವಿರೋಧ ಶಾಂತವಾಗಿ ಅವನೂ ಕೃಷ್ಣದರ್ಶನದಿಂದ ಪಾಪಕ್ಷಾಲನ ಮಾಡಿಕೊಳ್ಳಲು ಬರುವಲ್ಲಿ ಶಕ್ತಿ ಇತ್ಯಾದಿ ಲಕ್ಷಣಗಳಿಂದೊಡಗೂಡಿದ ಸ್ವತಂತ್ರ ಸ್ವಯಂಪೂರ್ಣ ಕಥಾನಕವಿದಾಗಿದೆ. ಉಳಿದ ಸಂಧ್ಯಂಗಗಳ ಲಕ್ಷಣಗಳು ಅಲ್ಲಲ್ಲಿ ಬಂದರೂ ಹೆಚ್ಚಾಗಿ ಅವಮರ್ಶ ಸಂಧಿಯ ಲಕ್ಷಣಗಳಿರುವುದರಿಂದ ಈ ಅವಮರ್ಶ ಸಂಧಿಗೆ ಚಂದ್ರಹಾಸ ಕಥಾನಕವೇ ಬೆನ್ನೆಲುಬೆಂದು ಹೇಳಬಹುದು. ಆದುದರಿಂದಲೇ ಅದರ ನಾವೀನ್ಯವನ್ನು ಸ್ವತಂತ್ರವಾಗಿ ಚಿತ್ರಿಸಿ ತೋರಿಸುತ್ತೇವೆ.

ಸೌರಾಷ್ಟ್ರದಿಂದ ಹೊರಟ ಯಜ್ಞಾಶ್ವವು ಚಂದ್ರಹಾಸನ ಕುಂತಳನಗರಕ್ಕೆ ಹೋಗಿ ಅಲ್ಲಿಂದ ಮುಂದೆ ಬಡಗಣ ಪಯೋನಿಧಿಯ ಆಳದಲ್ಲಿ ಮಾಯವಾಗುತ್ತದೆ. ಆಗ ಅರ್ಜುನ, ಮಯೂರಧ್ವಜ, ಪ್ರದ್ಯುಮ್ನ, ಬಭ್ರುವಾಹನ, ಹಂಸಧ್ವಜರು ಸರ್ವತ್ರ ಗಮನದ ರಥವನ್ನೇರಿ ಸಮುದ್ರದೊಳಕ್ಕೆ ಸಾಗುತ್ತಾರೆ. ಅಲ್ಲಿ ಅವರಿಗಾದ ಬಕದಾಲ್ಭ್ಯನ ದರ್ಶನವನ್ನು ಸಂಧಿ ೩೨ ಪದ್ಯ ೨೫-೭೭ರಲ್ಲಿ ಚಿತ್ರಿಸಲಾಗಿದೆ. ಅರ್ಜುನ-ಬಕದಾಲ್ಭ್ಯರಲ್ಲಿ ನಡೆದ ಸಂಭಾಷಣೆಯಲ್ಲಿ ಬಕದಾಲ್ಭ್ಯನು ಸಾಮಾನ್ಯ ಋಷಿಯಲ್ಲ ಎಂಬುದು ನಿದರ್ಶನಕ್ಕೆ ಬರುತ್ತದೆ. 'ಸದಾವಾಸಕೆ ಶ್ರೀಹರಿಯ ದೇಹವಿದು ಗೇಹಮೆನಗೆ' ಎಂಬುದೇ ಅವನ ಜೀವನದ ಉಸಿರಾಗಿತ್ತು. ನಾಲ್ಮೊಗದ ಬ್ರಹ್ಮರಿಂದ ಸಾವಿರ ಮೊಗದ ಬ್ರಹ್ಮನವರೆಗೆ ಅನೇಕ ಬ್ರಹ್ಮರನ್ನು ತಾನು ಕಂಡುದಾಗಿಯೂ 'ತಾನಂದು ಸಂಧಿಸಿದ ಸಾಸಿರ ಮೊಗದ ಪುರುಷನೀತನಲ್ಲವೆ? ಶ್ರೀಕೃಷ್ಣರೂಪದಿಂ ಕಾಣಿಸುವನೀ ಜಗದೊಳು' (೩೨-೪೮) ಎಂದು ಹೇಳಿದ್ದಾನೆ. ಆಮೇಲೆ ಬಕದಾಲ್ಭ್ಯನನ್ನು ಧರ್ಮನ ಯಜ್ಞಕ್ಕೆ

ಆಮಂತ್ರಿಸುತ್ತಾರೆ. ಬಕದಾಲ್ಭ್ಯನಂತಹ ಋಷಿಶ್ರೇಷ್ಠನು ಅರ್ಜುನಾದಿಗಳಿಗೆ ಪ್ರಾಪ್ತನಾದುದು ಮತ್ತು ಆತನಿಂದ ಸಾವಿರಮೊಗದ ಬ್ರಹ್ಮನೂ ಪ್ರಳಯಕಾಲದಲ್ಲಿ ಆಲದೆಲೆಯ ಮೇಲೆ ತೇಲುತ್ತಿದ್ದ ಬಾಲಕನೂ ಈಗ ತಮ್ಮ ಮಧ್ಯದಲ್ಲಿರುವ ಶ್ರೀಕೃಷ್ಣನೂ ಒಬ್ಬನೇ ಪರಮಾತ್ಮನೆಂದು ಅವರಿಗೆ ಜ್ಞಾನಪ್ರಾಪ್ತಿಯಾಗುವುದು ಅದ್ಭುತವಾದ ಪ್ರಾಪ್ತಿಯೇ. ಇದು ಉಪಗೂಹನದ ಲಕ್ಷಣ ('ಅದ್ಭುತ ಪ್ರಾಪ್ತಿ....ಉಪಗೂಹನೇ').[1] ಈ ಕಥಾನಕವು ೨೭ ಪದ್ಯಗಳನ್ನು ವ್ಯಾಪಿಸಿದೆ.

ಬಕದಾಲ್ಭ್ಯನ ಕುರ್ವದಿಂದ ಹೊರಟ ಅರ್ಜುನಾದಿಗಳು ದುಶ್ಶಳೆಯ ಸಿಂಧು ದೇಶಕ್ಕೆ ಬರುತ್ತಾರೆ. ಸಿಂಧು ದೇಶವೆಂದರೆ ಸಿಂಧಪ್ರಾಂತದ ಭೂಭಾಗವಾಗಿದೆ.[2] ಇಲ್ಲಿಯೂ ಯುದ್ಧವಲ್ಲ. ದುಶ್ಶಳೆಯ ದುಃಖ ಮತ್ತು ಆಕೆಯ ಮಗನ ಮೂರ್ಛೆ ಈ ಕಥಾನಕದಲ್ಲಿ ಮಹತ್ತ್ವದ ಭಾಗ. ಇದು ಕೇವಲ ೮ ಪದ್ಯಗಳಲ್ಲಿ ಮುಗಿಯುವ ಚಿಕ್ಕ ಕಥನ. ಕೃಷ್ಣಾರ್ಜುನರು ದುಶ್ಶಳೆಗೆ ಅಭಯವನ್ನು ದಯಪಾಲಿಸಿ ಯಜ್ಞಕ್ಕೆ ಆಮಂತ್ರಣ ಕೊಡುತ್ತಾರೆ. ಅವಳು ಕೃಷ್ಣನಿಗೆ, 'ನಿನ್ನ ಕಲ್ಯಾಣಮೂರ್ತಿಯ ದರ್ಶನದೊಳಾಂ ಕೃತಾರ್ಥೆಯಲ್ಲವೆ? ಸಲಹಬೇಕು' ಎಂದು ಬೇಡುತ್ತಾಳೆ. ಆಕೆಯ ಮಗನಿಗೆ ಅಭಯವನ್ನು ನೀಡಿ ಸಂತೈಸುತ್ತಾನೆ ಕೃಷ್ಣ. ಬಳಿಕ ಯಜ್ಞಾಶ್ವವು ಅಲ್ಲಿಂದ ಹಸ್ತಿನಾವತಿಯತ್ತ ಸಾಗುತ್ತದೆ. ಹಸ್ತಿನಾವತಿ ಇನ್ನು ಯೋಜನಮಾತ್ರದಲ್ಲಿರುವಾಗ ಕುದುರೆಯ ಸಂಚಾರದ ಒಂದು ವರ್ಷ ಪೂರ್ತಿಯಾಗುತ್ತದೆ. ಶ್ರೀಕೃಷ್ಣನು ಅಶ್ವವನ್ನು ಯಜ್ಞಕ್ಕಾಗಿ ಆನಂದದಿಂದ ಕಟ್ಟುತ್ತಾನೆ (೩೨–೫೭). ಹರಿಯನ್ನು ಶ್ರೀಹರಿಯೇ ಕಟ್ಟಿದ ಮೇಲೆ ಮತ್ತೆ ಕಟ್ಟುವವರಾರು, ಬಿಡಿಸಿಕೊಳ್ಳುವವರಾರು? ಹೀಗಾಗಿ ಯಜ್ಞಾಶ್ವವನ್ನು ಕಟ್ಟುವ ಪ್ರಬಲ ರಾಜರೊಡನೆ ಕಾದುವ ದುಃಖ ಇಲ್ಲಿಗೆ ಕೊನೆಗೊಳ್ಳುತ್ತದೆ. ಇದು ಸಮಯ ಲಕ್ಷಣ: 'ಸಮಯೋದುಃಖನಿರ್ಗಮಃ'.[3] ಇಲ್ಲಿಗೆ ದುಶ್ಶಳೆಯ ಕಥಾನಕವೂ ಮುಗಿಯಿತು, ಅಶ್ವಪರಿಭ್ರಮಣದ ವರ್ಷವೂ ಮುಗಿಯಿತು.

## ಚಂದ್ರಹಾಸನ ಕಥಾನಕ*

### ಏರಿಳಿತ–ದೈವದುರ್ವಿಪಾಕ

ಶೈಶಿರದ ಮಾಗಿಯ ಕಾಲಕ್ಕೆ ಮಯೂರಧ್ವಜನ ಯಜ್ಞಾಶ್ವವೂ ಧರ್ಮನ ಯಜ್ಞಾಶ್ವವೂ ಜೊತೆಗೂಡಿರುತ್ತವೆ. ಚಂದ್ರಹಾಸನ ಕುಂತಳನಗರವನ್ನು ಪ್ರವೇಶಿಸುತ್ತವೆ. ಕುಂತಳರಾಜ್ಯವೆಂದರೆ ಶಿವಮೊಗ್ಗ ಜಿಲ್ಲೆಯಲ್ಲಿಯ ಕುಬಟೂರ ಪ್ರಾಂತವಾಗಿದ್ದು, ಅದಕ್ಕೆ ಕುಂತಳಕಪುರವೆಂದೂ ಎನ್ನುತ್ತಾರೆ. ಅದು ಕುಂತಳ ದೇಶದ ರಾಜಧಾನಿ

---

1 'ದಶರೂಪಕ', ೧–೧೦೮ 2 ರಾ.ನ. ಮಳಗಿ, 'ಅಶ್ವಪಥ', ಪು. ೧೯.

3 'ದಶರೂಪಕ', ೧–೧೦೫.

*ನಯಸೇನನ 'ಧರ್ಮಾಮೃತ'ದಲ್ಲಿ 'ಕೊಲೆಯಂ ಬಿಟ್ಟ ಮಹಾತ್ಮಂ ಕೈವಲ್ಯಕಾಮಿನೀಶ್ವರನಕ್ಕುಂ' ಎಂಬ ಕಥಾನಕದ ಧನಕೀರ್ತಿ ಪಾತ್ರಕ್ಕೂ ಚಂದ್ರಹಾಸ ಪಾತ್ರಕ್ಕೂ ಸಾಮ್ಯವಿದೆ.

ಯಾಗಿತ್ತು. ಚಂದ್ರಾವತಿಯು (ಚಂದನಾವತಿ) ಕುಂತಳಪುರದಿಂದ ೪೨ ಮೈಲುಗಳ ಅಂತರದ ಮೇಲಿದೆ ಎಂದು ನಂದುಲಾಲ ಡೇ ಅವರು ಎನ್ನುತ್ತಾರೆ *(The Geographical Dictionary of Ancient and Mediaeval India*, p. 109*)*. ರಾ. ನ. ಮಳಗಿಯವರು 'ಕುಂತಳ ರಾಜ್ಯದ ಭಾಗವೆಂದರೆ ಧಾರವಾಡ ಜಿಲ್ಹೆಯೇ ಸರಿ, ಬನವಾಸಿಯೆ ಕೇರಳದ ರಾಜಧಾನಿಯಾಗಿರಬೇಕೆಂದೂ, ಈಗಿನ ಹಾನಗಲ್ಲೇ ಕುಂತಳನಗರವಾಗಿರಬೇಕೆಂದೂ' ಊಹಿಸುತ್ತಾರೆ.[1]

ಕುಂತಳ ರಾಜ್ಯಕ್ಕೆ ಒಡೆಯನು ಚಂದ್ರಹಾಸನಾಗಿದ್ದು, ಯಜ್ಞಾಶ್ವಗಳು ಅವನಲ್ಲಿಗೆ ಹೋಗಿವೆ ಎಂಬ ಸುದ್ದಿ ನಾರದರಿಂದ ಅರ್ಜುನನಿಗೆ ತಿಳಿಯುತ್ತದೆ. ಅಲ್ಲದೆ, ಚಂದ್ರಹಾಸನ ೩೦೦ ವರ್ಷಗಳ ಜೀವನವನ್ನು ಮಿಂಚುದೃಶ್ಯ (flashback) ಸಹಾಯದಿಂದ ೨೩೨ ಪದ್ಯಗಳಲ್ಲಿ ವೈಭವಪೂರ್ಣವಾಗಿ ನಾರದರು ಅವನಿಗೆ ಬಣ್ಣಿಸಿ ಹೇಳುತ್ತಾರೆ. ಸಂಧಿ ೨೮ ರಿಂದ ಸಂಧಿ ೩೨ರ ಪದ್ಯ ೨೨ರವರೆಗೆ ಈ ಕಥಾನಕ ಬರುತ್ತದೆ. ೨೬೭ ಪದ್ಯಗಳಲ್ಲಿ ಕೇವಲ ೨೨ ಪದ್ಯಗಳು ಮಾತ್ರ ಮೂಲಕಥಾನಕದ ಪ್ರವಾಹಕ್ಕೆ ಸಂಬಂಧಪಟ್ಟವುಗಳು. ಮಿಕ್ಕ ೨೪೫ ಪದ್ಯಗಳು ಚಂದ್ರಹಾಸನಿಗೆ ಪೂರ್ವದ, ಕುಂತಳಾಧಿಪತಿಯ ಅರಾಜಕತೆ, ಮಂತ್ರಿವರ್ಯ ದುಷ್ಟಬುದ್ಧಿಯ ಪ್ರಾಬಲ್ಯ, ಚಂದ್ರಹಾಸನ ಜನನ, ಬಾಲ್ಯ, ಯೌವನ, ವೃದ್ಧಾಪ್ಯ, ಕುಳಿಂದಾಧಿಪತಿಯ ಭಾಗ್ಯ, ಬೇಟೆ, ಜಲಕ್ರೀಡೆ ಇವುಗಳಿಗಾಗಿ ಬಳಸಲಾಗಿದೆ.

ಚಂದ್ರಹಾಸನ ಜೀವನದಲ್ಲಿಯ ಏರಿಳಿತ ಮತ್ತು ದೈವ ದುರ್ವಿಪಾಕವನ್ನು ಚಿತ್ರಿಸುವುದೆ ಈ ಕಥಾನಕದ ಬೀಜವಾಗಿದೆ. ಚಂದ್ರಹಾಸನು ಕೇರಳಾಧಿಪತಿ ಮೇಧಾವಿ ರಾಜನ ಪುತ್ರನಾಗಿ, 'ಭಾಗ್ಯಸಂಪನ್ನನು ಎಡದಂಘ್ರಿಗೆ ಅಱುವೆರಳಾಗಿ ದಿವದೊಳುತ್ಪನ್ನನಾದಂ, ಮೂಲನಕ್ಷತ್ರದಿಂದ ಅರಿಷ್ಟಾಂಶದೊಳ್.' ಮುಂದೆ ಸ್ವಲ್ಪ ಕಾಲಾವಧಿಯಲ್ಲಿಯೆ ಮೇಧಾವಿ ವೀರಸ್ವರ್ಗವನ್ನು ಪಡೆಯುತ್ತಾನೆ, ಅವನ ಪತ್ನಿ—ಚಂದ್ರಹಾಸನ ತಾಯಿ—ಸಹಗಮನ ಮಾಡುತ್ತಾಳೆ. ಅರಿಷ್ಟಾಂಶದಲ್ಲಿ ಹುಟ್ಟಿದ ಬಾಲನು ಅನಾಥನಾಗುತ್ತಾನೆ. ಅರಮನೆಯ ದಾದಿ ಅವನನ್ನು ಕುಂತಳನಗರಕ್ಕೆ ಕೊಂಡೊಯ್ದು ಕಷ್ಟದಿಂದ ಸಾಕುತ್ತಾಳೆ. ಚಂದ್ರಹಾಸನ ನಿರ್ಭಾಗ್ಯತೆಗಾಗಿ ಮಮ್ಮಲ ಮರುಗುತ್ತಾಳೆ. ಅವನ ಬೆಳವಣಿಗೆಗಾಗಿ ಬಹುವಾಗಿ ಶ್ರಮಿಸುತ್ತಾಳೆ. ಈ ವ್ಯವಸ್ಥೆಯೂ ದೈವಕ್ಕೆ ಸೇರಲಿಲ್ಲವೆಂಬಂತೆ ದಾದಿ ರೋಗದಿಂದ ತೀರಿಕೊಳ್ಳುತ್ತಾಳೆ. ಅಂದಿನಿಂದ ಚಂದ್ರಹಾಸನು ಪುರಪುಟ್ಟನಾಗಿ ರೂಢಿಸಿದ ಬೀದಿಗಳಲ್ಲಿ ಅಲೆಯುತ್ತ ಕಂಡವರನ್ನು ಮುದ್ದಾಗಿ ಮೋಹಿಸುತ್ತ ಬೆಳೆಯುತ್ತಾನೆ. ಬೀದಿಯಲ್ಲಿ ಆಡುತ್ತಿದ್ದಾಗ ಒಮ್ಮೆ ಸುದೈವದಿಂದ ಒಂದು ಶಾಲಿಗ್ರಾಮ ಸಿಕ್ಕುತ್ತದೆ. ಅದನ್ನು ಅವನು ಆಡುವ ಗೋಲಿಗುಂಡು ಎಂದು ತಿಳಿದರೂ ಬಹಳ ಮೆಚ್ಚಿಕೆಯಿಂದ ಬಾಯಲ್ಲಿ ಬೈತಿಟ್ಟುಕೊಂಡು ಕಾಯುತ್ತಾನೆ.

ಚಂದ್ರಹಾಸನಿಗೆ ಐದು ವರ್ಷಗಳಾದಾಗ ಒಂದು ಘಟನೆ ಜರುಗುತ್ತದೆ. ಒಂದು ದಿನ ದುಷ್ಟಬುದ್ಧಿಯ ಮನೆಯಲ್ಲಿ ಭೋಜನ ಸಮಾರಂಭ ಮುಗಿದ ಮೇಲೆ ತಾಂಬೂಲ

1 'ಅಶ್ವಪಥ', ರಾ. ನ. ಮಳಗಿ, ಪು. ೧೬, ೧೭.

ಸೇವನೆಮಾಡುತ್ತ ಕುಳಿತಿದ್ದ ಬ್ರಾಹ್ಮಣರು ಬೀದಿಯಲ್ಲಿ ಆಡುತ್ತಿದ್ದ ಚಂದ್ರಹಾಸನನ್ನು ನೋಡಿ, ಅವನ ಮುಖದ ಭಾಗ್ಯಲಕ್ಷಣಗಳನ್ನು ಕಂಡು,

'ಚಾರು ಲಕ್ಷಣದೊಳೀ ಪೊಳಲ್ಗೀ ಕುಂತಳಾಧೀಶನು ಆಳ್ವ ನಮ್ಮ ಪೊಡವಿಗೆ
ಒಡೆಯನಹನು, ಈತನಂ ನೀನಿರಿಸಿಕೊಂಡು ರಕ್ಷಿಪುದು'

ಎಂದು ದುಷ್ಟಬುದ್ಧಿಗೆ ಹೇಳುತ್ತಾರೆ (೨೮-೨೭). ದುಷ್ಟಬುದ್ಧಿ ಸ್ವಭಾವತಃ ಅಧಿಕಾರ ಲಾಲಸಿ, ಪ್ರಾಪಂಚಿಕ ಸ್ವಾರ್ಥಿ. ಅಪುತ್ರಿಕನಾದ ರಾಜನ ರಾಜ್ಯಸಂಪದ ತನ್ನ ಮಗನಿಗಾಗಲಿ ಎಂದು ಮನದಲ್ಲಿ ಹೊಂಚುಹಾಕಿರುತ್ತಾನೆ. ಆದುದರಿಂದ ಚಂದ್ರಹಾಸನನ್ನು ಸಲಹುವ ಬದಲು ಕೊಲೆಗೈಸುವ ಏರ್ಪಾಡು ಮಾಡುತ್ತಾನೆ. ಆದರೆ ಶಾಲಿಗ್ರಾಮದ ಮಹಿಮೆಯಿಂದ ಚಂದ್ರಹಾಸನಿಗೆ ಹರಿನಾಮ ಸ್ಮರಣೆಯ ಪ್ರೇರಣೆಯಾಗಿ, ಕಡಿಗರೆದೆ ಕರಗಿ, ಅವರು ಅವನನ್ನು ಕೊಲ್ಲದೆ ಅರಿಷ್ಟಾಂಶದ ಪ್ರತೀಕವಾಗಿದ್ದ ಅವನ ಆರನೆಯ ಬೆರಳನ್ನು ಕೊಯ್ದುಕೊಂಡು ಕುರುಹಾಗಿ ಒಯ್ಯುತ್ತಾರೆ. ತರುವಾಯ ಬೇಟೆಗೆ ಬಂದ ಕುಳಿಂದಕನೆಂಬ ಬೇಡ ದೊರೆ ಚಂದ್ರಹಾಸನ ದುಃಖವನ್ನು ಕಂಡು, ಅಚ್ಯುತ ಪರಾಯಣತೆಯನ್ನು ಮೆಚ್ಚಿ, 'ತನಯರಂ ಕೊಡುವವಂ ಕೃಷ್ಣನೈಸಲೆ? ತನಗೆ ಮಕ್ಕಳಿಲ್ಲ, ಈತನೇ ಸುತನು' ಎಂದು ಸ್ವೀಕರಿಸುತ್ತಾನೆ. ಅವನನ್ನು ಕರೆದುಕೊಂಡು ಮನೆಗೆ ಹೋದಾಗ ಸತಿ ಮೇಧಾವಿನಿಗೆ ಆದ ಆನಂದ ಅಷ್ಟಿಷ್ಟಲ್ಲ. 'ಬಂಜೆತನ ಇಂದು ಪೋದುದು! ಪುತ್ರವತಿಯಾದೆನು! ಎನ್ನ ಪುಣ್ಯದ್ರುಮಂ ಫಲಿಸಿತು!' ಎಂದು ಧನ್ಯತೆಯಿಂದ ಸಂಭ್ರಮಿಸುತ್ತಾಳೆ. ಚಂದ್ರಹಾಸನಿಗೆ ೮ ವರ್ಷಗಳು ತುಂಬುವುದರೊಳಗೆ ಇಷ್ಟೆಲ್ಲ ಘಟನೆಗಳಾಗಿವೆ. ಚಂದನಾವತಿಯ ಕುಳಿಂದಕನ ಮನೆಯಲ್ಲಿ ಬಾಲಕನಿಗೆ 'ಚಂದ್ರಹಾಸ' ಎಂಬ ನಾಮಕರಣವಾಗುತ್ತದೆ. ಚಂದ್ರಹಾಸನ ಕಾಲ್ಗುಣದಿಂದ ದಿನೇ ದಿನೇ ಕುಳಿಂದಕನ ಸಂಪತ್ಸಮೃದ್ಧಿ ಹೆಚ್ಚುತ್ತದೆ.

ಚಂದ್ರಹಾಸನ ಅಕ್ಷರಾಭ್ಯಾಸಕ್ಕಾಗಿ ಕುಳಿಂದಕ ಉಪಾಧ್ಯಾಯನನ್ನು ಇಡುತ್ತಾನೆ. ಆದರೆ ಚಂದ್ರಹಾಸನು 'ಹರಿ' ಎಂಬ ಎರಡು ವರ್ಣಗಳನ್ನಲ್ಲದೆ ಪೆರತನ್ನು ಅಕ್ಷಿಯಿಂದ ಈಕ್ಷಿಸದೆ, ವಾಚಿಸದೆ ಇರುತ್ತಾನೆ. ಹೀಗೆಂದು ದೂರಿಕೊಂಡರೆ 'ಇವನನ್ನು ಶಿಕ್ಷಿಸುವುದು ಬೇಡ' ಎಂದು ಕುಳಿಂದಕನು ಆಜ್ಞಾಪಿಸುತ್ತಾನೆ. ೮ನೆಯ ವಯಸ್ಸಿಗೆ ಉಪನಯನವಾದ ಮೇಲೆ ಅವನ ಅಭ್ಯಾಸದ ರೀತಿ ಇಂತಿದೆ :

ವಿದಿತ ವೇದಾರ್ಥಮಂ ವಿಷ್ಣು ವೆಂದಱಿದು, ಬಹು
ವಿಧ ಶಾಸ್ತ್ರತತಿಗೆ ಹರಿ ಗತಿಯೆಂದು ತಿಳಿದು, ತಾ
ನಧಿಕರಿಸಿ ಬಳಿಕ, ನಿಜಭಕ್ತಿಚಾಪಕೆ ಸತ್ತ್ವಗುಣವಸಳವಡಿಸಿ, ತನ್ನ
ಸುಧಿಯ ಶರಮಂ ಪೂಡಿ, ಕೃಷ್ಣನು ಗುಱಿ ಮಾಡಿ
ವಿಧುಹಾಸನನುಪಮ ಧನುರ್ವಿದ್ಯೆಯಂ ಜಗದೊ
ಳಧಿಕತರಮಾಗೆ ಸಾಧಿಸಿ, ಪರಮ ಭಾಗವತಕಲೆಗಳಿಂದೆಸೆದಿರ್ದನು

— ಜೈ.ಭಾ. ೨೯-೮

ಚಂದ್ರಹಾಸನು ಹದಿನಾರರ ಪ್ರಾಯಕ್ಕೆ ಅನೇಕ ಪ್ರಬಲ ರಾಜರನ್ನು ಗೆದ್ದು, ದಿಗ್ವಿಜಯ ಮಾಡುತ್ತಾನೆ. ಆಗ ಕುಳಿಂದಕನು ರಾಜ್ಯಭಾರವನ್ನು ಅವನಿಗೆ ಒಪ್ಪಿಸುತ್ತಾನೆ ಮತ್ತು ಕಟ್ಟಳೆಯಂತೆ ಕುಂತಳಾಧೀಶನಿಗೆ ಕಪ್ಪಕಾಣಿಕೆಗಳನ್ನು ಸಲ್ಲಿಸಬೇಕೆಂದು ಹೇಳುತ್ತಾನೆ. ಅದರಂತೆ ಚಂದ್ರಹಾಸನು ದಿಗ್ವಿಜಯದಲ್ಲಿ ಸಂಪಾದಿಸಿದ್ದರಲ್ಲಿ ಅನೇಕ ಧನವಸ್ತುಗಳನ್ನು ದೂತರ ಮುಖಾಂತರ ಕುಂತಳನಗರಕ್ಕೆ ಕಳಿಸುತ್ತಾನೆ. ಆಗ ದುಷ್ಟಬುದ್ಧಿಗೆ 'ಕುಳಿಂದನಿಗೆ ಸಂತಾನವಿಲ್ಲ, ಈ ಚಂದ್ರಹಾಸ ಯಾರು?' ಎಂದು ಸಂದೇಹವುಂಟಾಗುತ್ತದೆ. ಸ್ವತಃ ಚಂದನಾವತಿಗೆ ಬಂದು, ವಿದ್ಯಮಾನಗಳನ್ನು ಅರಿತು, ತಾನು ಕೊಲ್ಲಲು ಕಳಿಸಿದ ಬಾಲಕನೇ ಇವನೆಂದು ಮನದಲ್ಲಿ ನಿಶ್ಚಯಿಸಿ, ಪುನಃ ಅವನನ್ನು ಕೊಲ್ಲುವುದಕ್ಕೆ ಹಂಚಿಕೆ ಹೂಡುತ್ತಾನೆ. ತನ್ನ ಮಗನಿಗೆ ಒಂದು ರಹಸ್ಯಪತ್ರವನ್ನು ಬರೆದು, ಅದನ್ನವನಿಗೆ ತಲುಪಿಸುವದಕ್ಕೆ ಚಂದ್ರಹಾಸನನ್ನೇ ಕಳಿಸುತ್ತಾನೆ. ಇಲ್ಲಿಯೂ ದೈವವು ಚಂದ್ರಹಾಸನಿಗೆ ಅನುಕೂಲವಾಗಿ ದುಷ್ಟಬುದ್ಧಿಯ ಕುತಂತ್ರವನ್ನು ಕೆಡಿಸುತ್ತದೆ.

ಆ ರಹಸ್ಯಪತ್ರದಲ್ಲಿ ಪತ್ರುತಂದವನನ್ನು ವಿಷಕೊಟ್ಟು ಕೊಲ್ಲುವಂತೆ ಮಗ ಮದನನಿಗೆ ದುಷ್ಟಬುದ್ಧಿ ತಿಳಿಸಿರುತ್ತಾನೆ. ಆದರೆ ಮಧ್ಯದಲ್ಲೇ ಆ ಪತ್ರ ದುಷ್ಟಬುದ್ಧಿಯ ಮಗಳು ವಿಷಯೆಯ ಕೈಗೆ ಬಿದ್ದು, 'ವಿಷ' ಎಂದಿದ್ದುದು 'ವಿಷಯೆ' ಎಂದಾಗಿರುತ್ತದೆ. ಅದರಂತೆ ಮದನನು ಚಂದ್ರಹಾಸನಿಗೆ ವಿಷಯೆಯನ್ನು ಕೊಟ್ಟು ಮದುವೆ ಮಾಡುತ್ತಾನೆ. ಅತ್ತ ದುಷ್ಟಬುದ್ಧಿ ಕುಳಿಂದಕನನ್ನು ಸೆರೆಯಿಟ್ಟು ಊರಿಗೆ ಬರುವಷ್ಟರಲ್ಲಿ ವಿಷಯಾ ಚಂದ್ರಹಾಸ ಕಲ್ಯಾಣವಾಗಿಬಿಟ್ಟಿರುತ್ತದೆ. ಆದರೂ ದುಷ್ಟಬುದ್ಧಿಯ ದುರ್ಬುದ್ಧಿ ಬದಲಾಗಲಿಲ್ಲ. 'ತನ್ನ ಮಗಳು ವಿಧವೆಯಾದರೂ ಅಡ್ಡಿಯಿಲ್ಲ, ಅಳಿಯನನ್ನು ಕೊಲ್ಲಬೇಕು' ಎಂಬಷ್ಟು ಅವನ ಬುದ್ಧಿ ಸ್ವಾರ್ಥದಿಂದ ವಿಕೃತವಾಗಿರುತ್ತದೆ. ಮದುವೆಯ ಬಗ್ಗೆ ಸಂತೋಷದ ಮಾತಾಡಿ, ನಿಯಮದಂತೆ ಅಳಿಯನು ಏಕಾಂಗಿಯಾಗಿ ಸಾಯಂಕಾಲ ಚಂಡಿಕಾದೇವಿಯನ್ನು ಪೂಜಿಸಬೇಕೆಂದು ಹೇಳಿ, ಚಂದ್ರಹಾಸನನ್ನು ಸ್ಮಶಾನಭೂಮಿಯಲ್ಲಿದ್ದ ಚಂಡಿಕಾಲಯಕ್ಕೆ ಕಳಿಸುತ್ತಾನೆ ಮತ್ತು ಅಲ್ಲಿ ಅವನನ್ನು ವಧಿಸುವಂತೆ ಕಡಿಗರನ್ನು ನಿಯಮಿಸುತ್ತಾನೆ. ಈ ಸಮಯದಲ್ಲಿಯೇ ಕುಂತಳೇಶ್ವರನು ಚಂದ್ರಹಾಸನನ್ನು ಕರೆತರುವಂತೆ ಮದನನನ್ನು ಕಳಿಸಲು, ಅವನು ಬಂದು ಚಂದ್ರಹಾಸನನ್ನು ಅರಸನಲ್ಲಿಗೆ ಕಳುಹಿ ಪೂಜೆಗೆ ತಾನು ಹೋಗುತ್ತಾನೆ. ದುಷ್ಟಬುದ್ಧಿಯ ದುರ್ಯೋಚನೆ ವಿಪರೀತವಾಗಿ ಅಳಿಯನ ಬದಲು ಮಗನೇ ಕೊಲೆಗೀಡಾಗುತ್ತಾನೆ. ಇತ್ತ ರಾಜನು ತನ್ನ ಮಗಳಾದ ಚಂಪಕಮಾಲಿನಿಯನ್ನು ಮತ್ತು ತನ್ನ ರಾಜ್ಯವನ್ನೂ ಚಂದ್ರಹಾಸನಿಗೆ ಕೊಡುತ್ತಾನೆ. ಈ ದ್ವಿತೀಯ ವಿವಾಹಾನಂತರ ಚಂದ್ರಹಾಸನು ಮಾವನಾದ ದುಷ್ಟಬುದ್ಧಿಗೆ ನಮಸ್ಕರಿಸಲು ಹೋದಾಗ, ಅವನಿಗೆ ವಜ್ರಾಘಾತವಾದಂತಾಗುತ್ತದೆ. ಮಗ ಏನಾದನೋ ಎಂದು ಚಂಡಿಕಾಲಯಕ್ಕೆ ಧಾವಿಸುತ್ತಾನೆ. ಸತ್ತುಬಿದ್ದಿದ್ದ ಮಗನನ್ನು ಕಂಡು ದುಃಖಾತಿರೇಕದಿಂದ, ಪಶ್ಚಾತ್ತಾಪದಿಂದ ದುಷ್ಟಬುದ್ಧಿ ಕಂಬಕ್ಕೆ ಹಾಯ್ದು ತಲೆಯೊಡೆದುಕೊಂಡು ಸಾಯುತ್ತಾನೆ. ಇವರಿಬ್ಬರ ಮರಣವಾರ್ತೆ ಅರಮನೆಗೆ ತಲುಪುತ್ತಲೇ ಚಂದ್ರಹಾಸನು

ಅಲ್ಲಿಗೆ ಹೋಗುತ್ತಾನೆ. ಚಂಡಿಯನ್ನು ಅರ್ಚಿಸಿ, ಹೋಮಮಾಡಿ, ಆತ್ಮಾಹುತಿಯನ್ನು ಕೊಡಲು ಅಣಿಯಾಗಿ, ದೇವಿಯನ್ನು ಮೆಚ್ಚಿಸಿ ಎರಡು ವರಗಳನ್ನು ಪಡೆಯುತ್ತಾನೆ. 'ಜನ್ಮಾಂತರದೊಳೆನಗೆ ರಾಜೀವನಾಭನ ಭಕ್ತಿ ದೊರೆಕೊಳಲಿ, ಮಡಿದಿಹ ಮಂತ್ರಿ–ಮಂತ್ರಿಸುತರು ಜೀವಿಸಲಿ' ಇವೇ ಆ ಎರಡು ವರಗಳು. ವೈಷ್ಣವಶಕ್ತಿ ಬಳಸಿದ ಆಯುಧದಿಂದ ರುದ್ರಾಣಿ ಅವನನ್ನು ಹರಸುತ್ತಾಳೆ. ದುಷ್ಟಬುದ್ಧಿ–ಮದನ ಜೀವಿಸುತ್ತಾರೆ. ಈಗ ದುಷ್ಟಬುದ್ಧಿಯ ಪುನರ್ಜನ್ಮವಾಗಿರುತ್ತದೆ; ಅವನ ದುಷ್ಟಬುದ್ಧಿಯೆಲ್ಲ ತೊಲಗಿರುತ್ತದೆ. ಎಲ್ಲರೂ ಆನಂದದಿಂದ ಕುಂತಳಪುರಕ್ಕೆ ಮರಳುತ್ತಾರೆ. ಚಂದನಾವತಿಯಲ್ಲಿಯ ಕುಳಿಂದಕ–ಮೇಧಾವಿನಿಯರ ಸೆರೆ ಬಿಡುತ್ತದೆ. ಕುಂತಳ, ಕುಳಿಂದ ರಾಜ್ಯಗಳೆರಡಕ್ಕೂ ಚಂದ್ರಹಾಸ ಅಧಿಪತಿಯಾಗಿ ಆಳುತ್ತಾನೆ. ಚಂಪಕಮಾಲಿನಿ ಹಾಗೂ ವಿಷಯೆಯರಲ್ಲಿ ಪದ್ಮಾಕ್ಷ ಮತ್ತು ಮಕರಧ್ವಜ ಎಂಬ ಇಬ್ಬರು ಮಕ್ಕಳಾಗುತ್ತಾರೆ. ವೈಭವದಿಂದ ರಾಜ್ಯವಾಳುವ ಚಂದ್ರಹಾಸನಿಗೆ ೩೦೦ ವರ್ಷಗಳಾಗಿವೆ. ಆಗ ಧರ್ಮನ ಯಜ್ಞಾಶ್ವಗಳೆರಡು ಅವನ ರಾಜ್ಯಕ್ಕೆ ಬರುತ್ತವೆ. ಧರ್ಮನ ಮಹತಿಯನ್ನು ಕೃಷ್ಣನ ದಾಸತ್ವವನ್ನೂ ಒಪ್ಪಿಕೊಂಡಿದ್ದಂತಹ ಚಂದ್ರಹಾಸನು ಆ ಕುದುರೆಗಳ ರಕ್ಷಣೆಗೆ ತನ್ನ ಮಕ್ಕಳನ್ನು ನಿಯೋಜಿಸುತ್ತಾನೆ. ಹಿಂದಣ ಪ್ರತಿಯೊಂದು ರಾಜ್ಯದಲ್ಲಿ ಯುದ್ಧವಾಗದೆ ಗತ್ಯಂತರವಿರಲಿಲ್ಲ. ಆದರೆ ಇಲ್ಲಿ ಶ್ರೀಕೃಷ್ಣ ತಾನೇ ಭಕ್ತಲೋಭ–ವಾತ್ಸಲ್ಯದಿಂದ ಚಂದ್ರಹಾಸನಿಗೆ ಆಲಿಂಗನವನ್ನು ಕೊಡುತ್ತಾನೆ. ಅರ್ಜುನನಿಂದಲೂ ಆಲಿಂಗನ ಕೊಡಿಸುತ್ತಾನೆ. ಹೀಗಾಗಿ ವಾತ್ಸಲ್ಯದಿಂದಲೇ ಯಜ್ಞಾಶ್ವಗಳ ಬಿಡುಗಡೆಯಾಗುತ್ತದೆ. ಚಂದ್ರಹಾಸನು ರಾಜ್ಯಭಾರವನ್ನು ತನಯರಿಗೆ ಒಪ್ಪಿಸಿ, ಧರ್ಮರಾಜನ ಯಜ್ಞಕ್ಕೋಸುಗ, ಮೋಕ್ಷಲಾಭದ ಸುಖಕ್ಕೋಸುಗ ಕೃಷ್ಣನೊಡನೆ ಹಸ್ತಿನಾವತಿಗೆ ಹೊರಡುತ್ತಾನೆ.

ಇಡೀ ಕಾವ್ಯದಲ್ಲಿಯೇ ದೊಡ್ಡ ಕಥಾನಕವೆಂದರೆ ಚಂದ್ರಹಾಸನದು. ಈ ಕಥಾನಕಕ್ಕೆ ಚಂದ್ರಹಾಸನೇ ನಾಯಕ. ಆತನ ಜನನ, ಬಾಲ್ಯ, ಯೌವನ, ಶಿಕ್ಷಣ, ಪ್ರತಿದಿನದ ಜೀವನ, ಮುಪ್ಪು ಎಲ್ಲವನ್ನೂ ಇಲ್ಲಿ ಕಥಿಸಲಾಗಿದೆ. ಕಥಾನಾಯಕನ ಸಂಪೂರ್ಣ ಜೀವನಚಿತ್ರಣ ಇನ್ನಾವ ಕಥಾನಕದಲ್ಲಿಯೂ ಕಂಡುಬರುವದಿಲ್ಲ. ಇದು ಈ ಕಥಾನಕದ ಮಹತ್ತ್ವ. ಈ ಕಥಾನಕವನ್ನು ಸಂಧಿ ಸಂಧ್ಯಂಗಗಳಲ್ಲಿ ವಿಂಗಡಿಸಿ ನೋಡಿದಾಗ ಕೆಳಗಿನ ಅಂಶಗಳು ಕಂಡುಬರುತ್ತವೆ.

ಮುಖ: ನಾರದನು,

'ಹಿಂದಣರಸುಗಳ ಬಲಮಿವನ ಹದಿನಾಱಱೊಳ
ಗೊಂದು ಕಳೆಯಲ್ಲಿವಂ ಪರಮವೈಷ್ಣವನಿವನ
ಮುಂದದಟರಂ ಕಾಣೆನಾಹವದೊಳೀತನ ಚರಿತ್ರಮತಿಚಿತ್ರ'

ಎಂದು ಚಂದ್ರಹಾಸನನ್ನು ಬಣ್ಣಿಸಿದುದಲ್ಲದೆ, ಸಂಧಿ ೨೯ ಪದ್ಯ ೨ ರಿಂದ ೬ರ ವರೆಗೆ ನಾಯಕನ ಬಾಲ್ಯದ ಗುಣಪ್ರಶಂಸೆಯಿದೆ. ಇದು ವಿಲೋಭನ ಲಕ್ಷಣ.[1] ಕುಳಿಂದಕನು

[1] 'ಗುಣಾಖ್ಯಾನಂ ವಿಲೋಭನಂ', 'ದಶರೂಪಕ', ೧-೪೨.

ಚಂದ್ರಹಾಸನನ್ನು ಪಡೆದ ಮೇಲೆ, ಕುಳಿಂದಕನಿಗೆ, ಮೇಧಾವಿನಿಗೆ, ಚಂದನಾವತೀಜನಕ್ಕೆ ಸುಖಪ್ರಾಪ್ತಿಯಾಗುತ್ತದೆ. ಇದು ಪ್ರಾಪ್ತಿ ಲಕ್ಷಣ.[1] ಚಂದ್ರಹಾಸನಿಗೆ ಜನ್ಮಾರಭ್ಯ ೮ ವರ್ಷಪರ್ಯಂತ ಒದಗಿದ ಸುಖದುಃಖಗಳಲ್ಲಿ ವಿಧಾನಲಕ್ಷಣವಡಗಿದೆ.[2] ಹೀಗೆ ಮೂರು ಸಂಧ್ಯಂಗ ಲಕ್ಷಣಗಳನ್ನುಳ್ಳ ಮುಖಸಂಧಿ ೧೦೫ ಪದ್ಯಗಳಷ್ಟು ಭಾಗವನ್ನು ಆಕ್ರಮಿಸಿದೆ.

ಪ್ರತಿಮುಖ : ವಿಷಯೆಯಲ್ಲಿ ಚಂದ್ರಹಾಸನ ಬಗ್ಗೆ ಹುಟ್ಟುವ ರತಿಯಿಂದ ಪ್ರತಿಮುಖಸಂಧಿಯ ಪ್ರಾರಂಭವಾಗುತ್ತದೆ. ತೋಟದಲ್ಲಿ ಒರಗಿದ್ದ ಚಂದ್ರಹಾಸನನ್ನು 'ನೋಡಿದಳು ವಿಷಯೆ ವಿಷಯಾಸಕ್ತೆಯಾಗಿ' ಎಂದು ಕವಿ ನಿರೂಪಿಸಿದ್ದಾನೆ. ಈ ರತೀಚ್ಛೆಗೆ ವಿಲಾಸ ಎಂದು ಹೆಸರು.[3] ವಿಷಯೆ ಚಂದ್ರಹಾಸನ ಸೆರಗಿನಲ್ಲಿದ್ದ ಪತ್ರವನ್ನು ನೋಡಿ ತಿದ್ದಿದ್ದು ಮೋಸವೇ? ಅಲ್ಲ. ಅದು ರತಿಯ ಉದ್ವೇಗ ಎಂದು ಹೇಳಬೇಕಾಗುತ್ತದೆ. 'ಕಾಮಿಾಸ್ವತಾಂ ಪಶ್ಯತಿ' ಎಂಬುದು ಅನುಭವವೇದ್ಯವಾಗಿದೆ. ಸಂಧಿ ೩೦, ಪದ್ಯ ೩೪ ರಿಂದ ೩೭ರ ವರೆಗೆ ವಿಷಯೆಯ ವಿರಹಾವಸ್ಥೆಯ ಚಿತ್ರಣವಿದೆ. ಚಂದ್ರಹಾಸನನ್ನು ಅವಳೊಮ್ಮೆ ಕಂಡಿರುವಳು ; ಮತ್ತೆ ಕಾಣಬೇಕೆಂದು ಹಂಬಲಿಸುವಳು. ಇದು ಪರಿಸರ್ಪದ ಲಕ್ಷಣ.[4] ಚಂದ್ರಹಾಸನ ವಿಷಯದಲ್ಲಿ ರತೀಚ್ಛೆ ಮಾತ್ರ ಉಂಟಾಗಿದೆ, ರತಿ ಸುಖವಿಲ್ಲ. ಈ ಅವಸ್ಥೆ ವಿಧೂತವೆನಿಸುವುದು.[5] ಸಂಧಿ ೩೦ ಪದ್ಯ ೫೧ ರಲ್ಲಿ ಮದನನು 'ವಿಲಾಸದಿಂ ವಿಷಯೆ ಮೋಹಿಸುವಂತೆ' ಚಂದ್ರಹಾಸನೊಡನೆ ಅವಳ ಮದುವೆಯನ್ನು ಮಾಡುವುದಾಗಿ ನಿಶ್ಚಯಿಸಿದನು. ಇಲ್ಲಿ ವಿಲಾಸ ಎಂಬ ಸಂಧ್ಯಂಗದ ಹೆಸರನ್ನು ಕವಿ ಸೂಚಿಸಿದ್ದಾನೆ. ವಿವಾಹಾನಂತರದಲ್ಲಿ ಮದನನು ಬಿಚ್ಚುಗೈಯಿಂದ 'ಸರ್ವಜನಕೆ ಅವರವರ ತರವರಿತು' ದಾನಧರ್ಮ ಮಾಡುತ್ತಾನೆ. ವಿವಾಹ ಸಮಾರಂಭದಲ್ಲಿ ಎಲ್ಲ ವರ್ಣದವರ ಸಮಾವೇಶವಾಗಿರುತ್ತದೆ. ಇದು ವರ್ಣಸಂಹಾರದ ಲಕ್ಷಣ. ಹೀಗೆ ನಾಲ್ಕೂ ಸಂಧ್ಯಂಗಗಳುಳ್ಳ ಪ್ರತಿಮುಖ ಸಂಧಿ ೬೩ ಪದ್ಯಗಳಲ್ಲಿ ಹಬ್ಬಿದೆ.

ಸಂಧಿ ೩೧ ಪದ್ಯ ೨೮ ರಲ್ಲಿ ದುಷ್ಟಬುದ್ಧಿ ಕುಳಿಂದಕನನ್ನು ಸೆರೆಯಲ್ಲಿಟ್ಟು ಕುಂತಳ ನಗರಕ್ಕೆ ಬರುವಾಗ ಯಾವ ರೀತಿ ಚಡಪಡಿಸುತ್ತಿದ್ದನು, ಮದನನ ಆಜ್ಞಾಪಾಲನೆಯ ವಿಷಯದಲ್ಲಿ ಯಾವ ರೀತಿ ಸಂಶಯದಿಂದ ತೊಳಲುತ್ತಿದ್ದನು ಎಂಬುದರ ಚಿತ್ರಣವಿದೆ. ಇದು ಸಂಭ್ರಮದ ಲಕ್ಷಣ.[6] ಸಂಧಿ ೩೧ ಪದ್ಯ ೩೦ ರಿಂದ ೩೩ರ ವರೆಗೆ ದುಷ್ಟಬುದ್ಧಿ ಮದನನನ್ನು ಬಾಯಿಗೆ ಬಂದಂತೆ ಬಯ್ಯುತ್ತಾನೆ. ಇದು ತೋಟಕದ ಲಕ್ಷಣ.[7] ಸಂಧಿ

1 'ಪ್ರಾಪ್ತಿಃ ಸುಖಾಗಮಃ'—'ದಶರೂಪಕ', ೧–೪೪.
2 'ವಿಧಾನಂ ಸುಖದುಃಖಕೃತ್'—ಅದೇ. ೧–೪೬.
3 'ರತ್ಯರ್ಥೇಃ ಹಾ ವಿಲಾಸಃ ಸ್ಯಾತ್'—ಅದೇ. ೧–೫೩.
4 'ದೃಷ್ಟನಷ್ಟಾನುಸರ್ಪಣಂ ಪರಿಸರ್ಪಃ'—ಅದೇ. ೧–೫೪.
5 'ವಿಧೂತಂ ಸ್ಯಾದರತಿಃ'—ಅದೇ. ೧–೫೫.
6 'ಶಂಕಾತ್ರಾಸೌ ಚ ಸಂಭ್ರಮಃ'—ಅದೇ. ೧–೭೯
7 'ಸಂರಬ್ಧಂ ತೋಟಕಂ ವಚಃ'—ಅದೇ. ೧–೭೭.

೩೧ ಪದ್ಯ ೩೪–೩೯ರಲ್ಲಿ ದುಷ್ಟಬುದ್ಧಿ ಚಂದ್ರಹಾಸನನ್ನು ಆತ್ಮೀಯತೆಯಿಂದ ಕರೆದು, 'ಮದುವೆಯ ನಾಲ್ಕನೆಯ ದಿವಸ ಸಾಯಂಕಾಲ ಅಳಿಯ ಒಬ್ಬನೇ ಚಂಡಿಕಾಲಯಕ್ಕೆ ಹೋಗಿ ಪೂಜಿಸುವುದು ನಮ್ಮ ಮನೆತನದ ಸಂಪ್ರದಾಯ' ಎಂದು ಹೇಳಿ ಕಳಿಸಿ, ಅವನ ಕೊಲೆಯಾಗುವಂತೆ ವ್ಯವಸ್ಥೆ ಮಾಡುತ್ತಾನೆ. ಈ ಮೋಸಕ್ಕೆ ಅಧಿಬಲ ಎಂದು ಹೆಸರು.[1] ಇಲ್ಲಿಗೆ ಮೂರು ಸಂಧ್ಯಂಗಗಳಿಂದ ಕೂಡಿದ ಗರ್ಭಸಂಧಿಯ ಮುಗಿತಾಯವಾಗುತ್ತದೆ. ಇದು ೧೯ ಪದ್ಯಗಳನ್ನು ವ್ಯಾಪಿಸಿದೆ.

ಸಂಧಿ ೩೧ ಪದ್ಯ ೪೭ ರಲ್ಲಿ ಮದನನು ಚಂಡಿಕಾಲಯವನ್ನು ಪ್ರವೇಶಿಸುತ್ತಲೇ ಆದ ಅವನ ಕೊಲೆಯನ್ನು ಬಣ್ಣಿಸಿದೆ. ಇದನ್ನು ವಿದ್ರವದ ಲಕ್ಷಣ ಎನ್ನುತ್ತಾರೆ.[2] ಕುಳಿಂದಕನ ಸೆರೆಮನೆ ವಾಸವು ಕೂಡ ವಿದ್ರವ ಲಕ್ಷಣಕ್ಕೇ ಉದಾಹರಣೆಯಾಗಿದೆ. ಸಂಧಿ ೩೧ ಪದ್ಯ ೬೦–೬೧ ರಲ್ಲಿ ಕೊಲೆಯಿಂದ ಸತ್ತ ಮದನನನ್ನು ಕಂಡಾಗ ದುಷ್ಟ ಬುದ್ಧಿಗಾದ ಪಶ್ಚಾತ್ತಾಪವನ್ನು ಹೇಳಿದೆ. ಅವನು ಮದನನನ್ನು ಬಗೆಬಗೆಯಾಗಿ ಹೊಗಳುತ್ತಾನೆ. ಹಿರಿಯರನ್ನು ಅಥವಾ ಮಹತ್ತ್ವದ ವಸ್ತುವಿಷಯಗಳನ್ನು ಹೊಗಳುವುದೆಂದರೆ ಪ್ರಸಂಗ ಲಕ್ಷಣ.[3] ಮದನ ದುಷ್ಟಬುದ್ಧಿಯರ ಮರಣವಾರ್ತೆಯನ್ನು ಕೇಳಿ ಧಾವಿಸಿಬಂದ ಚಂದ್ರಹಾಸನು ದೇವಿಯ ಸಾನಿಧ್ಯದಲ್ಲಿ 'ಪಡೆವೆನಿವರಸುಗಳಂ ಮೀಱಿದೊಡೆ ಪುಂಡರೀಕಾಂಬಕನ ಸಾಯುಜ್ಯಮೆನಗಾಗಲಿ' ಎಂದು ತನ್ನ ಶಕ್ತಿಯ ಬಗೆಗೆ ಹೇಳಿಕೊಂಡು ಪ್ರಾಣವನ್ನು ಪಣಕ್ಕೆ ಹಚ್ಚುತ್ತಾನೆ. ಇದು ವ್ಯವಸಾಯದ ಲಕ್ಷಣ.[4] ಇಲ್ಲಿಗೆ ಮೂರು ಸಂಧ್ಯಂಗಗಳುಳ್ಳ ಅವಮರ್ಶ ಸಂಧಿ ಮುಗಿಯುತ್ತದೆ.

ಸಂಧಿ ೩೧ ಪದ್ಯ ೭೪ : ಮದನ ಮತ್ತು ದುಷ್ಟಬುದ್ಧಿ ಜೀವಂತರಾಗುವುದರಿಂದ ಎಲ್ಲರಿಗೂ ಆನಂದವಾಗುತ್ತದೆ. ಬಯಸಿದುದನ್ನು ಪಡೆಯುವುದು ಆನಂದ ಲಕ್ಷಣ.[5] ಸಂಧಿ ೩೨ ಪದ್ಯ ೧೨ರಲ್ಲಿ 'ಶರಣರ ಜೀವನವೇ ತನಗೆ ಜೀವನವು' ಎಂದು ಶ್ರೀಕೃಷ್ಣನು ಚಂದ್ರಹಾಸನನ್ನು ಶರಣಪ್ರೇಮದಿಂದ ಆಲಿಂಗಿಸುತ್ತಾನೆ, ಪ್ರಸನ್ನಗೊಳಿಸುತ್ತಾನೆ. ಇದು ಪ್ರಸಾದದ ಲಕ್ಷಣ.[6] ಪದ್ಯ ೧೪ರಲ್ಲಿ ಚಂದ್ರಹಾಸನ ಆನಂದದ ಉಲ್ಲೇಖವಿದೆ. ಯುದ್ಧದ ದುಃಖ ಸರಿಯಿತು ಎಂದು ಒಂದು ಆನಂದ. ಇದರಲ್ಲಿ ಶ್ರೀಕೃಷ್ಣನ ದರ್ಶನವಾದುದು ಹೆಚ್ಚಿನ ಆನಂದದ ಮಾತು. ದುಃಖ ಹೋಗಲಾಡುವುದು ಸಮಯದ ಲಕ್ಷಣ.[7] ಸಂಧಿ ೩೨ ಪದ್ಯ ೨೨ರಲ್ಲಿ,

---

1 'ಅಧಿಬಲಮಭಿಸಂಧಿಃ'—'ದಶರೂಪಕ', ೧–೭೬.
2 'ವಿದ್ರವೋ ವಧಬಂಧಾದಿಃ'—ಅದೇ. ೧–೪೫.
3 'ಗುರುಕೀರ್ತನಂ ಪ್ರಸಂಗಃ'—ಅದೇ. ೧–೪೯.
4 'ವ್ಯವಸಾಯಃ ಸ್ವಶಕ್ತ್ಯುಕ್ತಿಃ'—ಅದೇ. ೧–೯೧
5 'ಆನಂದೋ ವಾಂಛಿತಾವಾಪ್ತಿಃ'—ಅದೇ. ೧–೧೦೪.
6 'ಪ್ರಸಾದಃ ಪರ್ಯುಪಾಸನಂ'—ಅದೇ. ೧–೧೦೩.
7 'ಸಮಯೋ ದುಃಖನಿರ್ಗಮಃ'—ಅದೇ. ೧–೧೦೫.

'ಪುತ್ರಸಂಪದವಾಯುರಾರೋಗ್ಯಮಜೀವುಶತ
ಪತ್ರನಾಭನ ಭಕ್ತಿ ದೃಢವಾಗಲೀತನ ಚ
ರಿತ್ರಮಂ ಕೇಳ್ದವರ್ಗೆಂದು ಹರಿ ವರವನಿತ್ತು...'

ಎಂದು ಶುಭವನ್ನು ಕೋರಲಾಗಿದೆ. ಶುಭದ ಕೋರಿಕೆ ಪ್ರಶಸ್ತಿ ಲಕ್ಷಣ.[1] ಹೀಗೆ ೪ ಸಂಧ್ಯಂಗಗಳನ್ನೊಳಗೊಂಡ ಉಪಸಂಹೃತಿ ಸಂಧಿ ೨೩ ಪದ್ಯಗಳನ್ನು ವ್ಯಾಪಿಸಿದೆ.

ಇದಲ್ಲದೆ ಸಂಧಿ ೨೮ ಪದ್ಯ ೪೧ ರಿಂದ ೫೨ರ ವರೆಗಿನ ೧೨ ಪದ್ಯಗಳು ಬೇಟೆಗಾರರು ಮತ್ತು ಬೇಟೆಯ ವರ್ಣನೆಯ ಚಿತ್ರವನ್ನು ಕೊಡುತ್ತವೆ. ಮತ್ತು ವಿಷಯೆ ಚಂದ್ರಹಾಸನನ್ನು ಮೊದಲಿಗೆ ಕಂಡಾಗಲೇ ವಸಂತಋತುವಿದ್ದುದರಿಂದ ಸಂಧಿ ೩೦ರಲ್ಲಿ ಆರಂಭದ ೧೮ ಪದ್ಯಗಳಲ್ಲಿ ಜಲಕ್ರೀಡೆ ನಡೆದಿದೆ.

ಈ ಚಂದ್ರಹಾಸನ ಕಥಾನಕವು 'ಸ್ತ್ರೀಯಶ್ಚರಿತ್ರಂ ಪುರುಷಸ್ಯ ಭಾಗ್ಯಂ ದೇವೋ ನ ಜಾನಾತಿ ಕುತೋ ಮನುಷ್ಯಃ' ಎಂಬ ಸುಭಾಷಿತದ ಸತ್ಯತೆಯನ್ನು ದೃಶ್ಯರೂಪವಾಗಿ ತೋರಿಸುತ್ತದೆ. ವಿಷಯೆ-ಚಂಪಕಮಾಲಿನಿಯರಿಗೆ ಪತಿ ಒಬ್ಬನೇ-ಚಂದ್ರಹಾಸನೇ -ಪತಿಯಾಗುವುದು ಯಾರಿಗೂ ಗೊತ್ತಿರಲಿಲ್ಲ. ಚಂದ್ರಹಾಸನು ಕುಂತಳದೇಶಕ್ಕೆ ಅಧಿಪತಿಯಾಗುವುದು, ವಿಪ್ರವಚನದ ಮೇಲಣ ಶ್ರದ್ಧೆಯೊಂದಲ್ಲದೆ, ಅದರ ಸಾಧ್ಯತೆ ಸಾಶಂಕವೇ—ಕನಸಿನ ಮಾತೇ ಆಗಿತ್ತು. ಚಂದ್ರಹಾಸನ ಜೀವನದಲ್ಲಿಯ ಏರಿಳಿತಗಳು ಬಿರುಗಾಳಿಗೆ ಸಿಕ್ಕಿದ ನೌಕೆಯಂತೆ ಚಿತ್ರಿತವಾಗಿದೆ. ಆದರೂ ನೌಕೆಯ ಚಾಲಕ ಶ್ರೀಕೃಷ್ಣನಾಗಿರುವುದರಿಂದ ಅದು ನಿರ್ದಿಷ್ಟಸ್ಥಾನಕ್ಕೆ, ನಿರ್ದಿಷ್ಟ ಸಮಯಕ್ಕೆ ತಲುಪಿದುದು ಏನಾಶ್ಚರ್ಯ? ಅಸಂಭಾವ್ಯವೂ ಸಂಭವಿಸುವುದರಲ್ಲಿ ದೈವೀಕೃಪೆಯ ಕಿರಣ ಮಿನುಗುತ್ತಿರುತ್ತದೆ. ಆ ಕೃಪೆಯೇ ಜೀವನವಾಗಿದ್ದವನಿಗೆ ದೇವರು ಮತ್ತು ತಾನು ಎರಡಲ್ಲ. ಇದು ಚಂದ್ರಹಾಸನ ಜೀವನ ನಿಷ್ಠೆ. ಇದು ಸಂಧಿ ೩೧ ಪದ್ಯ ೧೫ರಲ್ಲಿ, 'ಎನಗೆ ವಾಮನ ಗೋತ್ರಂ, ಅರವಿಂದನಾಭಂ ಪಿತಂ ಹರಿ ಪಿತಾಮಹಂ ಮುರಹರಂ ಪ್ರಪಿತಾಮಹಂ' ಎಂಬ ಅವನ ಮಾತಿನಲ್ಲಿ ವ್ಯಕ್ತವಾಗಿದೆ. ತಂದೆತಾಯಿಗಳಲ್ಲಿ ದೇವರನ್ನು ಭಕ್ತ ಪುಂಡರೀಕ ಕಂಡರೆ, ಚಂದ್ರಹಾಸನು ಸಾಕು ತಂದೆ ತಾಯಿಗಳನ್ನು ಗುರುಗಳೆಂದು ಆದರಿಸುವ ಶಿಷ್ಯನಾಗಿದ್ದಾನೆ.

ಈ ಕಥಾನಕದಲ್ಲಿ ಚಂದ್ರಹಾಸನ ಕೃಷ್ಣಭಕ್ತಿ, ವಿಷಯೆಯ ವಿಷಯಾಸಕ್ತಿ, ಚಂಪಕಮಾಲಿನಿಯ ಸಖೀಪ್ರೇಮ, ದುಷ್ಟಬುದ್ಧಿಯ ಕುಹಕತನ, ಕುಳಿಂದ-ಮೇಧಾವಿನಿಯರ ಸಂತಾನ ಸುಖಲಾಲಸೆ, ಮದನನ ಮೈತ್ರಿಗುಣ, ಕುಂತಳಾಧಿಪತಿಯ ಅಂತರ್ಮುಖತೆ ಸಪ್ತವರ್ಣಗಳಾಗಿ ಪರಿಸ್ಫುಟವಾಗಿ ಚಿತ್ರಿತವಾಗಿದ್ದರೂ ಎಲ್ಲ ವರ್ಣಗಳು ಭಕ್ತಿಯೆಂಬ ಶುಭ್ರಪ್ರಕಾಶದಲ್ಲಿ ಲಯವಾಗುತ್ತವೆ. ಚಂದ್ರಹಾಸನ ಭಕ್ತಿ ಪ್ರಭಾವಕ್ಕೆ ದುಷ್ಟಬುದ್ಧಿಯಿಂದ ಹಿಡಿದು ಎಲ್ಲ ಪ್ರಮುಖರು ಅಧೀನರಾಗುತ್ತಾರೆ. ಕುಂತಳಾಧಿಪತಿ ವೈರಾಗ್ಯದಿಂದ ರಾಜ್ಯವನ್ನು ಬಿಟ್ಟು ವನವನ್ನು ಸೇರುತ್ತಾನೆ.

[1] 'ಪ್ರಶಸ್ತಿಃ ಶುಭಶಂಸನಂ'—'ದಶರೂಪಕ', ೧-೧೧೦.

## ನಿರ್ವಹಣ ಸಂಧಿ

### 'ಪುಣ್ಯಮಿದು ಕೃಷ್ಣಚರಿತಾಮೃತಂ'

ಸಂಧಿ ೩೩ ಮತ್ತು ೩೪ರ ಒಟ್ಟು ೯೯ ಪದ್ಯಗಳು ಕಾವ್ಯದ ಮುಗಿತಾಯವನ್ನು ಹೇಳುವಲ್ಲಿ ಹಂಚಲಾಗಿವೆ. 'ಬೀಜವನ್ನು ತನ್ನಲ್ಲಿ ಉಳ್ಳುದಾಗಿ ಮುಖ [ಪ್ರತಿಮುಖ, ಗರ್ಭ, ಅವಮರ್ಶ] ಇವುಗಳಲ್ಲಿ ಹೇಗೆ [ಉಚಿತವೋ] ಹಾಗೆ ತೊಡರಿ ಹರಡಿರುವ [ಹಲವಾರು] ವಿಷಯಗಳು [ಪ್ರಧಾನವಾದ] ಒಂದು ಅರ್ಥಕ್ಕೆ ಹೊಂದಿಕೊಳ್ಳುವಲ್ಲಿ ನಿರ್ವಹಣ ಸಂಧಿಯುಂಟಾಗುವುದು' ಎಂದು ಲಾಕ್ಷಣಿಕರು ಹೇಳಿದ್ದಾರೆ.[1] ಕಾವ್ಯದ ಕೊನೆಯ ಈ ಎರಡು ಸಂಧಿಗಳಲ್ಲಿ ಕಥಾಬೀಜವಾದ ಯಜ್ಞವೇ ಮುಖ್ಯ ವಿಷಯವಾಗಿರುವುದರಿಂದ ಮತ್ತು ಕಥಾವಸ್ತು ಉಳಿದ ನಾಲ್ಕು ಸಂಧಿಗಳಲ್ಲಿ ಉಚಿತವಾಗಿ ಹಾಯ್ದುಬಂದಿರುವುದರಿಂದ ಈ ಕೊನೆಯ ೯೯ ಪದ್ಯಗಳ ಭಾಗವನ್ನು ನಿರ್ವಹಣ ಸಂಧಿಯೆಂದು ಎಣಿಸಲು ಅಡ್ಡಿಯಿಲ್ಲ ಎಂದು ತೋರುತ್ತದೆ. ೩೪ ನೆಯ ಸಂಧಿಯಲ್ಲಿ ಯಜ್ಞ ಪೂರ್ತಿಯಾಗುತ್ತದೆ. ಇದೇ ಈ ಕಾವ್ಯದ ಫಲವಾಗಿರುವುದರಿಂದ ಈ ಭಾಗವು ಕಥಾವಸ್ತುವಿನ ಕೊನೆಯ ಎಂದರೆ ಪಂಚಮ ಅವಸ್ಥೆಗೆ ಸಂಬಂಧಿಸಿದ್ದು. ಈ ಅವಸ್ಥೆಯನ್ನು ಫಲಾಗಮ ಅಥವಾ ಫಲಯೋಗ ಎಂದು ಹೆಸರಿಸಲಾಗಿದೆ—'ಸಮಗ್ರಫಲಸಂಪತ್ತಿಃ ಫಲಯೋಗೋ ಯಥೋದಿತಃ.'[2]

ಯಜ್ಞಾಶ್ವವು ಒಂದು ವರ್ಷದವರೆಗೆ ದೇಶದಲ್ಲಿ ಸುತ್ತಾಡಿ, ದಿಲ್ಲಿಯ ಈಶಾನ್ಯ ದಿಕ್ಕಿಗೆ ೫೬ ಮೈಲು ದೂರದಲ್ಲಿ, ಗಂಗೆಯ ಶಾಖಾನದಿಯ ದಂಡೆಯ ಮೇಲಿದ್ದ ಹಸ್ತಿನಾವತಿಗೆ ಬರುತ್ತದೆ. ಸಂಧಿ ೩೩ ಪದ್ಯ ೪ರಲ್ಲಿ ಧರ್ಮರಾಜನಿಗೆ ಯಜ್ಞವನ್ನು ನಡೆಸಲು ಶ್ರೀಹರಿಯೇ ಹೇಳುತ್ತಾನೆ. ಎಂದರೆ ಇಲ್ಲಿ ಕಥಾಬೀಜವು ತೀರಸಮೀಪಕ್ಕೆ ಬಂದಂತಾಯಿತು. ಇದು ಸಂಧಿ ಎಂಬ ಸಂಧ್ಯಂಗದ ಲಕ್ಷಣ—'ಸಂಧಿರ್ಬೀಜೋಪಗಮನಂ.'[3] ಇಲ್ಲಿಯವರೆಗೆ ಯಜ್ಞವು ನಿಶ್ಚಿತವಾಗಿರಲಿಲ್ಲ; ಸಂಕಲ್ಪಿತವಾಗಿತ್ತು. ಈಗ ಶ್ರೀಹರಿಯೇ ಹರಿ (ಕುದುರೆ) ಯನ್ನು ಕಟ್ಟಿದ ಮೇಲೆ ಯಜ್ಞವು ಪ್ರಸ್ತುತ ವಿಷಯವಾಗುತ್ತದೆ. ಶ್ರೀಹರಿಯ ಆಜ್ಞೆಯನ್ನು ಕೇಳಿದ ಧರ್ಮರಾಜನು 'ತವ ಕಾರುಣ್ಯಜೀಮೂತಮಿರೆ ಬೆಳೆಯದಿರ್ದಪುದೆ ಪಾರ್ಥಪ್ರತಾಪದ ಪೊಲಂ....ಭಕ್ತರಂ ಪಾಲಿಪುದೆ ನಿನ್ನ ಬಾಳುವೆ' (೩೩–೫) ಎಂದು ನುಡಿದು, ಯಜ್ಞವನ್ನು ಪೂರ್ತಿಗೊಳಿಸುವುದೂ ಶ್ರೀಕೃಷ್ಣನ ಹೊಣೆಯೆ ಎಂದು ಸೂಚಿಸಿ, ಪಾಂಡವರೆಲ್ಲ ಕೇವಲ ಭಕ್ತರು ಎಂದು ಪ್ರಕಟಪಡಿಸುತ್ತಾನೆ. ಸಂಧಿ ೩೩ ಪದ್ಯ ೭ ರಿಂದ ೧೨ರ ವರೆಗೆ ೬ ಪದ್ಯಗಳಲ್ಲಿ ಕುದುರೆಯ ಪರಿಭ್ರಮಣದ ಒಂದು ವರ್ಷದ ವೃತ್ತಾಂತವನ್ನು ಸಂಗ್ರಹವಾಗಿ ಹೇಳುತ್ತಾನೆ. ೩೨ ಸಂಧಿಗಳಲ್ಲಿ ವಿವರವಾಗಿ ಬಂದ ವರ್ಣನೆಯನ್ನು ಓದಿರುವ ವಾಚಕರಿಗೆ ಈ ಆರು ಪದ್ಯಗಳ ಆಗತ್ಯವೇನು? ಇವು ವಾಚಕರ ಸಲುವಾಗಿ ಬರೆದವುಗಳಲ್ಲ. ನಾಟ್ಯಶಾಸ್ತ್ರದ ಮೇರೆಗೆ

---

[1] 'ದಶರೂಪಕ', ೧–೪೬. [2] ಅದೇ. ೧–೩೩. [3] ಅದೇ. ೧–೪೮.

ನಿರ್ವಹಣ ಸಂಧಿಯಲ್ಲಿಯ ನಿರ್ಣಯವೆಂಬ ಸಂಧ್ಯಂಗವನ್ನು ಸೂಚಿಸುವುದಕ್ಕಾಗಿ ಮಾತ್ರ ಇವು ಇವೆ. ಅನುಭವಿಸಿದುದನ್ನು ಹೇಳುವುದು ನಿರ್ಣಯ : 'ಅನುಭೂತಾಖ್ಯಾ ತು ನಿರ್ಣಯಃ.'[1]

ಸಂಧಿ ೩೩ ಪದ್ಯ ೧೪, ೧೫, ೧೬ರಲ್ಲಿ ಶ್ರೀಕೃಷ್ಣ ಮತ್ತು ಸತ್ಯಭಾಮೆಯರ ಪರಸ್ಪರ ನಿಂದಾಸ್ತುತಿಯ ಸಂಭಾಷಣೆ ಇದೆ. ಈ ಬಗೆಯ ಮಾತು ಪರಿಭಾಷಣದ ಲಕ್ಷಣ: 'ಪರಿಭಾಷಾ ಮಿಥೋ ಜಲ್ಪಃ.'[2] ಪದ್ಯ ೨೫ ರಿಂದ ೩೩ರವರೆಗೆ ಪರಸ್ಪರರು ವಯೋಮಾನಾನುಸಾರವಾಗಿ ಭಕ್ತಿ ಪ್ರೇಮಗಳಿಂದ ಆಲಿಂಗನ ನಮಸ್ಕಾರಗಳನ್ನು ಸಲ್ಲಿಸುತ್ತಾರೆ. ಇದು ಪ್ರಸಾದ ಲಕ್ಷಣ : 'ಪ್ರಸಾದಃ ಪರ್ಯುಪಾಸನಂ.'[3] ಮುಂದಿನ ೭ ಪದ್ಯಗಳಲ್ಲಿ ಯಜ್ಞಶಾಲೆಯ ವರ್ಣನೆ, ಪದ್ಯ ೪೨ ರಿಂದ ೪೬ರ ವರೆಗೆ ೬೪ ದಂಪತಿಗಳು ಗಂಗಾ ಜಲವನ್ನು ತಂದ ವಿಷಯ ಬಂದಿವೆ. ಆ ದಂಪತಿಗಳಲ್ಲಿ 'ಕೃಷ್ಣ ರುಕ್ಮಿಣಿ' ಯರಿರುವುದರಿಂದ, ಈ ವಿಷಯವನ್ನು ಸತ್ಯಭಾಮೆ–ಜಾಂಬವತಿಯರಿಗೆ ಹೇಳಿ ಜಗಳ ಹಚ್ಚಲಾದೀತೇ ಎಂದು ಕಲಹಪ್ರಿಯ ನಾರದನು ಪ್ರಯತ್ನಿಸುತ್ತಾನೆ. ಆದರೆ ಸತ್ಯಭಾಮೆ ತನ್ನಲ್ಲಿಯೂ ಶ್ರೀಕೃಷ್ಣನಿರುವುದನ್ನು ತೋರಿಸುತ್ತಾಳೆ. ಜಾಂಬವತಿಯೂ 'ನಾವೆಲ್ಲರುಂ ನಿಮಿಷವರವಿಂದದಳನೇತ್ರನನಗಲ್ದು ಜೀವಿಸಲರಿಯೆವು' (೩೩–೫೨) ಎಂದು ಹೇಳಿ ತನ್ನ ಮನೆಯಲ್ಲಿ ಇದ್ದ ಕೃಷ್ಣನನ್ನು ತೋರಿಸುತ್ತಾಳೆ. ಇದರಿಂದ ಕೃಷ್ಣನ ಸರ್ವವ್ಯಾಪಕತ್ವದ ಅರಿವು ನಾರದನಿಗೆ ಚೆನ್ನಾಗಿ ಆಗಿ ಅವನು ನಿಗಮಸೂಕ್ತಗಳಿಂದ ಕೃಷ್ಣನನ್ನು ಸ್ತುತಿಸುತ್ತಾನೆ.

ಧರ್ಮರಾಜನ ಯಜ್ಞಾಶ್ವವು ಸಾಮಾನ್ಯವಲ್ಲ. ಅದು ಉಪರಿಲೋಕದ ಅಶ್ವ ಪದವಿಯನ್ನು ಬಯಸದೆ ಕೃಷ್ಣಸಾಯುಜ್ಯವನ್ನು ಬಯಸುತ್ತದೆ. ಧೌಮ್ಯನು ಅದರ ಎಡಗಿವಿಯನ್ನು ಕೊಯ್ದು ಪರೀಕ್ಷೆ ತೋರಿಸಿದಾಗ ನೆತ್ತರಿಲ್ಲದೆ ಮಹಾಕ್ಷೀರಧಾರೆ ಹೊರ ಹೊಮ್ಮುತ್ತದೆ. ಈ ಅದ್ಭುತವನ್ನು ಎಲ್ಲರೂ ಕಾಣುತ್ತಾರೆ. ಇಷ್ಟೇ ಅಲ್ಲ, ವಾಜಿಯ ಕಳೇವರವು ಕರ್ಪೂರದ್ದಾಗಿರುವುದನ್ನೂ ಎಲ್ಲರು ನೋಡುತ್ತಾರೆ (ಸಂಧಿ ೩೪, ಪದ್ಯ ೧೩–೧೯). ಇಂತಹ ಅದ್ಭುತವಾದ ಹಯವನ್ನು ಪಾಂಡವರು ಪಡೆದುದು ಉಪಗೂಹನದ ಲಕ್ಷಣ. 'ಅದ್ಭುತಪ್ರಾಪ್ತೀ....ಉಪಗೂಹನೇ.'[4] ಸಂಧಿ ೩೪ ಪದ್ಯ ೨೫ರಲ್ಲಿ 'ಯಾಗದಿಂ ತಣಿದು ಪಾವನವಾದುದಿಳೆ, ಹವಿರ್ಭಾಗದಿಂ ತುಷ್ಟಿವಡೆದುದು ದೇವತಾವಳಿ, ಸರಾಗದಿಂದಸುರಾರಿ ಸಂತುಷ್ಟನಾಗಿ' ಎಂದು ಯಜ್ಞಸಂಪೂರ್ತಿಯಾದುದರ, ಎಂದರೆ ಫಲ ದೊರೆತುದರ, ಶಮನವನ್ನು ವರ್ಣಿಸಲಾಗಿದೆ. ಇದು ಕೃತಿಯ ಲಕ್ಷಣ: 'ಕೃತಿರ್ಲಬ್ಧಾರ್ಥಶಮನಂ.'[5] ಸಂಧಿ ೩೪ ಪದ್ಯ ೨೮ ರಿಂದ ೩೧ ರ ವರೆಗೆ ಬಕದಾಲ್ಭ್ಯ ನಿಂದ ಹಿಡಿದು ಸಾಮಾನ್ಯ ಪ್ರಜೆಯವರೆಗೆ ಎಲ್ಲರನ್ನೂ ಸನ್ಮಾನಿಸಿದ ವರ್ಣನೆಯಿದೆ. ಇದು ಭಾಷಣದ ಲಕ್ಷಣ : 'ಮಾನಾದ್ಯಾಪ್ತಿಶ್ಚ ಭಾಷಣಂ.'[6] ಸಂಧಿ ೩೪ ಪದ್ಯ ೩೮ ರಲ್ಲಿ

---

[1] 'ದಶರೂಪಕ', ೧–೧೦೧. [2] ಅದೇ. ೧–೧೦೨. [3] ಅದೇ. ೧–೧೦೩.
[4] ಅದೇ. ೧–೧೦೪. [5] ಅದೇ. ೧–೧೦೬. [6] ಅದೇ. ೧–೧೦೭

ರೋಮಶ ಬಕದಾಲ್ಭ್ಯಾದಿಗಳು ಧರ್ಮನನ್ನು ಪ್ರೇಮದಿಂದ ಹರಸುತ್ತಾರೆ. ಮಹನೀಯ ರಿಂದ ಆಶೀರ್ವಾದವನ್ನು ಪಡೆಯುವದಕ್ಕಿಂತ ಮತ್ತೊಂದೇನಾದರೂ ಹೆಚ್ಚಿನದು ಉಂಟೆ? ಇದು ಕಾವ್ಯ ಸಂಹಾರದ ಲಕ್ಷಣ—'ವರಾಪ್ತಿಃ ಕಾವ್ಯಸಂಹಾರಃ.'[1]

ಧರ್ಮರಾಜನು ಬಯಸುತ್ತಿದ್ದುದು ಅಶ್ವಮೇಧಯಜ್ಞದ ಸಂಪೂರ್ತಿ, ಗೋತ್ರ ಹತ್ಯಾದೋಷದ ಪರಿಹಾರ, ಮತ್ತು ಪೂರ್ವಜರ ಸಾಧುಚರಿತ್ರ ತನ್ನಿಂದ ಸೊಗಡಾಗ ದಂತೆ ಆಚರಿಸುವುದು. ಈ ಮೂರು ಬಯಕೆಗಳೂ ಈಡೇರಿದುದರ ವರ್ಣನೆ ಕೊನೆಯ ಎರಡು ಸಂಧಿಗಳಲ್ಲಿ ಇರುವುದರಿಂದ, ಇಲ್ಲಿ ಆನಂದದ ಲಕ್ಷಣವು ಪ್ರಮುಖವಾಗಿದೆ— 'ಆನಂದೋ ವಾಂಛಿತಾವಾಪ್ತಿಃ.'[2] ಸಂಧಿ ೩೪ ಪದ್ಯ ೪೨, ೪೩, ೪೫ ರಲ್ಲಿ ಕಾವ್ಯವನ್ನು ಓದುವವರಿಗೆ ಶುಭವನ್ನು ಕೋರಲಾಗಿದೆ. ಇಲ್ಲಿ ಪ್ರಶಸ್ತಿಯ ಲಕ್ಷಣವಿದೆ—'ಪ್ರಶಸ್ತಿಃ ಶುಭಶಂಸನಂ.'[3]

ಈ ರೀತಿ ನಿರ್ವಹಣ ಸಂಧಿಯ ೧೪ ಅಂಗಗಳಲ್ಲಿ ೧೨ ಸಂಧ್ಯಂಗಗಳು ಇಲ್ಲಿ ಕಂಡು ಬರುತ್ತಿವೆ. ಶ್ರೀಕೃಷ್ಣನ ಬೆಂಬಲದಿಂದ ಪ್ರಾರಂಭವಾದ ಯಜ್ಞವು ಅವನ ಸಾನಿಧ್ಯದಲ್ಲಿ ಮುಗಿಯುತ್ತದೆ. ಶ್ರೀಹರಿಯು ಯಜ್ಞದ ಹರಿಯು ಒಂದು ಎಂಬುದಕ್ಕೆ ಯಜ್ಞಾಶ್ವವು ಕೃಷ್ಣಸಾಯುಜ್ಯವನ್ನು ಬಯಸಿದುದೆ ನಿದರ್ಶನ. ಶ್ರೀಕೃಷ್ಣನೇ ಅಧಿಯಜ್ಞ ಎಂಬುದಕ್ಕೆ ಮಯೂರಧ್ವಜನು ಹೂಡಿದ್ದ ಲನೆಯ ಅಶ್ವಮೇಧಯಜ್ಞವನ್ನು ಬಿಟ್ಟುಕೊಟ್ಟುದೇ ದ್ಯೋತಕ. ಸಂಧಿ ೩೪ ಪದ್ಯ ೮ ರಲ್ಲಿ 'ಶ್ರೀ ಜನಾರ್ದನನ ಸಾನಿಧ್ಯಮಾಗಿರೆ ಧರ್ಮ ರಾಜನ ಮಹಾಧ್ವರಂ ಸಾಧ್ಯಮಾಗದೆ?', 'ಸರೋಜನಾಭಂ ತಾನೆ ಯಜ್ಞಸ್ವರೂಪ ನಲ್ಲವೆ?' ಎಂಬ ನಿರ್ಧಾರಿತೋತ್ತರದ ಪ್ರಶ್ನೆಗಳಿವೆ. ಈ ಕಾವ್ಯದಲ್ಲಿ ಬರುವ ಎಲ್ಲ ಪ್ರಮುಖನಾಯಕರು ಶ್ರೀಕೃಷ್ಣಭಕ್ತರಾಗಿದ್ದು, ಶ್ರೀಕೃಷ್ಣನೇ ಪಾಂಡವರ ಪ್ರಾಣ ರಕ್ಷಕನಾಗಿರುವುದರಿಂದ, ಯಜ್ಞಾಶ್ವವು ಕೃಷ್ಣಸಾಯುಜ್ಯವನ್ನು ಪಡೆದುದರಿಂದ ಈ ಕಾವ್ಯದ ಜೀವಾಳ—ಶ್ರೀ ಕೃಷ್ಣ ಎಂಬ ಮಾತು ನಿರ್ವಿವಾದ. ಈ ಕಾವ್ಯವನ್ನು ಕುರಿತು, 'ಪುಣ್ಯಮಿದು ಕೃಷ್ಣಚರಿತಾಮೃತಂ' ಎಂದು ಕವಿಯೇ ಹೇಳಿದ್ದಾನೆ.

## ಸಮಾರೋಪ

ಈ ಕಾವ್ಯದಲ್ಲಿ ಸುಮಾರು ೨೫ ಕಥಾನಕಗಳು ಬರುತ್ತವೆ ಮತ್ತು ಅವುಗಳ ಹೊಟ್ಟೆಯೊಳಗೆ ಚಿಕ್ಕಪುಟ್ಟ ಕಥಾನಕಗಳಿವೆ. ಈ ೨೫ ಕಥಾನಕಗಳ ವ್ಯಾಪ್ತಿ ಕೆಳಗಿ ನಂತಿದೆ :

| | ಪದ್ಯ | | ಪದ್ಯ |
|---|---|---|---|
| ೧. (ಪೀಠಿಕೆ) | ೧೨ | ೩. ಯಜ್ಞನಿಶ್ಚಯ | ೬೭ |
| ೨. ಯೌವನಾಶ್ವನಿಂದ ಅಶ್ವ ಪ್ರಾಪ್ತಿ | ೧೧೬ | ೪. ಮರುತ್ತನ ಕಥೆ | ೨೩ |
| | | ೫. ವ್ಯಾಸ-ಧರ್ಮೋಪದೇಶ | ೪೦ |

1 'ದಶರೂಪಕ', ೧–೧೦೯. 2 ಅದೇ. ೧–೧೦೪. 3 ಅದೇ. ೧–೧೧೦.

| | |
|---|---|
| ೬. ಭೀಮನು ದ್ವಾರಕೆಯಿಂದ ಕೃಷ್ಣನನ್ನು ಕರೆತರುವುದು | ೫೫ |
| ೭. ಅನುಸಾಲ್ವನಿಂದ ಅಶ್ವಾಪಹರಣ | ೬೮ |
| ೮. ನೀಲಧ್ವಜ | ೭೧ |
| ೯. ಚಂಡಿ (ವಿಂಧ್ಯ) | ೩೬ |
| ೧೦. ಹಂಸಧ್ವಜ | ೨೧೫ |
| ೧೧. ಪಾರ್ವತಿಯ ತಪಸ್ಸು | ೨೨ |
| ೧೨. ಅಕೃತವ್ರಣ | ೧೧ |
| ೧೩. ಪ್ರಮೀಳೆ | ೨೭ |
| ೧೪. ಭೀಷಣ | ೨೮ |
| ೧೫. ಬಭ್ರುವಾಹನ | ೨೫೪ |
| ೧೬. ರಾಮಾಯಣ | ೨೫೨ |
| ೧೭. ತಾಮ್ರಧ್ವಜ | ೧೪೦ |
| ೧೮. ವೀರವರ್ಮ | ೫೬ |
| ೧೯. ಚಂದ್ರಹಾಸ | ೨೭೦ |
| ೨೦. ಬಕದಾಲ್ಭ್ಯ | ೨೬ |
| ೨೧. ದುಶ್ಶಳೆ | ೭ |
| ೨೨. ಯಜ್ಞಾಶ್ವಪರಿಭ್ರಮಣ ವೃತ್ತಾಂತ | ೨೬ |
| ೨೩. ಯಜ್ಞಸಿದ್ಧತೆ | ೫೧ |
| ೨೪. ಯಜ್ಞಸಮಾಪ್ತಿ | ೨೮ |
| ೨೫. (ಕಾವ್ಯಸಮಾಪ್ತಿ) | ೭ |

ಹೀಗೆ ಆಯಾ ಕಥಾನಕಗಳ ವ್ಯಾಪ್ತಿಯ ಪದ್ಯಸಂಖ್ಯೆಗಳನ್ನು ಸುಮಾರಾಗಿ ಕೊಡಬಹುದು. ಒಂದು ಬೃಹತ್ ದೇವಾಲಯದಲ್ಲಿ ಅನೇಕ ಸಣ್ಣಪುಟ್ಟ ಗುಡಿಗಳಿರುವಂತೆ, ಅಥವಾ ಅನೇಕ ಶಿಖರಗಳುಳ್ಳ ದೇವಾಲಯವು ದೂರದಿಂದ ಕಾಣುವಂತೆ ಈ ಕಾವ್ಯವು ಶೋಭಾಯಮಾನವಾಗಿದೆ. ಕಥಾನಕಗಳ ವಿಸ್ತಾರ ಮತ್ತು ಸಂಕೋಚವನ್ನು ಮುಂದೆ ನೋಡಬಹುದು.

ಜೈಮಿನಿ ಭಾರತವೆಂದರೆ ಅನೇಕ ಕಥೆಗಳ ಒಂದು ಆಗರ. ಇಷ್ಟೇ ಕಥೆಗಳಿಗೆ ನಿಲ್ಲಿಸುವುದಾದರೂ ಏಕೆ? ಇನ್ನಷ್ಟು ಕೂಡಿಸಬಹುದಲ್ಲ-ಎಂಬ ವಿಚಾರದಿಂದ ಶ್ರೀಧರ ಕವಿ ಮರಾಠಿ ಜೈಮಿನಿ ಅಶ್ವಮೇಧ ಕಾವ್ಯದಲ್ಲಿ ಆರು ಹೊಸ ಆಖ್ಯಾನಗಳನ್ನು ಸೇರಿಸಿದ್ದಾನೆ. ಲಕ್ಷ್ಮೀಶನು ಋತುವರ್ಣನೆಯ ಬಂಧದಿಂದ ಹೆಚ್ಚಿಗೆ ಆಖ್ಯಾನಗಳನ್ನು ಸೇರಿಸಲು ಬಾರದಂತೆ ಮಾಡಿದ್ದಾನೆ. ಹೇಮಂತ-ಶಿಶಿರಕ್ಕೆ ಯಜ್ಞಾಶ್ವವು ಚಂದ್ರಹಾಸನ ಪಟ್ಟಣಕ್ಕೆ ಬರುತ್ತದೆ. ವರ್ಷಸಮಾಪ್ತಿಯೊಂದಿಗೆ ಯಜ್ಞವಾಗಲೇಬೇಕು. ಆದುದರಿಂದ ಕನ್ನಡ ಜೈಮಿನಿ ಭಾರತದಲ್ಲಿ ಕುಂತಳನಗರದಿಂದ ಹೊರಟ ಯಜ್ಞಾಶ್ವವು ಸಾಗರದೊಳಗೆ ನಡೆದು ಬಕದಾಲ್ಭ್ಯನನ್ನು ಕರೆದುಕೊಂಡು ಸಿಂಧೂದೇಶವನ್ನು ದಾಟಿಬಿಡುತ್ತದೆ. ಯಜ್ಞದ ಸಿದ್ಧತೆ, ಮುಕ್ತಾಯದೊಡನೆ ಕಾವ್ಯವು ಮುಗಿಯುತ್ತದೆ.

ಕವಿ ಲಕ್ಷ್ಮೀಶನು ಕಾವ್ಯವಸ್ತುವನ್ನು ಕಲಾತ್ಮಕವಾಗಿ ನಿರ್ವಹಿಸಿದ್ದಾನೆ ಎಂಬುದನ್ನು ಈ ಅಭ್ಯಾಸದಿಂದ ಕಂಡುಕೊಂಡಾಯಿತು. ಇನ್ನು ಮುಂದೆ ಈ ಕಾವ್ಯದಲ್ಲಿ ಬಂದಿರುವ ಪಾತ್ರಗಳ ಚಿತ್ರೀಕರಣದ ಬಗೆಯನ್ನು ನೋಡೋಣ.

ಕಥನಕುಶಲ ಲಕ್ಷ್ಮೀಶನು ಕಥೆಯ ಜೀವಾಳವನ್ನು ಅನುಲಕ್ಷಿಸಿ ಕಥಾ ವಿಸ್ತಾರ ಮತ್ತು ಕಥಾಸಂಕ್ಷೇಪ ಮಾಡಿದ್ದಾನೆ. 'ಕಥಾವಸ್ತುವಿನ ಏರಿಳಿತ'ವು ಲಕ್ಷ್ಮೀಶನಲ್ಲಿರುವ ಪ್ರಮಾಣಪ್ರಜ್ಞೆಗೆ ಒಂದು ಉತ್ತಮ ನಿದರ್ಶನವಾಗಿದೆ.



'ನಾನಾಶೀಲಾಃ ಪ್ರಕೃತಯಃ, ಶೀಲೇ ನಾಟ್ಯಂ ಪ್ರತಿಷ್ಠಿತಂ'

—ಭರತಮುನಿ

## ೩/ಪಾತ್ರ

- ಪ್ರಸ್ತಾವನೆ
- ಪುರುಷ ಪಾತ್ರಗಳು
- ಸ್ತ್ರೀ ಪಾತ್ರಗಳು
- ಬಾಲಕ ಪಾತ್ರಗಳು
- ಜೈಮಿನಿ ಭಾರತದ ಮುನಿಗಳು
- ಜೈಮಿನಿ ಭಾರತದ ನಾಯಕ ಪಾತ್ರ-ಶ್ರೀಕೃಷ್ಣ
- ಸಮಾರೋಪ

### ಪ್ರಸ್ತಾವನೆ

'ಕವಿಯ ಭಾವನೆ ಊಹೆ, ಕಡಿಮೆಯ ತರದ್ದಾದರೆ ಕಾವ್ಯದ ವ್ಯಕ್ತಿಗಳು ಕಾಗದದಲ್ಲಿ ಮಾಡಿದ ಹೂವಿನಂತೆ ಆಗುತ್ತಾರೆ; ಕೀಲಿಟ್ಟ ಮರದ ಗೊಂಬೆಗಳಂತೆ ಚಲಿಸುತ್ತಾರೆ. ಭಾವನೆ, ಊಹೆ, ಉತ್ತಮ ರೀತಿಯದಾದರೆ ಅವರೆಲ್ಲರೂ ನಿಜವಾದ ಮನುಷ್ಯರಾಗುತ್ತಾರೆ; ಜೀವವುಳ್ಳವರಾಗುತ್ತಾರೆ. ಲಕ್ಷ್ಮೀಶನ ಪ್ರಪಂಚವು ನಮ್ಮ ಬುದ್ಧಿಗೆ ನಿಜವಾದ ಪ್ರಪಂಚದಂತೆ ಅನುಭವಕ್ಕೆ ಬರುವುದು. ತಂದೆ-ತಾಯಂದಿರು ಮಕ್ಕಳ ವಿಷಯದಲ್ಲಿ, ಸೇವಕರು ಯಜಮಾನರ ವಿಷಯದಲ್ಲಿ, ಗಂಡಹೆಂಡಂದಿರು ಒಬ್ಬರೊಬ್ಬರ ವಿಷಯದಲ್ಲಿ, ಕಿರಿಯರು ಹಿರಿಯರ ವಿಷಯದಲ್ಲಿ ನಡೆದುಕೊಳ್ಳುವ ರೀತಿ ಉಚ್ಚವಾದ ಶಿಕ್ಷಣವನ್ನು ಪಡೆದ ಸಮಾಜದ ವಿನಯವನ್ನು ಸೂಚಿಸುತ್ತದೆ' ಎಂದು ಹೇಳಿ ಕನ್ನಡ ಜೈಮಿನಿ ಭಾರತದಲ್ಲಿಯ ಪಾತ್ರಗಳ ಗುಣಮಟ್ಟವನ್ನು ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ತೋರಿಸಿದ್ದಾರೆ.

'ಕನ್ನಡ ಜೈಮಿನಿ ಅಶ್ವಮೇಧವೆಂಬ ಭಕ್ತಿನವರಸಭರಿತವಾದ ಪೌರಾಣಿಕ ಕಾದಂಬರಿಯಲ್ಲಿ ಯಾವ ಪುರಾಣೇತಿಹಾಸಗಳಲ್ಲಿಯೂ ಸಿಕ್ಕದ ರಾಜರೂ, ಯಾವ ಭೂಗೋಲಕ್ಕೂ ಸರಿಹೋಗದ ಪಟ್ಟಣಗಳೂ, ಭಾಗವತದ ಧ್ರುವ, ಪ್ರಹ್ಲಾದ, ರುಕ್ಮಾಂಗದರೂ, ಭಾರತದ ಭೀಷ್ಮ, ಅಭಿಮನ್ಯು, ಕರ್ಣರೂ, ಉಳಿದ ಇತಿಹಾಸ-

ಪುರಾಣಗಳ ಶಿಬಿ, ಬಲಿ, ದಿಲೀಪ, ಹರಿಶ್ಚಂದ್ರರೂ ಇವರೆಲ್ಲರನ್ನು ಮೀರುವ ತ್ಯಾಗದ, ಭಕ್ತಿಯ, ಶೌರ್ಯದ ಕಥೆಗಳೂ ತುಂಬಿವೆ. ತಮಿಳು ಶಿವಭಕ್ತರ ರುದ್ರಭಯಾನಕ ಸಮರ್ಪಣೆ, ಆಳ್ವಾರರ ನಾಮರೂಪಾನುಸಂಧಾನ ಪ್ರವೃತ್ತಿ, ಜಿನಮುನಿಗಳ ತ್ಯಾಗ, ವೈರಾಗ್ಯ, ಶರಣರ ನಿಶ್ಚಲ ಶ್ರದ್ಧೆ ಇವೆಲ್ಲವೂ ಈ ಅಶ್ವಮೇಧದ ಉಪಾಖ್ಯಾನಗಳ ನಾಯಕರಲ್ಲಿ ಅತ್ಯುತ್ತಮವಾಗಿ ಕಂಡುಬರುತ್ತವೆ. ಇದರೊಳಗಿನ ಕೆಲ ಪಾತ್ರಗಳು ಸಂಕಲ್ಪ ಸೂರ್ಯೋದಯ, ಪ್ರಬೋಧ ಚಂದ್ರೋದಯ ಎಂಬ ನಾಟಕಗಳಲ್ಲಿ ಮತ್ತು ಚಾಮರಸನ 'ಪ್ರಭುಲಿಂಗಲೀಲೆ'ಯಲ್ಲಿ ಬರುವ ಕೆಲ ಪಾತ್ರಗಳಂತೆ ರೂಪಕಮುಖವಾಗಿ ಒಂದು ನೈತಿಕ ಜಗತ್ತನ್ನೇ ಹೊಳೆಯಿಸುವವು ಎಂದು ಅಭಿಪ್ರಾಯಪಟ್ಟು ; ಜೈಮಿನಿ ಭಾರತದಲ್ಲಿ ಖಲದ ಅನೇಕ ಪ್ರಾಕಾರಗಳು ಷೇಕ್ಸ್‌ಪಿಯರನ ನಾಟಕದೊಳಗಿನ ದುರಂತ ನಾಯಕರ, ಪ್ರತಿನಾಯಕರ ಶೀಲಗಳಂತೆ ಅಭ್ಯಾಸಾರ್ಹವಾಗಿದೆ' ಎಂದು ಜೇಂದ್ರೆಯವರು ಸೂಚಿಸಿದ್ದಾರೆ.

ದೇವುಡು ಮತ್ತು ಬಿ. ಶಿವಮೂರ್ತಿಶಾಸ್ತ್ರಿಯವರಿಗೆ, ಲಕ್ಷ್ಮೀಶನ ಸ್ತ್ರೀಪಾತ್ರಗಳ ವರ್ಣನೆಗಳು ನೇಮಿಚಂದ್ರ ಮತ್ತು ಸೋಮರಾಜರ ಸ್ತ್ರೀಪಾತ್ರಗಳ ವರ್ಣನೆಯ ನೆನಪನ್ನು ತಂದುಕೊಡುತ್ತಿವೆಯಂತೆ.

ಸಿ. ಕೆ. ವೆಂಕಟರಾಮಯ್ಯ ಅವರಿಗೆ, ಲಕ್ಷ್ಮೀಶನ ಕಾವ್ಯದಲ್ಲಿಯ ಸ್ತ್ರೀಪಾತ್ರಗಳು ಪುರುಷಪಾತ್ರಗಳಿಗಿಂತ ವಿಶೇಷ ಮನೋಹರವಾಗಿ ಕಂಡಿವೆ. ಸತ್ಯಭಾಮೆಯ ರಸಿಕತನ, ಜ್ವಾಲೆಯ ಕ್ಷಾತ್ರತೇಜ, ಪ್ರಭಾವತಿಯ ಸರಳತೆ, ಪ್ರಮೀಳೆಯ ದರ್ಪ, ಸೀತಾದೇವಿಯ ವಿಶ್ವಸ್ನೇಹದ ಸಾತ್ವಿಕ ಸ್ವಭಾವ, ಚಿತ್ರಾಂಗದೆಯ ಹೀನಗುಣ ಮತ್ತು ವಿಷಯೆಯ ಭೋಗ ಪ್ರಾಧಾನ್ಯತೆ ಇವನ್ನು ಕವಿ ಲಕ್ಷ್ಮೀಶನು ಅತ್ಯುತ್ತಮವಾಗಿ ಚಿತ್ರಿಸಿದ್ದಾನೆ ಎಂದು ಒಪ್ಪಿಗೆಯಾಗಿದೆ.

'ಪಾತ್ರ' ಎಂಬ ಈ ಪ್ರಕರಣದಲ್ಲಿ ಲಕ್ಷ್ಮೀಶನು ಚಿತ್ರಿಸಿದ ಎಲ್ಲ ಪಾತ್ರಗಳನ್ನು— ಸ್ತ್ರೀ, ಪುರುಷ, ಬಾಲಕ, ಮುನಿಗಣ, ಉತ್ತಮ, ಮಧ್ಯಮ, ನೀಚ ಮೊದಲಾಗಿ ವಿಂಗಡಿಸಿಕೊಂಡು ಅವುಗಳ ಅಭ್ಯಾಸ ಮಾಡಲಾಗಿದೆ. ಲಕ್ಷ್ಮೀಶನ ಪಾತ್ರಗಳನ್ನು ಬೇರೊಬ್ಬ ಕವಿಯ ಕಾವ್ಯದ ಪಾತ್ರಗಳೊಡನೆ ಹೋಲಿಸಿ ನೋಡದೆ ಅವನ ಪಾತ್ರಗಳೇ ಹೇಗೆ ಮೈದುಂಬಿಕೊಂಡಿವೆ, ಜೀವಂತವಾಗಿವೆ ಎಂಬುದನ್ನು ವಿವರಿಸುವ ದೃಷ್ಟಿಯನ್ನಿಟ್ಟು ಕೊಂಡಿದ್ದೇವೆ. ಲಕ್ಷ್ಮೀಶನು ಕಥೆಯನ್ನು ಕಥಿಸುವಾಗ ಪಾತ್ರಗಳು ಕಣ್ಣಮುಂದೆ ಬಂದು ನಿಲ್ಲುವಂತೆ ಮಾಡುತ್ತಾನೆ. ಅವನು ಪಾತ್ರಚಿತ್ರಣಕ್ಕಿಂತ ಪಾತ್ರನಿರ್ಮಾಣದತ್ತ ಹೆಚ್ಚು ಗಮನವನ್ನು ಕೊಟ್ಟಿರುವುದು ಲಕ್ಷ್ಯಕ್ಕೆ ಬರುತ್ತದೆ.

ಯಾವುದೇ ಕಾವ್ಯದಲ್ಲಿ ಕಾವ್ಯವಸ್ತು ವಿರಚನಾಕ್ರಮದಂತೆ ಪಾತ್ರಚಿತ್ರಣ ಎಂಬುದು ಮಹತ್ತ್ವದ ಅಂಶವಾಗಿದೆ. ಪಾತ್ರಚಿತ್ರಣವೆಂದರೆ, ಕಾವ್ಯದಲ್ಲಿ ಬರುವ ವಿವಿಧ ವ್ಯಕ್ತಿಗಳ ವಿವಿಧ ಗುಣ, ಸ್ವಭಾವ, ಆಚಾರ, ವ್ರತ, ನಿಷ್ಠೆ, ಒಲವು-ನಿಲವು ಇವುಗಳ ಸಜೀವ ಮೂರ್ತೀಕರಣ. ಪಾತ್ರಗಳ ಶೀಲ, ಸ್ವಭಾವಗಳ ಪದರುಗಳನ್ನು

ಬಿಚ್ಚಿತೋರಿಸಿ ಆ ವ್ಯಕ್ತಿಯನ್ನು ಪ್ರೇಕ್ಷಕರ, ವಾಚಕರ ಮನಂಬುಗುವಂತೆ ಮಾಡುವ ತಂತ್ರವೇ ಪಾತ್ರಚಿತ್ರಣ. ಆದುದರಿಂದ ಪಾತ್ರಚಿತ್ರಣವೆಂದರೆ ಶೀಲವರ್ಣನೆ ಎಂದು ಇಟ್ಟುಕೊಳ್ಳಬಹುದು. ವ್ಯಕ್ತಿಯ ಶೀಲವು ಕಾವ್ಯದ ಪಾತ್ರವಾಗಿ ಪ್ರತಿಷ್ಠಿತವಾಗುತ್ತದೆ.

'ಶೀಲ' ಎಂಬ ಶಬ್ದವು ಬಹಳ ಪೂರ್ವದಿಂದ ಪ್ರಚಾರದಲ್ಲಿದೆ. ಧರ್ಮಶಾಸ್ತ್ರ, ನಾಟ್ಯಶಾಸ್ತ್ರ, ಯೋಗಶಾಸ್ತ್ರಗಳಲ್ಲಿ ಈ ಶಬ್ದವನ್ನು ಉಪಯೋಗಿಸಿದ್ದಾರೆ:

> **ವೇದೋಽಖಿಲೋ ಧರ್ಮಮೂಲಂ ಸ್ಮೃತಿಶೀಲೇ ಚ ತದ್ವಿದಾವ್**
> **ಆಚಾರಶ್ಚೈವ ಸಾಧೂನಾಮಾತ್ಮನಸ್ತುಷ್ಟಿರೇವಚ ॥**

ಎಂಬ ಧರ್ಮಶಾಸ್ತ್ರದ ಶ್ಲೋಕದಲ್ಲಿ 'ಸ್ಮೃತಿಶೀಲೇ' ಎಂಬ ಪದಕ್ಕೆ ಅದರ ಟೀಕೆಯಲ್ಲಿ ಹಾರೀತನ ವಚನ ಉದ್ಧೃತವಾಗಿದೆ. ಅದರಲ್ಲಿ

> **'ಬ್ರಾಹ್ಮಣ್ಯತಾ, ದೇವಪಿತೃಭಕ್ತತಾ, ಸೌಮ್ಯತಾ, ಅಪರೋಪತಾಪಿತಾ, ಅನಸೂಯತಾ, ಮೃದುತಾ, ಅಪರೂಷ್ಯಂ, ಮೈತ್ರತಾ, ಪ್ರಿಯವಾದಿತ್ವಂ, ಕೃತಜ್ಞತಾ, ಶರಣ್ಯತಾ, ಕಾರುಣ್ಯಂ, ಪ್ರಶಾಂತಿ'**

ಎಂಬ ಹದಿಮೂರು ಶೀಲಗಳನ್ನು ಹೇಳಲಾಗಿದೆ.[1]

ಜೈಮಿನಿ ಭಾರತದಲ್ಲಿ ಬ್ರಾಹ್ಮಣ್ಯತಾ ಎಂಬ ಶೀಲವು ಋಷಿಮುನಿಗಳಲ್ಲಿ, ದೇವ ಪಿತೃಭಕ್ತತಾಶೀಲವು ಚಂದ್ರಹಾಸನಲ್ಲಿ, ಮಾತೃಪಿತೃಭಕ್ತತಾ ಶೀಲವು ಬಭ್ರುವಾಹನ ನಲ್ಲಿ, ಮಾಕ್ರಭಕ್ತತಾಶೀಲವು ಲವಕುಶರಲ್ಲಿ, ಮೈತ್ರತಾಶೀಲವು ಶ್ರೀಕೃಷ್ಣಾರ್ಜುನರಲ್ಲಿ, ಕೃತಜ್ಞತಾ ಶೀಲವು ಧರ್ಮರಾಜನಲ್ಲಿ, ಶರಣ್ಯತಾಶೀಲವು ಇಲ್ಲಿ ಬರುವ ಎಲ್ಲ ರಾಜರಲ್ಲಿ, ಪ್ರಶಾಂತಿ ಶೀಲವು ಬಕದಾಲ್ಭ್ಯನಲ್ಲಿ ಎದ್ದುಕಾಣುತ್ತವೆ ಮತ್ತು ಕಾರುಣ್ಯಶೀಲನು ಶ್ರೀಕೃಷ್ಣನು.

> **'ಚಿತ್ತಂ ಹಿ ಪ್ರಖ್ಯಾ ಪ್ರವೃತ್ತಿ ಸ್ಥಿತಿ ಶೀಲತ್ವಾತ್ ತ್ರಿಗುಣಂ'**
> **'ಆಕಾರ-ಶೀಲ-ವಿದ್ಯೆ'**
> **'ಪ್ರಕಾಶಶೀಲಂ ಸತ್ತ್ವಂ ಪಾಪಶೀಲೇಷು ಉಪೇಕ್ಷಾ ಪುಣ್ಯಶೀಲೇಷು ಮುದಿತಾ'**

ಎಂಬ ಉಕ್ತಿಗಳು ಪಾತಂಜಲಯೋಗಸೂತ್ರದಲ್ಲಿ ಬರುತ್ತವೆ. ಪ್ರಖ್ಯಾ ಎಂದರೆ ಸತ್ತ್ವ, ಪ್ರವೃತ್ತಿ ಎಂದರೆ ರಜ, ಸ್ಥಿತಿ ಎಂದರೆ ತಮ ಎಂದು ಹೇಳಲಾಗಿದೆ. ಸತ್ತ್ವ, ರಜ, ತಮ ಈ ತ್ರಿಗುಣಗಳ ವಿವಿಧ ಮಿಶ್ರಣವೇ ವಿವಿಧ ಶೀಲಗಳಿಗೆ ಕಾರಣ. ಜೈಮಿನಿಭಾರತದಲ್ಲಿ ಪುಣ್ಯಶೀಲರಾದ ಪಾಂಡವರಿಗೆ, ಭಕ್ತಶ್ರೇಷ್ಠರಾಜರಿಗೆ 'ಮುದಿತಾ' ಎಂದರೆ ಆನಂದ ಪ್ರಾಪ್ತಿಯಾಗುತ್ತದೆ. ಅದರಂತೆ ಸುಧನ್ವ ಸುರಥ ಮತ್ತು ಯಜ್ಞಾಶ್ವಕ್ಕೆ ಕೃಷ್ಣ ಸಾಯುಜ್ಯ ಮುಕ್ತಿ ಪ್ರಾಪ್ತವಾಗುತ್ತದೆ. ಪಾಪಶೀಲರಾದ ಜ್ವಾಲೆ ಮತ್ತು ಚಂಡಿಗೆ 'ಉಪೇಕ್ಷಾ' ಎಂದರೆ ಅಲಕ್ಷ ಪ್ರಾಪ್ತಿಯಾಗುತ್ತದೆ. ತಿರಸ್ಕಾರವನ್ನು ಸಹಿಸದೆ ಮತ್ಸರ ದಿಂದ ಜ್ವಾಲೆ ಅಗ್ನಿಪ್ರವೇಶ ಮಾಡುತ್ತಾಳೆ. ಉದ್ಧಾಲಕನ ತಿರಸ್ಕಾರದ ಮೂಲಕ ಚಂಡಿ

---

1 **'ಮನುಸ್ಮೃತಿ', ಅ. ೨, ಪು. ೩೩–೩೪.**

ಶಿಲೆಯಾಗುತ್ತಾಳೆ. ಶೀಲವನ್ನು ಕಳೆದುಕೊಂಡ ವ್ಯಕ್ತಿ ಶಿಲೆಗೆ ಸಮಾನ. ಯಜ್ಞಕ್ಕೆ ಬಂದವರೆಲ್ಲ ಪ್ರಕಾಶಶೀಲರು–ಸಾತ್ತ್ವಿಕರಾಗಿದ್ದಾರೆ.

ಕನ್ನಡದ ಜೈನ, ವೀರಶೈವ ಮತ್ತು ವೈಷ್ಣವ ಸಾಹಿತ್ಯದಲ್ಲಿ ಶೀಲ ಎಂಬ ಪದವು ಬಳಕೆಯಲ್ಲಿ ಇದೆ. ಪಂಪನ 'ಆದಿಪುರಾಣ'ದಲ್ಲಿ ಆ. ೧.೫ ಮತ್ತು ೧೦.೯ರಲ್ಲಿ ಹೇಳಿದಂತೆ, ದಿಗ್ವ್ರತ ದೇಶವ್ರತಾದಿಗಳಿಗೆ ಮತ್ತು ಸಮಾಯಿಕ ಪ್ರೋಷದೋಪವಾಸಾದಿಗಳಿಗೆ ಶೀಲ ವೆನ್ನುತ್ತಾರೆ. ಶೀಲಗಳು ಏಳು—ಸಪ್ತಶೀಲಗಳು—ಎಂಬ ಮಾತು ಇದೆ. ವೀರಶೈವರ 'ಶೀಲಸಂಪಾದನೆಯ ಸ್ಥಲ'ದಲ್ಲಿ 'ಪಂಚೇಂದ್ರಿಯ, ಅರಿಷಡ್ವರ್ಗ, ಸಪ್ತಧಾತು ಅಷ್ಟ ಮದಂಗಳ ತಡೆಯು ಬಲ್ಲಡೆ ಕೂಡಲ ಚನ್ನಸಂಗಯ್ಯನಲ್ಲಿ ಅದೇ ಅಚ್ಚ ಶೀಲ', 'ಚಿತ್ತದ, ಕಳವಳವು ಸಮನಿಸಿ ಮನವು ಮಹದಲ್ಲಿ ನೆಲೆಗೊಂಡಡೆ ಶೀಲ ಪರಿಚಯು ನೆಲೆಗೊಂಡೊಡೆ ಸೀಮೆ', 'ತನ್ನ ಮನಕ್ಕೆ ಸೀಮೆಯ ಮಾಡುವುದು ಶೀಲ' ಎಂದು ಶೀಲವನ್ನು ಕುರಿತ ವಚನಗಳಿವೆ. ಭಕ್ತನ ಶೀಲ ಹೇಗಿರಬೇಕು ಎಂದು ವಿವರಿಸುವುದೇ ದಾಸರ ಪದಗಳ ಮುಖ್ಯ ಉದ್ದೇಶ.

ಭರತಮುನಿಯು ತನ್ನ 'ನಾಟ್ಯಶಾಸ್ತ್ರ'ದಲ್ಲಿ (ಅ. ೨೭, ಪು. ೫೫–೬೭) ಪ್ರೇಕ್ಷಕರ ಮತ್ತು ನಟ ಇವರಲ್ಲಿ ಹೃದಯಸಂವಾದ ಹೇಗೆ ಆಗುತ್ತದೆ ಎಂಬುದನ್ನು ವಿವರಿಸು ತ್ತಾನೆ. ಪ್ರೇಕ್ಷಕರಲ್ಲಿ ಬಾಲಕರು, ತರುಣರು, ವೃದ್ಧರು, ಸ್ತ್ರೀಯರು ಇರುವಂತೆ, ನಾಟಕದ ನಟವರ್ಗದಲ್ಲಿಯೂ ಇರುತ್ತಾರೆ. ಪ್ರೇಕ್ಷಕರು ಉತ್ತಮ ಮಧ್ಯಮ ಅಧಮ ಮತ್ತು ಸಮ್ಮಿಶ್ರ ಪ್ರಕೃತಿಯವರಿರುತ್ತಾರೆ. ಬಾಲಕ ಮತ್ತು ಸ್ತ್ರೀಯರಿಗೆ ಹಾಸ್ಯ; ತರುಣರಿಗೆ ಕಾಮ, ಶೌರ್ಯ ಮತ್ತು ರೌದ್ರ; ವೃದ್ಧರಿಗೆ ಧರ್ಮಾರ್ಥಮೋಕ್ಷ ಪುರಾಣ ಮೆಚ್ಚಿಗೆಯಾಗುತ್ತದೆ. ಇಂತಹ ವಿವಿಧರುಚಿ ಪ್ರೇಕ್ಷಕರ ಮನವನ್ನು ಗೆಲ್ಲುವುದಕ್ಕಾಗಿ ಮೆಚ್ಚಿಸುವುದಕ್ಕಾಗಿ ನಾಟಕಕಾರನು ತನ್ನ ನಾಟಕದ ಪಾತ್ರಸೃಷ್ಟಿಯಲ್ಲಿ, ಪ್ರೇಕ್ಷಕರಲ್ಲಿ ಕಂಡುಬರುವ ಶೀಲವೈವಿಧ್ಯದ ಅನುಕರಣವನ್ನು ಮಾಡುತ್ತಾನೆ. ಹೀಗಾಗಿ ನಿತ್ಯಜೀವನ ದಲ್ಲಿ ಕಂಡುಬರುವ ಶೀಲವೈವಿಧ್ಯದ ಅನುಕರಣವು ನಾಟ್ಯದಲ್ಲಿ ಪ್ರತಿಷ್ಠಿತವಾಗುತ್ತದೆ, ಎಂದು ಭರತಮುನಿ ವಿವೇಚಿಸುತ್ತಾನೆ:

'ನಾನಾಶೀಲಾಃ ಪ್ರಕೃತಯಃ ಶೀಲೇ ನಾಟ್ಯಂ ಪ್ರತಿಷ್ಠಿತಂ'

ಈತನೇ ಇನ್ನೊಂದು ಕಡೆ ನಾಟ್ಯದ ಬಗ್ಗೆ—

'ನಾಟ್ಯಂ ಭಾವಾನುಕೀರ್ತನಂ' ಎಂದೂ

ನಾಟ್ಯ ಪಾತ್ರದ ಬಗ್ಗೆ—

'ಯೋಽಯಂ ಸ್ವಭಾವೋ ಲೋಕಸ್ಯ ಸುಖದುಃಖಸಮನ್ವಿತಃ
ಸೋಽಂಗಾದ್ಯಭಿನಯೋಪೇತೋ ನಾಟ್ಯಮಿತ್ಯಭಿಧೀಯತೇ'

ಎಂದೂ, ನಾಟ್ಯಕಾವ್ಯದ ಬಗ್ಗೆ—

'ವಾಚಿ ಯತ್ನಸ್ತು ಕರ್ತವ್ಯೋ ನಾಟ್ಯಸ್ಯೈಷಾ ತನುಃಸ್ಮೃತಾ'

ಎಂದೂ ಮನನೀಯ ವಿಚಾರವನ್ನು ಸೂತ್ರಬದ್ಧವಾಗಿ ಹೇಳಿದ್ದಾನೆ. ನಾಟಕದಲ್ಲಿ ವ್ಯಕ್ತಿ (ಪಾತ್ರ) ಆಡುವ ಮಾತು ಮತ್ತು ವ್ಯಕ್ತಿಯ (ಪಾತ್ರದ) ಬಗ್ಗೆ ವ್ಯಕ್ತಿ (ಪಾತ್ರ) ಗಳು ಆಡುವ ಮಾತುಗಳಿಂದ ಪಾತ್ರದ ಸ್ವಭಾವ, ಶೀಲ ಪ್ರಕಟಗೊಳ್ಳುತ್ತದೆ. ಈ ಶೀಲ ಸ್ವಭಾವವು ಸುಖದುಃಖ ಸಮನ್ವಿತವಾಗಿರುತ್ತದೆ. ಸುಖದುಃಖಸಮನ್ವಿತವಾದ ಶೀಲ ಸ್ವಭಾವದ ಅನುಕರಣವನ್ನು ನಟನು ಮಾಡುತ್ತಾನೆ; ನಟಿಸುತ್ತಾನೆ. ಈ ಎಲ್ಲ ಅಂಶಗಳು ಜೈಮಿನಿ ಭಾರತ (ಅಶ್ವಮೇಧಪರ್ವ) ಎಂಬ ನಾಟ್ಯಕಾವ್ಯಕ್ಕೆ ಚೆನ್ನಾಗಿ ಅನ್ವಯಿಸುತ್ತವೆ.

'ಓದುಗರ ಮನಸ್ಸಿನಲ್ಲಿ ಬೇರೂರಿ ನೆಲಸಿ ಪ್ರಭಾವ ಬೀರುವ ಪಾತ್ರಗಳು ಎಷ್ಟಿವೆ ಲಕ್ಷ್ಮೀಶನಲ್ಲಿ? ದುಷ್ಟಬುದ್ಧಿ, ಬಭ್ರುವಾಹನ, ಚಂದ್ರಹಾಸ, ಸೀತೆ, ಜ್ವಾಲೆ, ಚಂಡಿ, ಪ್ರಮೀಳೆ, ಸುಧನ್ವರನ್ನು ಕ್ರಮವಾಗಿ ಹೆಸರಿಸಬೇಕು. ಮಿಕ್ಕುಳಿದ ಪಾತ್ರಗಳೆಲ್ಲ ಕವಿ ಸೂತ್ರಧಾರನು ಹಾಗೆ ಎಳೆದು ಹೀಗೆ ಎಳೆದು ಮರೆಯಿಂದ ಕುಣಿದಾಡಿಸುವ ತೊಗಲು ಗೊಂಬೆಗಳು. ಕೆಲವು ಪಾತ್ರಗಳಿಗೆ ಮಾತ್ರ ತಮ್ಮ ತಮ್ಮ ಬಾಳ್ವಿಕೆಯ ಲವಲವಿಕೆ ಯುಂಟು, ಆತ್ಮಪ್ರತ್ಯಯವುಂಟು, ಪ್ರತ್ಯೇಕ ತೇಜಸ್ಸುಂಟು. ಆದರೆ ಯಾರೊಬ್ಬರಿಗೂ ವಿವಿಧಾಂಗ ಸ್ವಭಾವದ ಸಂಪೂರ್ಣತೆಯಿಲ್ಲ. ಲಕ್ಷ್ಮೀಪತಿಯ ಪಾತ್ರರಚನೆ ಅವನಿಗೆ ಸಂದಿರುವ ಪುರಸ್ಕಾರವನ್ನು ಅಷ್ಟೇನೂ ಹೆಚ್ಚಿನ ಪ್ರಮಾಣದಲ್ಲಿ ಸಮರ್ಥಿಸಲಾರದು'[1] ಎಂಬೊಂದು ಅಭಿಪ್ರಾಯವಿದೆ. ಹಂಪೆಯ ಹಜಾರರಾಮನ ದೇವಾಲಯದ ಸೌಂದರ್ಯ ವನ್ನು ಬೆಳೆಸಲು ಅದರ ಸುತ್ತುಗೋಡೆಯ ಮೇಲೆಲ್ಲ ಕೆತ್ತಿದ ಮೂರ್ತಿಗಳೂ ಸಂದರ್ಭ ಚಿತ್ರಗಳೂ ಎಲ್ಲ ಹಿರಿದಾಗಿರುವುದು ಅವಶ್ಯವಲ್ಲ. ಪ್ರತ್ಯೇಕ ಶಿಲಾಮೂರ್ತಿಗೆ ಅದರದರ ಪ್ರತ್ಯೇಕ ತೇಜಸ್ಸಿದ್ದರೆ ಸಾಕು. ಆ ದೇವಾಲಯದ ಶಿಲ್ಪ ಸೌಂದರ್ಯಕ್ಕೆ ಬಾಧೆತಾರದ ಚಿಕ್ಕ ಶಿಲ್ಪಮೂರ್ತಿಗಳಿಗೂ ಅವುಗಳ ಮಹತ್ತ್ವವಿದ್ದೇ ಇದೆ. ಇದರಂತೆ ಜೈಮಿನಿ ಭಾರತ ದಲ್ಲಿ ಎಲ್ಲ ಪಾತ್ರಗಳು ನಮ್ಮನ್ನು ಗೆಲ್ಲಬೇಕೆಂದೇನೂ ನಿಯಮವಿಲ್ಲ. ಪ್ರತಿಯೊಂದು ಪಾತ್ರಕ್ಕೆ ಕವಿ ಎಷ್ಟು ಸ್ಥಾನವನ್ನು ಕೊಟ್ಟಿದ್ದಾನೆ? ಆ ಸ್ಥಾನದಲ್ಲಿ ಆ ಪಾತ್ರವು ಎಷ್ಟರ ಮಟ್ಟಿಗೆ ಅರಳಿದೆ? ಎಂಬುದು ಮಹತ್ತ್ವದ್ದು. ಗರುಡ ಮತ್ತು ನಂದಿ ಸುಧನ್ವನ ರುಂಡ ಕ್ಕಾಗಿ ಹೋರಾಡುವ ಪ್ರಸಂಗವನ್ನು ತೆಗೆದುಕೊಳ್ಳಿ. ಅದು ೩-೪ ನುಡಿಗಳಲ್ಲಿ ಮುಗಿ ಯುತ್ತದೆ. ಅವರಿಬ್ಬರೂ ಸ್ವಾಮಿಕಾರ್ಯವನ್ನು ನಿಷ್ಠೆಯಿಂದ ಮಾಡಿದ ಶೀಲವು ಚೆನ್ನಾ ಗಿಯೆ ವ್ಯಕ್ತವಾಗಿದೆ; ಇಬ್ಬರೂ ಸಮಸತ್ತ್ವರಾಗಿದ್ದಾರೆ. ಆ ಪಾತ್ರಚಿತ್ರಣದಲ್ಲಿ ಆ ಮಟ್ಟಿಗೆ ವ್ಯಕ್ತಿತ್ವವು ಪೂರ್ಣತ್ವಪಡೆದಿದೆ ಎಂದು ಹೇಳಬಹುದು. ಕಾವ್ಯದ ಮುಕ್ತಾ ಯದವರೆಗೂ ಬರುವ ಪಾತ್ರಗಳು ಕೆಲವು ಮಾತ್ರ. ಯಜ್ಞಾರಂಭದಲ್ಲಿ ಕೆಲವು ಪಾತ್ರಗಳು ಕಾಣಿಸಿಕೊಂಡು ಮುಂದೆಲ್ಲಿಯೂ ಕಾಣಿಸದಂತಿವೆ. ಇದರಿಂದ ಪಾತ್ರಗಳ ಬೆಲೆಯೇನೂ ಕಡಿಮೆಯಾಗುವುದಿಲ್ಲ. ಕಾವ್ಯನಾಯಕನ ಪಾತ್ರಕ್ಕೆ ಪುಷ್ಟಿಯನ್ನು ಕೊಡುವುದರಲ್ಲಿಯೆ ಇತರ ಪಾತ್ರಗಳ ಸಾರ್ಥಕತೆಯಿದೆ. ಇಲ್ಲಿಯ ಎಲ್ಲ ಪಾತ್ರಗಳ ಶೀಲವು ಶ್ರೀಕೃಷ್ಣ

---

[1] 'ಶೈಲಿ-೨', ಎಸ್. ವಿ. ರಂಗಣ್ಣ, ಪುಟ ೧೫೪-೧೫೫.

ಶರಣತ್ವವೇ ಆಗಿದೆ. ಅದರ ಅಭಿವ್ಯಕ್ತಿ ಪಾತ್ರಗಳಲ್ಲಿ ಚೆನ್ನಾಗಿಯೆ ಆಗಿದೆ ಎಂದು ಹೇಳ ಬಹುದು.

ಈ ಕಾವ್ಯದಲ್ಲಿ ಸುಮಾರು ೨೫೭ ಪಾತ್ರಗಳ ಪ್ರವೇಶವಿದೆ (ಪಾತ್ರಕೋಶವನ್ನು ಅನುಬಂಧದಲ್ಲಿ ನೋಡಬಹುದು). ಈ ಪಾತ್ರಗಳಲ್ಲಿ ವೈವಿಧ್ಯವುಂಟು. ಅವುಗಳನ್ನು ಪುರುಷಪಾತ್ರ, ಸ್ತ್ರೀಪಾತ್ರ, ಮಂತ್ರಿ, ಅನುಜ, ಪುತ್ರ, ದಾಸದಾಸಿ, ಋಷಿ, ದೇವತೆ ಗಳಲ್ಲದೆ ನಾಮಮಾತ್ರಪಾತ್ರಗಳು, ಹೆಸರಿಲ್ಲದ ಪಾತ್ರಗಳು ಎಂದು ವಿಂಗಡಿಸಬಹುದು. ಅಥವಾ ಯಾದವರು, ಪಾಂಡವರು, ಹಂಸಧ್ವಜಾದಿಗಳು, ನೀಲಧ್ವಜಾದಿಗಳು— ಹೀಗೆಯೂ ವಿಭಜಿಸಬಹುದು. ನಾವು ಈ ಪ್ರಕರಣದಲ್ಲಿ ಪುರುಷಪಾತ್ರಗಳು, ಸ್ತ್ರೀ ಪಾತ್ರಗಳು, ಬಾಲಕರು, ಮುನಿಗಳು, ದೇವತೆಗಳು, ಇತರರು ಮತ್ತು ಕಾವ್ಯನಾಯಕ ಎಂದು ವಿಭಾಗಿಸಿಕೊಂಡು ಅವರ ಶೀಲವನ್ನು ವಿವರಿಸುತ್ತೇವೆ.

ಈ ಎಲ್ಲ ಪಾತ್ರಗಳನ್ನು ಸಂಸ್ಕೃತ ಜೈಮಿನಿ ಭಾರತದಲ್ಲಿದ್ದಂತೆಯೇ ಲಕ್ಷ್ಮೀಶ ಕವಿ ಇಳಿಸಿಕೊಂಡಿಲ್ಲ ಎಂಬುದು ಮುಖ್ಯ. ಆ ಪಾತ್ರಗಳನ್ನು ಅರಳಿಸುವಲ್ಲಿ, ಜೀವಕಳೆ ತುಂಬುವುದರಲ್ಲಿ ಈ ಕವಿಯ ಕೌಶಲವನ್ನು ಕಾಣಬಹುದು. ಉದಾ: ಸಂ. ಜೈ. ಭಾ.ದಲ್ಲಿ (ಅ.೬,ಶ್ಲೋ. ೩೦-೪೩) ಯೌವನಾಶ್ವನ ಪಟ್ಟಣದ ಶ್ರೇಷ್ಠ ವ್ಯಾಪಾರಿ ಸುದೇವ ಮತ್ತು ಅವನ ತಾಯಿ ಜರದ್ಗವಾ ಎಂಬ ವಿಷಯ ಹೇಳಿದೆ. ಎಲ್ಲರೂ ಶ್ರೀಕೃಷ್ಣನ ದರ್ಶನಕ್ಕೆ ಹೊರಡಬೇಕು ಎಂದು ಹೇಳಿದಾಗ ಜರದ್ಗವಾ ಹೊರಡಲು ಸಿದ್ಧಳಾಗುವುದಿಲ್ಲ ಎಂದು ಅಲ್ಲಿದೆ. ಲಕ್ಷ್ಮೀಶನು ಈ ಎರಡು ಪಾತ್ರಗಳನ್ನು ತೆಗೆದು ಹಾಕಿ, 'ಎಲ್ಲರುಂ ಪೊಜಿಮಟ್ಟ ಬಳಿಕಾನೃಪಂ ರಮಾವಲ್ಲಭನದರ್ಶನಕೆ **ಮಾತೆಯಂ** ಕರೆಯಲವಳೊಲ್ಲೆನಾನಿಲ್ಲಿರದೊಡೀ ಬದುಕ ಸಾಗಿಸುವರಾರೆಂದು ಚಂಡಿಗೊಳ್ಳುತ್ತಾಳೆ' ಎಂದು ಯೌವನಾಶ್ವನ ತಾಯಿಯ ಪಾತ್ರವನ್ನು ತರುತ್ತಾನೆ. ಇದರ ಔಚಿತ್ಯವೆಂದರೆ, ನಾಡಿನ ಜನಜೀವನದಲ್ಲಿ ಕಂಡು ಬರುವ ಮನೆತನದ ಯಜಮಾನಿಯಾದ ವಯೋವೃದ್ಧೆಯ ಪ್ರತೀಕವಾಗಿದ್ದಾಳೆ ಯೌವ ನಾಶ್ವನ ತಾಯಿ. ಅಲ್ಲದೆ ಎಲ್ಲರೂ ಹೊರಡುವುದು ಎಂದರೆ ಊರಲ್ಲಿ ಒಂದು ಪಿಳ್ಳೆಯೂ ಉಳಿಯಲಾಗದು ಎಂದೆನ್ನುವುದು ಲೋಕವಿಸಂಗತ. ಸೆಟ್ಟಿಯ ತಾಯಿ ಒಲ್ಲೆ ಎಂದರೆ ಅಂಥದೇನು ಮಹಾ! ನಾಯಕ ಯೌವನಾಶ್ವನ ತಾಯಿಯೇ ಚಂಡಿಗೊಂಡುದು ಮಹತ್ತ್ವದ್ದು. ಮನೆಯವರು ಎಲ್ಲರೂ ಹೊರಡಬೇಡವೆ? ತನ್ನ ತಾಯಿ, ಮನೆತನದ ಹಿರಿಯಳು, ಕೃಷ್ಣನಿಗೆ ಸರ್ವಸ್ವವನ್ನು ಒಪ್ಪಿಸುವಾಗ ಅವಳು ಇರಲೇಬೇಕು ಎಂದು ಒತ್ತಾಯದಿಂದ ಕರೆದೊಯ್ಯುತ್ತಾನೆ ಎಂಬಲ್ಲಿ ಆತನ ಗುರುಗೌರವ ಸಂಸ್ಕೃತಿ ವ್ಯಕ್ತ ವಾಗಿದೆ. ಮೂಲದಲ್ಲಿಲ್ಲದ ಈ ವೈಶಿಷ್ಟ್ಯವನ್ನು ಲಕ್ಷ್ಮೀಶ ಸಾಧಿಸಿದ್ದಾನೆ. ಈ ಬದಲಾ ವಣೆಯನ್ನು ಮರಾಠೀ ಜೈಮಿನಿ ಭಾರತ ಕಾವ್ಯದಲ್ಲಿಯೂ ಕಾಣುತ್ತೇವೆ. ಮರಾಠಿ ಮತ್ತು ಕನ್ನಡ ಕಾವ್ಯಗಳಲ್ಲಿಯ ಈ ಸಾಮ್ಯವು ವಿಚಾರಣೀಯ.

'ಕವಿಯ ಲೋಕಾನುಭವ, ಭಾವನೆ, ಊಹೆ ಕಡಿಮೆತರದ್ದಾದರೆ ಕಾವ್ಯದ ವ್ಯಕ್ತಿ ಗಳು ಕಾಗದದಲ್ಲಿ ಮಾಡಿದ ಹೂವಿನಂತಾಗುತ್ತಾರೆ; ಕೀಲಿಟ್ಟ ಮರದ ಬೊಂಬೆಯಂತೆ

ಚಲಿಸುತ್ತಾರೆ. ಭಾವನೆ, ಊಹೆ ಉತ್ತಮ ರೀತಿಯದಾದರೆ ಅವರೆಲ್ಲ ನಿಜವಾದ ಮನುಷ್ಯ ರಾಗುತ್ತಾರೆ. ಲಕ್ಷ್ಮೀಶನ ಪಾತ್ರಪ್ರಪಂಚವು ನಮ್ಮ ಬುದ್ಧಿಗೆ ನಿಜವಾದ ಪ್ರಪಂಚದಂತೆ ಅನುಭವಕ್ಕೆ ಬರುವುದು. ತಂದೆ ತಾಯಂದಿರು ಮಕ್ಕಳ ವಿಷಯದಲ್ಲಿ, ಸೇವಕರು ಯಜಮಾನರ ವಿಷಯದಲ್ಲಿ, ಗಂಡಹೆಂಡಿರು ಒಬ್ಬರೊಬ್ಬರ ವಿಷಯದಲ್ಲಿ, ಕಿರಿಯರು ಹಿರಿಯರ ವಿಷಯದಲ್ಲಿ ನಡೆದುಕೊಳ್ಳುವ ರೀತಿ ಉಚ್ಚವಾದ ಶಿಕ್ಷಣವನ್ನು ಪಡೆದ ಸಮಾಜದ ವಿನಯವನ್ನು ಸೂಚಿಸುತ್ತದೆ' ಎಂಬ ಮಾಸ್ತಿ ವೆಂಕಟೇಶ ಅಯ್ಯಂಗಾರರ ಅಭಿಪ್ರಾಯವು ಲಕ್ಷ್ಮೀಶನ ಪಾತ್ರಸೃಷ್ಟಿಗೆ ಅನ್ವಯಿಸುವುದೆಂಬುದು ಒಪ್ಪತಕ್ಕ ಮಾತು.

ಇನ್ನು ಲಕ್ಷ್ಮೀಶ ಸೃಷ್ಟಿಯ ಬೇರೆ ಬೇರೆ ಪಾತ್ರಗಳ ಶೀಲವನ್ನು ಅಭ್ಯಸಿಸೋಣ.

## ಪುರುಷ ಪಾತ್ರಗಳು

ಪ್ರಮುಖ ಪುರುಷಪಾತ್ರಗಳಲ್ಲಿ ನಾವು ಈ ಪ್ರಕಾರ ಗುಂಪುಗಳನ್ನು ಮಾಡ ಬಹುದು. ಶ್ರೀಕೃಷ್ಣ, ಶ್ರೀರಾಮ; ಲಕ್ಷ್ಮಣ, ಭೀಮ; ಧರ್ಮ, ಅರ್ಜುನ; ಯೌವನಾಶ್ವ, ನೀಲಧ್ವಜ, ಹಂಸಧ್ವಜ, ಮಯೂರಧ್ವಜ, ವೀರವರ್ಮ, ಕುಳಿಂದಕ; ದುಷ್ಟಬುದ್ಧಿ; ಅನುಸಾಲ್ವ, ಭೀಷಣ; ಅಗ್ನಿ, ಯಮ. ಈ ಗುಂಪುಗಳ ಪಾತ್ರಶೀಲವನ್ನು ಪ್ರತ್ಯೇಕವಾಗಿ ಅನುಕ್ರಮದಿಂದ ಕಾಣೋಣ.

### ಶ್ರೀಕೃಷ್ಣ, ಶ್ರೀ ರಾಮ

ಶ್ರೀಕೃಷ್ಣನು ಅಂಜಿ ಅತ್ತಿಯ ಹಣ್ಣಾದನೆಂಬುದು, ತಾಮ್ರಧ್ವಜನ ಯುದ್ಧದಲ್ಲಿ ಶ್ರೀಕೃಷ್ಣಾರ್ಜುನರು ಭೂಮಿಗೆ ಬಿದ್ದರೆಂಬುದು, ಅನುಸಾಲ್ವನೊಡನೆ ಹೋರಾಡಿ ಕೃಷ್ಣನು ಮೂರ್ಛೆಹೋದನೆಂಬುದು ಕೆಲವರಿಗೆ ಒಪ್ಪಿಗೆಯಾಗುವುದಿಲ್ಲ.[1] ಶ್ರೀಕೃಷ್ಣನು ಮಾನವನಲ್ಲ; ಮಾನವ ಲೀಲಾವತಾರಿ, ಭಕ್ತರಕ್ಷಾವ್ಯಸನಿ. ಅವನು ದೇವರೂಪೀ ಮಾನವನಲ್ಲ, ಮಾನವರೂಪೀದೇವನು. ಈ ದೃಷ್ಟಿಕೋನದಿಂದ ಕವಿ ಈ ಪಾತ್ರವನ್ನು ಚಿತ್ರಿಸಿದ್ದಾನೆ. ಈ ದೃಷ್ಟಿಯಿಂದಲೇ ನಾವೂ ನೋಡಿದರೆ ಇಂತಹ ಯಾವ ಆಕ್ಷೇಪಕ್ಕೂ ಕಾರಣವಿಲ್ಲ. ಚಿಕ್ಕಮಕ್ಕಳು ಹಟವಿಡಿದು ಹಿರಿಯರಾದ ನಮ್ಮೊಡನೆ ಕುಸ್ತಿಯಾಡಿ ನಮ್ಮನ್ನು ಕೆಡಹುವುದಿಲ್ಲವೆ? ನಾವು ಬೀಳುವುದಿಲ್ಲವೆ? ನಾವು ಬೀಳುವುದರಿಂದ ಚಿಕ್ಕ ಮಕ್ಕಳು ಪೌರುಷದಿಂದ ಉಬ್ಬುವುದಿಲ್ಲವೆ? ಅದನ್ನು ಕಂಡು ನಾವು ಆನಂದಿಸುವುದಿಲ್ಲವೆ? ಇಂತಹದೇ ಲೀಲಾವಿನೋದ ಶ್ರೀಕೃಷ್ಣನದು. ಅವನು ಬೀಳುವುದು, ಮೂರ್ಛಿತನಾಗುವುದು, ಅಳುವುದು ಎಲ್ಲವೂ ಅವನ ಮಾನವಲೀಲೆಯ ನಿದರ್ಶನ. 'ಜೈಮಿನಿ ಭಾರತದ ನಾಯಕಪಾತ್ರ–ಶ್ರೀಕೃಷ್ಣ' ಎಂಬಲ್ಲಿ ಅವನ ವಿಷಯವನ್ನು ವಿವರವಾಗಿ ಚರ್ಚಿಸಿದ್ದೇವೆ. ಈ ನಾಯಕಪಾತ್ರಕ್ಕೆ ಪುಷ್ಟಿಯನ್ನು ಕೊಡುವುದೇ ಎಲ್ಲ ಪ್ರಮುಖ ಪುರುಷ ಪಾತ್ರಗಳ ವೈಶಿಷ್ಟ್ಯವಾಗಿದೆ.

---

1 'ಶೈಲಿ', ಎಸ್. ವಿ. ರಂಗಣ್ಣ, ಪು. ೧೫೦–೧೫೧.

ಏಕಪತ್ನೀವ್ರತಸ್ಥನಾದ ರಾಮಚಂದ್ರ, ಸೀತೆಯ ಅಗಲಿಕೆಯಿಂದ ದುಃಖಪಡುವ ರಾಮಚಂದ್ರ, ಆತ್ಮಸುಖವನ್ನೂ ತ್ಯಜಿಸಿ ಆತ್ಮಾರ್ಪಣ ಮಾಡಿನಿಂತ ಶ್ರೀರಾಮಚಂದ್ರನ ಪಾತ್ರ ಚಿತ್ರಣವನ್ನು ಜಿ. ವರದರಾಜರಾವ್ 'ಸೀತಾಪರಿತ್ಯಾಗದ ಸಮಸ್ಯೆಗಳು' ಎಂಬ ಪುಸ್ತಿಕೆಯಲ್ಲಿ ಮಾಡಿದ್ದಾರೆ. ಇದು ಯೋಗ್ಯವೆ ಆಗಿದೆ. ಶ್ರೀರಾಮನಿಗೆ ರಾಜಧರ್ಮ ಮೊದಲನೆಯದು, ವ್ಯವಹಾರಧರ್ಮ ಗೌಣ.[1] ಶ್ರೀರಾಮ, ಶ್ರೀಕೃಷ್ಣನ ಒಂದು ಅವತಾರ. ಹೀಗಾಗಿ ಕುಮಾರವ್ಯಾಸ ಲಕ್ಷ್ಮೀಶರು ಶ್ರೀಕೃಷ್ಣ ಶ್ರೀರಾಮರನ್ನು ಅಭೇದದಿಂದ ಸ್ತುತಿಸುತ್ತಾರೆ. ಕುಮಾರವ್ಯಾಸ ಶ್ರೀಕೃಷ್ಣನನ್ನು ಸ್ತುತಿಸುವಾಗ 'ರಾವಣಾಸುರ ಮಥನ' ಎಂಬುದು, ಲಕ್ಷ್ಮೀಶನು ಕುಶಲವರ ರೂಪವನ್ನು ವರ್ಣಿಸುವಾಗ 'ಕಾಮಜನಕನ ಕಮನೀಯ ಲಾವಣ್ಯಮಂ' (೨೦–೫೨) ಎಂದು ಶ್ರೀರಾಮನನ್ನು ಹೊಗಳುವುದು ಅಭೇದ ಚಿತ್ರಣಕ್ಕೆ ನಿದರ್ಶನ. 'ದೇವರೇ ಭೂಮಿಗೆ ಇಳಿದು ಬಂದರೆ ಇಂಥ ಸಂದರ್ಭದಲ್ಲಿ ಹೇಗೆ ನಡೆದಿರಬಹುದು ಎಂದರೆ ಕೃಷ್ಣನು ನಡೆದಂತೆ ಎನ್ನದೆ ಬೇರೆ ಉತ್ತರವಿಲ್ಲ. ಕೃಷ್ಣನ ಪರಾಕ್ರಮ, ಕೃಷ್ಣನ ಧರ್ಮಪಕ್ಷಪಾತ, ಕೃಷ್ಣನ ಶಾಂತಿಪ್ರೇಮ, ಕೃಷ್ಣನ ಸೌಜನ್ಯ, ದಾಕ್ಷ್ಯ, ವಿನಯ, ಆಶ್ರಿತ ವಾತ್ಸಲ್ಯ, ಅವನೊಬ್ಬನಿಗೇ ಸಾಧ್ಯ ಹೊರತಾಗಿ ಉಳಿದವರಿಗೆ ಸಾಧ್ಯವಲ್ಲ' ಎಂದು ಮಹಾಭಾರತದ ಶ್ರೀಕೃಷ್ಣನ ಪಾತ್ರದ ಮಹತಿಯನ್ನು ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಸಂಗ್ರಹಿಸಿದ್ದಾರೆ.[2] ಇದು ಜೈಮಿನಿ ಭಾರತದ ಶ್ರೀಕೃಷ್ಣನಿಗೂ ಅನ್ವಯಿಸುತ್ತದೆ.

### ಭೀಮ, ಲಕ್ಷ್ಮಣ

ಧರ್ಮಾರ್ಜುನರ ಸಾಹಸಕ್ಕೆ ಹೇಗೆ ಭೀಮನು ಸಹಾಯಕನೋ ಹಾಗೆ ಶ್ರೀ ರಾಮನು ಮಾಡುವ ಸಾಹಸಕ್ಕೆ ಲಕ್ಷ್ಮಣನು ಸಹಾಯಕನಾಗಿದ್ದಾನೆ.

ಭೀಮನ ಪೌರುಷ, ಹಾಸ್ಯಗುಣ, ಶ್ರೀಕೃಷ್ಣಭಕ್ತಿ ಜೈಮಿನಿ ಭಾರತದಲ್ಲಿ ಚೆನ್ನಾಗಿ ಪ್ರಕಟಗೊಂಡಿವೆ. ಭೀಮನು ಶ್ರೀಕೃಷ್ಣನೊಂದಿಗೆ ಸಲಿಗೆಯಿಂದ ಮಾತನಾಡುವುದು ಸಂಸ್ಕೃತ ಜೈಮಿನಿ ಭಾರತದಲ್ಲಿ ವಿಸ್ತಾರವಾಗಿ ಬರುತ್ತದೆ (೧೦. ೫–೨೭). 'ದಾದಿ ನಿನ್ನ ಗಂಟಲನ್ನು ಇಷ್ಟು ಹಿಗ್ಗಿಸಿದಳೆ? ಅವಳ ಮೂಗನ್ನು ಕೊಯ್ಯಬೇಕು! ಅವಳು ನಿನ್ನ ಗಂಟಲನ್ನು ಹಿಗ್ಗಿಸಲು ತನ್ನ ಹೆಬ್ಬಟ್ಟನ್ನು ಉಪಯೋಗಿಸಿದಳೊ, ಒನಕೆ ನೇಗಿಲ ಉಪಯೋಗಿಸಿದಳೊ ತಿಳಿಯದು, (ಎಂದು ಭೀಮನು ಎನ್ನುತ್ತಿದ್ದಂತೆ ಶ್ರೀಕೃಷ್ಣನ ಊಟದ ಸದ್ದು ನಿಂತುದರಿಂದ) ನಿನ್ನ ಗಂಟಲಲ್ಲಿ ಒಡೆ ಸಿಕ್ಕಿದೆಯೆ? ಅದನ್ನು ನನ್ನ ಗದೆಯಿಂದ ಒಳಕ್ಕೆ ನೂಕಲೆ?' ಎನ್ನುತ್ತಾನೆ ಸಂಸ್ಕೃತದ ಭೀಮ. ಇಂತಹ ಮಾತುಗಳಿಗೆ ಲಕ್ಷ್ಮೀಶನು ಆಸ್ಪದವನ್ನು ಕೊಡುವುದಿಲ್ಲ; ಮಾತನ್ನು ಕಿರಿದಿಸುತ್ತಾನೆ. ಎಲ್ಲ ಮಾತು ಮುಗಿದ ಮೇಲೆ ಸಂ.ಜೈ. ಭಾರತದಲ್ಲಿ ಶ್ರೀಕೃಷ್ಣನೇ ಎದ್ದುಬಂದು ಭೀಮನ ಕೈಹಿಡಿದು,

---

1–2 'ಭಾರತತೀರ್ಥ', ಪುಟ ೨೧೪.

'ಭೀಮಾ, ಬಾ, ನಾನು ನಿನಗೆ ಊಟಕ್ಕೆ ಬಡಿಸುವೆ, ಉಣ್ಣು ನಡೆ. ಅರ್ಜುನನಷ್ಟು ನನಗೆ ಯಾರೂ ಪ್ರಿಯರಲ್ಲ. ಪುತ್ರ, ಮಿತ್ರ, ಸ್ತ್ರೀ, ಸಹೋದರ ಇವರಾರೂ ಧನಂಜಯನಷ್ಟು ನನಗೆ ಪ್ರಿಯರಲ್ಲ' ಎನ್ನುತ್ತಾನೆ. ಇಲ್ಲಿ ಶ್ರೀಕೃಷ್ಣ–ಅರ್ಜುನರ ಮೈತ್ರಿ ಕೃಷ್ಣನ ಮುಖದಿಂದಲೇ ವ್ಯಕ್ತವಾಗಿದೆ. ಆದರೆ ಭೀಮನೊಡನೆ ಮಾತು ನಡೆದ ಸಂದರ್ಭದಲ್ಲಿ ಕೃಷ್ಣನಿಂದ ಹೀಗಾಡಿಸುವುದು ಲಕ್ಷ್ಮೀಶನಿಗೆ ಸೇರುವುದಿಲ್ಲ. ಅದಕ್ಕಾಗಿ ಅವನು ಮಾಡಿದ ಮಾರ್ಪಾಟು ಗಮನಾರ್ಹವಾಗಿದೆ. ಅವರಿಬ್ಬರ ಸಂಭಾಷಣೆಯಲ್ಲಿ ಕವಿಯ ಕಲಾತ್ಮಕತೆಯನ್ನು ಅರಿಯಬಹುದು:

ಶ್ರೀವರಂ ನಸುನಗೆಯೊಳಾಗಳಱಿಂದಂದದಿಂ
'ದಾವಾಗ ಬಂದನನಿಲಜನಿತ್ತ ಕರೆ ತಡೆದ
ಳಾವಳೀತಕೆ ಕೋಪಮೆನೆ' ಮತ್ತೆ ಪವನಸುತನೊಳವೊಗುತ್ತಿಂತೆದನು. (೬.೫೪)
'ದೇವ, ನಿಮ್ಮರ್ಜುನನ ಸಲುಗೆ ನಮಗುಂಟೆ? ಸಂ
ಭಾವಿಸುವರಿಲ್ಲೆಮ್ಮನಿಲ್ಲಿ'

ಹೀಗೆ ಭೀಮನ ಮುಖದಿಂದ ಆಡಿಸುವುದು ಔಚಿತ್ಯಪೂರ್ಣವಾಗಿದೆ. ಅಲ್ಲದೆ ಭೀಮನ ಬಂದುದು ತನಗೆ ಗೊತ್ತೇ ಇಲ್ಲವೆಂದು ಕೃಷ್ಣನು ನಟಿಸುವಲ್ಲಿಯೂ ಭೀಮನ್ನು ಅದಕ್ಕೆ ತಕ್ಕಂತೆ 'ಅರ್ಜುನನಂತೆ ತಾನು ಸಲಿಗೆಯವನಲ್ಲ' ಎಂದು ಕೋಪದಿಂದ ವಿಡಂಬಿಸುವಲ್ಲಿಯೂ ನಾಟಕೀಯತೆಯ ಸೊಗಸಿದೆ. ಇದು ವಾಚಕರ ಮೇಲೆ ಹೆಚ್ಚು ಪರಿಣಾಮವನ್ನುಂಟುಮಾಡುತ್ತದೆ. ಶ್ರೀಕೃಷ್ಣನೊಡನೆ ಭೀಮನ ಸಲುಗೆ ಎಂಥದು ಎಂಬುದು ಅವನ ಕೋಪದ ಮಾತುಗಳಲ್ಲಿ ವ್ಯಕ್ತವಾಗುತ್ತದೆ; ಅವನ ವ್ಯಕ್ತಿತ್ವದ ಎತ್ತರವು ಗೊತ್ತಾಗುತ್ತದೆ. ಈ ಸಂದರ್ಭದ ಭೀಮನನ್ನು ಅರ್ಜುನನೊಡನೆ ಹೋಲಿಸಿ ನೋಡಿ ಹೇಳುವುದಾದರೆ, ಶ್ರೀಕೃಷ್ಣನೊಡನೆ ಅರ್ಜುನನ ಸಲುಗೆ ಇಸೆ ಎಂಬುದನ್ನು ಬಹುಶಃ ಎಲ್ಲಿಯೂ ಕಾಣೆವು.

**ಲಕ್ಷ್ಮಣನ ಪಾತ್ರ :** ಸೀತೆಯನ್ನು ಅರಣ್ಯದಲ್ಲಿ ಬಿಟ್ಟು ಬರಲು ಅವನು ಹೊರಟಿದ್ದಾನೆ. ಸೀತೆಗೆ ಆಶ್ರಮಕ್ಕೆ ಹೊರಟಿದ್ದೇನೆಂಬ ಭಾವನೆ. ಹಾದಿಯಲ್ಲಿ ಆಶ್ರಮದ ಚಿಹ್ನಗಳೇ ಕಾಣುತ್ತಿಲ್ಲ. ಆಕೆ ಬಯಸಿದ್ದು ಆಶ್ರಮವಾಸ; ರಾಮನು ವಿಧಿಸಿದ್ದು ವನವಾಸ; ಲಕ್ಷ್ಮಣನು ಅನುಭವಿಸಿದ್ದು ಮಾನಸಿಕ ಹೋರಾಟ.

'ಸೀತೆಯ ಮಾತುಗಳನ್ನು ಕೇಳಿದ ಲಕ್ಷ್ಮಣನು ಕಣ್ಣೀರು ಸುರಿಸಿದನು. ವ್ಯಥಿತನಾದ ಅವನು ಅಧೋಮುಖನಾಗಿ ಮಾತನಾಡಿದನು: "ಸೀತೆ, ಆಶ್ರಮವು ಇನೂ ದೂರವಿದೆ. ನಿಧಾನವಾಗಿ ನಡೆ. ಲೋಕಾಪವಾದದ ಮೂಲಕ ರಾಮನು ನಿನ್ನನ್ನು ತ್ಯಜಿಸಿದ್ದಾನೆ" 'ಎಂದು ಸಂ. ಜೈ. ಭಾರತದ ಕಥನವಿದೆ (೨೮, ೨೮–೩೪). ಲಕ್ಷ್ಮಣನಲ್ಲಿ ಈಗ ನಡೆದ ಒಳತೋಟಿಯನ್ನು ಲಕ್ಷ್ಮೀಶನು ಅರಳಿಸುವುದು ಹೀಗೆ:

'ಅವನಿಸುತೆ ನುಡಿದ ಮಾತಿಗು
ತ್ತರವನಾಡದೆ ಮನದೊಳುಱಿ ನೊಂದು ರಾಘವೇ
ಶ್ವರನೆಂದ ಕಷ್ಟಮಂ ಪೇಳ್ವೆನೆನೊ ಮೇಣುಸಿರದಿರ್ದಪೆನೊ ನಿಷ್ಠುರದೊಳು

ತರಣಿಕುಲ ಸಾರ್ವಭೌಮನರಾಣಿಯಂ ಬನದೊ
ಳಿರಿಸಿ ಪೋದಪೆನೆಂತೊ ಪೋಗದಿರ್ದಡೆ ಸಹೋ
ದರನದೇನೆಂದಪನೊ ಹಾಯೆಂದು ಲಕ್ಷ್ಮಣಂ ಬೆಂದು ಬೇಗುದಿಗೊಂಡನು.
ಉಕ್ಕಿದುವು ಕಂಬನಿಗಳಧರೋಷ್ಠಮುದಿರಿತಲ
ಗಿಕ್ಕಿ ತಿರುಪಿದವೊಲಾಯ್ತೊಡಲೊಳೆಡೆವರಿಯದುಸಿ
ರೊಕ್ಕುದುಱಿ ಕಂಪಿಸಿದುದವಯವಂ ಕರಗಿತೆರ್ದೆ ಸೈರಣೆ ಸಮತೆಗೆಟ್ಟುದು.
ಸಿಕ್ಕಿದುವು ಕಂಠದೊಳ್ ಮಾತುಗಳ್ ಸೆರೆ ಬಿಗಿದು
ಮಿಕ್ಕು ಮಿಾಱುವ ಶೋಕದಿಂದೆ ಬೆಂಡಾಗಿ ಕಡು
ಗಕ್ಕಸದ ಕೆಲಸಮನುಸಿರಲಱಿಯದವನೊಯ್ಯನವನಿಸುತೆಗಿಂತೆಂದನು'

—(೧೯, ೧೩–೧೪)

ಹೀಗೆ ಮಾತನಾಡುವ ಮೊದಲು, ಮಾತನಾಡುವುದಕ್ಕಾಗಿ ಲಕ್ಷ್ಮಣನು ಒಳಗೊಳಗೆ ಎಂತಹ ತಳಮಳವನ್ನು ಅನುಭವಿಸಿದನೆಂಬುದನ್ನು ಆ ಕುದಿಯ ಹನಿಹನಿಯನ್ನೂ ಲಕ್ಷ್ಮೀಶನು ತೋರಿಸಿದ್ದಾನೆ. ಇಲ್ಲಿ ಕಾಣುವ ಅವನ ಪಾತ್ರಚಿತ್ರ ಕಣ್ಮುಂದೆ ಕಟ್ಟುತ್ತದೆ. ಅವನಿಗೆ ಬಿದ್ದಿರುವ ತೊಡಕು ಚೆನ್ನಾಗಿ ತಿಳಿಯುತ್ತದೆ. ಇನ್ನು ಮುಂದಿನ ಲಕ್ಷ್ಮಣ-ಸೀತೆಯರ ಸಂಭಾಷಣೆಯನ್ನು ಕೂಡ ಕವಿ ಹೀಗೆಯೇ ಹಾರ್ದಿಕವಾಗಿ ಚಿತ್ರಿಸಿದ್ದಾನೆ.

**ಧರ್ಮ, ಅರ್ಜುನ**

ಇವರಿಬ್ಬರೂ ಒಂದರ್ಥದಿಂದ ನಾಯಕಪಾತ್ರಗಳೇ ಆಗಿದ್ದಾರೆ. ಯಜ್ಞಕರ್ಮಕ್ಕೆ ಧರ್ಮನು ನಾಯಕನಾದರೆ ಯುದ್ಧಕರ್ಮಕ್ಕೆ ಅರ್ಜುನನು ನಾಯಕ.

ಹರಿಯನುಳಿದಾವು ಬದುಕುವರಲ್ಲ, ಚಿತ್ತದೊಳ್
ಭರಿತನಾಗಿಹನಾವಗಂ, ಧರ್ಮಸೂನು ಮಱಿ
ದಿರನಾ ಮುರಾರಿಯ ನಿರೂಪದಿಂ ತೊಡಗಿ ಮಾಡುವನೀ ಮಹಾಕ್ರತುವನು

ಎಂಬು ಅರ್ಜುನನು ಸೌಭರಿ ಮುನಿಗೆ ಉತ್ತರಿಸುತ್ತಾನೆ (೧೦.೨೧). ಈ ಉತ್ತರದಿಂದ ಧರ್ಮಾರ್ಜುನರ ಭಕ್ತಶೀಲವು ವ್ಯಕ್ತವಾಗುತ್ತದೆ. ಈ ಮಾತು ಸಂಸ್ಕೃತ ಜೈಮಿನಿ ಭಾರತದಲ್ಲಿಲ್ಲ. ಧರ್ಮ ಮತ್ತು ಅರ್ಜುನ ಇಬ್ಬರೂ ಹೇಡಿಗಳು ಎಂದು ಅನೇಕರಿಗೆ ತೋರುವಂತೆ ಇದೆ ಅಲ್ಲಿ. ಅವರು ಹೇಡಿಗಳಲ್ಲ, ತಮ್ಮ ಮೇಲಿನ ದೇವಶಕ್ತಿಗೆ ಶರಣು ಹೋದವರು. ಶ್ರೀಕೃಷ್ಣಶಕ್ತಿಯನ್ನು ಧಿಕ್ಕರಿಸಿ, ಅಲಕ್ಷಿಸಿ ಅವರು ಯಾವ ಕೆಲಸವನ್ನೂ ಮಾಡುವುದಿಲ್ಲ. 'ಅವನ ಮತವಿಡಿದು' ಅವರದೆಲ್ಲವೂ ನಡೆಯುತ್ತದೆ, ಜೈಮಿನಿ ಭಾರತದ ಈ ಅಶ್ವಮೇಧ ಪರ್ವದಲ್ಲಿ.

ಪಾತ್ರಗಳಲ್ಲಿ ಗತಿಶೀಲ (round) ಮತ್ತು ಸ್ಥಿತಿಶೀಲ (static) ಎಂದು ಎರಡು ವಿಭಾಗಗಳನ್ನು ಮಾಡುತ್ತಾರೆ. ಪಾತ್ರದ ನಡತೆ ಯಾವುದೋ ಒಂದು ವಿಶಿಷ್ಟ ಗುರಿಯತ್ತ ಸಾಗಿರುತ್ತದೆ. ಗುರಿಮುಟ್ಟುವವರೆಗೆ ಪಾತ್ರದ ನಡೆಯಲ್ಲಿ ಅನೇಕ ಬದಲಾವಣೆಗಳಾಗುತ್ತವೆ. ನೀಲಧ್ವಜನು ಯುದ್ಧ ಮಾಡುತ್ತಾನೆ, ನಿಲ್ಲಿಸುತ್ತಾನೆ, ಮತ್ತೆ ಮಾಡುತ್ತಾನೆ, ಕೊನೆಗೆ ಯಜ್ಞಾಶ್ವವನ್ನು ಅರ್ಜುನನಿಗೆ ಒಪ್ಪಿಸುತ್ತಾನೆ. ಹಂಸಧ್ವಜನು ಮಗ ಸುಧನ್ವನನ್ನು ಯುದ್ಧದಲ್ಲಿ ಕಳೆದುಕೊಳ್ಳುತ್ತಾನೆ, ಶೋಕಿಸುತ್ತಾನೆ, ಇನ್ನೊಬ್ಬ

ಮಗ ಸುರಥನನ್ನೂ ಕಳೆದುಕೊಂಡಮೇಲೆ ತಾನೇ ಯುದ್ಧಕ್ಕೆ ಮುಂದಾಗುತ್ತಾನೆ, ಶ್ರೀಕೃಷ್ಣಾಲಿಂಗನದಿಂದ ಭಕ್ತನಾಗಿ ಪರಿವರ್ತಿತನಾಗುತ್ತಾನೆ. ಹೀಗೆ ಹಲವು ಬದಲಾವಣೆ ಹೊಂದುತ್ತ ಒಂದು ನಿರ್ದಿಷ್ಟವಾದ ಕೊನೆ ಮುಟ್ಟುವುದು ಪಾತ್ರದ ಜೀವಂತತನದ ಲಕ್ಷಣ. ನಾವು ಪ್ರತಿನಿತ್ಯ ಏನಾದರೊಂದು ಕಾರ್ಯವನ್ನು ಮಾಡುವುದಾಗಿ ನಿಶ್ಚಯಿಸು ತ್ತೇವೆ. ಆದರೆ ಆ ಕಾರ್ಯ ಕೈಗೂಡುವವರೆಗೆ ಎಷ್ಟು ಸಲ ವಿಚಾರಗಳು ಬದಲಾಗುತ್ತವೆ ಎಂಬುದು ಅನುಭವದ ಮಾತು.

ಪಾತ್ರಗಳ ನಡತೆಯಲ್ಲಿ ಹೀಗೆ ಬದಲಾವಣೆ, ಗತಿಶೀಲತೆ ಕಂಡಾಗಲೇ ಆ ಪಾತ್ರ ಗಳು ನಮಗೆ ಪ್ರತಿನಿತ್ಯದ ನಮ್ಮ ಸಹವಾಸದ ವ್ಯಕ್ತಿಗಳಂತೆ ತೋರುತ್ತವೆ. ಜೈಮಿನಿ ಭಾರತದಲ್ಲಿ ಬರುವ ಎಲ್ಲ ರಾಜರ ಪಾತ್ರಚಿತ್ರಣ ಗತಿಶೀಲ ಪಾತ್ರಗಳದ್ದಾಗಿದೆ. ಅವರೆಲ್ಲರ ಧ್ಯೇಯ ಶ್ರೀಕೃಷ್ಣ ಭಕ್ತಿಯ ಸಾಫಲ್ಯ, ಶ್ರೀಕೃಷ್ಣಸಾನ್ನಿಧ್ಯ. ಆದರೆ ಆ ಧ್ಯೇಯಕ್ಕೆ ಸಾಗುವ ಹಾದಿಗಳು ಅವರವರವು ಬೇರೆ ಬೇರೆ. ಯೌವನಾಶ್ವನು ರಣಾಂಗಣದಲ್ಲಿ ಮೂರ್ಛಿತನಾಗಿ, ನೀಲಧ್ವಜ ಸಹೋದರಪುತ್ರರನ್ನು ಕಳೆದುಕೊಂಡು, ಹಂಸಧ್ವಜನು ಪುತ್ರರತ್ನದ್ವಯವನ್ನು ನೀಗಿ, ಮಯೂರಧ್ವಜನು ತನ್ನ ತಲೆಯನ್ನು ಕೊರೆಯಿಸಿ ಕೊಂಡು, ವೀರವರ್ಮನು ಶ್ರೀಕೃಷ್ಣನಿಂದ ಒದೆಸಿಕೊಂಡು—ಹೀಗೆ ಶ್ರೀಕೃಷ್ಣಭಕ್ತಿಯಲ್ಲಿ ತಲ್ಲೀನರಾಗುತ್ತಾರೆ. ಇದುವೆ ಇವರೆಲ್ಲರ ಶೀಲ. ಈ ಎಲ್ಲ ರಾಜರ ಶೀಲವನ್ನು ಚಿತ್ರಿಸು ವಾಗ ಕವಿ ಲಕ್ಷ್ಮೀಶನು ಸೂಕ್ಷ್ಮದೃಷ್ಟಿಯಿಂದ ನೋಡಿ ಸಂಸ್ಕೃತ ಜೈಮಿನಿ ಭಾರತ ದಲ್ಲಿ ಬದಲಾವಣೆ ಮಾಡಿಕೊಳ್ಳುತ್ತ ಸಾಗುತ್ತಾನೆ. ಉದಾಹರಣಾರ್ಥವಾಗಿ, ಮಯೂರ ಧ್ವಜನ ಅರ್ಧ ಅಂಗವನ್ನು ಬ್ರಾಹ್ಮಣಸ್ವರೂಪೀ ಕೃಷ್ಣನು ಬೇಡುತ್ತಾನೆ. ಅದು 'ಈ ಅರಣ್ಯಕ್ಕೆ ಮಯೂರಧ್ವಜನ ಅರ್ಧಶರೀರವನ್ನು ತೆಗೆದುಕೊಂಡು ಬರಲು ಸಿಂಹವು ಹೇಳಿದೆ' ಎಂದು ಸಂ.ಜೈ. ಭಾರತದಲ್ಲಿದ್ದರೆ (೪೫–೨೭), 'ಈವುದು ದಿವ್ಯದುಗ್ಧಸಂಪನ್ನ ಫಲಪುಷ್ಪಮಾಗಿಹ ಮಯೂರಧ್ವಜನ ಮೈಯೊಳರ್ಧಮಂ' ಎಂಬ ರೂಪವನ್ನು ಕನ್ನಡ ದಲ್ಲಿ ತಾಳಿದೆ. ಹೀಗೆ ಸಣ್ಣಪುಟ್ಟ ವಿಷಯದಲ್ಲಿಯೂ ಔಚಿತ್ಯವರಿತು ಕವಿ ಲಕ್ಷ್ಮೀಶನು ಬದಲಾವಣೆ ಮಾಡಿಕೊಳ್ಳುತ್ತಾನೆ.

ಈ ರಾಜರ ಪಾತ್ರಗಳು ತೊಗಲುಗೊಂಬೆಯಂತೆ ನಿರ್ಜೀವವಾಗಿವೆ ಎಂದು ಕೆಲವರು ಹೇಳುವುದುಂಟು. ಅಹಂಕಾರದ ಹೋರಾಟವಿಲ್ಲದ ಈ ಪಾತ್ರಗಳು ಪಾತ್ರಗಳೇ? ಎಂದು ಪ್ರಶ್ನೆ ಎತ್ತುತ್ತಾರೆ ಅವರು. ಎಲ್ಲ ಪಾತ್ರಗಳೂ ಭಕ್ತಶೀಲವನ್ನೇ ವ್ಯಕ್ತಪಡಿಸಿದ್ದೂ ಅವರಿಗೆ ಸೇರುವುದಿಲ್ಲ. ಆದರೆ, ಕಾವ್ಯದ ಉದ್ದೇಶವನ್ನರಿತು, ಆ ಉದ್ದೇಶವನ್ನು ಪಾತ್ರ ಗಳು ಹೇಗೆ ಪುಷ್ಟೀಕರಿಸುತ್ತವೆ ಎಂಬುದರ ಮೇಲಿಂದ ಪಾತ್ರಗಳ ಸಜೀವತೆ ಇಲ್ಲವೆ ನಿರ್ಜೀವತೆಯನ್ನು ಅಳೆಯಬೇಕೇಹೊರತು ಉಳಿದ ಮಾನಪ್ರಮಾಣಗಳಿಂದಲ್ಲ ಎಂದು ನಮಗೆ ತೋರುತ್ತದೆ. ಜೈಮಿನಿ ಭಾರತ ಕಾವ್ಯದ ಉದ್ದೇಶವು 'ಶ್ರೀಕೃಷ್ಣ ಚರಿತಾಮೃತ' ವನ್ನು ನೀಡುವುದಾಗಿದೆ. ಇಲ್ಲಿ ಬರುವ ಎಲ್ಲ ಪಾತ್ರಗಳ ಗತಿ ಕೃಷ್ಣಸಾಯುಜ್ಯ, ಕೃಷ್ಣ ಸಾನ್ನಿಧ್ಯ, ಕೃಷ್ಣದರ್ಶನ ಎಂಬ ದೈವದತ್ತ ಸಾಗಿದೆ. ಧರ್ಮಸಂಸ್ಥಾಪನೆಗಾಗಿ, ಪಾಂಡವ

ಪ್ರತಿಷ್ಠಾಪನಾಚಾರ್ಯನಾಗಿ ಅವತರಿಸಿದ ಶ್ರೀಕೃಷ್ಣನು ಇಲ್ಲಿ ಬರುವ ರಾಜರ ಭಕ್ತಿಯ ಮೇಲ್ಮೆಯನ್ನು ಅರ್ಜುನನಿಗೆ ತೋರಿಸಿಕೊಡುತ್ತಾನೆ. ಇಲ್ಲಿಯ ಪಾತ್ರಗಳಿಗೆ ಸ್ವತಂತ್ರ ವಿಚಾರವಿದೆ, ವಿವೇಕವಿದೆ, ದೃಢ ನಿಶ್ಚಯವಿದೆ. ಆದರೆ ಇವು ಯಾವುವೂ ಶ್ರೀಕೃಷ್ಣನನ್ನು ವಿರೋಧಿಸಿಯಲ್ಲ. ವಿರೋಧಿಸಿದವರೂ ಕೊನೆಗೆ ಶ್ರೀಕೃಷ್ಣನಿಗೆ ಶರಣಾಗುತ್ತಾರೆ. ವೀರನ ಪಾತ್ರವು ವಿರೋಧಿ ಜಯದಲ್ಲಿ, ಭಕ್ತನ ಪಾತ್ರವು ದೇವಶರಣಾಗತಿಯಲ್ಲಿ ಚೆನ್ನಾಗಿ ಅರಳಿ ನಿಲ್ಲುತ್ತದೆ. ಈ ಕಾವ್ಯದಲ್ಲಿ ಕೆಲವು ವೀರರು ಒಮ್ಮಿಂದೊಮ್ಮೆ ಶ್ರೀಕೃಷ್ಣನಿಗೆ ಶರಣಾಗುವುದನ್ನು, ಶ್ರೀಕೃಷ್ಣಭಕ್ತರಾಗಿ ಪರಿವರ್ತನೆ ಹೊಂದುವುದನ್ನು ತೋರಿಸಿದೆ. ಇದು ಪಾತ್ರಚಿತ್ರಣದ ದೃಷ್ಟಿಯಿಂದ ವಿಸಂಗತವಾಗಿ ತೋರುವುದೇಕೆಂದರೆ, ವೀರನು ಶರಣಾಗತನಾಗುವುದು ತನ್ನ ಪಾತ್ರದ ಶೀಲಕ್ಕೆ ದೋಷವನ್ನು, ಕಲಂಕವನ್ನು ತಂದು ಕೊಂಡಂತೆ ಎಂಬುದರಿಂದ. ಆದರೆ ಕಾವ್ಯದ ಉದ್ದೇಶ ಮತ್ತು ಮೂಲಸೂತ್ರವನ್ನು ನೆನೆದು ವೀರರ ಶರಣಾಗತತ್ವವನ್ನು ಒಪ್ಪಬೇಕಾಗುತ್ತದೆ.

ಸ್ಥಿತಿಶೀಲವಾದ ಪಾತ್ರ ಜೀವಂತಪಾತ್ರವಲ್ಲ ಎಂದು ವಿಮರ್ಶಕರ ಅಭಿಪ್ರಾಯ ವಿದೆ. ಹಾಗೇನೂ ತಿಳಿಯಬೇಕಾಗಿಲ್ಲ. ಏಕೆಂದರೆ ಈ ಕಾವ್ಯದಲ್ಲಿ ದುಷ್ಟಬುದ್ಧಿಯ ಪಾತ್ರ ಸ್ಥಿತಿಶೀಲ ಪಾತ್ರ. ಮೊದಲಿಂದ ಕೊನೆಯವರೆಗೆ ತನ್ನ ಮಗನಿಗೆ ಕುಂತಳ ರಾಜ್ಯ ದೊರೆಯಬೇಕೆಂಬ ಅತ್ಯಾಶೆ ಅವನಿಗೆ ಇದ್ದೇ ಇದೆ. ಈ ಲೋಕಲೌಕಿಕವಾದ ಸಹಜ ಸಾಮಾನ್ಯವಾದ ಅಭಿಲಾಷೆ ಅದಮ್ಯವಾದುದರಿಂದಲೇ ಅವನ ದುಷ್ಟತನಕ್ಕೆ ಪ್ರಚೋದಕ ವಾಗಿದೆ. ಲಾಕ್ಷಣಿಕರ ಹೇಳಿಕೆಯಂತೆ ತನ್ನ ಅಭಿಲಾಷೆಗೆ ಅಡ್ಡಿಯೆಂದಾಗಿದ್ದ ಚಂದ್ರ ಹಾಸನ ನಾಶಕ್ಕೆ ಅವನ ದುಷ್ಟಬುದ್ಧಿ ಸಾಹಸಪಡುತ್ತದೆ. ಎಷ್ಟರವರೆಗೆಂದರೆ, ತನ್ನ ಮಗಳು ವಿಧವೆಯಾದರೂ ಆಗಲಿ ಎನ್ನುವವರೆಗೆ. ತನ್ನ ಮಾರ್ಗದಲ್ಲಿ ತಾನು ಸ್ಥಿರ. ಅದಕ್ಕಾಗಿ ಹಲವು ಉಪಾಯಗಳನ್ನು ಹಮ್ಮುತ್ತಾನೆ. ಈ ಸ್ಥಿತಿಶೀಲಪಾತ್ರವೂ ನಮ್ಮ ಸ್ಮೃತಿಪಟಲದಲ್ಲಿ ಅಚ್ಚೊತ್ತಿ ನಿಲ್ಲುವಂತೆ ಚಿತ್ರಿತವಾಗಿದೆ, ಎಂದೂ ಅಳಿಸದ ವರ್ಣಚಿತ್ರ. ಕೊನೆಗೆ ಈ ದುಷ್ಟಬುದ್ಧಿಯೂ ಶ್ರೀಕೃಷ್ಣದರ್ಶನದಿಂದ ಪಾಪಕ್ಷಾಲನವನ್ನು ಮಾಡಿ ಕೊಂಡನೆಂದು ಹೇಳಿರುವುದು ಕಾವ್ಯೋದ್ದೇಶಕ್ಕಾಗಿಯೆ ಎಂದು ಹೇಳಬೇಕಾಗುತ್ತದೆ. ಸ್ತ್ರೀಪಾತ್ರಗಳಲ್ಲಿಯ ಜ್ವಾಲೆಯಂತೆ ಪುರುಷಪಾತ್ರಗಳಲ್ಲಿ ದುಷ್ಟಬುದ್ಧಿಯ ಪಾತ್ರ. ಛಲನೇ ಇಬ್ಬರ ಶೀಲವಾಗಿದೆ. ದುಷ್ಟಬುದ್ಧಿ ಮಾತನಾಡುವ ರೀತಿ, ಮಗನನ್ನು ಕಳೆದು ಕೊಂಡು ದುಃಖಪಡುವ ಬಗೆಯನ್ನು ಕವಿ ಲಕ್ಷ್ಮೀಶನು ಸ್ವತಂತ್ರ ಪ್ರತಿಭೆಯಿಂದ ಚಿತ್ರಿಸಿ ದ್ದಾನೆ. ಸಂಸ್ಕೃತ ಜೈಮಿನಿ ಭಾರತದಲ್ಲಿ ಇದನ್ನು ಹೋಲುವ ಮಾತುಗಳಿಲ್ಲ.

**ಅನುಸಾಲ್ವ ಮತ್ತು ಭೀಷಣ**

ಇವರಿಬ್ಬರೂ ಅಸುರರು. ಅನುಸಾಲ್ವನನ್ನು ಬಂಧಿಸಿ, ಭೀಷಣನನ್ನು ಸಂಹರಿಸಿ ದ್ದಾಗಿ ಸಂ.ಜೈ.ಭಾ. ಹೇಳುತ್ತದೆ. ಕವಿ ಲಕ್ಷ್ಮೀಶನು ಅನುಸಾಲ್ವನನ್ನು ವೃಷಕೇತು ಬಂಧಿಸಿದನೆಂದೂ ಭೀಷಣನ ಕಪಟವನ್ನರಿತು ಅರ್ಜುನನು ಅವನನ್ನು ಅಧೀನಪಡಿಸಿ ಕೊಂಡನೆಂದೂ ಹೇಳುತ್ತಾನೆ.

ಕೊನೆಯದಾಗಿ, ಅಗ್ನಿ ಮತ್ತು ಯಮ ಇವರ ಪಾತ್ರಗಳು ಕಾವ್ಯದಲ್ಲಿಯ ಚಮತ್ಕಾರ ಎಂದು ಹೇಳಬಹುದು. ಇವರಿಬ್ಬರೂ–ಅಗ್ನಿ ನೀಲಧ್ವಜನಿಗೆ, ಯಮನು ವೀರವರ್ಮನಿಗೆ–ಮನೆಯಳಿಯರಾಗಿ ಭೂಲೋಕದಲ್ಲಿ ವಾಸಿಸುತ್ತಾರೆ. ಇವರೂ ಕೃಷ್ಣಾಧೀನರೆಂದು ತೋರಿಸಲಾಗಿದೆ.

ಕೆಳಗೆ ಕಾಣಿಸಿದ ಆಯಾ ಪಾತ್ರಗಳ ಉಕ್ತಿಗಳ ಅವಲೋಕನ ಮಾಡಿದರೆ ಎಲ್ಲ ಪಾತ್ರಗಳು ಶ್ರೀಕೃಷ್ಣಪಾತ್ರಕ್ಕೆ ಪೋಷಕವಾಗಿವೆ ಎಂಬುದು ಕಂಡುಬರುವುದು. ಹೀಗೆ ಪೋಷಕವಾಗಿರುವುದೇ ಜೈಮಿನಿ ಭಾರತದ ಎಲ್ಲ ಪ್ರಮುಖ ಪಾತ್ರಗಳ ಶೀಲವಾಗಿದೆ. ನೀಲಧ್ವಜನ ಪತ್ನೀವಶತೆ, ಹಂಸಧ್ವಜನ ಕ್ಷಾತ್ರತಾಮಸದ ಅತಿರೇಕ, ಭೀಷಣನ ಮಾಯಾಸೃಷ್ಟಿ, ಮಯೂರಧ್ವಜನ ದಾನಬುದ್ಧಿ, ವೀರವರ್ಮನ ಅನುರಕ್ತಪ್ರೀತಿ, ಚಂದ್ರಹಾಸನ ಪರಪುಟ್ಟತನ ಇವು ಅವರವರ ಪ್ರತ್ಯೇಕಶೀಲಗಳಾಗಿವೆ. ಆ ಉಕ್ತಿಗಳು ಹೀಗಿವೆ:

**ಧರ್ಮರಾಯ:** (ಕೃಷ್ಣನಿಗೆ) ದೇವ, ನಿಮ್ಮಡಿಯ ಕಾರುಣ್ಯವೊಂದುಳ್ಳೊಡೆ ಸದಾ ವಿಜಯರಾವು; ಅದಾರಿದ್ದರೇನು?

**ಭೀಮ:** (ಕೃಷ್ಣನಿಗೆ) ನಿಜಭಾಷಿತವನುಳಿಯೆವು, ಅಶ್ವಮಂ ತಹೆವು; ಕ್ರತುವಂ ನಡೆಸಿಮೇಣ್ ಉಳುಹಿ.

**ಅರ್ಜುನ:** (ಸೌಭರಿಗೆ) ಹರಿಯನು ಉಳಿದು ಆವು ಬದುಕುವರಲ್ಲ.

**ಅನುಸಾಲ್ವ:** ಕೃಷ್ಣನಂ ದ್ವೇಷದಿಂ ಬೈದೊಡಂ, ತನ್ನ ಮನವಾರೆ ಸಂತೋಷದಿಂ ನುತಿಗೈದೊಡಂ ಪೋಗದಿರ್ದಪುವೆ ಕೋಟಿ ಜನ್ಮದೊಳ್ ಒದವಿದ ದೋಷಂಗಳ್?

**ಅಗ್ನಿ:** (ಅರ್ಜುನನಿಗೆ) ನಿನಗೆ ಹರಿ ಸಮೀಪದೊಳ್ ಇರ್ದುಂ ಈ ವಾಜಿಮೇಧಂ ಏಕೆ?

**ಹಂಸಧ್ವಜ:** (ಆತ್ಮವಿಚಾರ) ಈ ಧನಂಜಯನ ತುರಗಮನೀಗ ಕಟ್ಟಿದೊಡೆ ಮಾಧವಂ ತಾನೆ ಮೈದೋರುವಂ ಎಮಗೆ.

**ಮಯೂರಧ್ವಜ:** (ಮಗನನ್ನು ಕುರಿತು) ಸ್ವಕರಸ್ಥನಾದ ಹರಿಯಂ ಬಿಟ್ಟು ಕಟ್ಟಿದಂ ಗರ್ಧಭಾಕೃತಿಯ ಹರಿಯನು!

**ವೀರವರ್ಮ:** (ಆತ್ಮಗತ) ಮುರಹರನ ದರ್ಶನಂ ದೊರೆಕೊಳ್ವಿನಂ ತನಗೆ ಮರಣಮಿಲ್ಲ, ಅಂತಕನ ವರದಿಂದೆ. ಬಳಿಕೀಗ ಪುರುಷೋತ್ತಮನ ಪದಸ್ಪರ್ಶವಾಯ್ತು ಎನಗೆ, ಇನ್ನು ಮೃತ್ಯು ಎತ್ತಣದು?

**ಚಂದ್ರಹಾಸ:** (ಮಕ್ಕಳೊಡನೆ) ಸಿಕ್ಕಿದೊಡೆ ಕೃಷ್ಣದರ್ಶನದ ಪುಣ್ಯಮೆ ಸಾಕು!

ಜಗತ್ತಿನಲ್ಲಿ ಮೂರು ಪ್ರಕಾರದ ವ್ಯಕ್ತಿಗಳಿರುತ್ತಾರೆ. ಜ್ಞಾನಿ, ಮನೋನಿಗ್ರಹಿ, ವಿವಿಧ ಕಲೆ ಶಾಸ್ತ್ರಧರ್ಮಗಳಲ್ಲಿ ನಿಪುಣರು, ಭೂತದಯೆಯುಳ್ಳವರು ಧರ್ಮದಂತೆ ನಡೆಯುವವರು–ಇವರು ಉತ್ತಮರು. ದುಷ್ಟ, ನಿರ್ಬಲ, ದುರಾಚಾರಿ, ಸ್ತ್ರೀಲಂಪಟ, ವಿಶ್ವಾಸಘಾತಕಿ, ಕೋಪಿಷ್ಟರು—ಇವರು ನೀಚರು ಅಥವಾ ಅಧಮರು. ಈ ಎರಡೂ ಸ್ವಭಾವವೃತ್ತಿಗಳು ವಿಶೇಷವಾಗಿ ಕಂಡುಬರದವರು ಮಧ್ಯಮರು ಎಂದು ಭರತನಾಟ್ಯ

ಶಾಸ್ತ್ರಕಾರನು ಪುರುಷಪಾತ್ರಗಳನ್ನು ವಿಂಗಡಿಸುತ್ತಾನೆ. ಈ ವಿಂಗಡಣೆಯ ಪ್ರಕಾರ ಜೈಮಿನಿ ಭಾರತದಲ್ಲಿ—ದುಷ್ಟಬುದ್ಧಿ ನೀಚಪಾತ್ರ; ನೀಲಧ್ವಜ ಮಧ್ಯಮ ಪಾತ್ರ; ಉಳಿದೆಲ್ಲರು ಉತ್ತಮ ಪಾತ್ರಗಳು ಎಂದು ಹೇಳಲು ಅಭ್ಯಂತರವಿಲ್ಲ. ಏಕೆಂದರೆ ಪ್ರತಿಯೊಬ್ಬ ರಾಜನ ರಾಜ್ಯವರ್ಣನೆ ಮಾಡುವಾಗ ಅವನ ಧಾರ್ಮಿಕ ಗುಣ, ಅವನ ರಾಜ್ಯದಲ್ಲಿಯ ಅನ್ಯಾಯ ಅನಾಚಾರರಾಹಿತ್ಯ ಇತ್ಯಾದಿಗಳನ್ನು ಹೇಳಲಾಗಿದೆ.

ಒಟ್ಟಿನಲ್ಲಿ ಜೈಮಿನಿ ಭಾರತದ ಪುರುಷಪಾತ್ರಪ್ರಪಂಚವು ವಿವಿಧ ಶೀಲಯುಕ್ತವಾಗಿ ವಾಚಕನ ಮನಸ್ಸನ್ನು ಆಕರ್ಷಿಸುವ ಶಕ್ತಿಯನ್ನು ಪಡೆದಿದೆ.

## ಸ್ತ್ರೀ ಪಾತ್ರಗಳು

'ಎನ್ನ ವದನಾಬ್ಜದಲ್ಲಿ ನೀನೇ ವ್ಯಾಪಿಸಿರ್ದು ಅಮಲಸುಮತಿಯಂ ತಾಯೆನಗೆ ತಾಯೆ ನಗೆಗೂಡಿ ನೋಡಿ' ಎಂದು ಸರಸ್ವತಿಯ ಪ್ರಾರ್ಥನೆಯನ್ನು ಮಾಡಿ, 'ಶಾರದೆಯ ಕರುಣದಿಂ' ಕಾವ್ಯವನ್ನು ರಚಿಸಿದ ಲಕ್ಷ್ಮೀಶನು ಜೈಮಿನಿ ಭಾರತದಲ್ಲಿ ಸ್ತ್ರೀಯ ವಿಶ್ವರೂಪ ದರ್ಶನವನ್ನೇ ಮಾಡಿಸಿದ್ದಾನೆ.

ಈ ಕಾವ್ಯದಲ್ಲಿ ನಮಗೆ ಪರಿಚಿತವಾಗುವ ಮೊದಲನೆಯ ಪಾತ್ರ ದ್ರೌಪದಿ. ಇವಳು ಅಶ್ವಮೇಧ ಯಜ್ಞಕ್ಕೆ ನಾಯಕನಾದ ಧರ್ಮನ ಸಹಧರ್ಮಿಣಿ, ನಾಯಿಕೆ, ಅಸಿಧಾರಾವ್ರತಸ್ಥಳು. ಕೃಷ್ಣನಾಮಸ್ಮರಣೆಯಲ್ಲಿ ತಲ್ಲೀನಳಾಗಿ, ಅಶ್ವಮೇಧಯಜ್ಞಕ್ಕೆ ಯಜಮಾನಿಯ ಸ್ಥಾನದಲ್ಲಿದ್ದಾಳೆ. ಕುಮಾರವ್ಯಾಸನ ಉದ್ಯೋಗಪರ್ವದ,

ತನಯರೈವರು ವೀರ ಸಹದೇ
ವನು ಘಟೋತ್ಕಚನೀ ಸುಭದ್ರಾ
ತನಯನೆನ್ನಯ ತಂದೆ ಮೂಱಕ್ಷೌಹಿಣೀಸೇನೆ
ಇನಿಬರೇ ಕಾದುವರು ದುಶ್ಶಾ
ಸನನ ರಕುತವ ಕುಡಿದು ಕುರುಕುಲ
ವನವ ಸುಡುವರು ನಿಮ್ಮ ಹಂಗೇಕೆಂದಳಿಂದುಮುಖಿ (೬-೨೬)

ದ್ರೌಪದಿಯ ಇಂತಹ ಉದ್ವೇಗಕ್ಕೆ ಜೈಮಿನಿ ಭಾರತದಲ್ಲಿ ಸ್ಥಾನವಿಲ್ಲ. ಇಲ್ಲಿಯ ದ್ರೌಪದಿ ಶಾಂತಸ್ವಭಾವದವಳಾಗಿದ್ದಾಳೆ. ಶ್ರೀಕೃಷ್ಣನು ಬೆಂಬಲಕ್ಕೆ ನಿಂತು ರಕ್ಷಿಸಿದ ಅನೇಕ ಪ್ರಸಂಗಗಳನ್ನು ಸ್ಮರಿಸುವುದು ಮತ್ತು ಅವನನ್ನು ಸ್ತುತಿಸುವುದು ಜೈ.ಭಾ. ದ್ರೌಪದಿಯ ಶೀಲವಾಗಿದೆ.

ಸಂಧಿ ೭ರಲ್ಲಿ ದೇವಕಿ, ಯಶೋದೆ, ಮತ್ತು ಸತ್ಯಭಾಮೆಯರ ಪಾತ್ರಗಳು ಬರುತ್ತವೆ; ಉಳಿದ ಮಹಿಷಿಯರೂ ಅಲ್ಲಿದ್ದಾರೆ. ಆದರೆ ಅವರು ಮಾತನಾಡುವುದಿಲ್ಲ. ಸತ್ಯಭಾಮೆ ಸಲಿಗೆಯ ಧೈರ್ಯದಿಂದ ಶ್ರೀಕೃಷ್ಣನ ಬಾಲಲೀಲೆಗಳನ್ನು ಮತ್ತು ಭೋಜನ ರೀತಿಯನ್ನು ವರ್ಣಿಸುತ್ತಾಳೆ. ಸಂಧಿ ೭ರಲ್ಲಿ ಶ್ರೀಕೃಷ್ಣನು ಅನುಸಾಲ್ವನೊಂದಿಗೆ ಹೋರಾಡಿ ಮೂರ್ಛಿತನಾಗಿದ್ದಾಗ

> ನಿಜ ಶೌರ್ಯದಿಂ ಪ್ರದ್ಯುಮ್ನನ
> ಮಾನಮಂ ಭಂಗಿಸಿದೆ, ನಿನ್ನಂ ಜಗದೊಳ್ ಆವ
> ಮಾನವಂ ಬಣ್ಣಿಸುವಂ ಇನ್ನು? ನಿನ್ನ ಅಘಟಿಗೆ ಸ
> ಮಾನವಂ ಕಾಣೆ!

ಎಂದು ಕಟಕಿ, ಮಾತನ್ನಾಡಲೂ ಸತ್ಯಭಾಮೆ ಹಿಂಜರಿಯುವುದಿಲ್ಲ. ಸತ್ಯಭಾಮೆಯ ಮಾತನ್ನು ಕೇಳಿದ ದೇವಕಿ ಸಂಸ್ಕೃತ ಜೈಮಿನಿ ಭಾರತದಲ್ಲಿ 'ಸತ್ಯಭಾಮೆ, ಹೀಗೆ ಮಾತನಾಡಲು ನಿನಗೆ ಲಜ್ಜೆ ಎನಿಸುವುದಿಲ್ಲವೆ? ಶತ್ರುನಾಶಕನಾದ ಶ್ರೀಕೃಷ್ಣನ ಲಕ್ಷಣವನ್ನೇ ವಿವರಿಸಲು ಬರುವಂತಿಲ್ಲ. ಇದರಿಂದ ಇವನ ತಾಯಿ, ತಂದೆ ಮತ್ತು ಹೆಂಡತಿಗೆ ಸುಖವಿಲ್ಲ. ಎಲ್ಲ ಮಾನವರು ತಮ್ಮ ಕರ್ಮದಿಂದ ಜೀವಿಸುತ್ತಾರೆ. ಯಾರು ಹರಿನಾಮಸ್ಮರಣೆ, ಕೃಷ್ಣನಾಮಸ್ಮರಣೆಯನ್ನು ಮಾಡುತ್ತಾರೊ ಅವರಿಗೆ ಸುಖವಿದೆ' ಎಂದು ಅವಳಿಗೆ ತಿಳಿಹೇಳಿದಳು (೯. ೭೩-೭೯). ದೇವಕಿಯು ಈ ಮಾತುಗಳಿಂದ ಅವಳ ಪಾತ್ರ ಅಷ್ಟೇನೂ ವಿಶೇಷವೆಂದು ಕಾಣುವುದಿಲ್ಲ. ಲಕ್ಷ್ಮೀಶನ ಪಾತ್ರ ಚಿತ್ರಣ ಇಂತಿದೆ:

> ಬಱಿದೆ ಗಳಹದಿರತ್ತೆಮಾವದಿರಿರಲ್ಕೆ! ನೀಂ
> ಅಱಿಯಲಾ! ತನ್ನ ಬಂಧನಂ ಈತನಂ ಉದಯಿಸಲ್
> ಪಱಿದುದು! ಈತನೆ ಜಗದ್ಗುರು ಕಣಾ! ಪಾಲಿಸುವಂ ಇಂದ್ರಾದಿ ನಿರ್ಜರರನು
> ಕುಱುಪಿಡಲ್‌ಬಹುದೆ ಮಾನವನೆಂದು? ಕೃಷ್ಣನಂ
> ಜಱಿತಯೆ ನೀಂ ಏಸಱವಳ್? ಒಡನಾಡಿತನದಿಂದೆ
> ಬೆಱಿತಯಬೇಡ, ಅತ್ತ ಹೋಗು!

ಎಂದು ದೇವಕಿ ಸತ್ಯಭಾಮೆಯನ್ನು ಗರ್ಜಿಸಿದಳು. ಇಲ್ಲಿ ಅವಳು ಶ್ರೀಕೃಷ್ಣನನ್ನು 'ಜಗದ್ಗುರು' 'ಮಾನವನಲ್ಲ' ಎಂದು ಕರೆಯುವುದು ಔಚಿತ್ಯಪೂರ್ಣವಾಗಿದೆ. ಅತ್ತೆ ಸೊಸೆಯನ್ನು ಗದರಿಸುವ, ಗರ್ಜಿಸುವ ಶೀಲ ಚೆನ್ನಾಗಿ ವ್ಯಕ್ತವಾಗಿದೆ. ಇದು ಸಂಸ್ಕೃತ ಜೈಮಿನಿ ಭಾರತದಲ್ಲಿ ಇಲ್ಲ. ಯಶೋದೆ ಎರಡೂ ಕಾವ್ಯಗಳಲ್ಲಿ ಮಾತನಾಡುವುದಿಲ್ಲ. ೨೪ನೆಯ ಸಂಧಿಯಲ್ಲಿಯೂ ಅಷ್ಟೆ.

ಸಂ. ೮,೯,೧೦ ರಲ್ಲಿ ಜ್ವಾಲೆ, ಸ್ವಾಹಾ ಮತ್ತು ಚಂಡಿಯ ಪಾತ್ರಗಳಿವೆ. ಕೃಷ್ಣಭಕ್ತಿಯ ಕಣ್ಣಿಗೆ ಬೀಳದೆ ಇರುವಷ್ಟು ಮದೋನ್ಮತ್ತೆ, ರಾಜನ ಪತ್ನಿಯೆಂಬ ಅಹಂಕಾರದ, ಈರ್ಷ್ಯೆಯ ದಾಸಳಾದಂಥ ಜ್ವಾಲೆ ನೀಲಧ್ವಜನ ರಾಣಿಯಾಗಿದ್ದಾಳೆ. ಅವಳು ಹುರಿದುಂಬಿಸಿದ ಫಲವಾಗಿ ನೀಲಧ್ವಜನು ಯುದ್ಧಕ್ಕಿಳಿದು ತನ್ನ ಅಣ್ಣತಮ್ಮಂದಿರನ್ನು ಮಕ್ಕಳನ್ನು ಕಳೆದುಕೊಳ್ಳಬೇಕಾಗುತ್ತದೆ. ನೀಲಧ್ವಜನು ವೀರನಾಗಿದ್ದರೂ ಅಗ್ನಿಯು ಅವನ ಅಳಿಯನಾಗಿದ್ದರೂ ಕೋಮಲಹೃದಯಿಯಾದ ಅವನು ಯುದ್ಧವನ್ನು ನಿಲ್ಲಿಸಿ ಕುದುರೆಯನ್ನು ಅರ್ಜುನನಿಗೆ ಒಪ್ಪಿಸುತ್ತಾನೆ. ಇದು ಜ್ವಾಲೆಗೆ ಸಹಿಸದು. ಅವಳು ತನ್ನ ಸೋದರನಾದ ಉನ್ಮುಖನೆಡೆಗೆ ಹೋಗುತ್ತಾಳೆ. ಅರ್ಜುನನ ಮೇಲೆ ಸೇಡುತೀರಿಸಿಕೊಳ್ಳಲು ಅವನ ಕಿವಿಯೂದುತ್ತಾಳೆ. ಅದಕ್ಕೆ ಉನ್ಮುಖನು 'ಎನ್ನ ಆಲಯಕೆ ಬಂದು, ಎನಗೆ ಅಪಾಯಮಂ ತಾರದೆ ಇಲ್ಲಿಂದ ಪೋಗು' ಎಂದು ಹೊರಗೆ

ಹಾಕುತ್ತಾನೆ. ಆ ಜ್ವಾಲೆ ಗಂಗಾತೀರಕ್ಕೆ ಬರುತ್ತಾಳೆ. ಅಲ್ಲಿಯ ನಾವಿಕರಿಗೆ

'ಧಾರ್ಮಿಕರ್ ಇವರೊಳ್ ಉಂಟೆ, ತನ್ನಂ ಎಂತಾದೊಡಂ
ನೀರ್ಮುಟ್ಟದಂತೆ ಒಯ್ಯನೆ ಆ ತಡಿಗೆ ದಾಂಟಿಸುವ
ಕೂರ್ಮೆಯುಳ್ಳವರ್?'

ಎಂದು ಜ್ವಾಲೆ ಅವರ ಅಹಂಕಾರವನ್ನು ಕೆಣಕಿ ಕೇಳುತ್ತಾಳೆ. ಸಕಲ ಪಾಪತಾಪಹಾರಿಣಿ ಎಂದು ಸಕಲ ಲೋಕವೇ ಗಂಗೆಯನ್ನು ಆರಾಧಿಸುತ್ತಿರುವಾಗ, ಆಕೆಯ ನುಡಿ ನಾವಿಕರನ್ನು ದಿಗಿಲುಗೊಳಿಸುತ್ತದೆ. ಗಂಗಾಜಲದ ಮಹಿಮೆಯನ್ನು ಆಕೆಗೆ ಬಿತ್ತರಿಸಿ ಅವರು 'ಗಂಗಾಂಬುವಂ ಮುಟ್ಟದಿರಬಹುದೆ?' ಎಂದು ಪ್ರಶ್ನಿಸುತ್ತಾರೆ. ಇದಕ್ಕೆ ಜ್ವಾಲೆ ಕೊಡುವ ಉತ್ತರ:

'ಜಾಹ್ನವಿಗೆ ದೋಷವೊಂದುಂಟು; ನಿಮಗೊರೆವುದಿಲ್ಲಂ; ಅವಳು ಎನಗೆ ಮೈದೋರಲು ಉಸಿರುವೆಂ.'

ಈ ಉತ್ತರದಲ್ಲಿ ವಾಚಕನ ಉತ್ಸುಕತೆಯನ್ನು ಕೆರಳಿಸುವ ಗುಣವಿದೆ. ನಾವಿಕ-ಜ್ವಾಲೆಯರ ಸಂಭಾಷಣೆ ಲಕ್ಷ್ಮೀಶನ ಕಥನಕಲಾಭಿಜ್ಞತೆಯ ದ್ಯೋತಕವಾಗಿದೆ. ಸಂಸ್ಕೃತ ಜೈಮಿನಿ ಭಾರತದಲ್ಲಿ ಈ ಸಂದರ್ಭ ಹೀಗಿದೆ: ನದಿಯನ್ನು ದಾಟಿದ ಜ್ವಾಲೆ,

'ನನ್ನ ಎಡಗಾಲಿಗೆ ಈ ಗಂಗಾಜಲದ ಸ್ಪರ್ಶವಾಗಿದೆ; ಈ ಸ್ಪರ್ಶದಿಂದ
ನಾನೊಂದು ಮಹಾಪಾಪಕ್ಕೆಗುರಿಯಾದೆ.'

ಎನ್ನುತ್ತಾಳೆ. ಇದನ್ನು ಕೇಳಿದ ಸಹಪ್ರವಾಸಿಗಳು ಸಿಟ್ಟಿಗೆದ್ದು ಅವಳನ್ನು ಬಯ್ಯುತ್ತಾರೆ. ಅಷ್ಟರಲ್ಲಿ ಗಂಗೆ ಪ್ರತ್ಯಕ್ಷವಾಗುತ್ತಾಳೆ (೧೫. ೨೫-೩೧). ಸಹಪ್ರವಾಸಿಗಳಿಗೆ ಕೇಳಿಸುವಂತೆ ಗಂಗೆಯನ್ನು ಟೀಕಿಸಿದ್ದು, ಅವರು ಅವಳನ್ನು ಬಯ್ದುದ್ದು ಅಷ್ಟು ಸಮಂಜಸವೆಂದು ತೋರುವುದಿಲ್ಲ. ಇಲ್ಲಿ ಲಕ್ಷ್ಮೀಶನು ಮಾಡಿಕೊಂಡ ಬದಲಾವಣೆಯಲ್ಲಿ, ನಾವಿಕರೊಡನಾದ ಜ್ವಾಲೆಯ ಸಂಭಾಷಣೆಯಲ್ಲಿ, ಅವಳು ಗಂಗೆಯನ್ನು ಕೆರಳಿಸುವ ಉದ್ದೇಶದಿಂದಲೇ ಮಾತಿಗೆ ತೊಡಗುತ್ತಾಳೆಂಬುದು ವ್ಯಕ್ತವಾಗುತ್ತದೆ. ಅವಳು ಗಂಗಾಮಾಹಾತ್ಮ್ಯವನ್ನರಿಯದ ಅಜ್ಞಾನಿಯಲ್ಲ; ಗಂಗೆಯಿಂದ ತನ್ನ ಛಲವನ್ನು ಸಾಧಿಸಬೇಕೆಂದೇ ಆಕೆಯ ದೋಷವನ್ನೆತ್ತಿ ಆಡುತ್ತಾಳೆ. ಅದು ಸಾಧಿಸುತ್ತದೆ. ಗಂಗೆ ಮೈದೋರಿ, ತನ್ನ ಮಗ ಭೀಷ್ಮನನ್ನು ಅರ್ಜುನನು ಕೊಂದನೆಂಬ ಸಮಾಚಾರವನ್ನು ತಿಳಿದು ದುಃಖದಿಂದ 'ತನ್ನ ಮಗನಿಂದ ಅರ್ಜುನನ ಮರಣವಾಗಲಿ' ಎಂದು ಶಪಿಸುತ್ತಾಳೆ.[1] ಇಷ್ಟರಿಂದಲೇ

[1] ಭೀಷ್ಮನ ಮರಣವಾಗಿ ಸಾಕಷ್ಟು ದಿನಗಳಾದವು. ಗಂಗೆಗದು ಇನ್ನೂ ತಿಳಿದಿದ್ದಿಲ್ಲವೇ ಎಂದು ಸಂದೇಹ ತಲೆದೋರುತ್ತದೆ. ಇದಕ್ಕೆ ಪರಿಹಾರ ಮಹಾಭಾರತದಲ್ಲಿದೆ: ಅನುಶಾಸನ ಪರ್ವದ ೧೬೯ನೆಯ ಅಧ್ಯಾಯದಲ್ಲಿ ಗಂಗೆ ಸಿಟ್ಟಿಗೆದ್ದು ಮಗನ ಸಾವಿನ ಬಗ್ಗೆ ವಿಚಾರಿಸಲು ಕೃಷ್ಣನ ಕಡೆ ಬಂದಳೆಂಬ ಮಾತಿದೆ. ಅನುಶಾಸನ ಪರ್ವದಲ್ಲಿಯ ಈ ಸಂದರ್ಭವನ್ನು ಜೈ.ಭಾ.ಕಾರನು ಅಶ್ವಮೇಧಿಕ ಪರ್ವದ ಮೊದಲ ಕಥೆಯಾದ ನೀಲಧ್ವಜನ ಕಥಾನಕದಲ್ಲಿ ತಂದಿದ್ದಾನೆ. ಅನುಶಾಸನ ಪರ್ವದ ಮುಂದಿನದೇ ಅಶ್ವಮೇಧಿಕ ಪರ್ವ. ಭೀಷ್ಮರ ಮರಣಕ್ಕೂ ಜ್ವಾಲೆ ಗಂಗೆಯರ ಸಿಟ್ಟಿಗೂ ಬಹಳ ಅಂತರವೇನಿಲ್ಲ.

ಜ್ವಾಲೆಗೆ ಮನಸ್ಸಮಾಧಾನವಿಲ್ಲ. ಶಾಪಸಾಫಲ್ಯಕ್ಕೆ ಸಹಾಯಕಳು ತಾನೇ ಆಗಬೇಕೆಂದು ಯೋಚಿಸಿ, ಅಗ್ನಿಪ್ರವೇಶದಿಂದ ಸತ್ತು ಬಾಣವಾಗಿ ಬಭ್ರುವಾಹನನ ಬತ್ತಳಿಕೆಯಲ್ಲಿ ಸೇರುತ್ತಾಳೆ! ಈ ರೀತಿ ಹೆಣ್ಣಿನಲ್ಲಿ ಛಲವೆಂಬುದು ಎಷ್ಟು ದೃಢಮೂಲವಾಗಿರುವುದೆಂಬುದನ್ನು ಜ್ವಾಲೆಯ ಪಾತ್ರದಲ್ಲಿ ಕವಿ ಎತ್ತಿತೋರಿಸಿದ್ದಾನೆ.

ಇಂತಹ ಈ ಜ್ವಾಲೆಗೆ ಹುಟ್ಟಿದ ಮಗಳು ಸ್ವಾಹಾ! ಅವಳು ಸಾಮಾನ್ಯರನ್ನು ವರಿಸುವವಳೇ? 'ದಿಕ್ಪಾಲಕರ ನಡುವೆ ಕುಳ್ಳಿರ್ದು ರಾಜಿಪ ವೀತಿಹೋತ್ರ'ನನ್ನೇ ತಾನು ವರಿಸುವುದಾಗಿ ಪಣತೊಟ್ಟು ತಪಸ್ಸು ಮಾಡುತ್ತಾಳೆ. ಅಗ್ನಿಯನ್ನು ಮೆಚ್ಚಿಸಿ ಮದುವೆಯಾಗುತ್ತಾಳೆ.

ಹೀಗೆಯೇ, ತಾಪದಾಯಕ ಸ್ವಭಾವದ ಇನ್ನೊಂದು ಸ್ವರೂಪದ ಪ್ರತೀಕವಾಗಿದ್ದಾಳೆ ಚಂಡಿ. ಮಾತು ಮಾತಿಗೂ ಗಂಡನಿಗೆ ವಿರೋಧಿಯಾಗಿ ವರ್ತಿಸಿ ಅವನಿಗೆ ಸಾಕು ಸಾಕು ಎನಿಸಿಬಿಡುತ್ತಾಳೆ. ಕೊನೆಗೆ ಅವನ ಶಾಪದಿಂದ ಕಲ್ಲಾಗುತ್ತಾಳೆ.

ಜ್ವಾಲೆ ಮತ್ತು ಚಂಡಿ ಪಾತ್ರಗಳಿಗೆ ವಿಸದೃಶ (contrast) ಪಾತ್ರಗಳೆಂದರೆ ಪಾರ್ವತಿ ಮತ್ತು ಸೀತೆ. ಪತಿಯನ್ನು ಧಿಕ್ಕರಿಸಿ ನಡೆವ ಜ್ವಾಲೆ–ಚಂಡಿಯರು, ಪತಿಯೇ ಪರದೈವ ಎಂದು ನಡೆವ ಸೀತೆ, ಪತಿಯನ್ನು ಅಗಲುವುದೇ ಸಾಧ್ಯವಿಲ್ಲದ ನಟೇಶ್ವರನ ಅರ್ಧಾಂಗಿ–ಶಕ್ತಿ–ಪಾರ್ವತಿ, ಈ ಪಾತ್ರಗಳು ಜೈಮಿನಿ ಭಾರತದಲ್ಲಿ ಸ್ತ್ರೀಪಾತ್ರ ವೈವಿಧ್ಯದ ನಿದರ್ಶನಗಳಾಗಿವೆ.

ಪ್ರವೀರನ ಪತ್ನಿಯಾದ ಮದನಮಂಜರಿ 'ಮೀನಕೇತನ ಮಹೀಪಾಲನರಮನೆಯ ಸೊಕ್ಕಾನೆಗಳ ತಂಡ'ದಲ್ಲಿ ಒಬ್ಬಳು. ಯೌವನಾಶ್ವನ ಪತ್ನಿ ಪ್ರಭಾವತಿ ಪತಿಯನ್ನು ಪ್ರತಿಕ್ಷಣಕ್ಕೂ ಅನುಸರಿಸುವ ಸಾಧ್ವೀಮಣಿ. ಯೌವನಾಶ್ವನ ತಾಯಿ ವ್ಯವಹಾರ ದೃಷ್ಟಿಯುಳ್ಳವಳು; ಪ್ರಾಪಂಚಿಕಳು. ಈ ಪಾತ್ರಗಳ ಸಂಪೂರ್ಣ ಚಿತ್ರಗಳನ್ನು ಕೊಡದೆ ಅವುಗಳ ವಿಶಿಷ್ಟಸ್ವಭಾವ ಗುಣಧರ್ಮಗಳನ್ನು ಲಕ್ಷ್ಮೀಶನು ಚುಟಕ ಚಿತ್ರವಾಗಿ ಕೊಡುತ್ತಾನೆ. ಆದರೆ ಇವು ತಮಗಿರುವ ಸಂಕುಚಿತ ಸ್ಥಾನದಲ್ಲಿ ತಮ್ಮ ಕಾರ್ಯವನ್ನು ಚೆನ್ನಾಗಿ ನಿರ್ವಹಿಸುತ್ತವೆ.

ಮಳೆ ಮಿಂಚು ನಿಂತು ಶುಭ್ರಾಕಾಶದ ದರ್ಶನವಾದಂತೆ, ಕತ್ತಲೆಯನ್ನು ದಾಟಿ ಬೆಳಕನ್ನು ಕಂಡಂತೆ, ದುಃಖವನ್ನುಂಡು ಸುಖವನ್ನು ಸವಿದಂತೆ ನಮಗೆ ಚಂಪಕನಗರಿಯ ದರ್ಶನವಾಗುತ್ತದೆ. ಇಲ್ಲಿಯ ಪ್ರತಿಯೊಂದು ಸ್ತ್ರೀಪಾತ್ರವೂ ಶ್ರೀಕೃಷ್ಣದರ್ಶನಪ್ರಿಯ. ಆದರೆ ಈಗ ಅರ್ಜುನನೊಡನೆ ಕೃಷ್ಣನಿಲ್ಲ. ಅವನನ್ನು ಬರಿಸುವುದಕ್ಕಾಗಿ ತನ್ನ ಪ್ರಾಣವನ್ನು ಬಲಿಗೊಡಲು ಸುಧನ್ವನು ಸಿದ್ಧನಾಗಿದ್ದಾನೆ. ಆದರೂ ಚಿಂತೆಯಿಲ್ಲ, ಶ್ರೀಕೃಷ್ಣ ದರ್ಶನವೇ ಪರಮ ಭಾಗ್ಯ ಎಂದು ತಿಳಿದು 'ಇದು ಭಾಗ್ಯ ಇದು ಭಾಗ್ಯ ಇದು ಭಾಗ್ಯವಯ್ಯಾ' ಎಂದು ನಲಿದಾಡುತ್ತಿರುವಂತಿದೆ ಇಲ್ಲಿಯ ಸ್ತ್ರೀಪಾತ್ರಸೃಷ್ಟಿ. ಸುಧನ್ವನನ್ನು ಬೀಳ್ಕೊಡುವಾಗ ಅವುಗಳ ಶೀಲ–ವ್ಯಕ್ತಿತ್ವ–ಚೆನ್ನಾಗಿ ಒಡಮೂಡಿ ನಿಂತಿದೆ.

'ಅವನಂ (ಕೃಷ್ಣನಂ) ಕಂಡಬಳಿಕ ಹಿಮ್ಮೆಟ್ಟದಿರ್, ಪೋಗು' ಎಂದು ಅವನ ತಾಯಿ ಆಶೀರ್ವದಿಸುತ್ತಾಳೆ.

'ಶೌರಿಗೆ ವಿಮುಖನಾಗಿ ನೀಂ ಬಂದೆಯಾದೊಡೆ, ಮಾವನ ಮನೆಯೊಳ್ ಆಂ ತಲೆಯೆತ್ತಿ ನಡೆವೆನೆಂತು? ಅದರಿಂದ ವನಜಾಕ್ಷನಂ ಮೆಚ್ಚಿಸು ಆಹವದೊಳ್' ಎಂದು ಅವನ ಸಹೋದರಿ ಹಾರೈಸುತ್ತಾಳೆ.

ಈ ಎರಡೂ ಮಾತಿಗೆ ಶಿಖರಪ್ರಾಯವಾಗಿ ಸುಧನ್ವನ ಪತ್ನಿ ಪ್ರಭಾವತಿ 'ಚಕ್ರಿಗಭಿಮುಖವಾದ ಬಳಿಕ ಅಲ್ಲಿ ಮುಕ್ತಿಯಲ್ಲದೆ ಬೇರೆ ಜಯಮುಂಟೆ?' ಎಂದು ಹೇಳಿ–ತನಗೆ ಸಂತಾನವಿಲ್ಲೆಂಬ ಚಿಂತೆಯಿಂದ, ಅದರ ಧರ್ಮಾಪೇಕ್ಷೆಯಿಂದ ಕೆಲಕಾಲ ತಡೆದರೂ–ಯುದ್ಧಕ್ಕೆ ಸಂತೋಷದಿಂದ ಬೀಳ್ಕೊಡುತ್ತಾಳೆ.

ಈ ಮೂರು ಪಾತ್ರಗಳಡೂ ಕೃಷ್ಣಭಕ್ತಿಭಾವದ ಹಿನ್ನೆಲೆಯಲ್ಲಿ ವೀರೋಚಿತ ಶೀಲವು ವ್ಯಕ್ತವಾಗಿದೆ. ಸುಧನ್ವನ ವೀರೋಚಿತ ಕೃಷ್ಣಸಾಯುಜ್ಯವನ್ನು ಬೆಂಬಲಿಸುವ ಪತ್ನಿ, ಸೋದರಿ, ಮಾತೆ ಇದ್ದ ಬಳಿಕ ಅವನಿಗೆ ಅದಲ್ಲದೆ ಇನ್ನೇನು ದೊರಕೀತು? ಜ್ವಾಲೆ ಸ್ವಾಹಾ ಮತ್ತು ಚಂಡಿ ಇವರ ಆದರ್ಶಕ್ಕೂ ಸುಧನ್ವನ ತಾಯಿ, ಸಹೋದರಿ ಮತ್ತು ಪತ್ನಿಯರ ಆದರ್ಶಕ್ಕೂ ಅಜಗಜಾಂತರವಿದೆ. ಸುಧನ್ವನ ಮನೆಮಂದಿಯೆಲ್ಲ ಉನ್ನತ ಆದರ್ಶದ ಅನುಯಾಯಿಗಳೆನ್ನಲಡ್ಡಿಯಿಲ್ಲ.

ಇನ್ನು ಮುಂದೆ ಬರುವ ಪಾತ್ರಗಳು ವಿಚಿತ್ರ. ಪ್ರಮೀಳಾ ರಾಜ್ಯದ ಸ್ತ್ರೀಯರು, ಭೀಷಣ ರಾಜ್ಯದ ಯೋಜನಸ್ತನಿ ಮೊದಲಾದ ರಕ್ಕಸಿಯರು ವೀರರಾಗಿದ್ದಾರೆ. ಪ್ರಮೀಳೆಯ ಸ್ತ್ರೀಪರಿವಾರ ಸಂಭೋಗಸುಖವನ್ನಿತ್ತು ಪುರುಷರನ್ನು ಕೊಲ್ಲುವ ವಿಷ ಕನ್ನೆಯರು. ವಿಷಕನ್ಯಾಗ್ರಮಣಿಯಾದ ಪ್ರಮೀಳೆಯೊಡನೆ ಅರ್ಜುನನ ವಿವಾಹವಾಗುತ್ತದೆ. ಆದರೆ ಅದು ಯಜ್ಞ ಮುಗಿದ ಮೇಲೆ, ಶ್ರೀಕೃಷ್ಣನು ಅವಳ ವಿಷವಧುತ್ವವನ್ನು ಅಪಹರಿಸಿದ ಮೇಲೆ. ಈ ಎಲ್ಲ ಸ್ತ್ರೀಪಾತ್ರಗಳ ಶೀಲ ಆಚಾರ ವಿಚಾರಗಳ ಚಿತ್ರಣ ಸಂಸ್ಕೃತ ಮತ್ತು ಕನ್ನಡ ಜೈ.ಭಾ. ಎರಡರಲ್ಲಿಯೂ ಒಂದೇ ಆಗಿದೆ. ಈ ಪಾತ್ರಗಳು ಆಡುವ ಮಾತುಗಳಲ್ಲಿ ಮಾತ್ರ ಸ್ವಲ್ಪ ಹೆಚ್ಚುಕಡಿಮೆ ಇದೆ.

ಕನ್ನಡ ಜೈಮಿನಿ ಭಾರತದ ಸಂಧಿ ೧೭ರಲ್ಲಿ ಮತ್ತು ೨೨ ರಿಂದ ೨೪ ರಲ್ಲಿ ಚಿತ್ರಾಂಗದೆ ಉಲೂಪಿಯರ ಪಾತ್ರಗಳು ಪ್ರಮುಖವಾಗಿ ಬರುತ್ತವೆ. ಸಂ. ಜೈ. ಭಾ. ದಲ್ಲಿ ಚಿತ್ರಾಂಗದೆ ಮಣಿಪುರದಲ್ಲಿ ಇಲ್ಲ, ಹಸ್ತಿನಾವತಿಯಲ್ಲಿಯೆ ಇದ್ದಾಳೆ. ವೃಷಕೇತು–ಅರ್ಜುನರು ರಣದಲ್ಲಿ ಮಡಿದಮೇಲೆ ಅವಳು ಮಣಿಪುರಕ್ಕೆ ಬರುತ್ತಾಳೆ. ಅರ್ಜುನನ ಆಗಮನದ ಸುಖವನ್ನು ಮತ್ತು ತಂದೆ–ಮಕ್ಕಳ ವಿರೋಧದ ದುಃಖವನ್ನು ಏಕಕಾಲಕ್ಕೆ ಅನುಭವಿಸುವ ಚಿತ್ರಾಂಗದೆಯ ಚಿತ್ರ ಸಂ. ಜೈ. ಭಾರತದಲ್ಲಿ ಮಾಯವಾಗಿದೆ. ಅಲ್ಲದೆ ಚಿತ್ರಾಂಗದೆ ತನ್ನೊಡನೆ ಇದ್ದೂ ಅರ್ಜುನನಿಗೆ ಮಣಿಪುರದ ಬಭ್ರುವಾಹನ ಅವಳ ಮಗ, ತನ್ನ ಮಗ ಎಂದು ತಿಳಿಯದೆಂಬ ವಿಸಂಗತಿ ಅಲ್ಲಿದೆ. ಲಕ್ಷ್ಮೀಶನು ಈ ವಿಸಂಗತಿಯನ್ನು ಹೋಗಲಾಡಿಸಿ ಕತೆಗೆ ಸ್ವಾಭಾವಿಕತೆಯನ್ನೂ ಚಿತ್ರಾಂಗದೆಯ ಪಾತ್ರಕ್ಕೆ ವಿಶಿಷ್ಟ ಕಳೆ

ಯನ್ನೂ ತಂದಿದ್ದಾನೆ. ಉಲೂಪಿಯ ಪಾತ್ರ ಅವಳಿಗೆ ಸಹಾಯಕಪಾತ್ರ. ಅರ್ಜುನ ವೃಷಕೇತುಗಳ ಪುನರ್ಜೀವನಕ್ಕೆ ಸಂಜೀವಕಮಣಿಯ ಉಪಾಯವನ್ನು ಸೂಚಿಸಿದವಳು, ಅದಕ್ಕಾಗಿ ಶೇಷನೆಡೆಗೆ ದೂತನನ್ನು ಕಳಿಸಿ ಪ್ರಯತ್ನಿಸಿದವಳು ಉಲೂಪಿ. ಈ ಎರಡು ಸ್ತ್ರೀಪಾತ್ರಗಳ ಶೋಕವು ಇಲ್ಲಿ ಪ್ರಧಾನವಾಗಿದೆ. ಆದರೆ, ಈ ಪಾತ್ರಗಳು ಓದುಗನ ಮೇಲೆ ವಿಶೇಷ ಪರಿಣಾಮವನ್ನು ಮಾಡುವುದಿಲ್ಲ. ಲಕ್ಷ್ಮೀಶನ ಪಾತ್ರಚಿತ್ರಣದ ಕೌಶಲವನ್ನು ಇಲ್ಲಿ ಕಾಣಬೇಕು—ಕುಂತಿಯ ಪಾತ್ರದಲ್ಲಿ. ಸಂ. ಜೈ. ಭಾ. ವು 'ಅನಂತರ ಕುಂತಿಯೊಡಗೂಡಿ ಎಲ್ಲರೂ ದೊಡ್ಡದನಿಯಿಂದ ಅಳಲಾರಂಭಿಸಿದರು' ಎಂದು ಹೇಳಿದರೆ, ಕವಿ ಲಕ್ಷ್ಮೀಶನು ಕುಂತಿಯನ್ನು ಮಾತನಾಡಿಸುತ್ತಾನೆ:

'ಕಂಡೆಲೈ ಕೃಷ್ಣ, ಫಲುಗುಣನ ಇರವಂ? ಇನ್ನು ಭೂ
ಮಂಡಲದೊಳ್ ಎನಗೆ ಸುತರಿರ್ಪರೆ? ನೀನು ಆರ
ಬಂಡಿಯಂ ಹೊಡೆದಪ್ಪೆ? ತ್ರೈಲೋಕ್ಯವೀರನೆಂದು ಎನಿಸಿಕೊಳ್ಳುವನು ಆದಾರು?
ಈತಂ ಅಂತಿರಲಿ, ಇತ್ತ ನೋಡು, ಎಲೆ ಮುಕುಂದ, ವೃಷ
ಕೇತು ಮಡಿದಿರ್ದಪಂ—ಸೈರಿಸುವೆನೆಂತು! ಇವನ
ತಾತನಂ ಕಂಡು ಹಿಗ್ಗುವೆಂ, ಆರುಂ ಅಱಿಯದಂತೆ ಆತ್ಮಜಸ್ನೇಹದಿಂದ!
ಆತನಂ ಕೊಂದಂ ಈ ಪಾರ್ಥನೆಂದು! ಆ ನೋವಂ
ಈ ತರಳನೇಳ್ಗೆಯಿಂ ಮಱೆದಿರ್ದೆಂ ಇನ್ನೆಗಂ—
ಬೀತುದು ಎನಗಿಂದು ಸಂತತಿ ಕರ್ಣಜನೊಳ್!' (೨೪.೫೯–೬೦)

ಎಂದು ಕುಂತಿ ಅಳಲ್ದು ಮರುಗುತ್ತಾಳೆ. ಇಲ್ಲಿ ಹೆಣ್ಣಿನ ತಾಯ್ಗರುಳಿನ ಅರಿವು ವಾಚಕರಿಗೆ ಆಗುತ್ತದೆ.

ಸಂಧಿ ೧೮ ರಿಂದ ೨೧ರವರೆಗೆ ಬರುವ ಸೀತೆಯ ಪಾತ್ರ, ಕನ್ನಡ ಜೈಮಿನಿ ಭಾರತದ ಸ್ತ್ರೀಪಾತ್ರಗಳಲ್ಲಿ ರತ್ನಪ್ರಾಯವಾಗಿದೆ. ಸೀತಾ–ರಾಮ ವಿಯೋಗವು ಚಿತ್ರಾಂಗದಾ–ಅರ್ಜುನರ ವಿಯೋಗಕ್ಕಿಂತ ಪರಿಣಾಮಕಾರಿಯಾಗಿದೆ. ಚಿತ್ರಾಂಗದೆ ಅರ್ಜುನರ ಭೆಟ್ಟಿಯೆ ಒಂದು ಯೋಗವಾಗಿದೆ. ಸೀತೆ ಒಡ್ಡಿದ ಪಣವನ್ನು ಗೆದ್ದಾತ ಪತಿ ರಾಮ; ಪತಿಯ ಸುಖದುಃಖಗಳಲ್ಲಿ ಸಹಭಾಗಿಯಾಗಿದ್ದ ಸತಿ ಅವಳು, ಸಹಧರ್ಮಿಣಿ; ಅಗ್ನಿಪರೀಕ್ಷೆಯನ್ನು ಗೆದ್ದ ಪವಿತ್ರಜೀವಿ; ಹೀಗಿದ್ದೂ, ಪ್ರಜಾರಂಜನೆಯ ಅಭಿಲಾಷೆಯಿಂದ, ಹುಲುಮನುಜನಾಡಿದ ಮಾತಿಗಾಗಿ ರಾಮನು ಅವಳನ್ನು ತ್ಯಜಿಸುವುದು ಯೋಗ್ಯವೆ? ಅದು ಯೋಗ್ಯವಿರಲಿ, ಅಯೋಗ್ಯವಿರಲಿ, ಸೀತೆ ಅದನ್ನು ಒಪ್ಪಿಕೊಂಡು, ರಾಮಸ್ಮರಣೆಯನ್ನು ಬಿಡದೆ, ಪತಿವ್ರತಾಧರ್ಮದ ತಿರುಳನ್ನು ತನ್ನ ಜೀವನದಿಂದ ಉದಾಹರಿಸುತ್ತಾಳೆ. ಪ್ರಜೆಗಳಿಗೆ ಸುಖೋಪಭೋಗಗಳ ಆಗರವಾದ ರಾಮರಾಜ್ಯದಲ್ಲಿ ಸೀತೆಗೇ ಸುಖವಿಲ್ಲ. ಗರ್ಭವತಿಯಾದ ಸೀತೆಗೆ ಏಕಾಕಿ ಅರಣ್ಯವಾಸ. ರಾಮನು ಜೊತೆಯಲ್ಲಿದ್ದರೆ ಅವಳಿಗೆ ವನವಾಸವೂ ಅರಮನೆಯ ವಾಸವಾಗುತ್ತಿತ್ತು, ಹಿಂದಿನಂತೆ. ಆದರೆ ಏಕಾಕಿಯಾದ ಇವಳು ಈಗ ಪರಿತ್ಯಕ್ತೆ! ಅರಣ್ಯದಲ್ಲಿ ತೊಳಲಾಡಿ ಕೊನೆಗೆ ವಾಲ್ಮೀಕಿಗಳ ಆಶ್ರಯವನ್ನು ಪಡೆಯುತ್ತಾಳೆ. ಈ ಸಂದರ್ಭದಲ್ಲಿ ವಾಲ್ಮೀಕಿ ಋಷಿ

ಅವಳನ್ನು ಮಾತನಾಡಿಸುವ ಬಗೆ, ಸೀತೆಯ ಮೇಲಾಗುವ ಆದರ ಪರಿಣಾಮ ಸಂಸ್ಕೃತ ಜೈಮಿನಿ ಭಾರತದಲ್ಲಿ ಇಲ್ಲ. ಲಕ್ಷ್ಮೀಶನ ವಾಲ್ಮೀಕಿ, 'ನೀನಾವಳೌ? ಕಂಡ ಕುರುಪಾಗಿರ್ಪುದು' ಎಂದು ಸೀತೆಯನ್ನು ಮಾತನಾಡಿಸಿ, 'ಭೀರು, ಹೇಳೌ, ಹೆದರಬೇಡ, ವಾಲ್ಮೀಕಿ ನಾಂ, ಭೂರಿ ಶೋಕಾರ್ತರಾಗಿರ್ದರಂ ಕಂಡು ಸುಮ್ಮನೆ ಪೋಪನಲ್ಲ' ಎಂದು ಆಶ್ವಾಸನಪೂರ್ವಕವಾಗಿ ಕೇಳುತ್ತಾರೆ. ಈ ಮಾತುಗಳನ್ನು ಕೇಳಿದೊಡನೆ, 'ಹರುಷಂ ಒತ್ತರಿಸಿದುದು, ಶೋಕಂ ಇಮ್ಮಡಿಸಿದುದು, ಬೆರಸಿದುದು ಲಜ್ಜೆ' ಸೀತೆಗೆ. ಅವಳ ಅಂತರಂಗದ ಈ ಚಿತ್ರಣದಲ್ಲಿ ಭಾವತ್ರಯದ ತ್ರಿವೇಣೀಸಂಗಮದ ಮಸಕವಿದೆ. ಹೀಗೆ ಅಂತಃಕರಣದ ಭಾವಗಳನ್ನು ಅಭಿವ್ಯಕ್ತಿಸುವುದು ಲಕ್ಷ್ಮೀಶನ ಪಾತ್ರಚಿತ್ರಣದ ಶೈಲಿಯಾಗಿದೆ. ಇವನ ಸೀತೆ ಒಂದು ಅಪೂರ್ವ ಪಾತ್ರ, ತುಂಬಿಬಂದ ಪಾತ್ರ.

'ಜನಕರಾಯನ ಮಗಳು ವನಕೆ ತೊಟ್ಟಿಲ ಕಟ್ಟಿ' ವಾಲ್ಮೀಕಿಯ ಆಶ್ರಮದಲ್ಲಿಯೇ ಲವಕುಶರಿಗೆ ಜನ್ಮವೀಯುತ್ತಾಳೆ. ಸಂತಾನ ಸುಖದ ಮೂಲಕ, ಪತಿಯ ಸಂತಾನಾಪೇಕ್ಷೆಯನ್ನು ಪೂರಯಿಸಿದ ಮನಃಸ್ವಾಸ್ಥ್ಯದ ಮೂಲಕ, ವಾಲ್ಮೀಕಿಯ ಪ್ರೀತಿ ಆದರಗಳ ಮೂಲಕ ಆಶ್ರಮಜೀವನವನ್ನು ಹಾಯಾಗಿ ಸಾಗಿಸುತ್ತಾಳೆ. ಅವಳಿಗೆ ಎಂದೂ ರಾಮನನ್ನು ಶಪಿಸುವ ಉದ್ರೇಕವಿಲ್ಲ. ಅವನು ತನ್ನನ್ನು ಬಿಟ್ಟದ್ದು ತಪ್ಪು ಎಂದೂ ಎನ್ನುವುದಿಲ್ಲ. ರಾಮನ ನಾಮಸ್ಮರಣೆಯೆ ತನ್ನ ಕರ್ತವ್ಯ, ಆತನ ವಿಯೋಗ ತನ್ನ ಪೂರ್ವಕರ್ಮದ ಫಲ ಎಂಬುದೇ ಅವಳ ಮನದೆಣಿಕೆ. ಹೀಗೆ ಸೀತೆ ಸಹನಶೀಲತೆಯುಳ್ಳ ಪತಿವ್ರತೆಯಾಗಿದ್ದಾಳೆ.

ಸಂಧಿ ೨೫–೨೬ರಲ್ಲಿ ಮಯೂರಧ್ವಜನ ಸತಿ ಕುಮುದ್ವತಿಯ ಪಾತ್ರವಿದೆ. ಚಿತ್ರಾಂಗದೆಯ ಪತಿ ಶಾಪದ ದೆಸೆಯಿಂದ ಮಡಿದನು, ಪತಿಯ ಆದರ್ಶ ಜೀವನದ ದೆಸೆಯಿಂದ ಸೀತೆ ಮಹಾದುಃಖವನ್ನು ಅನುಭವಿಸಿದಳು; ಆದರೆ ಕುಮುದ್ವತಿ ಕೊಟ್ಟ ಸತ್ತ್ವ ಪರೀಕ್ಷೆ ಇನ್ನೂ ಹೆಚ್ಚಿನದು. ಪತಿಯ ವಾಗ್ದಾನವನ್ನು ಪೂರೈಸುವುದಕ್ಕಾಗಿ, ಮಗನ ಸಹಾಯದಿಂದ ಪತಿಯ ಶರೀರವನ್ನು ಇಬ್ಭಾಗಮಾಡಿಕೊಡಬೇಕಾಗಿ ಬಂದಿದೆ ಅವಳು. ನೋಡುವವರಿಗೆ ಕಣ್ಮುಚ್ಚುವಂತಹ ರೌದ್ರದೃಶ್ಯವೇ ಆಗಿದ್ದರೂ ಕುಮುದ್ವತಿ ನಿಷ್ಠೆಯಿಂದ ಅಳುಕಿಲ್ಲದೆ ಆ ಕಾರ್ಯವನ್ನು ನಿರ್ವಹಿಸುತ್ತಾಳೆ.

ನೀಲಧ್ವಜನ ಮಗಳು ಸ್ವಾಹೆ, ವೀರವರ್ಮನ ಮಗಳು ಮಾಲಿನಿ–ಎರಡೂ ಸಮಶೀಲ ಪಾತ್ರಗಳಾಗಿವೆ; ಒಬ್ಬಳು ಅಗ್ನಿಯನ್ನು ವರಿಸಲಿಚ್ಛಿಸಿದರೆ ಒಬ್ಬಳು ಯಮನನ್ನು ವರಿಸಲು ಇಚ್ಛಿಸುತ್ತಾಳೆ. ಇಬ್ಬರೂ ವಿಪರೀತ ಆದರ್ಶದ ಯುವತಿಯರು. ಅಗ್ನಿ ಮತ್ತು ಯಮರು ಅಜೇಯರು ಎಂಬ ಭಾವನೆಯೇ ಇವರಿಬ್ಬರ ದುಸ್ಸಾಧ್ಯ ಮನೀಷೆಯ ಮೂಲ.

ಚಂದ್ರಹಾಸನ ಕಥಾನಕದಲ್ಲಿ ಕೇರಳದೇಶದವನಿಪನ ರಾಣಿಯ ದಾದಿ, ಕುಳಿಂದಕನ ಹೆಂಡತಿ ಮೇಧಾವಿನಿ, ದುಷ್ಟಬುದ್ಧಿಯ ಮಗಳು ವಿಷಯೆ, ಕುಂತಳಾಧೀಶ್ವರನ ಮಗಳು ಮಾಲಿನಿ—ಈ ನಾಲ್ಕು ಸ್ತ್ರೀ ಪಾತ್ರಗಳ ದರ್ಶನ ನಮಗಾಗುತ್ತದೆ. ಸುಧನ್ವನ

ಮಡದಿ ಪ್ರಭಾವತಿಯ ಸಂತಾನಾಪೇಕ್ಷೆ ಫಲಿಸಿತೋ ಇಲ್ಲವೊ ತಿಳಿಯದು; ಸೀತೆಗೆ ಸಂತಾನ ಪ್ರಾಪ್ತಿಯಾಯಿತು—ದಃಖದಲ್ಲಿ ಸಮಾಧಾನವನ್ನು ತಂದಿತು. ಕೇರಳದ ರಾಣಿ ಹೆತ್ತ ಸಂತಾನದ ಸುಖವನ್ನು ಪಡೆಯಲಿಲ್ಲ; ಕುಳಿಂದಕನ ಮೇಧಾವಿನಿಗೆ ಸಂತಾನಧಾರಣೆಯ ಯೋಗವೇ ಇಲ್ಲ, ಆದರೆ ಸಂತಾನದ ಇಚ್ಛೆ ಪ್ರಬಲವಾಗಿದೆ ಅವಳಿಗೆ. ಇಂತಹಳಿಗೆ ಪರಪುಟ್ಟ ಚಂದ್ರಹಾಸನಂತಹ ಪುತ್ರರತ್ನಪ್ರಾಪ್ತಿಯಾದಾಗ 'ಕತ್ತಲೆಯ ಮನೆಗೆ ಮಣಿ ದೀಪವಾಗಿ' 'ಪುತ್ರವತಿಯಾದೆಂ, ಎನ್ನ ಪುಣ್ಯದ್ರುಮಂ ಫಲಿಸಿತು' ಎಂದು ಆಕೆಯ ಹೃದಯದಿಂದ ಉದ್ಗಾರ ಹೊರಹೊಮ್ಮುವುದು ಸ್ವಾಭಾವಿಕ. ಮೇಧಾವಿನಿಯು ಮಾತೃ ಹೃದಯದ ರೀತಿ ಒಂದು ದರ್ಶನವಾದರೆ, ದಾದಿಯ ಮಾತೃಹೃದಯದ ಬಗೆ ಇನ್ನೊಂದು. ಸಂಸ್ಕೃತ ಜೈಮಿನಿ ಭಾರತದ ದಾದಿ 'ಮೂರು ವರ್ಷ ಚಂದ್ರಹಾಸನನ್ನು ಸಾಕಿದಳು; ಬೀಸುವ ಕುಟ್ಟುವ ಕೆಲಸ ಮಾಡುತ್ತ ರಾಜನ ನೆನವರಿಕೆಯೊಂದಿಗೆ ಚಂದ್ರಹಾಸನ ಪೋಷಣೆಯನ್ನು ಮಾಡಿದಳು; ಕೆಲವು ದಿನಗಳಲ್ಲಿ ಮರಣ ಹೊಂದಿದಳು' (೫೦, ೨೫–೨೭). ಇಲ್ಲಿ ದಾದಿಗೆ ಚಂದ್ರಹಾಸನ ಬಗೆಗೆ ಇದ್ದ ವಾತ್ಸಲ್ಯವಾಗಲಿ, ಮರುಕ ವಾಗಲಿ ಅಭಿವ್ಯಕ್ತವಾಗಿಲ್ಲ. ಅವಳ ಅಂತರಂಗಕ್ಕೆ ಭಾವಕಳೆ ಇಲ್ಲ. ಅದನ್ನು ಕವಿ ಲಕ್ಷ್ಮೀಶನ ಕೈವಾಡದಲ್ಲಿಯೇ ನೋಡಬೇಕು (೨೮, ೧೬–೧೯). ಈ ವರ್ಣನೆಯಿಂದ ದಾದಿ ಒಬ್ಬ ಆದರ್ಶಮಾತೆ ಎಂಬುದು ನಮಗೆ ಮನದಟ್ಟುತ್ತದೆ.

ವಿಷಯೆ ಮತ್ತು ಚಂಪಕಮಾಲಿನಿ ಪುಣ್ಯವಶದಿಂದ ಚಂದ್ರಹಾಸನನ್ನು ಪತಿಯಾಗಿ ಪಡೆಯುತ್ತಾರೆ. ವಿಷಯೆಯ ವಿಷಯಾಸಕ್ತಿ, ವಿಪ್ರಲಂಭಶೃಂಗಾರ ಕವಿ ಲಕ್ಷ್ಮೀಶನು ವರ್ಣಿಸಿದಂತೆ ಸಂ.ಜೈ.ಭಾ.ದಲ್ಲಿ ಇಲ್ಲ.

ಕ.ಜೈ.ಭಾ.ದ ೩೩ನೆಯ ಸಂಧಿಯಲ್ಲಿ ಯಜ್ಞಕ್ಕಾಗಿ ಗಂಗಾಜಲವನ್ನು ತರುವ ಸನ್ನಿವೇಶದಲ್ಲಿ ಅನೇಕ ಸ್ತ್ರೀಪಾತ್ರಗಳ ಸರಪಳಿ ನಮ್ಮ ಕಣ್ಣಮುಂದೆ ಹಾಯುತ್ತದೆ. ಆದರೆ ಅವು ಮಹತ್ತ್ವದ ಪಾತ್ರಗಳಲ್ಲ. ಜಲವನ್ನು ತರುವುದಷ್ಟೇ ಕೆಲಸ ಈ ಕಾವ್ಯದಲ್ಲಿ. ಆದರೂ ಅವರ ಆಗಿನ ಸರಸ ಸಂಭಾಷಣೆಯಲ್ಲಿ ಸ್ತ್ರೀಸ್ವಭಾವದ ಸಹಜ ಚಿತ್ರಣವಿದೆ. ಶ್ರೀಕೃಷ್ಣನೊಂದಿಗೆ ರುಕ್ಮಿಣಿ ಜಲವನ್ನು ತರುತ್ತಾಳೆ. ಈ ಪ್ರಸಂಗವನ್ನು ನಾರದನು ಸತ್ಯಭಾಮೆ ಮತ್ತು ಜಾಂಬುವತಿಯರಿಗೆ ವಿವರಿಸಿ, ಅವರ ಪತಿಭಕ್ತಿಯನ್ನೂ ಶ್ರೀಕೃಷ್ಣನ ವಿಶ್ವವ್ಯಾಪೀ ಅಸ್ತಿತ್ವವನ್ನೂ ಅರಿತುಕೊಳ್ಳುತ್ತಾನೆ. ಇಲ್ಲಿ ಜಾಂಬುವತಿ ಆಡಿದ 'ನಾವೆಲ್ಲರುಂ ನಿಮಿಷ ಅರವಿಂದದಳನೇತ್ರನಂ ಅಗಲ್ದು ಜೀವಿಸಲರಿಯೆವು' ಎಂಬ ಮಾತು ಮನನೀಯವಾಗಿದೆ. ಸಂ. ಜೈ. ಭಾರತದ (೬೩.೮೨) 'ಯಾರನ್ನು ಅವನು ಬಿಡುವನೋ ಆ ಮಾನಿನಿ ಜೀವಂತ ಉಳಿಯುವುದು ಸಾಧ್ಯವಿಲ್ಲ' ಎಂಬ ಮಾತಿನಲ್ಲಿ ಲಕ್ಷ್ಮೀಶನ ಮಾತಿನಲ್ಲಿರುವ ಜೀವ, ಸತ್ತ್ವ ಇಲ್ಲ.

ಈ ಸ್ತ್ರೀಪಾತ್ರಗಳಲ್ಲದೆ ಪಾಮರಿಯರು, ಹೂವಾಡಗಿತ್ತಿಯರು, ವೇಶ್ಯೆಯರು, ಬೇಡತಿಯರು ಈ ಕಾವ್ಯದಲ್ಲಿ ಬರುತ್ತಾರೆ. ಸಂಸ್ಕೃತ ಜೈಮಿನಿ ಭಾರತದಲ್ಲಿ ಬೇಟೆಯ ವರ್ಣನೆ ಬಹಳ ಇಲ್ಲದ್ದರಿಂದ ಬೇಡತಿಯರಿಗೆ ಸ್ಥಾನವಿಲ್ಲ. **ಕ.ಜೈ.ಭಾ.ದ ವೇಶ್ಯಾ**

**ವಾಟಿಯಲ್ಲಿ ಪರ್ಯಾಯವಾಗಿ ಕೃಷ್ಣಭಕ್ತಿಯ ಮಾತೇ ನಡೆದಿರುತ್ತದೆ.** ಹೂವಾಡಗಿತ್ತಿಯರಿಗೆ, ಪಾಮರಿಯರಿಗೆ ಪುರವರ್ಣನೆಯಲ್ಲಿ ಸ್ಥಾನವಿದೆ.

ಸಂಸ್ಕೃತ ಮತ್ತು ಕನ್ನಡ ಜೈಮಿನಿ ಭಾರತಗಳಲ್ಲಿಯ ಈ ಸ್ತ್ರೀಪಾತ್ರ ಸೃಷ್ಟಿ ವಿಸದೃಶ ಪಾತ್ರಚಿತ್ರಣದ ರೀತಿಯಾಗಿದೆ (contrast characterisation). ಪಾತ್ರ ಗಳ ಶೀಲದಲ್ಲಿಯ ಈ ವಿಸದೃಶತೆಯನ್ನು ಸ್ಪಷ್ಟಪಡಿಸುವಲ್ಲಿ, ಅಂತರಂಗದ ಭಾವನೆ ಗಳನ್ನು ಪ್ರಕಟಪಡಿಸುವಲ್ಲಿ, ಮತ್ತು ಅದರ ಪರಿಣಾಮ-ಪ್ರತಿಕೃತಿಗಳನ್ನು ಚಿತ್ರಿಸುವಲ್ಲಿ ಕವಿ ಲಕ್ಷ್ಮೀಶನ ಹಿರಿಮೆ ಇದೆ.

'ಸತ್ಯಭಾಮೆಯ ರಸಿಕತನ, ಜ್ವಾಲೆಯ ಕ್ಷಾತ್ರತೇಜ, ಪ್ರಭಾವತಿಯ ಸರಳತೆ, ಪ್ರಮೀಳೆಯ ದರ್ಪ, ಸೀತಾದೇವಿಯ ವಿಶ್ವಸ್ನೇಹದ ದರ್ಪ, ಚಿತ್ರಾಂಗದೆಯ ಮುಗ್ಧತೆ' ಯನ್ನು ಸಿ. ಕೆ. ವೆಂಕಟರಾಮಯ್ಯನವರು ಹೊಗಳಿದ್ದಾರೆ.[1] 'ಜ್ವಾಲೆಯು ಕ್ಷಾತ್ರ ತೇಜದ ಪುಂಜವೆನಿಸಿ ಮೆರೆದ ವೀರ ವನಿತೆ. ಅನುರೂಪವಲ್ಲದ ಪತಿದೇವರನ್ನು ಸೇರಿ, ಎಷ್ಟು ಮಂದಿ ಭಾರತಮಣಿಯರು ಮಸಿಯ ಬಟ್ಟೆಯಲ್ಲಿ ಬಿಗಿದ ಮಾಣಿಕ್ಯಗಳಾದರೊ- ಆಗಿರುವರೊ—ಹೇಳಬಲ್ಲವರಾರು? ಪ್ರಮೀಳೆಯ ಪಾತ್ರಸೃಷ್ಟಿಯಿಂದ ಕವಿಯು ಸ್ತ್ರೀ ಜಾತಿಗೆ ಅನ್ಯಾಯ ಮಾಡಿದ್ದಾನೆ' ಮೊದಲಾಗಿ ಅವರು ಕೆಲವು ಪಾತ್ರಗಳನ್ನು ವಿಮರ್ಶಿಸಿದ್ದಾರೆ.

ಈ ಕಾವ್ಯಗಳಲ್ಲಿ ವಿವಿಧ ಪಾತ್ರಗಳ ಮೂಲಕ ಸ್ತ್ರೀಯ ವಿವಿಧ ಮುಖಗಳನ್ನು ತೋರಿಸುವುದೇ ಲಕ್ಷ್ಮೀಶನ ಉದ್ದೇಶವಾಗಿದೆ. ಒಂದೇ ಶೀಲದ ಕನ್ಯೆಯರು, ತರುಣಿ ಯರು, ವಿವಾಹಿತೆಯರು, ವಯೋವೃದ್ಧೆಯರು, ಇವರನ್ನು ಸಮೀಪಕ್ಕೆ ತಂದು ಅವರ ಲ್ಲಿಯ ಭೇದವನ್ನು, ವಿಸದೃಶತೆಯನ್ನು ಚಿತ್ರಿಸಿರುವುದನ್ನು ಇಲ್ಲಿ ಕಾಣುತ್ತೇವೆ. ಯಾರಿ ಗಾದರೂ ಅನ್ಯಾಯ ಮಾಡುವ ಉದ್ದೇಶವಿರಬೇಕು ಎಂದು ನಮಗೆ ತೋರುವುದಿಲ್ಲ. ಜ್ವಾಲೆ ಕ್ಷಾತ್ರತೇಜಸ್ಸಿನ ವೀರವನಿತೆಯಲ್ಲ; ಛಲದಿಂದ ಮರಣವನ್ನು ತಂದುಕೊಂಡ (ಪಾಪ!) ಸಾಮಾನ್ಯಸ್ತ್ರೀ. ಛಲ ಎಂಬ ಶೀಲಕ್ಕೆ ಜ್ವಾಲೆ ಮತ್ತು ಚಂಡಿ ಈ ಪಾತ್ರ ಗಳಲ್ಲಿ ವಿಸಾದೃಶ್ಯವನ್ನು ನೋಡಬೇಕು. ಒಬ್ಬಳಿಗೆ ಮರಣ, ಇನ್ನೊಬ್ಬಳಿಗೆ ಶಾಪ. ಇದೇ ಬಗೆಯಾಗಿ ಒಂದೊಂದು ಶೀಲಚಿತ್ರಣಕ್ಕೆ ಕವಿ ಹೇಗೆ ಭಿನ್ನ ಭಿನ್ನ ಪಾತ್ರಗಳನ್ನು ಸೃಷ್ಟಿಸಿದ್ದಾನೆ ಎಂಬುದನ್ನು ಹೀಗೆ ಸಂಗ್ರಹಿಸಿ ಹೇಳಬಹುದು :

೧. ಛಲಶೀಲ—ಜ್ವಾಲೆ, ಚಂಡಿ

೨. ಪಾತಿವ್ರತ್ಯಶೀಲ—ಚಿತ್ರಾಂಗದೆ, ಸೀತೆ, ಯೌವನಾಶ್ವನ ಪತ್ನಿ

೩. ಸಂತಾನಾಪೇಕ್ಷಾಶೀಲ—ಪ್ರಭಾವತಿ, ಸೀತೆ, ಮೇಧಾವಿನಿ

೪. ಪುತ್ರವಾತ್ಸಲ್ಯಶೀಲ—ಮೇಧಾವಿನಿ, ದಾದಿ

---

1 'ಕವಿ ಲಕ್ಷ್ಮೀಶ' (ಕರ್ನಾಟಕ ಸಂಘ ಪ್ರಕಟನೆ), ಲಕ್ಷ್ಮೀಶ ಕವಿ ಚಿತ್ರಿಸಿದ ಸ್ತ್ರೀಪಾತ್ರ ಗಳು, ಪು. ೧೪೧–೧೭೩.

೫. ವಿಷಯಾಸಕ್ತಿ-ಭೋಗಶೀಲ—ಸ್ವಾಹಾ, ಮಾಲಿನಿ, ವಿಷಯೆ, ಚಂಪಕ ಮಾಲಿನಿ, ಪ್ರಮೀಳೆ

೬. ಕೃಷ್ಣಭಕ್ತಿಶೀಲ—ಸುಧನ್ವನ ತಾಯಿ, ಅಕ್ಕ ಕುವಲಯೆ, ಪತ್ನಿ ಪ್ರಭಾವತಿ, ದ್ರೌಪದಿ, ದೇವಕಿ, ಯಶೋದೆ, ಸತ್ಯಭಾಮೆ, ಜಾಂಬವತಿ, ವೇಶ್ಯೆಯರು.

ಹೀಗೆ ಒಂದು ವಸ್ತುವನ್ನು ನೋಡುವ ದೃಷ್ಟಿ ಭಿನ್ನಭಿನ್ನವಾಗಿರುವಂತೆ ಒಂದು ಸನ್ನಿವೇಶದಲ್ಲಿ ವ್ಯಕ್ತಿಗಳು ಭಿನ್ನಭಿನ್ನವಾಗಿ ನಡೆಯುವುದು ಸ್ವಾಭಾವಿಕ, ಸಹಜ. ಈ ವಾಸ್ತವವನ್ನು, ವಿವಿಧ ಪಾತ್ರಗಳ ಶೀಲವನ್ನು ಒಂದೇ ಸಂದರ್ಭದ ನೆಲೆಯಮೇಲೆ ತೂಗಿ ತೋರಿಸಿದ್ದಾನೆ ಕವಿ.

## ಬಾಲಕ ಪಾತ್ರಗಳು

ಬಾಲಕ ಪಾತ್ರಗಳು ಎಂದರೆ ಈ ಕಾವ್ಯದಲ್ಲಿಯ ರಾಜರನ್ನು ಬಿಟ್ಟು ಉಳಿದ ತರುಣ ಪಾತ್ರಗಳು ಎಂದು ನಾವು ಎಣಿಸಿದ್ದೇವೆ. ಈ ತರುಣಪಾತ್ರಗಳಲ್ಲಿ ಚಂದ್ರಹಾಸನೊಬ್ಬನು ಯುದ್ಧ ಮಾಡುವುದಿಲ್ಲ. ಪಟ್ಟಕ್ಕೆ ಕುಳಿತಿದ್ದಾನೆ. ಇನ್ನಿತರ ತರುಣರೆಲ್ಲ ಯುದ್ಧದಲ್ಲಿ ಭಾಗವಹಿಸುವ ಶೀಲದವರೇ ಆಗಿದ್ದಾರೆ. ಈ ತರುಣ ಪಾತ್ರಗಳಲ್ಲಿ ಬಭ್ರುವಾಹನ, ಲವಕುಶರ ಪಾತ್ರಗಳು ಪಿತೃಪುತ್ರಸಂಬಂಧದಿಂದ ಒಂದು ವಿಶಿಷ್ಟ ಚಿತ್ರಣಗಳಾಗಿವೆ.

ಚಂದ್ರಹಾಸನ ಜನನ, ಬಾಲ್ಯ ಮತ್ತು ತಾರುಣ್ಯವನ್ನು ಕವಿ ವರ್ಣಿಸಿದ್ದರಿಂದ ಅವನನ್ನು ಬಾಲಕರಲ್ಲಿ ಸೇರಿಸಿದ್ದೇವೆ. ಅದರಂತೆ ಲವಕುಶರ ಜನನ, ಬಾಲ್ಯ, ತಾರುಣ್ಯದ ವೀರ ಶೀಲವನ್ನು ಲಕ್ಷ್ಮೀಶನು ವರ್ಣಿಸಿದ್ದಾನೆ. ದುಶ್ಶಳೆಯ ಮಗ ತೀರ ಚಿಕ್ಕವ. ವೃಷಕೇತು, ಮೇಘನಾದ, ಸುವೇಗ, ಪ್ರವೀರ, ಪ್ರದ್ಯುಮ್ನ, ಅನಿರುದ್ಧ, ಸುಧನ್ವ, ಸುರಥ, ತಾಮ್ರಧ್ವಜ ಇವರೆಲ್ಲರೂ ರಣರಂಗವೀರರು. ಕ್ಷಾತ್ರತೇಜದಿಂದ ಹೊಳೆಯುವ ರತ್ನಗಳು. ನೀಲಧ್ವಜನ ಮಕ್ಕಳು, ವೀರವರ್ಮನ ಮಕ್ಕಳು, ಚಂದ್ರಹಾಸನ ಮಕ್ಕಳಾದ ಪದ್ಮಾಕ್ಷ ಮಕರಧ್ವಜರು ನಾಮಮಾತ್ರದ ಪಾತ್ರಗಳು. ಇವು ಯಾವ ಕಾರ್ಯವನ್ನೂ ಇಲ್ಲಿ ಮಾಡುವುದಿಲ್ಲ. ದುಷ್ಟಬುದ್ಧಿಯ ಮಕ್ಕಳಾದ ಮದನ ಮತ್ತು ಅಮಲ ಇವರು ಯುದ್ಧ ಮಾಡುವುದಿಲ್ಲ. ಹೀಗಿದೆ ಜೈಮಿನಿ ಭಾರತದ ಬಾಲಪ್ರಪಂಚ.

'ಪ್ರತಿಯೊಂದು ಘನವಸ್ತುವಿಗೆ ಉದ್ದ, ಅಗಲ, ಆಳ ಅಥವಾ ಎತ್ತರ ಅಥವಾ ಪಿಂಡ ಎಂಬ ಮೂರು ಅಳತೆಗಳು ಇದ್ದೇ ಇರುತ್ತವೆ. ಮಾನವನಿಗೂ ಈ ಮೂರು ಅಳತೆಗಳಿರುತ್ತವೆ. ಅವೆಂದರೆ ಶರೀರವಿಜ್ಞಾನ, ಸಮಾಜವಿಜ್ಞಾನ ಮತ್ತು ಮನೋವಿಜ್ಞಾನ. ಶರೀರವಿಜ್ಞಾನವು ವ್ಯಕ್ತಿಯ ಅಥವಾ ಪಾತ್ರದ ಲಿಂಗ; ವಯಸ್ಸು, ಎತ್ತರ, ತೂಕ, ಬಣ್ಣ, ಜನನ, ದೈಹಿಕಸ್ಥಿತಿ, ವಂಶಾನುಚರಿತ, ಗುಣದೋಷ ಇತ್ಯಾದಿಗಳನ್ನು ತಿಳಿಸಿದರೆ; ಸಮಾಜವಿಜ್ಞಾನವು ಅವನ ವರ್ಗ ವರ್ಣ, ಶಿಕ್ಷಣ ಉದ್ಯೋಗ, ಮನೆ ಪರಿ

ಸರಗಳ ಸ್ಥಿತಿ, ವ್ಯಕ್ತಿ ವ್ಯಕ್ತಿಗಳ ಪರಸ್ಪರ ಸಂಬಂಧಗಳನ್ನು ತಿಳಿಸುತ್ತದೆ. ಮನೋವಿಜ್ಞಾನವು ಅವನ ನೀತಿ-ನಡತೆ, ಲೈಂಗಿಕಜೀವನ, ಧ್ಯೇಯ, ಉನ್ನತಿ, ಅವನತಿ, ಸ್ವಭಾವ ವೈಶಿಷ್ಟ್ಯ, ಮನಸ್ಸಿನ ಒಲವು ನಿಲವು, ನಂಬಿಕೆ ಕಲ್ಪನೆಗಳ ಪರಿಚಯುವನ್ನು ಮಾಡಿಕೊಡುತ್ತದೆ. ಈ ಆರು ಅಳತೆಗಳ ಮೇಲಿಂದ ನಾವು ಯಾವುದೇ ಪಾತ್ರದ ಬೆಲೆ ಕಟ್ಟಬೇಕಾಗುವುದು. ಈ ಆರೂ ಅಳತೆಗಳ ವಿವರವನ್ನು ಕೊಡುವ ಪಾತ್ರ ಪೂರ್ಣ ಪಾತ್ರ, ಉಳಿದವುಗಳೆಲ್ಲವೂ ಖಂಡ ಪಾತ್ರಗಳು' ಎಂದು Lajos Egri ತನ್ನ *The Art of Dramatic Writing* ಎಂಬ ಗ್ರಂಥದಲ್ಲಿ (ಪು. ೩೩, ೫೭-೫೮) ಹೇಳುತ್ತಾನೆ.

ಈ ಅಳತೆಗೋಲಿನಿಂದ ಜೈಮಿನಿ ಭಾರತ ಬಾಲಕಪಾತ್ರಗಳನ್ನು ಅಳೆದರೆ ಚಂದ್ರಹಾಸನ ಪಾತ್ರವೊಂದೇ ಪರಿಪೂರ್ಣ ಪಾತ್ರ ಎಂದು ಹೇಳಬೇಕಾಗುತ್ತದೆ. ಇವನ ಜನನ, ರೂಪ, ದೋಷ, ಪರಪುಟ್ಟತನ, ಶಿಕ್ಷಣ, ಪರಿಸರ, ಒಲವು ನಿಲವು, ನಂಬಿಕೆ ಇತ್ಯಾದಿ ಎಲ್ಲ ವಿವರಗಳು ನಮಗೆ ದೊರೆಯುತ್ತವೆ. ಇವನ ಸಂಪೂರ್ಣ ಜೀವನಚರಿತ್ರೆ ಕಾವ್ಯದಲ್ಲಿ ಚಿತ್ರಿಸಲಾಗಿದೆ. ಇವನ ಅನಂತರ ಲವಕುಶರ ಪಾತ್ರಗಳು ಪೂರ್ಣಪಾತ್ರದ ಸಮೀಪಕ್ಕೆ ಬರುತ್ತವೆ. ಇವರ ಜನನ, ರೂಪ, ಬೆಳಿಗೆ, ಯುದ್ಧೋತ್ಸಾಹ, ಗೆಲವು ನಮಗೆ ಕಾವ್ಯದಿಂದ ಗೊತ್ತಾಗುತ್ತವೆ. ಉಳಿದ ಎಲ್ಲ ಬಾಲಕ ಪಾತ್ರಗಳು ಒಮ್ಮೋಗದ ಪಾತ್ರಗಳು. ಅವರ ಭೆಟ್ಟಿ ರಣಾಂಗಣದಲ್ಲಿಯೆ. ಅವರ ವೀರಶೀಲದ ಪರಿಚಯುಮಾತ್ರ ನಮಗೆ ಆಗುತ್ತದೆ; ಉಳಿದ ವಿವರಗಳು ದೊರೆಯುವುದಿಲ್ಲ.

ನಮಗೆ ಕಾವ್ಯಪ್ರಾರಂಭದಲ್ಲಿಯೆ ಪರಿಚಯುವಾಗುವ ತರುಣಪಾತ್ರಗಳೆಂದರೆ ವೃಷಕೇತು-ಮೇಘನಾದರವು. ವೃಷಕೇತುವಿನ ಪಾತ್ರವನ್ನು ಇಲ್ಲಿ ಅನೇಕ ಯುದ್ಧಗಳಲ್ಲಿ (ಮರಣದಲ್ಲಿಯೂ) ಕಾಣುತ್ತೇವೆ. ಮೇಘನಾದನು ಭೀಮ-ವೃಷಕೇತುಗಳೊಂದಿಗೆ ಯಜ್ಞಾಶ್ವಸಂಪಾದನೆಯ ಕಾರ್ಯದಲ್ಲಿ ಸಹಾಯಕನಾಗಿ ಮಾತ್ರ ಬರುತ್ತಾನೆ. ಸಂಸ್ಕೃತ ಜೈಮಿನಿ ಭಾರತದಲ್ಲಿ ಭೀಮನು ಯಜ್ಞಾಶ್ವವನ್ನು ತರಲು ಸಿದ್ಧನಾಗಿದ್ದಾನೆ; ಆದರೆ ಅವನೊಬ್ಬನಿಗೇ ಆ ಕೆಲಸ ನೀಗಲಾರದೆಂದು ಧರ್ಮರಾಜನಿಗೆ ಚಿಂತೆ; ಆತನ ಚಿಂತೆಯ ಪರಿಹಾರಕ್ಕಾಗಿಯೇ ವೃಷಕೇತು ಮೇಘನಾದರು ಸಹಾಯಕ್ಕೆ ಸಿದ್ಧರಾದರೋ ಏನೋ ಎಂದೆನ್ನುವಂತೆ ಪ್ರಸಂಗವಿದೆ. ಆದರೆ ಕನ್ನಡ ಜೈಮಿನಿ ಭಾರತವು ಈ ಸನ್ನಿವೇಶವನ್ನು ರೂಪಬದಲಿಸಿ ಕೊಡುತ್ತದೆ. 'ಯಜ್ಞಕ್ಕೆ ತುರಗಮಂ ತಹೆನು' ಎಂದು ಭೀಮನು ಪ್ರತಿಜ್ಞೆಮಾಡಿದೊಡನೆ, ಆ ಕ್ಷಣದಲ್ಲಿ ವೃಷಕೇತು ನಗುತ್ತ ಕೈಮುಗಿದು ನಿಂತು, ವಿಜ್ಞಾಪನಂ ಗೈಯುತ್ತಾನೆ:

'............ಎಲೆ ತಾತ, ಕೊಡು ತನಗ<br>
ನುಜ್ಞೆಯಂ, ಪವಮಾನತನಯನಾಡಿದ ನುಡಿಗ<br>
ವಜ್ಞೆ ಬಂದೊಡೆ ರವಿಕುಮಾರಂಗೆ ಜನಿಸಿದನೆ? ನೋಡೆನ್ನ ಥಟನು' (೨.೩೭)

ಎಂದು ಪ್ರತಿಜ್ಞೆಯನ್ನು ಮಾಡುತ್ತಾನೆ. ಇದನ್ನು ಕೇಳಿದ ಮೇಘನಾದನು,

'ವೈರಿದ್ರುಮಂಗಳನೆ ಖಂಡಿಸುವೆನೆಂದೆಂಬ ಆಳುತನದ ಉದ್ರೇಕಂ ಎನಗಿಲ್ಲ,
ನಿನ್ನವರ್ಗೆ ಅಶ್ವಮಂ ಪಿಡಿದೊಪ್ಪಿಸುವೆಂ'

ಎಂದು ಪ್ರತಿಜ್ಞೆ ಮಾಡುತ್ತಾನೆ (೨.೪೧). ಇಲ್ಲಿ ಬಾಲಕರಲ್ಲಿಯ ಉತ್ಸಾಹಶೀಲವು ಚೆನ್ನಾಗಿ ವರ್ಣಿತವಾಗಿದೆ. ಕ್ಷಾತ್ರವಂಶದ ಈ ಬಾಲವೀರರು ಸಹಜ ಪೌರುಷವಂತರಾಗಿದ್ದಾರೆ. ಸಂಸ್ಕೃತ ಜೈಮಿನಿ ಭಾರತದಲ್ಲಿಯಂತೆ 'ಅತ್ತುಕರೆದು ಔತಣಹೇಳಿಸಿಕೊಳ್ಳುವ' ರೀತಿ ಇಲ್ಲಿ ಕಂಡುಬರುವುದಿಲ್ಲ.

ಅನುಸಾಲ್ವನನ್ನು ಎದುರಿಸಲು ವೀಳೆಯವನ್ನು ಎತ್ತುವ ಸಾಹಸಿ ಪ್ರದ್ಯುಮ್ನನು ಮೊದಲನೆಯವನಾದರೆ ವೃಷಕೇತು ಎರಡನೆಯವನು (ಕ. ಜೈ. ಭಾ. ಸಂ. ೭). ಪ್ರದ್ಯುಮ್ನನು ಸಾಕಷ್ಟು ಹೋರಾಡಿ ಕೊನೆಗೆ ಮೂರ್ಛೆಹೋಗುತ್ತಾನೆ. ಮೂರ್ಛಿತನಾದ ಅವನನ್ನು ಉದ್ದೇಶಿಸಿ ಶ್ರೀಕೃಷ್ಣನು,

'ದ್ವಾರಕೆಯನೆಂತಬಲೆಯರ ಮುಂದೆ ಪುಗುವೆ? ಪೋ
ಗಾರಣ್ಯಕೆನಲಲ್ಲಿ ಮುನಿಗಳ್ಗೆ ಸೇರೆ, ಕೆ
ಟ್ಟಾರೂರ ಸಾರ್ದಡಂ ನೀಂ ವಿರಹಿತನು ವಿಷಮನೆಂದೊರ್ವರುಂ ಕೂಡರು
ಆರಿನ್ನು ಗತಿ ನಿನಗೆ? ಸಂಬಂಧಿ ಬಾಣನಂ
ಹಾರೈಸುವಡೆ ನಿನ್ನ ಬೇಗೊಳಗೆ ಶಿವನಿಪ್ಪ
ಕಾರಣವನಂಗತ್ವವೇ ಪ್ರಾಪ್ತಂ' (೭.೪೦)

ಎಂದು ಜರೆದು ಕಾಲ್ಬುದಿಯಿಂದ ಒದ್ದನು ಎಂದು ಲಕ್ಷ್ಮೀಶನು ಬಣ್ಣಿಸಿದ್ದಾನೆ. ಸಂ. ಜೈ. ಭಾ.ದಲ್ಲಿ ಹೀಯಾಳಿಕೆಯ ಈ ಎಲ್ಲ ಮಾತುಗಳೊಂದಿಗೆ ಕೃಷ್ಣನು, 'ಪ್ರದ್ಯುಮ್ನನೇ ರುಕ್ಮಿಣಿಯ ಗರ್ಭದಲ್ಲಿ ಅಥವಾ ಹುಟ್ಟಿದೊಡನೆ ಏಕೆ ಸಾಯಲಿಲ್ಲ? ಪ್ರತಿಜ್ಞಾಪೂರ್ತಿ ಮಾಡದೆ ಜೀವಂತ ಇರುವೆಯಲ್ಲ? ಮಹಾಬಲವುಳ್ಳ ವೀರರೂ ನನ್ನ ಕೈಯಿಂದ ವೀಳೆಯವನ್ನು ಎತ್ತುವದಿಲ್ಲ; ನೀನು ಎತ್ತಿರುವೆ' ಎಂದು ಅತಿಹೀನವಾಗಿ ಮಾತನಾಡುತ್ತಾನೆ (೧೩.೪೪,೪೫). ಈ ಮಾತುಗಳು ಲಕ್ಷ್ಮೀಶನಿಗೆ ಹೆಚ್ಚಿನವೆನಿಸಿವೆ. ಇವು ಕಾವ್ಯಕ್ಕೆ, ವ್ಯಕ್ತಿಚಿತ್ರಣಕ್ಕೆ ಸೊಗಸವು ಎಂದು ಬಿಟ್ಟುಬಿಟ್ಟಿದ್ದಾನೆ.

ಸಂಧಿ ೧೦ ರಿಂದ ೧೪ರವರೆಗೆ ಸುಧನ್ವ ಸುರಥರ ಪರಾಕ್ರಮಶೀಲವು ವ್ಯಕ್ತವಾಗುತ್ತದೆ. ಸುಧನ್ವನ ಮರಣವು ಸುರಥನ ಪರಾಕ್ರಮಕ್ಕೆ ಕಾರಣ. ಅವನ ಶೌರ್ಯ ಮತ್ತು ಯುದ್ಧ ಕೌಶಲ್ಯವು ಸಂಸ್ಕೃತ ಮತ್ತು ಕನ್ನಡ ಜೈಮಿನಿ ಭಾರತಗಳೆರಡರಲ್ಲಿಯೂ ಚೆನ್ನಾಗಿ ವ್ಯಕ್ತವಾಗಿದೆ.

ವರ್ಣಕಕಾವ್ಯದಲ್ಲಿ, ನವ್ಯಕಾವ್ಯದಲ್ಲಿ—

'ಅಷ್ಟಾದಶವರ್ಣನಂ ಕೇಳಿಸಿನಿತುಳ್ಳಕೃತಿ **ನವ್ಯಮೆನಿಕ್ಕು** ಮಿಲ್ಲದಿರೆದುರ್ಲಕ್ಷಣಂ'

ಎಂದು ಮಂಗರಾಜನು ಹೇಳುತ್ತಾನೆ.[1] ಇದೇ ಅರ್ಥದಿಂದ ಕವಿ ಲಕ್ಷ್ಮೀಶನು ಅಷ್ಟಾದಶವರ್ಣನಗಳುಳ್ಳ ಲಕ್ಷಣಯುಕ್ತ ನವ್ಯಕಾವ್ಯವನ್ನೇ ರಚಿಸಿದ್ದಾನೆ. ಸಂಭೋಗ ಶೃಂಗಾರವನ್ನು ವರ್ಣಿಸುವುದು ಅಷ್ಟಾದಶವರ್ಣನದ ಒಂದು ಅಂಗವಾಗಿದೆ. ಕವಿ

1 'ಅಭಿನವಾಭಿಧಾನಂ'—ಭೂಮಿಕಾಂಡ, ವೈಶ್ಯವರ್ಗ, ಪ. ೧೭.

ಲಕ್ಷ್ಮೀಶನು ಸುಧನ್ವನನ್ನು ಶೃಂಗಾರ ನಾಯಕನನ್ನಾಗಿ ಚಿತ್ರಿಸಿದ್ದಾನೆ. 'ಕಾಮಶಾಸ್ತ್ರ ನಿಪುಣ, ರೂಪ ಶೀಲ ಯೌವನ ಧನಸಂಪನ್ನ, ಚತುರ, ಶುದ್ಧ ಚರಿತ್ರ, ಸಹೃದಯ, ಸಹಿಷ್ಣು, ಸ್ವಾಭಿಮಾನಿ, ಉದಾರ, ಶೂರ, ಕಾಲೋಚಿತ ಆಚಾರಯುಕ್ತ, ತನ್ನ ಪತ್ನಿಯಲ್ಲಿ ದೃಢವಿಶ್ವಾಸಿ, ತನ್ನ ಸುಖದಲ್ಲಿ ಪರರಿಗೂ ಪಾಲನ್ನು ಕೊಡುವವನಾಗಿ ಶೃಂಗಾರ ನಾಯಕನನ್ನು ಚಿತ್ರಿಸಬೇಕು' ಎಂದು ಭಾರತೀಯ ನಾಟ್ಯಶಾಸ್ತ್ರವು ಹೇಳುತ್ತದೆ. ಇವುಗಳಲ್ಲಿಯ ಅನೇಕ ಗುಣಗಳು ಸಂ. ಜೈ. ಭಾ. ಮತ್ತು ಕ. ಜೈ. ಭಾ. ಗಳಲ್ಲಿ ಚೆನ್ನಾಗಿ ವ್ಯಕ್ತವಾಗಿವೆ. ಆದರೆ ಸಂಸ್ಕೃತ ಜೈಮಿನಿ ಭಾರತದಲ್ಲಿ—

> 'ಕವಚ ಕಿರೀಟಗಳನ್ನು ತೆಗೆದು ಕೆಳಗಿಟ್ಟು, ರತ್ನವಿಭೂಷಿತ ಶಯನದ ಮೇಲೆ ಪತ್ನಿಯೊಂದಿಗೆ ಹಗಲು ರಮಮಾಣನಾದನು ಆಗ ಅವಳಿಗೆ ಗರ್ಭಧಾರಣೆ ಆಯಿತು. ಸುಧನ್ವನು ಸ್ನಾನಮುಗಿಸಿ, ಪವಿತ್ರನಾಗಿ ರಥಾರೂಢನಾಗಿ ಹೊರಟ'

ಎಂದಿಷ್ಟೇ ಹೇಳಲಾಗಿದೆ. ಕವಿ ಲಕ್ಷ್ಮೀಶನು ಶೃಂಗಾರನಾಯಕನ ಸಂಭೋಗವನ್ನು ವರ್ಣಿಸಲು ಇದು ತಕ್ಕ ಅವಕಾಶವೆಂದು ಅದನ್ನು ವರ್ಣಿಸಿ ಶೃಂಗಾರನಾಯಕಪಾತ್ರದ ಪಾತ್ರತೆಯನ್ನು ಪೂರ್ಣಗೊಳಿಸಿದ್ದಾನೆ (ಉಪಕಥಾನಕ).

ಸಂಧಿ ೧೭ ರಲ್ಲಿ ಬಭ್ರುವಾಹನಪಾತ್ರದ ಪ್ರವೇಶವಾಗುತ್ತದೆ. ಯಜ್ಞಾಶ್ವವು ಮಣಿಪುರಕ್ಕೆ ಬಂದಾಗ ಚಿತ್ರಾಂಗದೆ ಮಣಿಪುರದಲ್ಲಿಯೆ ಇರುವಂತೆ ಕವಿ ಲಕ್ಷ್ಮೀಶನು ಪ್ರಮುಖವಾದ ಬದಲಾವಣೆಯನ್ನು ಮಾಡಿಕೊಂಡಿದ್ದಾನೆ. ಈ ಬದಲಾವಣೆ ಬಭ್ರುವಾಹನನ ಪಾತ್ರಕ್ಕೆ ಪುಷ್ಟಿಯನ್ನು ಕೊಡುತ್ತದೆ. ಬಭ್ರುವಾಹನನು ಮಾತೃಪಿತೃಭಕ್ತಶೀಲನು ಎಂಬುದು ಇಲ್ಲಿ ವ್ಯಕ್ತವಾಗುತ್ತದೆ; ಆ ಚಿತ್ರ ಹೀಗಿದೆ:

**ಚಿತ್ರಾಂಗದೆ :** 'ಸಮುದ್ರಮಂ ಮಥಿಸೆ ವಿಷಂ ಉದಯಿಸಿದೊಲ್ ಆಯ್ತು ನಿನ್ನುದ್ಭವಂ.'

**ಬಭ್ರು :** 'ನಿಮ್ಮಡಿಗೆ ಸಂಪ್ರೀತಿ ಎಂತಾದಪುದು ಅದಂ ಬೆಸಸಿದಡೆ ಮಾಳ್ಪೆಂ, ಏತಕೆ ಆತುರಂ?'

**ಚಿತ್ರಾಂ :** 'ನಿನ್ನ ಸರ್ವಸ್ವಮಂ ತಾತನಂಘ್ರಿಗೆ ಸಮರ್ಪಿಸಿದಡೆ, ಆಂ ಮಾಡಿದ ತಪೋನಿಷ್ಠೆ ಸಫಲಮಾದುದು.'

**ಬಭ್ರು :** 'ತಾನು ಈಗಳ್ ಈ ತುರಗಮಂ ಪಿಡಿದು ಕಟ್ಟೆ ತಪ್ಪಿದೆ; ಗುಣಾತೀತಮಂ ಕ್ಷಮಿಸು.'

ಇಂತಹ ಉಕ್ತಿರತ್ನಗಳು ಸಂ. ಜೈ. ಭಾ. ದಲ್ಲಿ ಮಾಯವಾಗಿವೆ. ಬಭ್ರುವಾಹನನ ಮನಸ್ಸಿನಲ್ಲಿ ನಡೆದ ಭಾವದ್ವಂದ್ವದ ಒಳತೋಟಿಯನ್ನು ಲಕ್ಷ್ಮೀಶನು ಚೆನ್ನಾಗಿ ಚಿತ್ರಿಸಿದ್ದಾನೆ. ಯುದ್ಧ ಮಾಡಬೇಕೆಂದರೆ ತಾಯಿಗೆ **ದುಃಖ,** ಮಾಡಬಾರದೆಂದರೆ ತಂದೆಯ **ತಿರಸ್ಕಾರ.** ತಾಯಿಯ ದುಃಖ, ತಂದೆಯ ತಿರಸ್ಕಾರ ಎಂಬ ಎರಡು ಕಾಷ್ಠಗಳ ತಿಕ್ಕಾಟದಿಂದ ಬಭ್ರುವಾಹನನಲ್ಲಿ ಪರಾಕ್ರಮಜ್ವಾಲೆ ಉನ್ಮುಖವಾಗುತ್ತದೆ. ಆ ಜ್ವಾಲೆಗೆ ವೃಷಕೇತು ಅರ್ಜುನರು ಬಲಿಯಾಗುತ್ತಾರೆ. ಆಗ ಅವರನ್ನು ಸಪ್ರಾಣಿಸಲು ಸಂಜೀವಕಮಣಿಯನ್ನು ತರುವುದಕ್ಕಾಗಿ ಬಭ್ರುವಾಹನನು ಹೋಗಿ ನಾಗರೊಡನೆ

ಹೋರಾಡುತ್ತಾನೆ. ತಂದೆ ತಾಯಿಗಳ ಸುಖಕ್ಕಾಗಿ ಭಕ್ತಿಪ್ರೇರಣೆಯಿಂದ ಹೋರಾಡುವುದೇ ಬಭ್ರುವಾಹನನ ಶೀಲ.

ಸಂಧಿ ೧೮ ರಿಂದ ೨೧ರ ವರೆಗೆ ಲವಕುಶರ ಪಾತ್ರಗಳು ಬರುತ್ತವೆ. ಈ ಕುಮಾರರ ಜನನ, ಬೆಳವಣಿಗೆಯನ್ನು ಲಕ್ಷ್ಮೀಶನು ವಿವರವಾಗಿ ಮನೋಜ್ಞವಾಗಿ ವರ್ಣಿಸುತ್ತಾನೆ:

'ಭೂಮಿಯೊಳ್ ಚೆಲ್ವಿಗೆ ವಸಂತನಂ ಮದನನಂ ಸೋಮನಂ ಪಡಿಯಿಡಲ್
ಪುನರುಕ್ತಮಪ್ಪುದು ಎನೆ ಕುಶಲವರ್ ಕಣ್ಗೆಸೆದರು.'

ಇದು ಅವರ ರೂಪವರ್ಣನೆ. ಕುಮಾರೋದಯ ವರ್ಣನೆ ಅಷ್ಟಾದಶ ವರ್ಣನೆಗಳ ಒಂದು ಅಂಗ್ರವಾಗಿದೆ. ಆದರೂ ಸಂ.ಜೈ.ಭಾ. ಕಾರನು ಅದಕ್ಕೆ ಕೈಹಾಕಿಲ್ಲ. 'ವಾಲ್ಮೀಕಿ ಮುನಿ ಬಾಲಕರಿಗೆ ಲವಕುಶರೆಂದು ನಾಮಕರಣ ಮಾಡಿದನು. ಚಂದ್ರಸೂರ್ಯರಂತೆ ಅವರು ಬೆಳೆದರು. ಮುನಿಯು ಜಾತಕರ್ಮಾದಿಗಳನ್ನು ಮಾಡಿದನು. ೧೨ನೆಯ ವರ್ಷ ಉಪನಯನವನ್ನು ಮಾಡಿದನು' ಎಂದು ಅವರ ೧೨ ವರುಷಗಳ ಜೀವನವೃತ್ತವನ್ನು ೩ ಶ್ಲೋಕಗಳಲ್ಲಿ ಮುಗಿಸುತ್ತಾನೆ (೨೯.೨೨-೨೪). ಲಕ್ಷ್ಮೀಶನಾದರೋ ಆ ಬಾಲಕರ ರೂಪ, ಬಾಲಲೀಲೆ, ಬೆಳೆದ ರೀತಿ, ವಿದ್ಯಾಭ್ಯಾಸ, ರಾಮಾಯಣದ ಸುಶ್ರಾವ್ಯಗಾಯನ ಶಿಕ್ಷಣ ಇತ್ಯಾದಿಗಳೆಲ್ಲವನ್ನು ತಿಳಿಸಿ ಲವಕುಶರನ್ನು ಜೀವಕಳೆ ತುಂಬುತ್ತ ಬೆಳೆಸುತ್ತಾನೆ.

ರಾಮನು ಬಿಟ್ಟ ಯಜ್ಞಾಶ್ವವನ್ನು ಲವಕುಶರು ಕಟ್ಟುತ್ತಾರೆ. ಆಗ ಮುನಿಪುತ್ರರು ಭಯದಿಂದ ಅಶ್ವವನ್ನು ಬಿಡಲು ಕೇಳಿಕೊಳ್ಳುತ್ತಾರೆ. ಸಂಸ್ಕೃತ ಜೈಮಿನಿ ಭಾರತದಲ್ಲಿ ಲವನು ಅವರಿಗೆ ಉತ್ತರಿಸುವ ರೀತಿ ಹೀಗಿದೆ: 'ನಾನು ಅಶ್ವವನ್ನು ಕಟ್ಟಿ ಈಗ ಅಂಜಿಕೆಯಿಂದ ಬಿಟ್ಟೆನಾದರೆ ನಾನು ಸೀತೆಯ ಉದರದಲ್ಲಿ ಹುಟ್ಟಿದ ಒಂದು ಕ್ರಿಮಿ ಸದೃಶನಾದೇನು!' ಇದರಲ್ಲಿ ಸೊಗಸು ಸೌಭಾಗ್ಯ ಏನೂ ಇಲ್ಲ. ಲಕ್ಷ್ಮೀಶನಾಡಿಸುವ ಲವನ ಮಾತನ್ನು ಕೇಳಿ—

ನಗುತೆ 'ಪಾರ್ವರ ಮಕ್ಕಳಂಜಿದಡೆ ಜಾನಕಿಯ
ಮಗನಿದಕೆ ಬೆದಱುವನೆ? ಪೋಗಿ ನೀವ್' ಎಂದು ಲವ
ನಗಡುತನದಿಂದೆ ಬಿಲ್ದಿರುವನೇಱಿಸಿ ತೀಡಿ ಜೇಗೈದು ನಿಂದಿರ್ದನು.

ಎಷ್ಟು ಮಹದಂತರ ಈ ಎರಡು ಚಿತ್ರಗಳಲ್ಲಿ! ಸಂಸ್ಕೃತ ಕಾವ್ಯದ ಉಕ್ತಿಯಲ್ಲಿ ಅಂಜಿಕೆ-ಅಭಿಮಾನಗಳ ಮಿಶ್ರಣದಿಂದ ಸಪ್ಪೆಯಾಗಿದ್ದಾನೆ ಲವ. ಕನ್ನಡದಲ್ಲಿಯೋ ಅಂಜಿಕೆಯ ಲವವೂ ಇಲ್ಲದ ಪೌರುಷದ ಆತ್ಮವಿಶ್ವಾಸದ ಧೀರ ಲವ!

ಲಕ್ಷ್ಮೀಶನ ಈ ಲವನು ಯಜ್ಞಾಶ್ವದ ತಲೆಯಪಟ್ಟದ ಲಿಖಿತವನ್ನು ಓದಿ, ರಾಮನ

'ಗರ್ವಮಂ ಬಿಡಿಸದಿರ್ದೊಡೆ ತನ್ನ ಮಾತೆಯಂ
ಸರ್ವಜನಮುಂ ಬಂಜೆ ಎನ್ನದಿರ್ದಪುದೆ? ತನ
ಗುರ್ವ ತೋಳ್ಗಳಿವೇತಕೆ?'

ಎಂದು ಸಲೆ ವಾಸೆಯಂ ತೊಟ್ಟು ಉರಿದೇಳುತ್ತಾನೆ (೨೦.೭). ಕನ್ನಡ ಕಾವ್ಯದ

ಕುಶನೂ ಇಂತಹನೇ: ಲವನು ಯುದ್ಧದಲ್ಲಿ ಮೂರ್ಛಿತನಾಗಿ ಶತ್ರುವಶನಾದುದನ್ನು ಕೇಳಿ ಸೀತೆ ದುಃಖಿತೆಯಾದುದನ್ನು ಕಂಡು ಕುಶನು,

> 'ಶೋಕಮೇಕಿದಕೆ? ಹರಣವನೊಯ್ದ ಡಂತಕನ
> ಲೋಕಮಂ ಸುಡುವೆ, ಅಲ್ಲಹುದೆಂದಡಜಹರಿಪಿ
> ನಾಕಿಗಳನುರುಪುವೆಂ, ಮಿಕ್ಕರಸುಗಿರಸುಗಳ ಪಾಡಾವುದೀಗ ತನಗೆ!'

ಎಂದು ತಾಯಿಯನ್ನು ಸಂತೈಸುತ್ತಾನೆ. ಜೀವಂತ ಕ್ಷಾತ್ರತೇಜ ಇದು.

ಲವಕುಶರ ಮಾತೃಭಕ್ತಿ ಮತ್ತು ಪೌರುಷ ಎಂಬ ಶೀಲಗಳೇ ಇಲ್ಲಿ ವ್ಯಕ್ತವಾಗಿವೆ. ಯುದ್ಧ ಮುಗಿದನಂತರ ವಾಲ್ಮೀಕಿ ರಣರಂಗಕ್ಕೆ ಬಂದು, ಕಮಂಡಲದ ನೀರನ್ನು ಚಿಮುಕಿಸಿ ರಾಮನನ್ನು ಎಬ್ಬಿಸುತ್ತಾನೆ. 'ರಘುನಂದನಾ, ನಿನ್ನ ಈ ಮಕ್ಕಳನ್ನು ಸ್ವೀಕರಿಸು. ಸೀತೆ ನಿರ್ದೋಷಿ ಎಂದು ನಿನಗೆ ತೋರಿದರೆ ಅವಳನ್ನು ಕರೆದುಕೊಂಡು ಹೋಗು' ಎನ್ನುತ್ತಾನೆ. ರಾಮನು ಎದ್ದವನೇ ಊರಿಗೆ ಹೊರಟುಹೋದನು. ಯಜ್ಞಾಶ್ವ ರಕ್ಷಣೆಯನ್ನು ವಾಲ್ಮೀಕಿ ಲವಕುಶರಿಂದ ಮಾಡಿಸಿದನು, ಎಂಬುದನ್ನು ಕೇಳಿ ರಾಮನಿಗೆ ಸಂತೋಷವಾಯಿತು. ಆಮೇಲೆ ಯಜ್ಞಸಮಯಕ್ಕೆ ವಾಲ್ಮೀಕಿ ಮುನಿ ಲವ, ಕುಶ ಮತ್ತು ಸೀತೆ ಇವರನ್ನು ರಾಮನ ಹತ್ತಿರ ತಂದು ಬಿಟ್ಟರು—ಹೀಗೆ ಸಂ. ಜೈ. ಭಾ. ದಲ್ಲಿ ಬಂದಿದೆ (೩೬.೭೫–೭೯). ಇಲ್ಲಿ ಕಥೆ ನಾಗಾಲೋಟದಿಂದ ಸಾಗಿ ಅತಿಕ್ಷಿಪ್ರದಲ್ಲಿ ಮುಗಿಯುತ್ತದೆ. ಕ.ಜೈ.ಭಾ. ದಲ್ಲಿ ಹೀಗಲ್ಲ. ರಾಮನು ಮೂರ್ಛೆಯಿಂದೆದ್ದ ಬಳಿಕ, ಅರಳ ಮಳೆ, ದುಂದುಭಿಸ್ವನ ಮೊದಲಾದ ಶುಭಸೂಚನೆಗಳು; ಲವಕುಶರ ಪರವಾಗಿ ವಾಲ್ಮೀಕಿ ರಾಮನಲ್ಲಿ ಕ್ಷಮಾಯಾಚನೆ ಮಾಡುವುದು; ರಾಮನು ಲವಕುಶರ ಶೌರ್ಯಕ್ಕೆ ತಲೆದೂಗಿ, 'ನಾವು ಜಾನಕಿಯ ಗರ್ಭಸಂಭವರು' ಎಂಬ ಅವರ ಮಾತನ್ನು ಮೆಚ್ಚಿ, ಅವರು ಹಾಡಿದ ಸುಶ್ರಾವ್ಯರಾಮಾಯಣಕ್ಕೆ ಮನಸೋತು ಲವಕುಶರು ತನ್ನವರೆಂದು ಒಪ್ಪಿಕೊಳ್ಳುತ್ತಾನೆ. ಭಾವನೆಗಳ ಪದರುಪದರುಗಳನ್ನು ಬಿಚ್ಚಿ ತೋರಿಸುವುದೇ ಲಕ್ಷ್ಮೀಶನ ಕಾವ್ಯರೀತಿಯಾಗಿದೆ.

ಯೌವನಾಶ್ವನ ಮಗ ಸುವೇಗ, ನೀಲಧ್ವಜನ ಮಗ ಪ್ರವೀರ, ಮಯೂರಧ್ವಜನ ಮಗ ತಾಮ್ರಧ್ವಜ, ವೀರವರ್ಮನ ಮಕ್ಕಳು ಒಂದು ಗುಂಪಿಗೆ ಸೇರುತ್ತಾರೆ. ಇವರೆಲ್ಲ ತಮ್ಮ ತಮ್ಮ ಪಾತ್ರಶೀಲವನ್ನು ಚೆನ್ನಾಗಿ ಕಾಪಾಡಿಕೊಳ್ಳುತ್ತಾರೆ. ಇವರ ಕ್ಷಾತ್ರ ತೇಜವನ್ನು ಸಂ. ಜೈ. ಭಾ. ವು. ಸ್ವಲ್ಪ ವಿಸ್ತರಿಸುತ್ತದೆ; ಕ.ಜೈ.ಭಾ.ವು ಸಂಕ್ಷೇಪಿಸುತ್ತದೆ.

ಭಕ್ತಾಗ್ರಣಿ, ಭಾಗವತ ಶಿರೋಮಣಿ ಚಂದ್ರಹಾಸನದು ನಮ್ಮನ್ನು ಗೆಲ್ಲುವ ಪಾತ್ರ (ಸಂ. ೨೮–೩೨). ಸಂ. ಜೈ. ಭಾರತ ಮತ್ತು ಕನ್ನಡ ಜೈಮಿನಿ ಭಾರತ ಎರಡೂ ಈ ಪಾತ್ರವನ್ನು ಚೆನ್ನಾಗಿ ವರ್ಣಿಸುತ್ತವೆ. ಆದರೂ ವಿವರಗಳನ್ನು ವರ್ಣಿಸುವತ್ತ ಸಂ.ಜೈ. ಭಾ.ದ ಒಲವು ಇಲ್ಲ ಎಂಬುದು ಇಲ್ಲಿಯೂ ನಿದರ್ಶನಕ್ಕೆ ಬರುತ್ತದೆ. ಶೈಶವದಲ್ಲಿ ಪರಪುಟ್ಟನಾಗಿ, ಬಾಲ್ಯದಲ್ಲಿಯೆ ಹರಿಭಕ್ತನಾಗಿ, ತಾರುಣ್ಯದಲ್ಲಿ ಏಕಾದಶೀವ್ರತಸ್ಥನಾಗಿ,

ತಂದೆತಾಯಿಗಳನ್ನು ದೇವರೆಂದು ಭಾವಿಸುವನಾಗಿ, ವಿಷಯೆ ಚಂಪಕಮಾಲಿನಿಯರ ಪತಿಯಾಗಿ, ಪ್ರೌಢವಯಸ್ಸಿನಲ್ಲಿ ಪದ್ಮಾಕ್ಷ ಮಕರಧ್ವಜರ ತಂದೆಯಾಗಿ, ಕುಂತಳ ಮತ್ತು ಚಂದನಾವತಿಯ ಅಧಿಪತಿಯಾಗಿ–ಹೀಗೆ ಸಕ್ರಮವಾಗಿ ಬೆಳೆದ ಚಂದ್ರಹಾಸನ ಪರಿಪೂರ್ಣ ಜೀವನಚಿತ್ರವು ನಮ್ಮನ್ನು ಆಕರ್ಷಿಸುತ್ತದೆ. ತನ್ನ ತಪಸ್ವೀ (ಭಕ್ತಿಶ್ರದ್ಧೆ) ಶೀಲವನ್ನು ಕಾಯ್ದುಕೊಂಡುಬಂದ ಚಂದ್ರಹಾಸನ ಪಾತ್ರವು ಅವಿಸ್ಮರಣೀಯ. ಪರಮಾತ್ಮನನ್ನು ನಂಬಿದ ಭಕ್ತನನ್ನು ಪರಮಾತ್ಮ ಎಷ್ಟು ಬಗೆಯಿಂದ ರಕ್ಷಿಸುತ್ತಾನೆ ಎಂಬುದಕ್ಕೆ ಈ ಕಥಾನಕವೇ ಸಾಕ್ಷಿ.

ಕೊನೆಯದಾಗಿ ಸಂಧಿ ೩೨ ರಲ್ಲಿ ದುಶ್ಶಳೆಯ ಮಗನ ಪಾತ್ರವು ಕಾಣಿಸಿಕೊಳ್ಳುತ್ತದೆ. ಇವನಿಗೆ ಹೆಸರಿಲ್ಲ. ಅರ್ಜುನನ ಸೇನೆ ತನ್ನ ನಗರದತ್ತ ಬಂದ ಸುದ್ದಿಯನ್ನು ಕೇಳಿ ಅವನು **ಮಡಿದನು** ಎಂದು ಸಂ.ಜೈ.ಭಾ. ವರ್ಣಿಸುತ್ತದೆ. ಕ್ಷತ್ರಿಯ ವಂಶಸಂಭವನಾದ ಬಾಲಕನು ಇಷ್ಟು ಅಂಜುಬುರುಕನಿರುವುದು ಸಾಧ್ಯವೆ? ಸರಿಯೆ? ಎಂಬ ಪ್ರಶ್ನೆ ಕವಿ ಲಕ್ಷ್ಮೀಶನಿಗೆ ಬಂದಿರಬೇಕು. ಆದುದರಿಂದ ಅವನ ಕಾವ್ಯದಲ್ಲಿ ದುಶ್ಶಳೆಯ ಮಗನು **ಮೈಮರೆ**ಯುತ್ತಾನೆ. ಇದು ಒಂದು ವೇಳೆ ಬಾಲಸ್ವಭಾವಕ್ಕೆ ಸಹಜವೆಂದು ತೋರುವಂತಿದೆ.

ಕವಿ ಲಕ್ಷ್ಮೀಶನು ಪ್ರತಿಯೊಂದು ಪಾತ್ರವನ್ನು ಚಿತ್ರಿಸುವಾಗ ವಿವರಗಳತ್ತ ಹೆಚ್ಚು ಲಕ್ಷವನ್ನು ಪೂರೈಸುತ್ತಾನೆ, ಮತ್ತು ಪಾತ್ರಪೋಷಣೆಗೆ ತಕ್ಕಂತೆ ಕಥನದಲ್ಲಿ, ಕಥಾನಕದಲ್ಲಿ ವ್ಯತ್ಯಾಸ ಮಾಡಿಕೊಳ್ಳುತ್ತಾನೆ ಎಂದು ಕಂಡುಬರುತ್ತದೆ.

## ಮುನಿಗಣ

ಈ ಕಾವ್ಯದಲ್ಲಿ ಸುಮಾರು ೩೮ ಋಷಿಗಳ ಉಲ್ಲೇಖ ಬರುತ್ತದೆ. ಅಶ್ವಮೇಧ ಯಜ್ಞವನ್ನು ಪ್ರಾರಂಭಿಸುವಾಗ ೨೬ ಋಷಿಗಳ ಹೆಸರುಗಳನ್ನು ಹೇಳಲಾಗಿದೆ (೩೩. ೩೯–೪೦). ಬಕದಾಲ್ಭ್ಯನಿಗೆ ಬ್ರಹ್ಮತ್ವಪದವಿ ಪ್ರಾಪ್ತವಾಗಿ ವ್ಯಾಸರು ಆಚಾರ್ಯರಾಗುತ್ತಾರೆ. ೮ ಜನ ಋಷಿಗಳು ರಕ್ಷಕರಾಗಿ ಉಳಿದ ೧೬ ಜನ ಋತ್ವಿಜರಾಗುತ್ತಾರೆ.

ಈ ೩೮ ಋಷಿಗಳ ಗಣದಲ್ಲಿ ೩೦ ಪಾತ್ರಗಳು ನಾಮಮಾತ್ರ ಪಾತ್ರಗಳು. ಅವರ ಹಿಂದುಮುಂದಿನ ಕಥಾನಕವಾಗಲಿ, ಅವರ ಪಾತ್ರದ ಮೂಲಕ ಮೂಲ ಕಥಾನಕಕ್ಕಾಗಲಿ ಪುಷ್ಟಿ ದೊರೆಯುವುದಿಲ್ಲ. ಯಜ್ಞಕಾರ್ಯಕ್ಕೆ ಅನೇಕ ಋಷಿಗಳು ಬೇಕು, ಅವರಿಂದಲೇ ಯಜ್ಞಕ್ಕೆ ವೈಭವ. ಅಂತೆಯೆ ಅವರು ಅಲ್ಲಿ ಇದ್ದಾರೆ.

ಜೈಮಿನಿ ಮುನಿ ಅಶ್ವಮೇಧ ಕಥಾನಕವನ್ನು ಮೊದಲಿಂದ ಕೊನೆಯವರೆಗೆ ಜನಮೇಜಯನಿಗೆ ಹೇಳುತ್ತಾನೆ, ಎಂದು ಸಂಧಿ ೨ ಪದ್ಯ ೩ರಲ್ಲಿ ಬಂದಿದೆ. ಎಂದರೆ ಜೈಮಿನಿಯ ಪಾತ್ರ ಕೇವಲ ಕಥಾನಿರೂಪಕನದಾಗಿದೆ. ಕಥಾಭಾಗದಲ್ಲಿ ಅವನ ಕಾರ್ಯವಿಲ್ಲ.

ಎರಡನೆಯವನೆ ವ್ಯಾಸಮುನಿ. ಅವನ ದರ್ಶನವೂ ನಮಗೆ ಎರಡನೆಯ ಸಂಧಿಯಲ್ಲಿ ಆಗುತ್ತದೆ. ಪಾಂಡವರಿಗೆ ಗುರುಸ್ಥಾನದಲ್ಲಿದ್ದು ಮಾರ್ಗದರ್ಶನ ಮಾಡುವುದೇ

ಈತನ ಶೀಲವಾಗಿದೆ. ಗೋತ್ರಹತ್ಯಾಪಾತಕವನ್ನು ಕಳೆಯಲು ಏನು ಮಾಡಬೇಕು? ಯಜ್ಞಾಶ್ವವನ್ನು, ಧನವನ್ನು ಎಲ್ಲಿಂದ ಹೇಗೆ ಪಡೆಯಬೇಕು ಎಂಬುದನ್ನೆಲ್ಲ ವ್ಯಾಸನೇ ಧರ್ಮನಿಗೆ ತಿಳಿಸುತ್ತಾನೆ. ನಾಲ್ಕು ವರ್ಣಗಳವರ ಕರ್ಮಗಳಾವವು, ಸ್ತ್ರೀಧರ್ಮ ಯಾವುದು, ಉತ್ತಮ-ಅಧಮ ಸ್ತ್ರೀಯರ ಲಕ್ಷಣಗಳಾವವು, ಲಕ್ಷ್ಮಿ ಎಂಥವನಲ್ಲಿ ನೆಲೆಗೊಂಡು ನಿಲ್ಲುತ್ತಾಳೆ ಮೊದಲಾದ ವಿಷಯಗಳನ್ನು ಕುರಿತು ವ್ಯಾಸನು ಧರ್ಮರಾಯನಿಗೆ ಧರ್ಮೋಪದೇಶ ಮಾಡುತ್ತಾನೆ. ಕೊನೆಗೆ ಯಜ್ಞಕಾರ್ಯದಲ್ಲಿಯೂ 'ಇನ್ನು ೬೪ ದಂಪತಿಗಳು ಗಂಗಾಜಲವನ್ನು ತರಲಿ' ಎಂಬ ಮಾತನ್ನು ವ್ಯಾಸನೇ ಹೇಳುತ್ತಾನೆ. ಇದರಿಂದ ವ್ಯಾಸನದು ಧರ್ಮಕರ್ಮಾದಿಗಳ ವಿಷಯದಲ್ಲಿ ಮಾರ್ಗದರ್ಶಕ ಪಾತ್ರ ಎಂಬುದನ್ನು ಒಪ್ಪಬೇಕಾಗುತ್ತದೆ. ಕರ್ಮಪ್ರಧಾನತ್ವವನ್ನು ಆತನು ಬೋಧಿಸುವಂತಿದೆ. ಕನ್ನಡ ಮತ್ತು ಸಂಸ್ಕೃತ ಜೈ.ಭಾ. ಎರಡರಲ್ಲಿಯೂ ಈ ಪಾತ್ರ ಒಂದೇ ರೀತಿಯಾಗಿ ಅರಳಿದೆ.

ನಾರದ ಮುನಿಗಳ ಪಾತ್ರ ಈ ಕಾವ್ಯದಲ್ಲಿ ಅನೇಕ ಕಡೆಗಳಲ್ಲಿ ಬಂದು ಸುಳಿಯುತ್ತದೆ. ಅವನ ವೃತ್ತಿಯೇ ಅದು: ಸಂಚರಣಶೀಲ ನಾರದ. 'ಎರಡನೆಯ ದಿನಮಣಿಯ ತೇಜದಂ'ತಿರುವ 'ಕ್ರೀಡೆಯಿಂ ಮಾಧವನುತಪ್ರಸಂಗ'ದಲ್ಲಿ ತಲ್ಲೀನರಾಗಿರುವ ನಾರದ ಮುನಿ ಮರುತ್ತನ ಕಥಾನಕದಲ್ಲಿ ಅವನ ಯಜ್ಞಕ್ಕೆ ಪುರೋಹಿತರನ್ನು ಹೇಗೆ ದೊರಕಿಸಬೇಕು ಎಂಬುದನ್ನು ಅವನಿಗೆ ವಿವರಿಸುತ್ತಾನೆ. ರಾಮ-ಕುಶಲವರ ಯುದ್ಧಸಮಾಚಾರವನ್ನು ವಾಲ್ಮೀಕಿಗೆ ತಿಳಿಸುವಾಗ, ವೀರವರ್ಮನ ಮಗಳಾದ ಮಾಲಿನಿಯ ನಿಷ್ಠೆಯನ್ನು ಯಮನಿಗೆ ತಿಳಿಸುವಾಗ, ಕರ್ಣಪೀಯೂಷವಾದ ಚಂದ್ರಹಾಸಕಥಾನಕವನ್ನು ಅರ್ಜುನನಿಗೆ ಹೇಳುವಾಗ, ಮತ್ತು ಸತ್ಯಭಾಮೆ ಜಾಂಬವತಿಯರ ಪತಿಭಕ್ತಿಯನ್ನು ಪರೀಕ್ಷಿಸುವಾಗ ನಾರದನ ಪಾತ್ರವು ಪ್ರಮುಖವಾದುದು. ಕವಿ ಲಕ್ಷ್ಮೀಶನು ನಾರದ ಪಾತ್ರದ ಶೀಲವನ್ನು 'ಧರ್ಮದ ಸಹಾಯಕ್ಕೆ ಮುಂದುವಱಿವಮರಮುನಿ ನಾರದಂ ತಿಳಿದನೀ ವೃತ್ತಾಂತಮಂ ಮನದೊಳು' (೨೭.೧೭) ಎಂಬಲ್ಲಿ ಸಂಗ್ರಹಿಸಿದ್ದಾನೆ. ಈ ಮಾತು ಸಂ.ಜೈ.ಭಾ. ದಲ್ಲಿ ಇಲ್ಲ.

ಮಾಲಿನಿ ಮತ್ತು ಯಮ ಇವರಲ್ಲಿ ವಿವಾಹವಾಗಬೇಕಾಗಿದೆ. ಆ ಕಲ್ಯಾಣ ಘಟಿಸುವುದಕ್ಕೆ ಯಮ ವೀರವರ್ಮರಲ್ಲಿಗೆ ಎಡತಾಕುತ್ತಾನೆ. ಮರುತ್ತನಿಗೆ ಯಜ್ಞಕ್ಕೆ ವಿಘ್ನವೂ ಅಪಮಾನವೂ ಉಂಟಾಗಿ ಕ್ಲೇಶ ತಲೆದೋರಿದೆ–ಅಲ್ಲಿಗೆ ಧಾವಿಸಿ ಆತಂಕವನ್ನು ನಿವಾರಿಸುತ್ತಾನೆ. ರಾಮ ಕುಶಲವರ ಯುದ್ಧವಾರ್ತೆ ವಾಲ್ಮೀಕಿಗೆ ತಿಳಿಯದಿದ್ದರೆ ಅನರ್ಥವಾದೀತು, ತಿಳಿದೂ ತಿಳಿದೂ ತಾನು ಸುಮ್ಮನಿದ್ದರೆ ಅಧರ್ಮ ಅದಕ್ಕಾಗಿ ವರುಣಲೋಕಕ್ಕೆ ಸುದ್ದಿಯನ್ನು ಒಯ್ಯುತ್ತಾನೆ. ಧರ್ಮಕ್ಕೆ ಸಹಾಯ ಮಾಡುವ ಅವನ ಶೀಲ ಇದು. ಸಂಧಿ ೩೩ರಲ್ಲಿ ಶ್ರೀಕೃಷ್ಣನ ಸರ್ವವ್ಯಾಪಕತ್ವವನ್ನು ಸತ್ಯಭಾಮೆ ಮತ್ತು ಜಾಂಬವತಿಯರ ಜೀವನದಿಂದ ಕಂಡು, ಶ್ರೀಕೃಷ್ಣನ ಮನುಜಲೀಲೆಯನ್ನು ನೋಡಿ, ಬೆರಗಾಗಿ ನಿಗಮ ಸೂಕ್ತಗಳಿಂದ ಕೃಷ್ಣನನ್ನು ಸ್ತುತಿಸುತ್ತಾನೆ. 'ಕಲಹಪ್ರಿಯ ನಾರದನು' ಎಂಬ

ಮಾತನ್ನು ಅಳಿಸಿ ಜೈಮಿನಿ ಭಾರತವು ಇವನು 'ಧರ್ಮಸಹಾಯಕ' ಎಂದು ತೋರಿಸಿದೆ.

ಸಂಧಿ ೧೦ರಲ್ಲಿ ಬರುವ ಉದ್ದಾಲಕ ಮತ್ತು ಕೌಂಡಿನ್ಯ ಮುನಿಗಳು ಚಂಡಿಯ ಕಥಾನಕಕ್ಕೆ ಸಂಬಂಧಿಸಿದವರು. ಆದರೆ ಈ ಕಥಾನಕವನ್ನು ಹೇಳಿದ ಸೌಭರಿಮುನಿಯ ಪಾತ್ರ ಮಹತ್ತ್ವದ್ದಾಗಿದೆ. ಶ್ರೀಕೃಷ್ಣನೆಂಬುದು ಸುರಧೇನು, ಅದು ಪಾಂಡವರ ಕೊಟ್ಟಿಗೆಯಲ್ಲಿಯೇ ಇದೆ, ಅದನ್ನು ಬಿಟ್ಟು ಅವರು ಗರ್ದಭದ ಬೆನ್ನುಹತ್ತಿದ್ದಾರೆ ಎಂದು ಸೌಭರಿ ಯಜ್ಞವನ್ನೇ ಟೀಕಿಸುತ್ತಾನೆ. ಈ ಟೀಕೆಯ ಮರ್ಮ ಶ್ರೀಕೃಷ್ಣ ಭಕ್ತಿಯ ಅಗ್ಗಳಿಕೆ. ಈ ಟೀಕೆಗೆ ಅರ್ಜುನನು ಕೊಟ್ಟ ತಕ್ಕ ಉತ್ತರವು ಲಕ್ಷ್ಮೀಶನಿಗೇ ಹೊಳೆದಿದೆ. ಪಾಂಡವರಿಗೂ ಶ್ರೀಕೃಷ್ಣನಿಗೂ ಇರುವ ನಿಕಟ ಸಂಬಂಧವನ್ನು, ಅವರ ಶ್ರೀಕೃಷ್ಣಭಕ್ತಿಯನ್ನು ಎತ್ತಿ ತೋರಿಸುತ್ತದೆ ಆ ಉತ್ತರ:

'ಹರಿಯನು ಉಳಿದು ಆವು ಬದುಕುವರಲ್ಲ'
'ಧರ್ಮಸೂನು ಆ ಮುರಾರಿಯ ನಿರೂಪದಿಂ ತೊಡಗಿ ಮಾಡುವನು ಈ ಕ್ರತುವನು'

ಎಂದು ಲಕ್ಷ್ಮೀಶನ ಅರ್ಜುನನು ಸೌಭರಿಗೆ ಹೇಳುತ್ತಾನೆ. ಸಂ.ಜೈ.ಭಾ.ದಲ್ಲಿ ಈ ಮಾತುಗಳಿಲ್ಲ. ಲಕ್ಷ್ಮೀಶನು ಈ ಸಂವಾದವನ್ನು ನಿರ್ಮಿಸಿ ಸೌಭರಿ ಮತ್ತು ಪಾಂಡವರ ಕೃಷ್ಣಭಕ್ತಿಯನ್ನು ಅರಳಿಸಿ ತೋರಿಸಿದ್ದಾನೆ.

ಸಂಧಿ ೧೮ ರಿಂದ ೨೧ರವರೆಗೆ ವಾಲ್ಮೀಕಿ ಮುನಿಯ ಪಾತ್ರವು ಬರುತ್ತದೆ. 'ಭೂರಿ ಶೋಕಾರ್ತರಾಗಿರ್ದರಂ ಕಂಡು ಸುಮ್ಮನೆ ಪೋಪನಲ್ಲ' (೧೯.೩೯) ವಾಲ್ಮೀಕಿ. ಇದು ಅವನ ಶೀಲ. ಆ ಶೀಲಕ್ಕೆ ತಕ್ಕ ಕರುಣಮೂರ್ತಿ: 'ಎಲೆ ತಾಯೆ, ನೀನಾವಳೌ? ಕಂಡ ಕುಱುಪಾಗಿರ್ಪುದು. ಭೀರು, ಹೇಳೌ ಹೆದರಬೇಡ–ವಾಲ್ಮೀಕಿನಾಂ' ಎನ್ನುತ್ತಾನೆ. ಈ ಅಂತಃಕರಣದ ಮಾತಿನ ರೀತಿ ಸಂ.ಜೈ.ಭಾರತದಲ್ಲಿ ವ್ಯಕ್ತವಾಗಿಲ್ಲ. 'ವಾಲ್ಮೀಕಿ ನಾಂ' ಎಂಬುದನ್ನು ಕೇಳಿದಾಗಲೇ ಆ ವ್ಯಕ್ತಿಯ ಗುಣಶೀಲಸ್ವಭಾವಗಳು ಮೂರ್ತಿಗೊಳ್ಳುತ್ತವೆ ಸೀತೆಯಲ್ಲಿ. ಇದರಂತೆಯೇ ಕುಶಲವರು ಆಶ್ರಮದಲ್ಲಿ ಬೆಳೆದ ಬಗೆಯನ್ನೂ ಸಂ.ಜೈ.ಭಾ. ವಿವರಿಸುವುದಿಲ್ಲ. ಲಕ್ಷ್ಮೀಶನು ಅದನ್ನು ಸ್ವಾಭಾವಿಕವಾದ ಸಹಜತೆಯಿಂದ ಬಣ್ಣಿಸುತ್ತಾನೆ. ಜಪತಪಸಮಾಧಿಗಳ ಕಾಲವನ್ನು ಮರೆತು ಮಕ್ಕಳೊಡನೆ ಆಡುತ್ತಿದ್ದ ವಾಲ್ಮೀಕಿಯ ವಾತ್ಸಲ್ಯಭಾವವನ್ನು ಚಿತ್ರರೂಪದಿಂದ ಲಕ್ಷ್ಮೀಶ ತೋರಿಸುತ್ತಾನೆ:

ಬಾಲದುಡಿಗೆಗಳೆಲ್ಲಮಂ ತುಡಿಸಿ ನೋಡುವಂ
ಬಾಲಲೀಲೆಗಳನಾಡಿಸಿ ಮುದ್ದು ಮಾಡುವಂ
ಬಾಲಕರ್ಗಿನಿದಾದ ವಸ್ತುಗಳ ನೀಡುವಂ ತನ್ನ ತೊಡೆಮುಡಿಲೊಳಿಟ್ಟು
ಲಾಲಿಸುವನಾವಗಂ ಜಪತಪಸಮಾಧಿಗಳ
ಕಾಲಮಂ ಬಗೆಯದೆ ಮುನೀಶ್ವರಂ ಕುಶಲವರ
ಮೇಲಣಕ್ಕಱಿಂದಿರ್ದನಾಶ್ರಮದೊಳುತ್ಸವಂ ಪೆರ್ಚಿದುದು ದಿನದಿನದೊಳು
(೧೯.೪೭)

ಇಲ್ಲಿಯ ವಾಲ್ಮೀಕಿಯ ಅಂತಃಕರಣ, ಪಿತೃಹೃದಯ ಅವಿಸ್ಮರಣೀಯ. ಮುನಿಗಳಲ್ಲಿರ

ಬೇಕಾದ ನಯ, ಶಾಂತಿ, ಕರುಣೆ, ವಾತ್ಸಲ್ಯ ಎಂಬ ಗುಣಗಳೆಲ್ಲ ಮೈಗೊಂಡು ನಿಂತಂತಿದೆ, ಲಕ್ಷ್ಮೀಶನ ವಾಲ್ಮೀಕಿಪಾತ್ರ.

ಕಾವ್ಯದ ಕೊನೆಗೆ ಬರುವ ಮುನಿಪಾತ್ರಗಳಲ್ಲಿ ಬಕದಾಲ್ಭ್ಯ ಮತ್ತು ಧೌಮ್ಯ ಮುನಿಗಳ ಪಾತ್ರಗಳು ಪ್ರಮುಖವಾಗಿವೆ. ಪ್ರಳಯ ಕಾಲದಲ್ಲಿಯ ಬಾಲಕೃಷ್ಣನಿಂದ ಸಹಸ್ರಶೀರ್ಷ ಪುರುಷನವರೆಗೆ ಕೃಷ್ಣನ ಅನೇಕ ದರ್ಶನಗಳನ್ನು ಪಡೆದ ಬಕದಾಲ್ಭ್ಯನು ಶ್ರೀಕೃಷ್ಣನನ್ನು ಪ್ರತ್ಯಕ್ಷವಾಗಿ ಕಾಣುವುದಕ್ಕಾಗಿಯೆ ಹಾದಿಕಾಯುತ್ತ ಧ್ಯಾನಮಗ್ನನಾಗಿ ಜಲಧಿಯ ಮಧ್ಯದಲ್ಲಿ ನಿಂತಿದ್ದು, ಕುದುರೆಯ ಹಿಂದಿನಿಂದ ಕೃಷ್ಣನೊಂದಿಗೆ ಅಲ್ಲಿಗೆ ಬಂದಿದ್ದ ಅರ್ಜುನನಿಗೆ ಆ ಮುನಿವರನು ಹೀಗೆಂದು ಹೇಳುತ್ತಾನೆ—

'ಇಂದು ನಿಮ್ಮೈವರಂ ಕೂಡಿಕೊಂಡಿಲ್ಲಗೈ
ತಂದು ಕರುಣಿಸಿದನೀ ಹರಿ ಕೃಷ್ಣರೂಪದಿಂ
ಸಂದುದಿನ್ನೀತನೆ ಸದಾಶ್ರಯಂ ಮಱವುಗುವೊಡೆನಗೆ...' (೩೨-೩೩)

ಮತ್ತು

'ಸದಾವಾಸಕೀಹರಿಯ ದೇಹಮಿದು ಗೇಹಮೆನಗೆ' (೩೨-೩೫)

ಈ ದೃಢನಿಶ್ಚಯದಿಂದ ಬಕದಾಲ್ಭ್ಯನು ಧ್ಯಾನವನ್ನು ಮುಗಿಸಿ ಅವರೊಡನೆ ಹೊರಡುತ್ತಾನೆ ಯಜ್ಞಕ್ಕೆ. ಸಂ.ಜೈ. ಭಾರತದಲ್ಲಿ 'ಯಾವ ಮನೆಯಲ್ಲಿ ನಿತ್ಯಮುಕ್ತಿ ಎಂಬ ಗೃಹಿಣಿ ಇರುವಳೋ ಅದೇ ನನ್ನ ಮನೆ' ಎಂಬುದಾಗಿ ಸಂಸಾರಿಯ ಮಾತಿನಂತೆ ಬಕದಾಲ್ಭ್ಯನ ಮಾತಿದೆ (೬೦-೩೨). ಇದನ್ನೇ ಲಕ್ಷ್ಮೀಶನು 'ಸದಾವಾಸಕೀ ಹರಿಯ ದೇಹಮಿದು ಗೇಹಮೆನಗೆ' ಎಂದು ಪರಿವರ್ತಿಸಿದ್ದಾನೆ. ನಿತ್ಯಮುಕ್ತಿ ಎಂದರೆ ಶ್ರೀಹರಿಯೆ. ಆದುದರಿಂದ ನಿತ್ಯಮುಕ್ತಿಯನ್ನು 'ಗೃಹಿಣಿ'ಯಲ್ಲಿ ಆರೋಪಿಸಿ ಹೇಳುವುದನ್ನು ಬಿಟ್ಟು ಹರಿ ಎಂದು ಮಾತ್ರ ಲಕ್ಷ್ಮೀಶ ಹೇಳುತ್ತಾನೆ. ಈ ಬದಲಾವಣೆಯಿಂದ ಬಕದಾಲ್ಭ್ಯನ ಪಾತ್ರ ಇನ್ನಷ್ಟು ತೇಜಃಪುಂಜವಾಗುತ್ತದೆ. ಇಂತಹ ವರಯೋಗಿಯ ಮಾತು ಭೋಗಿಯಂತಿರಬಾರದು, ರಾಗಿಯಂತಿರಬಾರದು, ತ್ಯಾಗಿಯಂತಿರಬೇಕು, ವಿರಾಗಿಯಂತಿರಬೇಕು ಎಂದೇ ಕವಿ ಲಕ್ಷ್ಮೀಶನ ಸೂಕ್ಷ್ಮದೃಷ್ಟಿಗೆ ಕಂಡಿದೆ. ಹೀಗೆ ಸಂಸ್ಕೃತ ಮೂಲದ ಪದ ಪದವನ್ನೂ ವಿಮರ್ಶಿಸಿ ನೋಡಿ,ಯುಕ್ತಾಯುಕ್ತತೆಯನ್ನು ನಿರ್ಣಯಿಸಿ ಕವಿ ಲಕ್ಷ್ಮೀಶನು ಕನ್ನಡಿಸಿದ್ದಾನೆ. ಈ ಮಾತು ಅವನ ಕೃತಿಯಲ್ಲಿ ಅಡಿಗಡಿಗೂ ಮನವರಿಕೆಯಾಗುತ್ತದೆ. **ಆದುದರಿಂದಲೇ ಕ.ಜೈ.ಭಾರತವು ಸಂ.ಜೈ. ಭಾರತದ ಭಾಷಾಂತರವಾಗಲಿ ಅನುವಾದವಾಗಲಿ ಅಲ್ಲ, ಭಾವವಿಕಾಸದ ಕೃತಿಯಾಗಿದೆ.**

ಜೈಮಿನಿ ಭಾರತದ ಎಲ್ಲ ಪಾತ್ರಗಳನ್ನು ಲಕ್ಷ್ಮೀಶನು ಯಾವ ದೃಷ್ಟಿಯಿಂದ ಕಂಡಿದ್ದಾನೆ ಎಂಬುದನ್ನು ಸಂಗ್ರಹಿಸುವಾಗ ೩೪. ೩೫ರಲ್ಲಿ ಧೌಮ್ಯನ ವ್ಯಕ್ತಿತ್ವ ವಿಶೇಷವನ್ನು 'ಧೌಮ್ಯನ ವಿಚಾರಮಂ' ಎಂಬ ಮಾತಿನಿಂದ ತಿಳಿಸುತ್ತಾನೆ. ಅಶ್ವದ ಎಡಗಿವಿಯಿಂದ ಕ್ಷೀರಧಾರೆ ಹೊರಡುವಿಕೆ, ಅಶ್ವವು ಕಪ್ಪುರದ್ದಾಗಿರುವಿಕೆ ಇತ್ಯಾದಿ ವಿಚಾರಗಳ ಜ್ಞಾನ ಧೌಮ್ಯನಿಗೆ ಮಾತ್ರವಿತ್ತು. ಅದರಂತೆ ಅವನು ಮಾಡಿದ ಅದ್ಭುತಪ್ರಯೋಗ

ನನ್ನು ಕಂಡು ಎಲ್ಲರೂ ಅವನ ವಿಚಾರವನ್ನು ಹೊಗಳುತ್ತಾರೆ.

'ಕಶ್ಯಪ ವಶಿಷ್ಠಾದಿ ಪರಮಋಷಿಮುಖ್ಯರಾ
ಲಕ್ಷ್ಯಮಿಲ್ಲದೆ ಮಾಡುವಧ್ಯಾನಕೊಮ್ಮೆಯುಂ
ದೃಶ್ಯಮಿಲ್ಲದ ಚಿನ್ಮಯಾನಂದರೂಪನೀ ಕುಂತೀಕುಮಾರಕರ್ಗೆ
ವಶ್ಯನಾಗಿಹನೆಂತೊ! ಶಿವಶಿವಾ! ನೀಲಮೇ
ಘಶ್ಯಾಮಲನ ಲೀಲೆ ಪೊಸತು (೧೩-೨೩)

ಎಂದು ಸುರರು ಆಡಿದ ವಿಷಯವನ್ನೇ ನಾವು ಇಲ್ಲಿಯ ಮುನಿಗಳ ಪಾತ್ರಚಿತ್ರಣದ ವಿಷಯವಾಗಿಯೂ ಹೇಳಬೇಕಾಗುತ್ತದೆ. ಇಲ್ಲಿಯ ಎಲ್ಲ ಮುನಿಗಳಿಗೆ (ವಾಲ್ಮೀಕಿಯನ್ನು ಬಿಟ್ಟು) ಶ್ರೀಕೃಷ್ಣನ ಮಹಿಮೆ ಗೊತ್ತು. ಅವರು ಅವನ ಧ್ಯಾನದಲ್ಲಿಯೇ ನಿರತರಾಗಿದ್ದಾರೆ. ಆದರೆ ಶ್ರೀಕೃಷ್ಣನು ಮಾತ್ರ ಕುಂತೀಕುಮಾರರೊಡನೆ ಸಲಿಗೆಯಿಂದ ನಲಿದಾಡುತ್ತಿದ್ದಾನೆ. ಇದೇ ಶ್ರೀಕೃಷ್ಣನ ಮಾನವಲೀಲೆ. ಮಾನವಲೀಲಾವತಾರಿಯಾದ ಶ್ರೀಕೃಷ್ಣನನ್ನು ಕಂಡು ಅಚ್ಚರಿಪಡುವುದೇ ಈ ಕಾವ್ಯದ ಮುನಿಗಳ ಶೀಲವಾಗಿದೆ. ಈ ಆಶ್ಚರ್ಯದಿಂದ ಮುನಿಗಳೆಲ್ಲ ಜ್ಞಾನಿಗಳಾಗಿ, ಕೃಷ್ಣಭಕ್ತರಾಗಿ, ಅವನು ನೆರವೇರಿಸುವ ಯಜ್ಞದಲ್ಲಿ ಭಾಗವಹಿಸುತ್ತಾರೆ.

## ನಾಯಕ ಪಾತ್ರ—ಶ್ರೀಕೃಷ್ಣ

ಒಲಿದವರನುಜ್ಜೀವಿಸುವ ಬಗೆ
ಬಲುಹು ಮುರಮಥನಂಗೆ ಮುನಿದೊಡೆ
ತಲೆಯ ಬರಹವ ತೊಡೆವನಲ್ಲದೆ ಬಳಿಕ ಸೈರಿಸನು.

—ಕುಮಾರವ್ಯಾಸ

ಇದು ಕುಮಾರವ್ಯಾಸನು ವರ್ಣಿಸಿದ ಶ್ರೀಕೃಷ್ಣಸ್ವರೂಪ. ಅವನು 'ಒಲಿದವರನ್ನು ಉಜ್ಜೀವಿಸುವ ಬಗೆ ಬಲುಹುಳ್ಳವನು'; ಹಾಗೆಯೆ 'ಮುನಿದರೆ ತಲೆಯ ಬರಹವನ್ನು ತೊಡೆಯುವಂಥವನು.' ಎಂದರೆ ಅವನ ಮಹಾಭಾರತ ಕಾವ್ಯದಲ್ಲಿ ಶ್ರೀಕೃಷ್ಣನು ಮಾಡಿದ ಅನೇಕರ ಸಂಹಾರವು-ಕುರುಕ್ಷೇತ್ರವಂತೂ ಪ್ರಳಯದ ನಾಟ್ಯರಂಗ-ವರ್ಣಿತವಾಗಿದೆ. ಪರಮಾತ್ಮನ ದುಷ್ಟಮರ್ದನ ಕಾರ್ಯವೇ ಆ ಕಾವ್ಯದಲ್ಲಿ ಮುಖ್ಯ. ಆದರೆ ಜೈಮಿನಿ ಭಾರತದಲ್ಲಿ, ಶಿಷ್ಟ ಪರಿಪಾಲನೆಯ, 'ಒಲಿದವರನುಜ್ಜೀವಿಸುವ ಬಗೆಯ' ಪರಮಾತ್ಮಸ್ವರೂಪದರ್ಶನವೇ ಮುಖ್ಯ. ಇಲ್ಲಿ ವಿರೋಧಿಗಳ ಸಂಹಾರದ ಚಿತ್ರಣವಿಲ್ಲ; ಅವನು ಮುನಿವ ಮಾತೇ ಇಲ್ಲಿಲ್ಲ. ಸರ್ವಕರ್ತೃವಾಗಿಯೂ ಯಜ್ಞಸ್ವರೂಪನಾಗಿಯೂ ಕೂಡ ಮಾನವಲೀಲೆಯಿಂದ ನರನೊಡನೆ ನರನಾಗಿ ಚರಿಸುವ ಶ್ರೀಕೃಷ್ಣನು ಇಲ್ಲಿ ಪ್ರಶಸ್ತನಾಗಿದ್ದಾನೆ.

'ಎಲೆ ದೇವ! ತವಕಾರುಣ್ಯ
ಜೀಮೂತಮಿರೆ ಬೆಳೆಯದಿರ್ದಪುದೆ ಪಾರ್ಥಪ್ರತಾಪದ ಪೊಲಂ? ತಿಳಿಯಲು
ರೋಮರೋಮದೊಳಿಡಿದಜಾಂಡಕೋಟಿಗಳಿಹ ಮ

ಹಾಮಹಿಮೆ ತಾನೆತ್ತ? ನರನ ಸಂಗಡ ತಿರುಗು
ವೀ ಮನುಜತನವೆತ್ತ? ಭಕ್ತರಂ ಪಾಲಿಪುದೆ ನಿನ್ನ ಬಾಳುವೆ (೩೩–೫)

ವಿರೋಧ ಪರಿಹಾರದ ವಿವಿಧಪ್ರಕಾರಗಳ ಚಿತ್ರಣವು ಜೈಮಿನಿ ಭಾರತದಲ್ಲಿದೆ. ಯುದ್ಧವನ್ನು ತಪ್ಪಿಸುವ ಕಡೆಗೆ, ಸೌಹಾರ್ದಶಾಂತಿಯ ಕಡೆಗೆ ಎಲ್ಲ ಘಟನೆಗಳ ಒಲವು. ಅರ್ಜುನ ವೃಷಕೇತು ಮುಂತಾದ ಮಡಿದವರನ್ನು ಎಬ್ಬಿಸುವ ಸುಖಸಂತೋಷವಲ್ಲದೆ, ದುಷ್ಟಬುದ್ಧಿಯುಂಥವನಿಗೂ ಪುನರುಜ್ಜೀವನವಿದೆ ಇಲ್ಲಿ. ಅನುಸಾಲ್ವ ಭೀಷಣರಂತಹ ಅಸುರರ ಜೀವನದಲ್ಲಿ ಉನ್ನತಿಯಾಗುವಂತೆ, ಉಜ್ಜೀವನದತ್ತ ಅವರ ಮನಸ್ಸು ಹರಿಯು ವಂತೆ ಶ್ರೀಕೃಷ್ಣನು ಮಾಡುತ್ತಾನೆ. ಧರ್ಮಸಂಸ್ಥಾಪಕನಾದ ಶ್ರೀಕೃಷ್ಣನು ಜೈಮಿನಿ ಭಾರತದಲ್ಲಿ 'ಪಾಂಡವಪ್ರತಿಷ್ಠಾಪನಾಚಾರ್ಯ' ನಾಗುತ್ತಾನೆ. ಪಾಂಡವರಲ್ಲಿ ಧರ್ಮ (ಯುಧಿಷ್ಠಿರ) ಸ್ವಾಮಿತ್ವವಿದೆ. ದುಷ್ಟಸಂಹಾರಪರ್ವ ಮುಗಿದು ಭಕ್ತರಕ್ಷಣೆಯ, ಪತಿತೋದ್ಧಾರದ ಪರ್ವ ಈ ಕಾವ್ಯದಲ್ಲಿದೆ.

'ಲಕ್ಷ್ಮೀರಮಣನ ಆಸ್ಯಚಂದ್ರವು ಆನಂದವನ್ನೀಯಲಿ' ಎಂಬ ಪ್ರಾರ್ಥನೆಯಿಂದ ಆರಂಭಿಸಿದ ಈ ಕನ್ನಡ ಕಾವ್ಯದಲ್ಲಿ 'ಯದುಕುಲೇಂದ್ರನಂ ಭಜಿಸುವೆಂ ಚಿತ್ತಶುದ್ಧಿಯೊಳ್ ಅರಣ್ಯದೊಳ್' ಎಂಬ ಅಭೀಪ್ಸೆಯನ್ನು ತಳೆದ ವಿಷಾದಯೋಗದ ಧರ್ಮನ ಪಾತ್ರವು ಮೊಟ್ಟಮೊದಲು ನಮ್ಮ ಕಣ್ಣಮುಂದೆ ಸುಳಿಯುತ್ತದೆ. ವೇದವ್ಯಾಸರು ಅಶ್ವಮೇಧ ಯಜ್ಞವನ್ನು ಮಾಡಲು ಹೇಳಿ, ಅದಕ್ಕೆ ಸಹಾಯಮಾರ್ಗವನ್ನು ತೋರಿಸಿ ಎಷ್ಟು ಧೈರ್ಯವನ್ನು ತುಂಬಿದರೂ ಅವನ ವಿಷಾದಯೋಗ ಹರಿಯುವುದಿಲ್ಲ. ಆ ಸಂದರ್ಭದಲ್ಲಿ ಕೃಷ್ಣನು 'ತೊಳಲುತರಸುವ ಬಳ್ಳಿ ಕಾಲ್ತೊಡಕಿದಂತೆ' ಜೈಮಿನಿ ಭಾರತವೆಂಬ ನಾಟ್ಯ ಕಾವ್ಯದ ರಂಗಸ್ಥಳಕ್ಕೆ ಬರುತ್ತಾನೆ.

'ಈ ವಾಜಿಮೇಧಮೇನಚ್ಚರಿಯೆ? ಕೈಕೊಳ್; ಆವಿರ್ದು ನಡಸುವೆವು'

ಎಂದು ಯಜ್ಞಪತಿಯಾದ ಅವನು ಒಪ್ಪಿಗೆ ಕೊಟ್ಟಾಗಲೇ ಧರ್ಮನು ಉತ್ಸಾಹದಿಂದ ಕಾರ್ಯೋದ್ಯುಕ್ತನಾಗುತ್ತಾನೆ. ಆಮೇಲೆ ಕಾವ್ಯದಲ್ಲಿ ಬರುವ ಪಾಂಡವ ಯಾದವ ಪಾತ್ರ ಗಳೆಲ್ಲ ಪಾಂಡವಪ್ರತಿಷ್ಠಾಪನಾಚಾರ್ಯನಾದ ಕಾವ್ಯನಾಯಕನಾದ ಶ್ರೀಕೃಷ್ಣನಿಗೆ ಸಹಾಯಕ ಮತ್ತು ಪೋಷಕ ಪಾತ್ರಗಳು.

ಈ ಕಾವ್ಯದಲ್ಲಿ ನಾಯಕಪಾತ್ರಗಳು ಮೂರು: ೧. ನಾವಿರ್ದು ನಡೆಸುವೆವು ಎಂದು ಸಕಲ ಸೂತ್ರಧಾರಿಯಾಗಿರುವ ಶ್ರೀಕೃಷ್ಣ; ೨. ಲೌಕಿಕ ದೃಷ್ಟಿಯಿಂದ ಯಜ್ಞ ದೀಕ್ಷಿತನಾಗಿರುವ ಯುಧಿಷ್ಠಿರ; ೩. ದಿಗ್ವಿಜಯನಾಯಕನಾದ ಅರ್ಜುನ. ಇವರಲ್ಲಿ ಯುಧಿಷ್ಠಿರನು ಯಜ್ಞಾರಂಭದಲ್ಲಿಯೂ ಯಜ್ಞಸಮಾಪ್ತಿಯಲ್ಲಿಯೂ ಬರುತ್ತಾನೆ; ಅರ್ಜುನನು ಯಜ್ಞಾಶ್ವದ ಪರಿಭ್ರಮಣಕಾಲದಲ್ಲಿ ಬರುತ್ತಾನೆ; ಶ್ರೀಕೃಷ್ಣನು ಪ್ರತ್ಯಕ್ಷ ವಾಗಿಯೋ ಅಪ್ರತ್ಯಕ್ಷವಾಗಿಯೋ ಯಾವಾಗಲೂ ಇದ್ದಾನೆ.

ಅರ್ಜುನನು ಶ್ರೀಕೃಷ್ಣನ ಪರಮಪ್ರಿಯ ಭಕ್ತನಾಗಿದ್ದಾನೆ. ಕೃಷ್ಣನ

ಲೋಕೋದ್ಧರಣ ಕಾರ್ಯದಲ್ಲಿ ಅವನು ಸಹಾಯಕನಾಗುತ್ತಾನೆ. ಈ ಎರಡು ಗುಣಗಳ ಮೂಲಕ ನಾಟ್ಯಶಾಸ್ತ್ರದ ಪ್ರಕಾರ ನಾಯಕನ ಸಹಾಯಕನಾದ ಅರ್ಜುನನು 'ಪೀಠ ಮರ್ದನ' ಲಕ್ಷಣವುಳ್ಳವನಂತೆ ತೋರುತ್ತಾನೆ:

ಪತಾಕಾನಾಯಕಸ್ತ್ವನ್ಯಃ ಪೀಠಮರ್ದೋ ವಿಚಕ್ಷಣಃ
ತಸ್ಯೈವಾನುಚರೋ ಭಕ್ತಃ ಕಿಂಚಿದೂನಶ್ಚ ತದ್ಗುಣೈಃ

—'ದಶರೂಪಕ', ೨.೧೨

[(ಪ್ರಧಾನನಾಯಕನಲ್ಲದೆ) ಮತ್ತೊಬ್ಬನಾದ ಪತಾಕಾನಾಯಕನು ಪೀಠಮರ್ದ. (ಆ ಪೀಠಮರ್ದನು) ಕುಶಲಿಯಾಗಿರುತ್ತಾನೆ; ಅವನಿಗೆ (ಎಂದರೆ ಪ್ರಧಾನ ನಾಯಕನಿಗೆ) ಜೊತೆಗಾರನೂ **ಭಕ್ತನೂ** ಗುಣದಲ್ಲಿ ಸ್ವಲ್ಪ ಮಾತ್ರ ಕಡಮೆಯುವನೂ(ಆಗಿರುತ್ತಾನೆ)]. ಈ ಪೀಠಮರ್ದನೆನಿಸಿದ ಉಪನಾಯಕನಾದ ಅರ್ಜುನನಿಗೆ ಪ್ರತಿನಾಯಕರಾಗಿ ಅನೇಕ ಪಾತ್ರಗಳು ಈ ಕಾವ್ಯದಲ್ಲಿ ಪ್ರವೇಶಿಸುತ್ತವೆಯೆ ಹೊರತು, ಕಥಾನಾಯಕನಾದ ಶ್ರೀಕೃಷ್ಣನಿಗೆ ಪ್ರತಿನಾಯಕರಾಗಿ ಅಲ್ಲ. ಮೂಲ ಕಥಾನಕದ ನಾಯಕನು ಒಬ್ಬನೇ ಇದ್ದು ಉಪ ಕಥೆಗಳ ನಾಯಕರು ಹಲವು ಜನರಿದ್ದಾರೆ. ಈ ಕಾವ್ಯದಲ್ಲಿ ಬರುವ ಅನೇಕ ಉಪ ಕಥೆಗಳಲ್ಲಿ ಆ ಕಥಾನಕಕ್ಕೆ ಬೇರೆ ಬೇರೆ ನಾಯಕರಾಗಿರುವುದು ಒಂದು ವೈಶಿಷ್ಟ್ಯವೆಂದೇ ಹೇಳಬೇಕಾಗುತ್ತದೆ.

ಮೂಲ ಕಥಾನಕಕ್ಕೆ ನಾಯಕನಾದ ಶ್ರೀಕೃಷ್ಣನು ಒಮ್ಮೆ ರಂಗಸ್ಥಳಕ್ಕೆ ಬಂದ ಅನಂತರ, ಪ್ರತ್ಯಕ್ಷ ಅವನು ಅಥವಾ ಅವನ ಪ್ರತಿನಿಧಿಗಳಾದ ಪ್ರದ್ಯುಮ್ನ ಅನಿರುದ್ಧರು ನಮ್ಮ ಮುಂದೆ ಇದ್ದೇ ಇರುತ್ತಾರೆ. ಇವರಾರೂ ಇರದಿದ್ದ ಪಕ್ಷದಲ್ಲಿ ಶ್ರೀಕೃಷ್ಣನಾಮ ಸ್ಮರಣೆ ಇದ್ದೇ ಇರುತ್ತದೆ. ಇದು ಕಥಾತಂತ್ರದ ದೃಷ್ಟಿಯಿಂದಲೂ, ಕವಿಯ ಕೌಶಲದ ದೃಷ್ಟಿಯಿಂದಲೂ ಅತಿ ಮಹತ್ತ್ವದ ಮಾತು. ಅದು ಹೇಗೆ ನೋಡೋಣ :

ಸಂಧಿ ೨ : ಶ್ರೀಕೃಷ್ಣನ ಪ್ರವೇಶ ಮತ್ತು ಯಜ್ಞಕ್ಕೆ ಒಪ್ಪಿಗೆ.
ಸಂಧಿ ೩ : ಭೀಮನು ಭದ್ರಾವತಿಯಲ್ಲಿ ಶ್ರೀಕೃಷ್ಣನನ್ನು ನೆನೆಯುತ್ತಾನೆ.
ಸಂಧಿ ೪ : ಭೀಮನು ಯೌವನಾಶ್ವಾದಿಗಳನ್ನು ಕೃಷ್ಣದರ್ಶನಕ್ಕಾಗಿ ಕರೆತಂದು ಕೃಷ್ಣ ಧರ್ಮಾದ್ಯರಿಗೆ ನಮಿಸುತ್ತಾನೆ.
ಸಂಧಿ ೫ : ಕೃಷ್ಣ ಅನುಸಾಲ್ವರ ಯುದ್ಧ; ಅನುಸಾಲ್ವನು ಕೃಷ್ಣಭಕ್ತನಾದದ್ದು.
ಸಂಧಿ ೬ : ಭೀಮನ ದ್ವಾರಕಾಗಮನ, ಕೃಷ್ಣದರ್ಶನ.
ಸಂಧಿ ೭ : ಹಸ್ತಿನಾವತಿಗೆ ಕೃಷ್ಣಾಗಮನ.
ಸಂಧಿ ೮ : ಯಜ್ಞಾಶ್ವರಕ್ಷಣೆಗೆ ಹೊರಡುವ ಮುಂದೆ ವೃಷಕೇತುವಿನ ಪತ್ನಿ ಪ್ರಭದ್ರೆ 'ಮುರಹರನ ರಾಣಿಯರು ಹೊಗಳುವಂತೆ ಯುದ್ಧಮಾಡಬೇಕು' ಎಂದು ಹಾರೈಸುತ್ತಾಳೆ.
ಸಂಧಿ ೯ : ಉನ್ಮುಖನು 'ಅರ್ಜುನನ ತಲೆ ಬೀಳ್ವುದೆ ಕೃಷ್ಣನ ಸಹಾಯಮಿರಲ್, ಎಲೆ ಮರುಳೆ!' ಎನ್ನುತ್ತಾನೆ.

ಸಂಧಿ ೧೦ : ಸೌಭರಿಯು ಕೃಷ್ಣಮಹಿಮೆಯನ್ನು ಅನೇಕ ರೀತಿಯಿಂದ ಅರ್ಜುನನಿಗೆ ತಿಳಿಹೇಳಿ, 'ಹರಿ ಮನೆಯೊಳಿರೆ ಗರ್ಧಭಾಕೃತಿಯ ಹರಿಯೊಡನೆ ಬಂದುದೇಕೆ?' ಎಂದು ಪ್ರಶ್ನಿಸುತ್ತಾನೆ; ಚಂಡಿಗೆ ಮುಕ್ತಿಯೂ, ಜನ್ನಗುದುರೆಗೆ ಬಿಡುಗಡೆಯೂ ಕೃಷ್ಣಸ್ಮರಣೆಯೊಂದಿಗೆ ಕುದುರೆಯನ್ನು ಮುಟ್ಟುವುದರಿಂದ.

ಸಂಧಿ ೧೧ : ಸುಧನ್ವನ ತಾಯಿ, ಸಹೋದರಿ, ಪತ್ನಿ ಮತ್ತು ಸುಧನ್ವ ಸ್ವತಃ ಕೃಷ್ಣ ದರ್ಶನದ ಪುಣ್ಯವನ್ನು ಬಯಸುತ್ತಾರೆ.

ಸಂಧಿ ೧೨ : ಕೃಷ್ಣನ ಪ್ರತಿನಿಧಿಯಾದ ಪ್ರದ್ಯುಮ್ನನು ಸುಧನ್ವನನ್ನು ಎದುರಿಸುತ್ತಾನೆ.

ಸಂಧಿ ೧೩ : ಅರ್ಜುನನಬಾಣಕ್ಕೆ ಕೃಷ್ಣನು ತನ್ನ ರಾಮಾವತಾರ ಕೃಷ್ಣಾವತಾರಗಳ ಪುಣ್ಯವನ್ನು ದಾನಮಾಡಿ ಸುಧನ್ವನ ರುಂಡ ಕತ್ತರಿಸುವಂತೆ ಮಾಡುತ್ತಾನೆ.

ಸಂಧಿ ೧೪ : ಸುರಥನ ರುಂಡವನ್ನು ಪ್ರಯಾಗದ ನದಿಯಲ್ಲಿ ಒಗೆಯುವಂತೆ ಗರುಡನಿಗೆ ಹೇಳುತ್ತಾನೆ.

ಸಂಧಿ ೧೫ : ಅರ್ಜುನನು ಅನೇಕ ಸಲ ಕೃಷ್ಣನನ್ನು ಸ್ಮರಿಸಬೇಕಾಗುತ್ತದೆ. 'ಈ ವ್ಯಾಳ ಶಾಯಿಗೆ ಬಂದ ಬಂದ ನಾನಾವ್ಯಥೆಯನಪಹರಿಸಿ ಪಾಂಡುಸುತರಂ ಪೊರೆವುದೇ ವ್ಯವಹರಣೆ' ಎಂದೂ ಕೃಷ್ಣನ ವಾತ್ಸಲ್ಯವನ್ನು ಅರ್ಜುನನು ನೆನೆಯುತ್ತಾನೆ.

ಸಂಧಿ ೧೬ : ಅರ್ಜುನನು ಪ್ರಮೀಳೆಯನ್ನು ಲಗ್ನವಾಗಲು ಒಪ್ಪಿಕೊಂಡರೂ 'ಮುರಾರಿ ಯಂಕಂಡು ವಿಷವಧೂತನದ ತಿಣ್ಣಮಂ ಕಳೆದುಕೊಳ್ಳುವ'ವರೆಗೂ ಅದು ಕೂಡದು ಎಂದು ಹೇಳುತ್ತಾನೆ.

ಸಂಧಿ ೧೭ : ಕೃಷ್ಣನ ಪ್ರತಿನಿಧಿಯಾದ ಪ್ರದ್ಯುಮ್ನನಿರುವನಲ್ಲದೆ ಚಕ್ರಿಯ ದಶಾವತಾರದ ವರ್ಣನೆ ಬರುತ್ತದೆ (ಪ. ೪೨).

ಸಂಧಿ ೧೮, ೧೯, ೨೦, ೨೧ : ಕೃಷ್ಣನು ಪ್ರತ್ಯಕ್ಷವಾಗಿ ಇಲ್ಲ, ರಾಮನಿದ್ದಾನೆ. ರಾಮ ಬೇರೆ ಅಲ್ಲ ಕೃಷ್ಣ ಬೇರೆ ಅಲ್ಲ. ಒಬ್ಬ ಪುರುಷನ ಎರಡು ರೂಪಗಳು ಅವರು.

ಸಂಧಿ ೨೨ : ಪ್ರದ್ಯುಮ್ನನಿದ್ದಾನೆ.

ಸಂಧಿ ೨೩ : 'ನರನ ಜೀವಕ್ಕೆ ಪೊಣೆ ದೇವಪುರ ಲಕ್ಷ್ಮೀಶನು' ಎನ್ನುವಳು, ಚಿತ್ರಾಂಗದೆ.

ಸಂಧಿ ೨೪ : ಇಲ್ಲಿಂದ ಕಾವ್ಯದ ಕೊನೆಯವರೆಗೂ ಕೃಷ್ಣನು ಅರ್ಜುನನೊಂದಿಗೇ ಇರುತ್ತಾನೆ. ಈ ಪ್ರಕಾರ ೩೪ ಸಂಧಿಗಳ ಈ ಕಾವ್ಯದಲ್ಲಿ ೧೯ ಸಂಧಿಗಳಲ್ಲಿ ಶ್ರೀಕೃಷ್ಣನು ಪ್ರತ್ಯಕ್ಷವಾಗಿದ್ದು, ೧೧ ಸಂಧಿಗಳಲ್ಲಿ ನಾಮಸ್ಮರಣೆಯ ಗರ್ಭದಲ್ಲಿ ಇಲ್ಲವೆ ಪ್ರತಿನಿಧಿ ರೂಪದಲ್ಲಿದ್ದಾನೆ; ೪ ಸಂಧಿಗಳಲ್ಲಿ ರಾಮಚಂದ್ರನಾಗಿ ಇದ್ದಾನೆ. ಜೈಮಿನಿ ಭಾರತಕ್ಕೆ ಕೃಷ್ಣನೇ ನಾಯಕ ಎನ್ನುವುದಕ್ಕೆ ಈ ರೀತಿ ಆಧಾರಗಳನ್ನು ಕೊಡಬಹುದು.

*Short Story Writing for Profit* ಎಂಬ ಪುಸ್ತಕದಲ್ಲಿ Elliott Blackiston ಎಂಬ ಲೇಖಕನು ಕಥಾನಾಯಕ ಮತ್ತು ಕಥಾತಂತ್ರದ ವಿಷಯವಾಗಿ ಬರೆಯುತ್ತ ಎರಡು ಮನನೀಯವಾದ ಮಾತುಗಳನ್ನು ಹೇಳುತ್ತಾನೆ. ಮೊದಲನೆಯದಾಗಿ

'There should be no scene in the story in which the chief character does not take part' [ಪ್ರಧಾನ (ನಾಯಕ) ಪಾತ್ರವು ಇರದೆ ಇರುವ ಒಂದು ದೃಶ್ಯವೂ ಇರಬಾರದು]. ಎರಡನೆಯದಾಗಿ 'The story should develop as though it were seen, felt and acted by one character i.e., the principal character.' [ಕಥೆಯ ಬೆಳವಣಿಗೆ ಪ್ರಧಾನ ಪಾತ್ರದ ಭಾವನೆ, ಕೃತಿಗಳ ಮುಖಾಂತರವಾಗಿರಬೇಕು.] ಶ್ರೀಕೃಷ್ಣನು ಇರದೇ ಇರುವ ಒಂದು ಸಂಧಿಯೂ ಕಾವ್ಯದಲ್ಲಿ ಇಲ್ಲ ಎಂಬುದನ್ನು ಮೇಲೆ ತೋರಿಸಿದೆ. ವಿರೋಧಿ ನಾಯಕರನ್ನು ಪರಿವರ್ತಿಸುವ ತಂತ್ರವೆಲ್ಲಾ ಶ್ರೀಕೃಷ್ಣನದೇ. ಆದುದರಿಂದ ಶ್ರೀಕೃಷ್ಣನೇ ಈ ಕಾವ್ಯಕ್ಕೆ ನಾಯಕ.

೨. ಶ್ರೀಕೃಷ್ಣನ ದ್ವಾರಕೆ, ಅವನ ಅರಮನೆ, ದ್ವಾರಪಾಲಕರು, ಆತನ ತಾಯಿ ಪತ್ನಿಯರು, ಆತನ ಆರೋಗಣೆ ಇತ್ಯಾದಿ ವಿವರಗಳು ಬೇರೆ ಯಾವ ಪಾತ್ರದ ಬಗ್ಗೆಯೂ ಈ ಕಾವ್ಯದಲ್ಲಿ ಬರುವುದಿಲ್ಲ. ಈತ ಕಥಾನಾಯಕನೆಂದೇ ಇವು ಇಲ್ಲಿ ಬಂದಿವೆ.

೩. ನಯದೊಳರಸಂ ಬಳಿಕ ಮುನಿನಿಕರ ಭೂಪಾಲ
ಚಯದಿಂದ ಸಕಲಜನಜಾಲದಿಂದೆಸವ ಮಣಿ
ಮಯ ಸಭಾ ಮಧ್ಯದೊಳ್ ದಿವ್ಯ ಸಿಂಹಾಸನದ ಮೇಲೆ ಮುರಹರನನಿರಿಸಿ
ಪ್ರಿಯದಿಂದಲಂಕಾರ ಪೂಜೆಗಳೊಳುಪಚರಿಸಿ
ಹಯಮೇಧಫಲವನಚ್ಯುತಕರದೊಳೀಯಲ್ಕೆ
ಜಯಜಯೆಂದುದು ಲೋಕವಲರಮಳೆ ಕರೆದುದು ಮೊಳಗಿದುವು ಸುರ
ದುಂದುಭಿಗಳು (೩೪–೩೧)

ಎಂಬಲ್ಲಿ ಯಜ್ಞದ ಫಲವನ್ನು ಶ್ರೀಕೃಷ್ಣನಿಗೆ ಅರ್ಪಿಸಿದ ವರ್ಣನೆ ಇದೆ. ಯಾವನು ಫಲವನ್ನು ಸ್ವೀಕರಿಸುತ್ತಾನೋ ಅವನೇ ಅಧಿಕಾರಿ, ಆ ಕಥಾನಕಕ್ಕೆ ನಾಯಕ ಎಂದು ದಶರೂಪಕಕಾರನು ಹೇಳಿದ್ದಾನೆ (ಅಧಿಕಾರಃ ಫಲಸ್ವಾಮ್ಯಮಧಿಕಾರೀಚ ತತ್ಪ್ರಭುಃ— ೧–೧೯). ಈ ಲಕ್ಷಣವನ್ನು ಅನುಲಕ್ಷಿಸಿದಾಗ ಲಕ್ಷ್ಮೀಶನು 'ಕೃತಿಗೆ ನಾಯಕನಾದ ನಮರಪುರದೊಡೆಯ ಲಕ್ಷ್ಮೀಕಾಂತನು' ಎನ್ನುವುದು ಯೋಗ್ಯವಾದುದು ಎಂದು ತೋರದಿರದು.

ಈ ಕಾವ್ಯದ ನಾಯಕನು ಸಂಸ್ಕೃತ ಕಾವ್ಯಗಳ ಶೃಂಗಾರನಾಯಕನಲ್ಲ. ಈ ಕಾವ್ಯದ ಕಥಾವಸ್ತು ಶೃಂಗಾರವಿಲಾಸಕ್ಕೆ ಸಂಬಂಧಿಸಿರದೆ ಯಜ್ಞವೈಭವಕ್ಕೆ ಸಂಬಂಧಿಸಿದೆ. ಕೃಷ್ಣನು ಯಜ್ಞವನ್ನು ನಡಸಿಕೊಡುವುದಾಗಿ ಒಪ್ಪಿಕೊಂಡಂತೆ, ಒದಗಿದ ಅನೇಕ ವಿಘ್ನಗಳನ್ನು ಪರಿಹರಿಸಿ ಯಜ್ಞವು ಸುವ್ಯವಸ್ಥಿತವಾಗಿ ನಡೆಯಲು ಅನುಕೂಲಮಾಡಿಕೊಟ್ಟಂಥ ದೃಢವ್ರತನಾಗಿದ್ದಾನೆ. ಸತ್ಯಭಾಮೆ, ರುಕ್ಮಿಣಿ, ಜಾಂಬುವತಿ ಮೊದಲಾದ ಅಷ್ಟಮಹಿಷಿಯರನ್ನು ಕೂಡಿಕೊಂಡು, ದೇವಕಿ ಯಶೋದೆಯರ ಪುತ್ರವಾತ್ಸಲ್ಯದಲ್ಲಿ ಬಾಳುತ್ತ, ಪಾಂಡವರ ಭಕ್ತಿಯಿಂದ ಪೂಜಿತನಾಗಿ ಶ್ರೀಕೃಷ್ಣನು ಸುಖಿಯಾಗಿದ್ದಾನೆ. ಕ್ರೋಧ ಶೋಕಗಳಿಂದ ವ್ಯಾಪ್ತವಾಗದ ಅಂತಃಕರಣವುಳ್ಳ ಮಹಾಸತ್ತ್ವಶಾಲಿಯಾಗಿದ್ದಾನೆ. ಅರ್ಜುನ ವೃಷಕೇತುಗಳು ಮಡಿದಾಗ ಶ್ರೀಕೃಷ್ಣನು ಅತ್ತದ್ದು ಮಾನವಲೀಲಾ

ಅವತಾರಿಯ ಲಕ್ಷಣ ಮಾತ್ರ. ಕೃಷ್ಣನು ಕ್ಷಮಾಗುಣವುಳ್ಳವನು,ಮೃದುಸ್ವಭಾವದವನು. ದೃಢವ್ರತ, ಸುಖ, ಅಂತಃಕರಣ, ಕ್ಷಮೆ, ಮೃದುತ್ವ ಇರುವುದು ಧೀರ ಲಲಿತ ಮತ್ತು ಉದಾತ್ತ ನಾಯಕನಲ್ಲಿ ಎಂದು ಲಾಕ್ಷಣಿಕರು ಹೇಳುತ್ತಾರೆ.[1] ಶ್ರೀಕೃಷ್ಣನಲ್ಲಿ ಮೇಲೆ ಉಲ್ಲೇಖಿಸಿದಂತೆ ಈ ಎಲ್ಲ ಗುಣಗಳೂ ಇರುವುದರಿಂದ ಅವನು ಧೀರ-ಲಲಿತ ಉದಾತ್ತ ಗುಣಸಂಪನ್ನ ಅಪೂರ್ವನಾಯಕನಾಗಿದ್ದಾನೆ.

ಈ ಕಾವ್ಯದಲ್ಲಿ ಬರುವ ನೀಲಧ್ವಜ, ಹಂಸಧ್ವಜ, ಬಭ್ರುವಾಹನ, ಮಯೂರ ಧ್ವಜ, ವೀರವರ್ಮ ಮತ್ತು ಚಂದ್ರಹಾಸ ಈ ನಾಯಕರು ತಮ್ಮದೇ ಆದ ಸ್ವತಂತ್ರ ವ್ಯಕ್ತಿತ್ವವನ್ನು ತಾಳಿದ್ದಾರೆ. ಇವರಲ್ಲಿ ಕೆಲವರು ಕೃಷ್ಣಭಕ್ತರಾಗಿರುವುದರಿಂದ ಮತ್ತು ಕೆಲವರು ಕೃಷ್ಣಭಕ್ತರಾಗಿ ಪರಿವರ್ತಿತರಾಗಿರುವುದರಿಂದ ಕಾವ್ಯದ ಪ್ರಧಾನ ನಾಯಕನಾದ ಶ್ರೀಕೃಷ್ಣನ ಮುಂದೆ ಇವರ ವ್ಯಕ್ತಿತ್ವಕ್ಕೆ ಉಚ್ಚಸ್ಥಾನವಿಲ್ಲ. **ಎಲ್ಲ ನಾಯಕರು ಪ್ರಧಾನ ನಾಯಕನಲ್ಲಿ ಲೀನವಾಗುತ್ತಾರೆ—ಸಪ್ತವರ್ಣಚಕ್ರಕ್ಕೆ ಗತಿ ಕೊಟ್ಟಾಗ ಎಲ್ಲ ವರ್ಣಗಳು ಬಿಳಿಯ ವರ್ಣದಲ್ಲಿ ಅಡಗುವಂತೆ.**

ಶ್ರೀಕೃಷ್ಣನು ಮಾನವಲೀಲಾವತಾರಿಯಾಗಿದ್ದರಿಂದ ಅವನಲ್ಲಿ ಮಾನವಸಹಜ ವಾದ ಗುಣದೋಷಗಳಿವೆ. ಹೀಗಿದ್ದೂ ಅವನು ಅತಿಮಾನವನು. ಮಾನವರನ್ನು ತನ್ನ ಎತ್ತರಕ್ಕೆ ಒಯ್ಯಬಲ್ಲ, ಕೃಷ್ಣಸಾಯುಜ್ಯವನ್ನು ಕೊಡಬಲ್ಲ ಕಾರುಣ್ಯನಿಧಿ ಎಂದು ಕವಿ ಕಾವ್ಯನಾಯಕನ ಪಾತ್ರವನ್ನು ಚಿತ್ರಿಸಿದ್ದಾನೆ. ಶ್ರೀಕೃಷ್ಣನನ್ನು ಗುಡಿಯಲ್ಲಿಯ ಒಂದು ಮೂರ್ತಿಯನ್ನು ಮಾಡಿ, ದೇವತ್ವದ ಕಿರೀಟವನ್ನಿಟ್ಟು, ಭಕ್ತರನ್ನು ಕುರುಡು ನಂಬಿಕೆಯ ಮೂಢರನ್ನಾಗಿ ಚಿತ್ರಿಸದೆ, ದೇವ ಮತ್ತು ಭಕ್ತ ಇಬ್ಬರನ್ನೂ ಒಂದೇ ಪಾತಳಿಯ ಮೇಲೆ ನಿಲ್ಲಿಸಿ ದೇವತ್ವದ ಮಹತ್ತ್ವ ಮತ್ತು ಭಕ್ತರ ಗುಣಗೌರವವನ್ನು ಕವಿ ಲಕ್ಷ್ಮೀಶನು ಈ ಕಾವ್ಯದಲ್ಲಿ ಮಾಡಿದ್ದಾನೆ.

ಲಕ್ಷ್ಮೀಶನು ಚಿತ್ರಿಸಿದ ಶ್ರೀಕೃಷ್ಣನ ಪಾತ್ರವು ಸಂಸ್ಕೃತ ಜೈಮಿನಿ ಭಾರತದ ಈ ಪಾತ್ರಕ್ಕಿಂತ ಹೇಗೆ ಭಿನ್ನವಾಗಿದೆ ಎಂಬುದನ್ನು ತುಲನಾತ್ಮಕವಾಗಿ ನೋಡೋಣ:

ಶ್ರೀಕೃಷ್ಣನು ಬಂದ ಸುದ್ದಿಯನ್ನು ದ್ವಾರಪಾಲಕನು ಧರ್ಮನಿಗೆ ತಿಳಿಸುತ್ತಾನೆ; ಕೂಡಲೆ ಅವನು ಸಿಂಹಾಸನದಿಂದೆದ್ದು, ಭೀಮನಿಗೆ ಸಮಾಚಾರವನ್ನು ತಿಳಿಸಿ ಜೊತೆಗೆ ಬರಹೇಳಿ, ಶ್ರೀಕೃಷ್ಣನನ್ನು ಕಾಣುತ್ತಾನೆ; ಆಗ ಶ್ರೀಕೃಷ್ಣ–ಧರ್ಮರ ಆಲಿಂಗನ, ಇತರ ಪಾಂಡವರ ನಮಸ್ಕಾರ; ಆಮೇಲೆ ದ್ರೌಪದಿ ತನ್ನ ಮಾನವನ್ನು ಶ್ರೀಕೃಷ್ಣನು ರಕ್ಷಿಸಿದ ಸಂದರ್ಭಗಳನ್ನು **ವಿವರವಾಗಿ** ನೆನೆಸುವುದು; ಸಜ್ಜನರಿಗೆ ಗ್ಲಾನಿಯುಂಟಾದಾಗ ಅವರು ಕೃಷ್ಣಸ್ಮರಣೆ ಮಾಡಿದರೆ ಭಕ್ತರಕ್ಷಾವ್ಯಸನಿ ಅವರ ರಕ್ಷಣೆ ಮಾಡುತ್ತಾನೆ—ಸಂಸ್ಕೃತ ದಲ್ಲಿಯ ಚಿತ್ರ (೨.೫೪-೬೭). ಇದೇ ಭಾಗವು ಲಕ್ಷ್ಮೀಶನಲ್ಲಿ ಹೀಗೆ ಬಂದಿದೆ:

1 'ನಿಶ್ಚಿಂತೋ ಧೀರಲಲಿತಃ ಕಲಾಸಕ್ತಃ ಸುಖೀ ಮೃದುಃ'—'ದಶರೂಪಕ', ೨.೩.
'ಮಹಾಸಕ್ತೋಽತಿಗಂಭೀರಃ ಕ್ಷಮಾವಾನವಿಕತ್ಥನಃ
ಸ್ಥಿರೋ ನಿಗೂಢಾಹಂಕಾರೋ ಧೀರೋದಾತ್ತೋ ದೃಢವ್ರತಃ'—ಅದೇ. ೨.೪.

ಅವಧಾನ ಜೀಯ ನಮ್ಮ ಪೊಳಲ ಪೊರೆಗೆ ಯಾ
ದವರೆಚಿಕಿಯನಿದೆ ಬಂದನೆನೆ ಘಳಿಲನೆದ್ದು ನಿಂ
ದವನ ನುಡಿಗುಚಿತವುಂಕೊಡುತೆ ಭಕ್ತಾವಳಿಯ ಜಗೆಯನೊಡರಿಸುವೆಡೆಯೊಳು
ತವಕಮೆನಿತೋ ಮುರಾರಿಗೆ, ಮಹಾದೇವ! ತ್ರೈ
ಭುವನದೊಳ್ ತಾನೇ ಕೃತಾರ್ಥನಲ್ಲಾ! ಕೌತು
ಕವ ಕಂಡೆವಿಂದೆನುತೆ ಭೂಪಾಲನರಮನೆಯ ಪೊಱಮಟ್ಟು ನಡೆತಂದನು (೨.೪೬)

ಎಂಬಲ್ಲಿ ಶ್ರೀಕೃಷ್ಣನ ಆಗಮನದಿಂದ ಧರ್ಮನ ಮನಸ್ಸಿನ ಮೇಲೆ ಆದ ಆನಂದದ ಪರಿಣಾಮ ಚೆನ್ನಾಗಿ ವ್ಯಕ್ತಗೊಂಡಿದೆ. ಈ ಸಮಾಚಾರವನ್ನು ಹೇಳಿದ ದೂತನನ್ನು ಧರ್ಮನು ಸನ್ಮಾನಿಸುತ್ತಾನೆ. ಮುಂದೆ ಶ್ರೀಕೃಷ್ಣನ ಸ್ವಾಗತಕ್ಕಾಗಿ 'ಇದಿರ್ಗೊಂಡ ರುಗ್ಘಡಣೆಯ ವಿಚಿತ್ರಪಾಠಕರ ವಾದ್ಯಧ್ವನಿಯ ಸಾಲ ಕೈದೀವಿಗೆಯ ಸಂಭ್ರಮದೊಳು', ಧರಿತ್ರೀರಮಣರು ಹೊರಡುತ್ತಾರೆ. ಧರ್ಮನ ಮನಸ್ಸಿನ ಉಲ್ಲಾಸವು 'ಮಿಱುಪ ಮಣಿಮುಕುಟದೋರಣಿಸಿದಳಕಾವಳಿಯ' ಎಂಬ ಕೃಷ್ಣಸ್ತುತಿಯಲ್ಲಿ (೨.೪೮) ರೂಪ ತಾಳುತ್ತದೆ. ಕ.ಜೈ.ಭಾ.ದ ದ್ರೌಪದಿ ಶ್ರೀಕೃಷ್ಣನಿಂದ ಹಿಂದೆ ತನ್ನ ಮಾನರಕ್ಷಣೆಯಾದದ್ದನ್ನು ವಿವರಿಸುತ್ತ ಕೂಡುವುದಿಲ್ಲ. ಶ್ರೀಕೃಷ್ಣನನ್ನು ಕಂಡೊಡನೆ ಅವಳಿಗಾದ ಪರಮಾವಧಿ ಆನಂದ ಅವಳ ಬಾಯಿಂದ ಹೊರಹೊಮ್ಮುತ್ತದೆ:

....................ಸರಸಿರುಹನಯನ ಫಣಿರಾಜಶಯನ
ಕರಣಜನದುರಿತಾಪಹರಣ ದೈತೇಯ ಸಂ
ಹರಣ ಗೋವರ್ಧನೋದ್ಧರಣ ವರಕೌಸ್ತುಭಾ
ಭರಣ ಪೀತಾಂಬರಾವರಣ ಸಲಹೆಂದು ಹರಿಚರಣಕೆಱಗಿದಳು ಬಂದು (೨.೫೦)

ಶ್ರೀಕೃಷ್ಣನ ಆಗಮನ ದ್ರೌಪದಿ-ಧರ್ಮರ ಮನಸ್ಸಿನಮೇಲೆ ಆನಂದವಾಗಿ ಪರಿಣಮಿಸಿ, ಕೃಷ್ಣಸ್ತುತಿರೂಪದಲ್ಲಿ ಹರಿದು ಬರುತ್ತದೆ ಲಕ್ಷ್ಮೀಶನಲ್ಲಿ. ಸಂ. ಜೈ. ಭಾರತದಲ್ಲಿ ಈ ಬಗೆಯ ಆನಂದಾಭಿವ್ಯಕ್ತಿ ಇಲ್ಲ.

ಹೀಗೆಯೇ ಸುಧನ್ವನ ಕಥಾಪ್ರಸಂಗವನ್ನೂ ನೋಡಬಹುದು. ಸುಧನ್ವನನ್ನು ತಪ್ತತೈಲದಲ್ಲಿ ಹಾಕುವುದಕ್ಕೆ ಮಂತ್ರಿ ಹಿಂಜರಿಯುವುದು ಎರಡೂ ಕಾವ್ಯಗಳಲ್ಲಿ ಉಂಟು. ಆದರೆ, ಸಂಸ್ಕೃತದಲ್ಲಿ—ಕಟಾಹದಲ್ಲಿ ಬಿದ್ದ ಸುಧನ್ವನು ಶ್ರೀಕೃಷ್ಣನನ್ನು ನೆನೆಯುತ್ತಾನೆ; ತಾನು ಯುದ್ಧಕ್ಕೆ ಹೊರಡಲು ತಡಮಾಡಿದ್ದಕ್ಕಾಗಿ ಶ್ರೀಕೃಷ್ಣನು ರಕ್ಷಣೆಗೆ ಬರಲು ತಡ ಮಾಡುತ್ತಿದ್ದಾನೆ, ಎಂದು ಸಂದೇಹಿಸುತ್ತಾನೆ; ದ್ರೌಪದಿಯ ಮಾನವನ್ನು ರಕ್ಷಿಸಿದ ಮತ್ತು ಭೀಷ್ಮದ್ರೋಣರನ್ನು ಉದ್ಧರಿಸಿದ ಶ್ರೀಕೃಷ್ಣನೇ ನನ್ನನ್ನು ಉದ್ಧರಿಸು ಎಂದು ಕೇಳಿಕೊಳ್ಳುತ್ತಾನೆ; ಆಗ ತಪ್ತತೈಲದಲ್ಲಿದ್ದ ಸುಧನ್ವನ ಕಮಲದಂತಿದ್ದ ಮುಖವನ್ನು ಕಂಡು ಅಲ್ಲಿ ನೆರೆದ ಜನರು ದುಃಖಪಟ್ಟರು (೧೭.೧೭೨-೧೯೦). ಇಲ್ಲಿ, ಸುಧನ್ವನು ಕೃಷ್ಣನನ್ನು ಬೇಡಿಕೊಂಡುದನ್ನು ಮೊದಲು ವಿವರಿಸಿ ಆಮೇಲೆ ನೆರೆದ ಜನರು ದುಃಖಿಸುವುದನ್ನು ಹೇಳಿದೆ. ಇದು ದೂರಾನ್ವಯದೋಷದಂತೆ ಕಾಣುತ್ತದೆ. ಅಲ್ಲದೆ ನೆರೆದ ಜನ ದುಃಖ ಪಟ್ಟುದಕ್ಕೆ ಮಹತ್ತ್ವವೇ ಇಲ್ಲದಂತಾಗಿದೆ ಎಂದು ಹೇಳಬಹುದು. ಕನ್ನಡ

ಜೈಮಿನಿ ಭಾರತದಲ್ಲಿ ಸುಧನ್ವನನ್ನು ತಪ್ತತೈಲದಲ್ಲಿ ಹಾಕಿದೊಡನೆಯೆ,

'ಭೋಯೆಂದುದಖಿಳ ಪರಿವಾರಮುಡಿಗಡಿಗೆ ಹಾ
ಹಾಯೆಂದು ಮಱುಗಿದುದು, ನೀನಿಂತಳಿವರೇ!'

ಎಂದು ಜನರು ಶೋಕಿಸಿದ ರೀತಿ ಹೃದಯದ್ರಾವಕವಾಗಿದೆ (೧೧–೩೪). ಇದು ಸಕ್ರಮವಾಗಿದ್ದು ಒಳ್ಳೇ ಪರಿಣಾಮಕಾರಿಯಾಗಿದೆ. ಇದಾದ ಮೇಲೆ ಸುಧನ್ವನು,

ಹಿಂದೆ ಪ್ರಹ್ಲಾದನಂ ಪಾಲಿಸಿದೆ ಗಡ! ದ್ರುಪದ
ನಂದನೆಯ ಮಾನಮಂ ಕಾದೆ ಗಡ! ಭಕ್ತರ್ಗೆ
ಬಂದೆಡರನಾವಗಂ ಪರಿಹರಿಪೆ ಗಡ, ದೇವ, ನಿನ್ನಂ ಪೆಸರ್ಗೊಂಡೊಡೆ (೧೧–೩೫)

ಎಂದು ಸಂಗ್ರಹವಾಗಿ ನೆನೆದು,

'ಜಯ ಜಯ ಜನಾರ್ದನ ಮುಕುಂದ ಮುರಮರ್ದನ' (೧೧–೩೬)

ಎಂಬುದಾಗಿ ಕೃಷ್ಣಸ್ತುತಿಯಲ್ಲಿ ತಲ್ಲೀನನಾಗುತ್ತಾನೆ. ಆಗ ತಪ್ತತೈಲವು ಚಂದನದ ತಂಪನ್ನು ಕೊಡುತ್ತದೆ ಅವನಿಗೆ. ಇದು ಶ್ರೀಕೃಷ್ಣಮಹಿಮೆ–ಲಕ್ಷ್ಮೀಶನು ತೋರಿದ್ದು.

ಸಂಸ್ಕೃತ ಜೈಮಿನಿ ಭಾರತದಲ್ಲಿ—'ಹರಿಯನ್ನು ಕಂಡ ಮಾನವನು ಪವಿತ್ರನಾಗುತ್ತಾನೆ' (೧೩, ೯೩–೯೪), 'ಹರಿಯ ಆರಾಧನೆಯನ್ನು ಮಾಡದೆ ಇರುವುದರಿಂದ ಜಡದೇಹಿಯಾಗುತ್ತಾನೆ'(೧೬, ೭–೮), 'ಕೃಷ್ಣನ ಸ್ಮರಣೆಯಿಂದ ಭೂತಲದ ಮೇಲಿನವನು ಯೋನಿಸಂಕಟದಿಂದ ಮುಕ್ತನಾಗುತ್ತಾನೆ' (೧೮–೩),'ಇಷ್ಟಫಲವನ್ನು ದಯಪಾಲಿಸುವ ಗೋವಿಂದನ ಸ್ಮರಣೆಯನ್ನು ಯಾರು ಮಾಡುವರೋ ಅವರು ತಾಪತ್ರಯದಿಂದ ಮುಕ್ತರಾಗುತ್ತಾರೆ' (೧೮–೧೦) ಇತ್ಯಾದಿಯಾಗಿ ಅನೇಕ ಕಡೆಗಳಲ್ಲಿ ಕೃಷ್ಣನಾಮಸ್ಮರಣೆಯ ಮಹತ್ತ್ವವು ವಾಚ್ಯವಾಗಿ ಹೇಳಲ್ಪಡುತ್ತದೆ. ಇದು ಸಂ.ಜೈ. ಭಾರತದ ಕಥಾಕಥನದ (naration) ರೀತಿಯಾಗಿದೆ. ಕ.ಜೈ.ಭಾ. ದಲ್ಲಿ 'ಕೃಷ್ಣಸ್ಮರಣೆ'ಯಿಂದ ಮಾನವನು ದುಃಖರಹಿತನಾಗುತ್ತಾನೆ ಎಂದು ವಾಚ್ಯವಾಗಿ ಹೇಳುವುದಿಲ್ಲ. ಸುಧನ್ವನ ಮುಖದಿಂದ ನಾಮಸ್ಮರಣೆ ಮಾಡಿಸಿ, ಅದರಿಂದ ಅವನ ದುಃಖಪರಿಹಾರವಾದುದನ್ನು ಲಕ್ಷ್ಮೀಶನು ಚಿತ್ರಿಸುತ್ತಾನೆ. ಕಥೆಯನ್ನು ಕಣ್ಮುಂದೆ ಕಟ್ಟುವಂತೆ ಮಾಡುವ ಇವನ ರೀತಿ ಪ್ರದರ್ಶನ ರೀತಿ (Exposition). ಓದುಗನ ಮೇಲೆ ಪರಿಣಾಮವಾಗುವ ದೃಷ್ಟಿಯಿಂದ ಕಥನ ರೀತಿಗಿಂತ ಈ ಪ್ರದರ್ಶನ ರೀತಿ ಉತ್ತಮವಾದುದು.

ಚಂದ್ರಹಾಸ ಕಥಾನಕದ ಪೂರ್ವದಲ್ಲಿ ಆಗುವ ನಾರದ ಪ್ರವೇಶ ಸಂದರ್ಭದಲ್ಲಿಯೂ ಹೀಗೆಯೆ. ಅರ್ಜುನಾದಿಗಳು ಕುದುರೆ ಕಾಣದಾದ ಚಿಂತೆಯಿಂದ 'ಮೇಲೆ ನೋಡಿದಾಗ ಎರಡನೆಯ ಸೂರ್ಯನಂತೆ ಕಾಂತಿಯುತನಾದ ಪುರುಷನನ್ನು ಕಂಡರು ಅವನೇ ನಾರದ. "ಹೇ ಕೃಷ್ಣ, ಹೇ ಮಾಧವ, ಹೇ ಗೋವಿಂದ, ಹೇ ನರಸಿಂಹ, ಹೇ ಮಧುಸೂದನ", ಎಂದು ಅವನು ನಾಮಸ್ಮರಣೆ ಮಾಡುತ್ತಿದ್ದನು; ಅರ್ಜುನಾದಿಗಳು ಅವನನ್ನು ನಮಸ್ಕರಿಸಿದರು; "ಎಲ್ಲಿಂದ ಬಂದಿರಿ" ಎಂದು ವಿಚಾರಿಸಿದರು; "ಯಜ್ಞಾಶ್ವ

ಗಳನ್ನು ಕಂಡಿರಾ?" ಎಂದು ಪ್ರಶ್ನಿಸಿದರು' ಎಂದು ಸಂ.ಜೈ.ಭಾ. ಹೇಳುತ್ತದೆ (೫೦, ೫–೮). ಇಲ್ಲಿ ನಾರದನ ಮೂರ್ತಿ, ಪಾತ್ರ ನಮ್ಮ ಕಣ್ಣನ್ನು ತುಂಬುವುದಿಲ್ಲ. ಕ.ಜೈ.ಭಾ. ದಲ್ಲಿ ನಾರದನು 'ಕ್ರೀಡೆಯಿಂ ಮಾಧವನುತಪ್ರಸಂಗವನುಂಟುಮಾಡುತ್ತೆ' ಭೂಲೋಕಕ್ಕೆ ಬರುತ್ತಾನೆ; 'ಕೆಂಜೆಡೆಯ ಸುಲಿಪಲ್ಲ ಚೀರಕೃಷ್ಣಾಜಿನದ' ಸುಂದರ ಮೂರ್ತಿ ಅವನು. ಹೀಗೆ ವರ್ಣಿಸಿ ಆತನನ್ನು ನಮ್ಮ ಕಣ್ಣಮುಂದೆಯೇ ಮೈದಾಳಿಸಿ ನಿಲ್ಲಿಸುತ್ತಾನೆ ಲಕ್ಷ್ಮೀಶ. ಇಂಥ ನಾರದನಿಗೆ ಅರ್ಜುನಾದಿಗಳು ನಮಿಸಿ, ಆ ಲೋಕಸ್ಥಿತಿ ವಿಶಾರದನನ್ನು ಉಪಚರಿಸಿ, ಅತಿವಿನಯ ಗಂಭೀರ ವಾಕ್ಯದಿಂದ ಜಂಭಾರಿನಂದನನು ಬೆಸಗೊಳ್ಳುತ್ತಾನೆ—ಕುದುರೆಗಳನ್ನು ಕುರಿತು. ಎರಡು ಘಟನೆಗಳಲ್ಲಿ ಕಾರ್ಯಕಾರಣ ಸಂಬಂಧವನ್ನು ಜೋಡಿಸುವುದು ಕಥನ ಕಲೆಯ ಕೌಶಲ್ಯ. ಅರ್ಜುನನು ಯಜ್ಞಾಶ್ವಗಳ ಬಗೆಗೆ ನಾರದನನ್ನು ವಿಚಾರಿಸಿದನು ಎಂದು ಮಾತ್ರ ಸಂ.ಜೈ.ಭಾ. ದಲ್ಲಿದೆ. ಏಕೆ ಅವನನ್ನು ವಿಚಾರಿಸಿದನು ಎಂಬುದು ಅಲ್ಲಿಲ್ಲ. ಕಾರಣಸೂಚನೆಯಿಲ್ಲದುದರಿಂದ ಕಥನ ಕಲೆಯಲ್ಲಿ ಶೈಥಿಲ್ಯವುಂಟಾಗಿದೆ. ನಾರದನು 'ಲೋಕಸ್ಥಿತಿ ವಿಶಾರದನು' ಎಂದು ಕಾರಣವನ್ನು ಕ.ಜೈ.ಭಾ.ವು ಸೂಚಿಸಿ ಪಾತ್ರಚಿತ್ರಣದ ಕಲಾಸೂಕ್ಷ್ಮವನ್ನು ತೋರಿಸಿದೆ. ಅರ್ಜುನನು ನಾರದನೊಂದಿಗೆ ಅತಿವಿನಯದಿಂದ ನಡೆದುಕೊಂಡನು ಎಂಬುದರಲ್ಲಿ ಮುನಿಗಳೊಡನೆ ಕ್ಷತ್ರಿಯರು ಹೇಗೆ ನಡೆದುಕೊಳ್ಳುತ್ತಾರೆ ಎಂಬುದು ಕನ್ನಡಕಾವ್ಯದಲ್ಲಿ ಸೂಚಿತವಾಗಿದೆ.

ಸಂ.ಜೈ.ಭಾರತದಲ್ಲಿ ಶ್ರೀಕೃಷ್ಣನ ಪಾತ್ರದ ಮಹತ್ತ್ವ, ಅವನ ನಾಮಸ್ಮರಣೆಯ ಮಹತ್ತ್ವ ಚೆನ್ನಾಗಿಯೆ ವ್ಯಕ್ತವಾಗಿದೆ. ಅದಕ್ಕೆ ಕೆಲವು ಉದಾಹರಣೆಗಳು:

೧. ಕೃಷ್ಣನು ಸಮೀಪದಲ್ಲಿದ್ದರೆ ಎಲ್ಲ ಸಂಪತ್ತಿಗಳೂ ಸಮೀಪದಲ್ಲಿರುತ್ತವೆ.
೨. ವಾಸುದೇವನನ್ನು ಚಿಂತಿಸುತ್ತ ಕರ್ಮವನ್ನು ಮಾಡಿದರೆ ಸರ್ವಾರ್ಥಸಿದ್ಧಿ.
೩. ಹರಿಗೆ ನಮಸ್ಕರಿಸಿದರೆ ಯಾವುದು ಲಭಿಸುವುದಿಲ್ಲ? ಪುತ್ರ, ಮಿತ್ರ, ಕಲತ್ರ ದ್ರವ್ಯ, ರಾಜ್ಯ, ಸ್ವರ್ಗ, ಮೋಕ್ಷ ಎಲ್ಲವೂ ಲಭಿಸುತ್ತದೆ. ಹರಿ ಎಲ್ಲ ಪಾಪಗಳನ್ನು ಸುಟ್ಟುಹಾಕುತ್ತಾನೆ.
೪. ಕೃಷ್ಣವಿರಹಿತವಾದ ರಾಜ್ಯ, ಶರೀರ, ಧನ ಎಲ್ಲ ಸ್ಮಶಾನವತ್.
೫. ಕೃಷ್ಣನಲ್ಲಿ ಆಸಕ್ತನಾಗಿರುವವನಿಗೆ ಎಲ್ಲ ಕಡೆಗೂ ಸುಖವೇ.

ಹೀಗೆ ಶ್ರೀಕೃಷ್ಣಮಹಿಮೆಯನ್ನು ಸ್ಪಷ್ಟವಾಗಿ ಸಾರಿಹೇಳುವ ಅನೇಕ ಉಕ್ತಿಗಳು ಸಂ.ಜೈ. ಭಾರತದಲ್ಲಿವೆ. ಕ.ಜೈ.ಭಾ.ದ ಕೃಷ್ಣನಾಮಸ್ಮರಣೆಯ ಪದ್ಯಗಳ ರೀತಿ ಸಂ.ಜೈ.ಭಾ.ದ ಶ್ಲೋಕಗಳಲ್ಲಿ ಕಾಣದು. ಅಲ್ಲಿಯದು ನಾಮಸ್ಮರಣೆ ಮಾಡಬೇಕು ಎಂಬಂತಹ ಉಪದೇಶದ ರೀತಿ; ಇಲ್ಲಿಯದು ನಾಮಸ್ಮರಣೆಯಲ್ಲಿ ವಾಚಕರನ್ನು ತಲ್ಲೀನಗೊಳಿಸುವ ರೀತಿ. ಕನ್ನಡ ಜೈಮಿನಿ ಭಾರತವು ವಾಚಕರನ್ನು ನಾಮಸ್ಮರಣೆ ಮಾಡಹಚ್ಚುವ ಸ್ಪರ್ಶಮಣಿ.

ಶ್ರೀಕೃಷ್ಣನ ರತ್ನಖಚಿತ ಕಿರೀಟ, ಕಸ್ತೂರಿ ತಿಲಕ, ಕಮಲನೇತ್ರ, ಸುನಾಸಿಕ,

ಹೊಳೆವ ದಂತ ಪಂಕ್ತಿ, ಎಳನಗೆಯ ಮೊಗವನ್ನು ಲಕ್ಷ್ಮೀಶನು ವೈವಿಧ್ಯದಿಂದ ವರ್ಣಿಸುತ್ತಾನೆ. ಉತ್ಪಲದಲಶ್ಯಾಮ, ಕೋಮಲತರ ಶರೀರ, ನವರತ್ನ ಮಕುಟ, ಕನಕಕುಂಡಲ, ಕೇಯೂರಹಾರ, ಪ್ರಕಟಕಟಿಸೂಕ್ತ, ಮಣಿಮಂಜೀರ, ಲಲಿತ ಪೀತಾಂಬರೋಜ್ಜ್ವಲಾಲಂಕಾರ, ಜಲಜಸಮಚರಣಯುಗ, ಕಮಲ ಸಂಭವೋದರ, ಮೋಹನಾಕಾರ, ಲಕ್ಷ್ಮೀಮನೋಹರ ಇತ್ಯಾದಿ ವಿಶೇಷಣಗಳಿಂದ ಶ್ರೀಕೃಷ್ಣಮೂರ್ತಿ ಕಣ್ಣ ಮುಂದೆ ನಿಲ್ಲುವಂತೆ ಕವಿ ಮಾಡುತ್ತಾನೆ. ಸಕಲಸೃಷ್ಟಿಗೆ ಕಾರಣ, ಸತ್ಯಜ್ಞಾನಾನಂದ ಸ್ವರೂಪ, ಸರ್ವಚೈತನ್ಯ ಸ್ವರೂಪ, ಸಕಲ ಲೋಕಗಳ ಅಂತರ್ಯಾಮಿ, ಕಾರ್ಯಪ್ರೇರಕ, ಸರ್ವೋತ್ತಮ, ವೇದವೆಂದ ನಿರ್ಮಲ ಕೋಶವೇ ವಾಸಗೃಹವಾದ ದೇವಾಧಿದೇವ, ಕೋಟಿಸೂರ್ಯಪ್ರಕಾಶ, ಯಜ್ಞದೇವ, ಯಜ್ಞಪಾಲಕ, ಸರ್ವತಂತ್ರಸ್ವತಂತ್ರ, ವಿಶ್ವರೂಪ, ಸರ್ವಜ್ಞ ಎಂದು ಶ್ರೀಕೃಷ್ಣನ ಆಧ್ಯಾತ್ಮಿಕ ಸ್ವರೂಪವನ್ನು ಕ.ಜೈ.ಭಾ.ದಲ್ಲಿ ವಿವರಿಸಲಾಗಿದೆ.

ವ್ಯಾಸ ಮಹಾಭಾರತದಲ್ಲಿ ಶ್ರೀಕೃಷ್ಣನು ಉದ್ಯೋಗಪರ್ವದಲ್ಲಿ ವಿಶ್ವರೂಪಿ, ರಾಜಸೂಯದಲ್ಲಿ ಅವತಾರಿ, ಭಗವದ್ಗೀತೆಯಲ್ಲಿ ಭಗವಾನ್ ಮತ್ತು ಧರ್ಮಸಂಸ್ಥಾಪನಾಚಾರ್ಯನ ಪಾತ್ರದಲ್ಲಿ ಕಂಡುಬರುತ್ತಾನೆ. ಪಂಪಭಾರತದಲ್ಲಿ 'ತ್ರಿಜಗಕ್ಕಂ ಗುರುದೇವಂ ಆದಿಪುರುಷಂ' (೧೧–೧೬) ಎಂದೂ 'ಆಯತಿಯಿಂದೆ ನರನಾರಾಯಣರೆನೆ ನೆಗೞ್ದವರಿಗ ನಾವಿರ್ವರುಂ' (೪–೪೫) ಎಂದೂ ಕೃಷ್ಣನ ಅನಾದಿ ಪುರುಷತ್ವ ಪುರಾಣ ಪುರುಷೋತ್ತಮತ್ವ ಮತ್ತು ಕೃಷ್ಣಾರ್ಜುನ ಮೈತ್ರಿ ಪ್ರಕಟವಾಗಿದೆ. ಕುಮಾರವ್ಯಾಸನ ಕೃಷ್ಣನ ಧರ್ಮಸಂಸ್ಥಾಪನೆಗಾಗಿ ಅವತರಿಸಿ ಬಂದ ಸಾಕ್ಷಾತ್ ದೇವರು. ಧರ್ಮರಾಜನು ಸಿಂಹಾಸನವನ್ನೇರಲು ಅಡ್ಡಿಯಾಗುವ ಎಲ್ಲ ತೊಡರುಗಳನ್ನು ಕತ್ತರಿಸುವ ಶಕ್ತಿ ಶ್ರೀಕೃಷ್ಣ. ಕುಮಾರವ್ಯಾಸನು ಸಭಾಪರ್ವದ ೯ನೆಯ ಸಂಧಿಯಲ್ಲಿ

ಸೂ॥ ದೇವದೇವನನುಪನಿಷತ್ಕಾಂ
ತಾವಳಿಯ ಕಮನೀಯನನು ರಾ
ಜೀವಪೀಠನ ಪಿತನನಭಿವರ್ಣಿಸಿದನಾ ಭೀಷ್ಮ॥
ಈತನವ್ಯಕ್ತನು ವಿಚಾರಿಸ
ಲೀತನಮಲವ್ಯಕ್ತಲಿಂಗನ
ಜಾತನವ್ಯಯನಪ್ರಮೇಯನಗಮ್ಯನದ್ವಿತಿಯ
ಈತ ಚೈತನ್ಯಾತ್ಮ ನಿರ್ಗುಣ
ನೀತ ಚಿನ್ಮಯನೀತನಾ ಹರಿಯೆಂದನಾ ಭೀಷ್ಮ॥

ಎಂಬುದಾಗಿ ಕೃಷ್ಣನ ಆಧ್ಯಾತ್ಮಿಕ ಸ್ವರೂಪವನ್ನು ಚಿತ್ರಿಸಿದ್ದಾನೆ. ಸಂ. ಜೈ. ಭಾ. ಮತ್ತು ಕ. ಜೈ. ಭಾರತ ಎರಡರಲ್ಲಿಯೂ ಶ್ರೀಕೃಷ್ಣನು ಪ್ರಳಯ ಕಾಲದ ಶಿಶು, ಯಾದವರೆರೆಯ, ಪಾಂಡವ ಪ್ರತಿಷ್ಠಾಪನಾಚಾರ್ಯ, ಭಕ್ತವ್ಯಸನಿ, ಮಾನವಲೀಲಾವತಾರಿ, ಪತಿತೋದ್ಧಾರಕ ಮತ್ತು ಸಹಸ್ರಶೀರ್ಷಪುರುಷ ಎಂದು ವರ್ಣಿಸಲಾಗಿದೆ.

ನಾಮಸ್ಮರಣೆಯಿಂದ (ಭಜನ, ಜಪ ಇತ್ಯಾದಿಗಳಿಂದ) ಭಕ್ತನು ಭಗವಂತ

ನೊಂದಿಗೆ ಏಕಚಿತ್ತನಾಗುತ್ತಾನೆ. ಇದರಿಂದ ಭಕ್ತನನ್ನು ಕಪ್ಪುಬಣ್ಣವು ಆವರಿಸುತ್ತದೆ. ಭಕ್ತ ಮತ್ತು ಭಗವಂತ ಇವರ ಏಕರೂಪ ಸಾತತ್ಯದ ಮೂಲಕ ಬರಬರುತ್ತ ಕಪ್ಪು ಬಣ್ಣವು ಸರಿದು ಪ್ರಕಾಶದ ಉದಯವಾಗುತ್ತದೆ. ಇದೇ ಜ್ಞಾನ. ಈಗ ಭಕ್ತನು ಜ್ಞಾನಿ ಭಕ್ತನಾಗುತ್ತಾನೆ. ಇದು ಭಾಗವತಮಾರ್ಗ. ಈ ಮಾರ್ಗವನ್ನು ಜೈಮಿನಿ ಭಾರತವು ಅವಲಂಬಿಸುತ್ತದೆ. ಈ ಕಾವ್ಯದಲ್ಲಿ ಬರುವ ಹಂಸಧ್ವಜ, ಮಯೂರಧ್ವಜ, ವೀರವರ್ಮ ಮತ್ತು ಬಕದಾಲ್ಭ್ಯಮುನಿ ಶ್ರೀಕೃಷ್ಣಸ್ಮರಣೆಯಲ್ಲಿ ತಲ್ಲೀನರಾಗುತ್ತಾರೆ. ಆದುದರಿಂದ ಶ್ರೀಕೃಷ್ಣ (ಕೃಷ್ಣವರ್ಣ, ಕಪ್ಪು ಬಣ್ಣ) ಪ್ರತ್ಯಕ್ಷನಾಗುತ್ತಾನೆ. ಶ್ರೀಕೃಷ್ಣನು ಹಂಸ ಧ್ವಜನನ್ನು ಆಲಿಂಗಿಸಿ, ಮಯೂರಧ್ವಜನನ್ನು ಇಬ್ಭಾಗಿಸಿ, ಬಕದಾಲ್ಭ್ಯನನ್ನು ಧ್ಯಾನದಿಂದ ಎಬ್ಬಿಸಿ ಜ್ಞಾನಪ್ರಕಾಶ ಉದಯವಾಗುವಂತೆ ಮಾಡುತ್ತಾನೆ. ಇದಾದ ಮೇಲೆ ಇವರೆಲ್ಲ ಜ್ಞಾನಿಭಕ್ತರಾಗಿ ಶ್ರೀಕೃಷ್ಣನೇ ಮಾಡಿಸುವಂಥ ಯಜ್ಞಕ್ಕೆ ಅವನೊಂದಿಗೆ ಹೊರಡುತ್ತಾರೆ.

ಸಂ.ಜೈ.ಭಾ. ಮತ್ತು ಕ.ಜೈ.ಭಾ. ದಲ್ಲಿ ಶ್ರೀಕೃಷ್ಣನ ವಿಷಯ ಒಂದೇ ಆಗಿದೆ. ಆದರೆ ಆ ವಿಷಯುವನ್ನು ವಿವರಿಸುವ ರೀತಿ ಭಿನ್ನವಾಗಿದೆ. ಸಂ.ಜೈ.ಭಾರತದ್ದು ಕಥನರೀತಿ, ಕ.ಜೈ.ಭಾರತದ್ದು ದರ್ಶನರೀತಿ. ಸಂ.ಜೈ.ಭಾ.ವು ವಿಷಯದ ಮೇಲೆ ವಿಷಯವನ್ನು ಹೇಳುತ್ತ ಹೋಗುವುದರಿಂದ ಅದರಲ್ಲಿ ಜಡತೆ ಬರುತ್ತದೆ. ಕ.ಜೈ.ಭಾರತವು ಭಕ್ತನು ಮಾಡುವ ಕೃಷ್ಣಸ್ತುತಿ, ಸ್ತುತಿಯಿಂದಾಗುವ ಪರಿಣಾಮ, ಪರಿಣಾಮದಿಂದ ಕೃತಿ ಹೀಗೆ ಪಾತ್ರವನ್ನು ಚಿತ್ರಿಸುತ್ತ ಹೋಗುತ್ತದೆ. ಸಂ.ಜೈ.ಭಾ.ವು ಪಾತ್ರದ ಪರಿಚಯವನ್ನು ಮಾಡಿಕೊಡುತ್ತದೆಯೆ ಹೊರತು ಅದನ್ನು ಚಿತ್ರಿಸುವುದಿಲ್ಲ. ಸಂಸ್ಕೃತ ಕಾವ್ಯದಲ್ಲಿ ಓದು ಗನು ಪಾತ್ರಗಳಿಂದ ಬೇರೆಯಾಗಿ ಉಳಿಯುತ್ತಾನೆ; ಕನ್ನಡ ಕಾವ್ಯದಲ್ಲಿ ಪಾತ್ರಗಳಲ್ಲಿ ತಾದಾತ್ಮ್ಯಹೊಂದುತ್ತಾನೆ. ಕಾವ್ಯೋದ್ದೇಶದ ಸಾಫಲ್ಯದ ದೃಷ್ಟಿಯಿಂದ ಕನ್ನಡ ಕಾವ್ಯದ ರೀತಿ ಹೆಚ್ಚು ಪ್ರಭಾವಶಾಲಿ.

'ವ್ಯಾಸರದು ಇತಿಹಾಸದ ಅಥವಾ ಧರ್ಮದ ಮಹಾಯುಗವಾಗಿ, ಪಂಪನದು ಚರಿತ್ರೆಯ ವೀರಯುಗವಾದರೆ, ನಾರಣಪ್ಪನದು ಭಕ್ತಿಯುಗ; ವೈಷ್ಣವ ಮತದ ಪ್ರಾಬಲ್ಯದ ಯುಗ. ಭಾರತಯುಗವು ಮುಗಿದು ಭಾಗವತರ ಭಕ್ತಿಯಿಂದ ಕೃಷ್ಣ ಚಾರಿತ್ರದ ಲೀಲಾವಿಲಾಸಗಳೆಲ್ಲ, ಅವತಾರಕಾರ್ಯಗಳೆಲ್ಲ ವೀರರ ಸುತ್ತಲೂ ಹೆಣೆದು ಕೊಂಡು ರಾಗಯುಕ್ತವಾಗಿದ್ದ ಕಾಲ' ಎಂದು ವಿ. ಸೀತಾರಾಮಯ್ಯನವರು ಅಭಿಪ್ರಾಯ ಪಟ್ಟಿದ್ದಾರೆ.[1] ಈ ಕಾಲಾವಧಿಯ ಇನ್ನೊಂದು ಕಾಣಿಕೆ, ಲಕ್ಷ್ಮೀಶ ಕವಿಯ ಜೈಮಿನಿ ಭಾರತ.

ನಾಯಕನಷ್ಟೇ ಮಹತ್ತ್ವದ ಪಾತ್ರ, ನಾಯಕಸದೃಶ ಪಾತ್ರವೆಂದರೂ ಸರಿಯೆ– ಅದು ಯಜ್ಞಾಶ್ವ. ಈ ಯಜ್ಞಾಶ್ವ ಶ್ರೀಕೃಷ್ಣನಂತೆ ಎಲ್ಲ ಸಂಧಿಗಳಲ್ಲಿಯೂ ಹರಿದಿದೆ.

1 'ಕುಮಾರವ್ಯಾಸ ಪ್ರಶಸ್ತಿ', ಪು. ೧೬೫.

ಯಜ್ಞಾಶ್ವಪ್ರಾಪ್ತಿಗಾಗಿ ಧರ್ಮ ಹಾಗೂ ವ್ಯಾಸರ ಪರ್ಯಾಲೋಚನೆಯಲ್ಲಿ ಪ್ರಾರಂಭವಾದ ಕಥಾನಕವು ಯಜ್ಞಾಶ್ವದ ಬಲಿಯೊಂದಿಗೆ ಮುಕ್ತಾಯಗೊಳ್ಳುತ್ತದೆ. ಇಲ್ಲಿಯ ಯಜ್ಞವು ಅಹಿಂಸಾಯಜ್ಞವಾಗಿದೆ. ಇಲ್ಲಿ ಯಜ್ಞಾಶ್ವವು ಕಪ್ಪುರದ ಪ್ರಾಣಿಯಾಗುತ್ತದೆ, ಕೃಷ್ಣಸಾಯುಜ್ಯವನ್ನು ಪಡೆಯುತ್ತದೆ. ಹೀಗೆ ಯಜ್ಞಾಶ್ವವೂ ಶ್ರೀಕೃಷ್ಣಾಂತರ್ಗತವಾಗುವುದರಿಂದ ಈ ಕಾವ್ಯಕ್ಕೆ ಕೃಷ್ಣನೇ ನಾಯಕನಾಗುತ್ತಾನೆ. ಸರ್ವವ್ಯಾಪಿ ಮಾನವ ಲೀಲಾವತಾರದ ಕಥೆಯೆ ಈ ಜೈಮಿನಿ ಭಾರತ.

### ಸಮಾರೋಪ

ಬಹಳ ಸನ್ಮಾನಮಂ ತಳೆದಖಿಳ ಭೂಸುರ ನಿ
ವಹಮೈದೆ ಕೊಂಡಾಡಿತಂಬುಜದಳಾಂಬಕನ
ಮಹಿಮೆಯಂ ಧರ್ಮಜನ ಚರಿತಮಂ ಭೀಮನ ವಿಶೇಷಗುಣಮಂ ಪಾರ್ಥನ
ವಿಹಿತವಿಭವಂಗಳಂ ನಕುಲನ ವಿವೇಕಮಂ
ಸಹದೇವನುಚಿತಮಂ ಧೌಮ್ಯನ ವಿಚಾರಮಂ
ಮಹಿಯಮನ್ನೆಯರ ಸನ್ಮೈತ್ರಿಯಂ ಮುನಿವರಾಧಿಕ್ಯಮಂ ತತ್ಕ್ರತುವನು ||

(೩೪-೩೫)

ಈ ಒಂದು ಪದ್ಯದಲ್ಲಿ ಕವಿ ಲಕ್ಷ್ಮೀಶನು ತನ್ನ ಕಾವ್ಯದಲ್ಲಿಯ ಪಾತ್ರಗಳ ಶೀಲವನ್ನು ಸಂಗ್ರಹವಾಗಿ ಹೇಳಿದ್ದಾನೆ. ಸಂ.ಜೈ.ಭಾರತದಲ್ಲಿ ಈ ಬಗೆಯ ಮಾತುಗಳಿಲ್ಲ. ಪಂಪನು ತನ್ನ ವಿಕ್ರಮಾರ್ಜುನ ವಿಜಯದ ಕೊನೆಗೆ 'ಚಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ ಗಂಡಿನೊಳ್ ಭೀಮಸೇನಂ' ಎಂದು ಪಾತ್ರಗಳ ಪ್ರಮುಖ ಶೀಲವನ್ನು ಗುಣವನ್ನು ಎತ್ತಿ ತೋರಿದ ಪದ್ಯ (೧೪.೬೪) ಲಕ್ಷ್ಮೀಶನ ಮೇಲೆ ಪ್ರಭಾವ ಬೀರಿರಬೇಕು ಎಂದು ತೋರುತ್ತದೆ.

ಯಜ್ಞಕ್ಕಾಗಿ ಬಂದ ಭೂಸುರರು 'ಬಂದ ಮುನಿಗಳ ಪಾದಮಂ ತೊಳೆದು ಸತ್ಕಾರದಿಂದೆ ಪೂಜಿಸಿ ನಿವಾಸಸ್ಥಾನಮಂ ಕೊಟ್ಟು ವಂದಿಸುವನಚ್ಯುತಂ' (೩೪.೬) ಕಂಡು ಆಶ್ಚರ್ಯಪಟ್ಟರು. ಯಜ್ಞಾಶ್ವದ ಕಳೇವರವು ಕರ್ಪೂರವಾದುದನ್ನು ಕಂಡಾಗ ಕೃಷ್ಣನಿಂದ ನಮಸ್ಕರಿಸಲ್ಪಟ್ಟ ಮುನಿಗಳಿಗೆ ಕೃಷ್ಣನ ದೇವತ್ವದ ಮಹಿಮೆಯ ಅರಿವಾಗುತ್ತದೆ. ಇಡೀ ಕಾವ್ಯವೇ ಶ್ರೀಕೃಷ್ಣಮಹಿಮೆಯದಾಗಿದೆ. ಆತನು ಯಜ್ಞಾಶ್ವಪರಿಭ್ರಮಣ ಕಾಲದಲ್ಲಿ ಅರ್ಜುನನಿಗೆ ಬೆಂಬಲಿಗನಾಗದೆ ಇದ್ದಿದ್ದರೆ ಧರ್ಮನ ಯಜ್ಞವೇ ಪೂರ್ತಿಯಾಗುತ್ತಿರಲಿಲ್ಲ.

ಧರ್ಮಜನ ರಾಜ್ಯದ ವೈಭವ, ಆತನ ಪ್ರಜೆಗಳ ರೀತಿನೀತಿಗಳನ್ನು ಕಂಡೂ, ಅಶ್ವಮೇಧಕ್ಕಾಗಿ ಯಜಮಾನ-ಯಜಮಾನಿಯರಿಬ್ಬರೂ (ಧರ್ಮ-ದ್ರೌಪದಿ) ಅಸಿಧಾರಾವ್ರತಸ್ಥರಾಗಿರುವುದನ್ನು ನೋಡಿಯೂ ಕೃಷ್ಣನ ಕೃಪೆಗೆ ಪಾತ್ರರಾದ ಧರ್ಮಸುತಾದಿಗಳ ದಿವ್ಯಚರಿತವನ್ನು ಭೂಸುರರು ಮತ್ತೆ ಮತ್ತೆ ನೆನೆದಿದ್ದಾರೆ.

ಯಜ್ಞಕ್ಕಾಗಿ ಆಗಮಿಸಿದ ಭೂಸುರರಿಗೆ, 'ಬಯಸಿ ಬಯಸಿದ ಸುವಸ್ತುಗಳನಿತ್ತು

ಪಾಟಿಸುವ ಭೀಮ ಫಲುಗುಣರ 'ಸನ್ಮಾನದ ಸಘಾಟಿಕೆಯ' ಅನುಭವವಾಗಿದೆ. ಭೀಮನ ದಾನಗುಣ ಅನೇಕರನ್ನು ಆಕರ್ಷಿಸಿದೆ. ಅದು ಅವನ ವಿಶೇಷಗುಣವನ್ನು ತೋರಿದೆ.

ಅರ್ಜುನನು ದಿಗ್ವಿಜಯ ಮಾಡಿ ವೈಭವ ಪಡೆದುದನ್ನು ಕಣ್ಣಾರೆ ನೋಡಿದ ಭೂಸುರರು ತಲೆದೂಗಿದರು. ಅರ್ಜುನನಿಗೆ ಚಿತ್ರಾಂಗದೆ, ಉಲೂಪಿ, ಬಭ್ರುವಾಹನ ಮತ್ತು ಪ್ರಮಿಳೆಯರ ಪ್ರಾಪ್ತಿಯೂ ಒಂದು ವೈಭವಲಕ್ಷಣವೇ.

'ಸಕಲ ಜನಜಾಲಮಂ ತಾರತಮ್ಯವನಱಿತು ಆದರಿಸಿದ ನಕುಲನಿಗೆ' ತಾರತಮ್ಯ ಜ್ಞಾನವಿದೆ, ವಿವೇಕವಿದೆ ಎಂಬುದನ್ನು ಅಲ್ಲಿ ನೆರೆದ ಋಷಿಮುನಿಗಳು ಅರಿತುಕೊಂಡರು. ಅಲ್ಲದೆ ನಕುಲನಿಗೆ ಅಶ್ವಹೃದಯ ಚೆನ್ನಾಗಿ ತಿಳಿದಿದೆ. ಅವನು **ವಿಪುಲಮತಿ.** 'ಉಪರಿ ಲೋಕದೊಳ್ ಅಶ್ವಪದವಿಯಂ ತಾನೊಲ್ಲೆ, ಉಪಮೆಗೈದದ ಕೃಷ್ಣ ಸಾಯುಜ್ಯಮಂ ಪಡೆವೆ' ಎಂದು ಯಜ್ಞಾಶ್ವವು ನಕುಲನಿಗೆ ಹೇಳುತ್ತದೆ; ಅದನ್ನವನು ಸಾರ್ವಜನಿಕರಿಗೆ ತಿಳಿಸುತ್ತಾನೆ—ಜರಗುವುದೂ ಹಾಗೆಯೆ.

'ಅವರವರ ಮಂದಿರಕೆ ಬೇಕಾದ ವಸ್ತುಗಳಂ ಅಡಿಗಡಿಗೆ ಒದವಿಸುವ' ಬಾಲಕ ಸಹದೇವನ **ಉಚಿತ** ಬುದ್ಧಿಯನ್ನು ಜನ ಮೆಚ್ಚಿಕೊಂಡಿದೆ.

ನಕುಲನು ಅಶ್ವಹೃದಯವನ್ನು ತಿಳಿಸಿದಾಗ ಧೌಮ್ಯನು ಹಯದ ಎಡಗಿವಿಯನ್ನು ಹಿಂಡಿ ಕ್ಷೀರಧಾರೆಯನ್ನು ತರಿಸುತ್ತಾನೆ. ಆ ಋಷಿಯ ಅಪ್ಪಣೆಯಂತೆ ಭೀಮನು ಅಶ್ವದ ರುಂಡವನ್ನು ತುಂಡರಿಸಲು, ಅದು ನಭಕ್ಕೆ ಹಾರಿ ಅದರ ಜೀವಾತ್ಮವು ಅಚ್ಯುತಾಸ್ಯ ದೊಳಗೆ ಅಡಗುವುದನ್ನು ಧೌಮ್ಯನು ತೋರಿಸಿದನು. ಧೌಮ್ಯನ **ವಿಚಾರ** ಬುದ್ಧಿಗೆ ಹೊಳೆದ ಅಶ್ವಹನನದ ರೀತಿಯನ್ನು ಕಂಡು ಜನರು ಆಶ್ಚರ್ಯಪಟ್ಟರು.

ಯಜ್ಞಕ್ಕಾಗಿ ಆಗಮಿಸಿದ ಅನೇಕ ರಾಜಾಧಿರಾಜರ ಸನ್ಮೈತ್ರಿ ಧರ್ಮನಿಗೆ ಕೃಷ್ಣ ಸಹಾಯದಿಂದ ದೊರಕಿತು ಎಂದು ಪ್ರಜೆಗಳು ಆನಂದಪಟ್ಟರು. ಹಿಂಸಾತ್ಮಕ ಯಜ್ಞ ವನ್ನು ಕಂಡವರಿಗೆಲ್ಲ ಈ ಅಹಿಂಸಾತ್ಮಕ ಯಜ್ಞವು ಹೊಸತೆನಿಸಿತು.

ಪಾತ್ರಗಳ ಶೀಲವನ್ನು ಹೀಗೆ ಸಂಗ್ರಹಿಸಿಕೊಡುವ ಲಕ್ಷ್ಮೀಶನ ರೀತಿ ಸಂ. ಜೈ. ಭಾರತದ್ದಲ್ಲ.

ಮಾತು, ಮನಸ್ಸಿನ ಮೇಲಾಗುವ ಅದರ ಪರಿಣಾಮ, ಅದರಿಂದ ಉಂಟಾಗುವ ಪ್ರತಿಕ್ರಿಯೆ ಅಥವಾ ಆ ಇದಿರು ವ್ಯಕ್ತಿ ಆಡುವ ಮಾತು ಇವುಗಳಿಂದ ಲಕ್ಷ್ಮೀಶನು ಪಾತ್ರಗಳನ್ನು ಅರಳಿಸುತ್ತಾನೆ. ಭಿನ್ನ ಭಿನ್ನ ಮನೋಧರ್ಮವುಳ್ಳ ಏಕಜಾತಿಯ ಪಾತ್ರ ಗಳನ್ನು ಬದಿಬದಿಗೆ ನಿಲ್ಲಿಸಿ ಆ ಆ ಪಾತ್ರಗಳ ಅಸದೃಶತೆಯನ್ನು ಎತ್ತಿ ತೋರಿಸುತ್ತಾನೆ ಕವಿ. ಉದಾಹರಣೆಗಾಗಿ ಈ ಸಂದರ್ಭಗಳನ್ನು ನೋಡಬಹುದು.

ಸತ್ಯಭಾಮೆ : 'ನಿಜಶೌರ್ಯದಿಂ ಪ್ರದ್ಯುಮ್ನನ ಮಾನವಂ ಭಂಗಿಸಿದೆ! ನಿನ್ನ ಜಗದೊಳಾವ ಮಾನವಂ ಬಣ್ಣಿಸುವಂ ಇನ್ನು! ನಿನ್ನ ಅದಟಿಗೆ ಸಮಾನಮಂ ಕಾಣೆ!' ಎಂದು ಹಂಗಿಸಿದ ಮಾತಿನ

ಪ್ರತಿಕ್ರಿಯೆ : 'ಕಂದೆಱೆದು, ವಲ್ಲಭೆಯ ನುಡಿಗೆ ಲಜ್ಜಿಸಿ ಮನಂ ಕಂದೆ, ಕಣ್ಣಾಲಿಗಳ್ ಕೆಂಪಡರಿ'ದವು ಕೃಷ್ಣನಿಗೆ ಎಂದು ಕವಿ ಚಿತ್ರಿಸುತ್ತಾನೆ.

ಹಾಗೆಯೆ,

'ಕೊರಳ ಸರಿಸಕೆ ನಭದೊಳು ಬಹ ಸರಳನು ಎಚ್ಚು ನಿಮಿಷಾರ್ಧದೊಳ್
ಕಡಿದು ಗಹಗಹಿಸುವ ಸುಧನ್ವನಂ ಕಂಡು ಅವನ ಸೈನ್ಯದೊಳ್ ಕಹಳೆ
ಗಳ್ ಸೂಳೈಸಿದುವು; ಮೆಚ್ಚಿದರ್ ದಿವಿಜರ್; ಅಚ್ಯುತಂ ಬೆಱಗಾದನು' (೧೩-೫೮)

ಎಂಬಲ್ಲಿ ಕ್ರಿಯೆ ಪ್ರತಿಕ್ರಿಯೆಗಳನ್ನು ಕವಿಯು ಸೂಕ್ಷ್ಮದೃಷ್ಟಿಯಿಂದ ತೋರಿಸಿದ್ದಾನೆ. ಪಾತ್ರಗಳ ಭಾವನೆಗಳನ್ನು ಬಿಡಿಬಿಡಿಸಿ ತೋರಿಸುವತ್ತ ಲಕ್ಷ್ಮೀಶನು ಸಾಕಷ್ಟು ಎಚ್ಚರ ವನ್ನು ವಹಿಸುತ್ತಾನೆ. ಸಂ.ಜೈ. ಭಾರತದ ಪಾತ್ರಗಳು ಮಾತನಾಡುವ ರೀತಿ ಹೀಗಿಲ್ಲ. ಸುಮಾರಾಗಿ ಎಲ್ಲ ಪಾತ್ರಗಳ ಮಾತು ತನ್ನ ಮಾತು ಎಲ್ಲವನ್ನೂ ದ್ರುತಗತಿಯಿಂದ ಕವಿಯೇ ಆಡಿಬಿಡುತ್ತಾನೆ. ಲಕ್ಷ್ಮೀಶನು ಪಾತ್ರಗಳಿಗೆ ಮಾತನಾಡಲು ಕೊಡುತ್ತಾನೆ, ಅವುಗಳ ವಿಚಾರಗಳನ್ನೂ ಭಾವಗಳನ್ನೂ ಹಬ್ಬಲು ಬಿಡುತ್ತಾನೆ. ಅವು ತಮ್ಮ ತಮ್ಮ ಗುಣವಿಶೇಷಗಳಿಂದ ವಾಚಕನ ಹೃದಯದಲ್ಲಿ ತುಂಬಿ ನಿಲ್ಲುತ್ತವೆ.

ಸಂ.ಜೈ.ಭಾರತದ ವಸ್ತು ಮತ್ತು ಪಾತ್ರಗಳನ್ನು ತೆಗೆದುಕೊಂಡು ಲಕ್ಷ್ಮೀಶನು ವಾಚಕರಿಗೆ ಕೊಟ್ಟದ್ದೇನು? ಬರೀ ಅನುವಾದ ತಾನೆ? ಎಂಬ ಒಂದು ಅಭಿಪ್ರಾಯ ದವರೂ ಇದ್ದಾರೆ. ಲಕ್ಷ್ಮೀಶನು ಸಂ.ಜೈ.ಭಾರತದ ಕಥಾವಸ್ತುವನ್ನು ಬರೀ ಕನ್ನಡದಲ್ಲಿ ಕೊಟ್ಟಿಲ್ಲ. ಆ ವಸ್ತುವನ್ನು ಭರತನಾಟ್ಯಶಾಸ್ತ್ರದ ಪ್ರಕಾರ ಪಂಚಸಂಧಿಗಳಲ್ಲಿ ಹೊಂದಿಸಿ ದ್ದಾನೆ. (ಇದರ ವಿವರಣೆಯನ್ನು ವಸ್ತು ಎಂಬ ಪ್ರಕರಣದಲ್ಲಿ ಕೊಟ್ಟಿದೆ.) ಅಲ್ಲಿನ ಪಾತ್ರಗಳೇ ಇಲ್ಲಿಯೂ ನಿಜ. ಆದರೆ ಅವನ್ನು ಹಾಗೆಯೇ ಎಳೆದು ತಂದಿಲ್ಲ. ಹೊಸ ಬಣ್ಣವನ್ನು ಹಚ್ಚಿ, ಚೆನ್ನಾದ ಮಾತು ಕಲಿಸಿ, ಜೀವ ಭಾವ ತುಂಬಿ ಕಳೆಗೊಳಿಸಿ ತನ್ನ ಕಾವ್ಯದಲ್ಲಿ ಆಡಿಸಿದ್ದಾನೆ, ಕನ್ನಡ ಜೈಮಿನಿ ಭಾರತದ ಕವಿ. ಲಕ್ಷ್ಮೀಶನು ಸಂ. ಜೈ. ಭಾರತದ ಯಾವುದೇ ಮಾತನ್ನು ಅನುವಾದಿಸಿಲ್ಲ; ಅನುಭವಿಸಿ ಸ್ವತಂತ್ರ ಪ್ರತಿಸೃಷ್ಟಿ ಯನ್ನು ರಚಿಸಿದ್ದಾನೆ. ಅದು ವಿಶ್ವಾಮಿತ್ರಸೃಷ್ಟಿ ಎನಿಸುವಂತಿಲ್ಲ, ಪರ-ಬ್ರಹ್ಮಸೃಷ್ಟಿ ಎನಿಸುವಂತಾಗಿದೆ ಎಂದು ಹೇಳಬಹುದು. ಯಾವುದನ್ನು ಶಬ್ದಶಃ ಅನುವಾದ ಮಾಡಿದ್ದರೆ ನಡೆಯುತ್ತಿತ್ತೋ ಅದನ್ನು ಲಕ್ಷ್ಮೀಶನು ತನ್ನದಾದ ರೀತಿಯಲ್ಲಿ ಕೊಡುತ್ತಾನೆ ಎಂಬು ದಕ್ಕೆ ಒಂದು ಉದಾಹರಣೆಯನ್ನು ನೋಡಬಹುದು :

ಸಂ.ಜೈ.ಭಾ. : ಲವನು ಮಾಡಿದ ಸೂರ್ಯಸ್ತುತಿ ಹೀಗಿದೆ (ಅ. ೩೩) :

ನಮಃ ಸವಿತ್ರೇ ಸೂರ್ಯಾಯ ಪೂಷ್ಣೇ ಜ್ಯೋತಿಷ್ಮತೇ ನಮಃ
ನಮಃ ಸಪ್ತತುರಂಗಾಯ ನಿತ್ಯಂ ವ್ಯೋಮಚರಾಯಚ ॥ ೧೦ ॥
ಮೇಷಾದೀನಾಮಧೀಶಾಯ ಮಾಸಿ ಮಾಸಿ ನಮೋ ನಮಃ
ಅಯನದ್ವಯ ಕರ್ತ್ರೇ ಚ ಪ್ರಕಾಶಾಯ ನಮೋಽಸ್ತು ತೇ ॥ ೧೧ ॥
ಮೂಕಾಂಧಬಧಿರಾಣಾಂ ಚ ವಾಙ್ನೇತ್ರಶ್ರೋತ್ರದಾಯ ಚ
ಶಿರೋತ್ರಿಶೂಲಕುಷ್ಠಾನಾಂ ನಾಶಕಾಯ ನಮೋಽಸ್ತು ತೇ ॥ ೧೨ ॥

ಹೀಗೆ ಇನ್ನೂ ೫ ಶ್ಲೋಕಗಳ ಸ್ತುತಿಯಿದೆ. ಈ ವಿಲಂಬಿತ ಸ್ತೋತ್ರವನ್ನು ಕವಿ ಲಕ್ಷ್ಮೀಶನು ಸಂಗ್ರಹವಾಗಿ ತನ್ನ ಕ. ಜೈ. ಭಾರತದಲ್ಲಿ:

ಮಿತ್ರಾಯ, ಸೂರ್ಯಾಯ, ಹಂಸಾಯ, ಪೂಷ್ಣೇ ಸ
ವಿತ್ರೇ. ಜಗಚ್ಚಕ್ಷುಷೇ, ಚಂಡಘೃಣಯೇ, ಪ
ವಿತ್ರಾಯ, ಪಿಂಗಾಯ, ಪುರುಷಾಯ, ಭಾನವೇ, ಜ್ಯೋತಿಷೇ, ಭಾಸ್ಕರಾಯ,
ಸತ್ರೈ ೬(ತ್ರೈ ೭ ೬?) ಕರೂಪಾಯ, ವಿಮಲಾಯ, ಸಾಕ್ಷಿಣೇ,
ಕ್ಷೇತ್ರಿಣೆ, ಸಹಸ್ರಕಿರಣಾಯ, ರವಯೇ, ಮಂದ
ಪಿತ್ರೇ, ದಿವಾಕರಾಯ, ಬ್ರಹ್ಮವಿಷ್ಣುರುದ್ರಾತ್ಮನೇ ತುಭ್ಯಂ ನಮಃ || (೨೦-೪೦)

ಎಂದು ಒಂದು ಪದ್ಯದಲ್ಲಿ ಮುಗಿಸುತ್ತಾನೆ. ಲಕ್ಷ್ಮೀಶನ ಪ್ರತಿಭೆಯಿಂದ ಈ ಸ್ತೋತ್ರ ಕನ್ನಡದಲ್ಲಿ ಹೊಸರೂಪವನ್ನು ತಾಳಿದೆ. ಸೃಷ್ಟಿಸ್ಥಿತಿಲಯ ಶಕ್ತಿಗಳಾದ ತ್ರಿಮೂರ್ತಿಗಳೂ ಒಂದೇ ಎಂದು, ಸೂರ್ಯನಲ್ಲಿ ಮೂವರನ್ನೂ ಏಕೀಕರಿಸಿ 'ಬ್ರಹ್ಮ ವಿಷ್ಣು ರುದ್ರಾತ್ಮನೇ' ಎಂದು ಒಂದು ಸಂದೇಶವನ್ನು ಕವಿ ನಮಗಿಲ್ಲಿ ಕೊಟ್ಟಿದ್ದಾನೆ.

ಸಂ. ಜೈ. ಭಾ.: ಭೀಷಣನ ರಾಜ್ಯದಲ್ಲಿಯ ರಕ್ಕಸಿಯರು ಅರ್ಜುನನ ಧ್ವಜದ ಹನುಮಂತನನ್ನು ಕಂಡು ಆಡಿದ ಮಾತು ಬರುತ್ತದೆ (೨೨. ೫೭-೫೮). ಅವು ಎಲ್ಲಾ ಲಕ್ಷ್ಮೀಶನಲ್ಲಿಯೂ ಇವೆ.

ಕ. ಜೈ. ಭಾ.: ಆಗಸಕೆ ಚಿಗಿದು, ರವಿಯಂ ತುಡುಕಿ, ಧೀಂಕಿಟ್ಟು
ಸಾಗರಕೆ, ಸೀತೆಯಂ ಕಂಡು, ಬನಮಂ ಕಿಳ್ತು,
ತಾಗಿದ ನಿಶಾಟರಂ ಸದೆದು, ಲಂಕೆಯನುರಿಪಿ, ದಶವದನನಂ ಭಂಗಿಸಿ,
ಪೋಗಿ ಪಾತಾಳದಸುರರನೊಕ್ಕಲಿಕ್ಕಿ, ಪಿರಿ
ದಾಗಿ ಬೆಟ್ಟಂಗಳಂ ಪೊತ್ತು, ಮಿಾಱಿದ ಕಪಿಯ
ನೀಗ ನಿಟ್ಟಿಸಿ ಬೆದಱದಿರ್ದಪೆನದೆಂತಂಟೆಂದೊರ್ವ ರಕ್ಕಸಿ ನುಡಿದಳು. (೧೬-೩೪)

ಎಂಬ ವರ್ಣನೆ ಲಕ್ಷ್ಮೀಶನಿಗೆ ಮಿಾಸಲಾದದ್ದು. ಸಂಸ್ಕೃತ ಮೂಲದಲ್ಲಿ ಇದು ಇಲ್ಲ. ಹನುಮನನ್ನು ನೋಡಿದ ರಕ್ಕಸಿಗೆ ಅವನ ಹಿಂದಿನ ಕತೆಯೆಲ್ಲ ನೆನಪಾಗುತ್ತದೆ. ಆ ಘಟನೆಗಳನ್ನೆಲ್ಲ ಒಂದಾರುಸಾಲಿನಲ್ಲಿ ತಂದು, ಪಾತ್ರದ ಗುಣವಿಶೇಷಗಳನ್ನು ಮೂರ್ತೀಕರಿಸಿ ನಿಲ್ಲಿಸುವ ರಚನಾಶಕ್ತಿ ಕವಿ ಲಕ್ಷ್ಮೀಶನಿಗಿದೆ. ಸಂಧಿ ೧೮ ಪದ್ಯ ೧೦ರಲ್ಲಿ ಲಕ್ಷ್ಮೀಶನ ಕೌಸಲ್ಯೆ, ರಾಮನ ಮೈಮೇಲೆ ಕೈಯಾಡಿಸುವ ವಾತ್ಸಲ್ಯದ ಬಗೆ, ಗಾಯುಗಳನ್ನು ಕಂಡು ಮರುಗಿ ಸವತಿಯಾದ ಕೈಕೆಯನ್ನು ಬಯ್ಯುವ ಸ್ತ್ರೀಸಹಜಭಾವಗಳನ್ನು ಇದೇ ಸಂದರ್ಭದ ಸಂಸ್ಕೃತ ಮೂಲದ ವರ್ಣನೆಯೊಂದಿಗೆ ಹೋಲಿಸಿ ನೋಡಬಹುದು (ಅ.೨೬, ೧೪-೧೮). ಕನ್ನಡ ಜೈಮಿನಿ ಭಾರತದ ಶ್ರೀಕೃಷ್ಣನ ಪಾತ್ರಚಿತ್ರಣವನ್ನು–

'ದೇವ ದೇವರದೇವನೆಂಬುದಂ ಮಾನುಷ್ಯ
ಭಾವದಿಂ, ಲಕ್ಷ್ಮೀವಿಲಾಸನೆಂದೆಂಬುದಂ
ಗೋವಳಯರೊಡನಾಟದಿಂದೆ ನೀಗಾಡಿದಂತೀಗ ಪದನಖದೊಳೊಗೆದು
ಪಾವನವೆನಿಸುವ ಗಂಗಾಜಲವನೆತ್ತುವ ಮ
ಹಾ ವಿಭುವಿನೆಸವ ಲೀಲೆಗೆ ಕೈಮುಗಿದು' (೩೩-೪೬)

ಈ ಯಜ್ಞಕ್ಕೆ ನೀರು ಹೊರುವ ಸಂದರ್ಭದಲ್ಲಿ ಕೊಟ್ಟಿದ್ದಾನೆ. ಸಂ.ಜೈ.ಭಾ.ದಲ್ಲಿ (೬೩.೬೬) 'ಮುನಿಗಳು ಶ್ರೀಕೃಷ್ಣನನ್ನು ಸ್ತುತಿಸಿದರು, ಗಾಯಕರು ಹಾಡಿದರು, ನರ್ತಕಿಯರು ನರ್ತಿಸಿದರು' ಎಂದು ಮಾತ್ರವಿದೆ. ಇಲ್ಲಿ ಲಕ್ಷ್ಮೀಶನು ಕೊಟ್ಟ ಶ್ರೀಕೃಷ್ಣಚಿತ್ರ ಸಂಸ್ಕೃತ ಜೈಮಿನಿಯದಲ್ಲ; ತನ್ನದೇ ಆದ ಪ್ರತಿಭಾಸ್ಪರ್ಶಮಣಿಯಿಂದ ಸುವರ್ಣವಾದ ಶ್ರೀಕೃಷ್ಣನ ಮನೋಹರ ಸಜೀವ ಚಿತ್ರವನ್ನು ಅವನು ತೋರಿಸಿದ್ದಾನೆ. ಗಂಗೆಯನ್ನು ತಲೆಯಲ್ಲಿ ತಳೆದ ಕೃಷ್ಣನು ಶಿವನಲ್ಲವೆ ಎಂಬ ಕಲ್ಪನೆ ಇಲ್ಲಿ ನಮಗೆ ಬರುವಂತಿದೆ.

ಜೈಮಿನಿ ಭಾರತದಲ್ಲಿ ಶಂಖಲಿಖಿತರಂಥ ಕರ್ಮಠ ಪಾತ್ರಗಳು, ಲಕ್ಷಣಗಳನ್ನು ನೋಡಿ ಭವಿಷ್ಯವನ್ನು ನುಡಿವ ಬ್ರಾಹ್ಮಣರ ಪಾತ್ರಗಳು, ಬೇರೆ ಬೇರೆ ರಾಜರ ಸೋದರರ, ಪುತ್ರರ, ಮಂತ್ರಿಗಳ, ಸೈನಿಕರ ಪಾತ್ರಗಳು; ಶ್ರದ್ಧಾಯಷ್ಟಿ ಹಿಡಿದ ವಿವೇಕನೆಂಬ ಸೇವಕ, ಹಿಂಸಾಯಷ್ಟಿ ಹಿಡಿದ ಕ್ರೋಧನೆಂಬ ಸೇವಕ ಇವರಂತಹ ಚಿಕ್ಕಪುಟ್ಟ ಪಾತ್ರಗಳು; ಗರುಡ ನಂದಿ ಹನುಮಂತರಂತಹ ಸ್ವಾಮಿನಿಷ್ಠಾ ಶೀಲದ ಪಾತ್ರಗಳು ಅಲ್ಲಲ್ಲಿ ಬರುತ್ತವೆ. ಈ ರೀತಿ ಜೈಮಿನಿ ಭಾರತದ ಪಾತ್ರಪ್ರಪಂಚವು ವಿಸ್ತೃತವಾಗಿದೆ.

ವಿಷ್ಣು, ಶಿವ, ಗಣಪತಿ, ಸರಸ್ವತಿ ಈ ದೇವತಾಚತುಷ್ಟಯದ ಸ್ತುತಿಯಿಂದ ಕಾವ್ಯ ಪ್ರಾರಂಭವಾಗುತ್ತದೆ. ಸೂರ್ಯಸ್ತುತಿಯಿಂದ ಲವನಿಗೆ ಅಸ್ತ್ರಪ್ರಾಪ್ತಿ, ಅಗ್ನಿ ಸ್ತುತಿಯಿಂದ ಅರ್ಜುನನ ಸಂಕಟನಿವಾರಣೆ, ಚಂಡಿಕಾಸ್ತುತಿಯಿಂದ ದುಷ್ಟಬುದ್ಧಿ ಮದನರಿಗೆ ಸಪ್ರಾಣತೆ ಕೈಗೂಡುತ್ತದೆ. ಹೀಗೆ ನಾನಾ ದೇವತೆಗಳು ಈ ಕಾವ್ಯದಲ್ಲಿ ಭಾಗವಹಿಸುತ್ತಾರೆ. ಹರಿಯ ಅಡಿಯಿಂದ ಹರನ ಜಡೆಯಲ್ಲಿ ಇದ್ದ ಗಂಗೆ, ಅನುಸಾಲ್ವ, ಜ್ವಾಲೆ, ಮತ್ತು ರಾಮಾಯಣ ಕಥೆಯ ಋಷಿಪತ್ನಿಯರು ಪ್ರಮುಖವಾದ ಸ್ಥಾನವನ್ನು ಪಡೆಯುತ್ತಾರೆ. ಯಜ್ಞಾರಂಭದಲ್ಲಿ ೬೪ ದಂಪತಿಗಳು ಗಂಗಾಜಲವನ್ನು ತರುತ್ತಾರೆ. ಅಶ್ವಪ್ರಾಪ್ತಿ, ಅಶ್ವರಕ್ಷಣೆ, ಅಶ್ವಹನನದ ಮಾತು ಕಾವ್ಯವನ್ನೇ ವ್ಯಾಪಿಸಿದೆ. ಆದುದರಿಂದ ದೇವತೆ, ಗಂಗೆ, ಅಶ್ವ ಈ ಪಾತ್ರಗಳ ಅಭ್ಯಾಸ ಸ್ವತಂತ್ರವಾಗಿ ಆಗಬೇಕು ಎಂದು ತೋರುತ್ತದೆ. ಇವುಗಳಿಗೆ ಕಾವ್ಯದ ಪ್ರಮುಖ ಪಾತ್ರಗಳಷ್ಟು ಮಹತ್ತ್ವವಿದೆ. ಕಾವ್ಯದಲ್ಲಿ ಶಕುನ ಅಪಶಕುನಗಳ ಕೈವಾಡವೂ ಇದೆ. ಇವುಗಳಿಂದ ಕಾವ್ಯಕ್ಕೆ ಸೂಚಕತೆ ಎಂಬ ಗುಣ ಬರುತ್ತದೆ.

ಭಕ್ತಶ್ರೇಷ್ಠರ ಸ್ನೇಹಸಮ್ಮೇಳನವಾದ ಈ ಜೈಮಿನಿ ಭಾರತ ಕಾವ್ಯದಲ್ಲಿ ಯಾವ ಪಾತ್ರವನ್ನೇ ಪರೀಕ್ಷಿಸಲಿ, ಕವಿ ಲಕ್ಷ್ಮೀಶನು ಅದನ್ನು ಸಂ.ಜೈ.ಭಾರತಕ್ಕಿಂತ ಉಚಿತ ವರಿತು ಸ್ಫುಟಗೊಳಿಸುತ್ತಾನೆ, ಅಥವಾ ಕಿರಿದುಗೊಳಿಸುತ್ತಾನೆ. ಕವಿ ತನ್ನ ಪ್ರತಿಭೆಯಿಂದ ಪಾತ್ರಗಳ ಮುಖದಿಂದ ಮಾತುಗಳನ್ನು ಆಡಿಸುತ್ತಾನೆ; ಆ ಆ ಪಾತ್ರಗಳ ಹೃದಯವನ್ನು ಅರಿತು ಭಾವ ಅನುಭಾವ ವ್ಯಭಿಚಾರೀ ಭಾವಗಳನ್ನು ಸೂಕ್ಷ್ಮದೃಷ್ಟಿಯಿಂದ ವಿವರಿಸುತ್ತಾನೆ. ಇದು ಲಕ್ಷ್ಮೀಶನ ಪಾತ್ರಸೃಷ್ಟಿಯ ಮೇಲ್ಮೆ ಎಂದು ಹೇಳಬಹುದು.

ಇನ್ನು ಮುಂದಿನ ಪುಟಗಳಲ್ಲಿ ಕಾವ್ಯದಲ್ಲಿಯ ನಾಟ್ಯಾಂಶಗಳು, ಕಾವ್ಯದ ಛಂದಸ್ಸು, ಅಲಂಕಾರ, ರಸನಿಷ್ಪತ್ತಿ ಇತ್ಯಾದಿ ದೃಷ್ಟಿಗಳಿಂದ ವಿಮರ್ಶಾತ್ಮಕವಾದ ಅಭ್ಯಾಸದ ಪ್ರಯತ್ನವನ್ನು ಮಾಡುತ್ತೇವೆ.

'ಛಂದಸ್ಸು ಲಕ್ಷಣಮಲಂಕಾರ ಭಾವರಸ
ವೊಂದಿ ಕಲೆವೆತ್ತ ಸತ್ಕೃತಿ ಚಮತ್ಕೃತಿ ಯುಕ್ತಿ
ಯೊಂದುಮಿಲ್ಲದ ಕಾವ್ಯಮಶ್ರಾವ್ಯಂ......'

—ಲಕ್ಷ್ಮೀಶ

## ೪/ಕಾವ್ಯ ಸಮೀಕ್ಷೆ

- ಪ್ರಸ್ತಾವನೆ
- ಛಂದಸ್ಸು
- ಲಕ್ಷಣ
- ಅಲಂಕಾರವೈಭವ
- ಶಬ್ದಾಲಂಕಾರ
- ಕಾರಣೋತ್ಪ್ರೇಕ್ಷಾಲಂಕಾರ
- ರೂಪಕ ನೈಪುಣ್ಯ
- ಶ್ಲೇಷ ಮತ್ತು ಇತರ ಅಲಂಕಾರಗಳು
- ಅಷ್ಟಾದಶ ವರ್ಣನೆ
- ರಸಚಕ್ರ
- ಕಾವ್ಯದಲ್ಲಿಯ ಐಕ್ಯ ವಿಚಾರ
- ಪುರುಷಾರ್ಥವಿಚಾರ
- ಕಥನ ಕಲೆ
- ಶೈಲಿ
- ಸಮಾರೋಪ

### ಪ್ರಸ್ತಾವನೆ

ಲಕ್ಷ್ಮೀಶನು ಒಬ್ಬ ದಾರ್ಶನಿಕ ಕೀರ್ತನಕಾರ. ಅವನ ಕೃತಿ ಕನ್ನಡ ಜೈಮಿನಿ ಭಾರತ ಈ ದರ್ಶನಕ್ಕೊಂದು ಉದಾಹರಣೆಯಾಗಿರುತ್ತದೆ. ಅವನು ಮೇಧಾವಿ, ಭಾವಿಕ, ಪ್ರತಿಭಾವಂತ ಪಂಡಿತನಾಗಿದ್ದಾನೆ. ಅವನು ಎಷ್ಟು ಸಹಜ ಕವಿಯೋ ಅಷ್ಟೇ ಸಮಯ ಸಂಪ್ರದಾಯ ಕವಿಯೂ ಹೌದು. ಈ ಕವಿಯನ್ನು ಅರ್ಥಮಾಡಿಕೊಳ್ಳಬಯಸುವವರು

ಅವನ ಕಾಲ, ಸಂಸ್ಕಾರ, ಮನೋಧರ್ಮ, ಕೃತಿಕರ್ಮತಂತ್ರ ಮೊದಲಾದವುಗಳನ್ನೆಲ್ಲ ಎಚ್ಚರಿಕೆಯಿಂದ ವಿಶ್ಲೇಷಣವನ್ನು ಮಾಡಿ,ಒಂದೊಂದಂಶವನ್ನೂ ಪರೀಕ್ಷಿಸಬೇಕು ಎಂದು ತಿರುಮಲೆ ತಾತಾಚಾರ್ಯಶರ್ಮರು ಮಾರ್ಗದರ್ಶನವನ್ನು ಮಾಡಿದ್ದಾರೆ.ಲಕ್ಷ್ಮೀಶನಷ್ಟೇ ಪ್ರತಿಭಾಶಾಲಿಯಾದ ಚಿತ್ರಗಾರನಾದರೂ ಈ ವಚನ ಚಿತ್ರಗಳನ್ನು ಆಧರಿಸಿ, ತ್ರಿವರ್ಣ ವಲ್ಲವಾದರೆ ನಾನಾ ವರ್ಣರಂಜಿತ ಚಿತ್ರಪಟಗಳನ್ನು ನಿರ್ಮಿಸಿದನಾದರೆ ಅವು ಜಗತ್ತಿನ ಪರಮೋತ್ತಮ ಪ್ರಕೃತಿ ಚಿತ್ರಗಳ ಶ್ರೇಣಿಗೆ ಸೇರುವವೆಂದು ಹೇಳಲೇಬೇಕು ಎಂದಿದ್ದಾರೆ ಶರ್ಮರು. ಕನ್ನಡ ಕವಿಗಣದಲ್ಲಿ ಈ ಮಟ್ಟದ ಪ್ರಕೃತಿದೇವಿಯ ದರ್ಶನವನ್ನು ಮಾಡಿ ಕೊಟ್ಟ ಮಹಾನುಭಾವನಿಲ್ಲ ಎಂಬುದು ಶರ್ಮರ ಅಭಿಪ್ರಾಯವಾಗಿದೆ.

ಲಕ್ಷ್ಮೀಶನ ಪ್ರಕೃತಿ ವರ್ಣನೆಗಿಂತ ಮಾನವ ಪ್ರಪಂಚದ ವರ್ಣನೆ ಹೆಚ್ಚು ಹಿತ ಕರವಾಗಿ ಎನ್. ಅನಂತರಂಗಾಚಾರ್ ಅವರಿಗೆ ಕಂಡಿವೆ. ಪ್ರಕೃತಿ ವರ್ಣನೆಯಲ್ಲಿ ಕೆಲವೆಡೆ ಗಳಲ್ಲಿ ತೋರುವ ಕೃತಕತೆ ಮಾನವ ಪ್ರಪಂಚದ ವರ್ಣನೆಗಳಲ್ಲಿ ಇಲ್ಲ. ಲಕ್ಷ್ಮೀಶನ ಶೈಲಿ ಪ್ರೌಢವಾಗಿದೆ, ಬಿಗಿಯಾಗಿದೆ, ಸಂಸ್ಕೃತಮಯವಾಗಿದೆ. ಆದರೆ ತನ್ನ ಉದ್ದೇಶ ಸಾಧನೆಯ ಪ್ರಯತ್ನದಲ್ಲಿ ಕವಿಯು ಕಾವ್ಯವನ್ನು ಕೃತಕವಾಗಿ ಮಾಡಿದ್ದಾನೆ. ಪಾಂಡಿತ್ಯಪ್ರದರ್ಶನ ಕ್ಕಾಗಿ ಹೊರಟಿದ್ದಾನೆ.ಚಿತ್ರಕವಿತ್ವದಲ್ಲಿ ತೊಡಗಿದ್ದಾನೆ.ಇದರಿಂದ ಕಾವ್ಯಾನಂದವು ಲಭಿಸು ವುದರ ಬದಲು ಜೇಸರ ಉಂಟಾಗುತ್ತದೆ. ಆದರೂ ಸ್ವಭಾವವಾಗಿ ಬರೆದ ಸಂದರ್ಭಗಳಲ್ಲಿ ಅವನ ಪದಘಟನೆಯೂ, ಶಬ್ದಮೈತ್ರಿಯೂ ಶ್ಲಾಘ್ಯವಾಗಿದೆ ಎಂದು ಅನಂತರಂಗಾಚಾರ್ ಹೊಗಳಿದ್ದಾರೆ. ಕವಿಗೆ ಶಬ್ದರಾಜ್ಯದ ಮೇಲಿದ್ದ ಅಧಿಕಾರವು ವಿಶಾಲವಾದುದು. ಈ ಗುಣ ವನ್ನು ಇವನ ಸೂರ್ಯೋದಯ ಮತ್ತು ಸೂರ್ಯಾಸ್ತಸಮಯದ ವರ್ಣನೆಗಳಲ್ಲಿ ಮತ್ತು ಖುಘುಧರ್ಮಗಳ, ಶೋಕ–ಕ್ರೋಧ–ಮೋಹಾದಿಗಳ ವರ್ಣನೆಗಳಲ್ಲಿ ಕಾಣಬಹುದು ಎಂದು ಅನಂತರಂಗಾಚಾರ್ ಸೂಚಿಸಿದ್ದಾರೆ.

ಲಕ್ಷ್ಮೀಶನ ಕಾವ್ಯದಲ್ಲಿಯ ಶಬ್ದ ಸೌಂದರ್ಯ, ಮಾತಿನ ಸೊಗಸು ಮತ್ತು ಔಚಿತ್ಯಕ್ಕೆ ಸಮಾನವಾದ ಒಂದು ಸ್ವರವಿನ್ಯಾಸವನ್ನು ಕಂಡು ಕೆಲವು ವಿದ್ವಾಂಸರು ಆ ಸ್ವರವಿನ್ಯಾಸದ ಕುಶಲತೆಯನ್ನು ಹೊಗಳಿದ್ದಾರೆ.

ಸಂಸ್ಕೃತ ಸಾಹಿತ್ಯಾಭ್ಯಾಸಿಗಳಿಗೆ 'ರಘುವಂಶ' ಇರುವಂತೆ ಕನ್ನಡಿಗರಿಗೆ 'ಜೈಮಿನಿ ಭಾರತ' ಎಂದು ಕೆ. ಹನುಮಂತಯ್ಯನವರ ಮತವಾಗಿದೆ. ಕವಿ ಲಕ್ಷ್ಮೀಶನು 'ಚೆನ್ನ ಬಸವ ಪುರಾಣ'ವನ್ನು ಅನುಸರಿಸಿದಂತೆ ತೋರುತ್ತದೆ ಎಂದು ಆರ್. ನರಸಿಂಹಾಚಾರ್ ವ್ಯಕ್ತಪಡಿಸಿದ ಊಹೆಗೆ ಉತ್ತರದಂತೆ 'ಲಕ್ಷ್ಮೀಶನ ಕಾವ್ಯವು ಒಟ್ಟಿನ ಮೇಲೆ ಚೆನ್ನ ಬಸವ ಪುರಾಣಕ್ಕಿಂತಲೂ ಪ್ರೌಢವಾಗಿಯೂ, ಸ್ವಾರಸ್ಯಕರವಾಗಿಯೂ ಇರುವುದೆಂದು ನಿಸ್ಸಂಕ್ಷಯಾತವಾಗಿ ಹೇಳಬಹುದು. ಆದುದರಿಂದ ಜೈಮಿನಿ ಭಾರತವನ್ನೇ ಚೆನ್ನಬಸವ ಪುರಾಣದ ಕರ್ತೃವು ಆದರ್ಶವಾಗಿಟ್ಟುಕೊಂಡಿರಬಹುದು' ಎಂದು ಅನಂತರಂಗಾಚಾರ್ ಊಹಿಸಿದ್ದಾರೆ.

ಲಕ್ಷ್ಮೀಶನ ಕಾವ್ಯದಲ್ಲಿ ಓಜೋಗುಣ ಮತ್ತು ಮಾಧುರ್ಯಗುಣ ರಸಾನುಗುಣ

ವಾಗಿ ಇರುವುದಾದರೂ ಪ್ರಸಾದಗುಣವು ಕನ್ನಡ ಕವಿಗಳಲ್ಲಿ ಲಕ್ಷ್ಮೀಶನಿಗೆ ಸಾಧಿಸಿದಷ್ಟು ಇನ್ನಾರಿಗೂ ಸಾಧಿಸಲಿಲ್ಲವೆಂದು ಮ.ಪ್ರ. ಪೂಜಾರ ಅವರು ಅಭಿಪ್ರಾಯಪಟ್ಟಿದ್ದಾರೆ. ಜೈಮಿನಿ ಭಾರತದಲ್ಲಿಯ 'ವೈದರ್ಭಿ' ರೀತಿಯ ವಾಣಿಯು ಬೇರೆ ಯಾವ ಷಟ್ಪದಿ ಕಾವ್ಯಗಳಲ್ಲಿಯೂ ಕಂಡುಬರುವುದಿಲ್ಲ ಎಂದೂ ಅವರು ಸೂಚಿಸಿದ್ದಾರೆ.

ಜೈಮಿನಿ ಭಾರತದಲ್ಲಿ ಉತ್ಪ್ರೇಕ್ಷೆ, ಅರ್ಥಾಂತರನ್ಯಾಸ, ರೂಪಕ, ಶ್ಲೇಷಮೂಲಕವಾದ ಶ್ಲಿಷ್ಟೋಪಮೆ, ಪರಿಸಂಖ್ಯೆ, ವಿರೋಧಾಭಾಸ ಮೊದಲಾದ ಅರ್ಥಾಲಂಕಾರಗಳು ಕಾವ್ಯದ ಶೋಭೆಯನ್ನು ಹೆಚ್ಚಿಸಿರುವವು. ಉಳಿದ ಎಲ್ಲ ಅಲಂಕಾರಗಳಿಗಿಂತ ಲಕ್ಷ್ಮೀಶನ ಕಾವ್ಯದಲ್ಲಿ ಉತ್ಪ್ರೇಕ್ಷೆ ಹೆಚ್ಚಾಗಿ ಬರುವುದು ಎಂದು ಮ.ಪ್ರ. ಪೂಜಾರ ಅವರು ಸಂಶೋಧಿಸಿದ್ದಾರೆ.

ಕುವೆಂಪು ಅವರು, ಲಕ್ಷ್ಮೀಶನು ಉಪಮಾಲೋಲನಾಗಿದ್ದಾನೆ. ಅವನಲ್ಲಿ ಉಪಮಾ ಅಲಂಕಾರ ಒಂದನ್ನು ಬಿಟ್ಟು ಉಳಿದ ಅಲಂಕಾರಗಳೇ ಇಲ್ಲ ಎಂದರೂ ನಡೆದೀತು ಎಂದಿದ್ದಾರೆ.

ಕನ್ನಡ ಜೈಮಿನಿ ಭಾರತ ಸಂಧಿ ೮ ಪದ್ಯ ೩೨, ಸಂಧಿ ೯ ಪದ್ಯ ೨೮, ಸಂಧಿ ೨೮ ಪದ್ಯ ೩೧ ಮತ್ತು ೬೩ ಇವುಗಳಲ್ಲಿ ನೋಡಿದಾಗ ಲಕ್ಷ್ಮೀಶ ಕವಿಯ ಉಪಮೆಗಳು ಪ್ರಾಯಃ ಭಾವನೆಯಿಂದ ಪರಿಪುಷ್ಟವಾಗಿದ್ದು ಕಂಡುಬರದೆ ಇರದು ಎಂದು ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಸೂಚಿಸಿದ್ದಾರೆ.

'ರಸೋವೈ ಸಃ' ಎಂಬ ಮಹಾವಚನದ ಸರಳ ಸುಂದರವಾದ ವ್ಯಾಖ್ಯಾನವೆ ಲಕ್ಷ್ಮೀಶನ ಕಾವ್ಯ ಎಂದಿದ್ದಾರೆ ತಿ. ತಾತಾಚಾರ್ಯ ಶರ್ಮರು. ತರುಣರ ಶೃಂಗಾರ, ಕ್ಷಾತ್ರದ ವೀರ, ದೈವದ ರಣಕೇಳಿಯ ರೌದ್ರ, ಭಯಾನಕ, ಭಕ್ತರ ಶಾಂತ, ವಾದಸಂವಾದದ ಹಾಸೋಪಹಾಸ, ಕಥಾಕೌತುಕದ ಅದ್ಭುತ, ರಣಕ್ಷೇತ್ರದ ಕರುಣ ಬೀಭತ್ಸ ಇವೆಲ್ಲವೂ ಲಕ್ಷ್ಮೀಶನ ಕಾವ್ಯದ ಪ್ರತಿ ಉಪಾಖ್ಯಾನದಲ್ಲಿ ಗೊಂಚಲುಗೊಂಚಲವಾಗಿ ಅರಳಿವೆ. ಪ್ರತಿ ಕಥೆಯು ಕುತೂಹಲದಲ್ಲಿ ಪುಷ್ಟಿಗೊಂಡು ಅಪೇಕ್ಷಿತವಾಗಿಯೋ, ಅಕಲ್ಪಿತವಾಗಿಯೋ ಕೃಷ್ಣಮಹಿಮೆಯಲ್ಲಿ ಕೊನೆಗೊಳ್ಳುವುದು ಎಂದು ದ.ರಾ.ಬೇಂದ್ರೆಯವರು ಸೂಚಿಸಿ, ಕಾವ್ಯದಲ್ಲಿಯ ಅನೇಕ ರಸಸ್ಥಾನಗಳ ಕಡೆಗೆ ರಸಿಕರ ಮನಸ್ಸನ್ನು ಹೊರಳಿಸಿದ್ದಾರೆ.

ಕನ್ನಡ ಜೈಮಿನಿ ಭಾರತದಲ್ಲಿ ಭಕ್ತಿರಸಕ್ಕೆ ಪ್ರಾಧಾನ್ಯವಿದೆ ಎಂದು ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಕಂಡುಕೊಂಡಿದ್ದಾರೆ. ಇನ್ನು ಕೆಲವು ವಿದ್ವಾಂಸರು ಲಕ್ಷ್ಮೀಶನ ಜೈಮಿನಿಭಾರತ ರಸಬ್ರಹ್ಮಾಂಡವಾಗಿದೆ ಎಂದೂ ಹೇಳಿದ್ದಾರೆ. ಯೌವನಾಶ್ವನ ರಾಜಧಾನಿಯಿಂದ ಅಶ್ವಹರಣ, ವೃಷಕೇತು-ಸುಧನ್ವರು ಇವರಲ್ಲಿ ನಡೆದ ಯುದ್ಧ, ಅರ್ಜುನ-ಬಭ್ರುವಾಹನ ಇವರ ಕಾಳಗ, ಈ ಸನ್ನಿವೇಶಗಳಲ್ಲಿ ವೀರರಸದ ಆಧಿಕ್ಯ; ಪ್ರಭಾವತಿ-ಸುಧನ್ವರ ಭೆಟ್ಟಿ, ವಿಷಯಾ-ಚಂದ್ರಹಾಸ ಸಮಾಗಮ—ಈ ಸಂದರ್ಭಗಳಲ್ಲಿ ಶೃಂಗಾರರಸದ ಹೆಚ್ಚಳ; ಸುಧನ್ವನನ್ನು ತಪ್ತತೈಲ ಕಟಾಹದಲ್ಲಿ ಚೆಲ್ಲಿದಾಗ,

ಸೀತಾವನವಾಸ, ಚಂದ್ರಹಾಸನ ಅರಣ್ಯವಾಸದ ಸಮಯದಲ್ಲಿ ಶೋಕ-ಕರುಣರಸಗಳ ಬುಗ್ಗೆ; ಕೃಷ್ಣ-ಭೀಮರ ಕಲಹ, ಚಂಡಿಯ ಕಥೆ ಇವುಗಳಲ್ಲಿ ಹಾಸ್ಯದ ಹೊನಲುಗಳನ್ನು ಕಾಣಬಹುದು ಎಂದು ಬೇರೆ ಬೇರೆ ವಿದ್ವಾಂಸರು ಪ್ರಸ್ತಾಪಿಸಿದ್ದಾರೆ. ಲಕ್ಷ್ಮೀಶನ ಹಾಸ್ಯಕ್ಕೆ ಬಹಳ ಹತ್ತಿರದಲ್ಲಿ ಕಣ್ಣೀರಿದೆ ಎಂದು ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಕಂಡಿದ್ದಾರೆ.

ಲಕ್ಷ್ಮೀಶನ ಕಾವ್ಯವು ಭಾಗವತ ಪುರಾಣವಾದುದರಿಂದಲೂ, ಭಕ್ತಿರಸಪ್ರಧಾನವಾದ ಗ್ರಂಥವಾಗಿರುವುದರಿಂದಲೂ ಜನರಿಗೆ ಇದರಲ್ಲಿ ಮತ್ತಿಷ್ಟು ಆದರವು ಹೆಚ್ಚಾಗಲು ಕಾರಣವಾಗಿದೆ. ಒಬ್ಬೊಬ್ಬರು ಪ್ರತ್ಯೇಕವಾಗಿ ಸ್ತೋತ್ರವನ್ನು ಮಾಡಿರುವ ಪದ್ಯಗಳು ಸ್ವತಂತ್ರವಾದ ಸ್ತೋತ್ರಮಾಲಿಕೆಗಳಂತಿವೆ. ಮೂಲಗ್ರಂಥದಲ್ಲಿ ಈ ಭಾಗಗಳು ರೇಖಾರೂಪದಲ್ಲಿವೆ. ಲಕ್ಷ್ಮೀಶನು ಅವುಗಳನ್ನು ಪುಷ್ಟೀಕರಿಸಿ ಆಕರ್ಷಕವಾಗಿ ಮಾಡಿದ್ದಾನೆಂದು ಅನಂತರಂಗಾಚಾರ್ ಅವರು ಅಭಿಪ್ರಾಯಪಟ್ಟಿದ್ದಾರೆ.

ಕವಿ ಲಕ್ಷ್ಮೀಶನು ಪ್ರಥಮತಃ ಪಂಡಿತನೆನ್ನುವುದಕ್ಕಿಂತಲೂ ಕಥನಕವಿ ಎಂದರೆ ಹೆಚ್ಚು ಯುಕ್ತ. ಸಾಂಪ್ರದಾಯಿಕನಾದರೂ ಸಂಪ್ರದಾಯಶರಣನಲ್ಲ. ಲಕ್ಷ್ಮೀಶನು ಮಹಾಕವಿಯಲ್ಲವಾದರೂ ಅವನ ಜೈಮಿನಿ ಭಾರತವು ಅಂಶದಲ್ಲಿ ಮಹತ್ತಾಗಿದೆ ಎಂದು ರಂ. ಶ್ರೀ. ಮುಗಳಿಯವರು ಸೂಚಿಸಿದ್ದಾರೆ.

ಲಕ್ಷ್ಮೀಶನ ಕಥಾಸಂಗ್ರಹ ಶಕ್ತಿಯು ಅಸಾಧಾರಣವಾದುದು. ಇಡೀ ಷಟ್ಕಾಂಡ ರಾಮಾಯಣವನ್ನು ಹತ್ತು ಪದ್ಯಗಳಲ್ಲಿ ಮುಗಿಸಿಬಿಟ್ಟಿದ್ದಾನೆ. ಮುಖ್ಯ ಕಥೆಗೆ ಎಲ್ಲಿಯೂ ಲೋಪಬಂದಿಲ್ಲ. ಸಪ್ತಸಾಗರಗಳನ್ನು ಒಂದು ಸಾಸಿವೆಕಾಳಿನಲ್ಲಿ ಅಡಗಿಸುವ ಶಕ್ತಿ ಲಕ್ಷ್ಮೀಶನದು. ಇಂಥ ಕಾವ್ಯಸಂಗ್ರಹ ಕಾರ್ಯವು ಒಂದು ಶ್ರೇಷ್ಠ ಕಲೆಯೆ ಸರಿ ಎಂದು ಹೇಳಿ

**೧. ಸುಧನ್ವ–ಸುರಥ ಕಥಾನಕ**

ಸಂಸ್ಕೃತ—೩೧೮ ಶ್ಲೋಕ, ೪ ಅಧ್ಯಾಯ
ಕನ್ನಡ—೧೪೯ ಪದ್ಯ, ೪ ಸಂಧಿ

**೨. ಸೀತಾವನವಾಸ**

ಸಂಸ್ಕೃತ—೭೦೯ ಶ್ಲೋಕ, ೧೨ ಅಧ್ಯಾಯ
ಕನ್ನಡ—೨೪೮ ಪದ್ಯ, ೪ ಸಂಧಿ

**೩. ಚಂದ್ರಹಾಸನ ಕಥೆ**

ಸಂಸ್ಕೃತ—೬೭೦ ಶ್ಲೋಕ, ೧೦ ಅಧ್ಯಾಯ
ಕನ್ನಡ—೩೦೦ ಪದ್ಯ, ೫ ಸಂಧಿ

ಹೀಗೆ ಬೇರೆ ಬೇರೆ ಕಥಾನಕಗಳನ್ನು ಸಂಗ್ರಹಿಸಿದ ಪ್ರಮಾಣವನ್ನು ತಾತಾಚಾರ್ಯ

ಶರ್ಮರು ನಮೂದಿಸಿದ್ದಾರೆ. ವಿವೇಚನಾತ್ಮಕಶಕ್ತಿ, ಪ್ರಮಾಣನಿರ್ಣಯ ಸೂಕ್ಷ್ಮ ಬುದ್ಧಿ, ಮಾನಸಿಕ ಪರಿಣಾಮ, ಸಮಯ ಗ್ರಹಣಕೌಶಲ ಇವುಗಳಲ್ಲೆಲ್ಲ ಲಕ್ಷ್ಮೀಶನು ಯಾರೇ ಆಗಲಿ ತಲೆದೂಗಬೇಕಾದಂತಹ ಕಲಾಕುಶಲತೆಯನ್ನು ತೋರಿಸುತ್ತಾನೆ ಎಂದಿದ್ದಾರೆ. ವಿದ್ವಾಂಸನಲ್ಲಿ ಬುದ್ಧಿಗುಣವಿರಬೇಕು, ರಸಿಕರಲ್ಲಿ ಭಾವಭಾಗ್ಯವಿರಬೇಕು. ಕವಿಯಲ್ಲಾದರೋ ಈ ಎರಡೂ ಇರಬೇಕು. ಲಕ್ಷ್ಮೀಶನು ವಿದ್ವಾಂಸನೂ ಹೌದು; ರಸಿಕನೂ ಹೌದು; ಲಕ್ಷ್ಮೀಶನು ಮೊದಲು ಕತೆಗಾರ, ಅನಂತರ ಕವಿ ಎನ್ನಬಹುದು ಎಂದಿದ್ದಾರೆ ತಿ. ತಾ. ಶರ್ಮ.

ವರದರಾಜರಾವ್ ಅವರು ಸೀತಾಪರಿತ್ಯಾಗ, ವೆಂಕಟರಾಯಾಚಾರ್ಯ ಅವರು ರಾಮಾಶ್ವಮೇಧ ಮತ್ತು ದ. ರಾ. ಬೇಂದ್ರೆಯವರು ಚಂದ್ರಹಾಸ–ಈ ಕಥಾನಕಗಳನ್ನು ಪ್ರತ್ಯೇಕವಾಗಿ ಅಭ್ಯಸಿಸಿ ಅವುಗಳಲ್ಲಿಯ ಲಕ್ಷ್ಮೀಶನ ಕಥನಕೌಶಲವನ್ನು ಎತ್ತಿ ತೋರಿಸಿದ್ದಾರೆ.

ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರೂ 'ಲಕ್ಷ್ಮೀಶನು ಒಳ್ಳೆಯ ಕಥೆಗಾರ. ಇವನ ಕಾವ್ಯವು ಕಥೆಗಳ ಒಂದು ಗುಚ್ಛ, ಗೊಂಚಲು, ಮಾಲಿಕೆ. ಕಥೆಗಳನ್ನು ಕುಗ್ಗಿಸುವ, ಹಿಗ್ಗಿಸುವ ತಂತ್ರವನ್ನು ಕಥನಕುಶಲನಾದ ಕವಿ ಲಕ್ಷ್ಮೀಶನು ಚೆನ್ನಾಗಿ ಅರಿತಿದ್ದಾನೆ' ಎಂಬ ನಿರ್ಣಯವನ್ನು ವ್ಯಕ್ತಪಡಿಸಿದ್ದಾರೆ.

ಲಕ್ಷ್ಮೀಶ ಮತ್ತು ಅವನ ಕಾವ್ಯವನ್ನು ಕುರಿತು ವಿದ್ವಾಂಸರು ವಿವಿಧ ಮುಖವಾಗಿ ಅಭ್ಯಾಸ ಮಾಡಿದ್ದಾರೆ. ಕೆಲವರು ಲಕ್ಷ್ಮೀಶನಲ್ಲಿ ಪಾಂಡಿತ್ಯ, ದಾರ್ಶನಿಕತೆ, ಸಹಜ ಕವಿತ್ವವನ್ನು ಕಂಡರೆ, ಕೆಲವರು ಅವನ ಪ್ರಕೃತಿವರ್ಣನೆ ಮತ್ತು ಮಾನವ ಪ್ರಪಂಚ ವರ್ಣನೆಯನ್ನು ಮೆಚ್ಚಿದ್ದಾರೆ. ಪ್ರಸಾದಗುಣ, ವೈದರ್ಭಿರೀತಿ, ಅಲಂಕಾರ ವೈಭವವನ್ನು ಕಂಡು ಪಂಡಿತರು ಬೆರಗುಪಟ್ಟಿದ್ದಾರೆ. ಲಕ್ಷ್ಮೀಶನ ಕಥನ ಕೌಶಲವಂತೂ ಎಲ್ಲರ ಮನವನ್ನು ಆಕರ್ಷಿಸಿದೆ.

ವಿದ್ವಾಂಸರ ಕಾಣ್ಕೆ, ಊಹೆ, ಅಭಿಪ್ರಾಯ ಮತ್ತು ಸೂಚನೆಗಳನ್ನು ಗಮನಿಸಿ ನಾವು ಇನ್ನು ಮುಂದೆ ಅವುಗಳನ್ನೆಲ್ಲ ನಿಕಷಕ್ಕೆ ಹಚ್ಚಿ ಪರೀಕ್ಷಿಸುವ ಪ್ರಯತ್ನವನ್ನು ಮಾಡಿದ್ದೇವೆ. ಲಕ್ಷ್ಮೀಶನು ಇಟ್ಟುಕೊಂಡ ಕಾವ್ಯದ ಆದರ್ಶಗಳಾದ–ಛಂದಸ್ಸು, ಲಕ್ಷಣ, ಅಲಂಕಾರ, ಭಾವರಸ ಪುಷ್ಟಿಯನ್ನು ತನ್ನ ಜೈಮಿನಿ ಭಾರತದಲ್ಲಿ ಹೇಗೆ ನಿರ್ವಹಿಸಿದ್ದಾನೆ ಎಂಬುದನ್ನೂ ನಿರೂಪಿಸುವ ಪ್ರಯತ್ನ ಈ ಪ್ರಕರಣದಲ್ಲಿ ಮಾಡಲಾಗಿದೆ.

'ಛಂದವು ಸ್ವರ–ವ್ಯಂಜನಗಳ ನಾದದ ನೃತ್ಯ. ದ್ರುತ, ಮಧ್ಯ, ವಿಲಂಬಿತ ಗತಿಗಳ ಹೃದಯಂಗಮವಾದ ಸಮನ್ವಯ. ಇದಕ್ಕೆ Rhythm ಎಂದು ಆಂಗ್ಲ ಕಾವ್ಯಶಾಸ್ತ್ರದಲ್ಲಿ ಹೆಸರು. ಈ ನಾದನೃತ್ಯವು ಭಾವಸೂಚಕವಾಗಿರುವದು. ಇದರ ಭಂಗಿಗಳ ಸೂಕ್ಷ್ಮತೆಯನ್ನು ಕಂಡು ಬೆರಗುಪಡುವುದೇ ಹೊರತು ಪೃಥಕ್ಕರಿಸಿ ಮೂಲಭೂತಗಳನ್ನು ಕಂಡು ಹಿಡಿಯಲಾಗುವುದಿಲ್ಲ. ಈ rhythm ಈ ನಾದನೃತ್ಯ–ಈ ನುಡಿಗುಣಿತ ಕವಿಯ ಅದ್ವಿತೀಯ ಪ್ರತಿಭೆಯ ದ್ಯೋತಕವಾಗಿವೆ. ವೈಷಮ್ಯವನ್ನು ನೋಡಬೇಕಾಗಿದ್ದರೆ ವಾರ್ಧಕ

ಷಟ್ಪದಿಯಲ್ಲಿ ಬರೆದ ಇನ್ನುಳಿದ ಕವಿಗಳ ಯಾವುದೇ ಒಂದು ವಾರ್ಧಕದೊಡನೆ ಲಕ್ಷ್ಮೀಶನ ಯಾವುದೇ ಒಂದು ಪದ್ಯವನ್ನು ಹೋಲಿಸಿ ನೋಡಬಹುದು. ಆಗ ಲಕ್ಷ್ಮೀಶನ ಪದ್ಯದ 'ಚತುರ ಪದಗತಿಯು' ಬಿನ್ನಾಣ ತಿಳಿದುಬರುವುದು. ಕವಿಗೆ ಕಿವಿ ಬೇಕು. ಷಟ್ಪದಿಕಾರರಾದ ಅನೇಕ ಕವಿಗಳಲ್ಲಿ ಕಿವುಡುತನ ಇದ್ದುದರ ಭಾಸವಾಗುತ್ತದೆ. ಲಕ್ಷ್ಮೀಶನದು ಶ್ರುತಿ ಹಚ್ಚಿಟ್ಟ ಸಾರಸ್ವತ ವೀಣೆ. ನೀರಸಗದ್ಯವಾಗಿ ತೋರುವ ಮಾತುಗಳಲ್ಲಿಯೂ ಜೀವಕಳೆಯನ್ನು ಮಿಂಚಿಸಬಲ್ಲನು ತನ್ನೀ ನಾದ ವಿದ್ಯೆಯಿಂದ, ನುಡಿಗುಣಿತದಿಂದ.

'ಲಕ್ಷ್ಮೀಶನ ಪ್ರಾಸಾನುಪ್ರಾಸಗಳು ಅವನ ಭಾವಾರ್ಥದ ಭಂಡಾರವನ್ನು ತೆಗೆಯುವ ಬೀಗದಕೈಗಳು. ಅವನ ಯಮಕಗಳು ಕವಿಹೃದಯದ ಗಮಕಗಳು. ಇದು ಪಾಮರರ ಕರ್ಣರಂಜನೆ ಇರಬಹುದು, ಆದರೆ ಪಂಡಿತರಿಗೂ ನೇತ್ರಾಂಜನವಾಗದೇ ಇಲ್ಲ' ಎಂದು ಮೊದಲಾಗಿ ದ. ರಾ. ಬೇಂದ್ರೆಯವರು 'ನಾದಲೋಲ ಲಕ್ಷ್ಮೀಶ' ಎಂಬ ಲೇಖನದಲ್ಲಿ ಅಭಿಮಾನಪಟ್ಟಿದ್ದಾರೆ. ಈ ಅಭಿಪ್ರಾಯಗಳು ನಮಗೆ 'ಛಂದಸ್ಸು' ಎಂಬ ಉಪಪ್ರಕರಣವನ್ನು ಬರೆಯುವ ಪ್ರೇರಣೆಯನ್ನು ಕೊಟ್ಟವು. ಚಂಪೂ ಕಾವ್ಯಗಳಲ್ಲಿ ವೈವಿಧ್ಯವನ್ನು ತರಲು ಬೇರೆ ಬೇರೆ ವೃತ್ತಗಳನ್ನು ಬಳಸುತ್ತಾರೆ. ಜೈಮಿನಿ ಭಾರತದ ಈ ವಾರ್ಧಕ ಷಟ್ಪದಿಯಲ್ಲಿ ವೈವಿಧ್ಯವೇನು? ಇಡೀ ಕಾವ್ಯವು ಒಂದೇ ಛಂದಸ್ಸಿನಲ್ಲಿದೆಯಲ್ಲ? ಎಂಬ ಪ್ರಶ್ನೆಗಳಿಗೆ ಉತ್ತರ: ಇವನ ವಾರ್ಧಕಗಳಲ್ಲಿಯ ಪ್ರಾಸ, ಅನುಪ್ರಾಸ, ಯಮಕ, ತಾಳಲಯ ಮತ್ತು ಶಬ್ದಾಲಂಕಾರಗಳು ಛಂದದಲ್ಲಿ ವಿವಿಧತೆಯನ್ನು, ರಸೋನ್ಮೀಲನವನ್ನು ಸಾಧಿಸುತ್ತಿವೆ ಎಂಬುದಾಗಿ ಕಾವ್ಯವಾಚನದಲ್ಲಿಯೆ ಹೊಳೆಯುವುದು. ಕವಿ ಯೋಜಿಸುವ ಅಕ್ಷರ ಸಂಯೋಗಕ್ಕೂ ಅವನ ಭಾವನೆಗಳಿಗೂ ನಿಕಟವಾದ ಸಂಬಂಧವಿರುತ್ತದೆ. ಅದು ಜೈಮಿನಿ ಭಾರತದಲ್ಲಿ ಹೇಗೆ ವ್ಯಕ್ತವಾಗಿದೆ, ಶಬ್ದಸಂಗೀತ, ಶಬ್ದಗಳ ನಾದಾತ್ಮಕತೆ ಎಷ್ಟೊಂದು ಸಾಧಿಸಲಾಗಿದೆ ಎಂಬುದನ್ನು ವಿವರಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

ಲಕ್ಷ್ಮೀಶನು ತನ್ನ ಈ ಕಾವ್ಯದ ಹಿರಿಮೆಯನ್ನು ಹೇಳುವಾಗ 'ಛಂದಸ್ಸು ಲಕ್ಷಣ ಅಲಂಕಾರ' (ಪೀ. ೬) ಎಂದು ಬಿಡಿಬಿಡಿಯಾಗಿ ಹೇಳಲು ಕಾರಣವೇನು? ಲಕ್ಷಣಗಳು ಮತ್ತು ಅಲಂಕಾರಗಳು ಒಂದೇ ಎಂದು ಕೆಲವು ಆಲಂಕಾರಿಕರ ಮತ. ಇವು ಲಕ್ಷ್ಮೀಶನಿಗೆ ಯಾವ ದೃಷ್ಟಿಯಿಂದ ಬೇರೆ ಬೇರೆಯಾಗಿ ಕಂಡಿವೆ ಎಂದು ಪರೀಕ್ಷಿಸಿದ್ದೇವೆ. ಲಕ್ಷ್ಮೀಶನು ನಾಟ್ಯಶಾಸ್ತ್ರಕಾರನಾದ ಭರತ ಮತ್ತು ವಿಶ್ವನಾಥನ ಅನುಯಾಯಿಯಾದುದರಿಂದ ಲಕ್ಷಣಗಳನ್ನು ಅಲಂಕಾರಗಳಿಂದ ಬೇರ್ಪಡಿಸಿದ್ದಾನೆ ಎಂದು ಕಾಣುವುದು. ಕಾವ್ಯ ವಿಭೂಷಣಗಳಾದ ೩೬ ಲಕ್ಷಣಗಳಲ್ಲಿ ಎಷ್ಟು ಲಕ್ಷಣಗಳು ಜೈಮಿನಿ ಭಾರತದಲ್ಲಿ ಇರಬಹುದು ಎಂಬುದನ್ನು ನೋಡಿ ಲಕ್ಷ್ಯ–ಲಕ್ಷಣ ಸಮನ್ವಯವನ್ನು ಎತ್ತಿತೋರಿಸಿದ್ದೇವೆ.

ಕೆ. ವಿ. ಪುಟ್ಟಪ್ಪನವರು ಲಕ್ಷ್ಮೀಶನ ಕಾವ್ಯದ ಉಪಮಾವ್ಯೂಹವನ್ನು ಭೇದಿಸಿ, 'ಪ್ರಕೃತಿಪ್ರಣಯ, ವ್ಯವಹಾರಪ್ರಪಂಚದ ಉಪಮಾನ, ಪುರಾಣಪುಣ್ಯಕಥೆಗಳಿಂದ ತೆಗೆದುಕೊಂಡ ಉಪಮಾನ, ಕವಿಸಮಯ ಉಪಮೆ, ಅಧ್ಯಾತ್ಮ ಉಪಮೆ, ಕರ್ಮ

ಧರ್ಮನೀತಿಶಾಸ್ತ್ರ ಆಧಾರದ ಮೇಲೆ ನಿಂತಿರುವ ಉಪಮಾನ, ನಾಣ್ನುಡಿ ಉಪಮೆ, ಶೃಂಗಾರೋಪಮೆ, ಉಪಮಾನಮಾಲೆ'[1] ಎಂದು ಅಂಗಾಂಗಸೌಂದರ್ಯವನ್ನು ತೋರಿಸಿದುದು ಮನನೀಯವಾಗಿದೆ. ಈ ಉಪಮಾಲಂಕಾರವನ್ನು ಬಿಟ್ಟು ಇನ್ನುಳಿದ ಅಲಂಕಾರಗಳಲ್ಲಿ ಯಾವ ಅಲಂಕಾರದ ಕಡೆಗೆ ಲಕ್ಷ್ಮೀಶನ ಒಲವಿದೆ ಎಂಬ ಕುತೂಹಲದಿಂದ ನೋಡಿದಾಗ ಅವನ ಕಾರಣಉತ್ಪ್ರೇಕ್ಷೆಗಳು ನಮ್ಮ ಮನಸ್ಸನ್ನು ಗೆದ್ದವು. ಕವಿಯ ಕಲ್ಪನಾಸಾಮರ್ಥ್ಯವನ್ನು ನಾವು ಅಲ್ಲಿ ಕಾಣಬಹುದು.

'ವಿಭಾವಾನುಭಾವವ್ಯಭಿಚಾರಿ ಸಂಯೋಗಾತ್ ರಸನಿಷ್ಪತ್ತಿಃ' ಎಂದು ರಸದ ವ್ಯಾಖ್ಯೆ ಇರುತ್ತಿರಲು, ಲಕ್ಷ್ಮೀಶನು 'ಭಾವರಸವೊಂದಿ' ಎಂದು ಏಕೆ ಹೇಳಿದನು?

ಅದರಿಂದಾತ್ಮಾನ್ವಿತಾಂತಃಕರಣಪರಿಣತಂ ಚಿತ್ತಮಾ ಚಿತ್ತದಿಂ ಕಾ
ಣ್ಬುದು ಭಾವಂ ಭಾವದಿಂ ಪುಟ್ಟುಗುಮೊದವಿ ರಸಂಗಳ್ ರಸವ್ಯಕ್ತಿಯಂ ಮಾ
ಳ್ಪುದು ವಕ್ತ್ರಂ ವಕ್ತ್ರವಿಕ್ಷೇಪಣ ವಿಳಸನದಿಂದೀಗಳಿಂತೀ ರಸಂ ಪು
ಟ್ಟಿದುವೆಂಬೀ ಭೇದಮಂ ಭಾವಿಸುವುದು ಕವಿಕಾಮೋಕ್ತಿಯಿಂದಿಂಗಿತಜ್ಞರ್ ॥

—ಕವಿಕಾಮ 'ಶೃಂಗಾರರತ್ನಾಕರ', ೧–೨೬.

ಎಂದು ಕವಿಕಾಮನು ಹೇಳಿದ್ದಾನೆ. ಇವನ ಪ್ರಭಾವವಾಗಲಿ, ಅಥವಾ ಕ್ರಿ.ಶ. ೧೫೦೦ರ ಮಾಧವಾಲಂಕಾರದ ಮಾಧವನ ಪ್ರಭಾವವಾಗಲಿ ಕವಿ ಲಕ್ಷ್ಮೀಶನ ಮೇಲೆ ಆಗಿರಲು ಸಾಕು. 'ಭಾವರಸವೊಂದಿ' ಎಂಬಲ್ಲಿ ಲಕ್ಷ್ಮೀಶನು 'ಭಾವದಿಂ ಪುಟ್ಟುಗುಮೊದವಿ ರಸಂಗಳ್' ಎಂಬ ಕವಿಕಾಮೋಕ್ತಿಯನ್ನು ಅನುಸರಿಸಿದಂತಿದೆ. ಇದರಂತೆಯೇ ಲಕ್ಷ್ಮೀಶನ 'ವಿದ್ವತ್ಸಭಾವಲಯಮುಱಿಯೆ ವಿರಚಿಸಿದಂ........ವಿಮಲ ಜೈಮಿನಿ ಭಾರತದ ಕಥೆಯನು' ಎಂಬ ಮಾತು ಕವಿಕಾಮನ 'ಪಂಡಿತಜನಂ ನೀನೆಯ್ದೆ ಪೇಳಲ್ಕೆವೇಳ್ಪುದಿದಂ ಭಾವರಸಪ್ರಪಂಚಮೆನೆನಲ್' ಎಂಬ ಮಾತಿನ ಜಾಡುಹಿಡಿದಂತಿದೆ.

ಲಕ್ಷ್ಮೀಶನು ನವರಸಗಳನ್ನು ಭಕ್ತಿರಸಕ್ಕೆ ಹೇಗೆ ಹೊರಳಿಸಿದ್ದಾನೆ, ನವರಸಗಳ ವಿಲಾಸವೇನು, ವಿಭಾವ ಅನುಭಾವ ವ್ಯಭಿಚಾರಿ ಭಾವಗಳು ರಸನಿಷ್ಪತ್ತಿಯನ್ನು ಹೇಗೆ ಮಾಡಿವೆ ಎಂಬುದನ್ನು **ರಸಚಕ್ರ ಎಂಬ ಉಪಪ್ರಕರಣದಲ್ಲಿ ವಿವೇಚಿಸಿದ್ದೇವೆ.**

ಛಂದಸ್ಸು, ಲಕ್ಷಣ, ಅಲಂಕಾರ, ಭಾವ ರಸಗಳಿದ್ದೂ ಕಾವ್ಯವು ಚಮತ್ಕಾರಗಳಿಂದ ಕೂಡಿರಬೇಕು. ಕಾವ್ಯದ ಈ ಎಲ್ಲ ಅಂಗಗಳಲ್ಲಿ ಯುಕ್ತಿ ಎಂದರೆ ಒಳ್ಳೆಯ ಹೊಂದಿಕೆ ಇರಬೇಕು ಎಂದು ಲಕ್ಷ್ಮೀಶನ ಅಭಿಪ್ರಾಯವಿದೆ. ಕವಿ ಲಕ್ಷ್ಮೀಶನ ಮೇಲೆ ಕ್ಷೇಮೇಂದ್ರನದಾಗಲಿ, ಅಥವಾ ಮುಮ್ಮಟೋತ್ತರ ಕಾಲದ ಚಮತ್ಕಾರವಿಶಿಷ್ಟ ಕಾವ್ಯಗಳದ್ದಾಗಲಿ ಪ್ರಭಾವ ಬಿದ್ದಿರಬೇಕು. ಏಕೆಂದರೆ,

'ಕಾವ್ಯದಲ್ಲಿಯ ಚಮತ್ಕಾರದ ವಿಷಯವನ್ನು ಎತ್ತಿ ಆಡುವವನು ಕ್ಷೇಮೇಂದ್ರನು (ಕ್ರಿ.ಶ. ೧೦೨೫–೬೦). ಅವನು ತನ್ನ 'ಕವಿಕಂಠಾಭರಣ' ಎಂಬ ಕೃತಿಯಲ್ಲಿ ಚಮತ್ಕಾರದ ೧೦ ಪ್ರಕಾರಗಳನ್ನು ಹೇಳುತ್ತಾನೆ. ಈ ಚಮತ್ಕಾರಗಳನ್ನು ಲಕ್ಷಿಸಿ ಕಾವ್ಯರಚನೆ

---

[1] 'ಉಪಮಾಲೋಲ ಲಕ್ಷ್ಮೀಶ.'

ಆದದ್ದು ಮಮ್ಮಟೋತ್ತರ ಕಾಲದಲ್ಲಿ (ಕ್ರಿ.ಶ. ೧೧೦೦ರ ತರುವಾಯ). ವಿಶ್ವೇಶ್ವರ ಎಂಬವನು ಕಾವ್ಯವಾಚನದಿಂದ ಸಹೃದಯನಿಗೆ ಆಗುವ ಆನಂದವೇ ಚಮತ್ಕಾರ ಎಂದು ಹೇಳಿ ಗುಣ, ರೀತಿ, ರಸ, ವೃತ್ತಿ, ಪಾಕ, ಶಯ್ಯೆ, ಅಲಂಕಾರ ಇವು ಏಳು ಅದರ ಆಲಂಬನಗಳು ಎಂದು ಹೇಳುತ್ತಾನೆ. ೧೬ನೆಯ ಶತಮಾನದ ಉತ್ತರಾರ್ಧದಲ್ಲಿ ಪ್ರಭಾಕರ ಎಂಬವನು ತನ್ನ ೧೯ನೆಯ ವಯಸ್ಸಿನಲ್ಲಿ 'ರಸಪ್ರದೀಪ' ಎಂಬ ಚಿಕ್ಕಗ್ರಂಥವನ್ನು ಬರೆದನು. ಇದರ ಪ್ರಭಾವವು ಜಗನ್ನಾಥಪಂಡಿತನಂಥವನ ಮೇಲೆಯೂ ಆಯಿತಂತೆ. ಈ ಗ್ರಂಥದಲ್ಲಿ 'ಚಮತ್ಕಾರವಿಶೇಷಕಾರಿತ್ವಂ ಸುಖವಿಶೇಷಕಾರಿತ್ವಂ ವಾ' ಎಂದು ಕಾವ್ಯದ ವ್ಯಾಖ್ಯೆಯನ್ನು ಹೇಳಿದ್ದಲ್ಲದೆ ರಸವೆಂದರೆ ಚಮತ್ಕಾರದ ಒಂದು ವಿಶಿಷ್ಟ ಘಟಕವಾಗಿದೆ ಎಂದಿದ್ದಾನೆ.'[1]

ಈ ವಿಚಾರಪ್ರಭಾವದಿಂದಲೇ ಲಕ್ಷ್ಮೀಶನು ತನ್ನ ಕಾವ್ಯದ ಆದರ್ಶಗಳಲ್ಲಿ ಚಮತ್ಕಾರ ಎಂಬುದಕ್ಕೆ ಸ್ವತಂತ್ರವಾದ ಸ್ಥಾನವನ್ನು ಕೊಟ್ಟಿದ್ದಾನೆ. ವಾರಾಂಗನಾ ನಾಟದ ವರ್ಣನೆಯಲ್ಲಾಗಲಿ, ಶೃಂಗಾರರಸಯುಕ್ತ ಪದ್ಯಗಳಲ್ಲಾಗಲಿ ಲಕ್ಷ್ಮೀಶನ ಚಮತ್ಕಾರಯುಕ್ತ ಉಕ್ತಿಗಳನ್ನು ಕಾಣಬಹುದು. ಈ ಚಮತ್ಕಾರೋಕ್ತಿಗಳಿಂದಲೇ ಆ ಪದ್ಯಗಳಲ್ಲಿ ಒಂದು ಅವ್ಯಕ್ತ ಸೌಂದರ್ಯವು ಒಡಮೂಡಿದೆ. ಅವ್ಯಕ್ತಸೌಂದರ್ಯವನ್ನು ಒಡಮೂಡಿಸುವ ಶಕ್ತಿ ಸಾಮಾನ್ಯ ಕವಿಗಳಿಗೆ ಇರುವುದಿಲ್ಲ.

ಧರ್ಮನಿಗೆ **ಧರ್ಮ**ಬೋಧೆ, ಧರ್ಮನಿಗೆ ಅಶ್ವಮೇಧ ಯಜ್ಞಕ್ಕಾಗಿ ಅಶ್ವವನ್ನೂ **ಅರ್ಥ**ವನ್ನೂ ದೊರಕಿಸುವ ಹಾದಿಯ ಸೂಚನೆ, ಅಸಿಧಾರಾವ್ರತದಂತಹ ಧರ್ಮನ **ಕಾಮ**ಜೀವನ, ಧರ್ಮ ಮೋಕ್ಷಗಾಮಿ ಎಂಬ ವಿಚಾರಗಳು ಜೈಮಿನಿ ಭಾರತದಲ್ಲಿವೆ. ಈ ಸುಳಿಯನ್ನು ಹಿಡಿದು ಜೈಮಿನಿ ಭಾರತದಲ್ಲಿ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ಪುರುಷಾರ್ಥಗಳ ವಿಚಾರವು ಹೇಗೆ ಪ್ರಸ್ತಾಪಿಸಲ್ಪಟ್ಟಿದೆ ಎಂಬುದನ್ನು **'ಕಾವ್ಯದಲ್ಲಿಯ ಪುರುಷಾರ್ಥವಿಚಾರ' ಎಂಬ ಪ್ರಕರಣದಲ್ಲಿ ಚರ್ಚಿಸಿದ್ದೇವೆ.**

ಜೈಮಿನಿ ಭಾರತವೆಂದರೆ 'ಶ್ರೀಕೃಷ್ಣಚರಿತಾಮೃತಂ' ಹೇಗೆ ಆಗಿದೆ, ಅದರಲ್ಲಿ ಸಾಧಿಸಿದ ಐಕ್ಯವು ಯಾವ ಜಾತಿಯದು ಎಂಬುದನ್ನು ತೋರಿಸುವ ಪ್ರಯತ್ನವನ್ನು ಮಾಡಿದ್ದೇವೆ.

'ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ' ಸಂ. ೧೩, ಸಂ. ೩ ರಲ್ಲಿ 'ಕರ್ಣಾಟಕ ಸಾಹಿತ್ಯದಲ್ಲಿ ಪ್ರಕೃತಿವರ್ಣನೆ' ಎಂಬ ಮೌಲಿಕ ಪ್ರಬಂಧವನ್ನು ಡಿ. ಎಲ್. ನರಸಿಂಹಾಚಾರ್ ಅವರು ಬರೆದಿದ್ದಾರೆ. ಅದರಲ್ಲಿ ಅವರು :

೧. ಅವ್ಯಕ್ತ ಸೌಂದರ್ಯದ ವರ್ಣನೆಯು ಸಂಪೂರ್ಣ ಪ್ರತಿಭಾಶಕ್ತಿಜನ್ಯವಾದುದು. ಪಂಪನಲ್ಲಿರುವಷ್ಟು ರನ್ನನಲ್ಲಿ ಅವ್ಯಕ್ತಸೌಂದರ್ಯಾನುಭವ ಶಕ್ತಿ ಇಲ್ಲ.
೨. ಪಂಪನ ಸಾರಯುಕ್ತವಾದ ಪ್ರಕೃತಿವರ್ಣನೆಗಳಲ್ಲಿ ಉತ್ಪ್ರೇಕ್ಷಾಲಂಕಾರಗಳು

---

1 'ಭಾರತೀಯ ಸಾಹಿತ್ಯಶಾಸ್ತ್ರ', ಗ.ತ್ರ್ಯಂ. ದೇಶಪಾಂಡೆ, ಪು. ೧೧೬.

ವಿಶೇಷವಾಗಿಲ್ಲ. ಪೊನ್ನರನ್ನರನ್ನು ಬಿಟ್ಟು ಉಳಿದ ಕವಿಗಳಲ್ಲಿ ಇವು ಹೇರಳ ವಾಗಿವೆ.

೩. ಲಕ್ಷ್ಮೀಶ, ಷಡಕ್ಷರಿ ಇವರಲ್ಲಿ ಸಮುದ್ರವನ್ನು ವರ್ಣಿಸುವಲ್ಲಿ ನೂತನತ್ವದ ಅಂಕುರವನ್ನು ಕಾಣುತ್ತೇವೆ. ಈ ಅಂಕುರಪುರೋಭಿವೃದ್ಧಿಯನ್ನೇ ಲಕ್ಷ್ಮೀ ನಾರಣಪ್ಪ ಬಯಸಿದ ಹಾಗಿದೆ.

೪. ಹರಿಹರ ಲಕ್ಷ್ಮೀಶರಿಗೆ ಮಾತ್ರ ವಸಂತಮಾಸವು 'ಕೆಂಪಿನ ಪಸುರ್ಪಿನ ಬೆಳ್ಪಿನಂದಮಂ ಪಡೆದು' ನವಿಲುಗರಿಯಂತೆ ಮನೋಹರವಾಗಿದ್ದಿತು.

೫. ಕರ್ಣಾಟಕ ಕವಿಗಳಲ್ಲಿ ಕೆಲವರು ವರ್ಷಾಋತುವಿನ ವರ್ಣನೆಯಲ್ಲಿ ಗುಡುಗು ಮಿಂಚು ಸಿಡಿಲುಗಳನ್ನೇ ವಿಶೇಷವಾಗಿ ವರ್ಣಿಸುತ್ತಾರೆ. ಆ ಋತುವಿನ ಆಗಮನದಿಂದುಂಟಾಗುವ ಕೆಲವು ಜೀವನಸೂಚಕವಾದ ವ್ಯಾಪಾರಗಳನ್ನು ವರ್ಣಿಸುವವರಲ್ಲಿ ರಾಘವಾಂಕ, ಸೋಮರಾಜ, ಮತ್ತು ಲಕ್ಷ್ಮೀಶ ಪ್ರಮುಖರು. ಪಂಪನನ್ನು ಬಿಟ್ಟರೆ ಪ್ರಕೃತಿಯ ಸೌಮ್ಯಸ್ವರೂಪದ ಗಾಯಕರಲ್ಲಿ ಈ ಮೂವರು ಕವಿಗಳು ಉತ್ತಮರೆಂದು ನಿಸ್ಸಂಶಯವಾಗಿ ಹೇಳಬಹುದು.

೬. ಲಕ್ಷ್ಮೀಶನ ಚಂದ್ರವರ್ಣನೆ ಪಂಪನ ವರ್ಣನೆಗೆ ಸರಿಹೋಗುವ ಹಾಗೆ ಇರುವುದು. ಕನ್ನಡ ಕವಿಗಳಲ್ಲಿ ಕೆಲವರು ಮಾತ್ರವೇ ಚಂದ್ರನ ಸೊಗಸಿನಿಂದ ಸ್ವಲ್ಪಮಟ್ಟಿಗೆ ಆನಂದವನ್ನು ಹೊಂದಿರುವರು. ಇವರಲ್ಲಿ ಪಂಪ ಲಕ್ಷ್ಮೀಶರು ಅಗ್ರಗಣ್ಯರು.

೭. ಅರಣ್ಯದ ಭೀಕರತ್ವವನ್ನು ರಾಘವಾಂಕನೂ ಲಕ್ಷ್ಮೀಶನೂ ಸ್ವಲ್ಪಮಟ್ಟಿಗೆ ತಿಳಿದು ಕೊಂಡಿರುವರು.

೮. ಲಕ್ಷ್ಮೀಶನ ವರ್ಣನೆಗಳು ಜನಮೆಚ್ಚುಗೆಯಾಗಲು ಅವುಗಳಲ್ಲಿಯ ಸುಲಭವಾದ ಮಾತು, ಸ್ಪಷ್ಟತೆ ಮತ್ತು ಲಾಕ್ಷಣಿಕರ ನಿಯಮಾನುಸರಣ ಇವುಗಳೇ ಕಾರಣ ವಾಗಿರಬಹುದು.

ಎಂಬ ಅಭಿಪ್ರಾಯಗಳನ್ನು ಅವರು ಸೋದಾಹರಣವಾಗಿ ವ್ಯಕ್ತಪಡಿಸಿದ್ದಾರೆ. ಈ ಜಾಡನ್ನೇ ಹಿಡಿದು ಜೈಮಿನಿ ಭಾರತದೊಳಗಿನ **ಅಷ್ಟಾದಶವರ್ಣನೆಗಳ ಅಭ್ಯಾಸ ವನ್ನು ಮಾಡಲಾಗಿದೆ.**

ಲಕ್ಷ್ಮೀಶನ **ಕಥನಕಲೆ ಮತ್ತು ಶೈಲಿಯ** ವಿವಿಧ ಮುಖಗಳನ್ನು ತೋರಿ ಸುವ ಪ್ರಯತ್ನದೊಂದಿಗೆ 'ಕಾವ್ಯಸಮೀಕ್ಷೆ' ಎಂಬ ಪ್ರಕರಣ ಮುಕ್ತಾಯಗೊಳ್ಳುತ್ತದೆ. ಕವಿ ಇಟ್ಟುಕೊಂಡ ಆದರ್ಶಗಳ ಸಮರ್ಥನೆಯನ್ನು ಮಾಡಿ, ಲಕ್ಷ್ಯಲಕ್ಷಣಗಳ ಸಮನ್ವಯ ವನ್ನು ಮಾಡಿತೋರಿಸುವ ಅಭ್ಯಾಸವನ್ನು ಇನ್ನು ಮುಂದಿನ ಪುಟಗಳಲ್ಲಿ ನೋಡ ಬಹುದು.

## ಛಂದಸ್ಸು

'ಛಾದಯತಿ ಇತಿ ಛಂದಃ'—ಛಂದಸ್ಸೆಂದರೆ ಕಾವ್ಯಕ್ಕೆ ಒಂದು ವಾತಾವರಣ,

ಒಂದು ಆಚ್ಛಾದನ ಎಂದು ಹೇಳಬಹುದು. ಮನಸ್ಸೇ ಪ್ರಮುಖವಾದ ಇಂದ್ರಿಯಗಳಿಗೆ ಪ್ರಜ್ಞಾಗೋಚರವಾದ ಕಾವ್ಯದ ತಿರುಳು ಹೊಳೆಯುವಂತೆ ಮಾಡುವ ಸಾಧನೆಗಳಲ್ಲಿ ಬುದ್ಧಿನಿರ್ಮಿತವಾದ ಛಂದಸ್ಸು ಅಗ್ರಗಣ್ಯವಾದುದು. ಜಾತಿವರ್ಗಕ್ಕೆ ಸೇರಿದ ಮಾತ್ರಾಬಂಧದಲ್ಲಿ ಒಂದಾದ ವಾರ್ಧಕ ಷಟ್ಪದಿಯನ್ನು ಕವಿ ಲಕ್ಷ್ಮೀಶನು ಜೈಮಿನಿ ಭಾರತದ ಅಭಿವ್ಯಕ್ತಿಗೆ ಉಪಯೋಗಿಸಿದ್ದಾನೆ. ರಾಘವಾಂಕ, ಭೀಮಕವಿ, ಚಾಮರಸ, ಕುಮಾರವ್ಯಾಸ, ಕುಮಾರ ವಾಲ್ಮೀಕಿಗಳು ಷಟ್ಪದಿ ಛಂದಸ್ಸಿನ ವೈಭವ, ವಿಲಾಸ, ವೈವಿಧ್ಯಗಳನ್ನು ತಮ್ಮ ಕಾವ್ಯಗಳಲ್ಲಿ ವ್ಯಕ್ತಪಡಿಸಿದ್ದಾರೆ. 'ಅರಸುಗಳಿಗಿದು ವೀರ; ದ್ವಿಜರಿಗೆ ಪರಮವೇದದ ಸಾರ'ವಾದ ಭಾರತಕ್ಕೆ ಕುಮಾರವ್ಯಾಸನು ೩|೪|೩|೪ರ ಮಿಶ್ರಲಯದ ಭಾಮಿನೀಷಟ್ಪದಿಯನ್ನು ಬಳಸಿ, ಆ ಲಯದ ತೂಗಾಟ, ನಾದ, ಎತ್ತರ ಬಿತ್ತರಗಳನ್ನು ತೋರಿಸಿದರೆ; ಲಕ್ಷ್ಮೀಶನು 'ಕೃಷ್ಣ ಚರಿತಾಮೃತ'ವಾದ ಜೈಮಿನಿ ಭಾರತಕ್ಕೆ ೫|೫|೫|೫ ಎಂಬ ಲಲಿತಲಯವನ್ನು ಬಳಸಿ, ಭಕ್ತಿಭಾವವನ್ನು ಅಭಿವ್ಯಕ್ತಗೊಳಿಸಲು ಈ ಲಯವು ಯೋಗ್ಯ ಎಂಬುದನ್ನು ತೋರಿಸಿಕೊಟ್ಟಿದ್ದಾನೆ. ಲಲಿತ ಲಯದ ಗತಿ, ಭಕ್ತನ ಮನಸ್ಸು ನಿಧಾನವಾಗಿ ಪಕ್ವವಾಗಿ ರಸದುಂಬುವಂತೆ ಮಂದಗತಿ.

ಐದೈದು ಮಾತ್ರೆಗಳ ತುಂಡಿನ ಈ ಲಲಿತಲಯಕ್ಕೆ ಪ್ರಾಸ, ಅನುಪ್ರಾಸ, ಯಮಕಗಳು ಕೂಡಿದಾಗ ಶಬ್ದಸಮುದಾಯಕ್ಕೆ ಒಂದು ನಾದದ, ತಾಳದ ಸೊಬಗು ಬರುತ್ತದೆ. ಈ ಸೊಬಗು ಗದ್ಯ ಮತ್ತು ಪದ್ಯ ಇವುಗಳಲ್ಲಿಯ ಭೇದವನ್ನು ಸೂಚಿಸುತ್ತದೆ. ಲಯಕ್ಕೂ ಯತಿಗೂ ನಿಕಟವಾದ ಸಂಬಂಧವುಂಟು. 'ಛಂದೋ ಯತಿಸಮನ್ವಿತಃ' ಎಂದು ಭರತ ಮುನಿಯು ಹೇಳುತ್ತಾನೆ.[1] ಕನ್ನಡ ಕಾವ್ಯಶಾಸ್ತ್ರದಲ್ಲಿ ಯತಿ ಎಂದರೆ ಕೇವಲ ಉಸಿರ್ದಾಣವಾಗಿರದೆ ಅರ್ಥಯತಿಯಾಗಿರುತ್ತದೆ. ಅರ್ಥವ್ಯಕ್ತಿಗೆ ಯತಿಯು ಸಹಾಯಕವಾಗುತ್ತದೆ, ಪೋಷಕವಾಗುತ್ತದೆ. ಕವಿ ಲಕ್ಷ್ಮೀಶನ ಜೈಮಿನಿ ಭಾರತದ ವಾರ್ಧಕ ಷಟ್ಪದಿಗಳ ನಿನಾದದಲ್ಲಿ ಪ್ರಾಸ, ಅನುಪ್ರಾಸ, ಯಮಕ, ತಾಳ, ಲಯಗಳ ಸೊಬಗು ಹೇಗೆ ವ್ಯಕ್ತವಾಗಿದೆ ಎಂಬುದನ್ನು ನೋಡೋಣ.

ಅನುಸ್ವಾರ, ಣ ನ ಮ ಎಂಬ ಅನುನಾಸಿಕಗಳು, ರ ಲ ಳ ಭ ಯ ಸ ತ ಇವುಗಳನ್ನು ನಾದಮಯ ಅಕ್ಷರಗಳೆಂದು ಎಣಿಸಲಾಗಿದೆ.[2] ಈ ನಾದಮಯ ಅಕ್ಷರಗಳ ವಿಲಾಸವನ್ನು ಕನ್ನಡ ಜೈಮಿನಿ ಭಾರತದಲ್ಲಿ ನಿರೀಕ್ಷಿಸೋಣ.

ಅನುಸ್ವಾರ : ಶಬ್ದಾಲಂಕಾರಗಳಿರುವ ಪದ್ಯಗಳಲ್ಲಿ ೧೮ ಕಡೆಗೆ ಲಕ್ಷ್ಮೀಶನು ವೃಷಭ ಪ್ರಾಸ[3]ವನ್ನು ಇಟ್ಟುಕೊಂಡಿರುವುದನ್ನು ಗುರುತಿಸಬಹುದು. ಇದಲ್ಲದೆ ಅನೇಕ

---

1 'ನಾಟ್ಯಶಾಸ್ತ್ರ', ೩೨–೨೯.

2 'ಕನ್ನಡ ಛಂದೋವಿಕಾಸ', ಡಾ. ಕರ್ಕಿ, ಪು. ೧೩.

3 ಪ್ರತಿಪಾದದ ಮೊದಲೆರಡು ಸ್ವರಗಳ ನಡುವೆ ಒಂದೇ ವಿಧವಾದ ಒಂದು ವ್ಯಂಜನಕ್ಕಾಗಲಿ ಅನೇಕ ವ್ಯಂಜನಗಳಿಗಾಗಲಿ ಹಿಂದೆ ಅನುಸ್ವಾರವಿರಲು ವೃಷಭಪ್ರಾಸ—'ಕನ್ನಡ ಕೈಪಿಡಿ', ಪುಟ. ೭೪.

ಪದ್ಯಗಳಲ್ಲಿ ಅನುಸ್ವಾರದ ಬಳಕೆಯನ್ನು ಮಾಡಿದ್ದಾನೆ. ಮಂತ್ರಮುಗ್ಧತೆ, ತನ್ಮಯತೆ, ಭ್ರಮರದ ಗುಂಗುಂಗಾನ ತೃಪ್ತಿಯನ್ನು ಸೂಚಿಸುವುದು ಅನುಸ್ವಾರದ ಗುಣವೆಂದು ತೋರುತ್ತದೆ. ಉದಾಹರಣೆಗೆ,

೭–೬೩ ರಲ್ಲಿ 'ಕೊಂಡಾಡಿ ಶೌರಿ ತಕ್ಕೈಸಿದಂ ನೃಪನಪ್ಪಿ
ಮುಂಡಾಡಿ ಮನ್ನಿಸಿದನರ್ಜುನಾದಿಗಳಿಳಿಕೆ
ಗೊಂಡಾಡಿದರ್ ತಮ್ಮ ಸಾಸಮಂ ಸತಿಯರ್ ಪೊಗಳ್ದರ್' ಎಂಬಲ್ಲಿ ತೃಪ್ತಿ;

೧೯–೨೨ ರಲ್ಲಿ 'ರಾಮನಂ ಭುವನಾಭಿರಾಮನಂ ಗುಣರತ್ನ
ಧಾಮನಂ ರಘುಕುಲೋದ್ಧಾಮನಂ ರೂಪಜಿತ
ಕಾಮನಂ ಸತ್ಕೀರ್ತಿಕಾಮನಂ......'. ಎಂಬಲ್ಲಿ ಗುಂಗುಂಗಾನ, ತನ್ಮಯತೆ, ಮಂತ್ರಮುಗ್ಧತೆ ಕಂಡುಬರುತ್ತವೆ.

ಣ, ನ: ಈ ಅನುನಾಸಿಕಗಳು ೨.೫೦ ರಲ್ಲಿ

'.....................ಸರಸಿರುಹನಯನ ಫಣಿರಾಜಶಯನ
ಶರಣಜನ ದುರಿತಾಪಹರಣ ದೈತೇಯ ಸಂ
ಹರಣ ಗೋವರ್ದ್ಧನೋದ್ಧರಣ ಪೀತಾಂಬರಾ
ವರಣ ವರಕೌಸ್ತುಭಾಭರಣ ಸಲಹೆಂದು ಹರಿಚರಣಕೆಱಗಿದಳು ಬಂದು'

ಎಂಬಲ್ಲಿ ಹರ್ಷಭಾವವನ್ನು ವ್ಯಕ್ತಪಡಿಸಿವೆ.

ಡ : ಈ ಅಲ್ಪಪ್ರಾಣ ವರ್ಗೀಯ ವ್ಯಂಜನವು ೪.೨೩ರಲ್ಲಿ

ಪೊಡೆವ ಸಿಡಿಲ್ಗಱೆವ ಮಳೆ ಜಡಿವ ಕಲ್ಗುಂಡು ದೂ
ಳಿಡುವ ಬಿಱುಗಾಳಿ ಕಂಗೆಡಿಪ ಕತ್ತಲೆ......'

ಇತ್ಯಾದಿ ಕ್ರಿಯಾಭಾವವನ್ನು ಸೂಚಿಸಿದಂತೆ, ೨೮.೪೫ ರಲ್ಲಿ ಬೇಟೆಯ ವರ್ಣನೆಯ ಕಾಲಕ್ಕೆ

'ನಡೆ ಪಜ್ಜೆಪಿಡಿ ಪೋಗು ತಡೆ ನಿಲ್ಲು ಜಡಿ ಬೊಬ್ಬೆ
ಗುಡು ಪೊದರೊಳಡಗು ಕೈಗಿಡದಿರಿಸು ನಿಡುಸರಳ
ತುಡು ಕೆಲಕೆ ಸಿಡಿಯದಿರ್ ಪೊಡೆಸಾರ್ಚು ತುಡುಕು ಮೊಗಸಡಗು ಮರಕಡರೊಡರ್ಚು'

ಎಂಬಲ್ಲಿ ಉತ್ಸಾಹಭಾವದ ಅಭಿವ್ಯಕ್ತಿಯನ್ನು ಕಾಣುತ್ತೇವೆ.

೧೭–೨೧ ರಲ್ಲಿ 'ವಿಳಸಿತಾಂಬರ ಮಣಿವಿಭೂಷಣವನುಳಿದು ಮಂ
ಗಳರಾಗಮಂ ತಾಳ್ದು ತಾರಾಭರಣವನಾಂ
ತಳೊ ಸಂಜೆವೆಣ್ಣೆಂಬ ತೆಱದಿಂದೆ ಕೆಂಪಿಡಿದುಡುಗಳೆಸೆದುವಾಗಸದೊಳು
ನಳಿನಾಳಿ ನಾಳಿನಳಿಕುಲಕಿರಲಿ ಸರಸಪರಿ
ಮಳಸಾರ ಮಧುವೆಂದು ಬಾಗಿಲ್ಗಳಂ ಪೂಡಿ
ಕೊಳುತಿರ್ಪವೆಂಬಂತೆ ಮುಗಿಯುತಿರ್ದವು ಕೂಡೆ ತೀವಿದವುಕತ್ತಲೆಗಳು'

ಎಂಬಲ್ಲಿ ರ, ಸ, ತ, ಮ, ಳ ಈ ಅಕ್ಷರಗಳ ಆವರ್ತನದಲ್ಲಿ ನಾದಮಯತೆಯನ್ನು ಕಾಣಬಹುದು. ಸಂಜೆವೆಣ್ಣು ತಾರಾಭರಣಗಳನ್ನು ಧರಿಸಿ ನೃತ್ಯಮಾಡುತ್ತಿರುವಳೋ ಎಂಬಂತೆ,

ಅದಕ್ಕೆ 'ರ, ಸ, ತ, ಮ' ಗಳು ತಾಳ ಹಿಡಿದಿವೆಯೋ ಎಂಬಂತೆ ಈ ಪದ್ಯದಲ್ಲಿ ಸಹಜ ಮಧುರನಾದ ತುಂಬಿದೆ.

ಲ: ಅಲ್ಲ, ಇಲ್ಲ ಎಂಬ ಶಬ್ದಗಳಲ್ಲಿಯ ನಿಷೇಧಾರ್ಥಕ ಶೂನ್ಯಭಾವವು ೧೯.೩೩ ರಲ್ಲಿ

'ಮೊರೆಯಲೊಲ್ಲವು ತುಂಬಿ ಕುಣಿಯಲೊಲ್ಲವು ನವಿಲ್
ಬೆರೆಯಲೊಲ್ಲವು ಕೋಕಿ ನಡೆಯಲೊಲ್ಲವು ಹಂಸೆ'

ಎಂಬಲ್ಲಿ ಸ್ಫುಟವಾಗಿ ಕಂಡುಬರುತ್ತದೆ. ಈ ರೀತಿ ಅಕ್ಷರಗಳು ನಾದ ಮತ್ತು ಭಾವ ಸಂಸ್ಕಾರದ ಸೂಚಕಗಳಾಗಿ ಮೆರೆಯುತ್ತಿವೆ.

ಲಕ್ಷ್ಮೀಶನು ಅಜಪ್ರಾಸ(?) ಒಂದನ್ನು ಬಿಟ್ಟು ಸಿಂಹ, ಗಜ, ವೃಷಭ, ಶರಭ, ಹಯಪ್ರಾಸಗಳನ್ನು ಅನೇಕ ವಿಧವಾಗಿ ಶಬ್ದಾಲಂಕಾರಕ್ಕೆ ಬಳಸಿದ್ದಾನೆ. ರಾ. ನ. ಮಳಗಿಯವರು ಜೈಮಿನಿ ಭಾರತದಿಂದ ಆರಿಸಿದ ಶಬ್ದಾಲಂಕಾರದ ೧೯೩ ಪದ್ಯಗಳಲ್ಲಿ ಸಿಂಹಪ್ರಾಸದ ೮೮, ಗಜಪ್ರಾಸದ ೫೪, ವೃಷಭಪ್ರಾಸದ ೧೮, ಶರಭಪ್ರಾಸದ ೫, ಹಯಪ್ರಾಸದ ೨೩ ಪದ್ಯಗಳಿರುವುದನ್ನು ನೋಡಬಹುದು.

೧. 'ಎತ್ತಿಬಹ ಸತ್ತಿಗೆಯ ಮೊತ್ತಂಗಳೆತ್ತಲಂ' (೪–೧೯)

೨. 'ಇಚ್ಚ್ಕಾರಿಗೊಂಡು ನರನೆಚ್ಚ ಕೆಂಗಱಿಗೋಲ
ಬಚ್ಚಳೆಯ ಪೊಸಮುಸೆಯ ನಿಚ್ಚಳದ ನಿಡುಸರಳ್
ಪೆಚ್ಚಿದುವು ನಿಮಿಷದೊಳ್ ಮುಚ್ಚಿದುವು ಗಗನಮಂ ಕೊಚ್ಚಿದುವು ಪರಬಲವನು' (೧೩–೧೮)

ಮುಂತಾಗಿ ಹಯಪ್ರಾಸದ ಪದ್ಯಗಳಲ್ಲಿ ಅಶ್ವಗತಿಯ ತೀವ್ರತೆಯನ್ನು ಸೂಚಿಸುವಂತೆ ರಭಸ, ಅತಿಶಯ ಭಾವವನ್ನು ವ್ಯಕ್ತಪಡಿಸುವಲ್ಲಿ ಈ ಪ್ರಾಸವು ಸಾರ್ಥಕ್ಯವನ್ನು ಪಡೆದಿದೆ ಎಂದು ಹೇಳಬಹುದು.

೩. ಮುಗ್ಗಿದುದು ಕುದುರೆ ಸಾರಥಿಮಡಿದನಾರಥಂ
ನೆಗ್ಗಿದುದು ಚಿಗಿದನನುಸಾಲ್ವನಾತನ ಬಲಂ' (೭–೪೬)

ಹಯಪ್ರಾಸದಲ್ಲಿ ದ್ವಿತ್ವಾಕ್ಷರದ ಬಳಕೆ, ಉತ್ಸಾಹಲಯದ ೩ ಮಾತ್ರೆಗಳ ಗಣದಂತೆ ಉತ್ಸಾಹಭಾವವನ್ನು ಹೊರಹೊಮ್ಮಿಸಲು ಅನುಕೂಲವಾಗಿದೆ.

ಪಾದಾದಿಯಲ್ಲಿ ಯಮಕವಿರುವ ೭೧ ಪದ್ಯಗಳನ್ನು, ಪಾದಮಧ್ಯದಲ್ಲಿ ಯಮಕವಿರುವ ೯ ಪದ್ಯಗಳನ್ನು, ಪಾದಾಂತ್ಯದಲ್ಲಿ ಯಮಕವಿರುವ ೩೦ ಪದ್ಯಗಳನ್ನು ಲಕ್ಷ್ಮೀಶನಲ್ಲಿ ಕಾಣಬಹುದು.

೧. 'ಕಾಯದುಱಿ ಮಾಣದದಱಿಂದರಸುತನವೆ ಸಾ
ಕಾ ಯದುಕುಲೇಂದ್ರನಂ ಭಜಿಸುವೆಂ.........' (೨–೧೯)

೨. 'ರಾಯಕೇಳಾಯಜ್ಞಸಂಗತಿಯನಾ ಬಾದ
ರಾಯಣಂ ಪೇಳೆ ಬಳಿಕವನಿಪಂ ಧರ್ಮಸಾ
ರಾಯಮಂ.............................' (೫–೮೮)

೩. 'ದಾನಮುಂ ಪಡೆದು ಮರಳಿದ ನಿನ್ನ ಸತ್ವದನಿ
ದಾನಮುಂ..............................' (೭-೫೭)

ಮುಂತಾದ ಪದಾದಿಯಮಕವಿದ್ದ ಪದ್ಯಗಳಲ್ಲಿ, ಮೇಲಿನ ಚರಣದಿಂದ ಕೆಳಗಿನ ಚರಣಕ್ಕೆ ನೂಲು ತೆಗೆದ ರೀತಿಯಲ್ಲಿ ಅಕ್ಷರಗಳು ಧಾರೆಗೊಂಡು ಬರುತ್ತವೆ.

೪. 'ಎಲ್ಲಿಯುಂ ಪರಿವ ಪೆರ್ದೊಱೆಯಿಂದೆ ಕೆಱೆಯಿಂದೆ
ಎಲ್ಲಿಯುಂ ಕುಸುಮದಾಗರದಿಂದೆ ಸರದಿಂದೆ' (೩-೨)

೫. 'ಕಡಿಕಡಿದು ಬಿದ್ದಕೈಕಾಲ್ಗಳಿಂ ತೋಳ್ಗಳಿಂ
ಪೊಡೆಗೆಡೆದ ಹೇರೊಡಲ ಸೀಳ್ಗಳಿಂ ಪೋಳ್ಗಳಿಂ' (೩-೨೮)

ಇತ್ಯಾದಿ ಪಾದಾಂತ್ಯಯಮಕಗಳಲ್ಲಿ ಉಯ್ಯಾಲೆಯ ತೂಗುಜೀಕಿನ ಲಯದ ಅಂದವನ್ನು ಕಾಣಬಹುದು.

೬. 'ಅಂಚೆವಿಂಡಾಡದ ಕೊಳಂ ಕೊಳಗಳೊಳು ಸಲೆ ಪ
ಳಂಚಿ ಸುಳಿಯದ ಗಾಳಿ ಗಾಳಿಗಳ ಬಳಿವಿಡಿದು' (೩-೩೩)

೭. 'ಬಿಡದೆ ರುಧಿರಾಕ್ಷ ರಾಕ್ಷಸನಂ ರಣಾಗ್ರದೊಳ್
ಕೆಡಹಿ ನಿಜಚಾಪಚಾಪಲ ಹಸ್ತನಾಗಿ ಲವ' (೨೦-೫೨)

ಇತ್ಯಾದಿ ಪಾದಮಧ್ಯಯಮಕದ ಪದ್ಯಗಳಲ್ಲಿ ಛೇಕಾನುಪ್ರಾಸದ ರೀತಿಯನ್ನು ಕಾಣುತ್ತೇವೆ.

೮. 'ಅಡಿಯುಮವಳಾಸ್ಯಮುಂ ಕಮಳಮಂ ಕಮಳಮಂ
ನಡೆಯುಮೆಳವಾಸೆಯುಂ ನಾಗಮಂ ನಾಗಮಂ' (೬-೨೩)

೯. 'ಮಸಗಿದಂ ಬಳಿಕ ರಣಭೀಷಣಂ ಭೀಷಣಂ
ವಸುಮತಿಗೆ ಕಾಲಾಂತಕೋಪಮಂ ಕೋಪಮಂ' (೧೬-೩೮)

ಇತ್ಯಾದಿ ಪದ್ಯಗಳಲ್ಲಿ ಪ್ರತಿಚರಣದ ಕೊನೆಯಲ್ಲಿ ಶಬ್ದದ ದ್ವಿರುಕ್ತಿಯನ್ನು ಕಾಣುತ್ತೇವೆ. ಇದು 'ಆವ್ರೇಡಿತಪ್ರಾಸ' ಎಂದು ಭರತಮುನಿ ನಾಟ್ಯಶಾಸ್ತ್ರದಲ್ಲಿ ಹೇಳುತ್ತಾನೆ.

೧೦. 'ವನಮಾಲಿಯಂದದಿಂ ಪದ್ಮಿ ಪದ್ಮಿಯವೋಲ್ ಭು
ವನಕುಕ್ಷಿ ಭುವನಕುಕ್ಷಿಯ ತೆಱದೆ ಹಂಸಲೋ
ಚನಶೋಭಿ ಹಂಸಲೋಚನಶೋಭಿಯಂತೆ ವರಚಕ್ರಿ ಪರಚಕ್ರಿಯವೊಲು'
(೧೫-೧೨)

ಇಂತಹ ಪದ್ಯಗಳಲ್ಲಿ ಶಬ್ದಗಳು ಸರಪಣಿಯ ಗೊಣಸುಗಳಂತೆ ಒಂದನ್ನೊಂದು ಸೇರಿಕೊಂಡಿರುವವು. ಈ ಪದಸಂಯೋಜನೆಗೆ ಮುಕ್ತಪದಗ್ರಸ್ತ ರೀತಿ ಎಂದು ಹೆಸರು. ಲಕ್ಷ್ಮೀಶನಲ್ಲಿ ಈ ರೀತಿಯನ್ನು ಆಗಾಗ ಕಾಣುತ್ತೇವೆ:

ಪದ್ಯದಲ್ಲಿ ಮೂರು ತೆರನಾದ ಲಾಲಿತ್ಯಗಳಿವೆ: (೧) ಶಬ್ದಲಾಲಿತ್ಯ (೨) ತಾಳಲಯ ಲಾಲಿತ್ಯ ಮತ್ತು (೩) ಪ್ಲುತರೀತಿಯ ಲಾಲಿತ್ಯ. ಶಬ್ದಲಾಲಿತ್ಯ, ತಾಳಲಯ ಲಾಲಿತ್ಯ, ಪಂಕ್ತಿವಿಭಜನೆ, ನಿಯಮಿತಪದಸಂಯೋಜನೆ ಈ ಪ್ರಯೋಗಗಳಿಗಿಂತ ಪ್ಲುತ ಲಾಲಿತ್ಯವು ಎದ್ದುಕಾಣುವಂತಹದು. ಈ ಲಾಲಿತ್ಯವೇ ಪದ್ಯದ ಜೀವಾಳವೆಂದು ಹೇಳಿ

ದರೂ ಸಲ್ಲುವುದು ಎಂದು ವಿ. ಕೃ. ಗೋಕಾಕರು ಅಭಿಪ್ರಾಯಪಡುತ್ತಾರೆ.[1] ಜಟಿಲವಾದ ಸಮಸ್ತಪದಗಳಿಲ್ಲದಿರುವಿಕೆಗೆ ಶಬ್ದಲಾಲಿತ್ಯ, ವಾಕ್ಯಾಂಗಗಳ ಸಮತೂಕಕ್ಕೆ ತಾಳಲಯಲಾಲಿತ್ಯ ಮತ್ತು ನಿಯಮಿತ ಪದಸಂಯೋಜನೆಗೆ ಪ್ಲುತಲಾಲಿತ್ಯ ಎಂದು ಹೇಳಬಹುದು ಎಂದು ಲಕ್ಷಣಗಳನ್ನು ಸೂಚಿಸಿದ್ದಾರೆ.

೧೧. 'ಕಾಡಾನೆಗಳ್ ಕೇಸರಿಗಳ ಮಱಿಗಳ್ವೆರಸಿ ವೊಲೆ
ಯೂಡುವುವು; ಪುಲ್ಲೆಗಳ್ ಪೆರ್ಬುಲಿಗಳೊಳ್ ಸರಸ
ವಾಡುವುವು; ಪಾವುಮುಂಗುಲಿಗಳೊಡಗೂಡುವುವು......' (೧೫–೧೯)

ಇಂತಹ ಪದ್ಯಗಳಲ್ಲಿಯ ವಾಕ್ಯಾಂಗಗಳ ಸಮತೂಕ–ತಾಳಲಯ ಲಾಲಿತ್ಯ,

೧೨. 'ಮೊಳೆವಲ್ಲುಗುವ ಜೊಲ್ಲು
ದಟ್ಟಿತಡಿ ತೊದಲುನುಡಿ
ತೊಳತೊಳಗುತಿಹ ಸೊಬಗು
ಮೆಱೆವನಗೆವೊಗದ ಬಗೆ
ಪೊಳೆವ ಕಣ್ ಮಿಸುಪ ನುಣ್—
ಗದಪಿನೆಣೆ ಚೆಲ್ವಪಣೆ
ಕುರುಳು ಜೋಲ್ವಂಬೆಗಾಲು (೨೮–೧೮)

ಇಂತಹ ಪದ್ಯಗಳಲ್ಲಿಯ ಶಬ್ದಲಾಲಿತ್ಯ, ಮತ್ತು

೧೩. 'ಕೊಳುಗುಳಕೆ ನಡೆತಂದೆ ಬಿಲ್ವಿಡಿಯುತೈತಂದೆ
ಫಲುಗುಣನೊಡನೆ ಹೋರಿ ಜಯಿಸಬೇಡವೆ ಹೋರಿ
ಕಲಿತನದೊಳುಕ್ಕಂದದಾತ ನೀನೇಕಂದವಳಿದೆ ರಣದೊಳಗೆ ಕಂದ'

ಎಂಬಲ್ಲಿ ನಿಯಮಿತಪದಸಂಯೋಜನೆಯಿಂದ ಉಂಟಾಗುವ ಪ್ಲುತದ ಲಾಲಿತ್ಯವನ್ನು ಕಾಣಬಹುದು. ಜಯಿಸಬೇಡವೆ 'ಹೋರಿ' ಎಂಬಲ್ಲಿ 'ಹೋರಿ' ಪದವು ಔಚಿತ್ಯಪೂರ್ಣವಾಗಿದೆ. ಮೊದಲ ಸಲ 'ಹೋರಿ' ಎಂಬುದನ್ನು ಹೋರಾಡಿ ಎಂಬರ್ಥದಲ್ಲಿ ಉಪಯೋಗಿಸಿ ಮತ್ತೊಮ್ಮೆ ಅದನ್ನೇ ಗೂಳಿ ಎಂಬರ್ಥದಲ್ಲಿ ಬಳಸಿ, ಸುಧನ್ವನ ಯೌವನ, ದೇಹದಾರ್ಢ್ಯ, ಸಾಮರ್ಥ್ಯ, ಯುದ್ಧೋತ್ಸಾಹಗಳ ಮೇಲೆ ಕವಿ ಬೆಳಕನ್ನು ಚೆಲ್ಲುವುದಲ್ಲದೆ ಹಂಸಧ್ವಜನ ಪುತ್ರವಾತ್ಸಲ್ಯವನ್ನು ತಕ್ಕ ಶಬ್ದದಲ್ಲಿ ವ್ಯಕ್ತಪಡಿಸಿದ್ದಾನೆ. ಅದರಂತೆ 'ಕಂದ' ಎಂಬ ಪದವನ್ನು ತ್ರಿವಾರ ಉಚ್ಚರಿಸಿ ಶೋಕಿಸುವಲ್ಲಿ 'ಮಗನೇ' ಎಂಬ ಭಾವವನ್ನು ಪುನಃ ಪುನಃ ಧ್ವನಿತಗೊಳಿಸಿ, ಉಕ್ಕಂದ, ಅಂದವಳಿ ಎಂಬ ಭಿನ್ನಪದಾರ್ಥಗಳನ್ನು ಹೊರಡಿಸುತ್ತಾನೆ. ಹೀಗೆ ಕವಿ ಲಕ್ಷ್ಮೀಶನು ಪದಗಳೊಡನೆ ಸರಸಾಟವಾಡುತ್ತಾನೆ.

'ಕಮಲದಳನಯನ ಕಾಳಿಯಮಥನ' (೫.೮) ಎಂಬ ಪದ್ಯದಲ್ಲಿ, ಕಾಗುಣಿತದ ಚಮತ್ಕಾರವನ್ನು ತೋರಿ ಕಕಾರದ ಬಳ್ಳಿಯನ್ನು ಹಬ್ಬಿಸಿದ್ದಾನೆ. ಹಾಗೆಯೇ ೧೩.೨೭ ೨೪.೧೨, ೨೫.೪೬ರಲ್ಲಿ ಬೇರೆ ಬೇರೆ ಬಗೆಯ ಚಮತ್ಕೃತಿಯನ್ನು ಮೆರೆದಿದ್ದಾನೆ.

---

[1] 'ಕವಿಕಾವ್ಯ ಮಹೋನ್ನತಿ'.

ಸಿಂಹಪ್ರಾಸ, ಪಾದಾದಿಯಮಕ, ಶಬ್ದಶಕ್ತಿ ಪ್ರಕಟನೆ, ಚಮತ್ಕಾರಯುಕ್ತ ಪದ್ಯ ಸೃಷ್ಟಿ ಇವುಗಳನ್ನು ವಾರ್ಧಕ ಷಟ್ಪದೀ ಛಂದದಲ್ಲಿ ಸಾಧಿಸಿ ತೋರಿಸುವ ಕಡೆ ಕವಿಯ ಒಲವಿರುವುದನ್ನು ಜೈಮಿನಿ ಭಾರತದಲ್ಲಿ ಅಲ್ಲಿಗಲ್ಲಿಗೆ ಕಾಣಬಹುದು.

'ನುಡಿಯಂ ಛಂದದೊಳೊಂದಿರೆ
ತೊಡರ್ಚಲಱಿವಾತನಾತನಿಂದಂ ಜಾಣಂ'

ಎಂದು ನೃಪತುಂಗನು ಹೇಳಿರುವುದನ್ನು ಗಮನಿಸಿ, ಕವಿ ಲಕ್ಷ್ಮೀಶನು ವಾರ್ಧಕ ಷಟ್ಪದಿಯನ್ನು ಅಲಂಕಾರವೈವಿಧ್ಯದಿಂದ ಚೆಂದಗೊಳಿಸಿರುವುದನ್ನು ಕಂಡಾಗ, ಅವನು ನುಡಿಗಳನ್ನು, ಮಾತುಗಳನ್ನು ಛಂದದಲ್ಲಿ ಅಂದಗೊಳಿಸುವ ಜಾಣ್ಮೆಯನ್ನು ಸಾಧಿಸಿದ್ದಾನೆ ಎಂದು ಮನದಟ್ಟುವುದು.

## ಕಾವ್ಯದಲ್ಲಿ ೩೬ ಲಕ್ಷಣಗಳು

'ಲಕ್ಷಣ' ಎಂಬ ಶಬ್ದಕ್ಕೆ, ಸ್ವಭಾವನಿರೂಪಣೆ, ವಿವರಣೆ, ಚಿಹ್ನೆ, ಅಸಾಧಾರಣ ಧರ್ಮ, ಕುರುಹು, ಯೋಗ್ಯತೆ, ಗುರಿ ಇತ್ಯಾದಿ ವಿವಿಧಾರ್ಥಗಳನ್ನು ಹೇಳಬಹುದು. ಸಾಮಾನ್ಯವಾಗಿ, 'ಲಕ್ಷ್ಯಾನುಸಾರಿ ಲಕ್ಷಣಂ'—ಲಕ್ಷಣ ಯಾವಾಗಲೂ ಗುರಿಯನ್ನು ಅನುಸರಿಸಿರುವುದು; ಒಟ್ಟಿನ ಮೇಲೆ ಯಾವುದೇ **ಚಿಹ್ನ** ಅಥವಾ **ಅಸಾಧಾರಣ ಧರ್ಮ**ಕ್ಕೆ ಲಕ್ಷಣ ಎನ್ನುತ್ತಾರೆ ಎಂದು ಇಟ್ಟುಕೊಳ್ಳಬಹುದು. ಯಾವೊಂದು ವ್ಯಕ್ತಿಯ ವ್ಯಕ್ತಿತ್ವ ಎಂತಹದೆಂಬುದರ, ಅದು ಮುಂದೆ ಏನಾಗುವುದೆಂಬುದರ ಲಕ್ಷಣಗಳು ಮುಖದಲ್ಲಿ ಕಾಣುವವೆಂದು ಶಾಸ್ತ್ರಜ್ಞರು ಹೇಳುತ್ತಾರೆ. ಬೀದಿಯಲ್ಲಿ ಆಡುತ್ತಿದ್ದ ಬಾಲ ಚಂದ್ರಹಾಸನನ್ನು ನೋಡಿದ ಬ್ರಾಹ್ಮಣರು,

'..................ಚಾರು ಲಕ್ಷಣದೊ
ಳೀ ಪೊಳಲ್ಗೀ ಕುಂತಳಾಧೀಶನಾಳ್ವ ನ
ಮ್ಮಾ ಪೊಡವಿಗೊಡೆಯನಹನೀತನಂ ನೀನಿರಿಸಿಕೊಂಡು ರಕ್ಷಿಪುದು'

ಎಂದು ದುಷ್ಟಬುದ್ಧಿಗೆ ಹೇಳುತ್ತಾರೆ. ಇದರ ಮೇಲಿಂದ 'ಲಕ್ಷಣ' ಎಂಬುದು ಸಾಮಾನ್ಯ ಪದ್ಯವಾಗಿರದೆ ವಿಶಿಷ್ಟಾರ್ಥದ ಶಾಸ್ತ್ರೀಯ ಪಾರಿಭಾಷಿಕ ಶಬ್ದವಾಗಿದೆ ಎಂದು ತಿಳಿಯುವುದು. ಎಂದರೆ ಲಕ್ಷಣ ಎಂಬುದು ಸುಪ್ತವಾಗಿದ್ದ ಅಸಾಧಾರಣ ಗುಣದ ಅಭಿವ್ಯಕ್ತಿಯ ಸೂಚಕವಾಗಿದೆ. ವ್ಯಕ್ತಿಯಲ್ಲಿಯ ವ್ಯಕ್ತಿತ್ವವನ್ನು, ವಸ್ತುವಿನಲ್ಲಿಯ ಗುಣವಿಶೇಷವನ್ನು, ಹಾಗೆಯೇ ಕಾವ್ಯದ ಸೌಂದರ್ಯವನ್ನು ಲಕ್ಷಣದಿಂದ ಅರಿತುಕೊಳ್ಳಬಲ್ಲೆವು.

ಕಾವ್ಯ ಮತ್ತು ಲಕ್ಷಣ ಇವುಗಳ ಸಂಬಂಧವನ್ನು ಕುರಿತು ವಿಚಾರಮಾಡುವಾಗ ಒಂದು ಮಾತು ಇದಿರಿಗೆ ಬರುತ್ತದೆ. 'ವಸ್ತುಕ' ಕಾವ್ಯಕ್ಕೆ ಸಕಲ ಲಕ್ಷಣಗಳ ಅಗತ್ಯವೇ ಹೊರತು 'ವರ್ಣಕಕಿಲ್ಲ ಲಕ್ಷಣಂ' ಎಂಬ ವಿಚಾರವು ಒಂದು ಕಾಲದಲ್ಲಿ ರೂಢವಾಗಿತ್ತು. ವಸ್ತುಕಕಾವ್ಯಗಳು ಪಂಡಿತಮಾನ್ಯಗಳಾಗಿದ್ದಂತೆ ವರ್ಣಕಕಾವ್ಯಗಳು ಜನಸಾಮಾನ್ಯರಿಂದ, ಪಾಮರರಿಂದ ಮನ್ನಣೆ ಪಡೆಯುತ್ತಿದ್ದವು. ಈ ವಾದವನ್ನು ಸಾರುತ್ತ ರತ್ನಾಕರ ವರ್ಣಿ

'ಸಕಲ ಲಕ್ಷಣವು ವಸ್ತುಕಕೆ ವರ್ಣಕಕಿಪ್ಪು । ವಿಕಳವಾದರು ದೋಷವಿಲ್ಲ ॥
ಸಕಲ ಲಕ್ಷಣಕಾಗಿ ಬಿರುಸು ಮಾಡಿದರೆ ಪು । ಸ್ತಕದ ಬದನೆಕಾಯಹುದು ॥'
—'ಭರತೇಶ ವೈಭವ', ೧-೯

ಎಂದನು. ಕೆಲವು ಕವಿಗಳು ಈ ಮತದವರಾಗಿದ್ದರು. ಪಾಮರರಂಜನೆಯೇ, ಜನತಾ ಸಂಸ್ಕರಣವೇ ಅವರ ಸಾಹಿತ್ಯದ ಮುಖ್ಯೋದ್ದೇಶವಾಗಿತ್ತು.

ವರ್ಣಕಕ್ಕೂ ವಸ್ತುಕದಂತೆ ಲಕ್ಷಣಗಳಿರಬೇಕು ಎಂಬ ಅಭಿಪ್ರಾಯದ ಕವಿಗಳೂ ಕೆಲವರು ಆಗಿಹೋಗಿದ್ದಾರೆ. ಅವರಲ್ಲಿ ಲಕ್ಷ್ಮೀಶ ವಿರೂಪಾಕ್ಷಪಂಡಿತರಿಗೆ ಪ್ರಮುಖವಾದ ಸ್ಥಾನ ಸಲ್ಲುತ್ತದೆ. ಇವರಿಬ್ಬರೂ ಪಂಡಿತಪಾಮರರಿಬ್ಬರನ್ನೂ ರಂಜಿಸುವಂತೆ ಕಾವ್ಯಗಳನ್ನು ರಚಿಸಿ, 'ವರ್ಣಕಕಿಲ್ಲ ಲಕ್ಷಣಂ' ಎಂಬ ಮಾತನ್ನು ಅಲ್ಲೆನಿಸಿದವರು.

ಲಕ್ಷಣ ಎಂಬ ಪದವು ಕಾವ್ಯಶಾಸ್ತ್ರದಲ್ಲಿ ಉಪಯೋಗಿಸಲ್ಪಟ್ಟಿದೆ. ನಾಟಕದಿಂದ ಕಾವ್ಯವನ್ನು ಬೇರ್ಪಡಿಸಿ ತೋರಿಸುವುದೇ ಕಾವ್ಯಲಕ್ಷಣ. ಇವುಗಳ ಉಗಮಸ್ಥಾನ ನಿರುಕ್ತ ಮತ್ತು ಮೀಮಾಂಸೆ ಎಂದು ಹೇಳುತ್ತಾರೆ. ಭರತನು ತನ್ನ ನಾಟ್ಯಶಾಸ್ತ್ರದಲ್ಲಿ,

'ಕಾವ್ಯ ಬಂಧಾಸ್ತು ಕರ್ತವ್ಯಾಃ ಷಟ್‌ತ್ರಿಂಶಲ್ಲಕ್ಷಣಾನ್ವಿತಾಃ', 'ಏತಾನಿ ವಾ ಕಾವ್ಯ ವಿಭೂಷಣಾನಿ', 'ಕಾವ್ಯೇ ಪ್ರಯೋಜ್ಯಾನಿ', 'ಏಭಿರರ್ಥಕ್ರಿಯಾಪೇಕ್ಷೈಃ ಕಾರ್ಯಂ ಕಾವ್ಯಂ ತು ಲಕ್ಷಣೈಃ' ಎಂದಿತ್ಯಾದಿಯಾಗಿ ಲಕ್ಷಣಗಳನ್ನು ಕುರಿತು ವಿವರಿಸುತ್ತಾನೆ. ಅವನ ಅಭಿಪ್ರಾಯದ ಮೇರೆಗೆ ಕಾವ್ಯಕ್ಕೆ ಇರಬೇಕಾದ ಲಕ್ಷಣಗಳು ೩೬. ರನ್ನನು ತನ್ನ ಗದಾಯುದ್ಧ ಕಾವ್ಯದಲ್ಲಿ,

'ಪದಿನಾಱಿಲ್ಲವಲಂಕ್ರಿಯಾರಚನೆ ಮೂವತ್ತಾಱು ನೇರ್ಪಟ್ಟುವೊಂ
ದಿದ ಶೃಂಗಾರಮುದಲ್ಲವೊಂದೆ ರಸಮೊಂಬತ್ತೆಯ್ದೆ ಡಂಬಟ್ಟುವೆಂ
ಬುದನೆಂಬನ್ನೆಗಮುಂಗನೋಚಿತರಸಾಲಂಕಾರಮುಂ ತಾಳ್ದೆದೊ
ಪ್ಪಿದ ವಾಕ್ಸುಂದರಿ ಬಂದು ಸನ್ನಿಹಿತೆಯಕ್ಕೆನ್ನೀ ಮುಖಾಂಭೋಜದೊಳ್' (೧-೭)

ಎಂದು ಹೇಳಿದುದು ಗಮನಾರ್ಹವಾದ ಮಾತು. ಸ್ತ್ರೀಯರಿಗೆ ಅಲಂಕಾರಗಳು ೧೬ (ಸ್ನಾನ, ವಿಲೇಪನ, ವಸ್ತ್ರ, ಶಿರೋಭೂಷಣ, ತಿಲಕ, ಕಜ್ಜಲ, ನಾಸಾಭೂಷಣ, ಮಕರಪತ್ರ, ಕುಂಡಲ, ಹಾರ, ಕೇಯೂರ, ಮಣಿಭೂಷಣ, ಅಂಗುಲೀಯಕ, ಕಾಂಚೀದಾಮ, ನೂಪುರ, ಮತ್ತು ಅಲಕ್ತಕ). ಆದರೆ ಕಾವ್ಯದೇವಿಗೆ ಅಲಂಕಾರಗಳು ೩೬. ಭರತನ ಉಕ್ತಿಯಂತೆ ತನ್ನ ಕಾವ್ಯಸುಂದರಿ 'ಷಟ್‌ತ್ರಿಂಶಲ್ಲಕ್ಷಣಾನ್ವಿತೆ'ಯಾಗಬೇಕೆಂದು ಹಾರೈಸಿದ್ದಾನೆ ರನ್ನ. ತನ್ನ ಕೃತಿಯ ಪ್ರಸ್ತಾವನಾಸಂಧಿಯಲ್ಲಿ ೩೬ ಲಕ್ಷಣಗಳನ್ನೆಲ್ಲಾ ಹೇಳುವುದು ಅಪ್ರಸ್ತುತ, ಅಸಮಂಜಸ ಎಂದು ಬಿಟ್ಟಿದ್ದಾನೆಯೆ ಹೊರತು ಅವನು ತಿಳಿದುದು ಭರತನ ಅಲಂಕಾರಗಳೇ ಎಂಬಲ್ಲಿ ಸಂದೇಹವಿಲ್ಲ.[1]

[1] ರನ್ನನ ಕಾಲಕ್ಕೆ ಪ್ರಚುರವಾಗಿದ್ದ ಭಾಮಹನ ಕಾವ್ಯಾಲಂಕಾರ, ದಂಡಿಯ ಕಾವ್ಯಾದರ್ಶ ನೃಪತುಂಗನ ಕವಿರಾಜಮಾರ್ಗ ಈ ಮೊದಲಾದ ಅಲಂಕಾರಗ್ರಂಥಗಳಲ್ಲಿ ೪೦ಕ್ಕೆ ಮೇಲ್ಪಟ್ಟ ಅಲಂಕಾರಗಳು ಉಕ್ತವಾಗಿವೆ. ಭರತನ ನಾಟ್ಯಶಾಸ್ತ್ರದಲ್ಲಿ ೩೬ ಲಕ್ಷಣಗಳನ್ನು ಹೇಳಿದೆ. ಇವೇ ರನ್ನನ ಅಲಂಕಾರಗಳಾಗಿರಬಹುದೇ ಎಂದು ತೀ. ನಂ. ಶ್ರೀಕಂಠಯ್ಯನವರೂ ಸಂದೇಹವನ್ನು ವ್ಯಕ್ತಪಡಿಸಿದ್ದಾರೆ ('ರನ್ನನ ಗದಾಯುದ್ಧ ಸಂಗ್ರಹ', ಟಿಪ್ಪಣಿ, ಪು. ೯೪).

ಲಕ್ಷಣಗಳ ಇತಿಹಾಸವು ಒಂದು ಸುದೀರ್ಘವಾದ ವಿಷಯ. *Some Concepts of the Alankara Shastra* ಎಂಬ ಪುಸ್ತಕದಲ್ಲಿ ವ್ಹಿ. ರಾಘವನ್ ಅವರು ಮೊದಲನೆಯ ಪ್ರಕರಣವನ್ನು ಲಕ್ಷಣಶಾಸ್ತ್ರದ ಇತಿಹಾಸಕ್ಕೆ ವಿನಿಯೋಗಿಸಿದ್ದಾರೆ. ಇಲ್ಲಿ ಆ ವಿಷಯುವನ್ನು ಸಂಕ್ಷೇಪವಾಗಿ ನೋಡೋಣ.

ಭರತನು ೩೬ ಕಾವ್ಯಲಕ್ಷಣಗಳನ್ನು ಹೇಳಿದನು. ಇವುಗಳನ್ನು ಹೇಳುವಲ್ಲಿ ಎರಡು ಸಂಪ್ರದಾಯಗಳು ಕಂಡುಬರುತ್ತವೆ. ಒಂದು ಉಪಜಾತಿವೃತ್ತದಲ್ಲಿದ್ದರೆ ಇನ್ನೊಂದು ಅನುಷ್ಟುಪ್ ಛಂದದಲ್ಲಿದೆ. ಇವು ಕಾವ್ಯಲಕ್ಷಣಗಳೇ ಅಥವಾ ನಾಟ್ಯಲಕ್ಷಣಗಳೇ ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. ಅಂತಹ ೧೦ ಭಿನ್ನಾಭಿಪ್ರಾಯಗಳನ್ನು ಅಭಿನವಗುಪ್ತನು ಚರ್ಚಿಸಿದ್ದಾನೆ.

ಭಾಮಹಾದಿಗಳ ಕಾಲಕ್ಕೆ ಕಾವ್ಯಲಕ್ಷಣ ಮತ್ತು ಕಾವ್ಯಾಲಂಕಾರ ಇವುಗಳು ಒಂದರಲ್ಲೊಂದು ಕೂಡುತ್ತ ಹೋಗಿ, ಕೊನೆಗೆ ಕಾವ್ಯಲಕ್ಷಣಗಳೆಲ್ಲ ಕಾವ್ಯಾಲಂಕಾರಗಳೆಂದು ಗಣಿಸಲ್ಪಟ್ಟವು. ಈ ಸ್ಥಿತಿಯೇ, ರನ್ನನು 'ಪದಿನಾರಲ್ಲವಲಂಕ್ರಿಯಾರಚನೆ ಮೂವತ್ತಾಱು' ಎಂದುದಕ್ಕೆ ಕಾರಣವೆಂದು ತೋರುತ್ತದೆ. ರನ್ನನ ಕಾಲದಲ್ಲಿ ಕಾವ್ಯಲಕ್ಷಣಗಳನ್ನೆಲ್ಲ ಅಲಂಕಾರಗಳೆಂದು ತಿಳಿಯುವ ಕಡೆಗೆ ವಿಚಾರಪ್ರವಾಹ ಹರಿಯುತ್ತಿತ್ತು.

ಕ್ರಿಯಾಕಲ್ಪ, ಕಾವ್ಯಲಕ್ಷಣ, ಕಾವ್ಯಾಲಂಕಾರ ಇವುಗಳೆಲ್ಲಾ ಒಂದೇ ಎನ್ನುವುದು. ಕಾವ್ಯಲಕ್ಷಣಗಳೆಂದರೆ ಸಂಧಿಸಂಧ್ಯಂಗಗಳಂತೆ 'ವಸ್ತು' ವಿಸ್ತಾರ ನಿದರ್ಶನಗಳು. ೩೬ ಲಕ್ಷಣಗಳು ಕೇವಲ ನಾಟ್ಯಕ್ಕೆ ಸಂಬಂಧಿಸಿದವುಗಳು ಇತ್ಯಾದಿ ವಿವಿಧ ಅವಸ್ಥೆಗಳು ಲಕ್ಷಣದ ಇತಿಹಾಸದಲ್ಲಿ ಬಂದುಹೋಗಿವೆ.

ವಿಶ್ವನಾಥನು (ಕಾಲ ೧೦೦೦–೧೩೫೦) ತನ್ನ 'ಸಾಹಿತ್ಯದರ್ಪಣ'ದಲ್ಲಿ ೩೬ ಕಾವ್ಯಲಕ್ಷಣಗಳನ್ನು ಕೊಟ್ಟಿದ್ದಾನೆ; ಮತ್ತೆ ೩೩ ನಾಟ್ಯಾಲಂಕಾರಗಳನ್ನೂ ಅವನು ಹೇಳುತ್ತಾನೆ. ೩೬ ಕಾವ್ಯಲಕ್ಷಣಗಳ ಬಗೆಗೆ ವಿಶ್ವನಾಥನ ಮತವು ಅಷ್ಟೊಂದು ಸ್ಪಷ್ಟವಾಗಿಲ್ಲ. ಆದರೆ ಅವನು, 'ಭರತಮುನಿಗಳು ಹೇಳಿದ ೩೬ ಕಾವ್ಯಲಕ್ಷಣಗಳನ್ನು ಇಟ್ಟುಕೊಳ್ಳಬೇಕು' ಎಂಬ ಮತವನ್ನು ಸ್ಪಷ್ಟಪಡಿಸಿದ್ದಾನೆ.

ಕವಿ ಲಕ್ಷ್ಮೀಶನಿಗೆ ಸಮೀಪದ ಪೂರ್ವಿಕ ಆಲಂಕಾರಿಕನೆಂದರೆ ವಿಶ್ವನಾಥನೇ. ವಿಶ್ವನಾಥನ ಕಾಲದಲ್ಲಿ ಭಾಮಹ, ದಂಡಿ, ಅಭಿನವಗುಪ್ತ ಎಲ್ಲರೂ ಆಗಿಹೋಗಿದ್ದರು. ಎಲ್ಲರೂ ಕಾವ್ಯಲಕ್ಷಣದ ಬಗ್ಗೆ ಸವಿಸ್ತಾರವಾಗಿ ಚರ್ಚಿಸಿ ಭಿನ್ನಭಿನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದರು. ಹೀಗಿದ್ದರೂ ವಿಶ್ವನಾಥನು ೩೬ ಕಾವ್ಯಲಕ್ಷಣಗಳಿಗೆ ಬೆಲೆಕೊಡುತ್ತಾನೆ. ಕಾವ್ಯಸಂಪ್ರದಾಯಪ್ರೇಮಿಯಾದ ಕವಿ ಲಕ್ಷ್ಮೀಶನು ಭರತಮುನಿ ಮತ್ತು ವಿಶ್ವನಾಥನ ಮತದಂತೆ ಕಾವ್ಯಕ್ಕೆ ಲಕ್ಷಣಗಳು (೩೬) ಬೇಕು ಎನ್ನುವವನಾಗಿದ್ದಾನೆ. ಎಂತಲೇ ಅವನು, 'ಛಂದಸ್ಸು ಲಕ್ಷಣಮಲಂಕಾರ ಭಾವರಸಮೊಂದಿ ಕಳೆವೆತ್ತ ಸತ್ಕೃತಿ....' ಎಂದು ಪೀಠಿಕೆಯಲ್ಲಿ ಸ್ಪಷ್ಟಪಡಿಸಿದ್ದಾನೆ. ಲಕ್ಷಣ ಮತ್ತು ಅಲಂಕಾರ

ಎಂಬ ಎರಡೂ ಪದಗಳನ್ನು ಒತ್ತಟ್ಟಿಗೆ ಹೇಳಿ ಅವೆರಡೂ ಬೇರೆ ಬೇರೆ ಎಂದು ತನ್ನ ಮತವನ್ನೂ ವ್ಯಕ್ತಪಡಿಸಿದ್ದಾನೆ.

### ೩೬ ಕಾವ್ಯಲಕ್ಷಣಗಳು[1]

| | | | |
|---|---|---|---|
| ೧. | ವಿಭೂಷಣ | ೧೯. | ಯಾಂಚ್ಯೈ |
| ೨. | ಅಕ್ಷರಸಂಘಾತ | ೨೦. | ಪ್ರತಿಷೇಧ |
| ೩. | ಶೋಭೆ | ೨೧. | ಪೃಚ್ಛೆ |
| ೪. | ಅಭಿಮಾನ | ೨೨. | ದೃಷ್ಟಾಂತ |
| ೫. | ಗುಣಕೀರ್ತನ | ೨೩. | ಭಾಸನ |
| ೬. | ವಿಶೇಷಣ | ೨೪. | ಸಂಶಯ |
| ೭. | ಉದಾಹರಣ | ೨೫. | ಆಶಿ |
| ೮. | ನಿರುಕ್ತ | ೨೬. | ಪ್ರಿಯ |
| ೯. | ಗುಣಾನುವಾದ | ೨೭. | ಕಪಟಸಂಘಾತ |
| ೧೦. | ಅತಿಶಯ | ೨೮. | ಕ್ಷಮೆ |
| ೧೧. | ಹೇತು | ೨೯. | ಪ್ರಾಪ್ತಿ |
| ೧೨. | ಸಾರೂಪ್ಯ | ೩೦. | ಪಶ್ಚಾತ್ತಾಪ |
| ೧೩. | ಮಿಥ್ಯಾವ್ಯವಸಾಯ | ೩೧. | ಅನುವೃತ್ತಿ |
| ೧೪. | ಸಿದ್ಧಿ | ೩೨. | ಉಪಪತ್ತಿ |
| ೧೫. | ಪದೋಚ್ಚಯ | ೩೩. | ಯುಕ್ತಿ |
| ೧೬. | ಆಕ್ರಂದ | ೩೪. | ಕಾರ್ಯ |
| ೧೭. | ಮನೋರಥ | ೩೫. | ಅನುನೀತಿ |
| ೧೮. | ಆಖ್ಯಾನ | ೩೬. | ಪರಿವೇದನ |

ಈ ಮೂವತ್ತಾರು ಲಕ್ಷಣಗಳಲ್ಲಿ ಲಕ್ಷ್ಮೀಶನ ಜೈಮಿನಿ ಭಾರತದಲ್ಲಿ ಎಷ್ಟು ಮಟ್ಟಿಗೆ ಅಳವಟ್ಟಿವೆ ಎಂದು ಪರಿಶೋಧಿಸಿದಾಗ, ಅಲ್ಲಿ ೨೨ ಕಾವ್ಯಲಕ್ಷಣಗಳು ಎದ್ದು ಕಂಡವು (ಮೂವತ್ತಾರೂ ಇದ್ದಿರಬಹುದು). ಆ ೨೨ ಕಾವ್ಯಲಕ್ಷಣಗಳ ಸಮನ್ವಯ ವನ್ನು ಇನ್ನು ಮುಂದೆ ಕ್ರಮವಾಗಿ ಮಾಡುತ್ತೇವೆ.

೨ **ಅಕ್ಷರ ಸಂಘಾತ** : ಕೆಲವೇ ಶ್ಲಿಷ್ಟಶಬ್ದಗಳಿಂದ ವಿಚಿತ್ರವಾಗಿ ತೋರುವಂತೆ ವರ್ಣನೆಯನ್ನು ಮಾಡುವುದು.

ಉದಾ : ೧. ಚಕ್ರಗಭಿಮುಖನಾದ ಬಳಿಕಲ್ಲಿ ಮುಕ್ತಿಯಲ್ಲದೆ ಬೇರೆ ಜಯಮುಂಟೆ ?
೨. ಕಯ್ಯಾರೆ ಖಡ್ಗಮಂ ಕೊಟ್ಟು ತನ್ನರಸಿಯಂ ಪೊಯ್ಯೆಂದು ಪೇಳದೆ ಅಡ_

---

[1] 'ಭರತಮುನೀಚೇ ನಾಟ್ಯಶಾಸ್ತ್ರ', ಗೋದಾವರೀ ಕೇತಕರ, ಪು. ೧೯೭–೨೦೭.

ವಿಗೆ ಕಳುಹಿ ಬಾಯೆಂದನಯ್ಯಯ್ಯೊ ರಾಘವಂ ಕಾರುಣ್ಯನಿಧಿಯೆಂದಳಲ್ದ-
ಳಂಭೋಜನೇತ್ರೆ.

೩. ಇಲ್ಲಿ ತಳುವಿದೊಡೆ ನೆರವುಂಟು ತನಗೀ ಕಾಡೊಳುಗ್ರಜಂತುಗಳ್ ಅಲ್ಲಿ ರಘು
ನಾಥ ಏಕಾಕಿಯಾಗಿರ್ಪನು.

ವಿವರಣೆ : ಇಲ್ಲಿ ಮುಕ್ತಿ, ಕಾರುಣ್ಯನಿಧಿ, ಏಕಾಕಿ ಎಂಬ ಶಬ್ದಗಳು ಕ್ಲಿಷ್ಟಶಬ್ದಗಳು. ಏಕೆಂದರೆ 'ಮುಕ್ತಿ' ಎಂಬ ಪದದಿಂದ ಸಾವು ಎಂಬ ಅರ್ಥವನ್ನು, 'ಕಾರುಣ್ಯ ನಿಧಿ' ಎಂಬ ಪದದಿಂದ ಕಠೋರತನ ಎಂಬ ಅರ್ಥವನ್ನು ಮತ್ತು 'ಏಕಾಕಿ' ಎಂಬ ಪದದಿಂದ ಸಮುದಾಯ ಎಂಬ ಅರ್ಥವನ್ನು ಸೂಚಿಸಲಾಗಿದೆ. ಇಲ್ಲಿ ಶ್ಲೇಷ **ಅಲಂಕಾರ** ವಿಲ್ಲ; ಮುಕ್ತಿ, ಕಾರುಣ್ಯನಿಧಿ, ಏಕಾಕಿಗಳಿಗೆ ಎರಡರ್ಥಗಳಿಲ್ಲ, ಎರಡು ಭಾವಗಳಿವೆ. ಆದುದರಿಂದ ಮೇಲಣ ವಾಕ್ಯಗಳು ಶ್ಲೇಷಾಲಂಕಾರದ ವಾಕ್ಯಗಳಲ್ಲ; ಅಕ್ಷರ ಸಂಘಾತ ಎಂಬ ಲಕ್ಷಣಯುಕ್ತ ಉಕ್ತಿಗಳಾಗಿವೆ.

೪ **ಅಭಿಮಾನ** : ಬೇರೆ ಬೇರೆ ಜನರು ಸಾಧಕ ಬಾಧಕ ವಿಚಾರಗಳನ್ನು ಏನೇ ಹೇಳಿದರೂ ತನ್ನ ವಿಚಾರವನ್ನು ಬಿಡದೆ ಇರುವುದು.

ಉದಾ : ೧. ಹರಿಯನುಳಿದಾವು ಬದುಕುವವರಲ್ಲ ನಾವೆಲ್ಲರುಂ—ಅರ್ಜುನ.
೨. ನಿಮಿಷಮುರವಿಂದದಳನೇತ್ರನನಗಲ್ದು ಜೀವಿಸಲರಿಯೆವು—ಜಾಂಬವತಿ.

ವಿವರಣೆ : ಈ ಎರಡು ಉಕ್ತಿಗಳಲ್ಲಿಯೂ, ಅರ್ಜುನ ಮತ್ತು ಜಾಂಬವತಿ ಇವರಿಗೆ ಕೃಷ್ಣನ ಬಗ್ಗೆ ಇರುವ ಅಭಿಮಾನವು ವ್ಯಕ್ತವಾಗುತ್ತದೆ. ಅಗ್ನಿ, ಸೌಭರಿ ಮೊದಲಾದವರು ಶ್ರೀಕೃಷ್ಣನ ಬಗ್ಗೆ, ಯಜ್ಞದ ಬಗ್ಗೆ ಸಾಧಕ ಬಾಧಕ ಮಾತು ಗಳನ್ನಾಡಿದಾಗ ಅರ್ಜುನನು ಶ್ರೀಕೃಷ್ಣನ ಬಗ್ಗೆ ತನ್ನ ವಿಚಾರವೇನು ಎಂಬು ದನ್ನು ಸ್ಪಷ್ಟಪಡಿಸುತ್ತಾನೆ. ಅದರಂತೆಯೆ, ನಾರದನು ಶ್ರೀಕೃಷ್ಣನನ್ನು ಉದ್ದೇಶಿಸಿ ಹಲಕೆಲವು ಮಾತುಗಳನ್ನಾಡಿದಾಗ ಜಾಂಬವತಿ ತನ್ನ ವಿಚಾರವನ್ನು, ಕೃಷ್ಣಸಾಮೀಪ್ಯದ ವಿಷಯವನ್ನು ಅವನಿಗೆ ತಿಳಿಸುತ್ತಾಳೆ.

೫ **ಗುಣಕೀರ್ತನ** : ಬೇರೆ ಬೇರೆ ಕಾರ್ಯಗಳನ್ನು ಮಾಡಿದ ಬೇರೆ ಬೇರೆ ಜನರ ಗುಣಗಳನ್ನು ಆ ಆ ಜನರ ನಾಮನಿರ್ದೇಶದೊಡನೆ ವರ್ಣಿಸಿ, ಮತ್ತೊಂದರ ವರ್ಣನೆ ಯನ್ನು ಮಾಡುವುದು.

ಉದಾ : ಜಲಜಾಕ್ಷಭಕ್ತಿಯಿಂ ಪ್ರಹ್ಲಾದನಾಗಿ, ನಿಶ್ಚಲ ಹರಿಧ್ಯಾನದಿಂ ಧ್ರುವನಾಗಿ,
ಸತ್ವದಿಂ ಬಲಿಯಾಗಿ, ಶಾಂತತ್ವದಿಂ ವಿಭೀಷಣನಾಗಿ, ವೈಷ್ಣವಾಭರಣನೆಂಬ ಕಲೆ
ಯಿಂದೆ ಮಹಿಗೆ ರುಕ್ಮಾಂಗದಂ ತಾನಾಗಿ, ಸಲೆ ಕೀರ್ತಿಯಿಂ ಪುಂಡರೀಕನಾಗಿ ಇರು
ತಿಹಂ ಸುಲಲಿತಚರಿತ ಭಾಗವತಶಿರೋಮಣಿ ಚಂದ್ರಹಾಸಂ ಉರ್ವೀತಳದೊಳು
(೨೯—೧೪)

ವಿವರಣೆ : ಚಂದ್ರಹಾಸನ ವರ್ಣನೆ ಮಾಡುವುದು ಪ್ರಸ್ತುತ ವಿಷಯ. ಆದರೆ, ಪ್ರಹ್ಲಾದ, ಧ್ರುವ, ಬಲಿ, ವಿಭೀಷಣ ಇವರ ಗುಣಗಳನ್ನು ನಾಮನಿರ್ದೇಶ ದೊಂದಿಗೆ ವರ್ಣಿಸಿ, ಚಂದ್ರಹಾಸನ ಮಹಿಮೆಯನ್ನು ಹೇಳಿದೆ.

೬ ವಿಶೇಷಣ : ಪ್ರಸಿದ್ಧ ವಸ್ತುವಿನಲ್ಲಿಯ ಪ್ರಸಿದ್ಧ ಗುಣಗಳನ್ನು ಹೇಳಿ, ಅವುಗಳಿಗಿಂತ ಹೆಚ್ಚಿನ ಗುಣಗಳು ಇನ್ನೊಂದು ವಸ್ತುವಿನಲ್ಲಿದೆ ಎಂದು ಹೇಳುವುದು.

ಉದಾ : ಶ್ರೀವಧುವಿನಂಬಕ ಚಕೋರಕಂ ಪೊರೆಯೆ, ಭಕ್ತಾವಳಿಯ ಹೃತ್ಕುಮುದ ಕೋರಕಂ ಬಿರಿಯೆ, ಜಗತೀವಲಯುದ ಅಮಲ ಸೌಭಾಗ್ಯರತ್ನಾಕರಂ ಪೆರ್ಚಿನಿಂ ಮೇರೆವರಿಯೆ, ಆವಗಂ ಸರಸಕರುಣಾಮೃತದ ಕಲೆಗಳಿಂ ತೀವಿದ ಎಳನಗೆಯ ಬೆಳ್ದಿಂಗಳಂ ಪಸರಿಸುವ ದೇವಪುರ ಲಕ್ಷ್ಮೀರಮಣನ ಆಸ್ಯಚಂದ್ರಂ ಆನಂದಮಂ ನಮಗೀಯಲಿ (೧.೧).

ವಿವರಣೆ : ಪ್ರಸಿದ್ಧ ವಸ್ತುವಾದ ಚಂದ್ರನಲ್ಲಿರುವ ಪ್ರಸಿದ್ಧ ಗುಣಗಳನ್ನು ಹೇಳಿ, ಅವನ್ನೆಲ್ಲ ಉಳ್ಳ ಲಕ್ಷ್ಮೀರಮಣನ ಆಸ್ಯಚಂದ್ರನು ಆ ಚಂದ್ರನಿಗಿಂತ ಹೆಚ್ಚಿನವನು ಎಂದು ಇಲ್ಲಿ ವರ್ಣಿಸಿದೆ. ಚಂದ್ರನು ತನ್ನ ಅಮೃತ ಕಿರಣಗಳನ್ನು ಲೋಕದಲ್ಲಿ ಹರಡಿ, ಚಕೋರಪಕ್ಷಿಯನ್ನು ತಣಿಸುತ್ತಾನೆ, ನೈದಿಲೆಗಳನ್ನು ಅರಳಿಸುತ್ತಾನೆ, ಸಮುದ್ರವನ್ನು ಉಕ್ಕೇರಿಸುತ್ತಾನೆ. ಆದರೆ ಇದು ಯಾವಾಗಲೂ ಅಲ್ಲ; ಅವನಿಗೆ ಕ್ಷಯವುಂಟು. ಆದರೆ ಲಕ್ಷ್ಮೀರಮಣನು ಆಸ್ಯಚಂದ್ರನು ಅಕ್ಷಯನು-**ಯಾವಾಗಲೂ** ಈ ಗುಣಗಳನ್ನು ಪ್ರಕಟಿಸುತ್ತಾನೆ. ಆದುದರಿಂದ ಅವನು ಆ ಚಂದ್ರನಿಗಿಂತ ಹೆಚ್ಚಿನವನು.

೭ ಉದಾಹರಣ : ಒಂದು ಶಬ್ದದ ಅರ್ಥ ಗೊತ್ತಾದೊಡನೆ ಅನೇಕ ಸಂಗತಿಗಳು ಹೊಳೆಯುವುದು.

ಉದಾ : ಕದ್ದ ಕಳ್ಳನವೊಲಾಡಿಸಿಕೊಳ್ಳಲಾಱನೊಡ । ಲಿದ್ದಲ್ಲಿ ನಿಂದೆಗೊಳಗಾಗಿ ಬದು
ಕುವನಲ್ಲ । ತಿದ್ದಿ ತೀರದ ವಿಲಗಕಂಜುವೆ ಸೀತೆಯಂ ಬಿಟ್ಟಲ್ಲದಿರೆನೆಂದನು ॥

ವಿವರಣೆ : ವಿಲಗ : ಹೊಂದದಿರುವಿಕೆ, ಒಪ್ಪದಿರುವಿಕೆ, ವಿಸಂಗತತೆ, ಕಷ್ಟ, ಅಪವಾದ, ಅಪಕೀರ್ತಿ (ಈ ಪದವನ್ನು ಕುಮಾರವ್ಯಾಸನೂ ತನ್ನ ಭಾರತದಲ್ಲಿ ಬಳಸಿರುವನೆಂದು ಕಿಟೆಲ್ ಕೋಶದಲ್ಲಿದೆ). ವಿಲಗದ ಅರ್ಥ ಗೊತ್ತಾದ ಮೇಲೆ 'ತಿದ್ದಿತೀರದ ವಿಲಗದ' ಅರ್ಥ ಮುಂದೆ ಬರುತ್ತದೆ. ಸೀತೆ ರಾವಣನ ಸೆರೆಯಲ್ಲಿ ಇದ್ದುದು ಅಪವಾದಕ್ಕೆ ಕಾರಣವಾದೀತೆಂದೇ ಅವಳು ಅಗ್ನಿಪ್ರವೇಶದಿಂದ ಪರಿಶುದ್ಧಳಾಗಿ ರಾಮನೊಂದಿಗೆ ಬರಬೇಕಾಗುತ್ತದೆ. ಎಂದರೆ, ಅಪವಾದ ಬರಬಾರದೆಂದು, ತಿದ್ದಲು ಅಗ್ನಿಪ್ರವೇಶ ಮಾಡಿಸಿದರೂ ಅಪವಾದ ತೀರಲಿಲ್ಲ ಎಂದು ಅರ್ಥ.

೮ ನಿರುಕ್ತ : ವ್ಯುತ್ಪತ್ತಿ.

ಉದಾ : ಮಂಜುಮಹಿಮಾಸ್ಪದಂ ಚಾರುವೃತ್ತಂ ಕಲಾ
ಪುಂಜಂ ಸದಾನಭೋಗಂ ಕುವಲಯಪ್ರಿಯಂ
ರಂಜಿಸುವ ರಾಜನೆನ್ನವೊಲಾದೊಡಂ ಮಿತ್ರತೇಜಕಳವಳಿದು ಪಗೆಯ ॥
ಭಂಜನಗೆ ಸಿಕ್ಕಿ ಬಡತನವಟ್ಟು ಕಂದಿ ಪಳಿ
ವಂ ಜಗವಱಿಯೆ ಪೊತ್ತನೆಂದು ಬಿಡದಮೃತಾರ್ಚಿ
ಯಂ ಜಱಿದು ನಗುವನದಱಿಂ ಚಂದ್ರಹಾಸನಿವನಹನೆನೆ ಪೆಸರ್ಮೆಱೆದುದು ॥

(೨೮-೯೨)

ವಿವರಣೆ : ಚಂದ್ರಹಾಸ ಎಂಬ ಹೆಸರು ಇವನಿಗೆ ಹೇಗೆ ಸಾರ್ಥಕವಾದುದು, ಅದರ ವ್ಯುತ್ಪತ್ತಿ ಹೇಗೆ ಎಂಬುದನ್ನು ಇಲ್ಲಿ ವಿವರಿಸಲಾಗಿದೆ.

೯ ಗುಣಾನುವಾದ : ಕಡಿಮೆ ಮಟ್ಟದ ಗುಣವುಳ್ಳವನೊಡನೆ ಮೇಲುಮಟ್ಟದವನನ್ನು ಹೋಲಿಸಿ, ಮೇಲ್ಮಟ್ಟದವನ ಗುಣಗಳಿಗೆ ಗೌಣತ್ವವನ್ನು ತರುವುದು.

ಉದಾ : ಭೀಮ : ಆಹಾ ಮಹಾದೇವ, ಚಿತ್ರಮುಂ ಕೇಳಿದೆವಲಾ! ಹಲವು ಲೋಕಂಗಳಂ ಕೊಳ್ಳದೇ ನಿನ್ನುದರ? ಮಹಾನಿಶಾಚರಿಯರಲ್ಲವೇ ನರಕಾಸುರನ ಮನೆಯ ಬಾಲಕಿಯರು? ಈ ಹದಿರದೇಕೆ, ಕರಡಿಯ ಮಗಳ ಆಳ್ದ ನಿನಗೋ? ಹೇವರಿಸದೆ ಅಸುರೆಯ ಅಸುವೀಂಟಿದವರು ಆರೊ? ಅವನಿಪತಿಗಳ ಕೂಡೆ ಗೋವಳರ್ಗೆ ಆವ ಮೇಳ? (೨–೫೯)

ಕೃಷ್ಣ : ಹಿಂದೆ ರಣದೊಳ್ ಅಭಿಲಾಷೆಯಿಂ ಪೈಶಾಚರಂತೆ ಹೇಸದೆ ರಕ್ತಪಾನಮುಂ ಮಾಡಿ ಒಡಲ ಪೋಷಿಸಿದೆ! ಬಂಡತನವಿದು ನಿನ್ನ ಸಾಹಸಕೆ ಭೂಷಣವೆ! ಹೋಗೆಲವೊ ಬಾಣಸಿಗ ಲೋಕದೊಳ್ ದೂಷಣಕೆ ಬೆದಱಿ! (೨–೬೧)

ವಿವರಣೆ : 'ಗೋವಳ' ಎಂದು ಶ್ರೀಕೃಷ್ಣನನ್ನೂ 'ಬಾಣಸಿಗ' ಎಂದು ಕಲಿ ಭೀಮನನ್ನೂ ಸಂಬೋಧಿಸಿ ವರ್ಣಿಸಿರುವಲ್ಲಿ ಗುಣಾನುವಾದವಿದೆ. ಇದರಿಂದ ಮೇಲ್ಮಟ್ಟದ ಶ್ರೀಕೃಷ್ಣ ಮತ್ತು ಭೀಮರನ್ನು ಕೆಳಮಟ್ಟದಲ್ಲಿ ಎಣಿಸಿದಂತಾಗಿದೆ.

೧೧ ಹೇತು : ಬೇರೆ ಬೇರೆಯಾಗಿ ಹೇಳಲ್ಪಟ್ಟ ಮಾತುಗಳ ಅರ್ಥದೊಳಗಿಂದ ಒಂದೇ ಅರ್ಥವು ಅಭಿವ್ಯಕ್ತವಾಗುವುದು.

೧೨ ಸಾರೂಪ್ಯ : ಕಣ್ಮುಂದೆ ಇರದಿದ್ದ ವಸ್ತುವಿನ ಕಲ್ಪನೆಯನ್ನು ಮಾಡಿ ಕೊಡುವುದು.

ಉದಾ : ೧. ಹರಿ ಮನೆಯೊಳಿರೆ ಗರ್ದಭಾಕೃತಿಯು ಹರಿಯೊಡನೆ ಬಂದೆ.
೨. ನಿನಗೆ ಹರಿ ಸಮೀಪದೊಳಿರ್ದುಂ ಈ ವಾಜಿಮೇಧಂ ಏಕೆ?
೩. ಶ್ರೀಕೃಷನಿರೆ ಮುಂದೆ ವಂಶಮುಂ ಕೊಂದೆಂ ಎಂಬ ಈ ಪಾತಕಂ ಬಹುದೆ?
೪. ಸ್ವಕರಸ್ಥನಾದ ಹರಿಯಂ ಬಿಟ್ಟು ಕಟ್ಟಿದಂ ಗರ್ದಭಾಕೃತಿ ಹರಿಯನು!

ವಿವರಣೆ : ಈ ನಾಲ್ಕು ಉದಾಹರಣೆಗಳಲ್ಲಿ ನಾಲ್ಕು ಮಾತುಗಳು ಬೇರೆ ಬೇರೆಯಾಗಿ ಹೇಳಿದ್ದರೂ ಶ್ರೀಕೃಷ್ಣನ ಮಹಿಮೆಯನ್ನೇ ಸೂಚಿಸಿದೆ. ಆದುದರಿಂದ ಈ ಉಕ್ತಿಗಳಲ್ಲಿ ಹೇತು ಎಂಬ ಲಕ್ಷಣವು ವ್ಯಕ್ತವಾಗಿದೆ. ಇಲ್ಲಿ ಶ್ರೀಕೃಷ್ಣನು ಕಣ್ಣಮುಂದೆ ಇಲ್ಲ. ಆದರೆ ಆ ಕೃಷ್ಣನ ಕಲ್ಪನೆಯನ್ನು ಈ ಮಾತುಗಳು ತಂದುಕೊಡುವುದರಿಂದ ಸಾರೂಪ್ಯ ಲಕ್ಷಣವೂ ಇಲ್ಲಿ ಇದೆ.

೧೫ ಪದೋಚ್ಚಯ: ಒಂದೇ ಮಾತನ್ನು ಅನೇಕ ಗುಣವಾಚಕ ಸಂಗತಿಗಳಿಂದ ಪ್ರಶಂಸಿಸುವುದು.

ಉದಾ : ಜೈಮಿನಿ ಭಾರತದಲ್ಲಿಯ ಕೃಷ್ಣಸ್ತುತಿಯ ಎಲ್ಲ ಪದ್ಯಗಳಲ್ಲಿ ಈ ಲಕ್ಷಣವೇ ಇದೆ. ಅನೇಕ ಗುಣವಾಚಕ ವಿಶೇಷಣಗಳಿಂದ ಶ್ರೀಕೃಷ್ಣನನ್ನು ಹೊಗಳುವ ರೀತಿ ಭಾಗವತ ರೀತಿ.

೧೭ ಆಕ್ರಂದ: ತನ್ನ ಆತ್ಮೀಯನಿಗೆ ಇನ್ನೊಬ್ಬನ ಉದಾಹರಣೆ ಕೊಟ್ಟು ಕಠೋರ ಮಾತುಗಳನ್ನಾಡುವುದು.

ಉದಾ : 'ದಾನವಂಗಿದಿರಾಗಿ ಪೋಗಿ, ರಣದೊಳ್ ಪ್ರಾಣದಾನವಂ ಪಡೆದು ಮರಳಿದ
ನಿನ್ನ ಸತ್ವದ ನಿದಾನವಂ ತಿಳಿದು ಅಹಿತರು ಏಗೆಯ್ಯರ್? ಅಕಟ! ನಿಜ
ಶೌರ್ಯದಿಂ ಪ್ರದ್ಯುಮ್ನನ ಮಾನವಂ ಭಂಗಿಸಿದೆ! ನಿನ್ನಂ ಜಗದೊಳ್ ಆವ
ಮಾನವಂ ಬಣ್ಣಿಸುವನಿನ್ನು? ನಿನ್ನದಟಿಗೆ ಸಮಾನಮಂ ಕಾಣೆ! (೭.೫೭)

ವಿವರಣೆ : ಇಲ್ಲಿ ಸತ್ಯಭಾಮೆ ಪ್ರದ್ಯುಮ್ನನ ಉದಾಹರಣೆಕೊಟ್ಟು ತನ್ನ ಆತ್ಮೀಯನಾದ ಶ್ರೀಕೃಷ್ಣನಿಗೆ 'ಕಠೋರವಾಗಿ ಮಾತನಾಡುತ್ತಾಳೆ: 'ನಿನ್ನಂ ಜಗದೊಳ್ ಆವ ಮಾನವಂ ಬಣ್ಣಿಸುವನಿನ್ನು!'

೧೮ ಮನೋರಥ: ತನ್ನ ಮನಸ್ಸಿನಲ್ಲಿಯ ಭಾವವನ್ನು ಇನ್ನೊಂದು ವಸ್ತುವನ್ನು ತೋರಿಸಿ ಅದರ ಮೂಲಕ ಸೂಚಿಸುವುದು.

ಉದಾ : 'ತಾತ, ನಂದನದೊಳಾಂ ನೀರ್ವೊಯ್ದು ಬೆಳೆಯಿಸಿದ ಚೂತಲತೆ ಪೂತುದು.
ಇನ್ನು ಉದ್ಯಾಪನಂ ಗೆಯ್ಸದೆ ಏತಕಿರ್ದಪೆ? ರಾಜಕಾರ್ಯವೇನು?' ಎಂದು
ತಲೆವಾಗಿ ನಸುಲಜ್ಜೆಯಿಂದೆ ಮಾತನಾಡುವ ಮಗಳ ಭಾವಮಂ ಕಂಡು (೨೯.೩೧)

ವಿವರಣೆ : ಇಲ್ಲಿ ವಿಷಯೆ ತಾನು ಪ್ರಾಪ್ತವಯಸ್ಕಳಾದುದನ್ನು, ಹೂಬಿಟ್ಟ ಚೂತಲತೆ ಎಂಬ ವಸ್ತುವನ್ನು ತೋರಿಸಿ ಸೂಚಿಸುತ್ತಾಳೆ. ಇವಳ ಈ ಭಾವವನ್ನು ದುಷ್ಟಬುದ್ಧಿ ತಿಳಿದುಕೊಂಡು ಇನ್ನು ಇವಳಿಗೆ ವರ ನೋಡಬೇಕೆಂದು ನಿರ್ಧರಿಸುತ್ತಾನೆ.

೨೦ ಪ್ರತಿಷೇಧ: ಒಬ್ಬ ಮನುಷ್ಯನು ಭಯಂಕರ ಕೃತ್ಯಗಳನ್ನೆಸಗಲು ಪ್ರಾರಂಭಿಸಿದಾಗ ಅವನ ನಿಷೇಧವನ್ನು ಮಾಡುವುದು.

ಉದಾ : ಸುಧನ್ವ-ಸುರಥರು ಅಪ್ರತಿಮ ವೀರರು ಎಂದು ಶ್ರೀಕೃಷ್ಣನಿಗೆ ಕಂಡು ಬಂದಾಗ ಮತ್ತು ರಾಮಾವತಾರ ಕೃಷ್ಣಾವತಾರ ಸಕಲ ಪುಣ್ಯಕ್ಕೂ ಸುಧನ್ವನು ಮಣಿಯದಿದ್ದಾಗ ಅವರಿಬ್ಬರ ನಿಷೇಧ, ಸಂಹಾರವನ್ನೇ ಶ್ರೀಕೃಷ್ಣನು ಮಾಡುತ್ತಾನೆ.

೨೧ ಪೃಚ್ಛಾ: ತನ್ನ ವ್ಯಕ್ತಿಗೆ ಅಥವಾ ಇನ್ನೊಬ್ಬನಿಗೆ ಒಂದು ಮಾತನ್ನು ಅಪೂರ್ವವಾಗಿ ಕೇಳುವುದು.

ಉದಾ : ರಾಜಮುಖಿ, ನೋಡೀ ಸರೋವರದ ಪದ್ಮಿನಿಗೆ, ರಾಜಹಂಸಕ್ರೀಡೆ, ಪುನ್ನಾಗಕೇಳಿ,
ವಿಭ್ರಾಜಿತ ಮಧುಪಗೋಷ್ಠಿ ಸಂದಪುದು! ರವಿಗೆ ತಾಂ ಅರಸಿಯಾದಪಳ್ ಅದೆಂತೊ?
ಸ್ತ್ರೀಜನಕೆ ಸಹಜಂ ಇದು! ಮೇಲೆ ಕರ್ದಮಜಾತೆ! ಮಾಜುವಳ್ ಎದೆಯೊಳ್
ಇರ್ದ ಕೃಷ್ಣತೆಯಂ. ಇದು ಜಗಕೆ ಸೋಜಿಗವೆ? ಚಂಚಲೆಯಲಾ! ಪತಿಯಂ ಎಣಿ
ಸುವಳೆ? (೭.೯)

ವಿವರಣೆ : ಇಲ್ಲಿ ಶ್ರೀಕೃಷ್ಣನು ಶ್ಲೇಷೆಯಿಂದ ಚಪಲೆಯಾದ 'ಪದ್ಮಿನಿ'ಯು ಮತ್ತು ಕಮಲದ ಗುಣಧರ್ಮಗಳನ್ನು ಅಪೂರ್ವವಾಗಿ ವಿವರಿಸಿ ರುಕ್ಮಿಣಿಯಲ್ಲಿ ಆರೋಪಿಸಿ ಮಾತನಾಡುತ್ತಾನೆ. ಕೆಸರಲ್ಲಿ ಹುಟ್ಟಿದ ಕಮಲ, ಅದರ ಜೊತೆಯಾಡುವ ರಾಜ

ಹಂಸ, ಗಂಡಾನೆ, ಮಧುಪಗಳನ್ನು ಎತ್ತಿ ಆಡಿ ಕಮಲದ ಪಾತಿವ್ರತ್ಯದ ಬಗ್ಗೆ ಶಂಕಿಸಿ 'ರವಿಗೆ ತಾನರಸಿಯಾದಪಳದೆಂತೋ!' ಎಂದು ರುಕ್ಮಿಣಿಯನ್ನು ಕೇಳು ತ್ತಾನೆ.

೨೪ ಸಂಶಯ: ಒಂದು ಸಂಗತಿ ಸ್ಪಷ್ಟವಾಗಿ ತಿಳಿಯದುದರಿಂದ ಗೊಂದಲಗೆಟ್ಟು ಆ ಗೊಂದಲಗೆಟ್ಟ ಸ್ಥಿತಿಯಲ್ಲಿಯೆ ಜೀವದ ಕೊನೆಯಾಗುವಿಕೆ.

ಉದಾ: ೧. ಜ್ವಾಲೆಗೆ ಕೃಷ್ಣನ ಮಹತಿ ಗೊತ್ತಾಗದೆ ಗೊಂದಲಗೆಟ್ಟುದರಿಂದ ನೀಲಧ್ವಜ ನಿಂದ ಹೊರಗೆ ಹಾಕಿಸಿಕೊಂಡು, ಉನ್ಮುಖನಿಂದ ತಿರಸ್ಕೃತಳಾಗಿ, ಗಂಗೆಯಿಂದ ಅರ್ಜುನನಿಗೆ ಶಾಪಕೊಡಿಸಿ, ಕೊನೆಗೆ ತಾನೇ ಅಗ್ನಿಪ್ರವೇಶ ಮಾಡುವಳು.

೨. ಅರ್ಜುನನಿಗೆ ಬಭ್ರುವಾಹನನ ನೆಲೆ ತಿಳಿಯದುದರಿಂದ ಗೊಂದಲಗೆಟ್ಟು ಯುದ್ಧವನ್ನೇ ಬಯಸಿ ಪ್ರಾಣವನ್ನು ಕಳೆದುಕೊಳ್ಳಬೇಕಾಯಿತು.

೨೫ ಆಶೀ: ಇನ್ನೊಬ್ಬನು ಬೇಡಲಿ, ಬೇಡದಿರಲಿ ತನ್ನ ಇಚ್ಛೆಯಂತೆ ಶುಭ ಕೋರುವುದು.

ಉದಾ: ಆ ಸುದತಿ ಪಣೆವಿಡಿದು ನೆಗಪಿ, ಸುಕುಮಾರಂಗೆ ಸೇಸೆದಳಿದು, ಆರತಿಯನೆತ್ತಿ, ತಿಲಕ ವನಿಟ್ಟು, ಭಾಸುರ ಸುಲಾಜ ದಧಿ ದೂರ್ವೆ ಅಕ್ಷತೆಗಳೊಡನೆ ತಳಿಗೆದಂಬುಲವಂ ಇತ್ತು, 'ಲೇಸೊದವಲಿ ಅಧ್ವದೊಳ್, ನಿನ್ನವಯವಂಗಳಂ ವಾಸುದೇವಂ ಕಾಯಲಿ; ಅನುಕೂಲೆಯಾಗಿಹ ವಧೂಸಮನ್ವಿತನಾಗಿ ರಾಜ್ಯಮಂ ಪಡೆ' ಎಂದು ಪರಸಿ ಬೀಳ್ಕೊಟ್ಟಳು. (೨೯–೪೧)

ವಿವರಣೆ: ಚಂದ್ರಹಾಸನ ಸಾಕುತಾಯಿ ಮೇಧಾವಿನಿ ಹೀಗೆ ಅನೇಕ ಶುಭಗಳನ್ನು ಅವನಿಗಾಗಿ ತಾನಾಗಿ ಕೋರಿದ್ದಾಳೆ.

೨೭. ಕಪಟ ಸಂಘಾತ: ಎರಡು ಮೂರು ರೀತಿಗಳಿಂದ ಮೋಸಗೊಳಿಸಿ ಒಂದು ವ್ಯಕ್ತಿಯನ್ನು ತನ್ನ ಅಧೀನಪಡಿಸಿಕೊಳ್ಳಲು ಮಾಡುವ ಯುಕ್ತಿ.

ಉದಾ: ಮಯೂರಧ್ವಜನನ್ನು ಅಧೀನಪಡಿಸಿಕೊಳ್ಳಲು ಶ್ರೀಕೃಷ್ಣನು i ವೇಷವನ್ನು ಬದಲಿಸುತ್ತಾನೆ, ii ತನ್ನ ಮಗನನ್ನು ಸಿಂಹ ಹಿಡಿದಿದೆ ಎನ್ನುತ್ತಾನೆ, iii ಅವ ನನ್ನು ಬಿಡಿಸಿಕೊಳ್ಳಲು ನಿನ್ನ ಶರೀರದ ಬಲಭಾಗವನ್ನು ಸಿಂಹ ಬೇಡುತ್ತಿದೆ ಕೊಡು ಎಂದು ಕೇಳುತ್ತಾನೆ.

ವಿವರಣೆ: ಈ ಮೋಸದಲ್ಲಿ ಮೂರು ಯುಕ್ತಿಗಳನ್ನು ಅಳವಡಿಸಿದೆ. ಇದರಿಂದ ಮಯೂರಧ್ವಜನು ಭಕ್ತಿಯ ಅತಿಶಯದ ಮೂಲಕ ಶ್ರೀಕೃಷ್ಣನಿಗೆ ವಶವಾಗು ತ್ತಾನೆ.

೨೮ ಕ್ಷಮೆ: ನೆರೆದ ಜನರ ಮಧ್ಯದಲ್ಲಿ ಒಬ್ಬ ದುಷ್ಟಮನುಷ್ಯನು ಸಿಟ್ಟಿಗೆಬ್ಬಿಸು ವಂತಹ ಮಾತನಾಡಿದರೂ ಸಿಟ್ಟಿಗೇಳದಿರುವುದು.

ಉದಾ: ಅಸುರನಾದ ಅನುಸಾಲ್ವನು ಶ್ರೀಕೃಷ್ಣನನ್ನು ಬೆಣ್ಣೆಗಳ್ಳ, ಕೊಬ್ಬಿದುದರದವ ತುರುಗಾಹಿ, ಗೋವಳಿಯರ ಉಪನಾಯಕ ಎಂದು ಮುಂತಾಗಿ ಹೀಯಾಳಿಸಿದರೂ

ಶ್ರೀಕೃಷ್ಣನು ಸಿಟ್ಟಿಗೇಳುವುದಿಲ್ಲ. (೭. ೨೯, ೩೦, ೩೧).

೩೦ ಪಶ್ಚಾತ್ತಾಪ: ಮನಸ್ಸಿಗೆ ಕೆಡಕೆನಿಸುವುದು (ತಾನು ತಪ್ಪುಮಾಡಿದೆನೆಂದು ಮನವರಿಕೆಯಾಗಿ).

ಉದಾ : ೧. ಪರಹಿಂಸೆಯಂ ಮಾಡಿ ಮಾನವಂ ಬಾಳ್ದಪನೆ? ದೀಪಮಂ ಕೆಡಿಸುವ ಪತಂಗದಂತೆ ನಮ್ಮ ಉಪಾಯವೆ ನಮಗೆ ಅಪಾಯವಮಂ ತಂದುದು! (೩೧–೫೩)

೨. ಬಂದನಿದೆ ಶಶಿಹಾಸ, ಅನುಜೆಯಂ ಕೊಡು, ವಿಪ್ರವೃಂದವಮಂ ತಣಿಸು, ಬಹುವಿಧದಿಂದೆ ನಾಂ ಬೈದನೆಂದು ಮುನಿದಿರಬೇಡ. ವೈಷ್ಣವದ್ರೋಹದಿಂದ ಎನಗೆ ಇಂತುಟಾಗದಿಹುದೆ, ಕಂದಾ? (೩೧–೬೦)

ವಿವರಣೆ : ತನ್ನ ಕುತಂತ್ರವೇ ತನಗೆ ಮುಳುವಾಗಿ ಮಗ ಮದನನು ಸತ್ತ ಬಳಿಕ ದುಷ್ಟಬುದ್ಧಿಗೆ ಉಂಟಾದ ಪರಿತಾಪದ ಅಭಿವ್ಯಕ್ತಿ ಅವನ ಈ ಮಾತುಗಳಲ್ಲಿದೆ.

೩೩ ಯುಕ್ತಿ: ದೊಡ್ಡವರು ಕೂಡಿಕೊಂಡು ವಿಚಾರವಿನಿಮಯದಿಂದ ಒಂದು ಸಂಗತಿಯನ್ನು ನಿಶ್ಚಯಿಸುವುದು.

ಉದಾ : ಧರ್ಮರಾಯ, ಕೃಷ್ಣ, ವ್ಯಾಸ ಮೊದಲಾದವರು ಕೂಡಿ ವಿಚಾರಮಾಡಿ ಅಶ್ವಮೇಧಯಜ್ಞವನ್ನು ನಿಶ್ಚಯಿಸುವಲ್ಲಿ ಯುಕ್ತಿ ಎಂಬ ಲಕ್ಷಣವಿದೆ.

೩೪ ಅನುನೀತಿ : ವಿಲಕ್ಷಣ ಕೋಪದ ಮೂಲಕ ಆಗಿಹೋದ ಘಟನೆಯ ಬಗ್ಗೆ ತೋರಿಕೆಗಾಗಿ ಒಳ್ಳೆಯ ಮಾತಿನಿಂದ ಮಾತನಾಡುವುದು.

ಉದಾ : ವೀರ, ಬಾರೈ ಚಂದ್ರಹಾಸ, ನೀಂ ಇನ್ನೆಗಂ ದೂರವಾಗಿರ್ದೆ ನಮಗೆ; ಇನ್ನು ಅಳಿಯನಾದ ಬಳಿಕ, ಊರ ಹೊಱಬನದೊಳ್ ಇಹ ಚಂಡಿಕಾಲಯಕೆ ಮದುವೆಯ ನಾಲ್ಕನೆಯ ದಿನದೊಳು ನೀರಜಸಖಾಸ್ತಸಮಯದೊಳ್ ಒರ್ವನೇ ಪೋಗಿ ಗೌರಿಯಂ ಪೂಜಿಸಬಹುದು (೩೧–೩೮)

ವಿವರಣೆ : ದುಷ್ಟಬುದ್ಧಿ ವಿಲಕ್ಷಣ ಕೋಪದ ಮೂಲಕ, ತನ್ನ ಮಗಳು ವಿಧವೆಯಾದರೂ ಚಿಂತೆಯಿಲ್ಲ ಎಂಬ ನಿಶ್ಚಯದಿಂದ ಚಂದ್ರಹಾಸನಿಗೆ ಚಂಡಿಕಾಲಯಕ್ಕೆ ಹೋಗುವಂತೆ ನಯದಿಂದ ಹೇಳುತ್ತಾನೆ. 'ನೀನು ಇನ್ನೆಗಂ ದೂರವಾಗಿರ್ದೆ, ನಮಗಿನ್ನ ಳಿಯನಾದೆ' ಎಂದು ಆಡುವುದು ಬರೀ ತೋರಿಕೆಯ ಮಾತು. ಮನಸ್ಸಿನಲ್ಲಿದೆ ಅವನನ್ನು ಕೊಲ್ಲಿಸುವ ಎಣಿಕೆ.

ಹೀಗೆ ೨೨ ಲಕ್ಷಣಗಳನ್ನು ಕನ್ನಡ ಜೈಮಿನಿ ಭಾರತದಲ್ಲಿ ತೋರಿಸಬಹುದು. ಒಂದೊಂದು ಲಕ್ಷಣಕ್ಕೂ ಹಲವಾರು ಉದಾಹರಣೆಗಳನ್ನು ಕೊಡಬಹುದು.

ಕಾವ್ಯದ ವಸ್ತುವೃದ್ಧಿಗೆ ಸಂಧಿ ಸಂಧ್ಯಂಗ ಲಕ್ಷಣಗಳಿರುವಂತೆ, ಪಾತ್ರಗಳ ಮಾತುಗಳಲ್ಲಿ ೩೬ ಕಾವ್ಯಲಕ್ಷಣಗಳಿರುತ್ತವೆ. ಈ ಕಾವ್ಯಲಕ್ಷಣಗಳನ್ನು ಭರತನು ಕಾವ್ಯವಿಭೂಷಣ ಎಂದು ಕರೆದಿದ್ದಾನೆ. ಇವು ಕಾವ್ಯಶರೀರಕ್ಕೆ ಸಂಬಂಧಿಸಿದವುಗಳು, ಅಲಂಕಾರಗಳಂತೆ ಕಾವ್ಯದ ಬಾಹ್ಯಾಂಗಸೌಂದರ್ಯವನ್ನು ಹೆಚ್ಚಿಸುವ ಸಾಧನಗಳಲ್ಲ ಎಂದೂ ಭರತನು ಸ್ಪಷ್ಟಪಡಿಸಿದ್ದಾನೆ. ಕಾವ್ಯವನ್ನು ಶರೀರಕ್ಕೆ ಹೋಲಿಸಿ, ಅದರ ಅಂಗಾಂಗಗಳನ್ನು ಕಾವ್ಯದ ಅಂಗಾಂಗಗಳಿಗೆ ಹೋಲಿಸುವುದು ಕವಿಸಮಯ. ಕೈ, ಕಾಲು, ಮೂಗು,

ಕಣ್ಣು ಇವುಗಳೆಲ್ಲಾ ಅಂಗಾಂಗ–ಶರೀರ. ಆದರೆ ಇವು ಸುಂದರವಾಗಿರುವುದು ಲಕ್ಷಣ ; ಇವುಗಳ ಸೌಂದರ್ಯವನ್ನು ಹೆಚ್ಚಿಸುವ ಸಾಧನ ಅಲಂಕಾರ ಎಂದು ಹೇಳಿ ಲಕ್ಷಣಗಳನ್ನು ಅಲಂಕಾರಗಳಿಂದ ಬೇರ್ಪಡಿಸಿದ್ದಾನೆ.

ಮೇಲೆ ಉದಾಹರಣೆಗಳಾಗಿ ಕೊಟ್ಟಿರುವ ಅನೇಕ ಉಕ್ತಿಗಳಲ್ಲಿ ಅಲಂಕಾರಗಳಿಲ್ಲ, ಆದರೂ ಆ ಉಕ್ತಿಗಳಲ್ಲಿ ಸೌಂದರ್ಯವಿದೆ, ಲಕ್ಷಣವಿದೆ ಎಂಬುದನ್ನು ನೋಡಬಹುದು. ಅದರಂತೆ ಕೆಲವು ಉಕ್ತಿಗಳಲ್ಲಿ ಅಲಂಕಾರಗಳಿವೆ ಎಂಬುದನ್ನೂ ಲಕ್ಷಿಸಬೇಕು. ಲಕ್ಷಣ ಗಳಲ್ಲಿ ಅಲಂಕಾರದ ಛಾಯೆ ಇರುವುದರಿಂದ ಬರುಬರುತ್ತ ಲಕ್ಷಣಗಳೆಲ್ಲ ಅಲಂಕಾರಗಳಲ್ಲಿ ಲೀನವಾದುವು ಎಂದು ತೋರುತ್ತದೆ.

## ಅಲಂಕಾರ ವೈಭವ

'ಸೌಂದರ್ಯಂ ಅಲಂಕಾರಃ', 'ಕಾವ್ಯಂ ಗ್ರಾಹ್ಯಂ ಅಲಂಕಾರಾತ್', 'ಅಲಂಕೃತಿಃ ಅಲಂಕಾರಃ', 'ಕಾವ್ಯಶೋಭಾಕರಾನ್ ಧರ್ಮಾನ್ ಅಲಂಕಾರಾನ್ ಪ್ರಚಕ್ಷತೇ' ಇತ್ಯಾದಿ ಅಲಂಕಾರದ ಲಕ್ಷಣಗಳನ್ನು ಲಾಕ್ಷಣಿಕರು ಹೇಳುತ್ತಾರೆ. ಅಲಂಕಾರವೆಂದರೆ ಕಾವ್ಯಶೋಭೆಯನ್ನು ಹೆಚ್ಚಿಸುವ ಧರ್ಮ. ವಸ್ತ್ರ–ಒಡವೆಗಳು ಸ್ತ್ರೀಯರ ಸೌಂದರ್ಯ ವೃದ್ಧಿಗೆ ಸಹಾಯಕವಾಗುವಂತೆ, ಅಲಂಕಾರಗಳು ಕಾವ್ಯಸೌಂದರ್ಯವೃದ್ಧಿಗೆ ಸಹಾಯಕ ವಾಗುತ್ತದೆ. ಅಂದರೆ ಇವು ಕಾವ್ಯದ ಬಾಹ್ಯಾಂಗಕ್ಕೆ ಸಂಬಂಧಿಸಿದವು ಎಂದು ಒಂದು ಮತ.

'ಕಾವ್ಯ ಶೋಭಾಯಾಃ ಕರ್ತಾರೋ ಗುಣಾಃ ತದತಿಶಯಹೇತವಃ ಅಲಂಕಾರಾಃ' ಎಂದು ವಾಮನನೂ ಹೇಳುತ್ತಾನೆ. ಕಾವ್ಯಗುಣ ಪ್ರತಿಶಬ್ದದಲ್ಲಿ, ಪ್ರತಿ ಅರ್ಥದಲ್ಲಿ ಅಡಗಿ ರುತ್ತದೆ. ಆ ಅಡಗಿರುವ ಶಬ್ದಶಕ್ತಿಯನ್ನು, ಅರ್ಥಪ್ರಚುರತೆಯನ್ನು ಸುಂದರವಾಗಿ ಪ್ರಕಟಪಡಿಸುವುದೇ ಅಲಂಕಾರ. ಉಪಮಾದಿ ಹಲವು ಅಲಂಕಾರಗಳಾದದ್ದು ಆಮೇಲಿನ ಹೆಜ್ಜೆ. ಅಲಂಕಾರವೆಂದರೆ ಕಾವ್ಯದಲ್ಲಿಯ ಸೌಂದರ್ಯ ಎಂಬುದು ಶಾಸ್ತ್ರದೃಷ್ಟಿಯಿಂದ ಮೊದಲ ಹೆಜ್ಜೆ.

ಕನ್ನಡ ಜೈಮಿನಿ ಭಾರತದಲ್ಲಿ ಯಾವ ಯಾವ ಶಬ್ದಾಲಂಕಾರ ಮತ್ತು ಅರ್ಥಾ ಲಂಕಾರಗಳ ಪದ್ಯಗಳು ಎಷ್ಟೆಷ್ಟಿವೆ ಎಂಬುದನ್ನು ನೋಡೋಣ :

೧. ಶಬ್ದಾಲಂಕಾರಗಳು: ೧೮೬

೨. ಅರ್ಥಾಲಂಕಾರಗಳು

(೧) ಔಪಮ್ಯಮೂಲಕವಾದ ಅಲಂಕಾರಗಳು: ೩೪೧

| | |
|---|---|
| ಉಪಮಾ— | ೧೦೨ |
| ಪ್ರತಿವಸ್ತೂಪಮಾ— | ೩ |
| ರೂಪಕ— | ೪೨ |
| ದೃಷ್ಟಾಂತ— | ೮ |

ಭ್ರಾಂತಿ— ೩
ಉತ್ಪ್ರೇಕ್ಷೆ— ೧೪೪
ಅಪಹ್ನುತಿ— ೪
ಅರ್ಥಾಂತರನ್ಯಾಸ— ೧೧
ಪರಿಕರ— ೩
ಅಪ್ರಸ್ತುತ ಪ್ರಶಂಸೆ— ೧೦
ಅತಿಶಯೋಕ್ತಿ— ೧೧

(೨) ವಿರೋಧ ಮೂಲಕವಾದ ಅಲಂಕಾರಗಳು:
ವಿರೋಧಾಭಾಸ— ೬

(೩) ಶೃಂಖಲಾ ಮೂಲಕವಾದ ಅಲಂಕಾರಗಳು:
ಏಕಾವಳಿ— ೧

(೪) ತರ್ಕನ್ಯಾಯ ಮೂಲಕವಾದ ಅಲಂಕಾರಗಳು:
ಕಾವ್ಯಲಿಂಗ— ೧

(೫) ವಾಕ್ಯನ್ಯಾಯ ಮೂಲಕವಾದ ಅಲಂಕಾರಗಳು:
ಪರಿಸಂಖ್ಯೆ— ೩

(೬) ಲೋಕನ್ಯಾಯ ಮೂಲಕವಾದ ಅಲಂಕಾರಗಳು:
ಸ್ವಭಾವೋಕ್ತಿ— ೧೪
ಮೀಲಿತ— ೨
ತದ್ಗುಣ— ೨
ನಿದರ್ಶನ— ೧೦
ವಕ್ರೋಕ್ತಿ— ೮

ಹೀಗೆ ಅಲಂಕಾರಗಳಿವೆ ಎಂದು ಸ್ಥೂಲವಾಗಿ ಹೇಳಬಹುದು. ಈವರೆಗೆ ಜೈಮಿನಿ ಭಾರತಕ್ಕೆ ಟೀಕೆ ಬರೆದವರು ಪ್ರಮುಖವಾದ ಅಲಂಕಾರಗಳನ್ನು ಮಾತ್ರ ಗುರುತಿಸಿ, ಚರ್ಚಿಸುವಂತೆ ನಾವೂ ಮಾಡಿದ್ದೇವೆ. ಪ್ರತಿಯೊಂದು ಪದ್ಯದಲ್ಲಿ ಅಲಂಕಾರವಿದೆಯೋ ಇಲ್ಲವೋ ಎಂಬುದನ್ನು ನಿಶ್ಚಿತಗೊಳಿಸುವ ಸಾಹಸಕ್ಕೆ ಬೀಳದೆ ಪ್ರಮುಖವಾಗಿ ಕಂಡುಬರುವ ಅಲಂಕಾರವುಳ್ಳ ಪದ್ಯಗಳನ್ನು ಮಾತ್ರ ಚರ್ಚೆಗೆ ತೆಗೆದುಕೊಂಡಿದ್ದೇವೆ. ನಾವು ಉಲ್ಲೇಖಿಸದೇ ಇರುವ ಪದ್ಯಗಳಲ್ಲಿ ಅಲಂಕಾರವಿಲ್ಲ ಎಂದು ಅರ್ಥವಲ್ಲ.

ಜೈಮಿನಿ ಭಾರತದಲ್ಲಿ ಸುಮಾರು ೫೮೧ ಪದ್ಯಗಳ ಅಲಂಕಾರಗಳನ್ನು ಗುರುತಿಸಿದ್ದೇವೆ. ಅದರಲ್ಲಿ ಔಪಮ್ಯಮೂಲಕವಾದ ಅಲಂಕಾರಗಳೇ ಹೆಚ್ಚು. ಅದರಲ್ಲಿಯೂ ಕವಿ ಲಕ್ಷ್ಮೀಶನು ಕಾರಣೋತ್ಪ್ರೇಕ್ಷಾ ಪ್ರಿಯ ಎಂದು ಹೇಳಬಹುದು.

ಜೈಮಿನಿ ಭಾರತವು ಆಖ್ಯಾನ ಕಾವ್ಯವಾಗಿರುವುದರಿಂದ ಸರ್ವಸಾಮಾನ್ಯವಾಗಿ ವರ್ಣನಾವಸರದಲ್ಲಿ ಅಲಂಕಾರಗಳತ್ತ ಇನ್ನುಳಿದ ಕಾಲಕ್ಕೆ ಕಥಾವಸ್ತು ವಿರಚನೆ, ಪಾತ್ರ

ಚಿತ್ರಣ, ಮತ್ತು ರಸಪರಿಪೋಷಣೆಯತ್ತ ಕವಿ ಲಕ್ಷ್ಮೀಶನು ತನ್ನ ದೃಷ್ಟಿಯನ್ನು ಕೇಂದ್ರೀಕರಿಸುತ್ತಾನೆ ಎಂದು ತೋರುತ್ತದೆ. ಇನ್ನು ಮುಂದೆ ಅಲಂಕಾರಗಳ ವೈಭವ ವನ್ನು ಪ್ರತ್ಯೇಕವಾಗಿ ನೋಡೋಣ.

**ಶಬ್ದಾಲಂಕಾರ**

ನಿಜದಿಂದಂ ಚೆಲ್ವೆಗೆ ವಿಬು
ಧಜನ ಪ್ರಿಯೆಗಖಿಳ ಲೋಕ ವಿನುತ ಪ್ರಮದಾ |
ಗ್ರಜೆಗೆ ಕೃತಿಸತಿಗೆ ಶಬ್ದಾ
ರ್ಥಜಾತ ಮಂತೆರಡು ತೆಱದಲಂಕೃತಿಯಕ್ಕುಂ ||

—'ಕಾವ್ಯಾವಲೋಕನ', ಸೂತ್ರ ೧೨೪.

ಶಬ್ದಾಲಂಕಾರಗಳಲ್ಲಿ ಅನುಪ್ರಾಸ, ಯಮಕ ಮತ್ತು ಚಿತ್ರಕವಿತ್ವ ಎಂದು ಮುಖ್ಯವಾಗಿ ಮೂರು ವಿಧ. ಅಕ್ಷರಗಳ ಆವೃತ್ತಿಯೇ ಅನುಪ್ರಾಸ. ಅನುಪ್ರಾಸದಲ್ಲಿ ಒಂದೋ ಎರಡೋ ಮೂರೋ ಅಕ್ಷರಗಳು ಮತ್ತೆ ಮತ್ತೆ ಬಂದರೆ ಅದಕ್ಕೆ ವೃತ್ತ್ಯನು ಪ್ರಾಸವೆಂದೂ ಎರಡೆರಡು ಅಕ್ಷರಗಳು ಜತೆಜತೆಯಾಗಿ ಹಲವುಕಡೆ ಬಂದರೆ ಛೇಕಾನು ಪ್ರಾಸವೆಂದೂ ಹೆಸರು. ಎರಡು ಅಥವಾ ಹೆಚ್ಚು ವರ್ಣಗಳು ಒಂದೇ ಕ್ರಮದಲ್ಲಿ ತಿರು ತಿರುಗಿ ಬರುವದು ಯಮಕ ಎಂದು ಲಾಕ್ಷಣಿಕರು ವಿವರಿಸುತ್ತಾರೆ.

ರಾ. ನ. ಮಳಗಿಯವರು 'ಲಕ್ಷ್ಮೀಶನ ಶಬ್ದಾಲಂಕಾರ ವೈಭವ' ಎಂಬ ಪುಸ್ತಕ ದಲ್ಲಿ ೧೯೩ ಶಬ್ದಾಲಂಕಾರದ ಉದಾಹರಣೆಗಳನ್ನು ಆರಿಸಿಕೊಟ್ಟು, ಅವುಗಳನ್ನು ೨೪ ರೀತಿಯಲ್ಲಿ ವಿಭಜಿಸಿದ್ದಾರೆ. ಯಾವ ಯಾವ ಗಣದಲ್ಲಿ ಶಬ್ದಾಲಂಕಾರವನ್ನು ಮಾಡುವ ರೀತಿ ಲಕ್ಷ್ಮೀಶನಲ್ಲಿದೆ ಎಂದು ತೋರಿಸುತ್ತಾ ಹೋಗಿದ್ದಾರೆ. ಇದು ಯುಕ್ತವಾದ ಮಾರ್ಗ. ಕವಿ ಲಕ್ಷ್ಮೀಶನಲ್ಲಿ ಯಮಕ ಹೆಚ್ಚು.

ಲಕ್ಷ್ಮೀಶನ ಪದ್ಯಗಳಲ್ಲಿಯ ಶಬ್ದಾಲಂಕಾರಗಳನ್ನು ಇನ್ನೊಂದು ರೀತಿಯಿಂದ ವಿಭಜಿಸಿ, ಅದರ ಯುಕ್ತತೆ, ವಿಲಾಸವನ್ನು ತೋರಿಸಬಹುದು ಎಂದು ತೋರುತ್ತದೆ. ಅಕ್ಷರಗಳನ್ನು, ಶಬ್ದಗಳನ್ನು, ಮತ್ತೆ ಮತ್ತೆ ನುಡಿಯುವಾಗ ಅದರ ಹಿಂದೆ ಮನುಷ್ಯನ ಭಾವನೆಗಳು ಯಾವವಿರುತ್ತವೆ ಎಂಬುದನ್ನು ಮಾನಸಶಾಸ್ತ್ರಜ್ಞನಂತೆ ಲಕ್ಷ್ಮೀಶನು ಅಭ್ಯ ಸಿಸಿದ್ದಾನೆ. ನಾವು ಆಡಿದ್ದೇ ಆಡುವುದು, ಹಾಡಿದ್ದೇ ಹಾಡುವುದು–(೧) ಆನಂದವಾದಾಗ, ಮನಸ್ಸು ಸುಖ ಸಮಾಧಾನದಲ್ಲಿದ್ದಾಗ (೨) ಅತಿ ದುಃಖವಾದಾಗ (೩) ಭಯಾನಕ, ರೌದ್ರದರ್ಶನವನ್ನು ಕಂಡಾಗ (೪) ಅತಿಶಯವನ್ನು, ರಭಸವನ್ನು, ವಿಲಾಸ–ಮನೋ ಹರತೆಯನ್ನು ವಿವರಿಸುವಾಗ ಎಂದು ಹೇಳಬಹುದು. ಲಕ್ಷ್ಮೀಶನು ಪುರ, ಉದ್ಯಾನ, ಸ್ತ್ರೀಯರನ್ನು ವರ್ಣಿಸುವಾಗ, ವರ್ಷಾಕಾಲದ ರಭಸವನ್ನು ತಿಳಿಸುವಾಗ, ಯುದ್ಧದ ಭೀಕರ ದೃಶ್ಯವನ್ನು ಚಿತ್ರಿಸುವಾಗ, ದುಃಖದ ದೃಶ್ಯವನ್ನು ವಿವರಿಸುವಾಗ ಶಬ್ದಾಲಂಕಾರ ವನ್ನು ಉಪಯೋಗಿಸುವುದನ್ನು ಕಾಣುತ್ತೇವೆ. ಈ ಮಾತಿನ ಸತ್ಯತೆಯನ್ನು ಉದಾ ಹರಣೆಗಳಿಂದ ನೋಡೋಣ:

ಘಡಘಡಿಲವೆಲವೊ ತೊಲತೊಲಗೆನುತ ರೋಷದಿಂ
ಘುಡಿಘುಡಿಸಿ ಕಾರಿಡುವ ಕಾಯದಿಂದನುಸಾಲ್ವ
ನೊಡನೊಡನೆ ಪೊಳೆಪೊಳೆವ ಪೊಸಮಸೆಯ ನಿಡುನಿಡು ಸರಳ್ಗಳಂ ತೆಗೆದಿಸುತಿರೆ ||
(೧೨–೩೮)

ಎಂಬಲ್ಲಿಯ ಅಕ್ಷರಗಳ ಪುನರಾವೃತ್ತಿಗೆ ರೋಷವೇ ಕಾರಣ:

ಕೆಡೆದೊಡಲ ಸೀಳಿಂದೆ ಕಡಿವಡೆದ ತೋಳಿಂದೆ
ತೊಡೆಮುಡದ ತುಂಡಿಂದೆ ನೆಣವಸೆಯ ಜೊಂಡಿಂದೆ
ಬಿಡಿಮಿದುಳ ತುಂಡದಿಂ, ತಂಡದಿಂ ರುಂಡದಿಂ ಮುಂಡದಿಂ ಖಂಡದಿಂದೆ
(೧೨–೪೪)

ಎಂಬುದು ರಣಾಂಗಣದ ಭೀಕರ ದೃಶ್ಯವನ್ನು ವರ್ಣಿಸುತ್ತದೆ. ರಣಾಂಗಣದಲ್ಲಿ ತುಂಡು ತುಂಡಾದ ದೇಹದ ಭಾಗಗಳಿದ್ದಂತೆ ಇಲ್ಲಿ ಶಬ್ದಗಳನ್ನೇ ತುಂಡುತುಂಡಾಗಿ ತುಂಡರಿಸಿದ್ದಾನೆ–ಲಕ್ಷ್ಮೀಶಕವಿ. ಇದೇ ರೀತಿ ಸಂ. ೧೩ ಪ. ೧೮, ೪.೪೬, ೧೪.೧೫, ೨೧.೨೧ ಮತ್ತು ೨೨.೨೯ ಈ ಯುದ್ಧ ವರ್ಣನೆಯ ಪದ್ಯಗಳನ್ನು ನೋಡಬಹುದು. ಯುದ್ಧ ವರ್ಣನೆ ಎಂದೊಡನೆ ಶಬ್ದಾಲಂಕಾರವಿರಲೇಬೇಕು ಎನಿಸುವಷ್ಟರ ಮಟ್ಟಿಗೆ ಲಕ್ಷ್ಮೀಶನು ಈ ಅಲಂಕಾರನ್ನು ತೊಡಿಸಿದ್ದಾನೆ.

ರಾಮಣೀಯಕವಾದ ರಾಮನ ರಮಣಿಯನ್ನು ವರ್ಣಿಸುವಾಗ,

ಮಂದಗಮನೆಯ ಮಂದಹಾಸದ ವಿಲಾಸಮಂ
ಕುಂದರದನೆಯ ಕುಂದದವಯವದ ಸೌಂದರ್‍ಯ
ದಂದಮಂ............................ (೧೮–೨೮)

ಎಂಬಲ್ಲಿ, ವರ್ಷಾಕಾಲವನ್ನು ವರ್ಣಿಸುವಾಗ—

ಕಾತೆಳೆಯ ಮಾವುಗಳ, ಬನಬನದ ಠಾವುಗಳ
ನೂತನ ಸುವಾರಿಗಳ ನಡೆಗುಡದ ದಾರಿಗಳ
ಭೂತಳದ ಸಿರಿ ಮೆಱೆಯೆ ಮುಗಿಲ್ಗೈದೆ ಮಳೆಗಱೆಯೆ ವರ್ಷರ್ತು ಚೆಲ್ವಾದುದು
(೧೭–೪)

ಎಂಬಲ್ಲಿ ಅಕ್ಷರಗಳ ಆವೃತ್ತಿಯ ಯೋಜನೆಯನ್ನು ಕಾಣುತ್ತೇವೆ.

ಎಲ್ಲಿಯುಂ ಪರಿವ ಪೆರ್ದೊಱೆಯಿಂದ
ಕೆರೆಯಿಂದ,
ಮೆಲ್ಲಿಯುಂ ಕುಸುಮದಾಗರದಿಂದ
ಸರದಿಂದ,
ಮೆಲ್ಲಿಯುಂ ರತ್ನಮಯದಿಳೆಯಿಂದ
ಬೆಳೆಯಿಂದ, ಮಣಿಕೃತಕ ಶೈಲದಿಂದ || (೩–೨)

ಎಂದು ನಾಡನ್ನು ವರ್ಣಿಸುವಾಗ, ಮತ್ತು ಸಂ. ೩, ಪ. ೨೮ರಲ್ಲಿ :

ತರುಣ ಪಲ್ಲವರ ವಿಸ್ತಾರದಿಂ
ನೇರದಿಂ,

ಸರಗೈವ ಕಲಪಿಕೋಚ್ಚಾರದಿಂ
ಸಾರದಿಂ,
ಸುರಿವ ಪೂದೊಂಗಲ ತುಷಾರದಿಂ
ಸ್ವರದಿಂ, ಸಲ್ಲಾಪಕೆಳಸಿ ಬಳಸಿ ॥

ಎಂಬಲ್ಲಿಯ ಉದ್ಯಾನ ವರ್ಣನಾವಸರದಲ್ಲಿ ಕವಿ ಲಕ್ಷ್ಮೀಶನು ೩ ಮತ್ತು ೪ನೆಯ ಗಣದಲ್ಲಿ ಅನುಪ್ರಾಸ ಯೋಜನೆಯನ್ನು ಮಾಡುವಂತೆ ತೋರುತ್ತದೆ. ಈ ಅನುಪ್ರಾಸ ಯೋಜನೆ ಸಾಕಷ್ಟು ಪದ್ಯಗಳಲ್ಲಿದೆ. ಶೋಕಭಾವವನ್ನು ವ್ಯಕ್ತಪಡಿಸುವಾಗಲೂ ೩ ಮತ್ತು ೪ನೆಯ ಗಣದ ಅನುಪ್ರಾಸವನ್ನು ಸಾಧಿಸಿದ್ದಾನೆ:

ನಡೆಗೊಳಲ್ಕಂಡು ಬಾಯಾರ್ವಳಂ
ಚೀರ್ವಳಂ,
ಕಡಲಿಡುವ ಕಂಬನಿಯೊಳಾಳ್ವಳಂ
ಬೀಳ್ವಳಂ,
ಪುಡಿಯೊಳ್ ಪೊರಳ್ದು ಬಸವಳಿವಳಂ
ಸುಳಿವಳಂ, ಭರತಾವರಜನಗಲ್ದು ॥ (೧೯–೩೦)

ಚಿತ್ತಜರ ಕತ್ತಿಯಂ ಕಿತ್ತುಕೊಂಡೆತ್ತಿ ಹೊ
ಯ್ಯುತ್ತ ಬರಲುತ್ತುಂಗ ವೃತ್ತಕುಚೆಯರ್ತನುಗೆ
ತೆತ್ತಿರ್ದ ತೆತ್ತಿಗರನೊತ್ತಿ ಗರಸುತ್ತಿರ್ದರಾಗಳಸುರಾಗದಿಂದ ॥ (೨೬–೬)

ಎಂಬಲ್ಲಿಯ 'ತ್ತ' ಅಕ್ಷರದ ಪುನರಾವೃತ್ತಿ ವೃತ್ತ್ಯಾನುಪ್ರಾಸವು ಚಿತ್ತಜನ ಕತ್ತಿಯ ಹೊಯ್ತುವನ್ನು ಸೂಚಿಸುತ್ತದೆ. ಲಕ್ಷ್ಮೀಶನ ಛೇಕಾನುಪ್ರಾಸಯೋಜನೆ ಸ್ವಲ್ಪ ಹೊಸ ರೀತಿಯನ್ನು ತಾಳಿದೆ. ಅದರಲ್ಲಿ ಎರಡೆರಡು ಅಕ್ಷರಗಳು ಕೂಡಿಬರುವವಲ್ಲದೆ ಅರ್ಥ ಪುಷ್ಟಿಯನ್ನು ಮಾಡುವುದು ಕಂಡುಬರುತ್ತದೆ, ಉದಾ:

'ಇಲ್ಲಿಗೇಕೈತಂದೆ ತಂದೆ ಸೌಮಿತ್ರಿ ಹೇಳೆಂದು ಜಾನಕಿ ಸುಯ್ದಳು' (೧೯–೧೧)

'ಸಾಲ ಸಾಲಂಗಳಿಂ ಬಕುಳ ಕುಳದಿಂದೆ' (೩–೩೪)

'ಈತಂ ಕಣಾ ರಾಜಹಂಸ ಹಂಸಧ್ವಜಂ' (೩೩–೩೦)

ಎಂಬಲ್ಲಿ ತಂದೆ ತಂದೆ, ಸಾಲ ಸಾಲ, ಕುಳ ಕುಳ, ಹಂಸ ಹಂಸ ಎರಡೆರಡು ಅಕ್ಷರಗಳು ಕೂಡಿಬಂದಿದ್ದರೂ ಐತಂದೆ, ಸಾಲಂಗಳು, ಬಕುಳ, ಹಂಸಧ್ವಜ ಎಂಬ ಅರ್ಥದ ಮೂಲಕ ಅವು ಜೋಡಿಯ ಪದಕ್ಕಿಂತ ಭಿನ್ನವಾಗುತ್ತವೆ.

'ಈ ವನದ ನಡುನಡುವೆ ತೊಳತೊಳಗುತಿರುತಿಹ' (೩–೨೭)
'ಹೊಗೆ ಹೊಗೆದು ಹೊಗೆಸುತ್ತಿ ಹೋಗುವ ದೆಸೆದೆಸೆಗಳಂ' (೮–೩೯)

ಎಂಬಲ್ಲಿಯ ಛೇಕಾನುಪ್ರಾಸಕ್ಕೂ ಮೇಲೆ ಹೇಳಿದ ಛೇಕಾನುಪ್ರಾಸಕ್ಕೂ ಅಂತರವಿದೆ.

ಬಾಣಜಾತವನೀಗ ನೋಡಲಿರ್ದಪುದೆ? ನೀಂ
ಬಾಣಜಾತೆಯ ರಮಣನಂತುಮಲ್ಲದೆ ಪುಷ್ಪ
ಬಾಣಜಾತಂ ಮೇಲೆ ತನ್ನ ಮಗಳುಷೆಗೆ ನೀಂ ಪ್ರಾಣೇಶನೆಂದು ರಣದೆ ॥ (೨೫–೨೧)

ಈ ಯಮಕದಲ್ಲಿ ಮೊದಲನೆಯ ಬಾಣಜಾತಕ್ಕೆ–ಬಾಣದ ಏಟು ಎಂದು ಅರ್ಥವಾದರೆ, ಎರಡನೆಯ ಬಾಣಜಾತಕ್ಕೆ–ಬಾಣಾಸುರನ ಮಗಳು ಉಷೆ ಎಂದು ಅರ್ಥ. ಮೂರನೆಯ ಪುಷ್ಪಬಾಣಜಾತ ಎಂದರೆ–ಮನ್ಮಥ. ಹೀಗೆ ವಿಪುಲಾರ್ಥ, ವಿವಿಧಾರ್ಥ ಯಮಕಗಳನ್ನು ಮಾಡುವಲ್ಲಿ ಲಕ್ಷ್ಮೀಶನು ತನ್ನ ಶಬ್ದಶಕ್ತಿಯ ಪ್ರಭುತ್ವವನ್ನು ತೋರಿಸುತ್ತಾನೆ. ಈ ಪ್ರಭುತ್ವದ ರೀತಿಯನ್ನು ಸಂ–೨, ಪ–೧೯; ೪–೫೫, ೫–೧೦, ೭–೫೭, ೧೩–೩, ೧೩–೧೪, ೧೬–೧೦, ೧೨ ಈ ಪದ್ಯಗಳಲ್ಲಿ ಕಾಣಬಹುದು. ಲಕ್ಷ್ಮೀಶನು ಪಾದಾದಿ, ಪಾದಮಧ್ಯ, ಪಾದಾಂತ್ಯ ಯಮಕಗಳನ್ನು ಅನೇಕ ಕಡೆಗೆ ಸಾಧಿಸಿದ್ದಾನೆ.

ಸಂ. ೫ ಪ. ೮ ಮತ್ತು ಸಂ. ೧೩ ಪ. ೨೭ ಇವುಗಳಲ್ಲಿಯ 'ಕ' ಬಳ್ಳಿ ಮತ್ತು 'ಚ' ಬಳ್ಳಿಯ ಪದ್ಯ ರಚನೆ, ಸಂ. ೪, ಪ. ೧೯ರಲ್ಲಿ 'ತ್ತ' ಏಕಾಕ್ಷರ ಗಣಕ್ಕೆ ಪುನರಾವೃತ್ತಿ ಸಂ. ೫–೬೧ ರಲ್ಲಿಯ 'ಚಪಲೆ ಚಂಚಲೆ ಚಾಟುವತಿ ಚಂಡಿ ಛಲವಾದಿ' 'ಚ' ಕಾರಾದಿ ಶಬ್ದಜೋಡಣೆ; ಸಂ. ೫–೬೯ರಲ್ಲಿ 'ನ' ಏಕಾಕ್ಷರದ ಅತಿಶಯ; ಸಂ. ೧೦–೪೦ ರಲ್ಲಿ 'ರ್' ಏಕಾಕ್ಷರದ ಬಾಹುಳ್ಯ ಮುಂತಾದವು ನಿರೋಷ್ಠ್ಯ, ಅತಾಲವ್ಯ, ಏಕಾಕ್ಷರ, ದ್ವ್ಯಕ್ಷರ ಮೊದಲಾದ ಚಿತ್ರಕವಿತ್ವದ ಪ್ರಾಕಾರಗಳೆನ್ನಲು ಅಡ್ಡಿ ಇಲ್ಲ.

'ಎಲ್ಲರುಂ ಭೋಗಿಗಳ್ಪಾತಾಳಗತರೆನಿಸ
ರೆಲ್ಲರುಂ ವಿದ್ಯಾಧರರ್ನ್ನಭೋಜನರೆನಿಸರ್' (೨-೧೦)

ಎಂಬಂತಹ ಒಗಟದ ಜಾತಿಯ ಪದ್ಯಗಳು ಪ್ರಹೇಲಿಕಾ ಸಂಪ್ರದಾಯವನ್ನು ಅನುಸರಿಸುತ್ತವೆ.

ಒಟ್ಟಿನಲ್ಲಿ ಲಕ್ಷ್ಮೀಶನಿಗೆ ಶಬ್ದಾಲಂಕಾರದತ್ತ ಒಲವಿದೆ. ಅದನ್ನು ಚೆನ್ನಾಗಿ ಸಾಧಿಸುವ ಬಲವಿದೆ. ಶಬ್ದಾಲಂಕಾರಗಳೆಂದರೆ ಶಬ್ದಶಕ್ತಿಯ ನಿಕಷವಿದ್ದಂತೆ. ಲಕ್ಷ್ಮೀಶನ ಈ ಶಬ್ದಾಲಂಕಾರ ಪ್ರಿಯತೆ, ಈ ವಾಕ್ಶಕ್ತಿ, ಈ ಜಾಣ್ಮೆ ಅವನ ಕಾವ್ಯವನ್ನು ವೀಣೆಯಿಂದ ಗಾನವನ್ನು ನುಡಿಸಿದಂದದಲ್ಲಿ ಕಿವಿಗಿಂಪಾಗುವಂತೆ ಮಾಡಿದೆ ಎನ್ನಬಹುದು. ಸಂಗೀತದಲ್ಲಿ ಸ್ವರಗಳ ಪುನರಾವೃತ್ತಿ ಆಲಾಪಗಳಿಂದ ಸೌಂದರ್ಯವನ್ನುಂಟುಮಾಡುವಂತೆ ಲಕ್ಷ್ಮೀಶನು ಅಕ್ಷರಗಳ ಪುನರಾವೃತ್ತಿ ಮತ್ತು ಅಕ್ಷರಗಳ ಸಂಯೋಜನೆಯಿಂದ ಸುಶ್ರಾವ್ಯತೆಯನ್ನು ಸಾಧಿಸುತ್ತಾನೆ.

## ಉಪಮಾ ಅಲಂಕಾರ

ಉಪಮಾ ಅಲಂಕಾರವೆಂದರೆ ಎರಡು ವಸ್ತುಗಳಲ್ಲಿ ಸಾದೃಶ್ಯ ಕಾಣುವ ಶಕ್ತಿ. ಕವಿಯ ಕಣ್ಣು ಎರಡು ವಸ್ತುಗಳಲ್ಲಿಯ ಸುಂದರವಾದ ಸಾದೃಶ್ಯವನ್ನು ಕಂಡು ತನ್ನ ಕಾವ್ಯದಲ್ಲಿ ಇತರರಿಗೂ ಕಾಣುವಂತೆ ಮಾಡುತ್ತದೆ; ವರ್ಣಿತ ವಸ್ತುವನ್ನು ನಿಚ್ಚಳವಾಗಿ ಮೂಡಿಸುತ್ತದೆ, ಈ ಅಲಂಕಾರ. ಕ. ಜೈ. ಭಾರತದ ೧೦೨ ಪದ್ಯಗಳಲ್ಲಿ ಉಪಮಾ ಅಲಂಕಾರವಿದೆ. ಉಪಮಾ ಅಲಂಕಾರದಿಂದ ಕೃತಿಯನ್ನು ಅಲಂಕರಿಸದವನು ಕವಿಯಾಗಲಾರ. ಆದುದರಿಂದ 'ಉಪಮಾನಿಷ್ಠಾಃ ಕವಯಃ' ಎಂದೆನ್ನುವುದುಂಟು. ಈ ಉಪ

ಮಾಲಂಕಾರದ ವಿವಿಧ ಭೇದಗಳೇ ಉಳಿದೆಲ್ಲ ಅಲಂಕಾರಗಳೆನ್ನಬಹುದು. ಲಕ್ಷ್ಮೀಶನ ಕಾವ್ಯದಲ್ಲಿಯ ಉಪಮೆಗಳ ಅತಿಶಯದ ಮೂಲಕ ಕುವೆಂಪು ಅವರು ಕವಿ ಲಕ್ಷ್ಮೀಶನಿಗೆ 'ಉಪಮಾಲೋಲ ಲಕ್ಷ್ಮೀಶ' ಎಂದು ಬಿರುದುಕೊಟ್ಟಿದ್ದಾರೆ. ಮುಂದೆ ಆ ಉಪಮೆಗಳನ್ನು (೧) ಪ್ರಕೃತಿ-ಪ್ರಣಯ (೨) ವ್ಯವಹಾರ ಪ್ರಪಂಚದ ಉಪಮಾನ (೩) ಪುರಾಣ ಪುಣ್ಯಕಥೆಗಳ ಉಪಮಾನ (೪) ಕವಿಸಮಯಾಧಿಷ್ಠಿತ ಉಪಮೆ (೫) ಆಧ್ಯಾತ್ಮಿಕ ಉಪಮೆ (೬) ಕರ್ಮ ಧರ್ಮ ನೀತಿಶಾಸ್ತ್ರಗಳ ಆಧಾರದ ಮೇಲೆ ನಿಂತಿರುವ ಉಪಮಾನ (೭) ನಾಣ್ನುಡಿ ಉಪಮೆ (೮) ಶೃಂಗಾರೋಪಮೆ (೯) ಉಪಮಾನ ಮಾಲೆ ಎಂದು ವಿಂಗಡಿಸಿದ್ದಾರೆ. ಎಲ್ಲ ಅಲಂಕಾರಗಳು ಈ ಒಂದೇ ಅಲಂಕಾರದಲ್ಲಿ ಸಮಾವಿಷ್ಟವಾಗುತ್ತವೆ ಎಂದು ತೋರಿಸಿದ್ದಾರೆ. ಈ ಉಪಮೆಗಳಂತೆ ರೂಪಕ ಮತ್ತು ಉತ್ಪ್ರೇಕ್ಷೆಗಳನ್ನು ಪ್ರತ್ಯೇಕವಾಗಿ ನೋಡುವುದು ಅವಶ್ಯ ಎಂದು ತೋರುತ್ತದೆ.

ಉಪಮೆಗಳಲ್ಲಿ ಸ್ಥೂಲವಾಗಿ ೧. ನಿಸರ್ಗಾಧಿಷ್ಠಿತ ೨. ಪುರಾಣಾಧಿಷ್ಠಿತ ೩. ನಂಬಿಗೆ, ರೂಢಿಯಲ್ಲಿ ಅಧಿಷ್ಠಿತ, ಮತ್ತು ೪. ಲೋಕಾನುಭವ ಅಧಿಷ್ಠಿತ ಎಂದು ಉಪಮಾಲಂಕಾರಗಳಲ್ಲಿ ನಾಲ್ಕು ವಿಭಾಗಗಳನ್ನು ಮಾಡಬಹುದು.

೧. ನಿಸರ್ಗಾಧಿಷ್ಠಿತ ಉಪಮೆಗಳು

| | |
|---|---|
| ೨-೧೪<br>ಮಾಮರ | ಅನಿಲ ಸಂಚಾರವೊಂದಿನಿತಿಲ್ಲದುರಿವ ಕಡುವೇಸಗೆಯ ಬಿಸಿಲಿಂದೆ<br>ಬಸವಳಿದ ಕೋಮಲ ರಸಾಲದಂತೆ |
| ೩-೪೦<br>ಕಾರ್ಗಾಲದ<br>ನೋಡ | ಕಾರ್ಗಾಲದಭ್ರಮಾಲೆಗಳಮರ ಸರಣಿಯೊ<br>ಳ್ತಾರ್ಗೂಡುತ್ತೆತ್ತಲುಂ ನಿಬಿಡಮುಪ್ಪಂದದಿಂ<br>ನೀರ್ಗುಡಿಯೆ ಪೊಳಲ ಪೆರ್ಬಾಗಿಲ್ಗಳಿಂದೆ ಪೊಱಮಡುವ ವರ ಸರಸಿಯಿಂದೆ \|\|<br>ಊರ್ಗೆ ಮರಳುವ ತೇಜಿಗಳ ಸಾಲ್ಗಳು |
| ೪-೭<br>ಚಂದ್ರ ಮತ್ತು<br>ಸಮುದ್ರ | ವಿಧು ಬಿಂಬದುದಯಮಂ ಕಂಡೊತ್ತರಿಸಿ ಪಯೋ<br>ನಿಧಿ ಮೇರೆವರಿದುಕ್ಕುವಂತೆ.....................<br>.................................................... \|\|<br>ಅಧಿಕ ಬಲ ಯೌವನಾಶ್ವನಿಪನೈಶ್ವರ್ಯ<br>ವಧುವಿನ ಕಟಾಕ್ಷದಂತೊಪ್ಪುವ ತುರಗಂಮಂ<br>ಕುಧರೋಪಮಾನ ಪವಮಾನಜಂ ಕಂಡು ನೆಱೆ ಸುಮ್ಮಾನಮಂ ತಾಳ್ದನು \|\| |
| ೪-೧೨<br>ಅಂಚೆ ಮತ್ತು<br>ಬೆಳ್ದಾವರೆ | ತತ್ತುರಗಮಂ ಕೊಂಡು ಜಿಗಿದನಾಗಸಕೆ ಸರ<br>ದತ್ತಣಿಂದಂಚೆ ಬೆಳ್ದಾವರೆಯನಳ್ತಿಯಿಂ<br>ಕಿತ್ತು ನಭಕೇಳ್ವಂತೆ................. |
| ೪-೨೦<br>ವಸಂತಾಗಮ<br>ಗಾಳಿ | ಸುತವಸಂತಾಗಮುವನೆಚ್ಚಱಿಪ ಮಲಯಮಾ<br>ರುತನುಪವನಸ್ಥಳಕೆ ಸುಳಿವಂತೆ ಪವನಜಂ<br>ಕ್ಷಿತಿಪನಾಸ್ಥಾನಮಂ ಪೊಕ್ಕರಸನಂ ಕಂಡು ಪಾದಪಲ್ಲವಕೆರಗಲು \|\| |

೭–೫೫ ಅಂಜನಾದ್ರಿಯ ಮೇಲೆ ಸಿಡಿಲೆಱಗಿದಂತಾಗೆ ದನುಜಾರಿ ಮೈಮಱೆದನು ||
ಪರ್ವತ ಸಿಡಿಲು

೧೨–೨ ಭಾನುರಶ್ಮಿಗೆ ಕಂದೆಱೆಯದ ಗೂಗೆಯವೊಲ
ಸೂರ್ಯ, ಗೂಗೆ ಜ್ಞಾನಿ ದ್ವಿಜಾಧಮಂ ತಾಸಾದೆನೀ ದ್ರೋಹಕೆಂದು ಲಿಖಿತಂ ನುಡಿದನು ||

೧೮–೩೫ ಬೆಳ್ದಾವರೆಯೊಳೆಱಗಿದಳಿಕುಲಂ, ಗಗನಾಗ್ರ
ಬೆಳ್ದಾವರೆ ದೊಳ್ದಿನದಿನಕೆ ಬೆಳೆವ ಚಂದ್ರಕಳೆ ಕನಕಾದ್ರಿ
ಅಳಿಕುಲ

ಗಗನ ಯೊಳ್ದಿಟ್ಟಿಗೊಳಿಸುವ ಸಿತಾಂಬುದಂ ರಾರಾಜಿಸುವ ತೆಱದೊಳಾಕಾಂತೆಯ |
ಚಂದ್ರಕಲೆ ಒಳ್ದಳೆದ ಚೆಲ್ವಿನಾನದೊಳುಱೆ ಮಿಱುಗುವ ಕು
ಕನಕಗಿರಿ ರುಳ್ದೊಂಗಲಿಸಿ ನಡುವಿನೊಳ್ಪೊಳೆವ ಗರ್ಭಂ ನ
ಕಪ್ಪುಮೋಡ ಗಳ್ದ ಕುಚದೊಳ್ಮಸುಪಚೂಚುಕದ ಕಪ್ಪು ಚೆಲ್ವಿಂದೆ ಕಣ್ಗೆಸೆದಿರ್ದುದು ||

೨೧–೩೬ ಪಲ್ಲವಿತ ನವಚೂತ ತರು ಬೇಸಗೆಯ ಝಳಕೆ
ಪಲ್ಲವಿತನವ ನಿಲ್ಲದಸವಳಿದು ಜೋಲ್ವಂತೆ ಕೋಮಲಕಾಯ
ಚೂತತರು ದೆಲ್ಲೆಡೆಯೊಳಂ ನಾಂಟಿದಂಬುಗಳ ರುಧಿರ ಪ್ರವಾಹದಿಂದುಱೆ ಬಳಲ್ದು ||

೨೫–೨೭ ಸರ್ಬದಳವಾ ತಗುಳ್ದವು ಬೇಸಗೆಯ ಬಿಱುವೆ
ಬಿರುಗಾಳಿ ಲರ್ಬೀಸಿ ರಜವಂ ತೆರಳ್ಚುವಂತಾಗ ವೀ
ಧೂಳಿ ರರ್ಬಿಂಕದಿಂದಾಂತು ನಿಂದರನುಸಾಲ್ವಕ ಪ್ರದ್ಯುಮ್ನ ಸಾತ್ಯಕಿಗಳು ||

೨೬–೧೩ ಚಿತ್ತಜಂ ತಂಬೆಲರೊಳೂದಿದೊಡೆ ಪಜ್ಜಳಿಸಿ
ತಂಪುಗಾಳಿ ಅಗ್ನಿ ಮುತ್ತುರಿವ ಕಿಚ್ಚಿನೇಳಿಗೆಯಂತೆ ಮೂಡಿದಂ ಚಂದ್ರನಿಂದ್ರನ ದೆಸೆಯೊಳು ||

೨೭–೪೧ ಅಭ್ರದೊಳ್ಮಿಂಚು ಸುಳಿವಂತೆ ಪರಬಲದೊಳ್ಪ
ಗಗನ ಮಿಂಚು ರಿಭ್ರಮಿಸಿತವನ ರಥಂ........................

೨೮–೬೩ ಸಲೆಬತ್ತಿದ ಸರೋವರಕೆ ನವಜಲವೊದವಿದಂತೆ
ಸರೋವರ

೨೯–೩೮ ರಾಕಾಶಶಾಂಕನಭ್ಯುದಯಮಂ ಕಿಡಿಸಿ ತ
ಪೌರ್ಣಿಮೆಯ ನ್ನಾಕಾರವಂ ತೋಱಿಸುವೆನೆಂಬ ಕತ್ತಲೆ ವೊ
ಚಂದ್ರ ಲಾಕವುಲಲೋಚನನ ಭೃತ್ಯನಂ ಕೊಲಿಸಿ ತಾಂ ಬಾಳ್ವೆನೆಂಬುಜ್ಜುಗದೊಳು ||

೩೧–೫೮ ಉನ್ನಿಸಿದ ನಿಜ ಮನೋರಥ ಮುಡಿದೊಱಗಿದಂತೆ
ರಥ, ತರು, ತನ್ನ ಕುಲತರು ಮುಱಿದು ಬಿದ್ದಂತೆ ಸೌಭಾಗ್ಯ
ಪ್ರಸಾದ ದುನ್ನತ ಪ್ರಾಸಾದವೊರ್ಗುಡಿಸಿ ಕೆಡೆದಂತೆ .............................. ||

ಹೀಗೆ ಅನೇಕ ನಿಸರ್ಗಾಧಿಷ್ಠಿತ ಉಪಮಾನಗಳನ್ನು ಲಕ್ಷ್ಮೀಶನು ತನ್ನ ಕಾವ್ಯದಲ್ಲಿ ಉಪಯೋಗಿಸಿದ್ದಾನೆ. ಜನಸಾಮಾನ್ಯರಿಗೆ ಕಾವ್ಯಾಭಿರುಚಿ ಹುಟ್ಟಲು ನಿಸರ್ಗೋಪಮೆಗಳು ಹೆಚ್ಚಾಗಿದ್ದಷ್ಟು ಚೆನ್ನು. ನಿಸರ್ಗವನ್ನು ಕವಿಯು ನೋಡುತ್ತಾನೆ; ಜನ

ಸಾಮಾನ್ಯನೂ ನೋಡುತ್ತಾನೆ. ಪರಿಚಿತ ವಸ್ತುಗಳಲ್ಲಿಯ ಅಪರಿಚಿತ ಸೌಂದರ್ಯ ವನ್ನು ಕವಿಯು ಜನಸಾಮಾನ್ಯರಿಗೆ ತಿಳಿಸಿಕೊಡುತ್ತಾನೆ. ತಿಳುವಳಿಕೆ ಆದಾಗ ಕಾವ್ಯ ವಾಚಕನಿಗೆ ಆನಂದವಾಗುತ್ತದೆ. ಇದೇ ಕಾವ್ಯದ ಉದ್ದೇಶ. ಲಕ್ಷ್ಮೀಶನ ಜೈಮಿನಿ ಭಾರತವು ಜನಸಾಮಾನ್ಯರಿಂದ ಮೆಚ್ಚಿಗೆ ಪಡೆಯಲು ಈ ನಿಸರ್ಗೋಪಮೆಗಳು ಬಹಳಷ್ಟು ಕಾರಣ ಎಂದು ಹೇಳಬಹುದು.

### ೨. ಪುರಾಣಾಧಿಷ್ಠಿತ

| | |
|---|---|
| ೬–೮ | ಶಿವನಂತೆ ಗಂಗಾ ಹಿಮಕರಾವಹಂ ರಮಾ |
| ಶಿವ, ವಿಷ್ಣು, | ಧವನಂತೆ ಗೋತ್ರೈಕಪಾಲಕಂ ಪಂಕರುಹ |
| ಬ್ರಹ್ಮ, ಇಂದ್ರರ | ಭವನಂತೆ ಸಕಲ ಭುವನಾಶ್ರಯಂ ಶಕ್ರನಂತನಿಮಿಷನಿಕರಕಾಂತನು \|\| |
| ಗುಣರೂಪ | ದಿವಸಾಧಿಪತಿಯಂತನಂತ ರತ್ನಂ ರಾಜ |
| ಸಾದೃಶ್ಯ | ನಿವಹದಂತಪರಿಮಿತ ವಾಹಿನೀ ಸಂಗತನು |
| | ಪವನಾಳಿಯಂತೆ ವಿದ್ರುಮಲತಾ ಶೋಭಿತಂ ತಾನೆಂದುದಧಿ ಮೆಱೆದುದು \|\| |
| ೧೭–೩೨ | ಭದ್ರಮಾದುದು ರಾಜಕಾರ್ಯಮಿಂದಮೃತಕೆ ಸ |
| ಸಮುದ್ರ | ಮುದ್ರಮಂ ಮಥಿಸೆ ವಿಷಮುದಯಿಸಿದೊಲಾಯ್ತು ನಿನ್ನುದ್ಭವಂ |
| ಮಂಥನ | ತನಗೆಂದಳು \|\| |
| ೧೭–೪೨ | ಜಿತ ತಮಂ ಭುವನ ಮಧ್ಯ ಪ್ರಕಾಶಂ ವಿರಾ |
| ದಶಾವತಾರ | ಜಿತ ವರಾಹ ಶ್ರೀಧರಂ ಪಂಚಮುಖ ಮೂರ್ತಿ |
| | ನುತ ಕಾಶ್ಯಪಂ ರಾಜತೇಜೋಹರಂ ದೂಷಣಾರಿ ಗೋಕುಲಜಾತನು \|\| |
| ೨೧–೪೯ | ಅಂದು ಪುರಹೂತ ವೈರಿಯ ಸರ್ಪಶರದಿಂದೆ |
| ಇಂದ್ರಜಿತುವಿನ | ಪೊಂದಿದ ಸಮಸ್ತ ಬಲಸಹಿತ ಬಿದ್ದೆಚ್ಚಱಿ |
| ಸರ್ಪಾಸ್ತ್ರ | ದಂದದಿಂ ನಸುಮುಸಳ್ದಾನನದ ನಿಶೆಯ ತಾವರೆವೊಲಾಗಿಹ ಕಣ್ಗಳ \|\| |
| ೨೪–೩೨ | ಶಿವನಂದು ಪಾಶುಪತ ಬಾಣಮಂ ಕೊಟ್ಟುದಿ |
| ಪಾಶುಪತಾಸ್ತ್ರ | ಲ್ಲವೆ ನಿಜಸ್ವಾಮಿಯಂ ಮಱೆದಪರೆ?........ |
| ೨೬–೪೭ | ....................................ಬಲಿಯಧ್ವರಕೆ |
| ಬಲಿವಾಮನ | ವಾಮನಂ ಬಂದಂತೆ ತನ್ನ ಮಖಕೀ ದ್ವಿಜಂ ತಾನೆ ಬಿಜಯಂಗೈದನು \|\| |
| ೨೬–೬೨ | ಆ ಮಹಾಸಭೆ ನಾರಸಿಂಹನಂ ನೆನೆವಂತೆ |
| ನಾರಸಿಂಹ | ರಾಮರಾಮೆಂದು ಜಪಿಸುತೆ ಕೊಯ್ದಳವನಿಪ ಶಿ |
| | ರೋಮಣಿಯ ಮಸ್ತಕವನೆರಡಾಗಿ ಸರಿಸದಿಂದೋರೆ ಪೋರೆಗಳಿಲ್ಲದೆ \|\| |
| ೨೮–೩೦ | ಹೀನದಯದಿಂದೆ ಪಿಡಿದೆತ್ತಿಕೊಂಡುಯ್ದುರ್ಬ |
| ಪ್ರಹ್ಲಾದ | ಯಾನಕದೊಳಂದು ಕೊಲೆಗೆಳಸಿ ಪ್ರಹ್ಲಾದನಂ |
| | ದಾನವೇಶ್ವರನಾಜ್ಞೆಯಿಂ ಕಾಳರಕ್ಕಸರ್ಬಂದು ಕೈದುಡುಕುವಂತೆ \|\| |

೨೯–೪೯ ಮಿಱುಗುವಹಿತಲ್ಪದೊಳ್ದೇವಪುರ ನಿಲಯ ಲಕ್ಷ್ಮೀವರಂ ಪವಡಿಪವೊಲು ||
ವಿಷ್ಣು

೩೦–೪೪ ಶ್ರೀಕಂಠನಂ ಕೆಣಕಿ ಮೈಗೆಟ್ಟ ಮದನನಂ
ಶಿವ ಮದನ ಲೋಕದೊಳ್ಚಱಿವಂತೆ ಶಂಕರಪ್ರಿಯನಾಗಿ
ಸಾಕಾರದಿಂದೆಸೆವ ಮದನನಿವನೆಂಬಂತೆ ರಂಜಿಸುವ ಮಂತ್ರಿಸೂನು ||

೩೨–೧೪ .....................ತಂದನುತ್ಸವದಿಂದೆ
ಇಂದ್ರ ಸಿರಿಯನುಱಿ ವಿಸ್ತರಿಸಿ ಭೂಪುರಂದರನಂತೆ ಚಂದ್ರಹಾಸಂ ಮೆರೆದನು ||

ಹೀಗೆ ಅನೇಕ ಪದ್ಯಗಳಲ್ಲಿ ಲಕ್ಷ್ಮೀಶನು ಪುರಾಣ ಪ್ರತಿಮೆಗಳನ್ನು ಉಪಮಾನ ಗಳಾಗಿ ಬಳಸಿದ್ದಾನೆ. ಇದರಿಂದ ಕವಿಯ ಪುರಾಣಾಭ್ಯಾಸದ ಪರಿಶ್ರಮವು ನಮಗೆ ಕಂಡುಬರುತ್ತದೆ. ಹಿರಣ್ಯಕಶ್ಯಪು–ಪ್ರಹ್ಲಾದ, ನಾರಸಿಂಹ, ಶಿವ, ವಿಷ್ಣು, ಬಲಿ, ವಾಮನ ಇಂಥ ಪ್ರಖ್ಯಾತ ವಿಭೂತಿಪುರುಷರ–ಭಕ್ತರ ಕಥೆಗಳನ್ನು ಉಪಮಾನ ಗಳಾಗಿ ಬಳಸಿ ಆ ಕಥೆಗಳ ನೆನಪು ಮರೆಯದಂತೆ ಮಾಡುತ್ತಾನೆ. ಇದರಿಂದ ಓದುಗನ ಪುರಾಣಜ್ಞಾನವೂ ಬೆಳೆಯುತ್ತದೆ. ಆದರೆ ಕೆಲವೆಡೆಗೆ ಈ ಪುರಾಣ ಪ್ರತಿಮೆಗಳು ಸಾಮಾನ್ಯರಿಗೆ ಬಿಚ್ಚಲು ಬಾರದ ಕಗ್ಗಂಟುಗಳಾದುದುಂಟು. ಉದಾಹರಣೆಗಾಗಿ:

೨೬–೨೨ ಹರಶರ ಪ್ರಥಮಾವತಾರ ಲೋಚನೆ ಮಹೀ
ಶ್ವರಚಾಪ ತುಂಗ ವಕ್ಷೋಜಾತೆ ಹಿಮಕರಾ
ಭರಣ ಮೌರ್ವೀ ವೇಣಿ ತಾನಿರ್ದುಮನ್ಯಳಂ ಮದನ ಬಾಣಾಕ್ಷಿಯೆಂದು ||
ಸ್ಮರ ಕಾರ್ಮುಕ ಭ್ರೂಲತಾ ಶೋಭಿಯೆಂದು ಶಂ
ಬರ ಮಥನ ಶಿಂಜಿನೀಲೋಲ ಕುಂತಳೆಯೆಂದು
ಕರೆದೆ ಗಡ ನೀನೆಂದು ಸವತಿಮತ್ಸರಕೊರ್ವಳೋಪನಂ ಕೋಪಿಸಿದಳು ||

ತ್ರಿಪುರಸಂಹಾರದ ಕಾಲದಲ್ಲಿ ವಿಷ್ಣುವು ಈಶ್ವರನಿಗೆ ಬಾಣವಾದದ್ದು, ಮೇರು ಪರ್ವತ ಬಿಲ್ಲಾದದ್ದು, ಆದಿಶೇಷನು ಬಿಲ್ಲಿಗೆ ಕಟ್ಟುವ ಹೆದೆಯಾದದ್ದು ಶಿವಪುರಾಣದಲ್ಲಿ ಬರುತ್ತದೆ. ಈ ಸಂಗತಿ ಗೊತ್ತಿರದೆ ಮೇಲಿನ ಪದ್ಯಕ್ಕೆ ಅರ್ಥ ಹಚ್ಚುವದು ಕಠಿಣ. ಆದರೂ ಒಬ್ಬಳ ನಲ್ಲನು ಇನ್ನೊಬ್ಬಳನ್ನು ಕಾಮನ ಬಾಣ, ಬಿಲ್ಲು, ಹೆದೆಗಳ ಉಪ ಮಾನದಿಂದ ಬಣ್ಣಿಸಿದಾಗ, ಆಕೆ ತನ್ನನ್ನು ಕಾಮಹರನಾದ ಶಿವನ ಬಾಣ, ಬಿಲ್ಲು, ಹೆದೆ ಗಳ ಉಪಮಾನದಿಂದ ಬಣ್ಣಿಸಿಕೊಂಡು ತಾನು ಮಿಗಿಲೆಂದು ಹೇಳುತ್ತಾಳೆ. ಇಂತಹ ಸಂದರ್ಭದಲ್ಲಿ ಈ ಬಗೆಯ ಚಾತುರ್ಯದ ಮಾತು–ಅಲಂಕಾರ ಅನಿವಾರ್ಯವೇ ಕವಿಗೆ. ಇದರಲ್ಲಿ ವ್ಯಕ್ತವಾದ ಭಾವಸೌಂದರ್ಯವನ್ನು ಬೇರಾವ ಉಪಮೇಯದಿಂದ ತೋರಿಸ ಲಾದೀತು? ಅಲ್ಲದೆ ಈ ಪದ್ಯದಲ್ಲಿ ಕವಿ ಲಕ್ಷ್ಮೀಶನ ಶೈವ ಪುರಾಣದ ಅಭ್ಯಾಸದ ಹಿರಿಮೆ ವ್ಯಕ್ತವಾಗುತ್ತದೆ.

## ೩. ನಂಬಿಗೆ, ರೂಢಿ ಅಧಿಷ್ಠಿತ ಉಪಮಾನ

೩–೩೦ ‘.........ಬೇರ್ವರಿದು ಮುಡಿವಾಳಮಿರಲಳಿ
ಪ್ರಾತಮಱಿಯದೆ ತಿರುಗುತಿದೆ ನಿಧಾಸವನಭಾಗ್ಯಂ ಕಾಣದಿಪ್ಪಂತಿರೆ ||’

ಭೂಮಿಯಲ್ಲಿ ನಿಧಿ ಅಡಗಿರುತ್ತದೆ. ಅದು ಎಲ್ಲರಿಗೂ ಕಾಣುವದಿಲ್ಲ ಎಂಬ ನಂಬಿಗೆ.

೨೧–೫೦ ‘ಈಕ್ಷಿಸಿ ಕಮಂಡಲೋದಕದಿಂದೆ ಮುನಿವರಂ
ಪ್ರೋಕ್ಷಿಸಿದೊಡುರಗ ತಲ್ಪದೊಳುಪ್ಪವಡಿಸುವ
ಬ್ರಾಹ್ಮಣನೀತಂ ತಪ್ಪನೆಂಬಂತೆ ಕಣ್ದೆಱೆದು ವಾಲ್ಮೀಕಿಗಭಿನಮಿಸಲು ||’

ಋಷಿಗಳು ಕಮಂಡಲೋದಕದಿಂದ ಮೂರ್ಛಿತರನ್ನು ಎಬ್ಬಿಸುವ ರೂಢಿ.

೨೩. ಸೂ.ಪ. ಆಹದ ಸಮರ್ಥ ಕರ್ಣಜನಂ ಕೆಡಹಿ ಬಭ್ರು
ವಾಹನಂ ಸುರನದಿಯ ಶಾಪದಿಂದರಿಯಲ್ಕೆ
ರಾಹು ತುಡುಕಿರ್ದಮೃತಕರ ಬಿಂಬದಂತಿರ್ದುದರ್ಜುನನ ತಲೆ ರಣದೊಳು ||

೨೮–೫೪ ಲಹರಿಯೊಳೋಲಾಡಿದಂ ಕಡವರನೆಡಹಿ ಸಂಧಿಸಿದ ಕಡುಬಡವನಂತೆ ||

## ೪. ಲೋಕಾನುಭವಾಧಿಷ್ಠಿತ ಉಪಮಾನ

೩–೩೯ ಖಳರ ಪುರುಷಾರ್ಥಮಂ ಕಾಮಿಸುವಯಾಚಕಾವಳಿಯಂತೆ
ಕಳಕಳಿಸಿ ನಗುವ ಸಜ್ಜನರವೊಲ್

೪–೧ .................ಪ್ರಣಯ ಕಲಹದೊ
ಳ್ಮುನಿದ ಕಾಂತೆಯ ಕುಪಿತ ವದನಾರವಿಂದದೊ
ಳ್ಮುನುಗುವೆಳನಗೆ ತೋಱುವನ್ನೆಗಂ ಚಿತ್ತದೊಳ್ಕುದಿವ ನಾಗರಿಕನಂತೆ ||

೪–೪೫ ಸಲೆ ಸರಳ ಸಾರದಿಂ ಮುಡಿಯುತಿರ್ದರು ಸಮು
ಜ್ಜ್ವಲ ದೀಪದೆಡೆಗೆ ಮುಗ್ಗುವ ಪತಂಗಪ್ರಸರಮೆನೆ ವೃಷಧ್ವಜನಿದಿರೊಳು ||

೬–೧೨ ಮೆಲ್ಲಮೆಲ್ಲನೆ ಪರೆಪುತಿರ್ದುದಾ ರಾಜಮಾರ್ಗದೊಳ್ಪಿಸುಣರಂತೆ ||

೧೦–೧೧ ಲಲಿತವಾಜಿ ಪೂರ್ಣೇಂದುಮಂಡಲದೊಳೊಪ್ಪುವ ಮೃಗಾಂಕದ ತೆಱದೊಳು ||

೧೨–೩೯ ಕೋಲತ್ತಲಡಗಿತವನಿಯೊಳಾಗ ಪುತ್ತುವುಗುವಹಿಯಂತೆ ||

೧೩–೫೮ ಕಂಠಮಾಲೆಯೊಳ್ಜಾತಿ ನಾಯಕರತ್ನಮಂ ತೆಗೆದು ಬಿಸುಟಂತೆ ||

೧೮–೪೬ ........ದುಮ್ಮಾನದಿಂ ಪೊಕ್ಕನಂತಃಪುರಕೆ ಪುತ್ತವುಗುವಹಿಪನಂತೆ

೧೮–೫೪ ಮಮತೆಯಂ ಮಹಾಯೋಗಿ ಬಿಡುವಂತೆ

೨೪–೩೬ ಲೋಕದೊಳ್ದಾನ ಧರ್ಮೋಪಕಾರಂಗಳ್ಗೆ
ತಾಕುಡದೆ ಮಾಜಿಕೊಂಡಿರ್ದ ಲೋಭಿಯ ಧನಂ
ಕಾಕಭಾಜಿನಮಪ್ಪುದಡವಿಯೊಳ್ಬಿದ್ದ ಪೆಣನಂತೆಂದನುರಗೇಂದ್ರನು ||

೨೫-೬೦ ....................................ಉ
ತ್ಸುಕದಿಂದ ಮೊಡಗೂಡಿ ಮಂಚದೊಳ್ಪ್ರಾಣ ನಾ
ಯಕನಿರಲ್ಕಱಿದೊಱಸಿದಧವಾಂಗನೆಯವೊಲ್

೨೫-೬೧ ....................ಅಮಲ ತುಲಸಿಯಂ
ದುತ್ತಿ ವಿಡಿದಬ್ಜಮಂ ಮಾಣ್ದುದತ್ತುರದ ಕುಸುಮದ ತೊಡವುಗಟ್ಟುವಂತೆ.

೨೮-೪ ... ... ... ... ... ... ಕೋಗಿಲೆಯ
ಮಱಿಗಳಂ ವೈಯೊಳ್ಪುದುಗಿಕೊಂಡು ಮಱುಕದಿಂದೈದೆ ಪಾಲಿಸುತಿರ್ದವು ||

೨೮-೩೧ ಕಾಕ ಸಂಘಾತದೊಳ್ ಸಿಕ್ಕಿರ್ದ ಕೋಗಿಲೆಯ ಮಱಿಯಂತೆ
ಬಹಳ ಕೋಪಾತಿಶಯದೊಳಿಹ ವಿವೇಕದಂತೆ

೨೯-೩೦ ಸನ್ನುತ ವಸಂತದೊಳ್ಬಾಯ್ದೆಱಿವ ಕೋಗಿಲೆಯ ಮಱಿವೊಲ್
೩೧-೧ ನೇಸಱುದಯಿಸುವ ಕಾಲದ ಮುಂದೆ ತಂಪಿಡಿದು ಬೀಸುವೆಳಗಾಳಿಯಂತೆ.

೩೧-೪೭ ಖಳರಂತರಂಗ ಪ್ರವೇಶದ ವಿವೇಕನುಂ
ಬಳಸಿದರಿಷಡ್ವರ್ಗವೊತ್ತರಿಸಿಮುಱಿವಂತೆ.

ಹೀಗೆ ಅನೇಕ ಲೋಕಾನುಭವದ ಉಪಮಾನಗಳಿವೆ. ಇದಲ್ಲದೆ ಜನರೂಢಿಯಲ್ಲಿರುವ ಅನೇಕ ನಾಣ್ನುಡಿಗಳನ್ನೂ ಲಕ್ಷ್ಮೀಶನು ಉಪಮಾನಗಳಾಗಿ ಉಪಯೋಗಿಸುತ್ತಾನೆ. ಈ ಉಪಮಾ ಅಲಂಕಾರಗಳೇ ಕವಿ ಲಕ್ಷ್ಮೀಶನ ಜನ ಮೆಚ್ಚಿಗೆಯ ಒಂದು ಪ್ರಮುಖ ಕಾರಣವಾಗಿರಬಹುದು.

## ಕಾರಣೋತ್ಪ್ರೇಕ್ಷಾಲಂಕಾರ—ಕಲ್ಪಕತೆ

ಒಂದು ವಸ್ತುವಿನಲ್ಲಿ ಬೇರೊಂದು ವಸ್ತುವಿನ ಸಮಾನ ಗುಣಧರ್ಮವನ್ನು ಆರೋಪಿಸಿ ಅದರ ನಿಮಿತ್ತದಿಂದ ಆ ವಸ್ತುವನ್ನು ಭಿನ್ನವಸ್ತುವೆಂದು ಸಂಭಾವಿಸುವುದೇ ಉತ್ಪ್ರೇಕ್ಷೆ. ಸಂಭಾವನೆ ಎಂಬುದು ಒಂದು ವಿಶೇಷ ಪ್ರಕಾರದ ಜ್ಞಾನ. ಅದು ನಿಶ್ಚಯ ಜ್ಞಾನಕ್ಕಿಂತ ಕೀಳಾಗಿಯೂ ಸಂದೇಹ ಜ್ಞಾನಕ್ಕಿಂತ ಉತ್ಕೃಷ್ಟವಾಗಿಯೂ ಇರುತ್ತದೆ. ಕವಿಯು ತನ್ನ ಕಲ್ಪನಾಶಕ್ತಿಯಿಂದ ಚಿತ್ರಿಸಿದ ಆ ಶಬ್ದಚಿತ್ರವು ವಾಚಕನಿಗೆ ಸಂಭಾವ್ಯ ಕಲ್ಪನಾಚಿತ್ರ ಎಂದು ಎನಿಸಿದರೆ ಸಾಕು. ಅಸಂಭಾವ್ಯತೆಯ ಕಳೆ ಏರಿದ ಉತ್ಪ್ರೇಕ್ಷೆ ವಾಚಕನ ಮನಸ್ಸನ್ನು ಮೆಚ್ಚಿಸಲಾರದು.

ಉತ್ಪ್ರೇಕ್ಷೆಗಳೆಂದರೆ ಕವಿಯ ಕಲ್ಪನಾಶಕ್ತಿಯ, ಊಹಾಶಕ್ತಿಯ ಶಿಖರಗಳು ಎಂದು ಹೇಳಬಹುದು. ಈ ಉತ್ಪ್ರೇಕ್ಷೆಗಳಲ್ಲಿಯೂ ವಾಚ್ಯ ಮತ್ತು ಪ್ರತೀಯಮಾನ ಎಂದು ಎರಡು ಪ್ರಮುಖವಾದ ಭೇದಗಳಿರುತ್ತವೆ. ವಾಚ್ಯ ಉತ್ಪ್ರೇಕ್ಷೆಯಲ್ಲಿ ಅಂತೆ, ಎನೆ, ಎನಲ್, ಎಂಬಿನೆಗಂ, ಮಾಳ್ಕೆಯಿಂ, ವೊಲ್ ಇತ್ಯಾದಿ ಸಮಾನಗುಣಧರ್ಮವಾಚಕ ಶಬ್ದಗಳಿರು

ತ್ತವೆ. ಪ್ರತೀಯಮಾನದಲ್ಲಿ ಈ ವಾಚಕ ಶಬ್ದಗಳ ಪ್ರಯೋಗ ಇರುವುದಿಲ್ಲ. ಅದನ್ನು ವಾಚಕನು ಊಹಿಸಿಕೊಳ್ಳಬೇಕಾಗುತ್ತದೆ.

ರುಯ್ಯಕ ಮೊದಲಾದ ಕೆಲ ಅಲಂಕಾರಿಕರು ಉತ್ಪ್ರೇಕ್ಷೆಯಲ್ಲಿ ಹಲವು ಒಳಭೇದಗಳನ್ನು ಮಾಡಿದ್ದಾರೆ. ಮಮ್ಮಟನು ಅವುಗಳನ್ನೆಲ್ಲ ಹೇಳಿಲ್ಲ. ಜಗನ್ನಾಥ ಪಂಡಿತನು ಅವುಗಳಿಂದ ಯಾವ ಪ್ರಯೋಜನವೂ ಇಲ್ಲ ಎಂದು ಹೇಳುತ್ತಾನೆ. ಆದರೂ ಕಾರಣೋತ್ಪ್ರೇಕ್ಷೆ-ಹೇತುಉತ್ಪ್ರೇಕೆ ಮತ್ತು ಫಲೋತ್ಪ್ರೇಕ್ಷೆ ಎಂಬ ಎರಡು ಒಳಭೇದಗಳನ್ನು ಬಹುಶಃ ಎಲ್ಲ ಅಲಂಕಾರಿಕರು ಒಪ್ಪಿಕೊಳ್ಳುತ್ತಾರೆ. ಒಂದು ವಸ್ತುವನ್ನು ಮತ್ತೊಂದು ವಸ್ತುವನ್ನಾಗಿಯೂ, ಒಂದು ಪ್ರಕಾರದ ವಸ್ತುವನ್ನು ಕಲ್ಪಿತ ಕಾರಣದಿಂದಲೋ ಅಥವಾ ಕಲ್ಪಿತ ಫಲಕ್ಕಾಗಿಯೋ ಮತ್ತೊಂದು ಪ್ರಕಾರದ ವಸ್ತುವನ್ನಾಗಿ ಹೇಳುವದರಿಂದ ಈ ಒಳಭೇದಗಳು ಉಂಟಾಗಿವೆ.

ಕವಿ ಲಕ್ಷ್ಮೀಶನ ಜೈಮಿನಿ ಭಾರತದಲ್ಲಿ ಸುಮಾರು ೧೪೪ ಪದ್ಯಗಳು ಉತ್ಪ್ರೇಕ್ಷಾಲಂಕಾರಗಳನ್ನು ತೊಟ್ಟಿವೆ. ಈ ಉತ್ಪ್ರೇಕ್ಷಾಲಂಕಾರಗಳಲ್ಲಿ ವಾಚ್ಯ, ಪ್ರತೀಯಮಾನ, ಕಾರಣ ಮತ್ತು ಫಲೋತ್ಪ್ರೇಕ್ಷೆಯ ಉದಾಹರಣೆಗಳು ದೊರೆಯುತ್ತವೆ. ಇವುಗಳನ್ನು ಸ್ವಲ್ಪ ವಿವರಿಸುವುದು ಅವಶ್ಯ.

೧. ಕವಿಸಮಯಾಧಿಷ್ಠಿತ ಉತ್ಪ್ರೇಕ್ಷೆಗಳು: ಉಪ್ಪರಿಗೆಗಳ ಶುಭ್ರಕಾಂತಿ = ಪುರವನಿತೆಯ ನಗೆ (೩–೧೫), ಧರ್ಮರಾಜನ ಬಳಿ ಬಿಳಿಕುದುರೆ ನಿಂತಿತು = ಕೀರ್ತಿಯೇ ಬಂದು ನಿಂತಂತೆ (೫–೧೨), ಪ್ರಭಾವತಿಯ ಮುಖ = ತಾವರೆಯ ಬಳಿಯಲ್ಲಿದ್ದ ಚಂದ್ರಮಂಡಲ (೫–೧೭), ಧರ್ಮರಾಜನ ಕೀರ್ತಿ ಹರಡಿಕೆ = ಬೆಳ್ದಿಂಗಳು ಲೋಕವನ್ನು ವ್ಯಾಪಿಸಿದಂತೆ (೮–೪), ಸ್ತನಗಳನ್ನು ಮುತ್ತಿಕೊಂಡ ಮರಿದುಂಬಿ = ಮೇರುವನ್ನು ಮುಸುಕಿದ ಕತ್ತಲೆ (೩–೭),–ಇಂತಹ ಉತ್ಪ್ರೇಕ್ಷೆಗಳನ್ನು ಅನೇಕ ಕವಿಗಳು ಬಳಸಿದ್ದಾರೆ; ಕವಿ ಲಕ್ಷ್ಮೀಶನೂ ಬಳಸಿದ್ದಾನೆ.

೨. ರೂಪಕಾಲಂಕಾರಕ್ಕೆ ನಿಸರ್ಗದಲ್ಲಿಯ ಉಪಮಾನಗಳನ್ನು ಹೆಚ್ಚಾಗಿ ಆರಿಸುವುದು ಲಕ್ಷ್ಮೀಶನ ಒಂದು ವೈಶಿಷ್ಟ್ಯವಾಗಿದೆ ಎಂದು 'ಕಾವ್ಯದಲ್ಲಿಯ ರೂಪಕ ನೈಪುಣ್ಯ' ಎಂಬಲ್ಲಿ ಹೇಳಿದ್ದೇವೆ. ಅದರಂತೆಯೇ ಉತ್ಪ್ರೇಕ್ಷೆಗಳಲ್ಲಿಯೂ ಸೂರ್ಯ ಮತ್ತು ಚಂದ್ರರನ್ನು ಕಾಣುತ್ತೇವೆ. ಸಂ. ೪–೧೪, ೪–೩೯, ೫–೪, ೯–೧೪, ೧೦–೪೮, ೧೩–೪೯, ೧೬–೮, ೧೭–೨೯, ೧೭–೪೧, ೨೦–೬೦, ೨೩–೫೮, ೨೪–೪೯, ೨೬–೪, ೨೮–೧ ಇತ್ಯಾದಿಗಳಲ್ಲಿ.

ಉದಾಹರಣೆಗಾಗಿ : ೪–೧೪–ಮೇಘನಾದನು ಯಜ್ಞಾಶ್ವವನ್ನು ತೆಗೆದುಕೊಂಡು ಆಕಾಶಕ್ಕೆ ಜಿಗಿದುದನ್ನು—

ಜೋಡಾಗಿ ಪೂಡುವಡೆ ಸಾಲದೇಳೇಹಯಂ
ಜೋಡಿಸುವೆನೀ ತುರಗಮಂ ತನ್ನ ತೇರ್ಗೆಂದು
ಗಾಡದಿಂ ಬಾಂಗೆತ್ತಿ ಕೊಂಡೊಯ್ಯದಿರನಬ್ಜಸಖನೆಂಬ ಶಂಕೆಯಿಂದೆ ||

ಎಂದೂ, ಯೌವನಾಶ್ವನೊಡನೆ ನಡೆದ ಸಂಗ್ರಾಮವನ್ನು—

ಅವರಿರ್ವರಿಸುಗೆಯೊಳ್ಮಂಡಲಾಕೃತಿಯೊಳೊ
ಪ್ಪುವ ಕಾರ್ಮುಕಂಗಳುದಯಾಸ್ತಮಯಮುಪ್ಪ ಶಶಿ
ರವಿ ಬಿಂಬದಾಯತದೊಲಿರೆ ನಡುವಣಂಬುಗಳ್ತನ್ಮರೀಚಿಗಳಂತಿರೆ ||
ಅವಯವದ ಗಾಯದೊಳುಗುವ ರಕ್ತಧಾರೆಗ
ಳ್ತವೆ ಸಂಜೆಗೆಂಪಿಡಿದ ತೆಱದಿಂದೆ ಕಂಗೊಳಿಸೆ
ಭುವನದೊಳ್ಪೊಸತಾಯ್ತು ಸಂಗರ ಸಂಧ್ಯಾಗಮವನಂದು ಸೂಚಿಪಂತೆ || (೪–೩೬)

ಎಂದೂ ಬಣ್ಣಿಸಿದ್ದಾನೆ—

ಕಂದು ಕುಂದಿಲ್ಲದ ಸುವೃತ್ತದಿಂದೆಸೆವ, ತನ
ಗೊಂದು ಬಾರಿಯುಮಿನ್ನು ಪರಪೀಡೆ ಲೇಸಲ್ಲ
ಮೆಂದು ನಿಜವೈರಮಂ ಬಿಟ್ಟು ಕಮಲಂಗಳಂ ಸಂತೈಸೆ ಗಗನದಿಂದೆ ||
ಬಂದಪನೊ ಸಂಪೂರ್ಣ ಕಲೆಗಳಿಂದಾ ರಾಜಿ
ಪಿಂದುವೆನೆ ಕೃಷ್ಣನ ಪದಾಂಭೋಜಯುಗಳಕ್ಕೈ
ತಂದು ಬಿದ್ದುದು ಸುಧನ್ವನ ಶಿರಂ ಹರಿಯ ನಾಮಾವಳಿಯನುಚ್ಚರಿಸುತೆ|| (೧೩–೪೯)

ಎಂಬಲ್ಲಿ ಪೂರ್ಣಚಂದ್ರನಿಗೂ–ಸುಧನ್ವನ ಶಿರಕ್ಕೂ ಸಾದೃಶ್ಯವನ್ನು ಕಲ್ಪಿಸಲಾಗಿದೆ. ಶೀಲ ಸದ್ವರ್ತನೆಗಳ ಪರಿಪೂರ್ಣ ಕಲೆಗಳುಳ್ಳ ಸದ್ಭಕ್ತನಾದ ತಾನು ಕ್ಷಾತ್ರಛಲದಿಂದ ಕೃಷ್ಣನಿಗೆ ಎದುರಾಗಿ ನಿಲ್ಲುವುದು ತರವಲ್ಲ ಎಂದು ಈಗ ಜ್ಞಾನೋದಯವಾಗಿದೆ. ವಿರೋಧವನ್ನು ಬಿಟ್ಟು ಸಂತೈಸಲು ಸುಧನ್ವನ ಶಿರಸ್ಸು ಕೃಷ್ಣನ ಅಡಿದಾವರೆಗಳಿಗೆ ಎರಗಿದೆ. ಈ ಉತ್ಪ್ರೇಕ್ಷೆ ಅಪೂರ್ವವಾಗಿದೆ.

ಲೀಲೆ ಮಿಗೆ ಪೆಣ್ದಳಂ ಬಂದು ವಿಜಯನ ಪಡೆಯ
ಮೇಲೆ ಬಿದ್ದುದು ಕರಿ ತುರಗರಥ ಪದಾತಿಗಳ
ಸಾಲೆಸೆಯೆ ಸಂದಣಿಸಿ ನಾನಾ ಪ್ರಕಾರದಿಂ ಕೈದುಗಳ ಮಳೆಗಱೆಯುತೆ ||
ಬಾಲಾರ್ಕಬಿಂಬಮಂ ಶಶಿಮಂಡಲಮುಮೇಕ
ಕಾಲದೊಳ್ಮೂಡಿ ಬರ್ಪಂತೆ ಪೊಂದೇರೊಳ್ಪ್ರ
ಮೀಳೆ ಮುಖಕಾಂತಿ ಕಳಕಳಿಸೆ ನಡೆತರುತಿರ್ದಳರಸು ಮೋಹರದ ನಡುವೆ|| (೧೬–೮)

ಎಂಬ ಪದ್ಯವು ಪ್ರಮೀಳೆಯ ಕ್ಷಾತ್ರ ತೇಜಸ್ಸಿನ ಪ್ರತೀಕ, ಚಂದ್ರನಂತೆ–ಪ್ರಶಾಂತ ಮುಖದ ಸ್ತ್ರೀ, ಆ ಮುಖದಲ್ಲಿ ವೀರದ ರವಿತೇಜ ಹೊಳೆಯುತ್ತಿದೆ. ಅವಳು ರಣ ಭೂಮಿಗೆ ಬಂದುದು ಸೂರ್ಯ ಚಂದ್ರರಿಬ್ಬರೂ ಒಮ್ಮೆಲೆ ಒಂದೇಕಡೆಗೆ ಹುಟ್ಟಿದಂತೆ ಕಂಡಿದೆ ಕವಿಗೆ. ವೀರ ಮತ್ತು ಶಾಂತಭಾವಗಳೆರಡೂ ಚೆನ್ನಾಗಿ ಮೂಡಿದ್ದವು ಎಂದು ಹೇಳುವಲ್ಲಿ ಪ್ರಮೀಳೆಯ ಮುಖಕ್ಕೆ ರವಿ ಶಶಿ ಉಪಮಾನಕೊಟ್ಟಿದ್ದಾನೆ ಕವಿ. ಲಕ್ಷ್ಮಣನು ಮೂರ್ಛೆಹೋದ ರೀತಿಯನ್ನು—'ಸ್ವರ್ಮಣಿ ಧರಾತಳಕೆ ನಭದಿಂದುರುಳ್ವಂತೆ ಪೆರ್ಮರವೆಗೊಂಡು ಬಿದ್ದನು' (೨೦–೬೧) ಎಂದು ವರ್ಣಿಸುವಲ್ಲಿ ಸೂರ್ಯನನ್ನು ಉಪಮಾನವಾಗಿ ಬಳಸಿದರೆ, ಮೃತರಾದ ವೃಷಕೇತು–ಅರ್ಜುನರ ತಲೆಗಳನ್ನು:

ಶೀತೋಷ್ಣರುಚಿಗಳಂ ಗಗನಗತಿಯಿಂ ಬಿಟ್ಟು
ಭೂತಳದ ಮೇಲೆ ರವಿಶಶಿಗಳೆಸೆವಂತೆ ಪುರು
ಹೂತಸುತ ಕರ್ಣಜರ ತಲೆಗಳೊಪ್ಪಿರೆ ಕಂಡುಮೂಪಿ ಚಿತ್ರಾಂಗದೆಯರು॥ (೨೩–೫೮)

ಶೀತೋಷ್ಣಗಳನ್ನು ಕಳೆದುಕೊಂಡ ಸೂರ್ಯಚಂದ್ರರಿಗೆ ಹೋಲಿಸಲಾಗಿದೆ. ಮೂರ್ಛೆ ಹೋದವರನ್ನು, ಮರಣ ಹೊಂದಿದವರನ್ನು ಸೂರ್ಯಚಂದ್ರರೊಂದಿಗೆ ಹೋಲಿಸಿ ಹೇಳುವುದನ್ನು ಹಳೆಯ ಕಾವ್ಯಗಳಲ್ಲಿಯೂ ಕಾಣಬಹುದು :

ನಿಲುಕಿ ಪೂಗೊಯ್ವ ಲಲಿತಾಂಗಿಯರಬಟ್ಟ ಬ
ಲ್ಮೊಲೆಗಳಂ ಪೊಱಲಾಱದಸಿಯ ಸೆಳೆನಡುವಿದು ಶಿ
ಥಿಲ ಮೆಂದು ಸಣ್ಣದೊಂದೆಸೆವ ಕರ್ಬೊನ್ನ ಸರಳಂ ಮನೋಜಂ ನಿರ್ಮಿಸಿ ||
ನಿಲಿಸಿ ಬಿಗಿದನೊ ಮೂಱುಕಟ್ಟನೆಡೆಗೆಡೆಗೆನಲ್
ಸಲೆ ವಿರಾಜಿಸಿತು ವಳಿತ್ರಯದ ಚೆಲ್ವಿಕೆಯಿಂದ
ಲಲನೆಯರ ಮಧ್ಯದೊಳೊಗೆದ ಬಾಸೆ ಕುಸುಮಾಪಚಯ ಸಮಯದೊಳ್
ಪೊಸತೆನೆ || (೮–೨೯)

ಮತ್ತು : ಎಲೆ ಪಾರ್ಥ ವೈಶ್ಯ ಸಂಭವರಾವಹೆವು ನಿಮ್ಮ
ಬಲ ಸಮಾಜದೊಳಂಬುಗಳ ಪಸರಮಂ ಬಿಟ್ಟು
ಗೆಲವಿನಗ್ಗದ ಲಾಭಮಂ ಪಡೆದೆವದಟರ ಶಿರಂಗಳಂ ಕೊಂಡೆವೞಿಸಿ ||
ಕಲಿಗಳೈತಂದು ಜೀವಕೆ ಸಂಚಕಾರಮಂ
ಸಲೆ ಬೇಡಿದೊಡೆ ಕೊಟ್ಟೆವಿಚ್ಛೆಯುಳ್ಳೊಡೆ ನಿನ್ನ
ತಲೆಯ ಬೆಲೆಗಿದೇ ಸಾಹಸದ್ರವ್ಯಮೆನ್ನೊಳೆಂದರ್ಜುನಿಪಚಾರಿಸಿದನು|| (೨೩–೩೧)

ಈ ಎರಡು ನುಡಿಗಳಲ್ಲಿಯೂ ಉತ್ಪ್ರೇಕ್ಷೆಗಳಲ್ಲಿ ಹೊಸತನವಿದೆ. ಲಲನೆಯರ ವಳಿತ್ರಯ ಮತ್ತು ಬಾಸೆಗಳನ್ನು, ಬಲ್ಮೊಲೆಗಳನ್ನು ಹೊರುವುದಕ್ಕೆ ಸೆಳೆನಡುವಿಗೆ ಬಲ ಬರುವುದಕ್ಕಾಗಿ ಮನೋಜನು ಕರ್ಬೊನ್ನ ಸರಳಂ ನಿರ್ಮಿಸಿ ನಿಲಿಸಿ ಮೂರು ಕಟ್ಟುಗಳನ್ನು ಎಡಗಡೆಗೆ ಬಿಗಿದಿದ್ದಾನೆ ಎಂದು ಉತ್ಪ್ರೇಕ್ಷಿಸುವಲ್ಲಿ ಒಂದು ತಾಂತ್ರಿಕ ಉಪಮಾನೋಪಮೇಯದ ಚಮತ್ಕೃತಿ ಇದೆ ಎಂದು ಹೇಳಬಹುದು. ಎರಡನೆಯ ನುಡಿಯಲ್ಲಿ ಬಾಣಗಳ ಅಂಗಡಿ, ಗೆಲುವು ಎಂಬ ಲಾಭ, ಶಿರಗಳ ಸಂಚಕಾರ ಎಂಬ ಮಾತು ನಿತ್ಯವ್ಯವಹಾರದ ಪರಿಚಿತ ಮಾತುಗಳು. ಅವುಗಳನ್ನೇ ಉಪಮಾನಗಳಾಗಿ ಬಳಸಿದ್ದಾನೆ.

ಕವಿ ಲಕ್ಷ್ಮೀಶನ ಕಲ್ಪನಾರಮ್ಯತೆಯನ್ನು ನೋಡಬೇಕಾದರೆ ಅವನ ಕಾರಣೋತ್ಪ್ರೇಕ್ಷೆಗಳನ್ನು ಪರೀಕ್ಷಿಸಬೇಕು :

ಇಸಲುಚ್ಚಳಿಸಿ ಪಾಯ್ವ ಸುರಥನಂಬಿನ ಗಱಿಯ
ಬಿಸಿಯ ಗಾಳಿಯ ಬಾಧೆಯಿಂದುರಿದು ಭುಗಿಲೆಂದು
ಮುಸಗಿದತಿಶಯದ ರೋಷಜ್ವಾಲೆಯಿಂ ಧನಂಜಯನಾದನೀ ನರನೆನೆ || (೧೪–೧೧)

ಮುಸಗಿ ಚಿಮ್ಮುವ ರಕ್ತಧಾರೆಗಳ್ಕೂಡೆ ಕ
ಣ್ದೆಸೆದುವಲ್ಲಿಯ ಕಿಚ್ಚಿನಂತೊಡನೆ ಮುಸುಕಿತೆ
ಣ್ದೆಸೆಯನಿಸುವಂಬು ಬಿಱುವಳೆಯಂತೆ ಹೊನಲಾಯ್ತು ರುಧಿರ
ಪ್ರವಾಹದಂತೆ || (೭–೪೩)

ಒಂದೆಡೆಯೊಳಂ ತನಗೆ ನಿಲವಿಲ್ಲದತಿ ವೇಗ
ದಿಂದೆ ನಿರುತಂ ಪ್ರಬಲವಾಗಿ ಬೀಸುವಗಾಳಿ
ಚಂದನ ದ್ರುಮಮಂ ತೊಡರ್ದಹಿಗಳಾಹಾರಮಂ ಕೊಂಡುಕೊಂಡು ಮಿಕ್ಕು ||
ಮಂದತ್ವಮಂ ತಳೆದು ಮಲಯಾಚಲದ ಸೀಮೆ
ಯಿಂದೆ ಸರಸಿಜದೊಳ್ಭ್ರಮಿಸುವ ಮರಿದುಂಬಿಗಳ
ವೃಂದಮಂ ಕೊಡಿಕೊಂಡೆಳವೆಲರ್ಬಂದುದು ವಿರಹಿಗಳೆದೆಯಾಱುವಂತೆ || (೮–೨)

ಆವಗಂ ಪುಷ್ಪಿಣಿಯರಾಗಿರ್ಪರಿಲ್ಲಿಯ ಲ
ತಾವಧುಗಳಿವರ ಸೋಂಕಲೆ ಬಾರದೆಂದು ರಾ
ಜೀವ ಮಿತ್ರಂ ತನ್ನ ನಿರ್ಮಲಕರಂಗಳಂ ಪೆಱದೆಗೆದನೆಂಬಂತಿರೆ ||
ಆವೆಡೆಯೊಳಂ ಛಿದ್ರಮಿಲ್ಲೆನಿಸಿ ವಿವಿಧ ದ್ರು
ಮಾವಳಿಯ ನಿಬಿಡಪತ್ರಚ್ಛಾಯೆಗಳ ಸೊಂಪು
ದೀವಿದಾರಾಮಂಗಳೆಂಬುಮೀ ಪುರಜನರ್ಗೀಂ ವಿಲಾಸಮನೀವುವೊ || (೩–೨೩)

ಒಂದು ಮಾರ್ಗದೊಳೆ ನಡೆಯದೆ ಸದಾದ್ವಿಜನಿಕರ
ದಂದಮಂ ಕಿಡಿಸಿ ಗುರು ಬುಧ ಮಂಗಳೋನ್ನತಿಗೆ
ಕುಂದನಿತ್ತುದಱಿಂದೆ ಸಾರಥಿ ಹೆಳವನಾದನಾತ್ಮಜಂ ಲೋಕಮಱಿಯೆ ||
ಮಂದನಾದಂ...................................... || (೧೭–೪೩)

ಕಕ್ಕಸದೊಳಂದು ರಾವಣ ಕುಂಭಕರ್ಣಾದಿ
ರಕ್ಕಸರ ತಲೆಗಳನರಿದು ತಿರುಗಿ ಬಹ ಕಣೆಗ
ಳಿಕ್ಕಡಿಗಳಾಗಿ ಬಿದ್ದುವು ಧರೆಗೆ ಕೂಡೆ ಬಾಲಕರಿಸುಗೆ ತನ್ನಿಸುಗೆಗೆ ||
ಮಿಕ್ಕು ಬರೆ ಬೆಱಗಾಗಿ ರಾಘವಂ ಸುಮ್ಮನಿರೆ
ಪೊಕ್ಕುವಂಬುಗಳೊಡಲೊಳಾತ್ಮಜರ ಮೇಲೆ ತನ
ಗಕ್ಕರುಂಟಲ್ಲೆಂಬುದಂ ನೋಳ್ಪೆವೆಂಬವೊಲ್ಭೂಪ ಕೇಳ್ಕೌತುಕವನು || (೨೧–೩೫)

ಕಱಕಱದ ತಮ್ಮ ಮುಳಿವೊನಲಿಂದೆ ಶಶಿಕಾಂತ
ದೊಱತೆವೊನಲುಱವೆಗ್ಗಳಿಸಿ, ನಾಚಿ, ಬೆಳ್ಪಾದ
ತೆಱದಿಂ ಮುಗಿಲ್ಗಳಿರೆ...........................|| (೨೫–೫)

ನಿಲ್ಲದೆ ನರಳ್ವ ಪಸುಳೆಯ ನಿರ್ಮಲಾಸ್ಯಮಂ
ಪುಲ್ಲೆಗಳ್ಕಂಡು ಕಾನನಕೆ ಕಾಮಿಸಿ ತಮ್ಮ
ನಲ್ಲನೈತರಲುಮ್ಮಳಿಸಿ ವಾಹನವನಱಸಬಂದ ಪೂರ್ಣೇಂದುವೆಂದು ||
ವಲ್ಲಭಸ್ವಾಮಿಯಂ ಬೇಡಿಕೊಳುತಿರ್ಪುವೆನೆ
ಮೆಲ್ಲಮೆಲ್ಲನೆ ಪೊರೆಗೆ ಪೊದ್ದಿ ಬಾಲಿಕನಂಘ್ರಿ
ಪಲ್ಲವದ ರುಧಿರಮಂ ಕುಡಿನಾಲಿಗೆಗಳಿಂದೆ ಮಿಗೆ ಲೇಹನಂಗೈದುವು || (೨೮–೩೭)

ಎಂಬ ಪದ್ಯಗಳಲ್ಲಿ ಅನುಕ್ರಮವಾಗಿ ಅರ್ಜುನನ ಸಿಟ್ಟು ಹೆಚ್ಚಾಗಲು, ಬಾಣಗಳ ಗರಿಗಳಿಂದೆ ಬೀಸಿದ ಗಾಳಿಯು ಕಾರಣವಲ್ಲ; ಎಣ್ದೆಸೆ ಕೆಂಪಾಗಲು ರುಧಿರ ಪ್ರವಾಹ ಕಾರಣವಲ್ಲ; ಗಾಳಿಯು ಮಂದವಾಗಿ ಬೀಸಲು ಹಾವು, ಮರಿದುಂಬಿ ಕಾರಣವಲ್ಲ; ಸೂರ್ಯನ ಪ್ರಕಾಶವು ತೋಟಗಳಲ್ಲಿ ಬರದಿರುವುದಕ್ಕೆ ಹೂ ತುಂಬಿದ ಲತೆಗಳು ಕಾರಣವಲ್ಲ; ಸೂರ್ಯನ ಸಾರಥಿ ಹೆಳವನಾಗಲು ಅಥವಾ ಮಗನು ಮಂದನಾಗಲು ಸೂರ್ಯನ ಗತಿ

ಕಾರಣವಲ್ಲ; ಲವ-ಕುಶರ ಬಾಣಗಳು ರಾಮನ ಶರೀರವನ್ನು ಪ್ರವೇಶಿಸಿದ್ದು ಅವನ ಹೃದಯದಲ್ಲಿ ಪುತ್ರಪ್ರೀತಿಯನ್ನು ಹುಡುಕುವುದು ಕಾರಣವಲ್ಲ; ಮುಗಿಲುಗಳು ಬಿಳಿಯಾಗಲು ನಾಚಿಕೆ ಕಾರಣವಲ್ಲ ಮತ್ತು ಚಂದ್ರಹಾಸನು ಅಡವಿಗೆ ಬಂದದ್ದು ತನ್ನ ವಾಹನವನ್ನು ಹುಡುಕಲು ಬಂದ ಚಂದ್ರನಲ್ಲ. ಹೀಗಿದ್ದೂ ಇವು ಕಾರಣಗಳು ಎಂದು ಹೊಂದಿಸುವಲ್ಲಿ ಕವಿಪ್ರತಿಭೆಯ ವಿಲಾಸವಿದೆ. ಕಾರ್ಯಕ್ಕೆ ಸಂಭಾವ್ಯ ಕಾರಣವನ್ನು ಊಹಿಸುವ ಶಕ್ತಿಯೇ ಕವಿಯ ಉತ್ಪ್ರೇಕ್ಷಾ ಶಕ್ತಿ. ಈ ಉತ್ಪ್ರೇಕ್ಷಾಶಕ್ತಿಯು ಕವಿ ಲಕ್ಷ್ಮೀಶನಿಗೆ ಕರಗತವಾಗಿದೆ. ಲಕ್ಷ್ಮೀಶನ ಉಪಮೆಗಿಂತ ಉತ್ಪ್ರೇಕ್ಷೆಗಳೇ ಮನೋಹರವಾಗಿವೆ ಎಂದು ಕಾವ್ಯದಲ್ಲಿ ಅಡಿಗಡಿಗೆ ಕಾಣುತ್ತದೆ:

ಬಹುಕಾಲಮೆನಗೆ ನೀರ್ಮಳೆಗಱಿದ ಪುರುಷಾರ್ಥ
ಕಹಹ ಮೃದ್ಬಿಂದುಗಳನೀಗ ಸುರಿದಪೆನೆಂದು
ಮಹಿನಭಸ್ಥಳಕೂರ್ಧ್ವಮುಖವಾಗಿ ಸೂಸುವ ರಜದಸೋನೆಯೆನೆ ದೂಳಿಡೆ ||

(೧೦-೮)

ಎಂಬಲ್ಲಿ ಕವಿಗೆ ವಿಂಧ್ಯಾದ್ರಿ ಪ್ರದೇಶದಿಂದ ಫಲುಗುಣನ ಸೈನ್ಯವು ಯಾವ ರಭಸದಿಂದ ನಡೆಯಿತು ಎಂಬುದನ್ನು ವಿವರಿಸಬೇಕಾಗಿದೆ. ಅದರ ರಭಸದ ನಡಿಗೆಯಿಂದ ಎದ್ದ ಧೂಳಿ ಗಗನವನ್ನು ಮುಟ್ಟಿದ್ದು ಸ್ವಾಭಾವಿಕ. ಆದರೆ ಈ ಧೂಳಿಯನ್ನು ಮಳೆಯೆಂದು ಉಲ್ಲೇಖಿಸಿ, ಊರ್ಧ್ವವೃಷ್ಟಿಗೆ ಕಾರಣ-ಇಷ್ಟು ದಿನ ಅಧೋಮುಖವಾಗಿ ಬಂದ ಮಳೆಯ ಉಪಕಾರವನ್ನು ಸ್ಮರಿಸಿ ಎಂದು ಕವಿಯು ಹೇಳುತ್ತಾನೆ. ಈ ಕಲ್ಪನೆಯಲ್ಲಿ ಸೌಂದರ್ಯವಿಲ್ಲ. ಕವಿಯು ಒಂದು ಉತ್ಪ್ರೇಕ್ಷೆ ಮಾಡಲು ಪಟ್ಟ ಕಷ್ಟವು ಕಂಡುಬರುತ್ತದೆ. ಹೀಗೆ ಕೆಲವೆಡೆಗೆ ಲಕ್ಷ್ಮೀಶನು ಹಟದಿಂದ ಉತ್ಪ್ರೇಕ್ಷೆಯನ್ನು ಸಾಧಿಸುತ್ತಾನೆ: ಸಂ. ೧೨-೬, ೧೫, ೧೮-೧೪, ೨೨-೧೮, ೨೬-೧೩, ೨೬-೧೮, ೨೯-೮.

## ಕಾವ್ಯದಲ್ಲಿಯ ರೂಪಕ ನೈಪುಣ್ಯ

ಭರತನು ಕಾವ್ಯಕ್ಕೆ ಉಪಮಾ, ದೀಪಕ, ರೂಪಕ ಮತ್ತು ಯಮಕ ಎಂಬ ನಾಲ್ಕು ಅಲಂಕಾರಗಳು ಎಂದು ಹೇಳುತ್ತಾನೆ.[1] ಯಮಕವು ಶಬ್ದಾಲಂಕಾರವಾದರೆ ಉಳಿದ ಮೂರು ಅರ್ಥಾಲಂಕಾರಗಳಾಗಿವೆ. ಉಪಮೇಯ ಮತ್ತು ಉಪಮಾನ ಈ ವಸ್ತುಗಳಲ್ಲಿ ಸುಂದರವಾದ ಸಾದೃಶ್ಯವನ್ನು ಕಾಣುವುದೇ ಉಪಮಾ ಅಲಂಕಾರ. ಸುಂದರವಾದ ಸಾದೃಶ್ಯವನ್ನು ಅಸಾಮಾನ್ಯವಾಗಿ ವರ್ಣಿಸಬಲ್ಲವನೇ ಮಹಾಕವಿಯೂ ಆಗುತ್ತಾನೆ. ಶಬ್ದಾರ್ಥಗಳಲ್ಲಿ ಉಪಮಾ ಸಂಬಂಧವನ್ನು ಕಾಣದವನು ಕವಿಯಾಗಲಾರ. ಉಪಮೆಯಿಂದ ಓದುಗನಲ್ಲಿ ಭಾವೋದ್ದೀಪನವನ್ನು, ಭಾವರೂಪಣವನ್ನು ಮಾಡಬಹುದು. ಇದೇ ದೀಪಕ ಮತ್ತು ರೂಪಕ ಅಲಂಕಾರಗಳಾಗಿ ಪರಿಣಮಿಸುತ್ತದೆ.

---

1 ಉಪಮಾ ದೀಪಕಂ ಚೈವ ರೂಪಕಂ ಯಮಕಂ ತಥಾ ।
ಕಾವ್ಯಸ್ಯೈತೇಹ್ಯಲಂಕಾರಾಃ ಚತ್ವಾರಃ ಪರಿಕೀರ್ತಿತಾಃ || 'ನಾಟ್ಯಶಾಸ್ತ್ರ', ೧೬-೬೧.

ಶಬ್ದಾರ್ಥ ಸೌಂದರ್ಯದ ಅನೇಕ ಮುಖಗಳೇ ಕುವಲಯಾನಂದದ ಕಾಲಕ್ಕೆ ನೂರಿಪ್ಪತ್ತು ಅಲಂಕಾರಗಳಾಗಿ ಪರಿಣಮಿಸಿದುವು. ಅಲಂಕಾರಗಳಲ್ಲಿ ಉಪಮಾ ಅಲಂಕಾರವೇ ಜೀವಾಳ.

ಶಬ್ದಾರ್ಥಗಳ ಮೂಲಕ ಕಾವ್ಯಾಭ್ಯಾಸಿಯು ಕಣ್ಣಮುಂದೆ ಯಾವುದೊಂದು ಚಿತ್ರವನ್ನು ತಂದು ನಿಲ್ಲಿಸಿ, ವರ್ಣನೋದ್ದೇಶಿತವಾದ ಇನ್ನೊಂದು ಚಿತ್ರವನ್ನು ಹೃದಯ ದಲ್ಲಿ ಬಿಂಬಿಸುವುದೇ ರೂಪಕ ಅಲಂಕಾರದ ಲಕ್ಷಣವಾಗಿದೆ. ಸುಂದರವಾದ ಚಿತ್ರವನ್ನು ಕಂಡಾಗ ಪ್ರೇಕ್ಷಕನು ಆ ಚಿತ್ರದೊಡನೆ ಒಂದಾಗುತ್ತಾನೆ. ತಲ್ಲೀನತೆ, ತನ್ಮಯತೆಯ ಸುಖವನ್ನು ಪಡೆಯುತ್ತಾನೆ. ಜಯದೇವನು 'ರೂಪಕ ಅಲಂಕಾರವೆಂದರೆ ಉಪಮಾನ ಚಿತ್ರದಿಂದ ಉಪಮೇಯದ ಭಿತ್ತಿಯನ್ನೆಲ್ಲ ತುಂಬಿಬಿಡುವುದು' ಎಂದಿದ್ದಾನೆ.

ದಂಡಿಯು ರೂಪಕದಲ್ಲಿ ಸಮಸ್ತ, ಅಸಮಸ್ತ, ವಿಭಕ್ತಿ, ಹೇತುರೂಪಕ, ರೂಪಕ ರೂಪಕ ಎಂದು ವಿಭಾಗಗಳನ್ನು ಮಾಡಿದರೆ—ಮಮ್ಮಟನು ಸಾಂಗ, ನಿರಂಗ, ಪರಂ ಪರಿತ ರೂಪಕ ಎಂಬ ವಿಭಾಗಗಳನ್ನು ಮಾಡಿದ್ದಾನೆ. ಕುವಲಯಾನಂದಕಾರನು ಅಭೇದ, ತಾದ್ರೂಪ್ಯ, ಉಭಯ, ಅಧಿಕ, ನ್ಯೂನ, ಮಾಲಾರೂಪಕ, ಪರಂಪರಿತ ಮತ್ತು ಶ್ಲಿಷ್ಟ ರೂಪಕ ಎಂಬ ವಿಭಜನೆಯನ್ನು ಸೂಚಿಸಿದ್ದಾನೆ.

ಕನ್ನಡ ಜೈಮಿನಿ ಭಾರತ ಕಾವ್ಯದಲ್ಲಿ ಬರುವ ಒಂದೊಂದು ನಗರ ವರ್ಣನೆಯೂ ಸುಂದರ ಮತ್ತು ಮನಸ್ಸನ್ನು ಸೆಳೆಯುವಂಥದಾಗಿದೆ. ಮನಸ್ಸನ್ನು ಸೆಳೆಯುವುದು ಸ್ತ್ರೀಯ ಸಹಜವಾದ ಗುಣ. ಹೀಗಾಗಿಯೋ ಏನೋ ಲಕ್ಷ್ಮೀಶನು ಭದ್ರಾವತಿಯನ್ನು 'ಈಗಳೀ ನಗರಂ ಮಹೀಲಲನೆಗಾಸ್ಯಾಬ್ಜ | ಮಾಗಿರ್ಪುದೆತ್ತಲುಂ ಗಗನದೆಡೆಗೇಳ್ವಬಹು | ಯಾಗಧೂಮಂಗಳೆಂಬಾ ಲೋಲ ನೀಲಾಳಕಾವಳಿಯ ಚೆಲ್ವಿನಿಂದೆ' (೩-೧೪) ಎಂದು ವರ್ಣಿಸಿದ್ದಾನೆ.

ಮೇರು ಗಿರಿಯಂ ಜಱಿವ ಕಾಂಚನದ ಗೋಪುರಂ
ತೋರ ಮೊಲೆ, ರಾಜಮಾರ್ಗಂ ಬಾಹುಲತೆ, ನೃಪಾ
ಗಾರಂ ಮುಖಾಂಬುಜಂ, ಚಿತ್ರಿತ ಪತಾಕೆಗಳ್ಚಲಿಸುವಳಕಾವಳಿಗಳು ||
ತೋರಣಂ ಮಣಿಹಾರಮೆಸೆವ ಕೋಟಾವಲಯ
ಮಾರಾಜಿಪಂಬರಂ ಪರಿಖೆ ಮೇಖಲೆ ಗೃಹ ಸು
ಧಾರೋಚಿ ದರಹಾಸಮಾಗಲಾ ನಗರಿ ಚೆಲ್ವಿನ ನಾರಿಯಂತಿರ್ದುದು || (೧೭-೮)

ಎಂದು ಕವಿಯು ಮಣಿಪುರವನ್ನು ವರ್ಣಿಸಿದ್ದಾನೆ.

ಸ್ತ್ರೀಯ ಅಂಗಾಂಗಗಳನ್ನು ನಗರದ ಅಂಗಾಂಗಗಳಿಗೆ ಉಪಮಾನವಾಗಿ ಬಳಸುವ ರೀತಿಯು ಲಕ್ಷ್ಮೀಶನದು ಎಂದು ನಾವು ಹೇಳಬಹುದು. ಸಂ. ೩೦, ಪ. ೪ರಲ್ಲಿ—

ತಳಿರಡಿಗೆ, ತೊಂಡೆವಣ್ದುಟಿಗೆ, ತಾವರೆ ಮೊಗಕೆ,
ಬೆಳಗಾಯಿ ಮೊಲೆಗೆ, ನೈದಿಲೆ ಕಣ್ಗೆ, ಬಾಳೆ ತೊಡೆ,
ಗೆಳವಳ್ಳಿ ಮೈಗೆ, ಸಂಪಗೆ ನಾಸಿಕಕ್ಕೆ, ಮಲ್ಲಿಗೆ ನಗೆಗೆ, ಮೊಲ್ಲೆ ಪಲ್ಗೆ ||
ಅಳಿ ಕುಂತಳಕ್ಕೆ, ನವಿಲ್ಮುಡಿಗಂಚೆ ನಡೆಗೆ, ಕೋ

ಗಿಲೆ ಗಿಳಿಗಳಿಂಚರಕೆ ಸೋಲ್ದವಯವಂಗಳೊ
ಳ್ನಿಲಸಿದುವು ಪೆಣ್ಗಳ್ಗೆ ಸೋಲದವರಾರೆನಲ್ಕಡೆತಂದರಂಗನೆಯರು ॥

ಎಂಬುದು ಭರತೇಶನ 'ಸ್ಮರಗಾರು ಸೋಲರೈ ಹೆಣ್ಣಬಿಟ್ಟಿವೆ ನಾವು' ಎಂಬ ಮಾತಿನ ನೆನಪನ್ನು ತಂದುಕೊಡುತ್ತದೆ. ರುದ್ರಭಟ್ಟನೂ ಪುರವರ್ಣನೆಯನ್ನು ಮಾಡುವಾಗ 'ಮನಂಗೊಳಿಸುತಿರ್ಪುವು ಭೂವನಿತಾ ವಿಭೂತಿವೊಲ್' ('ಜಗನ್ನಾಥ ವಿಜಯ', ೨-೪) ಎಂದು ವರ್ಣಿಸಿದ್ದಾನೆ.

ನಸುನಗೆಯೊಳರೆವಿರಿದ ಮಲ್ಲಿಗೆಯನುೞಿ ಪೊಳೆವ
ದಶನದೊಳ್ಕುಂದಮಂ ಮೊಗದೊಳರವಿಂದಮಂ
ಮಿಸುಪನಳಿತೋಳೊಳ್ಶಿರೀಷ ಮಾಲೆಯನೆಸೆವನಾಸದೊಳ್ಸಂಪಗೆಯನು ||
ಎಸಳ್ಗಣ್ಣೊಳುತ್ಪಲವನುಗುರ್ಗಳೊಳ್ಕೇತಕಿಯ
ನೊಸೆದಿರಿಸಿಕೊಂಡುಳಿದಲರ್ಗಳಂ ಮಾರ್ಪವೊ
ಲ್ಕುಸುಮದ ಪಸರದೊಳೊಪ್ಪಿದರಲ್ಲಿ ಪೂವಡಿಗವೆಣ್ಗಳದನೇವೇಳ್ವೆನು || (೬-೧೬)

ಎಂಬ ಪದ್ಯದಲ್ಲಿ ಒಂದೊಂದು ಹೂವನ್ನು ದೇಹದ ಅಂಗವಾಗಿ ರೂಪಣ ಮಾಡಿದ್ದಾನೆ ಲಕ್ಷ್ಮೀಶ. ಸುಂದರವಾದ ಹೂವುಗಳೆಂದರೆ ತನ್ನ ದೇಹದ ಅಂಗಾಂಗಗಳೆಂದು ತಿಳಿದ ಆ ಹೂವಾಡಗಿತ್ತಿಯರು ಆ ಹೂವುಗಳನ್ನು ಮಾರುವುದು ಸಾಧ್ಯವೇ? ಆದುದರಿಂದ ಸುಂದರವಾದ ಮಲ್ಲಿಗೆ, ಅರವಿಂದ, ಶಿರೀಷ, ಸಂಪಗೆ, ಉತ್ಪಲ ಮತ್ತು ಕೇತಕಿ ಹೂವುಗಳನ್ನು ಇಟ್ಟುಕೊಂಡು **ಉಳಿದ ಹೂವು**ಗಳನ್ನು ಮಾರಿದರು ಎಂದು ಕವಿಯು ವರ್ಣಿಸಿರುವಲ್ಲಿ ಚಮತ್ಕಾರವಿದೆ.

ನಿಸರ್ಗದಲ್ಲಿಯ ಸೂರ್ಯ, ಚಂದ್ರ, ಬೆಳುದಿಂಗಳು, ರಾತ್ರಿ, ಗಾಳಿ, ಹೂ, ಮೋಡ, ಮಳೆ, ಇಂದ್ರಧನುಷ್ಯ, ನದಿ, ಸಮುದ್ರ ಮೊದಲಾದ ಉಪಮಾನಗಳನ್ನೂ ಕವಿ ಲಕ್ಷ್ಮೀಶನು ಹೆಚ್ಚಾಗಿ ಬಳಸುತ್ತಾನೆ. ಹೀಗೆ ನಿಸರ್ಗದಲ್ಲಿಯ ಉಪಮಾನಗಳನ್ನು ಆರಿಸುವುದು ಕವಿ ಲಕ್ಷ್ಮೀಶನ ಒಂದು ವೈಶಿಷ್ಟ್ಯವಾಗಿದೆ.

ಎಂಟನೆಯ ಸಂಧಿಯ ಪ್ರಾರಂಭಕ್ಕೆ ವಸಂತ ಋತುವಿನ ವರ್ಣನೆಯು ಬರುತ್ತದೆ. ಚೈತ್ರ ಪೌರ್ಣಿಮೆಗೆ ಯಜ್ಞಾಶ್ವವು ಪರಿಭ್ರಮಣಕ್ಕೆ ಹೊರಡಲಿದೆ ಎಂಬ ಸೂಚನೆಯನ್ನು :

ಮಿಱುಗುವ ತಳಿರ್ದೋರಣಗಳಂ ಕಟ್ಟಿಸುತೆ
ಮಱಗೋಗಿಲೆಗಳ ಬಾಯ್ಗಳ ಬಲಿದ ಬಂಧನದ
ಸೆಱೆಗಳಂ ಬಿಡಿಸುತ್ತೆ ತುಂಬಿಗಳ ದಳಕೆ ಕಮ್ಮಲರ್ಗಳಂ ಸೂಱೆವಿಡುತೆ ||
ಕಿಱುವೆಲರೊಳೆತ್ತಲುಂ ಸಾಱೆಸುತೆ ವಿರಹಿಗಳ
ನೆಱಗಿಸುತೆ ಜೊನ್ನದ ಜಸಂ ಪೆರ್ಚೆ ಮಧುನೃಪಂ
ಪೊಱಮಟ್ಟು ಮಾಗಿಯಂ ಮುದುಗಿಸಿ ಸಮಸ್ತವನ ರಾಷ್ಟ್ರಮಂ ಕೈಕೊಂಡನು ||
(೮-೩)

ಎಂಬ ಪದ್ಯದಲ್ಲಿ ಚೈತ್ರಮಾಸವನ್ನು ಒಬ್ಬ ಜಯಶಾಲಿಯಾದ ರಾಜನಿಗೆ ಹೋಲಿಸಿ ಅಭೇದವನ್ನು ಹೇಳಿ ರೂಪಕದಿಂದ ಬಣ್ಣಿಸಲಾಗಿದೆ.

ತುಂಗನವ ಚಿತ್ರಮಯ ಸುಪ್ರಭಾಸುರ ಕಾರ್ಮು
ಕಂಗಳಿಂ ಸುರಕಾರ್ಮುಕಂಗಳಂ ವಿವಿಧ ವಾ
ದ್ಯಂಗಳ ಗಭೀರ ಘನಘೋಷಂಗಳಿಂದೆ ಘನಘೋಷಂಗಳಂ ನೆಗಳ್ದ ||
ಸಂಗೀತ ನೃಪಾಲ ವಾಹಿನಿಗಳಿಂ ವಾಹಿನಿಗ
ಳಂ ಗೆಲ್ದು ವೀರ ಪಾಂಡವ ಸೈನ್ಯ ಸಾಗರಂ
ಕಂಗೊಳಿಪ ಕಾರ್ಗಾಲದಂತೆಸೆಯೆ ಪಾಜಿ ಮಣಿಪುರಕಾಗಿ ನಡೆತಂದುದು|| (೧೭–೫)

ಸ್ಫುರದುತ್ಕಟಾಕ್ಷ ಚಂಚಲದಿಂದೆ ಚಾರು ಪೀ
ವರ ಪಯೋಧರದಿಂದೆ ಪರಿವೃತ ಸುಮೇಖಲಾ
ತರಳ ಸತ್ಕಲ ಕಿಂಕಿಣೀ ಘನಸ್ವನದಿಂದೆಸೆವ ಕಂಕಣಂಗಳಿಂದೆ ||
ಸರಸತರ ಲಾವಣ್ಯಪೂರ ಪ್ರವಾಹದಿಂ
ಭರಿತ ಕಬರೀ ಬರ್ಹಿ ಲೀಲೆಯಿಂ ಮಳೆಗಾಲ
ದಿರವನೆಚ್ಚಱಿಪರಸಿಯಂ ಕಂಡು ರಾಮನ ಮನಶ್ಚಾತಕಂ ನಲಿದುದು ||
(೧೮–೨೭)

ಹೇಮಾಂಬರಂ ಲಲಿತಕಾಂತಿ ಹೊಳೆಹೊಳೆವ ಸೌ
ದಾಮಿನಿವೊಲಿರೆ ಪೊರೆದ ಕರುಣರಸಮೊಸರ್ವ ಧಾ
ರಾಮಯದ ಮಳೆವೊಲಿರೆ ನುಡಿವ ಗಂಭೀರ ವಾಕ್ಯಂ ಕೂಡೆ ಮೊಳಗುವೊಲಿರೆ ||
ಕೋಮಲಶ್ಯಾಮಲಾವಣ್ಯ ತನು ಮುಂಗಾರ
ಜೀಮೂತದೊಡ್ಡಿನವೊಲಿರೆ ಪಿರಿದು ನಲಿಯದಿಹ
ನೇ ಮಯೂರಧ್ವಜಂ ಪೇಳೆನಲ್ಕೃಷ್ಣನಂ ಕಂಡು ಪುಳಕಿತನಾದನು || (೨೬–೯)

ಈ ಮೂರು ಪದ್ಯಗಳಲ್ಲಿ ರೂಪಕ ಅಲಂಕಾರವಿದೆ. ಮೊದಲನೆಯ ಪದ್ಯದಲ್ಲಿ 'ವೀರ ಪಾಂಡವ ಸೈನ್ಯ ಸಾಗರ' ಎಂಬ ಉಪಮೇಯಕ್ಕೆ 'ಕಾರ್ಗಾಲದ' ಎಂಬ ಉಪಮಾನ ವನ್ನು ಕವಿಯು ಕೊಟ್ಟಿದ್ದಾನೆ. ಎರಡನೆಯ ಪದ್ಯದಲ್ಲಿಯೂ 'ಮಳೆಗಾಲದಿರವ' ಎಂಬ ಉಪಮಾನವನ್ನೇ ಕೊಟ್ಟಿದ್ದಾನೆ. ಮೊದಲನೆಯ ಪದ್ಯದಲ್ಲಿ ಕಾರ್ಗಾಲಕ್ಕೆ ವರ್ಣನೆಯ ಸ್ಥಾನವಿದ್ದರೆ ಎರಡನೆಯ ಪದ್ಯದಲ್ಲಿ ಮಳೆಗಾಲದಿರವು ಬಂದು ಸೀತೆಯ ಚಿತ್ರವನ್ನು ಚಿತ್ರಿಸುತ್ತದೆ. ಮಳೆಗಾಲದಿರವನೆಚ್ಚಱಿಪರಸಿ–ಸೀತೆ, ಅವಳನ್ನು ಕಂಡು ನಲಿವ ಮನಶ್ಚಾತಕ—ರಾಮ ಎಂದು ಹೇಳಿ ಶೃಂಗಾರದ ಛಾಯೆಯನ್ನು ಕವಿಯು ಮನೋಜ್ಞ ವಾಗಿ ತಂದಿದ್ದಾನೆ. ಮೂರನೆಯ ಪದ್ಯ—ಮಯೂರಧ್ವಜನ ಕಥಾನಕದ್ದು. ಮಯೂರ ಧ್ವಜ ಶ್ರೀಕೃಷ್ಣನನ್ನು ಕಂಡು ಆನಂದಭರಿತನಾಗುವನು. ಈ ಸನ್ನಿವೇಶವನ್ನು ವರ್ಣಿ ಸುವುದು ಹೇಗೆ? ಮಯೂರ ಅಂದರೆ ನವಿಲು. ನವಿಲು ಕುಣಿದಾಡುವುದು ವರ್ಷಾ ಕಾಲದ ಮೋಡಗಳನ್ನು ಕಂಡಾಗ. ಆದುದರಿಂದ ಇಲ್ಲಿ 'ಮುಂಗಾರ ಜೀಮೂತದೊಡ್ಡಿನ' ಉಪಮಾನಗಳನ್ನು ಕವಿಯು ಕೊಡುತ್ತಾನೆ.

ಈ ರೀತಿ ಒಂದೇ ಉಪಮಾನವನ್ನು ವಿವಿಧ ರೂಪದಲ್ಲಿ ಮಂಡಿಸಿ ಭಿನ್ನ ಭಿನ್ನ ಭಾವಗಳನ್ನು ಉದ್ದೀಪಿಸುವುದು ಲಕ್ಷ್ಮೀಶನ ನವನವೋನ್ಮೇಷಶಾಲಿನಿಯಾದ ಪ್ರತಿಭೆ. ಮೊದಲನೆಯ ಪದ್ಯ ಸೈನ್ಯದ ಭವ್ಯತೆಯನ್ನು ಮಳೆಗಾಲದ ಭವ್ಯತೆಯಿಂದ ಸೂಚಿಸಿದರೆ,

ಎರಡು-ಮೂರನೆಯ ಪದ್ಯಗಳು ವರ್ಷಾಕಾಲದ ಸುಖಮಯ ಸನ್ನಿವೇಶದೊಂದಿಗೆ ಕಥಾನಕದ ಎಳೆಗಳನ್ನು ಜೋಡಿಸುತ್ತದೆ.

ವರ್ಣನಾಪರ ಪದ್ಯಗಳಲ್ಲಿ ಎರಡು ಭೇದಗಳಿವೆ. ಯಾವುದೇ ಒಂದು ಕಾಲ, ದೃಶ್ಯವನ್ನು ಕುರಿತು ವರ್ಣಿಸುವುದೊಂದು; ವರ್ಣನೆಯ ಮುಖಾಂತರ ಪಾತ್ರ, ಕಥಾನಕವನ್ನು ಚಿತ್ರಿಸುವುದಿನ್ನೊಂದು. ಎರಡನೆಯ ಪ್ರಕಾರದ ವರ್ಣನೆಯು ಪಾತ್ರ, ಕಥಾನಕಗಳನ್ನು ಚಿತ್ರಿಸುವುದರಿಂದ ಆ ವರ್ಣನೆಗೆ ವಸ್ತುವಿನ ಬೆಲೆ ಬರುವಂತೆ ತೋಃರುತ್ತದೆ.

ನಾನಾ ವಸ್ತುಗಳ ವಿಸ್ತರವನೊಲಿದು ಪವ
ಮಾನಾತ್ಮಜಂ ನೋಡುತ್ತೈತರಲ್ಮುಂದೆ ಗಣಿ
ಕಾನಾರಿಯರ ಸದನ ಪಂಙ್ತಿಗಳಲೋವೆಗಳ ಸಾಲ್ಮೆಱೆದುವಿಕ್ಕೆಲದೊಳು ||
ಏನಾದೊಡಂ ಮುನಿಮೃಗಾವಳಿಯ ಬೇಂಟೆಯಂ
ತಾನಾಡಲೆಂದು ಸಿಂಗರದ ಪೆಣ್ಗಾಡಿನೊ
ಳ್ಮೀನಾಂಕ ನೃಪತಿ ಕಟ್ಟಿಸಿದ ಬೆಳ್ಳಾರಂಗಳಾಗಬೇಕೆಂಬಂತಿರೆ || (೬-೨೦)

ಎಂಬಲ್ಲಿ ನಾರಿಯರ ಸದನಪಂಕ್ತಿಗಳ ದೃಶ್ಯವನ್ನು ವರ್ಣಿಸಿ ಅದಕ್ಕೆ 'ಮೀನಾಂಕ ನೃಪತಿ ಕಟ್ಟಿಸಿದ ಬೆಳ್ಳಾರಂಗಳ' ದೃಶ್ಯದ ಉಪಮಾನದಿಂದ ಅಳೆಯುವ ರೀತಿಯನ್ನು ನಾವು ಕಾಣುತ್ತೇವೆ.

ಕೂರುಗುರ್ಗಳ ಗೆರೆಯ ಸೂತ್ರಬಂಧದೊಳೆಸೆವ
ತೋರಮೊಲೆಗಳ ಕುಂಭ ಸಂಸ್ಥಾಪನಂಗೆಯ್ದು
ಚಾರುತರಗಳರವದ ಮಂತ್ರದಿಂ ರೋಮಾಂಚನದ ಕುಶಾಗ್ರಂಗಳಿಂದೆ ||
ವೀರರತಿ ಸಾಮ್ರಾಜ್ಯ ಪಟ್ಟದೊಳ್ಬೆಮರ್ವನಿಯ
ವಾರಿಸೇಚನದಿಂದೆ ಕೃತಕೃತ್ಯನಾದಂತೆ
ರಾರಾಜಿಸಿದನವಂ ಮೆಲ್ಪಾಸಿನೊಳ್ಮೆಱೆವ ಮಣಿಮಂಚದಾಸನದೊಳು || (೧೧-೨೪)

ರತಿ ಸಾಮ್ರಾಜ್ಯ ಪಟ್ಟಾಭಿಷೇಕವನ್ನು ನಿಜವಾದ ರಾಜ್ಯಪಟ್ಟಾಭಿಷೇಕದ ರೂಪಣದಿಂದ ಕವಿಯು ಚಿತ್ರಿಸುತ್ತಾನೆ. ೬-೨೦ ಮತ್ತು ೧೧-೨೪ ಈ ಪದ್ಯಗಳಲ್ಲಿ ಕವಿಯು ರೂಪಿಸಿದ ಉಪಮೇಯ, ಉಪಮಾನ ಸಂಬಂಧವನ್ನು ನೋಡಿ ವಾಚಕನಿಗೆ ಆಶ್ಚರ್ಯವಾಗದೆ ಇರದು.

ಕವಿ ಲಕ್ಷ್ಮೀಶನ ರೂಪಣ ಕೌಶಲ, ವಿವಿಧ ರೀತಿಯಿಂದ ಈ ಕಾವ್ಯದಲ್ಲಿ ವ್ಯಕ್ತವಾಗಿದೆ. ಶಬ್ದದಿಂದ ಶಬ್ದಕ್ಕೆ ರೂಪಣ ಮಾಡುವುದು —ಬಲಸಮುದ್ರ, ಮುಖಚಂದ್ರ, ವೈರಿದ್ರುಮ, ರಾತ್ರಿವಧು, ಆಗ್ನೇಯಾಸ್ತ್ರ, ಬಡಬಾಗ್ನಿ ಜ್ವಾಲೆ, ಮುಗುಳ್ನಗೆ-ಮುಕ್ತಾಫಲ, ಆಕಾಶ-ಆನೆ, ವಾಯುರಾಜ; ಭಾವದಿಂದ ಭಾವಕ್ಕೆ ರೂಪಣ ಮಾಡುವುದು—ವರ್ಷಾಕಾಲದ ಆನಂದವೆಂಬ ಭಾವದಿಂದ ರಾಮನ ಮನಶ್ಚಾತಕ, ಮಯೂರಧ್ವಜನೆಂಬ ಮಯೂರ ನಲಿಯುವುದು. ದೃಶ್ಯದಿಂದ ದೃಶ್ಯಕ್ಕೆ ರೂಪಣ ಮಾಡುವುದು—ನಾರಿಯರ ಸದನ ಪಂಕ್ತಿಯನ್ನು ಮೀನಾಂಕನು ಕಟ್ಟಿಸಿದ ಬೆಳ್ಳಾರ; ರತಿಸಾಮ್ರಾಜ್ಯ ಪಟ್ಟಾಭಿಷೇಕವನ್ನು ರಾಜ್ಯ ಪಟ್ಟಾಭಿಷೇಕ.

ಶಬ್ದದಿಂದ ಶಬ್ದಕ್ಕೆ ರೂಪಿಸಿ ಅರ್ಥೋನ್ಮೀಲನ, ಭಾವದಿಂದ ಭಾವವನ್ನು ರೂಪಿಸಿ ರಸೋದ್ದೀಪನ, ದೃಶ್ಯದಿಂದ ದೃಶ್ಯವನ್ನು ರೂಪಿಸಿ ಚಿತ್ರೀಕರಣವನ್ನು ಸಾಧಿಸಿದ ಕವಿಯು, ರೂಪಲಂಕಾರವನ್ನು ಪಾತ್ರಚಿತ್ರಣಕ್ಕಾಗಿಯೂ ಉಪಯೋಗಿಸುವುದು ಅವನ ಹಿರಿಮೆಗೆ ನಿದರ್ಶನವಾಗಿದೆ. ರಾಮನ ಮನವನ್ನು ಚಾತಕವೆಂದು ರೂಪಿಸಿ, ಸೀತೆಯ ಬಗ್ಗೆ ಅವನಿಗಿರುವ ಪ್ರೀತಿಯನ್ನು ಸೂಚಿಸುವಂತೆ ಮಯೂರಧ್ವಜನ ಶ್ರೀಕೃಷ್ಣ ಭಕ್ತಿಯನ್ನು ವರ್ಷಾಕಾಲದ ಮೋಡದ ಮುಖಾಂತರ ಸೂಚಿಸುತ್ತಾನೆ. ಅಂದರೆ ಕವಿ ಲಕ್ಷ್ಮೀಶನ ಕಾವ್ಯದಲ್ಲಿಯ ರೂಪಕ ಅಲಂಕಾರವು ಒಂದು ಬಾಹ್ಯ ಅಲಂಕಾರದಂತಿರದೆ, ಕಥಾವಸ್ತುವಿನೊಂದಿಗೆ ಕೂಡಿಕೊಂಡು ಕಾವ್ಯದ ಆಂತರಿಕ ಸೌಂದರ್ಯವನ್ನು ಹೊರ ಹೊಮ್ಮಿಸಲು ಸಹಾಯಕವಾಗಿ ನಿಲ್ಲುತ್ತದೆ.

ಅನ್ನೆಗಂ ಗಗನಮಣಿ ಪಶ್ಚಿಮಾಂಗನೆಯ ಬೈತಲೆಯ
ರಂಗುಮಾಣಿಕದಂತೆ ಕಣ್ಗೆ ಕಾಣಿಸುತಿರ್ದುದಸ್ತಗಿರಿ ಮಸ್ತಕದೊಳು || (೮–೪೫)

ರಂಜಿಸುವ ಪಶ್ಚಿಮಾಚಲ ಕಿರಾತಂ ತೊಟ್ಟ
ಗುಂಜಾಭರಣಮೊ ಮೇಣ್ ಗಗನಾಂಬುಧಿಯ ತಡಿಯ
ಮಂಜು ವಿದ್ರುಮ ಲತೆಯೊ ಮೇಣಪರ ದಿಗ್ವಧುವಿನಂಗ ಕುಂಕುಮ ಲೇಪವೊ ||
ಅಂಜನೇಭದ ಸಿಂಧುರವೊ ಶಿವನ ಮಸ್ತಕದ
ಕೆಂಜಡೆಯೊ, ವಿಷ್ಣುಪದ ಪಂಕರುಹದರುಣತೆಯೊ
ಸಂಜೆವೆಣ್ಣುಟ್ಟ ರುಕ್ಮಾಂಬರವೊ ಪೇಳೆನಲ್ಕಾ ಬೈಗುಗೆಂಪೆಸೆದುದು || (೮–೪೬)

ಈ ಎರಡೂ ಪದ್ಯಗಳಲ್ಲಿ ಕವಿಯು ಸಂಜೆಗೆಂಪಿನ ರೂಪಣವನ್ನು ಮನೋಹರವಾಗಿ ಮಾಡಿದ್ದಾನೆ.

## ಶ್ಲೇಷ ಮತ್ತು ಇತರ ಅಲಂಕಾರಗಳು

ಒಂದು ಶಬ್ದಕ್ಕೆ ಅಥವಾ ಪದಕ್ಕೆ ಅನೇಕ ಅರ್ಥಗಳಾಗುತ್ತಿದ್ದರೆ ಅದಕ್ಕೆ ಶ್ಲೇಷ ಎನ್ನುವರು. ಶ್ಲೇಷದಲ್ಲಿ ಶಬ್ದಶ್ಲೇಷ, ಅರ್ಥಶ್ಲೇಷ ಎಂದು ಎರಡು ವಿಧ. ಶಬ್ದಶ್ಲೇಷದಲ್ಲಿ ಆವೊಂದು ನಿರ್ದಿಷ್ಟ ಶಬ್ದವನ್ನು ಬಿಟ್ಟು ಬೇರೊಂದನ್ನು ಸೇರಿಸಲು ಬರುವಂತಿಲ್ಲ. ಅರ್ಥಶ್ಲೇಷದಲ್ಲಿ ಬೇರೆ ಶಬ್ದಗಳು ಬರಬಹುದು; ಅರ್ಥಕ್ಕೆ ಬಾಧೆ ತಟ್ಟದಿದ್ದರಾಯಿತು. ಶಬ್ದಶ್ಲೇಷದಲ್ಲಿ ಸಭಂಗ, ಅಭಂಗ, ಉಭಯಾತ್ಮಕ ಎಂದು ಮೂರು ಭೇದಗಳಿವೆ. ಶ್ಲೇಷವು ಶಬ್ದಾಲಂಕಾರವೋ ಅರ್ಥಾಲಂಕಾರವೋ ಎಂಬ ಬಗ್ಗೆ ಭಿನ್ನಾಭಿಪ್ರಾಯದವರೂ ಇದ್ದಾರೆ. ಉದ್ಭಟನು ಶ್ಲೇಷವು ಅರ್ಥಾಲಂಕಾರವೆಂದೇ ಹೇಳುತ್ತಾನೆ; ಮಮ್ಮಟನು ಅರ್ಥಶ್ಲೇಷವುಳ್ಳುದು ಮಾತ್ರವೇ ಅರ್ಥಾಲಂಕಾರವೆಂದು ಎಣಿಸುತ್ತಾನೆ.[1]

ಭಿನ್ನಾಭಿಪ್ರಾಯಗಳೇನೇ ಇರಲಿ, ಶ್ಲೇಷವು ಕವಿಯ ಭಾಷಾಪ್ರಭುತ್ವದ, ಶಬ್ದಶಕ್ತಿಯ ನಿದರ್ಶನ. ಈ ಶಕ್ತಿಯುಳ್ಳ ಕವಿ, ಶಬ್ದಸಾಮ್ರಾಜ್ಯದ ಚಕ್ರವರ್ತಿಯಾಗಿದ್ದ

1 'ಕಾವ್ಯಾವಲೋಕನ'ದ ಟಿಪ್ಪಣಿ, ಪು. ೩೧೮–೩೧೯.

ಕವಿ, ಶಬ್ದಗಳಲ್ಲಿ ಜೀವಕಳೆಯನ್ನು ತುಂಬುತ್ತಾನೆ. ಈ ಜೀವಕಳೆ ಕವಿಯ ಕಾವ್ಯೋದ್ದೇಶವಾದ ಭಾವರಸ ಸೌಂದರ್ಯಗಳ ದರ್ಶನವನ್ನು ಮಾಡಿಸಲು ಸಹಕಾರಿಯಾಗುತ್ತದೆ. ಹೀಗೆ ಕವಿ ಲಕ್ಷ್ಮೀಶನು ತನ್ನ ಜೈಮಿನಿ ಭಾರತ ಕಾವ್ಯದಲ್ಲಿ ಶ್ಲೇಷಾಲಂಕಾರವನ್ನು ಎಷ್ಟರಮಟ್ಟಿಗೆ ಯಶಸ್ವಿಯಾಗಿ ಬಳಸಿದ್ದಾನೆ ಎಂಬುದನ್ನು ನೋಡೋಣ. ಅವನ ಶ್ಲೇಷಾಲಂಕಾರದ ಅನೇಕ ಪದ್ಯಗಳಲ್ಲಿ ಕೆಲವು ಮಾದರಿ ಪದ್ಯಗಳನ್ನೆತ್ತಿಕೊಂಡು ಇಲ್ಲಿ ವಿವೇಚಿಸೋಣ.

ಹರಿಯಂತೆ ಬಲಯುತಂ ಶಿವನಂತೆ ರಾಜಶೇ
ಖರನಬ್ಜಭವನಂತೆ ಚತುರಾನನಂ ಸರಿ
ದ್ವರನಂತೆ ರತ್ನಾಕರಂ ದಿವಾಕರನಂತೆ ನಿರ್ದೋಷನಿಂದ್ರನಂತೆ ||
ಪರಿಚಿತ ಸುರಭಿರನ್ಯುನಮೃತಾರ್ಚಿಯಂತೆ ವಿ
ಸ್ತರಿತಕುವಲಯನೆಂದು ಧರ್ಮಜನ ಧರೆ ಪೊಗಳು
ತಿರೆ ಬಳಿಕ ಹಸ್ತಿನಾವತಿಗೆ ವೇದವ್ಯಾಸ ಮುನಿಯೊಂದಿನಂ ಬಂದನು || (೨-೧೩)

ಇಲ್ಲಿ, ಹರಿ ಶಿವ ಬ್ರಹ್ಮ ಸಮುದ್ರ ಸೂರ್ಯ ಇಂದ್ರ ಚಂದ್ರರಿಗೆ ಹೋಲಿಸಿ ಧರ್ಮನನ್ನು ಹೊಗಳಲಾಗಿದೆ–ಶ್ಲೇಷದಿಂದ. ಈ ಹೋಲಿಕೆಯಲ್ಲಿ ಬಲಯುತ, ಚತುರಾನನ, ರತ್ನಾಕರ, ಕುವಲಯ ಇವು ಸಭಂಗ ಶಬ್ದಶ್ಲೇಷಗಳು. ಬಲ ಎಂಬುದಕ್ಕೆ ಸಾಮರ್ಥ್ಯ ಮತ್ತು ಬಲರಾಮ ಎಂಬ ಎರಡು ಅರ್ಥ. ಸುರಭಿ, ನಿರ್ದೋಷಿ ಅಭಂಗ ಶ್ಲಿಷ್ಟಪದಗಳಾಗಿವೆ.

ಚತುರಪದಗತಿಯ ಸರಸಧ್ವನಿಯ ವರ್ಣಶೋ
ಭಿತದಲಂಕಾರದ ಸುಲಕ್ಷಣದ ಲಾಲಿತ
ಶ್ರುತಿರಂಜನದ ವಿಶೇಷಾರ್ಥಸಂಚಿತದ ವಿಸ್ತಾರದಿಂ ಪೊಸತೆನಿಸುವ ||
ನುತಸತ್ಕವಿಪ್ರೌಢತರಸುಪ್ರಬಂಧದಂ
ತತಿಮನೋಹರಮೆನಿಪ ವಾಜಿಯಂ ಕಂಡು ಹ
ರ್ಷಿತನಾಗಿ ನೋಡುತಿರ್ದಂ ಕಲಾವಿದನಪ್ಪ ಮಾರುತಿ ಮಹೋತ್ಸವದೊಳು|| (೪-೮)

ಇಲ್ಲಿ ಸುಲಕ್ಷಣಯುಕ್ತವಾದ ಕಾವ್ಯಕ್ಕೂ ಅಶ್ವಕ್ಕೂ ಅನ್ವಯಿಸುವಂತೆ, ಚತುರ ಪದಗತಿ, ಸರಸಧ್ವನಿ, ಶ್ರುತಿರಂಜನೆ ಇತ್ಯಾದಿ ಪದಗಳಲ್ಲಿ ಶ್ಲೇಷವನ್ನು ಸಾಧಿಸಲಾಗಿದೆ. ಇದು ಅರ್ಥಶ್ಲೇಷಪದ್ಯ. ಹಯದ ವರ್ಣನೆಯ ಮೂಲಕ ಕಾವ್ಯಗುಣಗ್ರಹಣಮಾಡುವ ಕಾವ್ಯಚಮತ್ಕಾರ ಇಲ್ಲಿದೆ.

ಶಿವನಂತೆ ಗಂಗಾಹಿಮುಕರಾವಹಂ ರಮಾ
ಧವನಂತೆ ಗೋತ್ರೈಕಪಾಲಕಂ ಪಂಕರುಹ
ಭವನಂತೆ ಸಕಲಭುವನಾಶ್ರಯಂ ಶಕ್ರನಂತನಿಮಿಷನಿಕರಕಾಂತನು || (೬–೫)

ಇಲ್ಲಿ ಸಮುದ್ರವನ್ನು ಶಿವನಿಗೆ, ಕೃಷ್ಣನಿಗೆ, ಬ್ರಹ್ಮನಿಗೆ, ಇಂದ್ರನಿಗೆ ಶ್ಲಿಷ್ಟಶಬ್ದ ಅಥವಾ ಶಬ್ದಸಮುಚ್ಚಯದಿಂದ ಹೋಲಿಸಿ ಬಣ್ಣಿಸಲಾಗಿದೆ. ಶಿವನಲ್ಲಿ ಗಂಗಾ (ನದಿ)+ ಹಿಮಕರ (ಚಂದ್ರ) ಸಮುದ್ರದಲ್ಲಿ ಗಂಗಾ (ಜಲ) + ಅಹಿ (ಹಾವು) + ಮಕರ (ಮೊಸಳೆ)

ಇತ್ಯಾದಿ. ಈ ಸಮಸ್ತಪದ ರಚನಕೌಶಲವು ಕವಿ ಲಕ್ಷ್ಮೀಶನ ಸಭಂಗಶ್ಲೇಷಕ್ಕೆ ಒಂದು ಉತ್ತಮ ಉದಾಹರಣವಾಗಿದೆ.

ಅಭಿಲಾಷೆಯಂತಿರೆ ಸದಾನವಂ ಸಿರಿಯಂತೆ
ವಿಭವಾಸ್ಪದಂ ಕಲಾನಿಧಿಯಂತೆ ಮೃಗಧರಂ
ನಭದಂತೆ ಕುಜಯುತಂ ದ್ವಿಜನಂತೆ ವಂಶಪರಿಶೋಭಿತಂ ಸ್ವರ್ಗದಂತೆ ||
ಶುಭಸುರಭಿಸಂಭೃತಂ ರಣದಂತೆ ಶರವೃತಂ
ಸಭೆಯಂತೆ ಚಿತ್ರಪತ್ರಾನ್ವಿತಂ ದಿನಕರ
ಪ್ರಭೆಯಂತೆ ಪುಂಡರೀಕೋಲ್ಲಾಸಕರವಾಗಿ ತಚ್ಛೈಲಮೆಸೆದಿರ್ದುದು || (೧೦–೫)

ನಿರುತಂ ಕುಮುದಶೋಭಿ ನೈರುತ್ಯದಂತೆ ವಾ
ನರಸೈನ್ಯದಂತೆ ಕಮಲೋದರೋದ್ಭಾಸಿ ಭಾ
ಸುರಶುಕ್ಲಪಕ್ಷದಂತಹಿತಲ್ಪದಂತೆ ಕವಿಸೇವಿತಂ ಗಗನದಂತೆ ||
ಧರಣಿಪಾಲಯದಂತೆ ಸುಮನೋಹರಂ ನಿಶಾ
ಚರವಂಶದಂತೆ ಮಾಲಾಕಾರಜನದಂತೆ
ಹರಿಜನ್ಮಭೂಮಿ ಗೋಕುಲದಂತೆ ವನದಂತೆ ತತ್ಸರಂ ಕಂಗೊಳಿಸಿತು || (೧೫–೧೧)

ವರನೀಲಕಂಠನೃತ್ಯದಿನಂಧಕಾಸುರಸ
ಮರಧರಣಿಯಂ ಕುವಲಯಾನಂದಕರದ ಘನ
ಪರಿಶೋಭೆಯಿಂದೆ ಚಂದ್ರೋದಯವನಾಲೋಕಚಂಚಲೋದ್ಭಾಸದಿಂದೆ ||
ತರುಣಿಯ ಕಟಾಕ್ಷಮುಂ ರಾಜಹಂಸಪ್ರಭಾ
ಹರಣದಿಂ ಪರಶುರಾಮಪ್ರತಾಪವನಧಿಕ
ತರವಾಹಿನೀಘೋಷದಿಂದೆ ನೃಪಯಾತ್ರೆಯಂ ಪೋಲ್ತು ಕಾರೆಸೆದಿರ್ದುದು|| (೧೭–೩)

ಎಂಬ ವರ್ಣನೆಗಳಲ್ಲಿ ಶ್ಲಿಷ್ಟಪದಗಳು ಪಾಂಡಿತ್ಯಪೂರ್ಣವಾಗಿವೆ. 'ರಾಜಹಂಸಪ್ರಭಾ ಹರಣದಿಂ ಪರಶುರಾಮಪ್ರತಾಪವನು' ಎಂಬಲ್ಲಿ ಪರಶುರಾಮ ಚರಿತ್ರೆ ಗೊತ್ತಾಗದೆ ಶ್ಲೇಷ ತಿಳಿಯುವಂತಿಲ್ಲ. ಅದರಂತೆ 'ದ್ವಿಜನಂತೆ ವಂಶಪರಿಶೋಭಿತಂ' ಎಂಬ ಪರ್ವತ ವರ್ಣನೆಯಲ್ಲಿ ದ್ವಿಜಕ್ಕೂ ವಂಶಕ್ಕೂ ಇರುವ ಅನೇಕಾರ್ಥಗಳು ಓದುಗನಿಗೆ ಗೊತ್ತಿರದೆ ಶ್ಲೇಷ ತಿಳಿಯದು. ಸರೋವರವರ್ಣನೆಯಲ್ಲಿ ಎರಡಲ್ಲ ಮೂರು ಶ್ಲೇಷಗಳನ್ನಿಟ್ಟಿರುವುದರಿಂದ ಕ್ಲಿಷ್ಟವಾಗಿದೆ. ಒಟ್ಟಿನಲ್ಲಿ ಕವಿ ಲಕ್ಷ್ಮೀಶನ ಶ್ಲೇಷಗಳಲ್ಲಿ ಸಾರಳ್ಯವಿರುವಂತೆ ಅಲ್ಲಲ್ಲಿ ಕ್ಲಿಷ್ಟತೆಯೂ ತಲೆಯೆತ್ತಿರುವುದನ್ನು ಕಾಣುತ್ತೇವೆ. ಕವಿಯವಾಣಿ ಪ್ರಾಸಾದಿಕವಾದಾಗ ಅಕ್ಲಿಷ್ಟಶ್ಲೇಷಗಳು ತಾವಾಗಿಯೇ ಹರಿದುಬರುತ್ತವೆ ಎಂದು ಹೇಳಬಹುದು. ಶ್ಲೇಷವನ್ನು ಸಾಧಿಸುವಲ್ಲಿ ಕವಿ ತನ್ನ ಪಾಂಡಿತ್ಯದ ಆಶ್ರಯವನ್ನು ಎಷ್ಟೋ ಸಲ ಪಡೆಯುತ್ತಾನೆ. ಆದುದರಿಂದ ಇವನ ಶ್ಲೇಷಗಳು ಪಂಡಿತರ ಮನವೊಲಿಸಿದಷ್ಟು ಸಾಮಾನ್ಯರ ಮನಕ್ಕೆ ಹಿಡಿಸುವುದಿಲ್ಲ.

ಅಲಂಕಾರಗಳಲ್ಲಿ 'ಸ್ವಭಾವೋಕ್ತಿ', 'ವಕ್ರೋಕ್ತಿ' ಎಂಬ ಎರಡು ಸ್ಥೂಲಭೇದಗಳನ್ನು ಮಾಡಿಕೊಳ್ಳಬೇಕು. ವಸ್ತುಸಿದ್ಧವಾದ ಸೂಕ್ಷ್ಮವರ್ಣನೆಗಳಿಂದಲೇ ಸೌಂದರ್ಯ ಜನಿಸಿ ಸ್ವಭಾವೋಕ್ತಿಯೆನಿಸಿದರೆ, ಅಲೌಕಿಕವಾದ ಕವಿ ಕಲ್ಪನೆಯಿಂದ ಸೌಂದರ್ಯ

ವನ್ನುಂಟುಮಾಡುವುದು ವಕ್ರೋಕ್ತಿಯೆನಿಸುತ್ತದೆ.

ಓಡಿದುವು ಪಕ್ಷಿಗಳ್ಗೂಡಿಂಗೆ ದೆಸೆಗಳಂ
ನೋಡಿದುವು ಘೂಕಂಗಳಳಿಗಳಂ ಸೆಱೆಗೈದು
ಹೂಡಿದುವು ಬಾಗಿಲಂ ಕಮಲಂಗಳರಲ್ದುವಿಂದೀವರಂಗಳ್ ನಭದೊಳು ||
ಮೂಡಿದುವು ತಾರೆಗಳ್ ಚಕ್ರವಾಕಂಗಳಂ
ಕಾಡಿದುವು ವಿರಹತಾಪಂಗಳಿಳೆಯೆಲ್ಲಮಂ
ತೀಡಿದುವು ಕಳ್ತಲೆಗಳಲ್ಲಿಗಲ್ಲಿಗೆ ಮನೆಮನೆಯ ಸೊಡರ್ ಕಣ್ಗೆಸೆದುವು|| (೪–೪೮)

ಎಂಬಲ್ಲಿ ಸೂರ್ಯಾಸ್ತವರ್ಣನೆಯ ಮೂಲಕ ಅನೇಕ ಪ್ರಾಣಿ–ವಸ್ತುಗಳ ವೃತ್ತಿಪ್ರವೃತ್ತಿಗಳನ್ನು ತಿಳಿಸಲಾಗಿದೆ.

ತೆಳುವುಡಿಯ ಮಳಲಿಡಿಯಲಿತ್ತಡಿಯ ತಳಗಡಿಯ
ಪೊಳೆ ನೆಱೆಯಲುಱೆಪೊರೆಯಲೊಳ್ದೊಱೆಯ ಬೆಳ್ನೊರೆಯ
ತೊಳಪೆಳೆಯ ಮಿಾನ್ಪೊಳೆಯಲಿರದೆಳೆಯಲೆಡೆಸೆಳೆಯ ತುಂತುರಿನ ತನಿಗೆದರಿನ ||
ಸುಳಿಸುಳಿಯ ಸವ್ವಳಿಯ ಬೊಬ್ಬುಳಿಯ ಕಡಲುಳಿಯ
ಜಳಚರದ ತರತರದ ಶೀಕರದ ಭೀಕರದ
ತುಳಗಂಗೆ ಸುತರಂಗೆ ನೋಳ್ಪಂಗೆ ಸಲೆಕಂಗೆಸೆದಳಂದು ದಿವಿಜಸಿಂಧು || (೯–೨೪)

ಗಂಗಾವರ್ಣನೆಯಲ್ಲಿಯೂ ಸ್ವಭಾವೋಕ್ತಿ ಅಲಂಕಾರವಿದೆ. ಆದರೂ ಸಾಮಾನ್ಯವಾಗಿ ಹೇಳುವುದಾದರೆ ಲಕ್ಷ್ಮೀಶನ ಕಾವ್ಯದಲ್ಲಿ ಸ್ವಭಾವೋಕ್ತಿಯ ಪ್ರಮಾಣ ಕಡಿಮೆ.

ಒದಗದಿನ್ನುಂ ಮುರಾರಿಯ ಸಮರಮರ್ಜುನನ
ಕದನಂ ಪ್ರವರ್ತಿಸದು ಪ್ರದ್ಯುಮ್ನನಾಹವಂ
ಮೊದಲೆ ತಲೆದೋಱಿತಿಂದೂರೊಳೆಂದೊರ್ವಳೀ ಪೊಸವಾರ್ತೆಯಂ ಪೇಳಲು ||
ಚದುರೆ ಮತ್ತೊರ್ವಳಿದು ಜಗದೊಚ್ಚರಿಯೆ ಹರೆ
ಯದರ ಕೈಮುಂಚುವುದು ವರಸಂಗರಂಜಿತವ
ಹುದು ವರ್ತಮಾನದೊಳ್ಜನಜನಿತಮಿಲ್ಲಿ ನೂತನದ ಮಾತೇನೆಂದಳು || (೧೦–೫೨)

ಎಂಬಲ್ಲಿಯ ವಕ್ರೋಕ್ತಿ ಸ್ವಭಾವೋಕ್ತಿಯನ್ನು ಮೀರಿ ನಿಲ್ಲುತ್ತದೆ. ಪ್ರದ್ಯುಮ್ನನ ಆಹವದ ವರ್ಣನೆಯನ್ನು ಸ್ವಭಾವೋಕ್ತಿ ಅಲಂಕಾರದಿಂದ ಬಿಚ್ಚಿ ತೋರಿಸದೆ ವಕ್ರೋಕ್ತಿ ಅಲಂಕಾರದಲ್ಲಿ ಮುಚ್ಚಿ ತೋರಿಸಿರುವುದರಿಂದ ವರ್ಣನೆಗೆ ಕಳೆಯೇರಿದೆ. ಯುದ್ಧಕ್ಕೆ ಹೊರಡುವ ಮೊದಲು ಸೈನಿಕರು ಸಂಭೋಗ ಮಾಡಿದರು ಎಂಬುದನ್ನು ಪ್ರದ್ಯುಮ್ನ(ಕಾಮ)ನಾಹವಂ ಎಂಬ ಪದದಲ್ಲಿ ಹೇಳಿಬಿಟ್ಟಿದ್ದಾನೆ ಕವಿ. ಯಾವಾಗಲೂ ಜವ್ವನಿಗರ ಕೈ ಮುಂದು ಎಂಬುದಕ್ಕೆ ಇದೇ ಸಾಕ್ಷಿ ಎಂದು ಇನ್ನೊಬ್ಬ ಚದುರೆ ಅರ್ಥವನ್ನು ಮುಚ್ಚಿಯೆ ಮಾತನಾಡುತ್ತಾಳೆ. ಇದು ವಕ್ರೋಕ್ತಿಯ ರೀತಿ. ವಕ್ರೋಕ್ತಿ ಉನ್ನತಮಟ್ಟಕ್ಕೆ ಏರಿದುದನ್ನು ಆದಿಕವಿ ಪಂಪನಲ್ಲಿ ಕಾಣುತ್ತೇವೆ; ಲಕ್ಷ್ಮೀಶನಲ್ಲಿ ಆ ಮಟ್ಟದ ವಕ್ರೋಕ್ತಿ ಕಾಣುವುದಿಲ್ಲ.

ಕುಟಿಲ ಚಂಚಲ ಕಠಿನ ಕೃಶ ಮಾಂದ್ಯಮೆಂಬಿವು
ತ್ಕಟಯೌವನಶ್ರೀವಿಲಾಸಿನಿಯರಳಕಾಳಿ

ಚಟುಲಸುಕಟಾಕ್ಷ ವಕ್ಷೋಜಾತ ಮಧ್ಯ ಗತಿ ವಿಲಾಸದೊಳಲ್ಲದೆ ||
ಘಟಿಸದು; ಮದಾವಸ್ಥೆ ನಿಗಳಬಂಧನದ ಸಂ
ಕಟ ಹರಿದ್ವೇಷ ಮತಿಹೀನತೆಗಳೆಂಬಿವಿಭ
ಘಟೆಯೊಳಲ್ಲದೆ ಸಲ್ಲದೆಲ್ಲಿಯುಂ ಧರ್ಮತನಯಂ ಪಾಲಿಸುವ ನೆಲದೊಳು || (೨–೭)

ಪರಿಸಂಖ್ಯಾಲಂಕಾರದ ಈ ಪದ್ಯದಲ್ಲಿ ಮೊದಲು ಕುಟಿಲ, ಚಂಚಲ, ಕಠಿನ ಇತ್ಯಾದಿ ಗುಣಗಳನ್ನು ಹೇಳಿ ಆಮೇಲೆ ಆ ಗುಣಗಳುಳ್ಳ ವಸ್ತುಗಳನ್ನು ಅದೇ ಕ್ರಮದಲ್ಲಿ ಹೇಳುವುದು ಒಂದು ಹೊಸಕ್ರಮ. ಸಾಮಾನ್ಯವಾಗಿ 'ಅಳಕಾಳಿಯಲ್ಲಿ ಕುಟಿಲತೆ, ಚಟುಲಸುಕಟಾಕ್ಷಕ್ಕೆ ಚಂಚಲತೆ' ಎಂದು ಕೂಡಿಸಿಯೆ ಸಹಜವಾಗಿ ಹೇಳುವ ಕ್ರಮ ಪೂರ್ವ ಕಾವ್ಯಗಳಲ್ಲಿ ಕಂಡುಬರುತ್ತದೆ.

ಪ್ರಾಚೀನಿತಂಬಿನಿಯ ಮುಖಬಿಂಬದೆಳನಗೆಯ
ರೋಚಿಗಳೊ ಪೆಚ್ಚುಗೆಯೊಳುಬ್ಬೆದ್ದ ಪಾಲ್ಗಡಲ
ವೀಚಿಗಳೊ ಮನ್ಮಥನ ಕೀರ್ತಿಯ ಮರೀಚಿಗಳೊ ನಿಜಕಾಂತನಂ ಕಾಣುತೆ ||
ನಾಚಿ ಬೆಳ್ಪೇರಿದಳೊ ರಾತ್ರಿವಧು ಚೆಲ್ಲಿದನೊ
ಭೂಚಕ್ರಕಂಗಜಂ ಬೇಳುವೆಯ ಬೂದಿಯಂ
ವಾಚಿಸುವೊಡರಿದೆನಲ್ಪಸರಿಸಿತು ಚಂದ್ರಕಿರಣಂಗಳೆಲ್ಲಾ ದೆಸೆಯೊಳು || (೨೬–೫)

ಎಂಬಲ್ಲಿ ಉತ್ಪ್ರೇಕ್ಷಾಮಿಶ್ರಿತ ಪರಿಕರ ಅಲಂಕಾರವಿದೆ.

ನಾಗಭೂಷಣನಾಗಿ ಶಿವನಲ್ಲ ಹರಿಗಿರ್ಕೆ
ಯಾಗಿ ಪಾಲ್ಗಡಲಲ್ಲ ಶಿಖಿನಿವಾಸಸ್ಥಾನಮಾಗಿ ನೈಪಥ್ಯಮಲ್ಲ || (೧೦–೬)

ಕಳಹಂಸಮಾಕೀರ್ಣಮಾಗಿರ್ದು ಕಾಳೆಗದ
ಕಳನಲ್ಲ ವಿಷಭರಿತಮಾಗಿರ್ದು ಸರ್ಪಸಂ
ಕುಳಮಲ್ಲ ಕುಮುದಯುತಮಾಗಿರ್ದು ಖಳರಂತರಂಗದಾಳಾಪಮಲ್ಲ || (೧೫–೧೪)

ಈ ವಿರೋಧಾಭಾಸ ಅಲಂಕಾರದಲ್ಲಿ ಒಗಟಿನ ರೀತಿಯನ್ನು ಕಾಣುತ್ತೇವೆ. ಈ ಬಗೆಯ ಪದ್ಯರಚನೆಯ ಕಡೆಗೆ ಲಕ್ಷ್ಮೀಶನ ಒಲವು ಇದ್ದಂತೆ ತೋರುತ್ತದೆ. ಒಗಟ ಹಾಕುವುದು ಒಗಟ ಒಡೆಯುವುದು ಜನಸಾಮಾನ್ಯರ ಒಂದು ಮನೋರಂಜನೆಯ ವಿಷಯವೇ ಆಗಿದೆ. ಒಗಟನ್ನೊಡೆದು ರಹಸ್ಯವನ್ನು, ಸತ್ಯವನ್ನು ತಿಳಿಯುವ ಹವ್ಯಾಸ ನಮ್ಮ ಜನಗಳಲ್ಲಿದೆ. ಇಂತಹ ಆಲಂಕಾರಿಕ ವರ್ಣನೆ ಕಾವ್ಯದಲ್ಲಿದ್ದರೆ, ಜನಗಳ ಈ ಕುತೂಹಲಪ್ರವೃತ್ತಿ ಅವರನ್ನು ಕಾವ್ಯಾಭ್ಯಾಸಕ್ಕೆ ತೊಡಗಿಸುತ್ತದೆ. ಅಂತಹ ಕಾವ್ಯವನ್ನು ಅವರು ಮೆಚ್ಚುತ್ತಾರೆ.

ಪೊಳೆವ ಮಿಂಚುಗಳೈಸೆ ತೇಜಿಗಳಿವಲ್ಲ ಬ
ಲ್ಮೊಳಗುಗಳಿವೈಸೆ ರಥಚಕ್ರಧ್ವನಿಗಳಲ್ಲ
ತೊಳಗುವಮರೇಂದ್ರಕಾರ್ಮುಕಮೈಸೆ ಪಿಡಿದಿರ್ದ ಶಾರ್ಙಧನುವಲ್ಲ || (೭–೫೧)

ಎಂಬಲ್ಲಿಯ ಅಪಹ್ನವ ಅಲಂಕಾರವೂ ವಿರೋಧಾಭಾಸದ ಕಾರ್ಯವನ್ನು ಮಾಡುತ್ತದೆ.

ಕೊಟ್ಟಿಗೆಯ ಕಾಮಧೇನುವನೊಲ್ಲದಳ್ತಿಯಿಂ
ಕಟ್ಟರಣ್ಯದ ಪುಲಿಯನಣಿಸಿ ಕರೆಯಲ್ಕೊಡೆಯ

ಕಟ್ಟುವೆಯಲಾ ತುರಗಮೇಧವೇಗೈವುದಾ ಹರಿಯ ಸಾನ್ನಿಧ್ಯಮಿರಲು ||
ಹುಟ್ಟಿತಿಲ್ಲವೆ ನಿನಗಱಿವು ಧರ್ಮಸೂನು ಮತಿ
ಗೆಟ್ಟಹನೆ ಶಿವ ಶಿವ ವೃಥಾಪರಿಭ್ರಮುಮೆ ನಿಮು
ಗಟ್ಟಿತೆಂದಮರೇಂದ್ರಸೂನುವಂ ಜಱಿದು ಸೌಭರಿ ನುಡಿದೊಡಿಂತೆಂದನು||(೧೦-೨೦)

ದೇವ ನಿನ್ನಂ ಪೆಸರಿಸಿದನೀಶನಾದಪಂ
ಸೇವಿಸಿದವಂ ಚತುರ್ಮುಖನಾಗಲುಳ್ಳವಂ
ಕಾವುದೆಂದ್ಯೆದೆ ಮಱಿವೊಕ್ಕವಂ ಜಗದೊಳಾಚಂದ್ರಾರ್ಕವಾಗಿ ಬಾಳ್ವ ||
ಶ್ರೀವಿಭವದಿಂ ಶಕ್ರಪದವಿಯಂ ಜಱಿದಪಂ
ಭೂವಲಯದೊಳ್ನಿಂದಿಸುವರುಂಟೆ ತರಣಿಯಂ
ಕಾವಳಂ ಮುಸುಕಿರ್ದೊಡೇನಪ್ಪುದೆಂದವಂ ಬಿನ್ನೈಸಿ ಕೈಮುಗಿದನು || (೧೮-೪೩)

ಎಂಬಲ್ಲಿ ಅಪ್ರಸ್ತುತಪ್ರಶಂಸಾಲಂಕಾರವಿದೆ. ನೀತಿಬೋಧೆಯನ್ನು ಪರ್ಯಾಯದಿಂದ ಮಾಡುವ ಕ್ರಮ ಅಪ್ರಸ್ತುತ ಪ್ರಶಂಸಾಲಂಕಾರದ ಲಕ್ಷಣ. ಲಕ್ಷ್ಮೀಶನು ಏನಾದರೊಂದು ನೀತಿಯು, ಉಪದೇಶದ, ತಿಳಿವಳಿಕೆಯ ಮಾತನ್ನು ಹೇಳುವ ಸಂದರ್ಭಗಳಲ್ಲಿ ಅಪ್ರಸ್ತುತ ಪ್ರಶಂಸಾಲಂಕಾರವನ್ನಿಟ್ಟು ಪದ್ಯಗಳನ್ನು ರಚಿಸುತ್ತಾನೆ.

ಕೆತ್ತ ಬಲ್ಗತ್ತಲೆಗೆ ತರಣಿ ಮುಂಗಾಣದಿರೆ
ಪೊತ್ತುವೆಳಗಂ ಬೇಱಿ ತೋರ್ಪರಾರ್ಬಿಡದೆ ಘ
ರ್ಮೋತ್ತರಕೆ ಮಾರುತಂ ಬೆಮರ್ದೊಡಾರ್ಬೀಸುವರ್ಬಳಿಕಾಲವಟ್ಟದಿಂದೆ ||
ಕೃತ್ರಿಮದ ವಿಷದ ಸೋಂಕಿಗೆ ಗರೂಡನಳವಳಿಯೆ
ಮತ್ತೆ ರಕ್ಷೆಗೆ ಮಂತ್ರಿಸುವರಾರು ಭೂಪ ನೀ
ನೊತ್ತುವನುತಾಪಕೆಡೆಗೊಟ್ಟೊಡಾರ್ಬಿಡಿಸುವರ್ಪೇಳೆಂದನಾ ಮುನಿಪನು|| (೨–೧೬)

ಎಂಬಲ್ಲಿ ಸಾಮಾನ್ಯದಿಂದ ವಿಶೇಷಕ್ಕೆ ಸಾಗುವ ಅರ್ಥಾಂತರನ್ಯಾಸಾಲಂಕಾರವಿದ್ದರೆ,

ಎಲವೊ ಖಳ ನೀನಱಿಯದಿರ್ದೊಡೇನಚ್ಯುತಂ
ತಿಳಿಯೆ ಗೋಪಾಲನಲ್ಲವೆ ಕಪಟರೂಪದಿಂ
ಮುಳಿದು ದುಷ್ಟರನೈದೆ ಶಿಕ್ಷಿಸದೆ ಮಾಣ್ದಪನೆ ನೋಣನೂಱಿ ಮದಗಜವನು ||
ಬಳಲಿಪುದು ಗಡ ದಿಟಂ ನಿನಗಸುರಕುಲಮಥನ
ನಳುಕುವನೆ ಶಿವ ಶಿವಾ ನಿನ್ನೊಡನೆ ಸೆಣಸುವಡೆ
ಬಲವಂತರಾವಲ್ಲ ನೋಡಿನ್ನು ಸಾಕೆನುತೆ ತೆಗೆದೆಚ್ಚನಿನಜಸೂನು || (೭–೬೦)

ಎಂಬಲ್ಲಿ ವಿಶೇಷದಿಂದ ಸಾಮಾನ್ಯಕ್ಕೆ ನಡೆವ ಅರ್ಥಾಂತರನ್ಯಾಸಾಲಂಕಾರವಿದೆ. ಎರಡೂ ವಿಧದ ಅರ್ಥಾಂತರನ್ಯಾಸಾಲಂಕಾರಗಳನ್ನು ಲಕ್ಷ್ಮೀಶನು ಪ್ರಯೋಗಿಸುತ್ತಾನೆ.

ಘುಲ್ಲಿಸುವ ಬೇಸಗೆಯ ಬಿಸಿಲಿಂದೆ ಮೂಜಗಂ
ತಲ್ಲಣಿಸಿತಿಳೆಯ ಕಾಹಿಳಿದು ಪಾತಾಳದಹಿ
ವಲ್ಲಭನ ಪೆಡೆವಣಿಯ ರುಚಿಗಳಾತಪದಂತೆ ಕಾಣಿಸದೆ ಮಾಣವೆನಲು || (೧೫–೨)

ತಂಡತಂಡದ ಭೂತವಿತತಿಗಳ್ತಲೆಗೆದರಿ
ಕೊಂಡು ಪೆರ್ಮರುಳಂತೆ ಬಹದುಷ್ಟಬುದ್ಧಿಯಂ
ಕಂಡು ತಾವತಿಪಾತಕಂಗಳಂ ಮಾಡಿದ ಪಿಶಾಚರಗ್ಗಳೆಯರೆಮ್ಮ ||

ಹಿಂಡೊಳಿವನವೊಲಾರುಮಿಲ್ಲಾವ ಪಾಪದು
ರ್ದ್ದಂಡವೋ ಹಿರಣ್ಯಕಶಿಪುವಿನೆದೆಯನುಱಿ ಬಗಿದ
ಚಂಡದೈವದ ಪೆಸರನುಸಿರುವನ ದೆಸೆಗಲ್ಲದಳುಕನಿವನೆನುತಿರ್ದುವು || (೩೧–೫೬)

ಎಂಬಂತಹ ಅತಿಶಯೋಕ್ತಿಯ ಅಲಂಕಾರಗಳೂ ಲಕ್ಷ್ಮೀಶನ ಕಾವ್ಯದಲ್ಲಿ ಇವೆ. ಕಾವ್ಯ ಲಿಂಗ, ಮೀಲಿತ, ಪ್ರತಿವಸ್ತೂಪಮೆ, ತದ್ಗುಣ, ಭ್ರಾಂತಿಯಲಂಕಾರದ ಬಳಕೆ ಇವನಲ್ಲಿ ತೀರ ಕಡಮೆ. ಅಲ್ಲಲ್ಲಿ ನಿದರ್ಶನ ಮತ್ತು ದೃಷ್ಟಾಂತ ಅಲಂಕಾರಗಳೂ ಕೆಲವು ಇವೆ.

ಒಟ್ಟಿನಲ್ಲಿ ಲಕ್ಷ್ಮೀಶನ ಅಲಂಕಾರಪ್ರಜ್ಞೆಯ ಬಗ್ಗೆ ಹೇಳುವುದಾದರೆ ಅವನ ಶ್ಲೇಷ ಗಳಲ್ಲಿ ಪಾಂಡಿತ್ಯ, ಉತ್ಪ್ರೇಕ್ಷೆಯಲ್ಲಿ ಕಲ್ಪನಾವಿಲಾಸ, ರೂಪಕಗಳಲ್ಲಿ ಚಿತ್ರಶಕ್ತಿ, ಉಪಮೆಗಳಲ್ಲಿ ಸೌಂದರ್ಯದರ್ಶನದ ಕವಿದೃಷ್ಟಿ ಇವುಗಳ ಅನುಭವ ನಮಗಾಗುತ್ತದೆ. ಉಳಿದ ಅಲಂಕಾರಗಳು ಆ ಆ ಸ್ಥಾನದಲ್ಲಿ ಕಾವ್ಯಕಥೆಗೆ ಸಹಾಯಕವಾಗಿ ಕಾವ್ಯಶೋಭೆ ಯನ್ನು ಹೆಚ್ಚಿಸಿವೆ. ಅಲಂಕಾರಗಳೆಂದರೆ ಬಾಹ್ಯಾಲಂಕಾರಗಳು, ಅವು ಕಾವ್ಯಶೋಭೆ ಯನ್ನು ಬೆಳೆಸುವ ಸಾಧನಗಳು ಎಂಬುದೇ ಲಕ್ಷ್ಮೀಶನ ಅಭಿಪ್ರಾಯವಾಗಿರಬೇಕು, ಎಂದು ತೋರುತ್ತದೆ.

## ಅಷ್ಟಾದಶವರ್ಣನೆ

ಅಷ್ಟಾದಶವರ್ಣನೆ ಮಹಾಕಾವ್ಯಗಳಲ್ಲಿರಬೇಕಾದ ಪ್ರಮುಖವಾದ ಅಂಗ. ರಾಮಾ ಯಣಾದಿ ಆರ್ಷಮಹಾಕಾವ್ಯಗಳಲ್ಲಿಯೂ ಅಷ್ಟಾದಶವರ್ಣನೆ ಬರುತ್ತದೆ. ೭ನೆಯ ಶತ ಮಾನದ ಭಾಮಹನು ತನ್ನ 'ಕಾವ್ಯಾಲಂಕಾರ'ದಲ್ಲಿ ಅಷ್ಟಾದಶ ವರ್ಣನೆಗಳ ವಿವರವನ್ನು ಕೊಡುತ್ತಾ,

ಉದ್ಯಾನ ಸಲಿಲಕ್ರೀಡಾಮಧುಪಾನರತೋತ್ಸವೈಃ
ವಿಪ್ರಲಂಭೈರ್ವಿವಾಹೈಶ್ಚ ಕುಮಾರೋದಯವರ್ಣನೈಃ
ಮಂತ್ರದ್ಯೂತಪ್ರಯಾಣಾಜಿನಾಯಕಾಭ್ಯುದಯೈರಪಿ
ಅಲಂಕೃತಮಸಂಕ್ಷಿಪ್ತಂ ರಸಭಾವನಿರಂತರಂ ||

ಎಂದು ಹನ್ನೆರಡು ವರ್ಣನೆಗಳ ಹೆಸರುಗಳನ್ನು ಮಾತ್ರ ಉಲ್ಲೇಖಿಸಿದ್ದಾನೆ. ಕವಿರಾಜ ಮಾರ್ಗದಲ್ಲಿ ಹದಿನೆಂಟೂ ಹೆಸರುಗಳಿವೆ :

ಪುರಜನಪದ ಶೈಲಾದಿತ್ಯಚಂದ್ರೋದಯಾಸ್ತಾಂ
ತರಸಮೃಗಗಣಬ್ಯಾವರ್ಣನಾ ನಿರ್ಣಯಾರ್ಥಂ || (೨೧೧)

ಸಮುದಿತಕುಸುಮಾಮೋದೋದಯೋದ್ಯಾನಲೀಲಾ
ಕ್ರಮವಿಹಿತ ಜಲಕ್ರೀಡಾವಿನೋದಾದಿನೀತಂ
ಪ್ರಮದಮದನಮಾಧ್ವದ್ಯೌವನೋದ್ಯಾನರಾಮಂ
ರಮಣರಣಿ[ತ]ಗೋಷ್ಠೀಬಂಧಸಂಧಿ ಪ್ರಬಂಧಂ || (೨೧೨)

ವಿವಿಧವಿಭವಶೋಭಾರಂಭಲಂಭಪ್ರಲಂಭೋ
ದ್ಭವವಿಹಿತವಿವಾಹೋತ್ಸಾಹಸಾಕಲ್ಯಕಲ್ಪಂ

ಪ್ರವರನೃಪಕುಮಾರಾತ್ತೋದಯಾವಿಃಪ್ರಮೋದಾ
ಸವಸಮುದಿತಸೇವಾರಾತಿವೃತ್ತಾಂತವೃತ್ತಂ || (೨೧೩)

ನಯವಿನಿಮಯನಾನಾಮಂತ್ರದೂತಪ್ರಯಾಣಾ
ಕ್ಷಯಸಮಯ ವಿಳಾಸೋಲ್ಲಾಸಿ ಸಂಗ್ರಾಮಿತಾಂಗಂ
ಭಯ ವಿರಹಿತವೀರ್ಯೌದಾರ್ಯಗಂಭೀರಕಾರ್ಯಾ
ಶ್ರಯವಿಶಯವಿಶದಗುಣಶ್ರೀನಾಯಕೋತ್ಕರ್ಷವೇದ್ಯಂ || (೨೧೪)

— ಪರಿ. ೩, ಪು. ೧೦೫

ಇಲ್ಲಿ ಕ್ಲಿಷ್ಟತೆಯಿದೆ. ವರ್ಣನೆಗಳು ಯಾವುವೆಂಬುದು ಸುಲಭವಾಗಿ ತಿಳಿಯುವಂತಿಲ್ಲ. ಕ್ರಿ.ಶ. ೧೧೫೦ ರಲ್ಲಿ ಉದಯಾದಿತ್ಯನು ತನ್ನ ಅಲಂಕಾರಗ್ರಂಥದಲ್ಲಿ,

ಉದಧಿಪುರಾಧಿಪಸುತವುಂ
ತ್ರದೂತಗವುನಾಜಿವಿರಹಪರಿಣಯ ಸುರತ
ರ್ತು ದಿನೇಶಚಂದ್ರಮಧು ಕುಭ್ಯ
ದುದಕವನಸ್ಪತಿಯೆ ಕೃತಿಗೆ ಪದಿನೆಂಟಂಗಂ ||

ಎಂದಿದ್ದಾನೆ. ಇಲ್ಲಿ ಅನುಕ್ರಮವು ಸರಿಯಾಗಿಲ್ಲ. ೬ನೆಯ ಶತಮಾನದ ದಂಡಿಯ ಕಾವ್ಯಾದರ್ಶದಲ್ಲಿ,

ನಗರಾರ್ಣವಶೈಲರ್ತುಚಂದ್ರಾರ್ಕೋದಯವರ್ಣನೈಃ || (೧–೧೫)
ಉದ್ಯಾನಸಲಿಲಕ್ರೀಡಾ ಮಧುಪಾನ ರತೋತ್ಸವೈಃ
ವಿಪ್ರಲಂಭೈರ್ವಿವಾಹೈಶ್ಚ ಕುಮಾರೋದಯವರ್ಣನೈಃ || (೧-೧೬)

ಮಂತ್ರದೂತಪ್ರಯಾಣಾಜಿನಾಯಕಾಭ್ಯುದಯೈರಪಿ
ಅಲಂಕೃತಮಸಂಕ್ಷಿಪ್ತಂ ರಸಭಾವನಿರಂತರಂ || (೧–೧೭)

ಎಂದೂ ಸುಮಾರು ಕ್ರಿ.ಶ. ೧೨೪೫ರ ಮಲ್ಲಿಕಾರ್ಜುನನ 'ಸೂಕ್ತಿಸುಧಾರ್ಣವ'ಲ್ಲಿದ,

ವಾರಿಧಿ ಪರ್ವತಂ ಪುರಮಧೀಶ್ವರನುದ್ವಹನಂ ಕುಮಾರನಂ
ಭೋರುಹವೈರಿ ಮಿತ್ರರುದಯಂ ಋತು ನಂದನಮಂಬು ಸೀಧು ಕಾಂ
ತಾರತಿ ಚಿಂತೆ ಮಂತ್ರ ಚರಯಾನ ವಿರೋಧಿ ಜಯಂಗಳೆಂಬಿವಂ
ಸೂರಿಗಳಂಗಮೆಂದು ಕೃತಿಯೊಳ್ ಪದಿನೆಂಟುಮನೆಯ್ದೆ ಬಣ್ಣಿಪರ್ ||

ಎಂದು ಹೇಳುವಲ್ಲಿ ಸ್ಪಷ್ಟತೆಯಿದೆ. ಇವುಗಳ ಅನುಕ್ರಮದಲ್ಲಿ ನಿತ್ಯತೆ ಇದ್ದಿಲ್ಲವೆಂದು ತೋರುತ್ತದೆ. ಇಲ್ಲಿ ನಾವು ಮಲ್ಲಿಕಾರ್ಜುನನ 'ಸೂಕ್ತಿಸುಧಾರ್ಣವ'ವನ್ನು ಅನುಸರಿಸಿ ಲಕ್ಷ್ಮೀಶನ ಜೈಮಿನಿ ಭಾರತದಲ್ಲಿಯ ಅಷ್ಟಾದಶವರ್ಣನೆಗಳನ್ನು ಅನುಕ್ರಮವಾಗಿ ಪರಿಶೀಲಿಸಿದ್ದೇವೆ.

## ಸಮುದ್ರವರ್ಣನೆ

ಕಾವ್ಯದ ಪೀಠಿಕೆ ಮುಗಿದೊಡನೆ ಸಮುದ್ರದ ವರ್ಣನೆ ಬರುವುದು ಒಂದು ಕಾವ್ಯ ಸಂಪ್ರದಾಯವಾಗಿದೆ. ಆದರೆ ಜೈಮಿನಿ ಭಾರತದಲ್ಲಿ ಸಮುದ್ರವರ್ಣನೆ ೬ನೆಯ ಸಂಧಿಯ

ಆರಂಭದ ೮ ಪದ್ಯಗಳಲ್ಲಿದೆ. ಅದು ಭೀಮನು ದ್ವಾರಕೆಗೆ ಹೋದ ಸಂದರ್ಭ. ಸಂಸ್ಕೃತ ಜೈಮಿನಿ ಭಾರತದಲ್ಲಿಯಾದರೋ ಸಮುದ್ರದ ಮಾತೇ ಬರುವುದಿಲ್ಲ. ಅಲ್ಲಿಯ ಭೀಮನು ಅನೇಕ ಶಿಖರಗಳನ್ನು, ವೃಕ್ಷ ನದಿಗಳನ್ನು, ವಿವಿಧ ಪರ್ವತಗಳನ್ನು ದಾಟಿ ಹೋಗಿ ದ್ವಾರಕೆಯ ಹೊರವಳಯದ ಸರೋವರದಲ್ಲಿ ಸ್ನಾನಾದಿಕ್ರಿಯೆಗಳನ್ನು ತೀರಿಸಿಕೊಂಡು ಪುರಪ್ರವೇಶ ಮಾಡುವನು (ಅ. ೯. ೨೩-೩೨).

ಲಕ್ಷ್ಮೀಶನು ಸಮುದ್ರವನ್ನು ವರ್ಣಿಸುವಲ್ಲಿ ಸಾಮಾನ್ಯದೃಷ್ಟಿಯುಳ್ಳವನಾಗಿಲ್ಲ. ದ್ವಾರಕೆ ಸಾಮಾನ್ಯವಾದ ಪಟ್ಟಣವಲ್ಲ ಎಂದು ಅವನು ತೋರಿಸಬೇಕಾಗಿದೆ. ಹಾಗೆ ಅವನು ಸ್ಪಷ್ಟವಾಗಿ ಹೇಳದೆ ಸಾಗರದ ಬೃಹತ್ಸ್ವರೂಪದ ಸಾಕ್ಷಾತ್ಕಾರದಿಂದ ಆ ಪಟ್ಟಣದ ಅಸಾಮಾನ್ಯತೆಯನ್ನು ಸೂಚಿಸುತ್ತಾನೆ. ಆ ಪಟ್ಟಣವು ಕೂಡ ಒಂದು ಸಮುದ್ರವೇ ಆಗಿತ್ತು ಎಂದು ಹೇಳುತ್ತಾನೆ. ಇದರಿಂದ ಎಂಟು ಪದ್ಯಗಳಲ್ಲಿ ವರ್ಣಿತವಾದ ಮಹಾಸಾಗರದ ಭವ್ಯತೆಯನ್ನೆಲ್ಲ ದ್ವಾರಕೆಯಲ್ಲಿ ಆರೋಪಿಸುತ್ತಾನೆ. ಆ ಜನಸಂದಣಿಯ ಕಡಲಿನ ಚಿತ್ರವಿದು :

ಆ ಮಹಾಂಭೋಧಿಯಂ ನೋಡಿ ಹರ್ಷಿತನಾಗಿ
ಭೀಮಸೇನಂ ಬಳಿಕ ನಲವಿಂದೆ ದ್ವಾರಕೆಯ
ಸೀಮೆಗೆಯ್ತಂದು ನಗರದ್ವಾರಮಂ ಪೊಕ್ಕು ಬಿತೆ ರಾಜಮಾರ್ಗದೊಳಗೆ ||
ಸಾಮಜ ಗಿರಿಯ ಹಯತರಂಗದ ನೆರವಿದೊಱೆಯ
ಚಾಮರಶಫರಿಯ ಬೆಳ್ಗೊಡೆ ನೊರೆಯ ಭೂಷಣ
ಸ್ತೋಮ ಮಣಿಗಣದ ಕಳಕಳರವದ ಜನದಸಂದಣಿಯ ಕಡಲಂ ಕಂಡನು ||(೬-೯)

ಸಮುದ್ರವರ್ಣನೆಯನ್ನು ಗತಾನುಗತಿಕವಾಗಿ ಎಲ್ಲ ಕವಿಗಳೂ ಮಾಡಿರುತ್ತಾರೆ. ತಮ್ಮ ತಮ್ಮ ಪ್ರತಿಭೆಯನ್ನೂ ತೋರಿದ್ದಾರೆ. ಶೂದ್ರಕನು,

ಮಿಳಿರ್ವರುಣಧ್ವಜಂಗಳ ನೆೞಲ್ಗಳನೊಂದೆರೆಗೆತ್ತು ವಾರ್ಧಿಯೊಳ್
ಪೊಳೆವೆಳವಾಳೆಗಳ್ ಕರ್ದುಕೆ ಬಾಳೆಗಳಂ ತಿಮಿ ನುಂಗೆ ನುಂಗಿದಾ
ಗಳೆ ತಿಮಿಯಂ ತಿಮಿಂಗಿಳನಡಂಗುವಿನಂ ತವೆನುಂಗೆ ತತ್ತಿಮಿಂ
ಗಿಳಮುಮನಾ ತಿಮಿಂಗಿಳಗಿಳಂಗಳೆ ನುಂಗಿದುವೊಂದು ತಾಣದೊಳ್

—'ಕಾವ್ಯಸಾರಂ', ೭೬

ಎಂದು ವರ್ಣಿಸಿದ್ದಾನೆ. ಇಂತಹ ವರ್ಣನೆ ಹಲವು ಸಿಕ್ಕಬಹುದು. ಆದರೆ ಈ ಬಗೆಯ ವರ್ಣನೆಯಲ್ಲಿಯೇ ಲಕ್ಷ್ಮೀಶನು ತನ್ನ ಪ್ರತ್ಯುತ್ಪನ್ನಮತಿಯಿಂದ ಒಂದು ಅಸಾಧಾರಣ ಚಿತ್ರವನ್ನೇ ನಮ್ಮ ಕಣ್ಣೆದುರು ನಿಲ್ಲಿಸುತ್ತಾನೆ. ಸಮುದ್ರದೊಳಗಿನ ಚಪಲ ಚಂಚಲ ಮೀನುಗಳ ಸಂಚಲನದ ದೃಶ್ಯವನ್ನು ಅವನು ಹೀಗೆ ಚಿತ್ರಿಸಿದ್ದಾನೆ :

ಸುಳಿದೊಂದು ಮೀನ್ನುಂಗಿತಾ ಮೀನನಾ
ಗಳೆ ನುಂಗಿತೊಂದು ಮೀನಾ ಮೀನ ನುಂಗಿದುದು
ಬಳಿಕೊಂದು ಮೀನದಂ ಮತ್ತೊಂದು ಮೀನ್ನುಂಗಿತಾಮೀನ ನುಂಗಿತೊಂದು ||
ತೊಳಲುತೊಂದೊಂದನೊಂದಿಂತು ನುಂಗಲ್ಕಿಮಿಂ

ಗಿಳಿನೆಲ್ಲಮಂ ನುಂಗುತಿರ್ಪುದೆನೆ ಬೆದಱಿ ಮೀ
ನ್ಗಳಿ ತಿರುಗುತಿರ್ದುವೆಱಿಕೆಗಳೊಡನೆ ಮುಂಪೊಕ್ಕ ಗಿರಿಗಳೆಡೆಯಾಡುವಂತೆ ||(೬-೬)

ಇಂದ್ರನ ವಜ್ರಾಯುಧಕ್ಕಂಜಿ ಸಮುದ್ರವನ್ನು ಹೊಕ್ಕ ರೆಕ್ಕೆಯ ಬೆಟ್ಟಗಳೇ ಭಯದಿಂದ ಒಳಗೆ ಎಡೆಯಾಡುತ್ತಿರುವವೋ ಎಂಬಂತೆ ಒಂದಕ್ಕೊಂದು ಅಂಜಿದ ಮೀನುಗಳು ಸಂಚರಿಸುತ್ತಿದ್ದವು ಎಂದು ಹೇಳುವಲ್ಲಿ ವಾಚ್ಯೋತ್ಪ್ರೇಕ್ಷೆಯು ಅಲಂಕಾರವಿದೆ. ಪರ್ವತಗಳ ಹೋಲಿಕೆಯ ಮೂಲಕ ಮೀನುಗಳ ಬೃಹದಾಕಾರವನ್ನು ಸೂಚಿಸುವುದು ಕವಿಯ ಉದ್ದೇಶವಾಗಿದೆ. ಇದೇ ರೀತಿ, ತನ್ನಲ್ಲಿದ್ದ ಅಮೃತವನ್ನು ದೇವತೆಗಳು ಅಪಹರಿಸಿದರೆಂದು ಸಮುದ್ರವು ದುಃಖಪಡುತ್ತಿರುವುದೋ ಎಂಬಂತೆ ಅದರ ಮೊರೆತವನ್ನು ಬಣ್ಣಿಸುವಲ್ಲಿ ಸಮುದ್ರಮಥನದ ಕಥೆಯನ್ನು ಲಕ್ಷ್ಮೀಶನು ಉತ್ಪ್ರೇಕ್ಷೆಗೆ ಬಳಸಿಕೊಳ್ಳುತ್ತಾನೆ (೬-೧). ಇದೇ ಪದ್ಯದಲ್ಲಿ ಇಂದ್ರನ ವಜ್ರಾಯುಧದಿಂದ ತಪ್ಪಿಸಿಕೊಂಡು ಬಂದ ಪರ್ವತಗಳಿಗೆ ಆಶ್ರಯವೂ ಜಲಚರಗಳ ಸಂಚಾರಕ್ಕೆ ಮಾರ್ಗವೂ ನವರತ್ನರಾಶಿಗಳ ಆಗರವೂ ಆಗಿದೆ ಸಮುದ್ರವೆಂದು ಕವಿ ವರ್ಣಿಸಿದ್ದಾನೆ. ಅಲ್ಲದೆ,

ಮುನಿ ಮುನಿದು ಪೀರ್ದುದಂ, ರಾಜವಂಶಕುಠಾರ
ಕನ ಕನಲ್ಕೆಗೆ ನೆಲಂಬಿಟ್ಟುದಂ, ರಘುಜರಾ
ಮನ ಮನದ ಕೋಪದುರುಬೆಗೆ ಬಟ್ಟೆಗೊಟ್ಟುದಂ, ಬಡಬಾನಲಂ ತನ್ನೊಳು ||
ದಿನ ದಿನದೊಳವಗಡಿಸುತಿರ್ಪುದಂ, ಬಹಳ ಜಡ
ತನ ತನಗೆ ಬಂದುದಂ, ಭಂಗವೆಡೆಗೊಂಡುದಂ
ನೆನೆ ನೆನೆದು ನಿಟ್ಟುಸಿರ್ವಿಟ್ಟು ಪೊಯ್ವಂತುದಧಿ ಮಿಗೆ ಪೆರ್ಚುಗೆಯೊಳೆಸದುದು ||
(೬-೨)

ಎಂಬ ಪದ್ಯದಲ್ಲಿ ೧. ಅಗಸ್ತ್ಯಮುನಿ ಸಮುದ್ರವನ್ನು ಕುಡಿದ, ೨. ಪರಶುರಾಮನು ಸಮುದ್ರವನ್ನು ಹಿಂದೊತ್ತಿ ಸರಿಸಿ ಸ್ಥಳಮಾಡಿಕೊಂಡ, ೩ ರಾಮಚಂದ್ರನಿಗೆ ಲಂಕೆಗೆ ಹೋಗುವುದಕ್ಕೆ (ಸೇತುವೆ ಕಟ್ಟಲು) ದಾರಿಮಾಡಿಕೊಂಡ, ೪. ಬಡಬಾಗ್ನಿ ಸಮುದ್ರದಲ್ಲಿ ಯಾವಾಗಲೂ ಆರ್ಭಟಿಸುತ್ತಿರುವ ಸಂಗತಿಗಳನ್ನು ಕವಿ ಉತ್ಪ್ರೇಕ್ಷೆಗಾಗಿ ತೆಗೆದುಕೊಂಡಿದ್ದಾನೆ. ಇವೆಲ್ಲವನ್ನು ನೆನೆನೆನೆದು ಸಮುದ್ರವು ತನಗೆ ಜಡ(ಜಲ)ತ್ವವೂ ಭಂಗ (ತೆರೆ-ಸೋಲು) ಉಂಟಾಯಿತೆಂದು ನಿಟ್ಟುಸಿರುಬಿಡುತ್ತ ದಡಕ್ಕೆ ಅಪ್ಪಳಿಸುತ್ತಿತ್ತೆಂದು ವರ್ಣಿಸಿದ್ದಾನೆ. ಹೀಗೆ ಪೌರಾಣಿಕ ಕಥಾವಿಶೇಷಗಳನ್ನು ಆಲಂಕಾರಿಕವಾಗಿ ಬಳಸಿಕೊಂಡು ಕಾವ್ಯಸೌಂದರ್ಯವನ್ನು ಹೆಚ್ಚಿಸುವುದು ಕಥನಕುಶಲನಾದ ಲಕ್ಷ್ಮೀಶನ ವರ್ಣನ ವೈಶಿಷ್ಟ್ಯವೆಂದು ಹೇಳಬಹುದು.

ಚಿಪ್ಪೊಡೆದು ಸಿಡಿವ ಮುತ್ತುಗಳಲ್ಲದಿವು ಮುಗು
ಳ್ದುಪ್ಪರಿಸುವೆಳಮೀನ್ ಬಿದಿರ್ವ ಶೀಕರಮಲ್ಲ
ಮೊಪ್ಪುವ ಸುಲಲಿತ ಶಂಖದ ಸರಿಗಳಲ್ಲದಿವು ಬೆಳ್ನೊರೆಗಳೊಟ್ಟಿಲಲ್ಲ ||
ತಪ್ಪದೊಳಗಣ ರನ್ನವೆಳಗಲ್ಲದಿವು ತೊಡ
ರ್ದಿಪ್ಪ ಕೆಂಬವಳಮಲ್ಲಿವು ಪಯೋನಿಧಿಯ ಕೆನೆ
ಯೊಪ್ಪಮಲ್ಲದೆ ನೀರ್ಮೊಗೆಯಲಿಳಿವ ಮೇಘಂಗಳಲ್ಲೆಲಿನಿಸಿದುವು ಕಡಲೊಳು || (೬-೩)

'ಅಪಹ್ನುತಿ'[1] ಎಂಬ ಅಲಂಕಾರವುಳ್ಳ ಲಕ್ಷ್ಮೀಶನ ಈ ಪದ್ಯವು 'ಕಾವ್ಯಾವಲೋಕನ'ದಲ್ಲಿಯ,

ನೊರೆಯಿವಲ್ಲವು ತಳ್ತ ಶಂಖದ ಬಳ್ಳಿಗಳ್ ಬಡಬಾನಲಾಂ
ಕುರಮಿವಲ್ಲವು ರತ್ನದೀಧಿತಿಗಳ್ ತರಂಗಮಿವಲ್ಲವು
ದ್ಧುರ ಕುಳಾಚಳಪಙ್ಕ್ತಿಗಳ್ ಜಳಶೀಕರಂಗಳಿವಲ್ಲವಾ
ಪರೆದ ಮುತ್ತುಗಳೆಂಬ ಶಂಕೆಯನಾಗಿಕುಂ ಮಕರಾಕರಂ ||

—'ಕಾವ್ಯಾವಲೋಕನಂ', ೮೮೬[2]

ಎಂಬ ಪದ್ಯವನ್ನು ನೆನಪಿಗೆ ತರುತ್ತದೆ.

೬ನೆಯ ಸಂಧಿಯ ೪ನೆಯ ಪದ್ಯದಲ್ಲಿ, '"ಇಂದ್ರನಿಗೆ ಬೇಕಾದ ಎಲ್ಲ ವಸ್ತುಗಳನ್ನು ನಾನು ಕೊಡುವುದರಿಂದ, ನನ್ನವರಾದ ನಿಮ್ಮನ್ನು ಅವನು ನೋಯಿಸನು" ಎಂದು ಪರ್ವತಗಳನ್ನು ಸಂತಯಿಸಿ, ಅವುಗಳನ್ನು "ಭೂಭಾಗದಲ್ಲಿ ನಿರ್ಭಯವಾಗಿ" ಇರಿ ಎಂದು ಹೇಳಿ ಒಂದೊಂದನ್ನು ಸಮುದ್ರವು ದಂಡೆಗೆ ತಂದಿಳಿಸುತ್ತಿರುವಂತೆ' ಅದರ ತೆರೆಗಳು ಕವಿಗೆ ಕಾಣುತ್ತಿವೆ. ಈ ವರ್ಣನೆ ಕವಿ ಲಕ್ಷ್ಮೀಶನು ಕಡಲನ್ನು ಕಣ್ಣಾರೆ ಕಂಡಿದ್ದನೆಂಬುದನ್ನು ಮನವರಿಕೆ ಮಾಡಿಕೊಡುತ್ತಿದೆ.

ಕ್ರೂರ ಕರ್ಕಟಕಕಟಕಂ ಕಮಠಮಠಮಿಡಿದ
ನೀರಾನೆಗಳ್ನೆಗಳ್ದಿಡೆ ಮುದಮುದಯಿಪ ಶಾ
ಲೂರ ಕುಲರಾಜಿ ರಾಜಿಪಗೃಹಂ ನಿಬಿಡಗಂಡೂಪದ ಪದಂ ಪೆರ್ಚಿದ ||
ಘೋರ ಸಮುದಗ್ರದ ಗ್ರಾಹಭವಭವನಮುಂ
ಭೂರಿ ಭೀಕರಮಹಿ ತಿಮಿತಿಮಿಂಗಿಲ ಕ
ಠೋರತರರಾಜೀವ ಜೀವಪ್ರತತಿವಾಸವಾ ಸಮುದ್ರದೊಳೆಸೆದುದು || (೬–೭)

ಇಲ್ಲಿ ಲಕ್ಷ್ಮೀಶನು ಪವಣಿಸಿದ ಶಬ್ದಗಳ ಅಲಂಕಾರವು ಸಹಜಸುಂದರವಾಗಿದೆ. ಸಮುದ್ರದಲ್ಲಿ ಏಡಿ, ಆವೆ, ನೀರಾನೆ, ಕಪ್ಪೆ, ಎರುಬುಹುಳ, ಮೊಸಳೆ, ನೆಗಳೆ, ಸರ್ಪ, ತಿಮಿ, ತಿಮಿಂಗಲ, ರಾಜಮೀನ ಮೊದಲಾದ ಜೀವಿಗಳು ಇದ್ದುವು ಎಂಬುದನ್ನು ವರ್ಣಿಸುವುದು ಈ ಪದ್ಯದ ಉದ್ದೇಶವಾಗಿದೆ. ಆದರೆ ಆ ಪ್ರಾಣಿಗಳ ಹೆಸರುಗಳ ಮಾಲೆಯನ್ನು ಸುಮ್ಮನೆ ಪೋಣಿಸಿ ಕೊಡುವುದಿಲ್ಲ. ಇಲ್ಲಿ ಅಡಿಗಡಿಗೆ ಶಬ್ದದ್ವಿರುಕ್ತಿಯ ಅಲಂಕಾರದೊಡನೆ ಆ ಪ್ರಾಣಿಗಳನ್ನು ತಂದಿರುವುದರಿಂದ ಪದ್ಯವು ಸಮುದ್ರದ ಮೊರೆತವನ್ನು ಪ್ರತಿಧ್ವನಿಸುತ್ತದೆ. ಅಸಂಖ್ಯವಸ್ತುಗಳನ್ನೂ ಪ್ರಾಣಿಗಳನ್ನೂ ಒಳಕೊಂಡಿರುವ ಸಮುದ್ರವು ಅಲ್ಲೋಲಕಲ್ಲೋಲವಾಗುತ್ತಿರುವಾಗ ನಿಶ್ಶಬ್ದವಾಗಿರುವುದೆ? ಆ ಸಪ್ಪಳವನ್ನು, ಆ ಮೊರೆತವನ್ನು ಲಕ್ಷ್ಮೀಶನು 'ಕ್ರೂರಕರ್ಕಟಕಕಟಕಂ ಕಮಠಮಠಮಿಡಿದ' ಎಂಬ ಪದಶಯ್ಯೆಯಿಂದ ಸಾಧಿಸಿದ್ದಾನೆ.

---

1 ಒಂದನ್ನು ಅಲ್ಲಗಳೆದು, ಮತ್ತೊಂದನ್ನು ಸ್ಥಾಪಿಸುವುದು ಅಪಹ್ನುತಿ ಅಥವಾ ಅಪಹ್ನವ ಅಲಂಕಾರ– 'ಕಾವ್ಯಾವಲೋಕನ', ಪುಟ ೩೦೬.

2 'ಸೂಕ್ತಿಸುಧಾರ್ಣವ', ಪುಟ ೨೦.

ಒಟ್ಟಾರೆ, ಕವಿ ಲಕ್ಷ್ಮೀಶನ ಸಮುದ್ರವರ್ಣನೆಯಲ್ಲಿ ಸಹಜಸೌಂದರ್ಯವಿದೆ; ಪುರಾಣಕಥೆಗಳನ್ನು ಬಳಸುವ ಚಮತ್ಕಾರ ವೈಶಿಷ್ಟ್ಯವಿದೆ; ನವ್ಯಕಲ್ಪಕತೆಯಿದೆ ಎಂಬುದನ್ನು ಕಾಣುತ್ತೇವೆ.

## ಪರ್ವತವರ್ಣನೆ

ಅಷ್ಟಾದಶ ವರ್ಣನೆಗಳಲ್ಲಿ ಪರ್ವತದ ಸ್ಥಾನ ಎರಡನೆಯದಾಗಿದೆ. ಪರ್ವತದಲ್ಲಿರುವ ವಸ್ತುಗಳು, ಅದರ ನೆರೆಹೊರೆಯಲ್ಲಿ ಹರಡಿರುವ ಕಾಡು, ಆ ಕಾಡಿನಲ್ಲಿರುವ ಮೃಗಪಕ್ಷಿಸಂಕುಲ ಮತ್ತು ಕಿರಾತರು ಇತ್ಯಾದಿ ವರ್ಣನೆಗಳನ್ನು ಪರ್ವತವರ್ಣನೆ ಒಳಕೊಳ್ಳುತ್ತದೆ.

ಕನ್ನಡ ಜೈಮಿನಿ ಭಾರತದಲ್ಲಿ ೧೦ನೆಯ ಸಂಧಿಯಲ್ಲಿ (ಪ. ೨-೮) ವಿಂಧ್ಯಪರ್ವತದ ವರ್ಣನೆಯೂ ೨೮ನೆಯ ಸಂಧಿಯಲ್ಲಿ (ಪ. ೪೦-೫೨) ಬೇಟೆಯ ವರ್ಣನೆಯೂ ಬರುತ್ತದೆ. ಶಾಸ್ತ್ರದ ಪ್ರಕಾರ ಪರ್ವತದ ಮತ್ತು ಬೇಟೆಯ ವರ್ಣನೆಗಳೆರಡನ್ನೂ ಒಂದೆಡೆಯಲ್ಲಿಯೆ ತಂದಿದ್ದರಾಗುತ್ತಿತ್ತು. ಆದರೆ ಲಕ್ಷ್ಮೀಶನಿಗೆ ಅಷ್ಟಾದಶವರ್ಣನೆಗಳನ್ನು ಕೇವಲ ಶಾಸ್ತ್ರಪರಿಪಾಲನೆಗಾಗಿ ಸೇರಿಸುವ ಮನಸ್ಸಿಲ್ಲ. 'ಅಷ್ಟಾದಶವರ್ಣನೆಗಳು ಮಹಾಕಾವ್ಯಕ್ಕೆ ಬೇಕು, ಅವು ಕಥೆಗೆ ಪೋಷಕವಾಗಿ ಸಂದರ್ಭೋಚಿತವಾಗಿ ತಕ್ಕ ಸ್ಥಾನಗಳಲ್ಲಿರಬೇಕು' ಎಂದು ಅವನ ಮತವಿರಬೇಕು. ಆದುದರಿಂದ ೧೦ನೆಯ ಸಂಧಿಯ ಪ್ರಾರಂಭದಲ್ಲಿ, 'ಯೋಜನದಗಲದ ಶಿಲೆಯಮೇಲೆ ಯಜ್ಞಾಶ್ವವು ಹೊರಳಾಡಲು ಹೋಗಿ, ಅದರ ಖುರಗಳು ಶಿಲೆಯಲ್ಲಿ ಕೀಲಿಸುವ' ಅದ್ಭುತ ಪ್ರಸಂಗದ ಮೊದಲು ಬೃಹತ್ತಾದ ವಿಂಧ್ಯಪರ್ವತವನ್ನು ಕವಿ ವರ್ಣಿಸುತ್ತಾನೆ. ಹಾಗೆಯೆ ಕುಳಿಂದಕನೆಂಬ ಬೇಡರೊಡೆಯನು ಬೇಟೆಗೆ ಹೋದ ಸಂದರ್ಭದಲ್ಲಿಯೇ (೨೮. ೪೦-೫೨) ಲಕ್ಷ್ಮೀಶನ ಬೇಟೆಯ ವರ್ಣನೆ ಎಡೆ ಪಡೆದಿದೆ. ಹೀಗೆ ಪರ್ವತದ ಮತ್ತು ಬೇಟೆಯ ವರ್ಣನೆಗಳನ್ನು ವಿಂಗಡಿಸಿ ಅಲ್ಲಲ್ಲಿ ಕೊಟ್ಟಿರುವುದು ಕಥಾನಕಗಳಿಗೆ ಹೊಂದಿಕೊಂಡು ಸಮಯೋಚಿತವಾಗಿವೆ.

ಜೈಮಿನಿ ಭಾರತದ,

ಸಹದೇವನಾಗಿ ಸಮುದಿತನಕುಲನಾಗಿ ಸ
ನ್ನಿಹಿತಾರ್ಜುನನುಮಾಗಿ ವರವೃಕೋದರನಾಗಿ
ಮಹವಿಳಾಭೃದ್ರಾಜನಾಗಿ ಶಶಿಕಾಂತಕುಲದಿಂದ ಪಾಂಡವನುಮಾಗಿ ||
ಅಹಿತರುಗಳಂ ಧಾರ್ತರಾಷ್ಟ್ರರಂ ಕೂಡಿಕೊಂ
ಡಿಹುದಱಿಂದಚಲನಾಗಿಹೆನೆಂದು ಹರಿಯೊಡನೆ
ಬಹ ಪಾರ್ಥನಂ ಮೂದಲಿಪ ತೆಱದೆ ವಿಂಧ್ಯಾದ್ರಿ ಮುಂದೆ ಕಣ್ಗೆಸೆದಿರ್ದುದು ||
(೧೦-೨)

ಎಂಬೀ ವರ್ಣನೆ 'ಸೂಕ್ತಿಸುಧಾರ್ಣವ'ದ (ಪುಟ ೨೫, ಪದ್ಯ ೭) ಮುಂದಣ ಪದ್ಯದ ವರ್ಣನೆಯಂತೆ ತೋರುತ್ತದೆ:

ಭಾರತದಂತೆ ಭೀಮನಕುಲಾರ್ಜುನಸಂಗತಿಯಿಂ ನೆಗೆಟ್ಟ ದೈ
ತ್ಯಾರಿಯ ವಕ್ಷದಂತೆ ಭೃಗುಸಂಪದದಿಂ ಹರನಂತೆ ಸದ್ಗುಹಾ
ಕಾರವಿಳಾಸದಿಂ ರಘುಜನಂತೆ ಮನೋಜ್ಞಧರಿತ್ರಿಸಂಭವಾ
ಕಾರದಿನಿರ್ದುದೊಂದು ಕುಧರಂ ಗಗನಸ್ಥಳಮುಂ ತುಡುಂಕುತಂ ||

ಅಲ್ಲದೆ 'ಕಾವ್ಯಾವಲೋಕನ'ದ ೩೩೮ ನೆಯ ಪದ್ಯವಾದ,

ಸುರಪತಿಯಂತೆ ವಿಸ್ಫುರಿತ ನೇತ್ರಸಹಸ್ರವಿರಾಜಿತಂ ನರೇ
ಶ್ವರಭವನಾಗ್ರದಂತೆ ದೃಢವೇತ್ರಲತಾಶತದುಷ್ಪ್ರವೇಶ್ಯಮುಂ
ಬರತಳದಂತೆ ಋಕ್ಷಮೃಗಲುಬ್ಧಕಸಂಗತಮುಂಬುರಾಶಿಯಂ
ತಿರೆ ತತವಿದ್ರುಮದ್ಯುತಿನಿರಂತರಮೊಪ್ಪುಗುಮಾ ವನಾಂತರಂ ||[1]

ಎಂಬುದು ಜೈಮಿನಿ ಭಾರತದ

ಅಭಿಲಾಷೆಯಂತಿರೆ ಸದಾನವಂ ಸಿರಿಯಂತೆ
ವಿಭವಾಸ್ಪದಂ ಕಲಾನಿಧಿಯಂತೆ ಮೃಗಧರಂ
ನಭದಂತೆ ಕುಜಯುತಂ ದ್ವಿಜನಂತೆ ವಂಶಪರಿಶೋಭಿತಂ ಸ್ವರ್ಗದಂತೆ
ಶುಭಸುರಭಿಸಂಭೃತಂ ರಣದಂತೆ ಶರಧೃತಂ
ಸಭೆಯಂತೆ ಚಿತ್ರಪತ್ರಾನ್ವಿತಂ ದಿನಕರ
ಪ್ರಭೆಯಂತೆ ಪುಂಡರೀಕೋಲ್ಲಾಸಕರಮಾಗಿ ತಚ್ಛೈಲಮೆಸೆದಿರ್ದುದು || (೧೦–೫)

ಎಂಬ ಪದ್ಯಕ್ಕೆ ಪ್ರೇರಕವಾಗಿರುವಂತಿದೆ. ಆದರೆ ಜೈಮಿನಿ ಭಾರತದ ಈ ಪದ್ಯದಲ್ಲಿರುವ ಶ್ಲೇಷ ಚಮತ್ಕಾರವು 'ಕಾವ್ಯಾವಲೋಕನ'ದ ಪದ್ಯದಲ್ಲಿ ಇಲ್ಲ. ನಡೆ, ಗತಿ ಮಾತ್ರ ಎರಡರಲ್ಲೂ ಒಂದೇ ಆಗಿದೆ.

ಇನ್ನು 'ನಾಗಭೂಷಣನಾಗಿ ಶಿವನಲ್ಲ, ಹರಿಗಿಕ್ಕೆಯಾಗಿ ಪಾಲ್ಗಡಲಲ್ಲ' ಎಂಬ ಲಕ್ಷ್ಮೀಶನ ಪದ್ಯದಲ್ಲಿ (೧೦–೬) ಒಗಟದ ರೀತಿಯನ್ನು ಕಾಣುತ್ತೇವೆ. ಪರ್ವತದ ಆವರಣದಲ್ಲಿದ್ದ ಮೃಗಪಕ್ಷಿಗಳನ್ನು ವರ್ಣಿಸುವ ಈ ಬಗೆ ಆಕರ್ಷಕವಾಗಿದೆ. 'ಶೃಂಗಮಯಂ, ಭುಜಂಗಮಯಂ, ಭೃಂಗಮಯಂ, ಉತ್ತುಂಗಮಯಂ' ಆದ ವಿಂಧ್ಯಪರ್ವತವನ್ನು ವರ್ಣಿಸಿ, ತರುವಾಯ ಪಾರ್ಥನ ಸೇನೆಯ ತುಳಿತದಿಂದ ಎದ್ದ ಧೂಳಿಯ ವರ್ಣನೆಯನ್ನು ಕವಿ ಸುಂದರವಾಗಿ ಮಾಡಿದ್ದಾನೆ. 'ಮಳೆಯನ್ನು ಸುರಿಸಿ, ತಂಪನ್ನು ಕೊಟ್ಟು, ಫಲಪುಷ್ಪಗಳನ್ನು ಒದವಿಸಿದ ಆಕಾಶಕ್ಕೆ ಕೃತಘ್ನತೆಯಿಂದ ಭೂಮಿಯು ಮಣ್ಣನ್ನು ಎರಚುತ್ತಿದೆಯೊ!' ಎಂದು ಕವಿ ಉತ್ಪ್ರೇಕ್ಷಿಸಿದ್ದಾನೆ.

ಹರಿಯ ಸೇವಕರ ಬರವಂ ಕಾಣುತಾ ವಿಂಧ್ಯ
ಗಿರಿಯ ದುರ್ಮಾರ್ಗಮುಂ ಸನ್ಮಾರ್ಗಮಾಯ್ತು ದು
ರ್ಧರ ಹೃದಯ ವನಜಾಂಧಕಾರಮುಂ ಸುಪ್ರಕಾಶಿತಮಾಯ್ತು ವಿಕೃತಿಯಡಗಿ ||
ಉರುತಪಃಪ್ರಭವ ವಿಮುಕ್ತ ಭಾವಿತಮಾಯ್ತು
ನಿರುತಮಾಶಾಪರಿಜ್ಞಾನಮಾಯ್ತಿರದೆ ಗೋ
ಚರಮಾಯ್ತು ವಿಷ್ಣುಪದಮೆನೆ ನಡೆದುದಾಹಯಂ ಬೆಂಬಿಡದೆ ಸೇನೆಸಹಿತ|| (೧೦–೯)

---

1 'ಸೂಕ್ತಿಸುಧಾರ್ಣವ', ಪು. ೪೭, ಪ. ೧೪೨.

ಎಂಬ ಜೈಮಿನಿ ಭಾರತದ ಪದ್ಯವನ್ನೋದಿದಾಗ, ಕಾಲಿದಾಸನ ಅಭಿಜ್ಞಾನಶಾಕುಂತಲದ ಪ್ರಥಮಾಂಕದಲ್ಲಿ ಬರುವ ರಥವೇಗದ

ಯದಾಲೋಕೆ ಸೂಕ್ಷ್ಮಂ ವ್ರಜತಿ ಸಹಸಾ ತದ್ವಿಪುಲತಾಂ
ಯದರ್ಧೇ ವಿಚ್ಛಿನ್ನಂ ಭವತಿ ಕೃತಸಂಧಾನಮಿವತತ್
ಪ್ರಕೃತ್ಯಾ ಯದ್ವಕ್ರಂ ತದಪಿ ಸಮರೇಖಂ ನಯನಯೋ
ರ್ನಮೆ ದೂರೆ ಕಿಂಚಿತ್ಕ್ಷಣಮಪಿ ನ ಪಾರ್ಶ್ವೇ ರಥಜಗತ್ ||

ಹೀಗೆಯೇ 'ಕಾದಂಬರಿ'ಯ (ಪೂ. ಭಾ. ೧೫೯)

ನಡೆಸಲ್ ಬಿಲ್ವಿಡು ಸಾರ್ದಮುರ್ಚು ಮರನಂ ಬಂದೇಱು ಕೈದೋಱು ಬಿ
ಲ್ವಿಡಿಸುತ್ತಂ ಬಲಿ ಸೋಂಕವುಂಕು ಕೆಡು ಕಯ್ಯೊಳ್ ನಿಂದು ಕೀಳ್ನಾಯ್ಗಳಂ
ಬಿಡು ಸಾರ್ದಾರ್ದೆಸೆನುತ್ತೆ ತಮ್ಮೊಳದಟಿಂದಾ ಬೇಡರೋರೊರ್ವರಂ
ನುಡಿವೊಂದಬ್ಬರಮುರ್ಬಿತಾಗಳೆನಿಸುಂ ವಿಂಧ್ಯಾಟವೀಮಧ್ಯದೊಳ್ ||

—ಸೂ.ಸು., ಪು. ೪೩, ಪ. ೧೦೭

ಎಂಬ ಪದ್ಯದ ಪ್ರಭಾವವನ್ನು 'ನಡೆಪಜ್ಜೆವಿಡಿ ಪೋಗು ತಡೆ ನಿಲ್ಲು ಜಡಿ ಬೊಬ್ಬೆ' ಎಂಬ ಪದ್ಯ (ಜೈ. ಭಾ. ೨೮.೪೫) ದಲ್ಲಿಯೂ 'ಸೂಕ್ತಿಸುಧಾರ್ಣವ'ದ

ಹರಿಣಿಯನೆಚ್ಚು ತತ್ಪ್ರಿಯಕುರಂಗಮನಾರ್ದೆಸಲೆಂದು ಬಾಣಮಂ
ತಿರುವಿನೊಳಿಟ್ಟು ತೀವಿತೆಗೆವನ್ನಗಮಂಗಜಬಾಣಘಾತದಿಂ
ದೆರಳೆ ನೆಲಕ್ಕೆ ಬೀೞೆ ಮರ್ಱು ಭಾಪುಕಾರಿಯೆನುತ್ತೆ ಬಿಲ್ಲುಮಂ
ಸರಳುಮನಿಕ್ಕಿ ಕೈಮುಗಿದು ಬಣ್ಣಿಸಿದಂ ಸ್ಮರನಂ ವನೇಚರಂ ||

ಎಂಬಿಂತಹ ಪದ್ಯಗಳಲ್ಲಿಯ 'ಹೆಣ್ಣೆರಳೆಯನ್ನು ಹೊಡೆದು ಕೆಡಹಿ, ಅದರ ನಲ್ಲನಾದ ಗಂಡೆರಳೆಯನ್ನು ಕೊಲ್ಲಬೇಕೆನ್ನುವಷ್ಟರಲ್ಲಿ ಅದು ವಿರಹತಾಪದಿಂದ ಸತ್ತುಬಿದ್ದಿತು' ಎಂಬಲ್ಲಿಯ ವರ್ಣನಾಚಮತ್ಕೃತಿಯಿಂದ ಉಂಟಾಗಿರಬಹುದಾದ ಸ್ಫೂರ್ತಿಯನ್ನು ಲಕ್ಷ್ಮೀಶನು 'ಮಱಿಗೆ ಮಱಿಯಾಗಿ ಮೈಯೊಡ್ಡಿ ಮಡಿದುವು ಕೆಲವು ಬಱಿಯ ಬಿಲ್ದನಿಗೆ' ಎಂಬ ಒಂದೇ ಒಂದು ಪದ್ಯದಲ್ಲಿ (೨೮.೫೦) ಸ್ವೀಯವಾದ ವಿವಿಧ ಕಲ್ಪನೆಗಳಲ್ಲಿ ಮೂಡಿಸಿದುದನ್ನೂ ಕಾಣುತ್ತೇವೆ. ಹಲವು ಜಿಂಕೆಗಳು ಹಲವು ತೆರಗಳಿಂದ ಒಮ್ಮೆಲೆ ಸಾಯುವ ಈ ದೃಶ್ಯ ಕಲ್ಪನಾಚಮತ್ಕಾರದೊಡನೆ ಬೇಟೆಯ ರೌದ್ರವನ್ನು ಮನದಟ್ಟೆಸುತ್ತಿದೆ.

ಕುಳಿಂದಕನೊಡನೆ ಬೇಟೆಗೆ ಬಂದಿದ್ದ ಬೇಡಪಡೆಯನ್ನು 'ಅಂತಕನ ದೂತಸಂಘಾತ' ಎಂದು ಕವಿ ಉಪಮಿಸುತ್ತಾನೆ (೨೮.೪೦). ಕಪ್ಪಾದ ದೇಹವುಳ್ಳ ಆ ಬೇಡರು ದಟ್ಟವಾದ ಅಡವಿಯ ಮಬ್ಬಿನಲ್ಲಿ ಅಡಗಡಗಿ ಬರುತ್ತಿದ್ದ ಬಗೆಯನ್ನು 'ಮಂಜುಕವಿದ ಕರಿಯ ಬೆಟ್ಟ'ಗಳಂತೆ ಕಂಡರೆಂದು ಬಣ್ಣಿಸಿದ ಹೋಲಿಕೆಯಲ್ಲಿ (೨೮.೪೧) ಸಹಜ ಸೌಂದರ್ಯವಿದೆ. ಮಂಜಿನ ಮುಸುಕಿನೊಳಗಿನ ಬೆಟ್ಟಗಳಂತೆ ಬೇಡರು ಶೋಭಿಸಿದರು ಎನ್ನುತ್ತಾನೆ ಕವಿ. ಅವರ ಕಪ್ಪುಬಣ್ಣಕ್ಕಾಗಿ ಅವನ ಕಣ್ಣು ಜುಗುಪ್ಸಿತವಾಗಿಲ್ಲ, ಉತ್ಸಾಹಿತವಾಗಿದೆ. ಬೇಡರು ಆಡುವ ಬೇಟೆ ಅದ್ಭುತವಾದುದು, ಮನ್ಮಥನ ಬಾಣ

ದಂತಿರುವ ಬೇಡತಿಯರೂ ಅವರೊಡನೆ ಇದ್ದಾರೆ ಎಂದು ವರ್ಣಿಸುವುದಲ್ಲದೆ ಅಕ್ಕರೆಯಿಂದ ಆ ಆ ಮೃಗಗಳ ದೇಹಪರಿಮಳಕ್ಕೆ ಮನಸೋತು ಧಾವಿಸುವ ಮರಿದುಂಬಿಗಳಂತೆ ಬೇಡರ ಗುಂಪು ಮೃಗಗಳತ್ತ ಧಾವಿಸಿತೆಂದು ಉತ್ಪ್ರೇಕ್ಷಿಸಿದ್ದಾನೆ (೨೮.೪೩).

ಇಬ್ಬರು ಬೇಟೆಗಾರರು ಒಂದೇ ಹುಲಿಯನ್ನು ಹೊಡೆಯಲು ಹೋಗಿ ಆ ಹುಲಿಯೊಡನೆ ಅವರಿಬ್ಬರೂ ಮಡಿದ ಚಮತ್ಕಾರವನ್ನು 'ಉಭಯಜನಮೇಕಾರ್ಥಕೆಳಸಿದಡೆ ಮತ್ತೆ ಲೇಸಾದಪುದೆ' ಎಂಬ ನಿದರ್ಶನಾಲಂಕಾರದಿಂದ ಕವಿ ಹೇಳಿದ್ದಾನೆ (೨೮.೪೮). ಇದರಂತೆಯೆ ಇನ್ನೊಂದು ಚಮತ್ಕಾರ—ಒಂದು ಸಿಂಹವು ಬೇಡತಿಯ ಸಣ್ಣನಡುವನ್ನು ಕಂಡು ತನಗೂ ಆಕೆಗೂ ಸಾಮಾನ್ಯತ್ವವನ್ನು ಹೊಂದಿ, ಬಳಿಕ ಅವಳ ಚಿಗರೆಯಂತಹ ಚಂಚಲವಾದ ಕಡೆಗಣ್ಣುಗಳನ್ನು ಕಂಡು ಕೋಪದಿಂದ ಅವಳ ಮೇಲೆ ಎರಗುವಷ್ಟರಲ್ಲಿ ಬೇಡನು ಅದನ್ನು ಬಾಣದಿಂದ ಕೊಂದನು (೨೮.೪೯) ಎಂದು ಕವಿ ವರ್ಣಿಸಿದ್ದಾನೆ. ವರ್ಣನೆಯಲ್ಲಿಯೂ ಕಲ್ಪನೆಯ ಅಪೂರ್ವತೆಯಿಂದ ಭಾವಸೌಂದರ್ಯವನ್ನು ಅರಳಿಸುವ ಲಕ್ಷ್ಮೀಶನ ರೀತಿ ಓದುಗರನ್ನು ಮಂತ್ರಮುಗ್ಧರನ್ನಾಗಿ ಮಾಡುತ್ತದೆ.

ಅಂತೂ ಲಕ್ಷ್ಮೀಶನ ವರ್ಣನೆಗಳಲ್ಲಿ ಶ್ಲೇಷೆಯ ಚಮತ್ಕಾರ, ಉತ್ಪ್ರೇಕ್ಷೆಗಳ ಕಲ್ಪನಾರಮ್ಯತೆ, ವರ್ಣನೆಯಲ್ಲಿಯೂ ಕಥಾನಕವನ್ನು ಚಿತ್ರಿಸುವ ಕಲೆ, ಮೂಲ ಕಥಾನಕಕ್ಕೆ ಪೋಷಕವಾಗುವಂತೆ ನಿಸರ್ಗವರ್ಣನೆಯ ಜೋಡಣೆಯ ಸಹಜತೆ ಇವುಗಳನ್ನು ಕಾಣುತ್ತೇವೆ.

### ಪುರವರ್ಣನೆ

ಬನಮುಂ ಕೆಯ್ವೊಲಗಾವ ಪಾಸುರಿಯರುಂ ಮಾರ್ಗಪ್ರಪಾಪಾಲಿಕಾ
ಜನಮುಂ ಗೋಕುಲಮುಂ ಜಲಾಶಯಮುಮಾರೂಢಾಸ್ತ್ರಶಸ್ತ್ರಶ್ರಮಾ
ವನಿಯುಂ ಕೋಂಟೆಯುಮೆತ್ತಿದಂಗಡಿಗಳುಂ ವಾರಾಂಗನಾವಾಟ ದೇ
ವ ನೃಪೇಂದ್ರಾಲಯ ವರ್ಗಮುಂ ಪುರವರವ್ಯಾವರ್ಣನಕ್ಕಾಸ್ಪದಂ ||

—ಸೂ. ಸು., ಪು. ೬೫

ಜೈಮಿನಿ ಭಾರತ ಕಾವ್ಯದಲ್ಲಿ ಅನೇಕ ಪುರಗಳ ಉಲ್ಲೇಖ ಬರುತ್ತದೆ. ಹಸ್ತಿನಾವತಿ (ಸಂ. ೨), ಭದ್ರಾವತಿ (ಸಂ. ೩), ದ್ವಾರಕೆ (ಸಂ. ೬), ಮಾಹಿಷ್ಮತಿ (ಸಂ. ೮), ಚಂಪಕನಗರ (ಸಂ. ೧೫), ಪಾರಿಪ್ಲವ–ಪ್ರಮಿಳಾ–ಭೀಷಣ ರಾಜ್ಯಗಳ ರಾಜಧಾನಿಗಳು (ಸಂ. ೧೫, ೧೬), ಮಣಿಪುರ (ಸಂ. ೧೭), ಅಯೋಧ್ಯೆ (ಸಂ. ೧೮), ರತ್ನಪುರ (ಸಂ.೨೬), ಸಾರಸ್ವತಪುರ (ಸಂ. ೨೭), ಕುಂತಳಪುರ (ಸಂ.೨೮)—ಈ ಪಟ್ಟಣಗಳನ್ನು ನಾವಿಲ್ಲಿ ಕಾಣುತ್ತೇವೆ. ಈ ಎಲ್ಲ ಪುರಗಳನ್ನೂ ಸಂಪೂರ್ಣವಾಗಿ ವರ್ಣಿಸುವುದೆಂದರೆ, 'ಸೂಕ್ತಿಸುಧಾರ್ಣವ'ದ, ಮೇಲೆ ಕೊಟ್ಟ ಪದ್ಯದಲ್ಲಿ ಉಕ್ತವಾದ ಎಲ್ಲ ಅಂಗೋಪಾಂಗಗಳನ್ನೂ ಎಲ್ಲೆಡೆ ವರ್ಣಿಸಬೇಕಾದೀತು. ಆದರೆ, ಒಂದೇ ಬಗೆಯ ವರ್ಣನಾವಿಸ್ತಾರದಿಂದ ತಲೆಬೇಸರು ಹಿಡಿಸುವ ರೀತಿಯನ್ನು ಕವಿ ಲಕ್ಷ್ಮೀಶ ಒಪ್ಪನು. ಶಾಸ್ತ್ರಕ್ಕಾಗಿ ಕಾವ್ಯವನ್ನು ಬದನೆಕಾಯಿ ಮಾಡುವುದು ಅವನಿಗೆ ಸೇರದು. ಅವನು ಅಲ್ಲಲ್ಲಿ ತಕ್ಕಷ್ಟು

ಪುರವರ್ಣನೆಯನ್ನು ಹದವರಿತು ಮಾಡುತ್ತ, ಆ ವರ್ಣನೆಯಲ್ಲಿ ವಾಚಕರನ್ನೂ ತನ್ಮಯ ಗೊಳಿಸುತ್ತ ಕಥೆಯನ್ನು ಮುಂದುವರಿಸುತ್ತ ಸಾಗುತ್ತಾನೆ. ಪುರವರ್ಣನೆಗೆ ಸಂಬಂಧ ಪಟ್ಟ ಆ ಅನೇಕ ಅಂಗೋಪಾಂಗ ವರ್ಣನೆಗಳನ್ನು ಅಲ್ಲಲ್ಲಿ ಹಂಚಿಹಾಕಿದ್ದಾನೆ ಅವನು. ವರ್ಣನೆಯ ಪುನರುಕ್ತಿ ಅನವಶ್ಯಕವಾಗಿ ಆಗಬಾರದೆಂಬ ಎಚ್ಚರಿಕೆಯೂ ಅವನಿಗೆ ಸಾಕಷ್ಟಿದೆ, ಎಂಬುಧು ವರ್ಣನಾಂಶಗಳ ಕೆಳಗಣ ವಿಂಗಡಣೆಯಿಂದ ಕಂಡುಬರುತ್ತದೆ:

| | ಪುರಗಳು | ವರ್ಣನಾವಿಶೇಷ |
|---|---|---|
| ೧. | ಹಸ್ತಿನಾವತಿ | ಪ್ರದೇಶ, ಜನರ ರೀತಿ, ಆಚಾರಾದಿಗಳು. |
| ೨. | ಭದ್ರಾವತಿ | ಕೋಟೆಕೊತ್ತಳ, ಬನ,ಪಾಮರಿಯರು, ಪ್ರಪಾಶಾಲೆ,ಇತ್ಯಾದಿಗಳು. |
| ೩. | ದ್ವಾರಕೆ | ಜನ, ಜಲಾಶಯ, ವಾರಾಂಗನಾವಾಟ, ಅಂಗಡಿಸಾಲು. |
| ೪. | ಚಂಪಕನಗರ | ಕೋಟೆಯ ವರ್ಣನೆ. |
| ೫. | ಪ್ರಮೀಳಾ–ಭೀಷಣರಾಜ್ಯ | ಸ್ತ್ರೀಯರ ರೀತಿ, ಭೀಷಣಸ್ವರೂಪ. |
| ೬. | ಮಣಿಪುರ | ಆಸ್ಥಾನ, ಉಪ್ಪರಿಗೆ, ಕೋಟೆ–ಕೊತ್ತಳ. |
| ೭. | ಅಯೋಧ್ಯೆ | ಸುಖಸಮಾಧಾನದ ಆಳಿಕೆ. |
| ೮. | ರತ್ನಪುರ | ಕತ್ತಲೆ, ಬೆಳ್ದಿಂಗಳು, ವಾರಾಂಗನಾವಾಟ. |
| ೯. | ಸಾರಸ್ವತಪುರ | ಧರ್ಮರಾಜ್ಯ. |
| ೧೦. | ಕುಂತಳಪುರ | ಉಪವನ. |

ಈ ವಿಂಗಡಣೆ ಈ ಕಾವ್ಯದ ವಿಶಿಷ್ಟ ಔಚಿತ್ಯವಾಗಿದೆ. ಸಂಧಿ ೩ರಲ್ಲಿ ಮತ್ತು ಸಂಧಿ ೮ರಲ್ಲಿ ೧೦ ವರ್ಣನಾಪದ್ಯಗಳು ಬರುತ್ತವೆ. ಅವುಗಳನ್ನು ಕೆಲವು ಪ್ರತಿಕಾರರು ೩ನೆಯ ಸಂಧಿಯಲ್ಲಿಯೂ ಇನ್ನು ಕೆಲವರು ೮ನೆಯ ಸಂಧಿಯಲ್ಲಿಯೂ ಬೇರೆ ಕೆಲವರು ಎರಡು ಕಡೆಗಳಲ್ಲಿಯೂ ಸೇರಿಸುತ್ತಾರೆ. ಉದ್ಯಾನವರ್ಣನೆಯ ಈ ೧೦ ಪದ್ಯಗಳನ್ನು ಕವಿ ಲಕ್ಷ್ಮೀಶನು ೮ನೆಯ ಸಂಧಿಯಲ್ಲಿಯೆ ಸೇರಿಸಿರಬೇಕು ಎಂದು ನಮಗೆನಿಸುತ್ತದೆ. ಸಂಧಿ ೩ರಲ್ಲಿ ಕೋಟೆ, ಕೊತ್ತಳ, ಬನ, ಪ್ರಪಾಶಾಲೆ, ಪಾಮರಿಯರು ಇವುಗಳ ವರ್ಣನೆ ಯನ್ನು ಅವನು ಮಾಡಿರಬೇಕು. ಏಕೆಂದರೆ ಕುದುರೆ ಮಾಹಿಷ್ಮತಿಗೆ ಹೋದಾಗ ಪ್ರವೀರ ಮದನಮಂಜರಿಯರು ಉದ್ಯಾನವಿಹಾರದಲ್ಲಿದ್ದರು, ಆದುದರಿಂದ ಉದ್ಯಾನವರ್ಣನೆ ಯನ್ನು ಆ ಸಂದರ್ಭಕ್ಕೆ ಮೀಸಲಾಗಿರಿಸುವುದು ಸ್ವಾಭಾವಿಕ. ಉದ್ಯಾನವರ್ಣನೆಯ ಹತ್ತು ಪದ್ಯಗಳಿಂದ ಕಥಾಸಂದರ್ಭಕ್ಕೆ ಕಳೆಕಟ್ಟಿದ್ದಾನೆ.

ಪುರವರ್ಣನೆಯಲ್ಲಿ ಹಸ್ತಿನಾವತಿ, ಭದ್ರಾವತಿ, ದ್ವಾರಕೆ, ಚಂಪಕನಗರ, ರತ್ನ ಪುರ ಇವುಗಳು ಜೈಮಿನಿ ಭಾರತದಲ್ಲಿ ಪ್ರಾಮುಖ್ಯ ಪಡೆದಿವೆ. ಈ ವರ್ಣನೆಗಳ ಕ್ರಮ ದಲ್ಲಿಯೂ (i) ಹಸ್ತಿನಾವತಿಯಲ್ಲಿ ಸೂರ್ಯೋದಯ (೨.೬೫), (ii) ಭದ್ರಾವತಿಯಲ್ಲಿ ಮಧ್ಯಾಹ್ನ (೩.೪೨), (iii) ಚಂಪಕನಗರದಲ್ಲಿ ಸಂಜೆ (೧೭.೧೯), (vi) ರತ್ನಪುರದಲ್ಲಿ ರಾತ್ರಿ ಮತ್ತು ಪುನಃ ಸೂರ್ಯೋದಯ (೨೬.೨೬) ವರ್ಣನೆಗಳನ್ನು ತಂದು ಲಕ್ಷ್ಮೀಶನು

ಅಪೂರ್ವಕಲ್ಪಕತೆಯನ್ನು ಮೆರೆದಿದ್ದಾನೆ. ಪುರವೆಂದ ಬಳಿಕ ಅಲ್ಲಿ ಸೂರ್ಯೋದಯ, ಮಧ್ಯಾಹ್ನ, ಸಂಜೆ, ರಾತ್ರಿ, ಕತ್ತಲು, ಬೆಳ್ದಿಂಗಳು ಆಗಲೇಬೇಕು. ಅದು ನಿಸರ್ಗಧರ್ಮ. ಈ ನಿಸರ್ಗಧರ್ಮವು ಲಕ್ಷ್ಮೀಶನ ಪುರವರ್ಣನೆಗಳಲ್ಲಿ ಚೆನ್ನಾಗಿ ವ್ಯಕ್ತವಾಗಿದೆ. ಇದು ಈ ಕಾವ್ಯದ ಇನ್ನೊಂದು ವೈಶಿಷ್ಟ್ಯವಾಗಿದೆ.

ವನರುಹಭವಾಂಡದೊಳಗೈವತ್ತು ಕೋಟಿಯೋ
ಜನದ ವಿಸ್ತೀರ್ಣದಿಳೆಯಂ ಸಪ್ತಶರನಿಧಿಗ
ಳನುವೇಷ್ಟಿಸಿರಲದಱ ಮಧ್ಯದಲ್ಲಿಹುದು ಜಂಬೂದ್ವೀಪಮದಱ ನಡುವೆ ||
ಅನವರತ ಸುರತಗೋಷ್ಠಿಗೆ ನೆರೆದ ನಿರ್ಜರಾಂ
ಗನೆಯರಂಗಚ್ಛವಿಯ ಹಬ್ಬುಗೆಯೊ ಕಾರಮಿಂ
ಚಿನ ಮಹಾರಾಶಿಯೋ ಪೇಳೆನಲ್ ಮೆಱವ ಕನಕಾಚಲಂ ಕಣ್ಗೆಸದುದು || (೨-೧)

ಆ ಕನಕಗಿರಿಯ ತೆಂಕಣದೆಸೆಯೊಳಿರ್ಪುದು ಸು
ಧಾಕರಕುಲದ ನೃಪರಸಾಮ್ರಾಜ್ಯಪಟ್ಟಾಭಿ
ಷೇಕವಿಸ್ತರದಿಂ ಜಸಂಬಡೆದ ಹಸ್ತಿನಾಪುರಂ.... (೨-೨)

ಎಂದು ಹಸ್ತಿನಾವತಿಯ ಒಂದು ಪ್ರದೇಶಚಿತ್ರದೊಡನೆ ಲಕ್ಷ್ಮೀಶನು ಪುರವರ್ಣನೆಯನ್ನು ಪ್ರಾರಂಭಿಸುತ್ತಾನೆ.

ಮೇದರೊಳಲ್ಲದೆ ವಂಶ
ಚ್ಛೇದಂ ಗಾರುಡದೊಳಲ್ಲದಹಿತತ್ವಂ ಹೊಂ
ಗೇದಗೆಯ ಹೊದಱಿನೊಳಲ್ಲದಿ
ಳಾದುರ್ಧರಕಂಟಕತ್ವಮಿಲ್ಲಾ ನಾಡೊಳ್ ||

—ಸೂ. ಸು., ಪು. ೬೮, ಪ.೧೯

ಮತ್ತು,

ಗಾರುಡದೊಳಹಿತತ್ವಮಾರಣ್ಯದೊಳ್ ದಾನ
ವಾರಣಂ ಚಾರುಪ್ರವಾಳಮಣಿ ರುಚಿಯೊಳ್ ಸ
ದಾರುಣಂ ಸರಸಿಯೊಳ್ ಕಲಹಂಸಮುಯಮುತ್ಪಲಾಕ್ಷಿಯರ ಕಂಧರದೊಳು
ಹಾರವಲಯಂ... —ಜೈ. ಭಾ., ೨-೮

ಇವುಗಳಲ್ಲಿ ಸಾಮ್ಯವಿದೆ.

ಬಡತನಮೆಂಬುದು ನಡುವಿನೊ
ಳಿಡೆಗಿಱಿವುದು ಬಿಗಿದ ಮೊಲೆಯೊಳತಿಕುಟಿಲತ್ವಂ
ಮುಡದಿಯರ ಕುರುಳೊಳಲ್ಲದೆ
ಪಡಿವಾತೇಂ ಜನರ ದೆಸೆಯೊಳಿಲ್ಲಾ ನಾಡೊಳ್ ||

—ಸೂ. ಸು., ಪುಟ ೬೮, ಪ. ೨೦

ಶ್ರುತದೊಳ್ ಚಿಂತೆ ಮದೇಭದೊಳ್ ಸೆಱೆ ನಿರೋಧಂ ಪಂಜರಾನೀಕದೊಳ್
ಯತಿಭಂಗಂ ಕೃತಿಯೊಳ್ ಭಯಂ ನಟನದೊಳ್ ನಿಷ್ಕಿಂಚಿನತ್ವಂ ಮಹಾ
ವ್ರತವೊಳ್ ಶೂನ್ಯಗೃಹಂ ದುರೋದರದೊಳಾದಂ ವಿಗ್ರಹಸ್ಥಾನಮು
ನ್ನತವಾದಂಗಳೊಳಲ್ಲದಿಲ್ಲ ಮಱಿಪುಂ ಮತ್ತೆಲ್ಲಿಯುಂ ದೇಶದೊಳ್ ||

—ಸೂ. ಸು., ಪು. ೬೮

ನಿಗಳಂ ಸೊಕ್ಕಾನೆಯೊಳ್ ವಿಗ್ರಹವೊದವಿದ ವಾದಂಗಳೊಳ್ ದಂಡಮುತ್ಕೇ
ತುಗಳೊಳ್ ಕಾರ್ಶ್ಯಂ ವಧೂಮಧ್ಯದೊಳತಿಕಠಿನತ್ವಂ ಕುಚದ್ವಂದ್ವದೊಳ್ ವ
ಕ್ರಗಮಂ ನಕ್ಷತ್ರದೊಳ್ ಭಂಗದ ಪರಿ ತೆರೆಯೊಳ್ ಕಂಟಕಂ ಹರ್ಷದೊಳ್ ಸ್ವಾ
ತಿಗೆ ಕಾವ್ಯಪ್ರೌಢಿಯೊಳ್ ತಳ್ತಿಱುವುದೆವೆಯೊಳುಂಟಲ್ಲಿ ಬೇಱಿಲ್ಲ ನಾಡೊಳ್ ||

—'ಅನಂತನಾಥಪುರಾಣ', ಸೂ. ಸು., ಪು. ೬೯, ಪ. ೨೩

ಮುನ್ನಿನ ಕನ್ನಡದ ನುಡಿಗಳ ಬಗೆಯಱಿದ ಕಬ್ಬಿಗರು ಉಸುರಿದ ಇಂತಹ ಪದ್ಯಗಳೆ, ಕವಿ ಲಕ್ಷ್ಮೀಶನ

ಕುಟಿಲ ಚಂಚಲ ಕಠಿನ ಕೃಶ ಮಾಂದ್ಯಮೆಂಬಿವು
ತ್ಕಟಯೌವನಶ್ರೀವಿಲಾಸಿನಿಯರಳಕಾಳಿ
ಚಟುಲಸುಕಟಾಕ್ಷ ವಕ್ಷೋಜಾತ ಮಧ್ಯಗತಿಗಳ ವಿಸ್ತರದೊಳಲ್ಲದೆ ||
ಘಟಿಸದು ; ಮದಾವಸ್ಥೆ ನಿಗಳಬಂಧನದ ಸಂ
ಕಟ ಹರಿದ್ವೇಷ ಮತಿಹೀನತೆಗಳೆಂಬಿವಿಭ
ಘಟೆಯೊಳಲ್ಲದೆ ಸಲ್ಲದೆಲ್ಲಿಯುಂ ಧರ್ಮತನಯಂ ಪಾಲಿಸುವ ಧರೆಯೊಳು ||

—ಜೈ. ಭಾ., ೨–೮

ಎಂಬ ಪದ್ಯಕ್ಕೆ ಸ್ಫೂರ್ತಿಸ್ಥಾನವಾಗಿರಬಹುದು. ಗುಣ ಮತ್ತು ವಸ್ತುಗಳ ಜೋಡಣೆಯಲ್ಲಿ ಸರಳತೆಯಿದೆ.

ಒದವಿದ ದೇಶದುನ್ನತಿಯನೇವೊಗೞ್ವಂ ಮದಮತ್ತಹಸ್ತಿ ಪು
ಟ್ಟಿದ ಮಲೆ ಮುತ್ತು ಪುಟ್ಟಿದ ಬಿದಿರ್ ಮಣಿಪುಟ್ಟಿದ ಬೆಟ್ಟು ಕೌಂಗು ಪು
ಟ್ಟಿದ ಪೊಲನಂಚೆ ಪುಟ್ಟಿದ ಕೊಳಂ ನದಿ ಪುಟ್ಟಿದೊಸಱ್ ನಮೇರು ಪು
ಟ್ಟಿದ ಪುರನಂದನಂ ಜರಗು ಪುಟ್ಟಿದ ಭೂತಳಮಿಲ್ಲ ದೇಶದೊಳ್ ||

—ಸೂ. ಸು., ಪು. ೬೬, ಪ. ೮

ಅಂಚೆವಿಂಡಾಡದ ಕೊಳಂ ಕೊಳಗಳೊಳ್ ಸಲೆಪ
ಳಂಚಿ ಸುಳಿಯದ ಗಾಳಿ ಗಾಳಿಗಳ ಬಳಿವಿಡಿದು
ಸಂಚರಿಸದೆಳದುಂಬಿ ತುಂಬಿಗಳ ಬಿಡಯಕಿಂಪೆನಿಸದಚ್ಚಲರಲರ್ಗಳ ||
ಗೊಂಚಲೆಱಗಿಸದ ಲತೆ ಲತೆಗಳಡರದ ತಳ್ಕಿ
ನಿಂ ಚಿಗುರದಿಮ್ಮಾವು ಮಾವುಗಳ ಚೆಂದಳಿರ್
ಮಿಂಚದ ಬನಂ ಬನಗಳಿಂ ಬಳಸದೂರೂರ್ಗಳಿಲ್ಲದೆಡೆಯಿಲ್ಲಿಳೆಯೊಳು ||

—ಜೈ. ಭಾ., ೩–೩

ಕಳಶಮನೆತ್ತಿ ನೀರೆಱೆವ ಕಾಂತೆಯ ತೋಳ ತೆರಳ್ಕೆ ಮೇಲುದಂ
ತೊಲಗಿಸೆ ನೋಡಿ ನುಣ್ಬೊಗರ ನೀಂಬಕುಚದ್ವಯ ಮೂಲಮುಂ ಸಮು
ಜ್ವಲ ಭುಜಮೂಲಮುಂ ನೆಱೆಯೆ ಕಂಡೆರ್ದೆಯಾಱಿದೊಡಂ ನಿರೀಕ್ಷಣಾ
ಕುಲತೆಯಿನೀಂಟುವರ್ ಪಥಿಕರಾಕಲಶಾಂಬುವೆ ಸೀಮೆಯೆಂಬಿನಂ ||

—'ಚಂದ್ರಪ್ರಭಪುರಾಣ', ೧–೯೮

ಬಟ್ಟೆಬಟ್ಟೆಯೊಳೆಲ್ಲಿಯುಂ ಕುಳಿರ್ವೆರಸಿದಱ
ವಟ್ಟಗೆಯ ಸದನಂಗಳಿಂದೆ ಬಾಗಿಲ್ಗೆ ಪೊಱ
ಮಟ್ಟು ಕಲಶಮನೆತ್ತಿ ನೀರೆಱೆವ ಕಾಮಿನಿಯರುರುಬಾಹುಮೂಲದೆಡೆಗೆ ||

ದಿಟ್ಟಿ ಪರಿಪರಿದು ಮೊಗವೊರ್ಗುಡಿಸೆ ಸರಿಸಕಳ
ವಟ್ಟೆ ಜಲಧಾರೆ ಪೊಜಿಸೂಸೆ ಬಯಲಿಗೆ ಬಾಯ
ಬಿಟ್ಟು ನಗಿಸುವರಲ್ಲಿ ತೃಷೆಯಿಂದೆ ಬಂದಪಥಿಕರ್ಕಳಾ ಬಾಲೆಯರನು ||

—ಜೈ. ಭಾ., ೩–೯

ಕವಿ ಲಕ್ಷ್ಮೀಶನ ಈ ಪದ್ಯದ ಮೇಲೆ 'ಚಂದ್ರಪ್ರಭ ಪುರಾಣ'ದ ಮೇಲಣ ಪದ್ಯದ ಛಾಯೆ ಕಂಡುಬರುತ್ತದೆ. ಆದರೆ ಲಕ್ಷ್ಮೀಶನು ತನ್ನದೇ ಆದ ಬಗೆಯಲ್ಲಿ ಈ ಪ್ರಸಂಗ ಚಿತ್ರಕ್ಕೆ ಹಾಸ್ಯದ ಮೆರುಗುಕೊಟ್ಟ ನವೀನತೆ, ಸೊಗಸು ತಂದಿದೆ ವರ್ಣನೆಗೆ. ಅದು 'ಚಂದ್ರಪ್ರಭ ಪುರಾಣ'ದ ಪದ್ಯದಲ್ಲಿಲ್ಲ. ಹಾಗೆಯೇ,

ವಿರಹಿಗೆ ಬೇಗೆಯಂ ಪ್ರಿಯರ್ಗೆ ರಾಗಮನಾಗಿಸುಗುಂ ಬನಂಗಳೊಳ್
ಮೊರೆವ ಮದಾಳಿ ಕೂಜಿಸುವ ಕೋಗಿಲೆ ಕೇಗುವ ಸೋಗೆ ಚಪ್ಪರಿ
ಪ್ಪರಗಿಳಿ ಕುಪ್ಪೆವಾಯ್ವ ಕಪಿ ಮೂಡಿ ಮುೞುಂಗುವ ಜಕ್ಕವಕ್ಕಿ ಸಂ
ಚರಿಸುವ ಹಂಸೆ ಕೂಡುವ ತುರಂಗಮಘುಮ್ಮೆನುತಿರ್ಪ ಪಾರಿವಂ ||

—ಸೂ. ಸು., ಪು ೭೨, ಪದ್ಯ ೪೧

ನಿಚ್ಚಳದೊಳೆಸೆವ ತಿಳಿಗೊಳನ ಕಲಕಾಡಿ ಬಿರಿ
ದಚ್ಚಲರ ಧೂಳಿಗಳ ಚೆಲ್ಲಾಡಿ ಸಲೆ ಮದಂ
ಪೆಚ್ಚಿ ತರುಲತೆಯನಣೆದಾಡಿ ಮಱಿದುಂಬಿಗಳ ಕೂಡಿಕೊಂಡೀಬನದೊಳು ||
ನಿಚ್ಚವೆಳವೆಲರೆಂಬ ಸೊಕ್ಕಾನೆ ತಾನೆ ತ
ನ್ನಿಚ್ಚೆಯಿಂ ತಿರುಗುತಿದೆ ತೊಲತೊಲಗಿ ವಿರಹಿಗ
ಳ್ಬೆಚ್ಚರದೊಳೆಂದೆತ್ತಲುಂ ಪ್ರುಯ್ಯಲಿಡುವಂತೆ ಕೂಗುತಿವೆ ಕೋಗಿಲೆಗಳು ||

—ಜೈ. ಭಾ., ೩–೨೪

ಈ ಎರಡು ಪದ್ಯಗಳಲ್ಲಿ ಕಲ್ಪನಾಸಾಮ್ಯ ಕಂಡುಬರುತ್ತದೆ. ಈ ರೀತಿ ಲಕ್ಷ್ಮೀಶ ಕವಿಯ ಜೈಮಿನಿ ಭಾರತದಲ್ಲಿಯ ಪುರವರ್ಣನೆಯ ಪದ್ಯಗಳ ಮೇಲೆ ಪೂರ್ವಕವಿಗಳ ಪುರವರ್ಣನಾ ಪದ್ಯಗಳ ಪರಿಣಾಮವಾಗಿರುವುದು ಕಂಡುಬಾರದೆ ಇರದು.

ಕವಿ ಲಕ್ಷ್ಮೀಶನ ಕಲ್ಪನಾನಾವೀನ್ಯದ ಪುರವರ್ಣನ ಪದ್ಯಗಳನ್ನೂ ಅವನ ಜೈಮಿನಿ ಭಾರತದಲ್ಲಿ ಕಾಣುತ್ತೇವೆ.

ಈಗಳೀ ನಗರಂ ಮಹೀಲಲನೆಗಾಸ್ಯಾಬ್ಜ
ಮಾಗಿರ್ಪುದೆತ್ತಲು ಗಗನದೆಡೆಗೇಳ್ವ ಬಹು
ಯಾಗಧೂಮಂಗಳೆಂಬಾಲೋಲನೀಲಾಳಕಾವಳಿಯ ಚೆಲ್ವಿನಿಂದೆ ||

—ಜೈ. ಭಾ., ೩–೧೪

ಇದು ಪುರಸ್ತ್ರೀಯ ಮಣಿ ಕಾಂಚೀವಲಯವೊ, ಭೂ
ಸುದತಿಯ ಕೊರಲ ವಿರಾಜಿಪ ರತ್ನಮಾಲಿಕೆಯೊ,
ತ್ರಿದಶಪತಿಗಿರಿಗಳಂ ಕಡಿವಂದು ತೆಗೆದಿಡುವೆನೆಂದು ತಿರಿಪಿದ ಕುಲಿಶದ ||
ಪೊದೞುವೆಳಗಿಳೆಗಿಳಿದು ವಜ್ರಮಯಮಾಗಿ ನಿಂ
ದುದೊ ವಿಮಲಕೀರ್ತಿಚಂದ್ರಿಕೆಯಂ ಪರಪುವ ನಗ
ರದ ರಾಜಮಂಡಲವ ಪರಿವೇಷವೋ ಪೇಳೆನಲ್ಕೋಟೆ ಕಣ್ಗೆಸೆದುದು ||

—ಜೈ. ಭಾ., ೧೦–೩೬

ಮೇರುಗಿರಿಯಂ ಜಱಿಕಿವ ಕಾಂಚನದ ಗೋಪುರಂ
ತೋರವೊಲೆ ರಾಜಮಾರ್ಗಂ ಬಾಹುಲತೆ ನೃಪಾ
ಗಾರಂ ಮುಖಾಂಬುಜಂ ಚಿತ್ರಿತಪತಾಕೆಗಳ್ಮಲಿಸುವಳಕಾವಳಿಗಳು ||
ತೋರಣಂ ಮಣಿಹಾರಮೆಸವ ಕೋಟಾವಲಯ
ಮಾರಾಜಿಪಂಬರಂ ಪರಿಖೆ ಮೇಖಲೆ ಗೃಹಸು
ಧಾರೋಚಿ ದರಹಾಸಮಾಗಲಾ ನಗರಿ ಚೆಲ್ವಿನ ನಾರಿಯಂತಿರ್ದುದು ||

—ಜೈ. ಭಾ., ೧೭–೮

ಹೀಗೆ ಪುರದ ಅಂಗೋಪಾಂಗಗಳನ್ನು ನಾರಿಯ ಅಂಗೋಪಾಂಗಗಳಿಗೂ ಭೂಷಣಗಳಿಗೂ ಹೋಲಿಸಿರುವುದನ್ನು ಜೈಮಿನಿ ಭಾರತದಲ್ಲಿ ಕಾಣುತ್ತೇವೆ.

ವಿರಚಿಸಿದ ಕರುವಾಡದಿಕ್ಕೆಲದ ನವರತ್ನ
ಪರಿಖಚಿತಕನಕತೋರಣವೊಪ್ಪಿದುದು ರಜತ
ಗಿರಿಶಿಖರಮಂ ಸಾರ್ದ ಶುಭ್ರಾಭ್ರದೊಳ್ಮೂಡಿದಮರೇಂದ್ರಚಾಪದಂತೆ ||
ಪರಿಪರಿಯ ಗುಡಿ ಕಳಸ ಕನ್ನಡಿ ಪತಾಕೆ ಸೀ
ಗುರಿ ಚವರಿಗಳ ಸಾಲ್ಗಳೆಸದುವು ಗಗನಮೆಂಬ
ಕರಿಯ ಸಿಂಗರಿಸಿದರೊ ಪರಿಮಳೋತ್ಸವಕೆ ಪೊಱಮಡುವನಿಲರಾಜಂಗೆನೆ ||

—ಜೈ. ಭಾ., ೬–೧೧

ಪಗಲ ದೆಸೆಗಳುಕಿ ಪರೆದಿರ್ದ ಬೆಳ್ದಿಂಗಳೀ
ನಗರಮಂ ಪೊಕ್ಕು ವೆಂಟಣಿಸಿ ಮಾರ್ಮಲೆತಿರಲ್
ಮಿಗೆ ಮೋಹರಿಸಿ ಬಂದು ಮುತ್ತಿಗೆಯನಿಕ್ಕಿಕೊಂಡಿರ್ಪೆಳವಿಸಿಲ್ಗಳೆನಲು ||
ಗಗನಮನಡರ್ದ ಸೌಧಂಗಳ ಮರೀಚಿಯಿಂ
ಪೊಗರುಗುವ ಪೊಚ್ಚಪೊಸ ಪೊನ್ನಕೋಂಟೆಗಳ ಕಾಂ
ತಿಗಳ್ಸೈದೆ ಮುಸುಕಿಕೊಂಡೆಸದಿರ್ದವರ್ಜುನನ ಕಣ್ಗೆ ಕಾತುರಮಾಗಲು ||

—ಜೈ. ಭಾ., ೧೭–೬

ಲಕ್ಷ್ಮೀಶನ ಉಪ್ಪರಿಗೆಯ ಮತ್ತು ಕೋಟೆಯ ವರ್ಣನೆಗಳು ಈ ಬಗೆಯಾಗಿವೆ.

ನಸುನಗೆಯೊಳರೆವಿರಿದ ಮಲ್ಲಿಗೆಯನುಱಿ ಪೊಳವ
ದಶನದೊಳ್ಕುಂದಮಂ ಮೊಗದೊಳರವಿಂದಮಂ
ಮಿಸುಪ ನಳಿತೋಳೊಳ್ಮಿರೀಷಮಾಲೆಯನೆಸವ ನಾಸದೊಳ್ಸಂಪಗೆಯನು ||
ಎಸಳ್ಗಣ್ಣೊಳುತ್ಪಳಮನುಗುರ್ಗಳೊಳ್ಕೇತಕಿಯ
ನೊಸದಿರಿಸಿಕೊಂಡುಳಿದಲರ್ಗಳಂ ಮಾರ್ವಪೋ
ಲ್ಕುಸುಮದ ಪಸರದೊಳೊಪ್ಪಿದರಲ್ಲಿ ಪೂವಡಿಗವೆಣ್ಗಳದನೇವೇಳ್ವೆನು ||

—ಜೈ. ಭಾ., ೬–೧೬

ಎಂಬಲ್ಲಿ ಹೂವಾಡಗಿತ್ತಿಯರ ಹಾಗೂ ಅವರ ಅಂಗಡಿಗಳ ವರ್ಣನೆ,

ತಗರ್ವೆಣಗಿಸುವ ಸಿಪಿಲೆಗಚ್ಚಿಸುವ ಕೋಳಿಗಾ
ಳೆಗವ ಕಾದಿಸುವ ಕರಿತುರಗದೇಱಾಟಮಂ
ಮಿಗೆ ತೋಱಿಸುವ ನೆತ್ತಪಗಡೆಯೊಳ್ಬಿಸದಿಸುವ ಜೂಜುಗಳನೊಡ್ಡಿ ನಲಿವ ||

ಬಗೆ ಬಗೆಯ ರಾಜಪುತ್ರರ ತನುವಿಲೇಪನಾ
ದಿಗಳೊರಸೊರಸಿನಿಂದುದಿರ್ದ ಪರಿಮಳದ ಧೂ
ಳಿಗಳನಲ್ಲಿರ್ದ ಸೊಕ್ಕಾನೆಗಳ್ಮೊಗೆಮೊಗೆದು ಮಿಗೆ ಚೆಲ್ಲಿಕೊಳುತಿರ್ದುವು ||

—ಜೈ. ಭಾ., ೬–೩೯

ಎಂಬಲ್ಲಿ ದ್ವಾರಕಾನಗರದಲ್ಲಿ ಜರುಗುತ್ತಿದ್ದ ವಿವಿಧ ವಿನೋದಾವಳಿಗಳ ವರ್ಣನೆ ಬರುತ್ತದೆ.

ಮುತ್ತೆ ಮುಂದೈದುವ ತುರಂಗಮುದ ಕೂಡೆ ನಡೆ
ಯುತ್ತೆ ಬಱಿದೊವಲುಡಿಗೆಯವರ ವಕ್ರಾಂಗಿಗಳ
ನೊತ್ತೋಳವರನೊಂದು ಕಾಲವರನೊಂದು ಕಣ್ಣವರ ಮೂಱಡಿಗಳವರ ||
ಉತ್ತುಂಗನಾಸಿಕದವರ ಮೂಱುಕಣ್ಣವರ
ನೆತ್ತಿಗೋಡೆರಡುಳ್ಳವರನೊಂದು ಕೋಡವರ
ಕತ್ತೆಮೊಗಕುದುರೆಮೊಗದವರ ದೇಶಂಗಳಂ ಕಂಡನಾಕಲಿಪಾರ್ಥನು ||

—ಜೈ. ಭಾ., ೧೬–೨೦

ಎಂಬಲ್ಲಿ ವಿವಿಧ ದೇಶಗಳ ವೈಚಿತ್ರ್ಯಗಳ ವರ್ಣನೆಯನ್ನು ನಾವು ಕಾಣುತ್ತೇವೆ.

ದ್ವಾರಕಾನಗರದಲ್ಲಿ ಭೀಮನು ಮತ್ತು ರತ್ನಪುರದಲ್ಲಿ ಶ್ರೀಕೃಷ್ಣಾರ್ಜುನರು ವಾರಾಂಗನಾವಾಟಿಯೊಳಗಿಂದ ಅಲೆದಾಡಿದ ವರ್ಣನೆ ಬರುತ್ತದೆ. ಇದು ವರ್ಣನೆಗಾಗಿ ಪ್ರಸಂಗವನ್ನುಂಟುಮಾಡಿದಂತೆ ಅಸಹಜವೆಂದೆನಿಸುವಂತಿದ್ದರೂ ಆಗಿನ ಸಮಾಜದ ಒಂದು ಚಿತ್ರವನ್ನೂ ವಾರನಾರಿ, ವಿಟ, ಕುಂಟಣಿಯರ ನಡೆನುಡಿ ಭಾವಭಂಗಿಗಳ ವರ್ಣನೆಯನ್ನೂ ಕಣ್ಣಿಗೆ ಕಟ್ಟಿದಂತೆ ಮಾಡುವುದು. ಆಗ ಸಮಾಜದಲ್ಲಿ ವಾರಾಂಗನಾವಾಟಿಗೆ ಅಷ್ಟೇನೂ ಗೌಣಸ್ಥಾನವಿರಲಿಲ್ಲ. ಕಲಾಕೋವಿದರಿರುವ ಆಗರವದು. ಸಂಧಿ ೬ರಲ್ಲಿ ೧೮ ಪದ್ಯಗಳನ್ನೂ (ಪ. ೨೦–೩೭), ಸಂಧಿ ೨೬ರಲ್ಲಿ ೫ ಪದ್ಯಗಳನ್ನೂ (ಪ. ೧೯–೨೩) ಈ ವರ್ಣನೆಗಾಗಿ ಕೊಡಲಾಗಿದೆ. ಅವುಗಳಲ್ಲಿ :

..............................ಗಣಿ
ಕಾನಾರಿಯರ ಸದನಪಙ್ತಿಗಳ ಲೋವೆಗಳ ಸಾಲ್ಮೆಱದುವಿಕ್ಕೆಲದೊಳು ||
ಏನಾದಡಂ ಮುನಿಮೃಗಾವಳಿಯ ಬೇಂಟೆಯಂ
ತಾನಾಡಲೆಂದು ಸಿಂಗರದ ಪೆಣ್ಗಾಡಿನೊ
ಳ್ಮೀನಾಂಕನೃಪತಿ ಕಟ್ಟಿಸಿದ ಬೆಳ್ಮಾರಂಗಳಾಗಬೇಕೆಂಬಂತಿರೆ || (೬–೨೦)

ಆಭರಣಮುಲುಗಿದಡೆ ಕಣ್ಗದಿಸೂಸಿದಡೆ
ಶೋಭಿಸುವ ತನುಗಂಧಮುಣ್ಮಿದಡೆ ಜನರ ನಿ
ದ್ರಾಭಂಗಮಾಗಿ ಕಂಡಪರೆಂಬ ಭೀತಿಯಿಂದೈತರ್ಪ ಕಾಮಿನಿಯನು ||
ಸಾಭಿಲಾಷೆಯೊಳೊರ್ವ ವಿಟನಿದಿರ್ವಂದು ಮು
ತ್ತೇಭಗಾಮಿನಿ ಭೃಂಗನೀಲಕುಂತಳೆ ಪನ್ನ
ಗಾಭಸುಂದರವೇಣಿ ಬೆದಱಬೇಡೆನುತೆ ತಕ್ಕೈಸಿದನದೇಂ ಪ್ರೌಢನೋ || (೨೬–೮)

ಅಂಗಜಶ್ರಮದಿಂದೆ ಬೆಮರ್ದ ಕಾಮಿನಿ ತನ್ನ
ತುಂಗಕುಚತಟದ ಕಸ್ತೂರಿಯೊಳ್ಪುದಿದಿನಿಯ
ನಂಗವಮಂ ಕಂಡಿದೇತಕೆ ಕೃಷ್ಣರೂಪಾದೆ ನೀನೆಂದು ಬೆಸಗೊಳಲ್ಕೆ ||
ಅಂಗನೆ ತಿಳಿಯದಾದೆ ಪೊತ್ತಿರ್ದನಂದು ಕೃ
ಷ್ಣಂ ಗಿರಿಯನೊಂದನೆರಡದ್ರಿಗಳನೀಗಳಾಂ
ಹಿಂಗದಾಂತಿಹೆನೆನಗೆ ಕೃಷ್ಣಭಾವಂ ಬರ್ಪುದಚ್ಚರಿಯೆ ಪೇಳೆಂದನು || (೨೬–೨೦)

ಇಂತಹ ಅತಿ ಚಮತ್ಕಾರದ ವರ್ಣನೆಗಳು ಇಲ್ಲಿ ತುಂಬಿವೆ.

'ಸೂಕ್ತಿಸುಧಾರ್ಣವ'ದಲ್ಲಿ ಹೇಳಿದಂತೆ ಬನ, ಪಾಮರಿ, ಪ್ರಪಾಶಾಲೆ, ಜಲಾಶಯ, ಕೋಟೆ, ಅಂಗಡಿಸಾಲು, ವಾರಾಂಗನಾವಾಟ ಮೊದಲಾದ ಎಲ್ಲ ವರ್ಣನೆಗಳಿಗೂ ಈ ಕಾವ್ಯದಲ್ಲಿ ಆಸ್ಪದವಿದೆ. ಅವುಗಳನ್ನು ಬೇರೆ ಬೇರೆ ಸ್ಥಾನಗಳಲ್ಲಿ ಸನ್ನಿವೇಶಕ್ಕೆ ಹೊಂದಿಸಿ ವರ್ಣನೆಯನ್ನು ಅಳವಡಿಸಿದುದು ಕವಿ ಲಕ್ಷ್ಮೀಶನ ಸಂಪಾದಕೀಯ ನೈಪುಣ್ಯ ಎಂದು ಹೇಳಬಹುದು.

## ನಾಯಕಾಭ್ಯುದಯ

ಮಹಾಕಾವ್ಯದಲ್ಲಿ ಅಡಕವಾಗತಕ್ಕ ಅಷ್ಟಾದಶವರ್ಣನೆಗಳ ಒಂದಂಗವಾದ ನಾಯಕಾಭ್ಯುದಯ ವರ್ಣನೆಯ ವಿವರವನ್ನು 'ಸೂಕ್ತಿಸುಧಾರ್ಣವದಲ್ಲಿ' ಹೀಗೆ ಹೇಳಿದೆ :

ಮುನಿಸಿಂದಾಂತರನಿಕ್ಕಿ ಭೂವಳಯಮಂ ನಿಷ್ಕಂಟಕಂ ಮಾಡಿ ಕೀ
ರ್ತಿ ನಿಜಾಜ್ಞಾಸಹಿತಂ ದಿಶಾವಳಯಮಂ ತಳ್ತಪ್ಪಿ ಸಂಗೀತಮಂ
ಜನನಾಥಂ ಮುದದಿಂದವೋಲಗದೊಳೆತ್ತಂ ಕೇಳ್ದು ತಾಂ ತ್ಯಾಗವ
ರ್ಧನಮಂ ಮಾಳ್ಪುದು ನಾಯಕಾಭ್ಯುದಯಮೆಂಬಂಗಂ ಮಹಾಕಾವ್ಯದೊಳ್ ||

ಗೆಲವಿಂ ಭೂಮಿಜೆ ಕೈಗೆವರ್ಪುದೆ ಫಲಂ ರಾಮಂಗೆ, ಮುಂಪೋದ ಭೂ
ತಲರಾಜ್ಯಂ ಕ್ರಮದಿಂದೆ ಬರ್ಪುದೆ ಫಲಂ ಧರ್ಮಾತ್ಮಜಂಗಾರ್ಪಿನಿಂ
ಸಲೆ ರಾಗೋತ್ಸವಸಿದ್ಧಿ ಸಾರ್ಪುದೆ ಫಲಂ ಶ್ರೀಖೇಚರಂಗಂಗತಱಿಂ
ಫಲಯೋಗಸ್ಥಿತಿ ನಾಯಕಾಭ್ಯುದಯಮೆಂಬಂಗಂ ಮಹಾಕಾವ್ಯದೊಳ್ ||

—ಸೂ. ಸು., ಪು. ೯೩

ಈ ನಾಯಕಾಭ್ಯುದಯ ವರ್ಣನೆ ಕನ್ನಡ ಜೈಮಿನಿ ಭಾರತದಲ್ಲಿ ೩೪ನೆಯ ಸಂಧಿಯಲ್ಲಿ ಬರುತ್ತದೆ. ೩೪ನೆಯ ಸಂಧಿಯೇ ಈ ಕಾವ್ಯದ 'ಫಲಯೋಗಸ್ಥಿತಿ.' ಅರ್ಜುನನು ಯಜ್ಞಾಶ್ವದೊಂದಿಗೆ ಒಂದು ವರ್ಷಕಾಲ ಭೂವಲಯವನ್ನು ಸುತ್ತಾಡಿ ವಿರೋಧಿರಾಜರನ್ನೆಲ್ಲ ಗೆದ್ದುಕೊಂಡು ಅವರೆಲ್ಲರೊಂದಿಗೆ ಹಸ್ತಿನಾವತಿಗೆ ಬಂದನು.ಎಂದರೆ ನಾಯಕನಾದ ಧರ್ಮರಾಯನಿಗೆ ಇನ್ನು ವೈರಿಗಳಿಲ್ಲ; ಅವನು ನಿಷ್ಕಂಟಕನು. ಬಳಿಕ ಚೈತ್ರಪೌರ್ಣಿಮೆಗೆ ವೈಭವಯುಕ್ತವಾದ ಯಜ್ಞವನ್ನು ನೆರವೇರಿಸುತ್ತಾರೆ ಪಾಂಡವರು.

ಯಾಗದಿಂ ತಣಿದು ಪಾವನಮಾದುದಿಳೆ ಹವಿ
ರ್ಭಾಗದಿಂ ತುಷ್ಟಿವಡೆದುದು ದೇವತಾವಳಿ ಸ
ರಾಗದಿಂದಸುರಾರಿ ಸಂತುಷ್ಟನಾಗಿ ತೆಗೆದಪ್ಪಿ ಭೂಪಾಲಕಂಗೆ ||

—ಜೈ. ಭಾ., ೩೪–೨೫

ಹೀಗೆ ಯಜ್ಞವು ಮುಗಿದಮೇಲೆ ಎಲ್ಲರೂ ಅವಭೃಥಸ್ನಾನಕ್ಕಾಗಿ ಹೊರಡುತ್ತಾರೆ. ಅದಾದ ಬಳಿಕ,

ಸುಪ್ರಸನ್ನತೆಯಿಂದ ಸಾನ್ನಿಧ್ಯಮಾಗಿ ಬಿಡ
ದಪ್ರಮೇಯಂ ತಾನಿರಲ್ಕೆ ನೃಪಮೌಳಿ ಪರ
ಮಪ್ರೀತನಾಗಿ ತೊಳಗಿದನಧ್ವರಂ ಮುಗಿಯೆ ರಾಜಮುನಿಗಣದ ನಡುವೆ || (೩೪-೨೬)

ರಮಣಿಸಹಿತರಸನಭಿಷಿಕ್ತನಾದಂ ಯಥಾ
ಕ್ರಮದಿಂದ ಸೋಮಪಾನಂಗೈದರೆಲ್ಲರುಂ
ವಿಮಲ ಹೋಮಂಗಳ ಪುರೊಡಾಶೇಷಮುಂ ಪ್ರಾಶಿಸಿದರುತ್ಸವದೊಳು ||
ತಮತಮಗೆ ವಂದಿಗಳ್ ಕೊಂಡಾಡೆ ಗಾಯಕೋ
ತ್ತಮರೊಲಿದು ಪಾಡೆ ನರ್ತನದ ಮೇಳವದ ಸಂ
ಭ್ರಮದಿಂದ ವೀಣಾದಿವಾದಿತ್ರ ಘೋಷಮುಂ ಮಾಡೆ ನೃಪವರನೆಸೆದನು || (೩೪-೨೭)

ಇಲ್ಲಿ ಧರ್ಮಾದಿಗಳು **ಸಂಗೀತ ವೀಣಾದಿವಾದನ**ಗಳನ್ನು ಕೇಳುತ್ತ ಸುಖವಾಗಿ ಓಲಗಂಗೊಟ್ಟು ರಾಜಮುನಿಗಳ ನಡುವೆ ಕಾಲವನ್ನು ಕಳೆದರು. ಆಮೇಲೆ,

ವಿನುತ ರತ್ನಾದ್ರಿ ಶಿಖರಸ್ಥಮಾಗಿರುತಿರ್ಪ
ಕನಕವೃಷಮುಂ ಕೊಟ್ಟನವನಿಪಂ ಬಕದಾಲ್ಭ್ಯ
ಮುನಿಗೆ, ಬಳಿಕೊಂದೊಂದು ರಥವನೊಂದೊಂದಿಭವನೀರೈದು ವಾಜಿಗಳನು ||
ಅನುಚರ ಚತುಷ್ಟಯವನೊಂದು ಕೊಳಗದ ಮುತ್ತ
ನನುಪಮ ಸುವರ್ಣಶತಭಾರಮುಂ ನೂಱು ಕಾಂ
ಚನವಿಭೂಷಿತ ಸುರಭಿಗಳನಿತ್ತು ಮನ್ನಿಸಿದನಖಿಳ ಋತ್ವಿಕ್ಕುಗಳನು || (೩೪-೨೮)

ಈ ಬಗೆಯಲ್ಲಿ ಮುನಿಶ್ರೇಷ್ಠರನ್ನು ವಿಪುಲದಾನಗಳಿಂದ ತೃಪ್ತಿಪಡಿಸಿದುದಲ್ಲದೆ ದ್ವಾರ ಪಾಲಕ ಮೊದಲಾದ ಜನಕ್ಕೆ ಇಚ್ಛಾದಾನವನ್ನು ಮಾಡಿ, ಚಂದ್ರಹಾಸಾದಿ ಪೃಥ್ವೀಶ್ವರರಿಗೆ

ಘೋಟಕಸಹಸ್ರಮುಂ ಶತಶತಗಜಂಗಳಂ
ಕೋಟಿ ಪರಿಮಿತ ಸುವರ್ಣಂಗಳಂ ಮಣಿಮಯ ಕಿ
ರೀಟಾದಿ ಭೂಷಣಾವಳಿಗಳಂ ಕೊಟ್ಟಖಿಳ ಭೂಪಾಲರಂ ಮನ್ನಿಸಿ ||

ಕಾಣಿಕೆಗಳನ್ನು ಕೊಟ್ಟು, ವಧೂಟಿ ವರ್ಗವನ್ನು ಅಲಂಕಾರಗಳಿಂದ ಸತ್ಕರಿಸಿದರು. ಪಾಂಡವರು. ಎಲ್ಲವುಗಳಿಗಿಂತ ಹೆಚ್ಚಿನದೆಂದರೆ ಮಾಡಿದ ಈ ಯಾಗದ ಫಲತ್ಯಾಗ— ಅಶ್ವಮೇಧಯಾಗದ ಸರ್ವಫಲವನ್ನು ಶ್ರೀಕೃಷ್ಣಾರ್ಪಣ ಮಾಡಿದುದು.

ನಯದೊಳರಸಂ ಬಳಿಕ ಮುನಿನಿಕರ ಭೂಪಾಲ
ಚಯದಿಂದ ಸಕಲಜನಜಾಲದಿಂದೆಸವ ಮಣಿ
ಮಯಸಭಾಮಧ್ಯದೊಳ್ ದಿವ್ಯಸಿಂಹಾಸನದ ಮೇಲೆ ಮುರಹರನನಿರಿಸಿ ||
ಪ್ರಿಯದಿಂದಲಂಕಾರಪೂಜೆಗಳೊಳುಪಚರಿಸಿ
ಹಯಮೇಧಫಲವನಚ್ಯುತಕರದೊಳೀಯಲ್ಕೆ
ಜಯ ಜಯೆಂದುದು ಲೋಕಮಖಿಲರನುಳಿ ಕಳಿದು ಮೊಳಗಿದುವು ಸುರ
ದುಂದುಭಿಗಳು || (೩೪-೩೧)

ಈ ಕಾವ್ಯಕ್ಕೆ ನಾಯಕ ಶ್ರೀಕೃಷ್ಣ. ಅಶ್ವಮೇಧಯಜ್ಞಪೂರ್ತಿಯೇ ಫಲ. ಫಲವನ್ನು ನಾಯಕನಿಗೆ ಅರ್ಪಿಸಿದುದೇ ನಾಯಕಾಭ್ಯುದಯ ವರ್ಣನೆ. ಧರ್ಮರಾಜನು ಯಜ್ಞಫಲವನ್ನು ಅರ್ಪಿಸಿದುದನ್ನು, ಶ್ರೀಕೃಷ್ಣನು ಅದನ್ನು ಸ್ವೀಕರಿಸಿದುದನ್ನು ಕಂಡ ಜನ 'ಮೂಜಗಂ ಮಿಗೆ ತಣಿದು ಕೊಂಡಾಡಿತ್ತೆಂ'ದು ಕವಿ ಬಣ್ಣಿಸುತ್ತಾನೆ. ಯಜ್ಞ ಮುಗಿದನಂತರ ಸಮಸ್ತರಿಗೆ ಭೋಜನದಿಂದ ತೃಪ್ತಿಯಾಗುವಂತೆ ಮಾಡುತ್ತಾರೆ ಧರ್ಮಜಾದಿಗಳು.

> ದೃಷ್ಟಿಗಾಶ್ಚರ್ಯವಾಗಿಹ ಯಜ್ಞಮಂ ಪೊಗಳು
> ತಷ್ಟದಿಗ್ವಳಯದಾಶ್ರಮ ಜನಪದಂಗಳ್ಗೆ
> ಹೃಷ್ಟತೆಯೊಳೈದಿದುದು ತಮತಮಗೆ ಪೊತ್ತ ಬಹುಧನದ ಭಾರಂಗಳಿಂದ ||(೩೪–೩೭)

ಹೀಗಾಗಿ ಧರ್ಮನ ಯಜ್ಞದ ಕೀರ್ತಿ ದಿಗ್ದೇಶಗಳಿಗೆ ಹಬ್ಬಿತು. ಧರ್ಮರಾಜನು ೬೦ ವರುಷ ಸುಖದಿಂದ ರಾಜ್ಯವಾಳಿದನು ಎಂಬ ವರ್ಣನೆಯೊಂದಿಗೆ ಕಥಾಭಾಗವು ಮುಗಿಯುತ್ತದೆ. ಮುಂದೆ ಕಾವ್ಯಸಮಾಪ್ತಿಯ ಏಳು ಪದ್ಯಗಳಿವೆ (ಪ. ೪೦–೪೬).

ಯಜ್ಞಫಲದ ಅರ್ಪಣೆ, ಯಜ್ಞದ ಕೀರ್ತಿ, ಯಜ್ಞಕಾಲದಲ್ಲಿ ಮಾಡಿದ ದಾನ–ಧರ್ಮದ ತ್ಯಾಗ ಇವುಗಳ ವರ್ಣನೆ 'ನಾಯಕಾಭ್ಯುದಯ' ಎಂಬ ಮಹಾಕಾವ್ಯದ ಅಂಗದಲ್ಲಿ ಬರಬೇಕು ಎಂಬುದು ಕಾವ್ಯನಿಯಮ. ಕವಿ ಲಕ್ಷ್ಮೀಶನು, ಯಜ್ಞಫಲಾರ್ಪಣೆಯನ್ನು ಶ್ರೀಕೃಷ್ಣನಿಗೆ, ಮಹಾದಾನ–ಕನಕವೃಷಭಾರ್ಪಣೆಯನ್ನು ಬಕದಾಲ್ಭ್ಯನಿಗೆ ಮಾಡಿಸಿ, ಯಜ್ಞದ ಕೀರ್ತಿ ದಿಗ್ದೇಶವನ್ನು ವ್ಯಾಪಿಸಿತು ಎಂದು ಬಣ್ಣಿಸಿರುವುದು ಆ ನಿಯಮಾನುಸಾರವಾಗಿದೆ. ಇದರ ತರುವಾಯ ನಕುಲೋಪಾಖ್ಯಾನವನ್ನು ಸೇರಿಸಿದ್ದರೆ, 'ನಾಯಕಾಭ್ಯುದಯ' ಅಂಗಕ್ಕೆ ಬಾಧೆ ಬರುತ್ತಿತ್ತು. ಏಕೆಂದರೆ, ಆ ಆಖ್ಯಾನದಲ್ಲಿ ಧರ್ಮನ ಯಜ್ಞದ ಮಹತ್ವವನ್ನು ಕಡಿಮೆಮಾಡಲಾಗಿದೆ. ಆದುದರಿಂದಲೇ ಲಕ್ಷ್ಮೀಶನು ಆ ಭಾಗವನ್ನು ಬಿಟ್ಟುಬಿಟ್ಟಿರಬೇಕು.

## ವಿವಾಹವರ್ಣನ

> ಪಸೆ ಪಂದಲ್ ದಟ್ಟಿ ಜಾಗಂ ಜಗಲಿ ಬಿಗಿದ ಭೃಂಗಾರಿ ಮೇಲ್ಕಟ್ಟು ಚಿತ್ರಂ
> ಪೊಸಕುಂಭಂ ಶಂಕು ನೂಲ್ಕೈರಣೆ ತಳಿರ್ಗಳಸಂ ಸರ್ವಧಾನ್ಯಂ ಮೊಸರ್ ಭ
> ಕ್ಷ್ಯಸಹಸ್ರಂ ಲಾಜೆ ಹೋಮಂ ಪಱಿಕಡೆಗುಡಿ ಪೊದೋರಣಂ ಬಾಸಿಗಂ ಸೇ
> ಸೆ ಸಮಸ್ತ ಸ್ತ್ರೀಜನಂ ಕನ್ನಡಿ ಜವಳಿಗಳುದ್ವಾಹದೊಳ್ ವರ್ಣನೀಯಂ ||
>
> —ಸೂ. ಸು., ಪು. ೯೪

ಜೈಮಿನಿ ಭಾರತದಲ್ಲಿ ವಿವಾಹಪ್ರಸಂಗ ಬರುವುದು ಎರಡು ಕಡೆ. ವಿಷಯೆ–ಚಂದ್ರಹಾಸರ ಮತ್ತು ಚಂಪಕಮಾಲಿನಿ–ಚಂದ್ರಹಾಸರ ವಿವಾಹ. ಇವುಗಳಲ್ಲಿ ಚಂಪಕಮಾಲಿನಿಯೊಡನೆ ಚಂದ್ರಹಾಸನ ವಿವಾಹ ಗಾಂಧರ್ವಪದ್ಧತಿಯಿಂದಾಗಿದೆ ; ಅಲ್ಲಿ ಮೇಲಣ ವರ್ಣನೆಗಳಿಗೆ ಆಸ್ಪದವಿಲ್ಲ. ಮದುವೆಯಾದ ಬಳಿಕ ಮದುಮಕ್ಕಳ ಮೆರವಣಿಗೆ ಹೊರಟಿತು, ಮದುಮಕ್ಕಳು ಮಾವನಾದ ದುಷ್ಟಬುದ್ಧಿಗೆ ನಮಸ್ಕರಿಸಿದರು ಎಂದು

ಹೇಳಲಾಗಿದೆ. ವಿಷಯಾ-ಚಂದ್ರಹಾಸರ ವಿವಾಹ ಮುಖ್ಯವಾದುದು. ಅದರ ವರ್ಣನೆ ಬಹು ವಿಸ್ತಾರವಾಗಿ ಬಂದಿದೆ. ಅದರ ಹರವು ೨೩ ಪದ್ಯಗಳಷ್ಟು (೩೧. ೩–೨೫). ಅಲ್ಲಿ ವಿವಾಹದ ಒಂದು ಪ್ರತ್ಯಕ್ಷ ಚಿತ್ರವನ್ನೇ ಕಣ್ಣೆದುರು ನಿಲ್ಲಿಸುತ್ತಾನೆ ಕವಿ ಲಕ್ಷ್ಮೀಶ.

ತನ್ನ ಮದುವೆ ಚಂದ್ರಹಾಸನೊಡನೆ ಗೊತ್ತಾಯಿತು ಎಂದು ವಿಷಯೆಗೆ ತಿಳಿದಾಗ,

ರಜ್ಜುಬಂಧವನುಗಿದ ಮೃಗದಂತೆ ತಾಂ ನೆನದ
ಕಜ್ಜವೊಡಗೂಡಲ್ಕೆ ಮೊಗಮುರಲ್ದುದು ಬಳಿಕ
ಲಜ್ಜೆ ಮೊಳೆದೋಱಿದುದು ತಲೆವಾಗಿನೆಲವನುಂಗುಟದಿಂದ ಬರೆಯುತಿರಲು ||
(೩೧–೪)

ಎಂಬ ಸ್ಥಿತಿ ಅವಳದಾಯಿತು. ಆಗ ಅವಳನ್ನು ಮಜ್ಜನಗೃಹಕ್ಕೆ ಕರೆದೊಯ್ದು ಮಂಗಳ ಸ್ನಾನ ಮಾಡಿಸಿ, ಸೈರಂಧ್ರಿಯರು ಅವಳ ಅಂಗಾಂಗಗಳ ಸಹಜಸೌಂದರ್ಯವನ್ನು ಬಣ್ಣಿಸುತ್ತ ಅಲಂಕರಿಸುತ್ತಾರೆ. ಆಮೇಲೆ ಅವರ ವಿವಾಹವನ್ನು ಲಕ್ಷ್ಮೀಶನು ೬ ಪದ್ಯಗಳಲ್ಲಿ ಚಿತ್ರಿಸುತ್ತಾನೆ (ಸಂ. ೩೧):

ತೊಳಗಿ ಬೆಳಗುವ ಸದ್ಗುಣಾವಳಿಗಳೈಶ್ವರ್ಯ
ಲಲನೆಯಂ ಗೃಹಪತಿಯ ಮಂದಿರಕೆ ಸಂಘಟಿಸಿ
ಬೆಳವಿಗೆಯನತಿಶಯಂ ಮಾಳ್ಪಂತೆ ಸಿಂಗರಂಗೈದು ನೀಲಾಳಕೆಯರು ||
ಬಳಿಕ ಹೊನ್ನಂದಣದ ಮೇಲೆ ವೈವಾಹಮಂ
ಗಳ ಮಹೋತ್ಸವಕೆ ವಿರಚಿಸಿದ ಮಂಟಪದೆಡೆಗೆ
ನಳಿನಪತ್ರಾಕ್ಷಿಯಂ ತಂದರೊಸಗೆಯಲಂದು ವಿಭವದ ವಿಲಾಸದಿಂದೆ || (೧೩)

ಬಳಸಿದ ಸಮಸ್ತಜನ ಜಂಗುಳಿಯ ಕೈ ಸೊಡ
ರ್ಗಳ ಸಾಲ ಸಂದಣಿಯ ಪಾಡುವ ಪುರಂಧ್ರಿಯರ
ಕಳಸಕನ್ನಡಿವಿಡಿದ ಕನ್ನೆಯರ ನಾನಾಸುವಸ್ತುಗಳ ವಿಸ್ತರಣದ ||
ತೊಳಗುವೊಸಗೆಯ ವಾದ್ಯಸಂಕುಲದ ಬಹುಫಲಾ
ವಳಿಗಳ ಬಿಡಾಯದಿಂದೈತಂದು ದಂಡಿಗೆಯ
ನಿಳಿದನಾರತಿಗಳ ನಿವಾಳಿಯಿಂ ಚಂದ್ರಹಾಸಂ ಭದ್ರಮಂಟಪದೊಳು || (೧೪)

ತರಲಾಯತಾಕ್ಷಿಯೆಂಬಾ ಪ್ರಧಾನನ ಪತ್ನಿ
ಚರಣಮಂ ಪ್ರಕ್ಷಾಳನಂಗೈಯೆ ಮದನನಾ
ದರಿಸಿ ಮಧುಪರ್ಕಮಂ ಮಾಡೆ ಕನ್ಯಾವರಣದೊಳ್ ಕುಲಪರಂಪರೆಯನು ||
ಒರೆಯೆನಲ್ ಶಶಿಹಾಸನೆನಗೆ ವಾಮನ ಗೋತ್ರ
ಮರವಿಂದನಾಭಂ ಪಿತಂ ಹರಿ ಪಿತಾಮಹಂ
ಮುರಹರಂ ಪ್ರಪಿತಾಮಹಂ ಕುಳಿಂದನುಮವನ ಸತಿಯುಂ ಗುರುಗಳೆಂದನು ||
(೧೫)

ಅಲ್ಪಭಾಷಿತಮಲ್ಲದಿಹ ಚಂದ್ರಹಾಸನು ಸು
ಜಲ್ಪಿತಂ ಸೊಗಸೆ ಮದನಂ ಮುದದೊಳಾಗ ಸಂ
ಕಲ್ಪಿಸಿ ನಿರೀಕ್ಷಣಂಗೆಯ್ದು ಸುಮುಹೂರ್ತಮಂ ತೆರೆದೆಗಸಿ ಭೂದಿವಿಜರ ||
ನಲ್ವರಕೆವೆತ್ತು ಜೀರಗೆಬೆಲ್ಲದೊಪ್ಪಮೆಸ
ಗಲ್ಪದದ ಮೆಲ್ಪಕ್ಕಿ ಸುತ್ತುನೂಲ್ ಮೆಱೆಯೆ ಫಣಿ
ತಲ್ಪನಿದಿರೊಳ್ ತದರ್ಪಿತಮಾಗಲೆಂದವನ ಕೈಗೆ ಧಾರೆಯನೆಱೆದನು || (೧೬)

ಮೊರೆವ ಮಱಿದುಂಬಿಗಳ ಮಾಲೆಯಂ ತಾಳ್ದ ನವ
ಪರಿಮಳದ ಮಂದಾರಮಾಲೆಯಂ ವಿಷಯೆ ಸೌಂ
ದರಶಿರೀಷದ ಮಾಲೆಯಂ ಪೋಲ್ವ ನಳಿತೋಳನೆತ್ತಿ ಕಂಧರದೊಳಿಡಲು ||
ಭರಿತ ಲಾವಣ್ಯ ಸಾಕಾರದಿಂ ಮಂಗಳಾ
ಭರಣಂಗಳೆಸವಲಂಕಾರದಿಂ ಪಾರ್ವರು
ಚ್ಚರಿಪಗ್ನಿಹೋತ್ರಪ್ರಕಾರದಿಂ ವಧುವಂ ಕುಳಿಂದಜಂ ಕೈವಿಡಿದನು || (೧೭)

ಮುಂದೆ ವಿರಚಿಸಿದ ವೇದಿಯೊಳೆಸವ ಹಸೆಗೆ ನಡೆ
ತಂದು ಪಾಣಿಗ್ರಹಣಮಂಗೈದು ಲಾಜಾಜ್ಯ
ದಿಂದ ಹೋಮದೊಳಗ್ನಿಯಂ ಬೆಳಗೆ ವಿಪ್ರರಾಶೀರ್ವಾದವಂ ಮಾಡಲು ||
ಬಂದು ತಿಲಕವನಿಟ್ಟು ಪತ್ರಫಲವಂ ಕೊಟ್ಟು
ಪೊಂದಳಿಗೆವಿಡಿದಾರತಿಯನೆತ್ತಲೈದೆಯರ್
ಕಂದರ್ಪರತಿಗಳ ವಿವಾಹಮೆನೆ ಕಂಗೊಳಿಸುತಿರ್ದರಾ ದಂಪತಿಗಳು || (೧೮)

ಇನ್ನು ಮುಂದೆ ಲಗ್ನದ ನಿಮಿತ್ತವಾಗಿ ಚಂದ್ರಹಾಸನಿಗೆ ಕೊಟ್ಟ ಬಳುವಳಿ, ಸಹ ಭೋಜನ, ದಾನಧರ್ಮಗಳ ವಿವರಣೆ ಬರುತ್ತದೆ. ಈ ಮದುವೆಯ ಸಡಗರವು ಮೂರು ದಿನ ನಡೆಯಿತು ಎಂದು ಕವಿ ಬಣ್ಣಿಸುತ್ತಾನೆ.

ಸಂಸ್ಕೃತ ಜೈಮಿನಿ ಭಾರತದಲ್ಲಿಯೂ ವಿವಾಹವರ್ಣನೆ ೫೦ ಶ್ಲೋಕಗಳಷ್ಟು ವಿಸ್ತಾರವಾಗಿ ಬರುತ್ತದೆ (ಅ. ೫೫). ಕವಿ ಲಕ್ಷ್ಮೀಶನು ಹೆಚ್ಚಾಗಿ ಅದನ್ನೇ ಅವಲಂಬಿಸಿದ್ದಾನೆ. ಆದರೆ, ಮದುವೆಯ ಮರುದಿನದ ಉತ್ಸವ ಕಾಲದಲ್ಲಿ, ಮಲ್ಲರು ಜಟ್ಟಿಗಳು ವಿವಿಧ ವಾದ್ಯಕಾರರು ಇತ್ಯಾದಿ (ಒಂದು ದೊಡ್ಡ ಪಟ್ಟಿಯೇ ಅಲ್ಲಿ ಬಂದಿದೆ) ಜನರು ಬಂದ ಮಾತು ಸಂ.ಜೈ.ಭಾರತದಲ್ಲಿ ಬಂದಿದೆ. ಮಂತ್ರಿಯ ಮಗಳ ಮದುವೆ ಎಂದ ಬಳಿಕ ಊರ ಜನರೆಲ್ಲ ಬಂದಿರುವುದು ಸ್ವಾಭಾವಿಕವೆ. ಮದುವೆಯ ವಿಧಿವಿಧಾನಗಳ–ಸಾಮಾಜಿಕ ಕ್ರಿಯೆಗಳ–ವರ್ಣನೆಗೆ ಮಹತ್ತ್ವಕೊಟ್ಟ ಲಕ್ಷ್ಮೀಶನು ಈ ವಿಷಯವನ್ನು ಅಲ್ಲಗಳೆದು ಬಿಟ್ಟಿದ್ದಾನೆ. ವಿವಾಹ ವರ್ಣನೆಯ ಅಂಗಗಳೆಂದು ಹೇಳಿದ ಹಸೆ, ಜಗಲಿ, ಲಾಜೆ, ಹೋಮ ಇತ್ಯಾದಿಗಳ ವರ್ಣನೆಯನ್ನು ಅವನು ವಿವರವಾಗಿಯೆ ಮಾಡಿದ್ದಾನೆ.

### ಕುಮಾರೋದಯವರ್ಣನಂ

ತನುಭವಲಾಭ ದೌಹದ ನಿಮಿತ್ತದ ಸಂಗತಿ ತಕ್ತ ನೋಂಪಿ ಮುಂ
ಗನಸು ಬಯಕ್ಕೆಗಂಟುಗೆ ದೃಗುತ್ಸವಕಾರಣಗರ್ಭಚಿಹ್ನಮೊ
ಳ್ಪಿನ ದಿವಸಂ ಶುಭೋದಯಮಿಳಾದಿಮನೋಹರ ಭೂತಲಕ್ಷಣಂ
ಜನನುತ ಜಾತಕರ್ಮಮಿನಿತುಂ ಸುತಶೋಭನವರ್ಣಸ್ಥಳಂ ||

—ಸೂ. ಸು., ಪು. ೧೧೯, ಪ. ೧

ಕುಮಾರೋದಯ ವರ್ಣನೆಯು ಜೈಮಿನಿ ಭಾರತದಲ್ಲಿ ಲವಕುಶರ ಜನನ ಮತ್ತು ಚಂದ್ರಹಾಸನ ಬಾಲ್ಯದಲ್ಲಿ ಬರುತ್ತದೆ. ಲವಕುಶರ ಜನನಪೂರ್ವದಲ್ಲಿ ಶ್ರೀರಾಮನಿಗೆ ಸಂತಾನದ ಚಿಂತೆ ತಲೆದೋರಿದೆ :

ನೀರಿರ್ದ ಕಾಸಾರಕರವಿಂದಮಿಲ್ಲದಡೆ
ತಾರಕೆಗಳಿರ್ದ ಗಗನಕೆ ಚಂದ್ರನಿಲ್ಲದಡೆ
ಚಾರು ಯೌವನಮಿರ್ದ ಪೆಣ್ಗೆ ನಿಯನಿಲ್ಲದಡೆ ಸನ್ನುತಪ್ರಜೆಗಳಿರ್ದ ||
ಧಾರಿಣಿಗೆ ಧರ್ಮದರಸಿಲ್ಲದಡೆ ಸಿರಿಯಿರ್ದ
ದಾರವಂಶಕೆ ಕುವರನಿಲ್ಲದಡೆ ಮೆಱೆದಪುದೆ ?

ಎಂದು ಅವನು ಸೀತೆಯೆದುರು ಹಲುಬುತ್ತಾನೆ. ಅದಕ್ಕೆ ಸೀತೆ ಕೊಟ್ಟ ಉತ್ತರ :

ಕಾಂತ, ನೀಂ ಪೇಳ್ದುದೇಂ? ಪುತ್ರವತಿಯಹುದು ಜ
ನ್ಮಾಂತರದ ಪುಣ್ಯಮೈಸಲೆ ಪೆಣ್ಗೆ? ಮುನ್ನೆ ತಾಂ
ನೋಂತುದಲ್ಲದೆ ಬಂದಪುದೆ ಬಱಿದೆ ಬಯಸಿದಡೆ? ಸುಕುಮಾರನಂ ಪೊಡೆಯೊಳು ||
ಆಂತೊಳಗೆ ಪುದುಗಿರ್ದ ಪರಿಮಳದೊಳೊಪ್ಪುವಲ
ತಾಂತಕುಟ್ಮಲದಂತೆ ವರಗರ್ಭಲಾಂಛನದ
ಕಾಂತಿಯಂ ತಳೆವುದಂಗನೆಯರೆಲ್ಲರ್ಗೆ ದೊರೆವುದೆ ಮೇದಿನಿಯೊಳು ? ||

—ಜೈ. ಭಾ., ೧೮–೧೯

ಈ ಸಂಭಾಷಣೆಯಲ್ಲಿ ಕುಮಾರೋದಯವು ಒಂದು ಅನಿವಾರ್ಯ ಆಕಾಂಕ್ಷೆಯಾಗಿದೆ. ಅದರ ಚಿಂತೆ ಪತಿಗೆ ಪ್ರಗಲ್ಭವಾಗಿದೆ. ಅಪತ್ಯವಿಲ್ಲದ ವಂಶಕ್ಕೆ ಶೋಭೆಯಿಲ್ಲ ಎಂದು ದೃಷ್ಟಾಂತಗಳಿಂದ ತಿಳಿಯಪಡಿಸಿ ಅವನು ಚಿಂತೆಯನ್ನು ತೋಡಿಕೊಳ್ಳುತ್ತಾನೆ. ರಾಮನ ಚಿಂತೆಯ ಶಮನಕ್ಕಾಗಿ ಸೀತೆ ಕುಮಾರೋದಯವು ಸಹಜಸಾಧ್ಯವಲ್ಲ, ಅದಕ್ಕೆ ಜನ್ಮಾಂತರದ ಪುಣ್ಯವೂ, ವ್ರತೋಪಾಸನೆಗಳ ಬಲವೂ ಬೇಕು ಎಂದು ಹೇಳುವುದು ಪ್ರಾಪ್ತವಾದುದು.

ಕಂದನಾಡುವ ಬಾಲಲೀಲೆಯಂ ನೋಡಿ, ತೊದ
ಲೊಂದಿದಿನಿವಾತನುಱೆ ಕೇಳ್ದು, ಮುದ್ದಿನ ಮುದ್ದೆ
ಯಂದದಂಗವನೆತ್ತಿಕೊಂಡು ನಳಿತೋಳ್ಗಳಿಂದಪ್ಪಿ, ಕೆಂಗುರುಳ್ಗಳೊಲೆವ ||
ಮುಂದಲೆಯ ಕಂಪನಾಘ್ರಾಣಿಸಿ, ತೊರೆದ ಜೊಲ್ಲ
ಚೆಂದುಟಿಯ ಬಾಯ್ದೆಱೆಯನೈದೆ ಚುಂಬಿಸಿ ಸೊಗಸು
ಗುಂದದಾಯೆಂದು ಪಂಚೇಂದ್ರಿಯಪ್ರೀತಿಯಂ ಪಡೆವರಿನ್ನಾವ ಕೃತರೊ ||

—ಜೈ. ಭಾ., ೧೮–೨೦

ತೇಲ್ದೋಸರಿಸಿ ಮೇಲುದಂ ಸೆಳೆವ, ಕವುಲಮಂ
ಪೋಲ್ದ ಕಣ್ಗೊನೆಯಿಂದೆ ತಾಯ ಮೊಗಮಂ ನೋಳ್ಪ,
ಕಾಲ್ದುದಿಗಳಂ ಬಿದಿರಿ ತಡವರಿಸಿ ಕೈಯಿಡುವ ಬಾಲಂಗೆ ಮೋಹದಿಂದೆ ||
ಜೋಲ್ದೊಲೆವ ಹಾರಮಂ ಸರಿದು ಮುಯ್ಪಿಗೆ ಸಾರ್ಚಿ,
ಪಾಲ್ದೊರೆದ ಮೊಲೆಯೂಡಿ, ಕೂಡೆ ತೊಟ್ಟಿಲೊಳಿಟ್ಟು
ಸಾಲ್ದ ಸೈಪಿಂದೆ ಜೋಗುಳವಾಡಿ ತೂಗುವಳದೇಂ ಸುಕೃತಿಯೋ ಧರೆಯೊಳು ||

—ಜೈ. ಭಾ., ೧೮–೨೧

ಲಕ್ಷ್ಮೀಶನ ಈ ಎರಡು ಪದ್ಯಗಳಲ್ಲಿ ಕೆಳಗೆ ಕಾಣಿಸಿದ ಪದ್ಯಗಳ ಛಾಯೆಯಿದೆ :

ಪಸಿದೞುತಿರ್ಪ ಬಾಲಕನ ನಾದಮನಾಲಿಸಿ ಗೇಹಕೃತ್ಯಮಂ
ಬಿಸುಟತಿವೇಗದಿಂ ಪರಿದು ಸೋಗಿಲೊಳಡ್ಡ [೦] ಮಿಟ್ಟು ಚಿ

ಮ್ಮಿಸಿ ಮೊಲೆವಾಲ್ಗಳಂ ದೆಸೆಗೆ ನೋಡದೆ ವಕ್ತ್ರಮನೊಂದಿ ಚೆಲ್ಲದಿಂ
ಮಸಗದೆ ಸಾರ್ಚಿಸಾರ್ಚಿ ಮೊಲೆಯೂಡುವ ಸೈಪೆನಗೆಂದು ಸಾರ್ವುದೊ ||
—ಸೂ. ಸು., ಪು. ೧೨೦, ಪ. ೬

ಮಗನಂ ತೊಟ್ಟಿಲೊಳಿಟ್ಟು ತೂಗಿ ನಲವಿಂದಂ ಜೋಗುಳಂ ಬಾಡಿ ಮೆ
ಲ್ಲನೆಗೆಯಿಂ ಮುದ್ದುಮೊಗಂ ತುಳುಂಕೆ ಪರಸುತ್ತುಂ ನೋಡಿ ಬಾ ದೇವ ಬಾ
ಜಗತೀವಲ್ಲಭ ಬಾರ ಮಾಣಿಕಮೆ ಬಾರೆನ್ನಾನೆಯೆಂದೆತ್ತಿ ಮೆ
ಯ್ವೆಗೆವನ್ನಂ ಮೊಲೆಯೂಡಿ ತೂಪಿಱಿವ ಸೈಪೇಂ ನೋನದಳ್ಗಕ್ಕುಮೇ ||
—'ಅನಂತನಾಥಪುರಾಣ' ೧೨–೫೦, ಸೂ. ಸು., ಪು. ೧೨೧

ಮೊಗಮಂ ನೋಡುವ ಲಲ್ಲೆಗೆಯ್ವ ಮೊಲೆಯುಂಡಬ್ಬಬ್ಬ ಜಾಜೆಂಬ ಕೆ
ಮ್ಮಗೆ ಕಾಲ್ವತ್ತುವ ದೂರದಿಂ ಪರಿದು ಬಂದಪ್ಪಪ್ಪೆನುತ್ತಪ್ಪುವೊ
ಯ್ಯಗೆ ಚೆಯ್ಯಾಡುವ ಮೇಲುದಂ ಮುಸುಕಿಡುತ್ತಾಯೆಂಬ ದಾಯೆಂಬ ಮು
ದ್ದುಗಳಂ ತೋಱುವ ಚಿಣ್ಣನೊಳ್ ನಲಿವ ಪೆಣ್ಣೇಂ ನೋಂಪಿಯಂ ನೋಂತಳೋ ||
—'ಜಗನ್ನಾಥ ವಿಜಯ', ೨–೬೭, ಸೂ. ಸು., ಪು. ೧೨೨. ೧೯

ಜೈಮಿನಿ ಭಾರತದ ೧೯ನೆಯ ಸಂಧಿಯ ಪದ್ಯ ೪೫ ರಿಂದ ೫೫ರ ವರೆಗೆ ವಾಲ್ಮೀಕಿಯ ಆಶ್ರಮದಲ್ಲಿ ಜನಿಸಿದ ಲವ–ಕುಶರ ಜನನ–ಬಾಲ್ಯಗಳ ವರ್ಣನೆ ಬರುತ್ತದೆ. ಜನನಕಾಲದ ಸಂಭ್ರಮ, ಬಾಲಲೀಲೆಗಳ ಸೊಗಸು, ಕುಮಾರರ ಚೌಲೋಪನಯನ ಸಂಸ್ಕಾರ, ನಿಗಮಾದಿಗಳ ಅಧ್ಯಯನ, ರಾಮಾಯಣವನ್ನು ಹಾಡುವ ಅಂದ–ಇವುಗಳನ್ನು ಲಕ್ಷ್ಮೀಶನು ವರ್ಣಿಸುತ್ತಾನೆ. ಈ ಪದ್ಯಗಳು ಮನೋಜ್ಞವಾಗಿವೆ. ಲವಕುಶರು ಶುಭಲಗ್ನದಲ್ಲಿ ಜನಿಸಿದರು. ರಘುಕುಲಸಂವರ್ಧನರು ಹುಟ್ಟಿದರೆಂಬ ಸಂಭ್ರಮ ಅದೆಷ್ಟು ನೋಡಿ :

ದೆಸೆಗಳ್ಪ್ರಸನ್ನತೆಯೊಳೆಸದುವಾಗಸದೊಳುಡು
ವಿಸರಂಗಳೊಪ್ಪಿದುವು, ಪೊಸಗಂಪಿಡಿದು ಗಾಳಿ
ಪಸರಿಸಿತು, ತವೆ ಸುಪ್ರದಕ್ಷಿಣದೊಳುರಿದಗ್ನಿಜ್ವಾಲೆ, ಕಡಲುಕ್ಕಿತು ||
ವಸುಧೆನಲಿದುದು, ತಿಳಿದು ಪರಿದುವು ನದಿಗಳಂದು
ಶಶಿರವಿಗಳುದಯಿಸಿದರೇಕಕಾಲದೊಳೆನ
ಲ್ಕೆಶುಗಳಾಶ್ರಮದ ಮುನಿಗಳ ಕಣ್ಗೆ ಕಾಣಿಸಿದರೊಸಗೆ ಮೂಜಗಕಾದುದು ||
—ಜೈ. ಭಾ., ೧೯–೪೬

ಈ ಶಿಶುಗಳ ರೂಪವನ್ನು 'ಚೆಲ್ವೆರಡು ರೂಪಾಯ್ತೊ ವಿಮಲತೆ ಕವಲ್ತುದೋ' ಎಂದೂ 'ಭೂಮಿಯೊಳ್ ಚೆಲ್ವಿಗೆ ವಸಂತನಂ ಮದನನಂ ಸೋಮನಂ ಪಡಿಯಿಡಲ್ಪನರುಕ್ತಮಪ್ಪುದೆನೆ ಕುಶಲವರ್ ಕಣ್ಗೆಸೆದರು' ಎಂದು ವರ್ಣಿಸಿದ್ದಾನೆ.

ಚಂದ್ರಹಾಸನ ಜನನ ಕಾಲದಲ್ಲಿ ಸಂತಾನದ ಚಿಂತೆಯಿಲ್ಲ. ಆದರೆ ರಾಜಲಕ್ಷಣೋಪೇತವಾದ ಆ ಶಿಶು 'ಎಡದಂಘ್ರಿಗಱುವೆರಳಾದ' ಒಂದು ದುರ್ಲಕ್ಷಣವನ್ನು ಹೊಂದಿ, 'ಮೂಲ ನಕ್ಷತ್ರದರಿಷ್ಟಾಂಶದ' ಕುಮುಹೂರ್ತದಲ್ಲಿ ಜನಿಸಿದುದು ಅದರ ಪೂರ್ವ ಜೀವನದ ದುರಂತ ಕಥೆಗೆ ನಾಂದಿಯಾಗುತ್ತದೆ. ತಂದೆ ತಾಯಿಗಳನ್ನು ಕಳೆದುಕೊಂಡು

ತಬ್ಬಲಿಯಾಗಿ ಪರದೇಶದಲ್ಲಿ ದಾಸಿಯೊಬ್ಬಳಿಂದ ಬೆಳೆಯುತ್ತಾನೆ. ಅಲ್ಲಿ ಚಂದ್ರಹಾಸನ ಶೈಶವದ ವರ್ಣನೆ ಬರುತ್ತದೆ. 'ಮೊಳೆವಲ್ಲುಗುವ ಜೊಲ್ಲು, ದಟ್ಟಿತಡಿ ತೊದಲುನುಡಿ...'ಯ ಬಾಲಕನ ಸೌಂದರ್ಯವನ್ನು ನೋಡಿ ದಾಸಿ, ಇದನ್ನು ನೋಡುವ ತಾಯಿಯಿಲ್ಲವಲ್ಲಾ ಎಂದು ಮರುಗುತ್ತಾಳೆ. ಅಷ್ಟರಲ್ಲಿಯೆ ದಾಸಿಯನ್ನೂ ಕಳೆದುಕೊಂಡ ಚಂದ್ರಹಾಸನು ಪರಪುಟ್ಟನಾಗಿ ಬೆಳೆದು, ದುಷ್ಟಬುದ್ಧಿಯ ಕುತಂತ್ರದಿಂದ ಹೇಗೊ ಬದುಕಿ ಅಡವಿ ಪಾಲಾಗುತ್ತಾನೆ. ಕೊನೆಗೆ ಕುಳಿಂದಕನೆಂಬ ಬೇಡರೊಡೆಯನಿಗೆ ಸಿಕ್ಕು ಚಂದನಾವತಿ ಯಲ್ಲಿ ಅವನ

> 'ಕತ್ತಲೆಯ ಮನೆಗೆ ಮಣಿದೀಪವಾದಂತೆ, ಸಲೆ
> ಬತ್ತಿದ ಸರೋವರಕೆ ನವಜಲವೊದವಿದಂತೆ' (೨೮–೬೩)

ಸಾಕುಮಗನಾಗಿ ಬೆಳೆಯುತ್ತಾನೆ. ಅಲ್ಲಿಯೆ ಅವನ ಅಕ್ಷರಾಭ್ಯಾಸ ಉಪನಯನಾದಿ ಗಳು ಜರುಗುತ್ತವೆ. ಇವುಗಳ ವರ್ಣನೆ ೪ ಪದ್ಯಗಳಲ್ಲಿ ಬರುತ್ತದೆ (೨೯,೪–೭)

ಕುಮಾರೋದಯ ವರ್ಣನೆಯ ಈ ಎರಡು ಚಿತ್ರಗಳಲ್ಲಿ ವೈವಿಧ್ಯವಿದೆ. ಲವ ಕುಶರ ಜನನದ ಕಾಲ–ತಾಯಿ ಸೀತೆಗೆ ಕಷ್ಟದ ಕಾಲ. ಅಡವಿಯಲ್ಲಿ ಋಷ್ಯಾಶ್ರಮದಲ್ಲಿ ಅವರು ಹುಟ್ಟುತ್ತಾರೆ. ಅವರಿಗೆ ತಾಯಿ ಸೀತೆಯ ಮತ್ತು ಅಕ್ಕರೆಯ ಅಜ್ಜನಂತಿದ್ದ ವಾಲ್ಮೀಕಿಯ ಆಶ್ರಯವಿದೆ. ಆದರೆ ಚಂದ್ರಹಾಸ ಅರಮನೆಯಲ್ಲಿ ಹುಟ್ಟಿ ತಬ್ಬಲಿ ಯಾಗುತ್ತಾನೆ. ಪರಪುಟ್ಟನಾದ ಅವನಿಗೆ ದೈವಾಶ್ರಯವೇ ಆಶ್ರಯ; ಸಾರ್ವಜನಿಕರ ಕನಿಕರದ ಪೋಷಣೆಯೇ ಪೋಷಣೆ. ಲವ, ಕುಶ ಮತ್ತು ಚಂದ್ರಹಾಸ ಮೂವರನ್ನೂ ಅಸಾಮಾನ್ಯರು ಎಂದು ಚಿತ್ರಿಸಲಾಗಿದೆ.

## ಚಂದ್ರೋದಯ ವರ್ಣನೆ

ಚಂದ್ರೋದಯವು ಎಲ್ಲರಿಗೂ ಆನಂದವನ್ನು ಕೊಡುವ ಸೃಷ್ಟಿಯ ಆಗುಹೋಗು ಗಳಲ್ಲಿ ಒಂದು. ಅವನ್ನು ಸೂರ್ಯೋದಯದ ಮೊದಲು ವರ್ಣಿಸುವುದು ಕವಿ ಸಂಪ್ರ ದಾಯ. ಚಂದ್ರನ ಕಾಂತರಮ್ಯ ಬಿಂಬ, ಬಗೆದಣಿಸುವ ಬೆಳುದಿಂಗಳು, ನಲ್ಲನಲ್ಲೆಯರ ಮಿಲನ, ಜಾರಚೋರರಿಗುಂಟಾದ ಭಯ ಇವುಗಳನ್ನು ಇಲ್ಲಿ ವರ್ಣಿಸಲಾಗುವುದು.

ಅರ್ಜುನನು ಒಂದು ಬೆಳುದಿಂಗಳ ರಾತ್ರಿಯಲ್ಲಿ ವೇಶ್ಯಾವಾಟಿಯಲ್ಲಿ ಆದಿಪಂಪನ 'ವಿಕ್ರಮಾರ್ಜುನ ವಿಜಯ' ಕಾವ್ಯದಲ್ಲಿಯೂ ಹಾಯ್ದಾಡಿದ್ದಾನೆ. ಲಕ್ಷ್ಮೀಶನ ಜೈಮಿನಿ ಭಾರತದಲ್ಲಿಯೂ ಮಯೂರಧ್ವಜನ ರತ್ನಪುರದ ವೇಶ್ಯಾವಾಟಿಯಲ್ಲಿ ಚರಿಸುತ್ತಾನೆ. ಇಲ್ಲಿ ಅವನೊಂದಿಗೆ ಕೃಷ್ಣನೂ ಇರುವುದು ಆಶ್ಚರ್ಯ. ಈ ಸಂದರ್ಭದಲ್ಲಿ ಚಂದ್ರೋದಯ ವರ್ಣನೆ ಬಂದಿರುವುದು ಸಹಜವಾಗಿದೆಯೆ? ಅದು ಅಲ್ಲಿ ಪ್ರಸ್ತುತವೆ? ಎಂಬ ಪ್ರಶ್ನೆ ವಿಮರ್ಶಕನಲ್ಲಿ ಏಳದೆ ಇರುವುದಿಲ್ಲ. ಲಕ್ಷ್ಮೀಶನು ಇದನ್ನು ಶಾಸ್ತ್ರನಿಯಮಕ್ಕೆ ಕಟ್ಟು ಬಿದ್ದು ಸೇರಿಸಿರುವನೇನೋ ಎಂದೂ ಎನಿಸುವುದು. ಆದರೆ ಇಲ್ಲಿಯ ವೇಶ್ಯೆಯರು ಪರ್ಯಾಯವಾಗಿ ಕೃಷ್ಣಸ್ತುತಿಯಲ್ಲಿ ತೊಡಗಿರುವುದೇ ಇಲ್ಲಿಯ ವೈಶಿಷ್ಟ್ಯವಾಗಿದೆ.

ಚಂದ್ರನು ಆನಂದದ ಪ್ರತೀಕ. ಮಣಿಪುರದಲ್ಲಿ ಅರ್ಜುನನು ಸತ್ತುಬಿದ್ದು ಮತ್ತೆ ಎದ್ದುದರಿಂದ ಇನ್ನು ಆನಂದವೇ ಆನಂದ ಎಂಬುದನ್ನು ಸೂಚಿಸುವಂತೆ ಚಂದ್ರೋದಯದ ವರ್ಣನೆ ಬಂದಿರುವುದು ಒಂದು ಬಗೆಯಿಂದ ಯುಕ್ತವೆನ್ನಬಹುದು. ಆದರೆ, ಕೃಷ್ಣಾರ್ಜುನರ ವೇಶ್ಯಾವಾಟಿಸಂಚಾರದ ವರ್ಣನೆಯನ್ನು ಅಲ್ಲಿಯ ಚಂದ್ರೋದಯ ವರ್ಣನೆಯನ್ನು ಮನಸ್ಸು ಮೆಚ್ಚುವುದಿಲ್ಲ. ಪುರಪ್ರವೇಶ ಮಾಡಿದರೆ ಸಹಜವಾಗಿ ಕಣ್ಣಿಗೆ ಬೀಳುವ ವೇಶ್ಯಾವಾಟಿಯ ವರ್ಣನೆ ಆ ಕಾಲದ ನಗರವೈಭವವಿಲಾಸದ ಸಾಮಾಜಿಕ ಚಿತ್ರವೆಂದು ಅದಕ್ಕೊಂದು ಮಹತ್ತ್ವವಿದೆ ಎನ್ನಲಡ್ಡಿಯಿಲ್ಲ.

ಜೈಮಿನಿ ಭಾರತದ ಪೀಠಿಕಾ ಸಂಧಿಯ ಮೊದಲ ಪದ್ಯದಲ್ಲಿಯೇ ಬೆಳ್ದಿಂಗಳನ್ನೂ ಅದರ ಪರಿಣಾಮವನ್ನೂ

ಆವಗಂ ಸರಸಕರುಣಾಮೃತದ ಕಳೆಗಳಿಂ
ತೀವಿದೆಳನಗೆಯ ಬೆಳ್ದಿಂಗಳಂ ಪಸರಿಸುವ
ದೇವಪುರ ಲಕ್ಷ್ಮೀರಮಣನಾಸ್ಯಚಂದ್ರನಾನಂದವಂ ನಮಗೀಯಲಿ ||

ಎಂದು ಲಕ್ಷ್ಮೀಶನು ಉಲ್ಲೇಖಿಸಿರುವುದು ಗಮನಾರ್ಹವಾಗಿದೆ. ಇಲ್ಲಿಯ ಎಲ್ಲ ಕಥಾನಕಗಳಲ್ಲಿ 'ಆವಗಂ ಸರಸಕರುಣಾಮೃತದ ಕಳೆಗಳಿಂದ ಲಕ್ಷ್ಮೀರಮಣನ ಆಸ್ಯಚಂದ್ರನು ಬೆಳ್ದಿಂಗಳನ್ನು ಪಸರಿಸಿರುವುದರಿಂದ' ಇಡೀ ಕಾವ್ಯವು ಆನಂದರಮ್ಯವಾಗಿರುವುದನ್ನು ಇಲ್ಲಿ ಸೂಚಿಸಿದೆ ಎನ್ನಬಹುದು. ಹಾಗೆಯೆ 'ಕರ್ಣಪೀಯೂಷ'ದಂತಿರುವ ಚಂದ್ರಹಾಸನ ಕಥಾನಕದಲ್ಲಿ 'ಅಮೃತಾರ್ಚಿಯಂ ಜಱಿದು ನಗುವನದಱಿಂ ಚಂದ್ರಹಾಸನಿವನಹನೆನೆ ಪೆಸರ್ವೆಱೆದುದು' ಎಂದು ಕವಿ, ಚಂದ್ರಹಾಸ ನಾಮದ ರೂಪನಿಷ್ಪತ್ತಿಯನ್ನು ಹೇಳುತ್ತಾನೆ. ಈ ಸಂದರ್ಭದಲ್ಲಿ ಚಂದ್ರನನ್ನು ಶ್ಲೇಷ ಚಮತ್ಕೃತಿಯಿಂದ ಕವಿ ವರ್ಣಿಸುತ್ತಾನೆ.

ರೂಪಕಾಲಂಕಾರವಾಗಿ ಬರುವ ಈ ಎರಡು ಚಂದ್ರವರ್ಣನೆಗಳ ಮಧ್ಯದಲ್ಲಿ, ಅಷ್ಟಾದಶ ವರ್ಣನೆಗಳ ಅಂಗವಾಗಿ ೨೬ನೆಯ ಸಂಧಿಯಲ್ಲಿ ಚಂದ್ರೋದಯದ ದೀರ್ಘವರ್ಣನೆ ಬರುತ್ತದೆ (ಪ. ೧೩–೨೩).

ಕತ್ತಲೆಯೊಳಸುರಾರಿ ಫಲುಗುಣರ್ ಜಾರೆಯರ
ವೃತ್ತಾಂತಮಂ ನೋಡುತೈತರಲ್ಕನಿತಱೊಳ್
ಪೊತ್ತಿದಿಹ ಜಕ್ಕವಕ್ಕಿಗಳ ವಿರಹದವೆಂಕಿವೊಗೆ ಪೊಗೆದು ಮೇದಿನಿಯೊಳು ||
ಸುತ್ತಸುತ್ತಲುಮಂಧಕಾರಮಾಗಿರುತಿರಲ್
ಚಿತ್ತಜಂ ತಂಬೆಲರೊಳೂದಿದಡೆ ಪ್ರಜ್ವಲಿಸಿ
ಮತ್ತುರಿವ ಕಿಚ್ಚಿನೇಳಿಗೆಯಂತೆ ಮೂಡಿದಂ ಚಂದ್ರನಿಂದ್ರನ ದೆಸೆಯೊಳು ||

ಎಂಬ ಉತ್ಪ್ರೇಕ್ಷೆಯಿಂದ ವರ್ಣನೆಯನ್ನು ಆರಂಭಿಸುತ್ತಾನೆ ಕವಿ. ಮೂಡಿದ ಚಂದ್ರನು ಹೊತ್ತಿಕೊಂಡು ಉರಿಯುವ ಕಿಚ್ಚಿನಂತಿದ್ದನು ಎಂದು ಮಾಡಿರುವ ವರ್ಣನೆಗೆ ವಾಚಕನು ತಲೆದೂಗದಿರನು. ಕತ್ತಲೆ ಹೊತ್ತದ ವಿರಹಾಗ್ನಿಯ ಹೊಗೆಯಂತೆ ಇತ್ತು. ಮನ್ಮಥನು

ತಂಬೆಲರಿಂದ ಊದಿ ಆ ವಿರಹಾಗ್ನಿಯನ್ನು ಪ್ರಜ್ವಲಗೊಳಿಸಿದನು ಎಂಬ ಕಲ್ಪನೆ ಸೂಳೆಗೇರಿಯ ವರ್ಣನೆಯಲ್ಲಿ ಸಾರ್ಥಕ್ಯವನ್ನು ಪಡೆದಿದೆ.

೨೬ನೆಯ ಸಂಧಿಯ ೧೯ ಮತ್ತು ೨೦ನೆಯ ಪದ್ಯಗಳಲ್ಲಿ ಕವಿ ಲಕ್ಷ್ಮೀಶನು ವಾತ್ಸ್ಯಾಯನ ಕಾಮಸೂತ್ರಪ್ರಜ್ಞೆಯಿಂದ ರತಿಸಮಯದ ಶೃಂಗಾರಿಕ ವರ್ಣನೆ ಮಾಡಿದ್ದಾನೆ. ಆದರೆ ಆ ಶೃಂಗಾರಿಕ ವರ್ಣನೆಗಳನ್ನು ಕೃಷ್ಣಸ್ಮರಣೆಯತ್ತ ಹೊರಳಿಸಿರುವುದು ಆ ಪದ್ಯಗಳ ಔಚಿತ್ಯವೆಂದು ಎನಿಸುತ್ತದೆ.

ಉದಾ : ಅಂಗಜಶ್ರಮದಿಂದ ಬೆಮರ್ದ ಕಾಮಿನಿ ತನ್ನ
ತುಂಗಕುಚತಟದ ಕಸ್ತೂರಿಯೊಳ್ ಪುದಿದಪ್ರಿಯ
ನಂಗಮಂ ಕಂಡಿ'ದೇತಕೆ ಕೃಷ್ಣರೂಪಾದೆ ನೀನೆ'ಂದು ಬೆಸಗೊಳಲ್ಕೆ ||
'ಅಂಗನೆ, ತಿಳಿಯದಾದೆ, ಪೊತ್ತಿರ್ದನಂದು ಕೃ
ಷ್ಣಂ ಗಿರಿಯನೊಂದನೆರಡದ್ರಿಗಳನೀಗಳಾಂ
ಹಿಂಗದಾಂತಿಹೆನೆನಗೆ ಕೃಷ್ಣಭಾವಂ ಬರ್ಪುದಚ್ಚರಿಯೆ,ಪೇಳ್'ಂದನು ||೨೬.೨೦

ಇಲ್ಲಿ ಶೃಂಗಾರ-ವಿನೋದಗಳೊಡನೆ ಕೃಷ್ಣಸ್ಮರಣೆ, ಅವನ ಗೋವರ್ಧನ ಗಿರಿಯನ್ನೆತ್ತಿದ ಲೀಲೆಯ ನೆನಪು ತಂದಿರುವುದು ಕವಿಯ ಭಕ್ತಿಭಾವದ ದ್ಯೋತಕವಾಗಿದೆ.

ಆದರೆ, ಇನ್ನೊಂದು ಕಡೆ,

ಹರಶರಪ್ರಥಮಾವತಾರಲೋಚನೆ, ಮಹೇ
ಶ್ವರಚಾಪತುಂಗ ವಕ್ಷೋಜಾತೆ, ಹಿಮಕರಾ
ಭರಣ ಮೌರ್ವೀವೇಣಿ ತಾನಿರ್ದುಮನ್ಯಳಂ ಮದನಬಾಣಾಕ್ಷಿಯೆಂದು || (೨೬–೨೨)

ಎಂಬಲ್ಲಿ ಶಿವಪುರಾಣದಲ್ಲಿಯ ತ್ರಿಪುರಸಂಹಾರ ಕಥಾಸಂದರ್ಭದ ವಿದ್ಯಮಾನಗಳನ್ನು ಕವಿ ಉಪಮಾನಗಳಾಗಿ ಬಳಸಿದ್ದಾನೆ. ಇಲ್ಲಿ ಹರನ ಶರವೆಂದರೆ ವಿಷ್ಣು, ಅವನ ಪ್ರಥಮಾವತಾರವೆಂದರೆ ಮೀನ, ಮಹೇಶ್ವರನ ಬಿಲ್ಲು ಎಂದರೆ ಮೇರುಪರ್ವತ, ಚಂದ್ರಮೌಳಿಯ ಮೌರ್ವಿ (ಹೆದೆ) ಎಂದರೆ ಶೇಷ (ಸರ್ಪ) ಎಂದು ಅರ್ಥವನ್ನು ತಿಳಿದುಕೊಳ್ಳುವುದು ಸ್ವಲ್ಪ ಕಷ್ಟ. ಇಂತಹ ಪಾಂಡಿತ್ಯಪ್ರತಿಭೆಯ ಅಲಂಕಾರವಿಟ್ಟಲ್ಲಿ ಕಾವ್ಯರಸಾಸ್ವಾದನೆಯ ಆನಂದಾನುಭವವಾಗುವುದು ತಡ-ಕಷ್ಟಾನಂತರ. ಆದರೆ

ಪ್ರಾಚೀನಿತಂಬಿನಿಯ ಮುಖಬಿಂಬದೆಳನಗೆಯ
ರೋಚಿಗಳೊ, ಪೆರ್ಚುಗೆಯೊಳುಬ್ಬೆದ್ದ ಪಾಲ್ಗಡಲ
ವೀಚಿಗಳೊ, ಮನ್ಮಥನ ಕೀರ್ತಿಯ ಮರೀಚಿಗಳೊ ನಿಜಕಾಂತನಂ ಕಾಣುತ ||
ನಾಚಿ ಬೆಳ್ಪೇರಿದಳೊ ರಾತ್ರಿವಧು, ಚೆಲ್ಲಿದನೊ
ಭೂಚಕ್ರಕಂಗಜಂ ಬೇಳುವೆಯ ಬೂದಿಯಂ,
ನಾಚಿಸುವಡರಿದೆನಲ್ ಪಸರಿಸಿತು ಚಂದ್ರಕಿರಣಂಗಳೆಲ್ಲಾ ದೆಸೆಯೊಳು || (೨೬–೧೫)

ಇಂತಹ ಕವಿಸಮಯ ಬಳಸಿದ್ದರೂ ಸಹಜವಾಗಿ ತಿಳಿಯುವ ಸರಳಸುಂದರ ರಾತ್ರಿವಧುವಿನ ವರ್ಣನೆ ಓದುಗನನ್ನು ಮುಗ್ಧಗೊಳಿಸುತ್ತದೆ ಎಂಬುದೂ ನಿಜ.

## ಸೂರ್ಯೋದಯವರ್ಣನೆ

ಅಷ್ಟಾದಶ ವರ್ಣನೆಗಳಲ್ಲಿ ಋತುವರ್ಣನೆಯ ಮೊದಲು ಸೂರ್ಯೋದಯ ವರ್ಣನೆಯ ಸ್ಥಾನ. ಸೂರ್ಯನ ಉದಯದೊಡನೆ ಅಸ್ತವನ್ನೂ ವರ್ಣಿಸುವುದು ಕಾವ್ಯ ಸಂಪ್ರದಾಯ. ಆದಿ ಮಹಾಕವಿ ಪಂಪನು ವರ್ಣಿಸಿದ ಸೂರ್ಯೋದಯ ಹೀಗಿದೆ :

ಅದಟಂ ಸಿಂಧುತನೂಭವಂ ವಿಜಯನೊಳ್ ಮಾರ್ಕೊಂಡಣಂ ಕಾದಲಾ
ಱದೆ ಬೆಂಬಿಱಿದ್ದೊಡೆ ಕಾದಲೆಂದು ಬೆಸನಂ ಪೂಣ್ದಂ ಗಡಂ ದ್ರೋಣನಂ
ತದುವಂ ನೋಡುವೆನೆಂದು ಕಣ್ ತಣಿವಿನಂ ನೋಡಲ್ಕೆ ಬರ್ಪಂತೆ ಬಂ
ದುದಯಾದ್ರೀಂದ್ರಮನೇಱಿ ಭಾನು ಪೊಱಮಟ್ಟೊಡ್ಡಿತ್ತನೀಕಾರ್ಣವಂ || (೧೧-೫೫)

ತನ್ನ ಸುತನೞಿಲೊಳರ್ಜುನ
ನೆನ್ನುದಯಮನೆಯ್ದೆ ಪಾರ್ದು ಪಗೆವರ ಬೇರೊಳ್
ಬೆನ್ನೀರನೆಱಿಯದಿರನದ
ನಾಂ ನೋಡುವೆನೆಂಬ ತೆಱದಿನಿನನುದಯಿಸಿದಂ || (೧೧-೧೩೨)

'ಯಾವುದೊಂದು ಸಂಗತಿಯನ್ನು ನೋಡುವುದಕ್ಕಾಗಿ ಸೂರ್ಯನು ಬಂದನು' ಎಂದು ಉತ್ಪ್ರೇಕ್ಷಿಸಿ ಹೇಳುವ ಈ ಬಗೆ ಲಕ್ಷ್ಮೀಶನ—

ಬೀಡುಗೊಂಡಿರ್ದ ಕತ್ತಲೆಯ ಪಾಳೆಯಮೆತ್ತ
ಲೋಡಿದುದೊ ನೋಡಿದಪೆನೆಂದು ಪೂರ್ವಾಚಲದ
ಕೋಡುಗಲ್ಲಂ ಪತ್ತುವಂತೆ ಮೆಱೆದಂ ಪ್ರಭೆಯೊಳಾನುತ್ಯನಾದಿತ್ಯನು || (೨ ೬೫)

ಎಂಬ ಉತ್ಪ್ರೇಕ್ಷೆಗೆ ಸ್ಫೂರ್ತಿಯನ್ನು ಕೊಟ್ಟಂತಿದೆ.

ಸೊಡರ್ಗುಡಿಯೊಯ್ಯನಾಗೆ, ಪೊಸಮಲ್ಲಿಗೆ ಮೆಲ್ಲಗೆ ಕಂಪುನಾಱೆ, ತ
ಣ್ಪಿಡಿದೆಲರೂದೆ, ಗಾವರದ ಮೆಲ್ಲುಲಿ ತುಂಬಿಯ ಗಾವರಂಗಳಂ
ಗೆಡೆಗೊಳೆ, ಚಂದ್ರಿಕಾಪ್ರಭೆ ಮೊದಲ್ಗಿಡೆ ನಾಡೆ ವಿತರ್ಕದಿಂ ಬೆರ
ಲ್ಮಿಡಿದು ಗುಣಾರ್ಣವಂ ನೆಱೆಯೆ ನಿಟ್ಟಿಸಿದಂ ಬೆಳಗಪ್ಪ ಜಾವಮಂ

ಎಂಬ ಆದಿಕವಿ ಪಂಪನ ಪದ್ಯಕ್ಕೂ (ವಿ. ವಿ., ೪-೧೧೦)

ಮೂಡದೆಸೆಯೊಳ್ಕೆಂಪು ದೊರೆಯೆ, ತಾರಗೆ ಪರೆಯೆ,
ಕೂಡೆ ತಂಗಾಳಿ ಮುಂಬರಿಯೆ, ಕಮಲಂ ಬಿರಿಯೆ,
ಪಾಡುವೆಳದುಂಬಿಗಳ್ ಮೊರೆಯೆ, ಚಕ್ರಂ ನೆರೆಯೆ, ನೈದಿಲೆಯ ಸೊಂಪುಮುಱಿಯೆ ||

ಎಂಬ ಜೈಮಿನಿ ಭಾರತದ (೨.೬೫) ಲಕ್ಷ್ಮೀಶನ ಪದ್ಯಕ್ಕೂ ಇರುವ ಅಂತರವೇನು? ಪಂಪಭಾರತದ ಕನ್ನಡ ಹಳಗನ್ನಡ, ಜೈಮಿನಿಭಾರತದ ಕನ್ನಡ ನಡುಗನ್ನಡ. ಇಬ್ಬರ ರಚನೆಯಲ್ಲಿಯೂ ಸತ್ತ್ವವಿದೆ, ಸಹಜತೆಯಿದೆ. ಸೂರ್ಯೋದಯವನ್ನು ಕುರಿತು ಸ್ವಭಾವೋಕ್ತಿ ಅಲಂಕಾರದಿಂದ ಬಣ್ಣಿಸುವ ಈ ರೀತಿ ಅನೇಕ ಕಾವ್ಯಗಳಲ್ಲಿ ಕಂಡು ಬರುತ್ತದೆ.

ಓಡೆ ತಮೋಬಳಮುಗಿದ
ಳ್ಕಾಡೆ ನಿಶಾಚರಬಲಂ ರಥಾಂಗಯುಗಂಗಳ್

ಕೊಡೆ ಬಗೆ ಕೊಡೆ ನೇಸಱ್
ಮೂಡಿದುದು ಬಕಂಗೆ ಮಿಟ್ಟು ಮೂಡುವ ತೆಱದಿಂ || —ವಿ. ವಿ., ೩-೨೭

ಪಂಪನು ಸೂರ್ಯೋದಯುವನ್ನು ಬಕನ ಮರಣದ ಮುನ್-ಸೂಚನೆ ಎಂದು ವರ್ಣಿಸುವಲ್ಲಿ, ವರ್ಣನೆಗೆ ಕಥಾನಕದ ಸೂತ್ರವನ್ನು ಜೋಡಿಸುತ್ತಾನೆ. ವರ್ಣನೆಗೆ ಕಥಾನಕ ಸೂತ್ರೀಕರಿಸುವ ಇನ್ನೊಂದು ರೀತಿಯನ್ನು ಲಕ್ಷ್ಮೀಶನಲ್ಲಿ ಕಾಣುತ್ತೇವೆ:

ಗಾಲಿಯೊಂದೇ ರಥಕೆ, ಜೋಡಾಗಿ ಪೂಡುವಡೆ
ಸಾಲದೇಳೇ ಹಯಂ, ನಡಸುವಡೆ ಸಾರಥಿಗೆ
ಕಾಲಿಲ್ಲ, ಲೋಕಯಾತ್ರೆಯನೊಲ್ಲೆನೆಂದೊಡಾಗದೆ ತನಗೆ ತಿರುಗಲೇಕೆ ? ||
ಕಾಲಗತಿಯಂ ಮೀಱಬಾರದಿಂತೆಂಬುದಂ
ಮೂಲೋಕಕೆಚ್ಚರಿಸುವಂತೆ ಪೂರ್ವಾಚಲದ
ಮೇಲೆ ಮೂಡಿದನೆಂದಿನವೊಲಬ್ಜಬಾಂಧವಂ ನಯನಾಂಧಮುಂಡಡಗಲು ||
—ಜೈ. ಭಾ., ೨೬-೨೬

ಸೂರ್ಯೋದಯ ವರ್ಣನೆಯ ಮೂಲಕ ಅವನ ಜೀವನಚಿತ್ರವನ್ನೇ ಚಿತ್ರಿಸಿ ಕಾಲಗತಿ ಅಲಂಘ್ಯವೆಂಬುದನ್ನು ವಾಚಕರಿಗೆ ತಿಳಿಸುತ್ತಾನೆ ಈ ಕವಿ. ಅವನ ರಥಕ್ಕೆ ಒಂದು ಗಾಲಿಯ ಕೊರತೆ, ಒಂದು ಕುದುರೆಯ ಕೊರತೆ, ಅವನ ಸಾರಥಿಗೆ ಕಾಲುಗಳ ಕೊರತೆ, ಇಷ್ಟೆಲ್ಲ ತೊಂದರೆಗಳಿದ್ದರೂ ಸೂರ್ಯನು ತನ್ನ ನಿಯಮಿತ ಕಾರ್ಯವನ್ನು ತಪ್ಪದೆ ನೆರವೇರಿಸುತ್ತಿದ್ದಾನೆ ಎಂಬ ಪಾಠವನ್ನು ಈ ವರ್ಣನೆ ಕೊಡುತ್ತದೆ.

ಇನನ ಬರವಿಂಗೆ ಪೂರ್ವಾಂ
ಗನೆ ಕುಂಕುಮಪಂಕದಿಂದಲಂಕರಿಸಿದಳೋ
ತನುವನೆನೆ ಸಂಜೆ ರಂಜಿಸಿ
ತಿನನುದಯಮುನಱಿಪುವಂತೆ ಮೂಡಣ ದೆಸೆಯೊಳ್ || —ಸೂ.ಸು., ಪು. ೨೨೮

ಇನ(ಪ್ರಿಯ)ನ ಬರವಿಗೆ ಕುಂಕುಮದಿಂದ ತನ್ನ ಮೈಯನ್ನು ಅಲಂಕರಿಸಿಕೊಂಡಿರುವ ಈ ಪೂರ್ವಾಂಗನೆಯನ್ನೂ

ಬಳಿಕ ದಿನದಿನಕೊಂದು ಪರಿಯಾಗಿ ದೋಷಮುಂ
ತ(ಕ?)ಳೆದು ಸಲೆ ಪೆರ್ಚಿದ ಕರಂಗಳಿಂ ಸಿರಿಯಿರ್ದ
ನಿಳಯಂಗಳಂ ಬಾಧಿಸುವ ರಾಜನೈಶ್ವರ್ಯಮಿರ್ದಪುದೆ ಪೇಳೆನಲ್ಕೆ ||
ತೊಲಗಿದವು ಬೆಳ್ದಿಂಗಳಾದಿತ್ಯನೊಳ್ನೆರೆಯ
ಲೆಳಸಿ ಕುಂಕುಮದಿಂದೆ ಪೂರ್ವದಿಗ್ವನಿತೆ ಮುಂ
ಗಳ ಮಜ್ಜನಂಗೈದಳೆಂಬಂತೆ ರಂಜಿಸಿತು ಮೂಡದೆಸೆ ಕೆಂಪಡರ್ದು ||
—ಜೈ. ಭಾ., ೨೬-೨೫

ಆದಿತ್ಯನಲ್ಲಿ ಕೂಡಲು ಬಯಸಿ ಕುಂಕುಮದಿಂ ಮಂಗಳಸ್ನಾನ ಮಾಡಿದ ಪೂರ್ವದಿಗ್ವನಿತೆಯನ್ನೂ ಪಡಿಯಿಟ್ಟು ನೋಡಬೇಕು. (ಅಲ್ಲದೆ ಈ ಪದ್ಯದ ಪೂರ್ವಾರ್ಧದಲ್ಲಿ, ಸಿರಿವಂತರ ಮನೆಗಳನ್ನು ಸುಲಿಯುವ ರಾಜ(ಅರಸ)ನ ಗತಿ, ಸೂರ್ಯೋದಯದಲ್ಲಿಯ ಲಕ್ಷ್ಮೀನಿವಾಸದ ಕಮಲಗಳನ್ನು ಬಾಧಿಸುವ ರಾಜ(ಚಂದ್ರ)ನಂತೆ ಆಗುವುದೆಂಬುದನ್ನು

ಮಾರ್ಮಿಕವಾಗಿ ಹೇಳಿದ್ದಾನೆ, ಕವಿ.) ಸೂರ್ಯೋದಯದ ಮೂಡಣದಿಕ್ಕಿನ ಕೆಂಪನ್ನು ವರ್ಣಿಸುತ್ತ,

........ಪ್ರಾಚೀನಿತಂಬವತಿಗೆ
ಸರಸದಿಂ ತರಣಿಯೊಳ್ ನೆರವಸಮಯದೊಳಾದ
ಕರರುಹಕ್ಷತದ ಕಿಸುಬಾಸುಳ್ಗಳೆನೆ ಸವಿ
ಸ್ತರದ ಸಂಧ್ಯಾರಾಗಮೈದೆ ರಂಜಿಸುತಿರ್ದುದು... —ಜೈ. ಭಾ., ೧೭–೪೧

ಎಂದಿರುವಲ್ಲಿ ಇದೇ ಕಲ್ಪನೆಯ ಇನ್ನೊಂದು ಶಾಖೆಯಿದೆ.

ಹೀಗೆ ಶ್ಲೇಷ, ಸ್ವಭಾವೋಕ್ತಿ, ಉತ್ಪ್ರೇಕ್ಷೆಗಳಿಂದ ಸೂರ್ಯೋದಯವನ್ನು ವರ್ಣಿಸಿದ ಲಕ್ಷ್ಮೀಶನು ಸೂರ್ಯಾಸ್ತವನ್ನು ೮ನೆಯ ಸಂಧಿಯಲ್ಲಿ ಮೂರು (೪೫–೪೮) ಪದ್ಯಗಳಿಂದಲೂ, ೨ನೆಯ ಸಂಧಿಯಲ್ಲಿ ಎರಡು (೪,೫) ಪದ್ಯಗಳಿಂದಲೂ ವರ್ಣಿಸಿದ್ದಾನೆ.

ಬಟ್ಟೆವಿಡಿದವರಿರ್ವರುಂ ಮಯೂರಧ್ವಜನ
ಪಟ್ಟಣಕೆ ನಡೆತಂದರನ್ನೆಗಂ ದೆಸೆದೆಸೆಯೊ
ಳಟ್ಟಣಿಸಿ ಲೋಕಮಂ ಕಂಗೆಡಿಸುವಂಧಕಾರಂಗಳಂ ನಿಲಲೀಯದೆ ||
ಅಟ್ಟಿ ಹರಿಹರಿದುಱಿ ಬಳಲ್ದು ಕಾಹುರದೆ ಕಂ
ಗೆಟ್ಟು ಕಳೆಗುಂದಿ ಮೆಲ್ಲನೆ ನಭೋಮಾರ್ಗಮಂ
ಬಿಟ್ಟು ಪಶ್ಚಿಮಗಿರಿಯ ತಪ್ಪಲಂ ಸಾರ್ದನೆನೆ ರವಿ ಪಡುಗಡೆಯೊಳೆಸೆದನು ||
—ಜೈ. ಭಾ., ೨೬–೪

ಎಂಬ ಪದ್ಯವು ಆದಿಕವಿ ಪಂಪನ

ಮಗನಟಿಲೊಳ್ ಕರಂ ಮಱುಗುತಿರ್ಪನಮೆನ್ನ ತನೂಜನಾಳ್ದ ಸಾ
ವಿಗಮಟಿವಾಗೆ ಶೋಕರಸಮಿರ್ಮಡಿಸಿತ್ತು ಜಳಪ್ರವೇಶಮಿ
ಲ್ಲಿಗೆ ಪದನೆಂದು ನಿಶ್ಚಯಿಸಿ ವಾರಿಜನಾಥನನಾಥನಾಗಿ ತೊ
ಟ್ಟಗೆ ಮು[ಱುಪ]ಂಪತೆವೊಲ್ ಮುಱುಗಿದಂ ಕಡುಕೆಯ್ದ ಪರಾಂಬುರಾಶಿಯೊಳ್ ||
—ವಿ. ವಿ., ೧೩–೧೦೬

ಎಂಬ ಪದ್ಯದತ್ತ ನಮ್ಮ ಮನವನ್ನು ಸೆಳೆಯುತ್ತದೆ.

ಪಂಪಭಾರತ ಮತ್ತು ಕುಮಾರವ್ಯಾಸ ಭಾರತಗಳಲ್ಲಿ ಈ ಸೂರ್ಯಾಸ್ತ ವರ್ಣನೆ ಯುದ್ಧಕಾಂಡಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಒಬ್ಬೊಬ್ಬ ವೀರನ ಮರಣಕ್ಕೆ ಒಂದೊಂದು ಸೂರ್ಯಾಸ್ತವರ್ಣನೆಯನ್ನು ತರ್ಪಣಕೊಟ್ಟಂತೆ ಎನಿಸುತ್ತದೆ.

ಅಭಿಮನ್ಯುಮರಣವಾರ್ತಾ
ಪ್ರಭೂತಶೋಕಾಗ್ನಿ ಧರ್ಮತನಯನನಿರದಂ
ದಭಿಭವಿಸಿ ತನ್ನನಳರ್ದಂ
ತೆ ಭಾಸ್ಕರಂ ತೆಂಕವಾದನಸ್ತಾಚಲದೊಳ್ || —ವಿ. ವಿ., ೧೧–೧೦೬
ಬೆಳಗುವ ಸೊಡರ್ಗಳ ಬೆಳಗ
ಗ್ಗಳಿಸುವವೋಲ್ ಪೋಪ ಪೊೞ್ತುಱೊಳ್ ತೇಜಂ ಪ
ಜ್ಜಳಿಸೆ ತಟತಱಿಸಿ ತೊಳತೊಳ
ತೊಳಗಿದನಸ್ತಮಯಸಮಯದೊಳ್ ದಿನಪಸುತಂ || —ವಿ. ವಿ., ೧೨–೨೧೧

ಎಂದು ಪಂಪಭಾರತದಲ್ಲಿ ಸೂರ್ಯಾಸ್ತದ ವರ್ಣನೆಯಿದೆ. ಕರ್ಣನ ತೇಜಸ್ವಿಜೀವನವು 'ಆರುವ ದೀಪವು ದೊಡ್ಡದಾಗಿ ಒಮ್ಮೆಲೆ ಆರುವಂತೆ' ಶೌರ್ಯದ ಪ್ರಖರತೆಯನ್ನು ಪ್ರಕಟಿಸಿ ಕೊನೆಗೊಂಡಿತೆಂದು ಇಲ್ಲಿ ಹೇಳಿದೆ. ಆ. ೧೧, ಪ. ೧೦೬ರಲ್ಲಿ ಅಸ್ತಮಿಸುವ ಸೂರ್ಯನು ಅಭಿಮನ್ಯುವಿನ ಮರಣದಿಂದ ಶೋಕಾಗ್ನಿಯಲ್ಲಿ ಕೆಂಪಾದನೆಂದು ಪಂಪನು ಎನ್ನುತ್ತಾನೆ. ಈ ಎರಡೂ ಪದ್ಯಗಳಲ್ಲಿ, ಒಂದು ಉಕ್ತಿಯು ಇಡೀ ಜೀವನದ ಸಾರವನ್ನು ತಿಳಿಸಬಲ್ಲುದೆಂಬುದು ಕಂಡುಬರುವುದು.

ಇತ್ತ ಪರವಶನಾದ ರಾಮನ
ತೆತ್ತಿಗರು ದಂಡಿಗೆಯೊಳೀತನ
ನೆತ್ತಿತಂದರು ಪಾಳೆಯಕೆ ದುಃಸ್ಥಿತಿಯ ಮೇಳಯಕೆ ||
ತೆತ್ತನೇ ಮಗನಸುವನಕಟ ಎ
ನುತ್ತೆ ಚಿಂತಾರಾಗದಲಿ ಕಡ
ಲತ್ತ ಹಾಯ್ದನು ಬಿಸುಟನಂಬುಜಮಿತ್ರನಂಬರವ ||

ದ್ಯುಮಣಿ ಕರ್ಣದ್ಯುಮಣಿಸಹಿತ
ಸ್ತಮಿಸೆ ಕಮಲಿನಿ ಕೌರವನ ಮುಖ
ಕಮಲ ಬಾಡಿತು ತಿಮಿರ ಹೆಚ್ಚಿತು ಶೋಕತಮದೊಡನೆ ||
ಅಮಳ ಚಕ್ರಾಂಗಕ್ಕೆ ಭೂಪೋ
ತ್ತಮನ ವಿಜಯಾಂಗನೆಗೆಯಗಲಿಕೆ
ಸಮನಿಸಿತು ಕೇಳಯ್ಯ ಜನಮೇಜಯ ಮಹೀಪಾಲ ||

—ಕು. ವ್ಯಾ. ಭಾ., ಕರ್ಣ. ೨೭,೩೦-೩೧

ಬೀಳಲವನೀಪತಿಗಳತಿಹೀ
ಹಾಳಿಯಲಿ ಸಾತ್ಯಕಿ ಮುಳಿದು ಬಲು
ಗೋಲಿನಲಿ ಗಂಗಾಕುಮಾರನ ಸಾರಥಿಯನೆಸಲು ||
ಮೇಲುಗಾಳೆಗದವರ ಸೇರಿತು
ಸೋಲ ಕುರುಪತಿಗಾಯ್ತು ಕಿರಣದ
ಗೊಳಯವು ಪಡುವಣ ಸಮುದ್ರಕೆ ತೆಗೆಯಲಿನನಿಳಿದ ||

—ಕು. ವ್ಯಾ. ಭಾ., ಭೀಷ್ಮ. ೬-೭

ಎಂಬುದಾಗಿ ಕುಮಾರವ್ಯಾಸನ ಭಾರತಕಥಾಮಂಜರಿಯಲ್ಲಿ ಸೂರ್ಯಾಸ್ತವರ್ಣನೆ ಬರುತ್ತದೆ. ಲಕ್ಷ್ಮೀಶನ ಜೈಮಿನಿ ಭಾರತದಲ್ಲಿ ಅನೇಕ ಯುದ್ಧಗಳಾದರೂ ಈ ರೀತಿ ಸೂರ್ಯಾಸ್ತ ವರ್ಣನೆ ಬರುವುದಿಲ್ಲ. ಏಕೆಂದರೆ, ಇಲ್ಲಿಯ ಯುದ್ಧಗಳಲ್ಲಿ ಪ್ರಮುಖ ವೀರರಿಗೆ ಮರಣವಿಲ್ಲ. ಜೈಮಿನಿ ಭಾರತದಲ್ಲಿ ೧೩ನೆಯ, ೧೪ನೆಯ ಸಂಧಿಗಳಲ್ಲಿ ಸುರಥ-ಸುಧನ್ವರು ಸಾಯುತ್ತಾರೆ. ಆ ಸಂದರ್ಭದಲ್ಲಿ ಪಂಪ-ಕುಮಾರವ್ಯಾಸರಂತೆ ಲಕ್ಷ್ಮೀಶನೂ ಸೂರ್ಯಾಸ್ತ ವರ್ಣನೆಯನ್ನು ತರಬಹುದಾಗಿತ್ತು; ತಂದಿಲ್ಲ. ಜೈಮಿನಿ ಭಾರತದಲ್ಲಿ,

.................................ಅನ್ನೆ
ಗಂ ಗಗನಮಣಿ ಪಶ್ಚಿಮಾಂಗನೆಯ ಬೈತಲೆಯ
ರಂಗುಮಾಣಿಕದಂತೆ ಕಣ್ಗೆ ಕಾಣಿಸುತಿರ್ದುದಸ್ತಗಿರಿ ಮಸ್ತಕದೊಳು || (೮-೪೫)

ರಂಜಿಸುವ ಪಶ್ಚಿಮಾಚಲಕಿರಾತಂ ತೊಟ್ಟ
ಗುಂಜಾಭರಣಮೊ, ಮೇಣ್ಗಗನಾಂಬುಧಿಯ ತಡಿಯ
ಮಂಜುವಿದ್ರುಮಲತೆಯೊ, ಮೇಣಪರದಿಗ್ವಧುವಿನಂಗಕುಂಕುಮಲೇಪಮೋ ||
ಅಂಜನೇಭದ ಸಿಂಧುರಮೊ, ಶಿವನ ಕೇಶಗಳ
ಕೆಂಜಡೆಯೊ, ವಿಷ್ಣುಪದ ಪಂಕರುಹದರುಣತೆಯೊ
ಸಂಜೆವೆಣ್ಣುಟ್ಟ ರಕ್ತಾಂಬರವೊ ಪೇಳೆನಲ್ಕಾ ಬೈಗುಗೆಂಪೆಸೆದುದು || (೮–೪೬)

ಮೆಲ್ಲಮೆಲ್ಲನೆ ತರಣಿ ಮುಳುಗಿದಂ ಪಡುಗಡಲೊ
ಳಲ್ಲಿಗಲ್ಲಿಗೆ ಮೂಡಿದುವು ಸಂಜೆದಾರಗೆಗ
ಳೆಲ್ಲೆಲ್ಲಿಯುಂ ತಮಂ ತುಂಬಿದುದು ತುಂಬಿಗಳೊಡನೆ ಮುಗಿದುವಂಬುಜಾಳಿ ||
ನಲ್ಲನಲ್ಲರ ನೇಹಗಲಹದೊಳ್ ಮುನಿದು ರತಿ
ಗೊಲ್ಲಗೊಲ್ಲದ ಕಾಂತೆಯರ ಮನಂ ತರಹರಿಸಿ
ನಿಲ್ಲನಿಲ್ಲದವೊಲಂಗಜನುರುಬತೊಡಗಿದಂ ಮಱುಗಿದವು ಕೋಕಂಗಳು || (೨೬–೫)

ಈ ಬಗೆಯ ಸೂರ್ಯಾಸ್ತವರ್ಣನೆಯನ್ನು ಲಕ್ಷ್ಮೀಶನು ಮಾಡಿರುವುದನ್ನು ಕಾಣುತ್ತೇವೆ. ಪಂಪ–ಕುಮಾರವ್ಯಾಸರ ಸೂರ್ಯಾಸ್ತವರ್ಣನೆ ದುಃಖ-ಶೋಕ-ಚಿಂತೆಗಳನ್ನು ಸೂಚಿಸುತ್ತಿದ್ದರೆ ಲಕ್ಷ್ಮೀಶನ ಸೂರ್ಯಾಸ್ತವರ್ಣನೆ ಉಲ್ಲಾಸ–ವೈಭವ–ಸೌಂದರ್ಯಗಳನ್ನು ಸೂಚಿಸುತ್ತಿದೆ.

ಜಿತತಮಂ ಭುವನಮಧ್ಯಪ್ರಕಾಶಂ ವಿರಾ
ಜಿತವರಾಹಶ್ರೀಧರಂ ಪಂಚಮುಖಮೂರ್ತಿ
ನುತಕಾಶ್ಯಪಂ ರಾಜತೇಜೋಹರಂ ದೂಷಣಾರಿ ಗೋಕುಲಜಾತನು ||
ಅತಿಕಾಂತಿಶೋಭಿತದಿಗಂಬರಂ ಕಲಿತಾಪ
ಹೃತಕುವಲಯಂ ಚಕ್ರಿಯವತಾರದಶಕದು
ನ್ನತಿಗಳಂ ತಳೆದೆಸೆವ ದಿನಪನುದಯಂಗೈದನಂದು ಪೂರ್ವಾಚಲದೊಳು|| (೧೭–೪೨)

ಎಂಬ ಶ್ಲೇಷ ಚಮತ್ಕಾರದಿಂದ ವಿಷ್ಣುವಿನ ಹತ್ತು ಅವತಾರಗಳನ್ನು ಸೂರ್ಯನಲ್ಲಿ ಆರೋಪಿಸುವ ಲಕ್ಷ್ಮೀಶನ ಸೂರ್ಯೋದಯವರ್ಣನೆ, ಮತ್ತು

ಓಡಿದುವು ಪಕ್ಷಿಗಳ್ ಗೂಡಿಂಗೆ, ದೆಸೆಗಳಂ
ನೋಡಿದುವು ಘೂಕಂಗಳಳಿಗಳಂ ಸೆಱೆಗೈದು
ಹೂಡಿದುವು ಬಾಗಿಲಂ ಕಮಲಂಗಳರಲ್ದುವಿಂದೀವರಂಗಳ್ ನಭದೊಳು ||
ಮೂಡಿದುವು ತಾರೆಗಳ್ ಚಕ್ರವಾಕಂಗಳಂ
ಕಾಡಿದುವು ವಿರಹತಾಪಂಗಳಿಳೆಯೆಲ್ಲಮಂ
ತೀಡಿದುವು ಕತ್ತಲೆಗಳಲ್ಲಿಗಲ್ಲಿಗೆ ಮನೆಮನೆಯ ಸೊಡರ್ ಕಣ್ಗೆಸೆದುವು || (೮–೪೮)

ಎಂಬಂತಹ ಸಹಜಸರಳ ಸ್ವಭಾವೋಕ್ತಿಯ ಸೂರ್ಯಾಸ್ತವರ್ಣನೆ ಇವುಗಳಿಗೆ ಕಾವ್ಯರಸಿಕನ ಹೃದಯದಲ್ಲಿ ಶಾಶ್ವತವಾದ ಸ್ಥಾನವಿದ್ದೇಇದೆ ಎಂದು ಹೇಳಬಹುದು.

### ಋತುವರ್ಣನೆ

ಋತುಗಳು ಬದಲಾಗುತ್ತಿರುವುದು ನಿಸರ್ಗನಿಯಮ. ಆ ವ್ಯತ್ಯಾಸಾನುಸಾರವಾಗಿ ಸೃಷ್ಟಿಸೌಂದರ್ಯವು ವ್ಯತ್ಯಾಸವಾಗುತ್ತದೆ. ಅದು ಮಾನವನ ಅಂಗಾಂಗಗಳ

ಮೇಲೂ ಮನಸ್ಸಿನಮೇಲೂ ಪ್ರಭಾವಬೀರುತ್ತದೆ. ಪ್ರತಿಯೊಬ್ಬ ಮಾನವನೂ ಋತು ಪರಿವರ್ತನೆಯನ್ನು ನೋಡುತ್ತಾನೆ, ಅನುಭವಿಸುತ್ತಾನೆ–ಯಾಂತ್ರಿಕವಾಗಿ. ಆದರೆ ಕವಿ ಯಾದವನು ವಿವಿಧ ಋತುಗಳ ವಿವಿಧ ಸಾರಸೌಂದರ್ಯವನ್ನು ಅನುಭವಿಸಿ ಬಿಟ್ಟು ಬಿಡುವುದಿಲ್ಲ. ಅವನ ಪ್ರತಿಭೆಗೆ ಅದು ಆಹಾರವಾಗುತ್ತದೆ. ಆ ರಸಾನುಭವವು ಕವಿಯ ಅಂತರಂಗದಲ್ಲಿ ಅರಗಿ, ರಕ್ತಗತವಾಗಿ, ಸುಂದರ ಸಾಹಿತ್ಯಚಿತ್ರಣವಾಗಿ ಅವನ ಕೃತಿ ಗಳಲ್ಲಿ ಪಡಿಮೂಡುತ್ತದೆ. ಹೀಗೆ ಯಾವನಲ್ಲಿ ಆಗುವುದಿಲ್ಲವೋ ಅವನು ಕವಿಯಾಗ ಲಾರನು. ಋತುಗಳ ವೈವಿಧ್ಯಪೂರ್ಣ ಸೌಂದರ್ಯಕ್ಕೆ ಪ್ರತಿಭೆಯಿಂದ ವಿವಿಧ ರೂಪ ಕೊಡಬಲ್ಲವನೇ ಕವಿ. ಕವಿಗೆ ಪ್ರಕೃತಿಯೆ, ನಿಸರ್ಗವೇ ಪ್ರಥಮ ಮತ್ತು ಶ್ರೇಷ್ಠಗುರು ; ಕವಿ ಅದರ ಅಚ್ಚುಮೆಚ್ಚಿನ ಶಿಷ್ಯ.

ವೇದ–ರಾಮಾಯಣಾದಿಗಳಿಂದ ಪ್ರಕೃತಿವರ್ಣನೆಯ ರೀತಿಯನ್ನು ನಾವು ಕಾಣು ತ್ತೇವೆ. ಕವಿಕುಲಗುರು ಕಾಳಿದಾಸನು 'ಋತುಸಂಹಾರ'ವನ್ನು ಸೃಷ್ಟಿಸಿದನು. ಆಂಗ್ಲ ಕವಿಗಳೂ ಋತುವರ್ಣನೆಯನ್ನು ಮಾಡಿದ್ದಾರೆ. ಕನ್ನಡ ಸಾಹಿತ್ಯದಲ್ಲಿಯೂ ಋತು ವರ್ಣನೆಯಿಲ್ಲದ ಕಾವ್ಯವೇ ಇಲ್ಲ. ಆದರೆ ಹಲಕೆಲವು ಕವಿಗಳ ಕೃತಿಗಳಲ್ಲಿ–ಲಾಕ್ಷಣಿಕರ ನಿಯಮಕ್ಕೆ ಕಟ್ಟುಬಿದ್ದುದರಿಂದ–ವರ್ಣನೆಗಳು ಕುಂಟುತ್ತವೆ. ಅವುಗಳ ವಿಲಾಸ ವೈಭವಕ್ಕೆ ಮಂಜು ಮುಸುಕಿರುತ್ತದೆ.

'ಕವಿಯು ಪಾಠಕರ ಹೃದಯದಲ್ಲಿ ಕರುಣರಸೋತ್ಪಾದನವನ್ನುಂಟುಮಾಡಲೆಳಸಿ, ತಾನು ಕುರಿತು ಹೇಳುತ್ತಿರುವ ಮಾನವೀಯಾವಸ್ಥೆಗಳನ್ನು ವರ್ಣಿಸುತ್ತಿರುವಾಗ, ಹೊರ ಗಡೆ ಕಾಣುವ ಪ್ರಕೃತಿಯ ಸಂತೋಷಾಂಶಗಳನ್ನು ವರ್ಣಿಸಿದರೆ ಹೃದಯದಲ್ಲಿ ಕರುಣೆ ಹೇಗೆ ತಾನೆ ಉದ್ಭವಿಸೀತು? ಪ್ರಕೃತಿಯೂ ಕೂಡ ಮನುಷ್ಯನ ಅವಸ್ಥೆಗಳಲ್ಲಿ ಭಾಗಿಯಾಗು ತ್ತದೆ ಎಂಬ ಭಾವನೆಯನ್ನಿಟ್ಟುಕೊಂಡು ಅದರ ಹೃದಯವೂ ಮಿಡುಕುವುದು ಎಂದು ವರ್ಣಿಸಿದರೆ ಕಠಿನಹೃದಯನಾದ ಪಾಠಕನೂ ಕೂಡ ಕರಗುತ್ತಾನೆ. ಇಂತಹ ವರ್ಣನೆ ಯನ್ನು "Pathetic Fallacy" ಎಂದು ಕರೆಯುತ್ತಾರೆ. ಆಂಗ್ಲ ಸಾಹಿತ್ಯದಲ್ಲಿ ಷೆಲ್ಲಿ ಕವಿಯು ಈ ವಿಧವಾದ ವರ್ಣನೆಯಲ್ಲಿ ಅಗ್ರಗಣ್ಯನು; ಕನ್ನಡ ಸಾಹಿತ್ಯದಲ್ಲಿ ಲಕ್ಷ್ಮೀಶನು ಅತುಲನು'[1] ಎಂದು ಡಿ. ಎಲ್. ನರಸಿಂಹಾಚಾರ್ಯರು ಹೇಳಿದ ಮಾತು ಅತ್ಯಂತ ಯುಕ್ತವಾಗಿದೆ. ಕವಿ ಲಕ್ಷ್ಮೀಶನ 'ಪ್ರಕೃತಿಕರುಣೆ'ಯ ಚಿತ್ರಣದ ಒಂದೆರಡು ಉದಾ ಹರಣೆಗಳನ್ನು ನೋಡಬಹುದು :

ಅರಸ ಕೇಳಿಲ್ಲಿರ್ದ ಪಕ್ಷಿಮೃಗಜಂತುಗಳ್
ಧರಣಿಸುತೆಯಂ ಬಳಸಿ ನಿಂದು ಮೈಯುಡುಗಿ ಜೋ
ಲ್ದಿರದೆ ಕಂಬನಿಗಱೆದು ನಿಜವೈರಮಂ ಮಱೆದು ಪುಲ್ಮೇವುಗಳನೆ ತೊಱೆದು ||

1 'ಪೀಠಿಕೆಗಳು, ಲೇಖನಗಳು', ಪು. ೫೩೭–೫೩೮.

ಕೊರಗುತಿರ್ದುವು ಕೂಡೆ ವೃಕ್ಷಲತೆಗಳ್ ಬಾಡಿ
ಸೊರಗುತಿರ್ದುವು ಶೋಕಭಾರದಿಂ ಕಲ್ಗಳುಂ
ಕರಗುತಿರ್ದುವು ಜಗದೊಳುತ್ತಮರ ಹಾನಿಯಂ ಕಂಡು ಸೈರಿಸುವರುಂಟೆ||(೧೯–೩೨)

ಇಲ್ಲಿ ಅರ್ಥಾಂತರನ್ಯಾಸಾಲಂಕಾರದಿಂದ ಪ್ರಕೃತಿಯಲ್ಲಾದ ಕರುಣದ ವಿಭಾವಗಳನ್ನು ಕವಿ ವರ್ಣಿಸುತ್ತಾನೆ. ಇಂತಹ ವರ್ಣನೆಗಳನ್ನೋದಿಯೂ ಮಾನವನಲ್ಲಿ ಕರುಣದ ಅನುಭಾವಗಳು ಮೂಡದಿರುವವೆ? ಉತ್ತಮರ ಹಾನಿಗಾಗಿ ಓದುಗನೂ ಮರುಗುತ್ತಾನೆ. ಕವಿಯ ವರ್ಣನೋದ್ದೇಶವು ಸಫಲವಾಗುತ್ತದೆ.

ಮೊರೆಯಲೊಲ್ಲವು ತುಂಬಿ ಕುಣಿಯಲೊಲ್ಲವು ನವಿಲ್
ಬೆರೆಯಲೊಲ್ಲವು ಕೋಕಿ ನಡೆಯಲೊಲ್ಲವು ಹಂಸೆ
ಕರೆಯಲೊಲ್ಲವು ಪಿಕಂ ನುಡಿಯಲೊಲ್ಲವು ಶುಕಂ ನಲಿಯಲೊಲ್ಲವು ಚಕೋರಿ ||
ನೆರೆಯಲೊಲ್ಲವು ಹರಿಣಿಯೊಲೆಯಲೊಲ್ಲವು ಕರಿಣಿ
ಪೊರೆಯಲೊಲ್ಲವು ಚಮರಿ ಮೆಱೆಯಲೊಲ್ಲವು ಸಿಂಗ
ಮರರೆ ಜಾನಕಿಯ ಶೋಕಂ ತಮ್ಮದೆಂದಾಕೆಯಂಗಮುಂ ನೋಡಿ ನೋಡಿ||(೧೯–೩೩)

ಎಂಬ ಲಕ್ಷ್ಮೀಶನ ಪದ್ಯವು

ಅಲಕಂ ಮಂದಾರಶೂನ್ಯಂ ಕದಪು ಮಕರಿಕಾಪತ್ರಶೂನ್ಯಂ ಲಲಾಟಂ
ತಿಲಕಾಲಂಕಾರಶೂನ್ಯಂ ಘನಕುಚಯುಗಲಂ ಹಾರಶೂನ್ಯಂ ನಿತಂಬಂ
ಕಲಕಾಂಚೀದಾಮಶೂನ್ಯಂ ಚರಣಯುಗಲಮುಂ ನೂಪುರಾಲಾಪಶೂನ್ಯಂ
ಲಲಿತಾಂಗಂ ಪೋದೊಡಾಯ್ತಾಕೆಗೆ ದಿವಮನಿತುಂ ನಿರ್ಜರಾರಣ್ಯಶೂನ್ಯಂ ||
—'ಆದಿಪುರಾಣ', ೩–೧೩

ಎಂಬ ಆದಿಪಂಪನ ವರ್ಣನಾಸತ್ತ್ವವನ್ನೊಳಗೊಂಡಿದೆ. ಒಬ್ಬನ ವಿರಹದ ಮೂಲಕ ಒಬ್ಬಳಿಗೆ ಶೂನ್ಯಭಾವ ಬರುವುದು ಸ್ವಾಭಾವಿಕ. ಆದರೆ ಒಬ್ಬಳ ದುಃಖವನ್ನು ಕಂಡು ಮೃಗಪಕ್ಷಿಗಳು ದುಃಖಪಟ್ಟು ತಮ್ಮ ಕೂಜನ ನೃತ್ಯಾದಿಗಳನ್ನು ಬಿಡುವುದು ಸ್ವಾಭಾವಿಕವೆ? ಹೌದು–ಕವಿ ಲಕ್ಷ್ಮೀಶನಿಗೆ ಹಾಗೆ ಕಂಡಿದೆ. ಮೃಗಪಕ್ಷಿಗಳಲ್ಲಿರುವಷ್ಟು ಜಾಗೃತ ಭಾವಗಳು ಕೆಲವು ಸಲ ಮಾನವರಲ್ಲಿ ಕೂಡ ಕಾಣುವುದಿಲ್ಲ ಎಂಬುದನ್ನು ಕವಿ ಈ ವರ್ಣನೆಯಲ್ಲಿ ಸೂಚಿಸುತ್ತಾನೆ.

ಸುರನದಿಯ ತೆರೆತೆರೆಯ ನಡು ನಡುವೆ ಬಿದ್ದೆದ್ದು
ಬರಲಾಱದಿರ್ದೊಡಂ ಗಂಗೆಯೊಳಲರ್ದಲ
ರ್ದರವಿಂದಗಂಧದತಿಭಾರಮುಂ ಪೊಱಲಾಱದಿರ್ದಡಂ ಧರಣಿಸುತೆಯ ||
ಪರಿತಾಪಮುಂ ತವಿಸದಿರಬಾರದೆಂದು ತರ
ಹರದೊಳೊಯ್ಯೊಯ್ಯನೈತಂದು ಬೀಸಿತು ಸುಖ
ಸ್ಪರುಶವಾತಂ ಜಗದೊಳುಪಕಾರಿಯಾದವಂ ತನ್ನ ನೋವಂ ನೋಳ್ಪನೆ ||(೧೯–೩೪)

ಇಂತಹ ಹೃದಯಸ್ಪರ್ಶಿಯಾದ ಪದ್ಯಗಳಿಗೆ ಸಾಹಿತ್ಯದಲ್ಲಿ ಚಿರಸ್ಥಾಯಿಯಾದ ಸ್ಥಾನವುಂಟು. ಗಂಗಾನದಿಯ ಸೆಳವಿನಲ್ಲಿ ಸಿಕ್ಕು ಬಿದ್ದು ಎದ್ದು, ಗಂಧದ ಅತಿ ಭಾರವನ್ನು ಹೊರಲಾರದೆ ಹೊತ್ತುಕೊಂಡು ತಾನು ಅನೇಕ ಕಷ್ಟಗಳನ್ನು ಅನುಭವಿಸಿಯೂ ಗಾಳಿ

ಮಂದವಾಗಿ, ಸುಖಸ್ಪರುಶವಾಗಿ ಸೀತೆಯನ್ನು ಮೈದಡವಿ ಸಂತೈಸುತ್ತದೆ. ಉಪಕಾರಿಯಾದವನು ತನ್ನ ನೋವನ್ನು ನೋಡುವನೆ ಎಂಬ ಸದ್ಭಾವ ಇಲ್ಲಿಯ ಗಾಳಿಯಲ್ಲಿದೆ, ಮಾನವನಲ್ಲಿಲ್ಲವೆ? ತೆರೆಗಳ ನಡುವೆ ಬಿದ್ದೆದ್ದ ಬವಣೆ, ಕಂಪಿನ ಹೊರೆಯಿಂದ ಗಾಳಿಯ ನಡೆ ಮಂದವಾಗಿದೆ ಸರಿ. ಆದರೂ ದುಃಖಿತೆಯಾದ ಸೀತೆಗಾಗಿ ತಂಪನ್ನೂ ಕಂಪನ್ನೂ ತಂದು ತೀಡುತ್ತಿದೆ; ಅವಳಿಗೆ ಸುಖವಾಗಲೆಂದು ಮಂದವಾಗಿದೆ. ಲಕ್ಷ್ಮೀಶನ ಈ ಮೆಲುಗಾಳಿ ಅವನಿಂದ ಹೃದಯಸಂಸ್ಕಾರವನ್ನು ಪಡೆದಿದೆ. ಈ ಬಗೆಯ ನಿಸರ್ಗಕರುಣೆ ಕವಿದೃಷ್ಟಿಗೆ ಮಾತ್ರ ಕಾಣುವುದು.

ಇದೇ ಬಗೆಯ ವರ್ಣನಾಪದ್ಯಗಳು, ಎಳೆಮಗು ಚಂದ್ರಹಾಸನು ಒಬ್ಬೊಂಟಿಗನಾಗಿ ಕಟ್ಟಡವಿಯಲ್ಲಿ ದುಃಖಿಸುತ್ತಿರುವ ಸಂದರ್ಭಚಿತ್ರಣದಲ್ಲಿವೆ:

ಬಾಲಕನ ರೋದನದ ಕೂಡೆ ಬನದೇವಿಯರ್
ಗಾಳಿ ತೀಡಿದಡೆ ಭೋರೆಂಬ ತರುಲತೆಗಳಿಂ
ಗೋಳಿಟ್ಟರಗ್ನಿಜಲಭೂಗಗನವಾಯುರವಿಶಶಿಗಳೆಣ್ದೆಸೆವೆಣ್ಗಳು ||
ಹೇಳಲೇನಡವಿಯ ಚರಾಚರಂಗಳ ಜೀವ
ಜಾಲಂಗಳುಱೆ ಮಱುಗುತಿರ್ದುವು... || (೨೮–೩೯)

ಎಂದು ಲಕ್ಷ್ಮೀಶನು ಪ್ರಕೃತಿ ಕರೆದ ಕರುಣರಸವನ್ನು ಎರಕಹೊಯ್ದು ಮೂರ್ತೀಕರಿಸುತ್ತಾನೆ.

ಇಡೀ ವರುಷ ಪರಿಭ್ರಮಿಸುವ ಯಜ್ಞಾಶ್ವವು ಎಲ್ಲ ಋತುಗಳನ್ನೂ ಕಾಣಬೇಕಷ್ಟೆ. ಈ ನಿಸರ್ಗಪರಿವರ್ತನೆಯನ್ನು ಲಕ್ಷ್ಮೀಶನು ಕಥನಕ್ಕೆ ಚೆನ್ನಾಗಿ ಹೊಂದಿಕೆ ಮಾಡಿಕೊಂಡಿದ್ದಾನೆ. ಸಂಸ್ಕೃತ ಜೈಮಿನಿ ಭಾರತದಲ್ಲಿ ಈ ಋತುವರ್ಣನೆಗಳು ಬರುವುದಿಲ್ಲ—ಅಂದರೆ ಅದು ನಿಸರ್ಗದಿಂದ ದೂರ ಉಳಿದಂತಾಯಿತು. ಜೈಮಿನಿಗೂ ಲಕ್ಷ್ಮೀಶನಿಗೂ ಕಥೆ ಒಂದೇ. ಆದನ್ನು ನಡೆಸಿಕೊಂಡು ಹೋಗುವ ಲಕ್ಷ್ಮೀಶನ ದಾರಿ ಬೇರೆ.

ಇನ್ನು ಲಕ್ಷ್ಮೀಶ ಕವಿಯ ಋತುವರ್ಣನೆಗಳ ವೈಶಿಷ್ಟ್ಯಗಳನ್ನು ಒಂದೊಂದಾಗಿ ಪರಿಶೀಲಿಸೋಣ.

### ೧. ವಸಂತಋತುವರ್ಣನೆ

ಎಳವಿಸಿಲೀಗಳೀಗಳೆ ಮುದಿದುರ್ದು ಚೂತಕುಜಾತಮೀಗಳೀ
ಗಳೆ ನನೆದೋಱಿತಿಂಗೊಳದಿನುಣ್ಮದ ಷಟ್ಪದವೃಂದಮೀಗಳೀ
ಗಳೆ ಮೊರೆದತ್ತು ಚಂದನದ ತಣ್ಪುಬಳಾನಿಕರಕ್ಕದೀಗಳೀ
ಗಳೆ ನೆಗಟ್ದಿತ್ತಲೇ ಪುಗಿಲದಾಗಲೆಬೇಡ ವಸಂತರಾಜನಾ ||

ಪೋಗದೆ ಪಾಡುತಿರ್ಪಳಿಯೆ ಬೃಂಹಿತವಾಗಿರೆ ಚಂದ್ರಕಾಂತಿ ಕಾ
ಯ್ಪಾಗಿರೆ ಬೀಸುವೊಂದೆಲರೆ ಬೀಸುವುದಾಗಿರೆ ಕಾಯ್ಗಳಿಂದಮಿಂ
ಬಾಗಿರೆ ಸೋರ್ವ ಸೋನೆ ಮದವಾಗಿರೆ ಮಾವಿನ ಬಂದ ಕೋಡೆ ಕೋ
ಡಾಗಿರೆ ಕೋಡುಗೊಂಡು ಪರಿದತ್ತು ವಸಂತಗಜಂ ವಿಯೋಗಿಯಂ ||

ಆದಿಕವಿ ಪಂಪನ ವಸಂತಋತು ವರ್ಣನೆಯ ಈ ಪದ್ಯಗಳಲ್ಲಿರುವ ಶಕ್ತಿ,

ಪೊಸಮಾವಶೋಕೆಯೊಳ್ ಮಱಿದುಂಬಿ ಕೋಗಿಲೆಯೊ
ಳೆಸವ ಸಂಪಗೆ ಪೊಚ್ಚಪೊಂದಾವರೆಯೊಳೊಪ್ಪ
ಡಸಿದ ಮಲ್ಲಿಗೆಯಲರ್ ಬೆಳ್ತ ಬೆಳ್ದಿಂಗಳೊಳ್ ಗಿಳಿವಿಂಡು ಬನಸಿರಿಯೊಳು ||
ಮಸದುವೊಂದೊಂದಱಿತೊಳ್ ಮಧುಮಾಸಕಂಗಜನ
ದೆಸೆಯಂತೆ ಖತಿಯಂತೆ ಧನದಂತೆ ಜಸದಂತೆ
ಪಸುರ್ವೆಳಸಿನಂತೆ ಕೆಂಪಸಿತಂ ಪಳದಿ ಪಳಕು ಪಚ್ಚೆಗಳ ಬಣ್ಣದಿಂದೆ || (೮-೪)

ಲಕ್ಷ್ಮೀಶನ ಈ ಪದ್ಯದಲ್ಲಿ ಇಲ್ಲ. ಆದರೆ

ಕಳಿದುದು ಮಾಗಿ ಕೂಗಿದುದು ಕೋಗಿಲೆ ಪಲ್ಲವಿಸಿತ್ತು ಮಾಮರಂ
ತಳವೆಳಗಾಯ್ತು ಪಾಂಥಜನಮೋಪರೊಳಾ ನವಭೋಗದುಜ್ಜುಗಂ
ಮೊಳೆತುವು ಕಾಮನೇಸು ಗುರಿಗಂಡುದು ತಂಡದೆ ನಿಂದ ನಂದನಂ
ತಳೆದುವು ಕೂಡೆ ಕೆಂಪಿನ ಪಸುರ್ಪಿನ ಬೆಳ್ಪಿನ ಕರ್ಪಿಸಂದವುಂ ||

ಹರಿಹರನ ಈ ಪದ್ಯದ ಸ್ವಭಾವೋಕ್ತಿಯ ಚಿತ್ರವು ಲಕ್ಷ್ಮೀಶನ ಪದ್ಯದಲ್ಲಿ ತನ್ನದೇ ಆದ ಸ್ವತಂತ್ರ ರೀತಿಯಲ್ಲಿ ಮೂಡಿದೆ.

...............ವಿರಹಿಗಳ ಬಾಯಾರೆ ಮಾ
ಮಸಕದಿಂ ಬಂದನು ವಸಂತನು ವಿಯೋಗಿಹೃತ್ಕುಂತನು ಸುಖಶ್ರಾಂತನು||

ಎಂದು ರಾಘವಾಂಕನು ವಸಂತಋತುವಿನ ಅನುಭಾವಗಳನ್ನು ಬಣ್ಣಿಸಿದ್ದಾನೆ. ಇಲ್ಲಿ ವಿರಹಿಗಳ ಬಾಯಿ ಒಣಗುವಂತೆ (ಜ್ವರಲಕ್ಷಣ) ಎಂದು ಹೇಳುವಲ್ಲಿ ಔಚಿತ್ಯವಿದೆ. ಈ ಔಚಿತ್ಯವನ್ನು ಲಕ್ಷ್ಮೀಶನ

ಒಂದೆಡೆಯೊಳಂ ತನಗೆ ನಿಲವಿಲ್ಲದತಿವೇಗ
ದಿಂದೆ ನಿರುತಂ ಪ್ರಬಲವಾಗಿ ಬೀಸುವ ಗಾಳಿ
ಚಂದ್ರನದ್ರುಮಮಂ ತೊಡದರ್ಹಿಗಳಾಹಾರಮಂ ಕೊಂಡು ಕೊಂಡು ಮಿಕ್ಕು ||
ಮಂದತ್ವಮಂ ತಳೆದು ಮಲಯಾಚಲದ ಸೀಮೆ
ಯಿಂದೆ ಸರಸಿಜದೊಳ್ ಭ್ರಮಿಸುವ ಮಱಿದುಂಬಿಗಳ
ವೃಂದಮಂ ಕೂಡಿಕೊಂಡೆಳವೆಲರ್ ಬಂದುದು ವಿರಹಿಗಳೆದೆಯಾರುವಂತೆ ||(೮-೨)

ಎಂಬ ಪದ್ಯದಲ್ಲಿ ಕಾಣುತ್ತೇವೆ. ಈಗ ಗಾಳಿ ಎಳವೆಲರ್-ಮಂದಾನಿಲ-ಏಕಾಯಿತು? ಅದಕ್ಕೆ ಕಾರಣಗಳನ್ನು ಉತ್ಪ್ರೇಕ್ಷಿಸಿ ಕವಿ ಹೇಳುತ್ತಾನೆ: ಇಷ್ಟು ದಿನ ವೇಗದಿಂದ ಸಂಚರಿಸಿದ ದಣಿವು, ಹಾವುಗಳು ಉಂಡುದರಿಂದಾದ ಸೊರಗು, ಮರಿದುಂಬಿಗಳನ್ನು ಸಾಗಿಸಿಕೊಂಡುಬರುವ ಶ್ರಮ ಇವುಗಳಿಂದ ಗತಿ ಕುಗ್ಗಿದೆ. ಇಂತಹ ಉತ್ಪ್ರೇಕ್ಷೆಯಿಂದ ಋತು ವರ್ಣನೆಯನ್ನು ಇನ್ನು ಕೆಲವು ಕವಿಗಳು ಮಾಡಿದುದುಂಟು.

ಆ ಚೈತ್ರಮಾಸಮೆಸದುದು ಧರ್ಮಜನ ಕೀರ್ತಿ
ಭೂಚಕ್ರಮಂ ಮುಸುಕಿದಂತೆ ಬೆಳ್ದಿಂಗಳಿರೆ
ಯಾಚಕರನೆತ್ತಲುಂ ಕೂಗಿ ಕರೆವಂತುಲಿಯೆ ಕೋಗಿಲೆಗಳಿಳೆಯ ಜನದ||
ಲೋಚನಕುದಯಿಪ ಪಸದಂತೆ ಚೂತಾಂಕುರಂ
ಗೋಚರಿಸೆ ಪಾತಕಕ್ಷಯದಂತೆ ಮಾಗಿಯ ವಿ
ಮೋಚನಂ ಕಾಣಿಸಲ್ ಪುಣ್ಯವಾಸನೆಯಂತೆ ದಕ್ಷಿಣದ ವಾಯು ಸುಳಿಯೆ || (೮-೬)

ಇದು ಲಕ್ಷ್ಮೀಶನ ವಸಂತವರ್ಣನೆಯ ಅತ್ಯುತ್ತಮ ಪದ್ಯವಾಗಿದೆ. ಪ್ರಕೃತಿಯ ಅಭಿವ್ಯಕ್ತಿಯಾದ ಬೆಳ್ದಿಂಗಳು, ಕೋಗಿಲೆಯ ಕೂಜನ, ಚಿಗುರುವ ಮಾವಿನ ಚಿಗುರು, ಮಾಗಿಯ ವಿಮೋಚನ, ದಕ್ಷಿಣದ ವಾಯು–ಇವು ಧರ್ಮರಾಯನ ಆಳಿಕೆಯ ಸ್ಥಿತಿಯನ್ನು ಸಾರುತ್ತಿದ್ದವೆಂದು ಕವಿ ಹೇಳುತ್ತಾನೆ. ಎಂದರೆ ಈ ಸೃಷ್ಟಿವ್ಯಾಪಾರಗಳು ಅನುಕ್ರಮವಾಗಿ ಆ ರಾಜನ ಕೀರ್ತಿ ಹಬ್ಬಿದಂತೆ, ಯಾಚಕರನ್ನು ಅವನತ್ತ ಕರೆಯುವಂತೆ, ಜನ ಆಶಾಭರಿತರಾದಂತೆ, ನಾಡಿನಲ್ಲಿ ಪಾಪಕ್ಷಯವಾದಂತೆ, ಪುಣ್ಯವಾಸನೆ ಹಬ್ಬಿದಂತೆ ಇದ್ದುವು. ಅಲ್ಲದೆ, ಕಥೆಯ ಮುನ್ಸೂಚನೆಯನ್ನೂ ಕವಿ ಇಲ್ಲಿ ಮಾಡಿದಂತಿದೆ: ದಕ್ಷಿಣದ ವಾಯು ಪುಣ್ಯವಾಸನೆಯನ್ನು ಜಾಗೃತಪಡಿಸಿರುವುದರಿಂದ ಯಜ್ಞಾಶ್ವವು ದಕ್ಷಿಣಕ್ಕೆ ಹೊರಡಬೇಕು—ಅದು ಶುಭ—ಹಾಗೆ ಹೊರಡುತ್ತದೆ; ಅದರಿಂದ ಧರ್ಮಜನ ಕೀರ್ತಿ ಇನ್ನೂ ಹಬ್ಬುವುದು; ಯಜ್ಞವು ಯಾಚಕವೃಂದವನ್ನು ಆಕರ್ಷಿಸುವುದು. ಹೀಗೆ ಮುಂದಾಗುವ ಕಥೆಗೂ ಕಾಲದೇಶಾದಿಗಳ ವರ್ಣನೆಗೂ ಸಂಬಂಧವನ್ನು ಜೋಡಿಸುವ ಕಲ್ಪಕರೀತಿ ಕವಿ ಲಕ್ಷ್ಮೀಶನ ವೈಶಿಷ್ಟ್ಯವೆಂದು ಅಲ್ಲಲ್ಲಿ ಕಾಣುತ್ತೇವೆ.

### ೨. ಗ್ರೀಷ್ಮಋತುವರ್ಣನೆ

'ಸೂಕ್ತಿಸುಧಾರ್ಣವ'ದಲ್ಲಿ ಕೊಟ್ಟಿರುವ 'ವೈಶಾಖವರ್ಣನ' ಪದ್ಯಗಳಲ್ಲಿ

"ಬೇಂಟೆಗಾಱನವೋಲ್ ಬೇಸಗೆ ಬಂದು ಪೊಕ್ಕು ಕವಿದತ್ತೆತ್ತಂ ಮಹೀಭಾಗಮಂ,"
"ಬೆಟ್ಟ ಬೇಸಗೆ ಬಿಸಿಲೊಳ್,"
"ವಿಷಮಾರ್ಕಕರೌಘದೊಳಾ ನಿದಾಘದೊಳ್,"
"ಘೋರಘರ್ಮಾಗಮಂ"
"ಭುವನಭೀಷ್ಮಂ ಗ್ರೀಷ್ಮಂ,"
"ಬೇಸಗೆ ಬೇಸಱಿಸಿತ್ತು ಲೋಕಮಂ,"
"ತೃಷ್ಣೆಯಿನಾರೊ ಬೇಯದರ್,"

ಇತ್ಯಾದಿ ವರ್ಣನೆಗಳಿವೆ. ಎಲ್ಲವುಗಳಲ್ಲಿಯೂ ತಾಪದಾಯಕವಾದ ಈ ಕಾಲ ಅಸಹ್ಯವಾದುದೆಂದೇ ಕಾಣುತ್ತದೆ. ಲಕ್ಷ್ಮೀಶನೂ ಈ ಜಾಡನ್ನು ಹಿಡಿದೇ ಗ್ರೀಷ್ಮವನ್ನು ವರ್ಣಿಸುತ್ತಾನೆ :

ಎಲ್ಲಿಯುಂ ಕೆಱೆತೊಱೆಗಳೊಱತೆ ಬಱತುವು ನೀರ್‌ನೆಳಲ್ಗಳನಱಿಸಿ ಪಾಂಥರು ||
ಘುಲ್ಲಿಸುವ ಬೇಸಗೆಯ ಬಿಸಿಲಿಂದೆ ಮೂಜಗಂ
ತಲ್ಲಣಿಸಿತಿಳೆಯ ಕಾಹಿಳಿದು ಪಾತಾಳದಹಿ
ವಲ್ಲಭನ ಪೆಡೆವಣಿಯ ರುಚಿಗಳಾತಪದಂತೆ ಕಾಣಿಸದೆ ಮಾಣವೆನಲು || (೧೫–೨)

ಎಂಬಲ್ಲಿ ದಾರಿಕಾರರಿಗೆ ನೀರಿಲ್ಲ ನೆಳಲಿಲ್ಲದಾಯಿತು ಎಂಬ ಸ್ವಾಭಾವಿಕ ವರ್ಣನೆಯೊಂದಿಗೆ ಇಳೆಯ ಕಾಹಿಳಿದು ಪಾತಾಳದಹಿವಲ್ಲಭನ ಹೆಡೆಯ ಮಣಿಗಳು ಕಾದು ಪ್ರಕಾಶಮಾನವಾಗಿ ಬಿಸಿಲನ್ನು ಸೂಸಿದವು ಎಂಬ ಉತ್ಪ್ರೇಕ್ಷೆ ಮನೋಜ್ಞವಾಗಿದೆ. ಬಿಸಿಲಿನ ಆಧಿಕ್ಯ ಅಷ್ಟು.

ಒಂದು ಕಡೆಯೊಳ್ ಸೋವಲೊಂದು ಕಡೆಯೊಳ್ ತನುಕೆ
ನಿಂದು ಮಱಿಯಾಗಿರ್ಪುದಿನ್ನಿದಂ ಕರಗಿಸುವೆ
ನೆಂದು ಕನಕಾಚಲವನುರಿಪುವನೊ ತರಣಿ ಕಿರಣದೊಳೆನೆ ಬಿಸಿಲ್ಗಱಿಯಲು ||
(೧೫–೩)

ಗ್ರೀಷ್ಮದ ಉಗ್ರತೆ ಎಷ್ಟು? ಮೇರುಗಿರಿಯೇ ಕರಗಿ ಹರಿದು ನೆಲಸಮವಾಗುವಷ್ಟು ಎಂದು ಕವಿ ಹೇಳುತ್ತಾನೆ. ನಮಗೂ ಹಾಗೆಯೆ ಎಷ್ಟೋ ಸಲ ಎನಿಸಿದೆ, ಎನಿಸುತ್ತದೆ. ಆಗಿನ ಗಾಳಿ ಹೇಗಿರುತ್ತದೆ? ಲಕ್ಷ್ಮೀಶನನ್ನೇ ಕೇಳೋಣ: ಈ ಪದ್ಯದ ಉತ್ತರಾರ್ಧದಲ್ಲಿ ಅವನು ಹೇಳುತ್ತಾನೆ :

ಬೆಂದು ಬೆಂಡಾಗಿ ಕುಲಶೈಲಂಗಳಾಸಱಿಂ
ಕಂದರದ ಮೊಗದಿಂದೆ ಬಿಡುವ ಬಿಸುಸುಯ್ಯಲರ್
ಬಂದಪುದೆನಲ್ಕೆ ಝುಳದಿಂ ಬಿಡದೆ ಬೀಸುತಿರ್ದುದು ಗಾಳಿ ಬೇಸಗೆಯೊಳು ||

ಇಲ್ಲಿ ಬೇಸಗೆಯ ಗಾಳಿಯ ವರ್ಣನೆಯನ್ನೂ ವ್ಯಕ್ತೀಕರಣ, ಮನುಷ್ಯತ್ವಾರೋಪಣ (Personification) ಉತ್ಪ್ರೇಕ್ಷೆಯಿಂದ ಕವಿ ಮಾಡಿದಂತಿದೆ. ಪದ್ಯದ ಪೂರ್ವಾರ್ಧದಲ್ಲಿ ಹೇಳಿದಂತಹ ಬಿಸಿಲಿನಿಂದ ಕುಲಪರ್ವತಗಳು ಬೆಂದು ಬೇಗುದಿಗೊಂಡಿವೆ; ಆ ಪರಿತಾಪವು ಅವುಗಳ ಕಂದರದ ಮುಖದಿಂದ ಬಿಸುಸುಯ್ಯಾಗಿ ಬರುತ್ತಿದೆ—ಅದೇ ಝುಳದಿಂದ ಬೀಸುತ್ತಿರುವ ಗಾಳಿ. ಅನೇಕ ಕಷ್ಟಗಳಿಂದ ಬೆಂದೊಡಲಿನ ಮನುಷ್ಯನೊಬ್ಬನು ಬಿಸುಸುಯ್ಯುವ ಚಿತ್ರವನ್ನು ಈ ವರ್ಣನೆ ನಮ್ಮ ಕಣ್ಣಮುಂದೆ ತರುತ್ತದೆ.

ಲಕ್ಷ್ಮೀಶನ ಈ ಗ್ರೀಷ್ಮವರ್ಣನೆಯು ಕಾವ್ಯದ ಕಥಾನಕದ ದೃಷ್ಟಿಯಿಂದಲೂ ಒಂದು ಲಾಭವನ್ನು ಮಾಡಿಕೊಟ್ಟಿದೆ. ಗ್ರೀಷ್ಮದ ಈ ಭೀಷ್ಮತೆ ಪಾರ್ವತಿಯ ತಪಸ್ಸಿನ ತಾಪಕ್ಕೆ ಪೋಷಕವಾಗಿದೆ. ಯಜ್ಞಾಶ್ವವು ತನ್ನ ಪರಿಭ್ರಮಣದ ಒಂದು ವರ್ಷಕಾಲದಲ್ಲಿ ನೀರನ್ನು ಕುಡಿಯಕೂಡದು,–ಅದನ್ನು ಕುಡಿಯಗೊಡಬಾರದು–ಎಂದು ಯಜ್ಞವಿಧಾನದಲ್ಲಿ ಹೇಳಿದೆ. ಆದರೆ ಯಜ್ಞಾಶ್ವವು ಒಂದು ಸರೋವರವನ್ನು ಕಾಣುತ್ತಲೇ ನೀರು ಕುಡಿದು ಹುಲಿಯಾಗುತ್ತದೆ (೧೫–೩೩). ಇದು ಹೇಗೆ? ಗ್ರೀಷ್ಮದ ಅತ್ಯಂತ ತಾಪದಿಂದ ಬಾಯಾರಿದ ಕುದುರೆ ಅಡಬಡಿಸಿ ನೀರನ್ನು ಕುಡಿದುದು ಸ್ವಾಭಾವಿಕ. ಈ ಗ್ರೀಷ್ಮದ ಅತಿಶಯದ ವರ್ಣನೆ ಇದ್ದಿರದಿದ್ದರೆ ಅದು ನೀರನ್ನು ಕುಡಿದುದು ಶಾಸ್ತ್ರವಿರೋಧವಾಗಿ ಯಜ್ಞಕ್ಕೆ ದೋಷ ತಟ್ಟುತ್ತಿತ್ತು. ಲಕ್ಷ್ಮೀಶನ ಗ್ರೀಷ್ಮವರ್ಣನೆಯ ಔಚಿತ್ಯದಿಂದ ಅದೊಂದು ಸ್ವಾಭಾವಿಕ ಘಟನೆಯಾಗಿ ಪರಿಗಣಿಸುವಂತಾಗಿದೆ. ನೀರು ಕುಡಿದು ಕುದುರೆ ಹುಲಿಯಾದುದು ಒಂದು ಚಮತ್ಕಾರದ ಘಟನೆಯಾಗಿ, ಧರ್ಮಾಧರ್ಮದ ಮಾತು ಏಳುವುದಿಲ್ಲ.

## ೩. ವರ್ಷಾಕಾಲದ ವರ್ಣನೆ

ಕನ್ನಡ ಕವಿಗಳ ಅತ್ಯಂತ ಪ್ರೀತಿಗೆ ಪಾತ್ರವಾದ ವಸಂತಋತು ಮೊದಲನೆಯದು, ವರ್ಷಾಋತು ಎರಡನೆಯದು. ವರ್ಷಾಕಾಲದ ಬಿರುಗಾಳಿ ಮಳೆ ಮೋಡ ಗುಡುಗು

ಮಿಂಚುಗಳ ಆರ್ಭಟ, ಹಸುರಿನ ವಿಲಾಸ, ಹೂಗಳ ನಲಿವು, ಮೃಗಪಕ್ಷಿಗಳ ಆನಂದ, ಕಾಮನಬಿಲ್ಲಿನ ಮನೋಹರತೆ, ವಿರಹಿಗಳ ದುಃಸ್ಥಿತಿ ಇವುಗಳನ್ನು ವಿವಿಧವಾಗಿ ಕವಿಗಳು ಬಣ್ಣಿಸಿದ್ದಾರೆ.

ರುದ್ರಭಟ್ಟನು ತನ್ನ 'ಜಗನ್ನಾಥವಿಜಯ'ದಲ್ಲಿ (೧೭.೭೭)ವೈಶಾಖವನ್ನು 'ಬೇಸಗೆ ಬೇಸಱಿಸಿತ್ತು ಲೋಕಮಂ' ಎಂದು ವರ್ಣಿಸಿದಂತೆ ಲಕ್ಷ್ಮೀಶನು ವರ್ಷಾಗಮವನ್ನು 'ಮುಂದೆ ಶೋಭಿಸಿತು ವರ್ಷಾಗಮಂ ಧರೆಯ ಬೇಸಗೆಯ ಬೇಸಱಿಂ ತವೆತವಿಸುತೆ,' (೧೭-೧) ಎಂದು ವರ್ಣಿಸಿದ್ದಾನೆ.

ಎದ್ದುವು ಮುಗಿಲ್ಗಳೆಣ್ದೆಸೆಗಳೊಳ್ ತರತರದೊ
ಳಿದ್ದುವು ಗಿರಿಗಳಂತೆ ಮಿಂಚಿದುವು ದಿಗ್ವಧುಗ
ಳುದ್ದಂಡದಿಂದೆ ಪರ್ಜನ್ಯನಂ ಸೆಣಸಿ ನೋಡುವಚಲಾಪಾಂಗದಂತೆ ||
ಸದ್ದಾತೃವಾಗಿ ತನ್ನ ವೊಲಿರದ ಲೋಭಿಯಂ
ಗದ್ದಿಸುವ ತೆಱದಿಂದೆ ಮೊಳಗಿದುವು ಧರಣಿಯೊಳ್
ಬಿದ್ದ ಮುಂಬನಿಯ ಕಂಪಿಗೆ ಸೊಗಸಲಾನೆಗಳ್ ಕೃಷಿಕತತಿ ನಲಿಯಲೊಡನೆ ||
(೧೭-೨)

ಎಂಬಲ್ಲಿ ನಿಸರ್ಗಲೀಲೆಯೊಡನೆ ಜೀವನವನ್ನು ಸಂಬಂಧಿಸಿ ವರ್ಣಿಸಲಾಗಿದೆ. ಆದರಂತೆಯೆ ಸೃಷ್ಟಿಯಲ್ಲಿ ಆನಂದವೇ ಆನಂದದ ಚಿಹ್ನೆಗಳು ಹೊರಹೊಮ್ಮಿದುದನ್ನು ತೋರಿಸಿದೆ. ತರುವಾಯದ ಎರಡು ಪದ್ಯಗಳಲ್ಲಿ (೧೭.೩-೪) ಸೃಷ್ಟಿಯಲ್ಲಾಗುವ ಪರಿವರ್ತನೆಯನ್ನು ತಿಳಿಸಿ ಮುಂದೆ,

ತುಂಗ ನವಚಿತ್ರಮಯ ಸುಪ್ರಭಾಸುರ ಕಾರ್ಮು
ಕಂಗಳಿಂ ಸುರಕಾರ್ಮುಕಂಗಳಂ ವಿವಿಧ ವಾ
ದ್ಯಂಗಳ ಗಂಭೀರಘನಘೋಷಂಗಳಿಂದೆ ಘನಘೋಷಂಗಳಂ ನೆಗಳ್ದ ||
ಸಂಗತನೃಪಾಲವಾಹಿನಿಗಳಿಂ ವಾಹಿನಿಗ
ಳಂ ಗೆಲ್ದು ವೀರಪಾಂಡವ ಸೈನ್ಯಸಾಗರಂ
ಕಂಗೊಳಿಪ ಕಾರ್ಗಾಲದಂತೆಸೆಯೆ ವಾಜಿ ಮಣಿಪುರಕಾಗಿ ನಡೆತಂದುದು || (೧೭-೫)

ಎಂದು ಕಾಲವರ್ಣನೆಯನ್ನು ಕಥಾಸಂದರ್ಭದೊಡನೆ ನೇಯಲಾಗಿದೆ. ಕಥೆ ಕಾಲದೊಡನೆ ಹೊಂದಿಕೊಂಡು ಸಾಗುತ್ತದೆ. ಈ ವರ್ಣನೆಯಲ್ಲಿ ವ್ಯಂಜಕಶಕ್ತಿಯಿದೆ. ಮಣಿಪುರಕ್ಕೆ ಕಾರ್ಗಾಲ ಬಂದಂತೆ ಪಾಂಡವರ ಸೇನೆ ಬಂದಿತು ಎಂದು ಹೇಳುವಲ್ಲಿ ಮಣಿಪುರಕ್ಕೂ ಪಾಂಡವರಿಗೂ 'ದುರ್ದಿನ' ಒದಗಲಿದೆ ಎಂಬುದರ ಸೂಚನೆ ಇದೆ. ಅರ್ಜುನನ ಮರಣ ಉಲೂಪಿ ಚಿತ್ರಾಂಗದೆ ಬಭ್ರುವಾಹನರಿಗೆ ದುಃಖವನ್ನೂ ಪಾಂಡವರಿಗೆ ಕಾರ್ಯಹಾನಿಯ ದುಃಖವನ್ನೂ ತರಲಿದೆ.

ಕಾಮನಬಿಲ್ಲನ್ನು ಗೆಲ್ಲುವಂತೆ ಪಾಂಡವವೀರರ ಬಿಲ್ಲುಗಳಿದ್ದವೆಂದು ಲಕ್ಷ್ಮೀಶನು ವರ್ಣಿಸಿದ್ದಾನೆ.ಇಲ್ಲಿ ಕಾಮನಬಿಲ್ಲಿನ ವರ್ಣನೆಗೆ ಮಹತ್ತ್ವವಿತ್ತಿಲ್ಲ.ಕಾವ್ಯದಲ್ಲಿ ಇಂದ್ರಧನುಸ್ಸಿನ ವರ್ಣನೆ ಬೇಕು ಎಂದು ಲಾಕ್ಷಣಿಕರು ಹೇಳುತ್ತಾರೆ. ಆದರಂತೆ ಅನೇಕ ಕವಿ

ಗಳು ಅದನ್ನು ವರ್ಣಿಸಿದ್ದಾರೆ. ಆದರೆ ಆದಿಪಂಪನ ವರ್ಣನೆಯ ಮುಂದೆ ಯಾವ ವರ್ಣನೆಯೂ ನಿಲ್ಲಲಾರದು. ಅವನ ರೀತಿ ಹೀಗಿದೆ:

ಪೊಳೆವಮರೇಂದ್ರಗೋಪದ ಪಸುರ್ತೆಳವುಲ್ಲ ಳ ತಳ್ತ ಕಾರ್ಮುಗಿ
ಲ್ಗಳ ಕಿಱುಗೊಂಕುಗೊಂಕಿದ ಪೊನಲ್ಗಳ ಕೆಂಪು ಪಸುರ್ಪು ಬೆ
ಳ್ಪೊಳಕೊಳೆ ಶಕ್ರಕಾರ್ಮುಕ ವಿಳಾಸಮನೇನೆರ್ದೆಗೊಂಡು ಬೇಟದ
ತ್ತಳಗಮನುಂಟು ಮಾಡಿದುದೊ ಕಾಮನಕಾರ್ಮುಕದಂತೆ ಕಾರ್ಮುಕಂ ||

೪. ಶರದೃತುವರ್ಣನೆ

ಕವಿ ಲಕ್ಷ್ಮೀಶನ ಕನ್ನಡ ಜೈಮಿನಿ ಭಾರತದಲ್ಲಿ,

ತುರಗಂ ನಡೆದುದು ಮಣಿಪುರದಿಂ ಶರದ್ದಿನದೊ
ಳರಸಂಚೆ ಸಂಚರಿಸತೊಡಗಿದುವು ನದಿಗಳು
ಬ್ಬರಮಡಗಿ ತಿಳಿದು ಪರಿದುವು ಬೆಳತುದಾಗಸಂ ಮೆಱೆದುದುಡುರಾಜಿ ಕೂಡೆ ||
ತರಣಿಶಶಿಗಳ ಕಿರಣಮೈದೆ ನಿರ್ಮಲವಾದು
ವರವಿಂದದಲರನಱಿಸಿದುವಳಿಗಳೆಣ್ದೆಸೆಯ
ತರುಣಿಯರ ಗುರುಕುಚದ ಮೇಲುದಂ ಸೆಳೆದಂತೆ ಗಿರಿನಿಕರಮೆಸೆದಿರ್ದುದು ||
(೨೫–೪)

ಕಱಿಕಱಿದ ತಮ್ಮ ಮಳೆವೊನಲಿಂದೆ ಶಶಿಕಾಂತ
ದೊಱತೆವೊನಲುಱಿ ವೆಗ್ಗಳಿಸೆ ನಾಚಿ ಬೆಳ್ಪಾದ
ತೆಱದಿಂದೆ ಮುಗಿಲ್ಗಳಿರೆ ಬೆಳ್ದಿಂಗಳೊಪ್ಪಿದುದು ಬೆಳಸುಗಳ ಪಣ್ದೆನೆಗಳು || (೨೫–೫)

ಇತ್ಯಾದಿಯಾಗಿ ಶರದೃತುವನ್ನು ಸ್ವಭಾವೋಕ್ತಿವರ್ಣನೆಯಿಂದ ಚಿತ್ರಿಸಲಾಗಿದೆ. ಈ ಸ್ವಭಾವೋಕ್ತಿಯಲ್ಲಿಯೂ 'ಪಾಂಡವರ ದುರ್ದಿನ ಇನ್ನು ಕಳೆಯಿತು; ಬೆಳ್ದಿಂಗಳಂತೆ ಸುಖಕರವಾದ ದಿನಗಳು ಬರಲಿವೆ' ಎಂಬ ಸೂಚನೆಯೊಡನೆ ಅವರ ಯಜ್ಞಾಶ್ವವು ಮುಂದುವರಿಯುತ್ತದೆ. ಅರ್ಜುನನು ಮುಂಬರುವ ಮಯೂರಧ್ವಜನ ಆತ್ಯಂತಿಕ ಭಕ್ತಿಯನ್ನು ನೋಡಿ ನಾಚಿ ಬೆಳ್ಪಾಗುವ ಘಟನೆಯ ಸೂಚನೆಯಂತೆ ಇಲ್ಲಿ ಶರತ್ಕಾಲದ ಮುಗಿಲುಗಳಿವೆ. ಒಟ್ಟನಲ್ಲಿ, ಶರದೃತುವಿನ ವರ್ಣನೆ ದುರ್ದಿನ, ಕಷ್ಟಕಾಲ ಮುಗಿಯಿತು, ಇನ್ನು ಬರಲಿರುವ ದಿನಗಳು ಸುಖದ ದಿನಗಳು ಎಂಬುದನ್ನು ಸೂಚಿಸುವಂತಿವೆ.

೫. ಹೇಮಂತ–ಶಿಶಿರ ವರ್ಣನೆ

ಹೇಮಂತ ಶಿಶಿರ ಋತುಗಳು ಸ್ವಭಾವದಲ್ಲಿ ಒಂದೇ ಆಗಿರುವುದರಿಂದ ಕನ್ನಡ ಕವಿಗಳು ಇವುಗಳನ್ನು ಬೇರೆ ಬೇರೆಯಾಗಿ ವರ್ಣಿಸದೆ ಒಟ್ಟಿಗೆಯೆ ವರ್ಣಿಸುವುದುಂಟು. ಕವಿ ಲಕ್ಷ್ಮೀಶನು ಕೂಡ ಇವಕ್ಕೆ ಪ್ರತ್ಯೇಕ ಅಸ್ತಿತ್ವ ಕೊಟ್ಟಿರುವುದಿಲ್ಲ.

ಹೇಮಂತಶೈಶಿರದ ಮಾಗಿ ಮಡಲಿಗೆ ತರಣಿ
ಸೋಮನಂತಿರೆ ಬಿಸಿಲ್ ಬೆಳ್ದಿಂಗಳವೊಲಾಗೆ
ತಾಮರಸರಾಜಿ ನಸಿದುವು ಕುಗ್ಗಿದುವು ಕೋಗಿಲೆಯ ಕಂಠಕಲರವಗಳು || (೨೮–೧)

ಎಂದು ಹೇಮಂತ-ಶಿಶಿರಗಳೆರಡನ್ನೂ ನಾಗಿಯಲ್ಲಿ ಸಮಾವಿಷ್ಟಗೊಳಿಸಿ ವರ್ಣಿಸುತ್ತಾನೆ. ಈ ಋತುವರ್ಣನೆಗಳಲ್ಲಿ ಶೃಂಗಾರಚ್ಛಾಯೆ ಹೆಚ್ಚಾಗಿ ಕಾಣುತ್ತದೆ. ಚಳಿಗಾಲ-ಕಾಯಿ ಹಣ್ಣಾಗುವ ಕಾಲ. ಕಾವ್ಯದ ಕಥಾವಸ್ತುವಾದ ಯಜ್ಞದ ಸಾಫಲ್ಯ ಸಮಾಪಿಸಿದ ಸುಖದ ಕಾಲ ಎಂದೋ ಏನೋ ಸ್ವಲ್ಪ ಶೃಂಗಾರ ಹೆಚ್ಚಾಗಿದೆ. ಜೀವನದಲ್ಲಿಯೂ ಚಳಿಗಾಲ ಪತಿ-ಪತ್ನಿಯರ, ನಲ್ಲನಲ್ಲೆಯರ ಶೃಂಗಾರೋದ್ದೀಪನದ ಕಾಲ ಹೌದು.

ಜ್ವಾಲೆ ಶೀತಳವಾದುದಗ್ನಿಯಂ ಬಿಟ್ಟು ಕಾಂ
ತಾಲಿಂಗನವನೆ ಬಯಸಿದುದು ಕಾಮುಕಜನಂ
ಮೂಲೋಕಮಂ ಮಾಗಿ ನಡುಗಿಸಿತು ಮೇಣುಡುಗಿಸಿತು ಪೆರ್ಚಿದೈಕಿಲಿಂದೆ ||
(೨೮–೨)

ಎಂದು ಕಾಮುಕಜನದ ಮೇಲಾದ ಪರಿಣಾಮದಿಂದಲೇ ಆರಂಭಿಸುತ್ತಾನೆ ಚಳಿಯನ್ನು. ಶಿವನ ಉದಾಹರಣೆಯಿಂದ ಅವರ ಚಳಿಗೆ ತರುಣಿಯರ ಕುಚಾಲಿಂಗನವೇ ಮದ್ದು ಎಂದು ಮುಂದಣ ಪದ್ಯದಲ್ಲಿ ಹೇಳುತ್ತಾನೆ:

ಉತ್ತಮಾಂಗದ ಗಂಗೆಯಂ ಸಾಗರಕೆ ಕಳುಹಿ
ಪೊತ್ತ ಶಶಿಕಳೆಯನಂಬರಕಿಟ್ಟು ತನ್ನ ನಡು
ನೆತ್ತಿಗಣ್ಣೊಳ್ ಕಯ್ಯೊಳಗ್ನಿಯಂ ತಾಳ್ದುದಲ್ಲದೆ ಕಾಂತೆಗರೆಮೆಯ್ಯನು ||
ತೆತ್ತು ಬಿಡದಪ್ಪಿಕೊಂಡಿರ್ಪನೀಶ್ವರನೆನಲ್
ಮತ್ತೆ ಕಾಮಿನಿಯರ ಕುಚಾಲಿಂಗನವನುಳಿದೊ
ಡೆತ್ತಣದು ಹಿಮಕೆ ಭೇಷಜಮೆಂದು ವಿರಹಿಗಳ್ ಕೂರ್ಪರನಱಿಸುತಿರ್ದರು ||
(೨೮–೩)

ಈ ವರ್ಣನೆ ರುದ್ರಭಟ್ಟನ 'ಜಗನ್ನಾಥವಿಜಯ'ದ

ಹಿಮಕರನಂ ತುಱುಂಬಿ ಹಿಮವಾರಿಯ ಗಂಗೆಯನಿಟ್ಟು ಜೂಟದೊಳ್
ಹಿಮಗಿರಿಪುತ್ರಿಯಂ ಮುದದಿನಪ್ಪಿ ಹಿಮಂಗದ ನಾಗಮಂಡನಾ
ಘಮನೊಸೆದಾಂತು ತಾಪಹರನಪ್ಪುದನೀಶನುದರ್ಕದರ್ಶಿ ಮು
ನ್ನಮೆ ಸಮಕಟ್ಟನಿಂದನೆನೆ ಬೇಸಗೆ ಬೇಸರಿಸಿತ್ತು ಲೋಕಮಂ || (೧೭–೭೭)

ಎಂಬ ವೈಶಾಖವರ್ಣನೆಯ ಪ್ರತಿಕೃತಿಯೆಂದು ತೋರಿದರೂ ರುದ್ರಭಟ್ಟನ ಶಿವನ ಬೇಸಗೆ ವೇಷವನ್ನು ಋತುಮಾನಕ್ಕೆ ತಕ್ಕಂತೆ ಲಕ್ಷ್ಮೀಶನು ಬದಲಿಸಿದ್ದಾನೆ.

ಗಂಗೆಯ ಸೂಡನಂದುಱಿದು ಸೂಡಿದ ಚಂದ್ರಕಲಾವತಂಸಮಂ
ಪಿಂಗಿಸಿ ಸುಟ್ಟು ಮನ್ಮಥನೊಳಾದ ವಿಭೂತಿಯನೊಟ್ಟಿಕೊಂಡು ವಾ
ಮಾಂಗದೊಳಿಟ್ಟು ಪಾರ್ವತಿಯನೀಶ್ವರನಗ್ಗಳಗಣ್ಣ ಬೆಂಕಿಯಿಂ
ಭಂಗಿಸುವಂ ಕುಬೇರಗಿರಿಗಹ್ವರದೊಳ್ ಶಿಶಿರಾತಿರೇಕಮಂ ||
—ಸೂ. ಸು., ಪು. ೨೭೯, ಪ. ೨೫೩

ಈ ಶಿಶಿರವರ್ಣನೆಯೂ ತತ್‌ಸ್ವರೂಪದ್ದೇ ಆಗಿದೆ. ಪೂರ್ವಕವಿಗಳ ಕೃತಿಗಳನ್ನು ಲಕ್ಷ್ಮೀಶನು ಸಾಕಷ್ಟು ಓದಿಕೊಂಡಿದ್ದುದರ ಅಪರೋಕ್ಷಪರಿಣಾಮವಿದೆಂದು ಹೇಳಬಹುದು.

......................ಶೈಶಿರದ ಶೀತಕೆ ಪಗಲಿರುಳ್ತಮ್ಮ ಗೂಡುಗಳನು ||
ಪೊಱಮಟ್ಟು ಪಾಱಲೊಲ್ಲದೆ ವಾಯಸಪ್ರತತಿ
ಗಱಿಗಳಂ ಪೊದಿಸಿ ಮುಗ್ಗುಲೊಳಿಟ್ಟು ಕೋಗಿಲೆಯ
ಮಱಿಗಳಂ ಮೆಯ್ಯೊಳ್ಪುದುಗಿಕೊಂಡು ಮಱುಕದಿಂದ್ಬಿದೆ ಪಾಲಿಸುತಿರ್ದುವು||(೨೮-೪)

ಎಂಬೀ ವರ್ಣನೆಯಲ್ಲಿ ಚಂದ್ರಹಾಸನ ಪರಪುಟ್ಟ ಜೀವನದ ಸೂಚನೆ ಅವಿತಿದೆ.

ಕವಿ ಲಕ್ಷ್ಮೀಶನು ದೇವಕವಿ, ಷಡಕ್ಷರಿಕವಿಯಂತೆ ಋತುವರ್ಣನೆಗಳನ್ನೇ ಮಾಡ ಹೊರಟ ಕವಿಯಲ್ಲ. ಇವನ ಕಾವ್ಯಕಥಾಶಿಲ್ಪಕ್ಕೆ ಹಿಂಬದಿಯ ರಮಣೀಯವಾದ ತೆರೆಯಂತಿವೆ ಋತುವರ್ಣನೆಗಳು. ಎಲ್ಲ ಋತುಗಳ ವರ್ಣನೆ ಒಟ್ಟು ಸುಮಾರು ೨೪ ಪದ್ಯಗಳಲ್ಲಿ ಮುಗಿದುಬಿಡುತ್ತದೆ. ಮುಂದೆ ನಡೆಯಲಿದ್ದ ಕಥಾನಕದ ಸೂಚನೆಯಂತೆ, ನಾಟಕದ ಸೂತ್ರಧಾರನ ನುಡಿಯಂತೆ ವರ್ಣನೆಗಳು ಈ ಕಾವ್ಯದಲ್ಲಿ ಬಂದಿವೆ.

## ವನವಿಹಾರವರ್ಣನಂ

ವನಪಾಲರ್ ಪೇೞ್ವ ಭೂಪರ್ ತರುಣಿಯರೊಡನಾನಂದದಿಂದಿಯ್ದೆ ಪೋಪಾ
ಬನದೊಳ್ ಪೂಗೊಯ್ವ ಪೂವಿಂ ತುಡುಗೆಯನೊಲವಿಂ ಮಾೞ್ಪ ತೂಗುಯ್ಯಲಂ ಮಾ
ವಿನೊಳಾಡುತ್ತಿರ್ಪ ಚೆಟ್ಟೇಱುವ ಮರನಡರ್ವಾ ಕಾವಣಕ್ಕೋಪ ತಂತ
ಮ್ಮಿನಿಯರ್ ಸಯ್ತುಂಬುದಂ ವರ್ಣಿಸುಗೆ ಕವಿ ವನಕ್ರೀಡೆಯೊಳ್ ನಾಡೆ ರಮ್ಯಂ ||

ವನವಿಹಾರ ವರ್ಣನೆಯ ವಿಷಯವಿವರಣೆಯನ್ನು ಶಾಸ್ತ್ರಕಾರರು ಈ ಪದ್ಯದಲ್ಲಿ ನಿರ್ದೇಶಿಸಿದ್ದಾರೆ. ವನವಿಹಾರವರ್ಣನೆ ಕನ್ನಡ ಜೈಮಿನಿ ಭಾರತದಲ್ಲಿ ೮ನೆಯ ಸಂಧಿಯಲ್ಲಿ ೧೫ ರಿಂದ ೨೩ ನೆಯ ಪದ್ಯದವರೆಗಿದೆ; ಚಂದ್ರಹಾಸ ಆಖ್ಯಾನದಲ್ಲಿಯೂ ಅಂಶಶಃ ಬರುತ್ತದೆ. ಯಜ್ಞಾಶ್ವವು ನೀಲಧ್ವಜನ ಪಟ್ಟಣಕ್ಕೆ ಬಂದಾಗ ರಾಜಪುತ್ರ ಪ್ರವೀರ, ಅವನ ಸತಿ ಮದನಮಂಜರಿ ಮತ್ತು ಅವಳ ಸಖಿಯರು ವನವಿಹಾರಕ್ಕೆ ಬಂದಿರುತ್ತಾರೆ. ಆ ವರ್ಣನೆ ಇಲ್ಲಿ ಕಥಾನಕಕ್ಕೆ ಪೋಷಕವಾಗಿದೆ. ಅಶ್ವವು ಮದನಮಂಜರಿಯ ದೃಷ್ಟಿಗೆ ಬಲೆಯಾಗಿ ಹೃದಯಕ್ಕೆ ವಜ್ರದ ಸಂಕೋಲೆಯಾಗಿ ಅದನ್ನು ಬಂಧಿಸುವ ಇಚ್ಛೆಯಾಗುತ್ತದೆ. ಪ್ರವೀರನು ಕುದುರೆಯ ಹಣೆಯಮೇಲಿನ ಬರೆಹವನ್ನೋದಿ ಅದನ್ನು ಕಟ್ಟುತ್ತಾನೆ ಎಂಬುದು ಸ್ವಾಭಾವಿಕವಾಗಿ ತೋರುತ್ತದೆ.

ವಸಂತಕಾಲದಲ್ಲಿ ವನವಿಹಾರ ವರ್ಣನೆಯನ್ನು ಜೋಡಿಸುವುದು ಪ್ರಕೃತ್ಯನುಗುಣವಾಗಿ ಕವಿನಿಯಮ, ಸಂಪ್ರದಾಯ. ಆದಿಕವಿ ಪಂಪನು 'ಆದಿಪುರಾಣ'ದಲ್ಲಿ

ಮುಗಿಮುಗಿಸಲ್ಕೆ ಮುಂದಯಿಸಿ ದಿಕ್ತಟಮಂ ಬಱಸಲ್ಕೆ ಪೀರ್ವ ತುಂ
ಬಿಗೆ ತಣಿಪಲ್ಕೆ ನಮ್ಮ ಜಸಮಂ ಬೆಳಗಲ್ಕದೆ ಸಾಲ್ಗುಮೆಂದು ತ
ಳ್ತಗಲದಲಂಪಿನಿಂ ಮಧುಮನೋಭವರಿರ್ವರುಮುಱ್ತವಟ್ಟು ಮ
ಲ್ಲಿಗೆಗೆ ಬಸಂತದೊಳ್ ಬಯಸಿ ಕಟ್ಟಿದರೊಲ್ದಧಿರಾಜಪಟ್ಟಮಂ || (೧೧–೧೦೭)

ಮಲ್ಲಿಗೆಗೆ ವಸಂತಕಾಲದ ಬನಸಿರಿಯ ಅಧಿರಾಜತ್ವವನ್ನು ಕೊಡಿಸಿದ್ದಾನೆ. ಇದೊಂದು ಉತ್ಪ್ರೇಕ್ಷಾಲಂಕೃತ ಪದ್ಯ. ಉಕ್ತಿಯಲ್ಲಿ ಶಕ್ತಿಯಿದೆ. ಮಲ್ಲಿಗೆಯಲ್ಲಿ ಕವಿಗಿದ್ದ ಮೆಚ್ಚುಗೆ ಇಲ್ಲಿ ವ್ಯಕ್ತವಾಗಿದೆ. ಪಂಪನಿಗೆ ಮಾವೂ ಇಷ್ಟೇ ಪ್ರೀತಿಯದು.

ಕವಿ ಲಕ್ಷ್ಮೀಶನೂ ಮೊದಲು ವಸಂತಕಾಲವನ್ನು ವರ್ಣಿಸಿ (ಸಂ. ೮) ಆಮೇಲೆ ವನವಿಹಾರವರ್ಣನೆಯನ್ನು ಕೈಕೊಳ್ಳುತ್ತಾನೆ.

ಮಿಱುಗುವ ತಳಿರ್ದೋರಣಂಗಳಂ ಕಟ್ಟಿಸುತೆ
ಮಱಿಗೋಗಿಲೆಗಳ ಬಾಯ್ಗಳ ಬಲಿದ ಬಂಧನದ
ಸೆಱೆಗಳಂ ಬಿಡಿಸುತ್ತೆ ತುಂಬಿಗಳದಳಕೆ ಕಮ್ಮಲರ್ಗಳಂ ಸೂಱೆವಿಡುತೆ ||
ಕಿಱುವೆರಲೊಳೆತ್ತಲುಂ ಸಾಱಿಸುತೆ ವಿರಹಿಗಳ
ನೆಱಿಗಿಸುತೆ ಜೊನ್ನದ ಜಸಂ ಪೆರ್ಚೆ ಮಧುನೃಪಂ
ಪೊಱಮಟ್ಟು ಮಾಗಿಯಂ ಮುದುಗಿಸಿ ಸಮಸ್ತವನರಾಷ್ಟ್ರಮಂ ಕೈಕೊಂಡನು ||
(೮–೩)

ಇಲ್ಲಿ ರೂಪಕಾಲಂಕಾರವಿದೆ. ಜಯಶಾಲಿಯಾದ ನೃಪನ ಚಿತ್ರವು ವಸಂತಋತುವಿನ ರೂಪದಲ್ಲಿ ಮೂಡಿದೆ. ಈ ವರ್ಣನೆಯಲ್ಲಿ ಸೂಚಕತೆಯೂ ಇದೆ. ಧರ್ಮರಾಜನ ಮಾಗಿಕಾಲ ಮುಗಿಯಿತು. ಅವನ ಯಜ್ಞಾಶ್ವದಯಾತ್ರೆ ಆರಂಭವಾಯಿತು. ಅರ್ಜುನನು ದೇಶದೇಶಗಳನ್ನು ಗೆಲ್ಲುತ್ತ, ಧರ್ಮನಿಗೆ ಸಮಸ್ತ ರಾಷ್ಟ್ರದ ಅಧಿರಾಜತ್ವವನ್ನು ಸಂಪಾದಿಸಿ ಕೊಡುತ್ತಾನೆ ಎಂಬುದನ್ನು ಮಧುನೃಪನ ಪರ್ಯಾಯದಿಂದ ಸೂಚಿಸಿದೆ. ಪಂಪನ ವರ್ಣನೆಯಲ್ಲಿ ಉಚ್ಚಮಟ್ಟದ ಕಲ್ಪನಾಶಕ್ತಿಯಿದ್ದರೆ ಕವಿ ಲಕ್ಷ್ಮೀಶನಲ್ಲಿ ಚಿತ್ರಶಕ್ತಿಯಿದೆ ಎಂದು ಅವರ ಈ ವರ್ಣನಾಪದ್ಯಗಳ ತುಲನೆಯಿಂದ ಹೇಳಬಹುದು.

ಆ ನಗರದರಸು ನೀಲಧ್ವಜಂ ಮೇಣವನ
ಸೂನು ಪ್ರವೀರನೆಂಬವನಾಗಳಲ್ಲಿಗು
ದ್ಯಾನಕೇಳಿಗೆ ಬಂದನೊಲವಿಂದೆ ಮದನಮಂಜರಿಯೆಂಬ ಕಾಂತೆಯೊಡನೆ ||
ಆ ನಳಿನಲೋಚನೆಯ ಕೆಳದಿಯರ್ ಬಿಡಯದಿಂ
ದಾ ನಂದನದೊಳು ಸಂಚರಿಸುತಿರ್ದರ್ ಬಳಿಕ
ಮೀನಕೇತನ ಮಹೀಪಾಲನರಮನೆಯ ಸೊಕ್ಕಾನೆಗಳ ತಂಡದಂತೆ || (೮–೧೫)

ಕಥೆಯಲ್ಲಿಯ ಪಾತ್ರಗಳನ್ನು ಪರಿಚಯ ಮಾಡಿಕೊಡುವ ಈ ಸಹಜ ರೀತಿ ಕವಿ ಲಕ್ಷ್ಮೀಶನ ಒಂದು ಕಾವ್ಯವಿಶೇಷ ಎಂದು ಹೇಳಬಹುದು. ನುಡಿ (ಪದ್ಯ) ಯನ್ನು ಓದುತ್ತ ಹೋದಂತೆಯೆ ಕಥೆ ಕಣ್ಣಮುಂದೆ ಕಟ್ಟಲು ಮೊದಲಾಗುತ್ತದೆ. ಸಖೀಜನ ಮೇಳವನ್ನು 'ಮೀನಕೇತನ ಮಹೀಪಾಲನ ಅರಮನೆಯ ಸೊಕ್ಕಾನೆಗಳ ತಂಡ' ಎಂಬುದು ಅರ್ಥಸಾಮರ್ಥ್ಯದಿಂದ ತುಂಬಿದ ಉಕ್ತಿ. ವಿಹಾರಕಾಲದ ಅವರ ಸ್ವೇಚ್ಛಾ ಪ್ರವೃತ್ತಿಗೆ ಒಪ್ಪುವಂತಹ ಉಪಮೆ. ಮದನಮಂಜರಿ ಮತ್ತು ಆಕೆಯ ಸಖಿಯರ ಸೌಂದರ್ಯ ಯೌವನ ವಿಲಾಸ ಇತ್ಯಾದಿಗಳನ್ನೆಲ್ಲ ತಿಳಿಸುವುದಕ್ಕೆ ಇಂತಹ ಒಂದು ಉಕ್ತಿ ಸಾಕು. ಲಕ್ಷ್ಮೀಶನ ಈ ನಾರಿಯರ ವಿಹಾರ ಇಂತಿದೆ :

ಸಣ್ಣನಡು ಸೈನಿಮಿರೆ ತೋಳ ಮೊದಲೊಳ್ಪೆಸೆಯೆ
ತಿಣ್ಣಮೊಲೆಗಳ್ಪೊದಳೆ ಬೆನ್ನ ಸೋರ್ಮುಡಿಯಲೆಯೆ
ಕಣ್ಣಬೆಳಗಾಗಸವನಾವರಿಸೆ ಮೊಗವೆತ್ತಿ ತುದಿಗಾಲ್ಗಳಿಂದೆ ನಿಂದು ||

ಬಣ್ಣವಳಿಯದ ಪೂಗಳಂ ಕೊಯ್ದು ಚೆಂಡಾಗಿ
ತಣ್ಣೆಲರ್ಗೊಡ್ಡಿ ಮೈಬೆಮರನಾರಿಸಿಕೊಂಡು
ಪೆಣ್ಣಿವಿಂಡಾ ಬನದೊಳಲರ್ಗಳಂ ತನ್ಮ ತನುವಿನ ಕಂಪಿಸಿಂ ಪೊರೆದರು || (೮–೧೮)
ಅನುವಿಸಿ ನನೆದಿಱಿದಪೆನೆಂ
ದಿನಿಯಂ [ಬರೆ ಕಂಡು] ತೋಳನೆತ್ತದೆ ಕುಚಕುಂ
ಭನಖಾಂಕದತ್ತ ಲಜ್ಜಾ
ವನತಾನನೆ ನಿಂದ ಭಾವಮುಂ ಬಯಸದರಾರ್ || —'ಲೀಲಾವತಿ', ೧೩–೯೮

ಈ ಎರಡು ವರ್ಣನೆಗಳಲ್ಲಿ ಹೂಕೊಯ್ಯುವ ದೃಶ್ಯವಿದೆ. ಮೊದಲನೆಯ ಲಕ್ಷ್ಮೀಶನ ಪದ್ಯದಲ್ಲಿ ಸ್ವಭಾವೋಕ್ತಿಯ ಸಹಜತೆಯಿದ್ದರೆ ಎರಡನೆಯದರಲ್ಲಿ ಶೃಂಗಾರಿಕ ಛಾಯಾ ವಿಲಾಸವಿದೆ.

ಮೊಳೆವಲ್ಲ ಮೊಲ್ಲೆಯಂ ಚೆಂದುಟಿಯ ಬಂದುಗೆಯ
ನೆಳನಗೆಯ ಮಲ್ಲಿಗೆಯನೆಸಳ್ಗಣ್ಣ ನೈದಿಲಂ
ನಳಿತೋಳ ಸಿರಿಸಮುಂ ಸೆಳ್ಳುಗುರ ಕೇತಕಿಯನಾನನದ ತಾವರೆಯನು ||
ತೊಳಗುವ ಸುನಾಸಿಕದ ಸಂಪಗೆಯನವಯವದೊ
ಳಳವಡಿಸಿ ಕುಸುಮಗಂಧಿಯರೇತಕಿನ್ನು ಪೂ
ಗಳನಱಸಿ ಕೊಯ್ವರೆಂದವರ ನಡು ಚಿಂತಿಸಿಯೆ ಬಡವಾದುದೆನಲೆಸೆದುದು|| (೮–೨೧)

ಎಂಬಲ್ಲಿ ಸಖಿಯರ ಅಂಗಸೌಂದರ್ಯವನ್ನು ಲಕ್ಷ್ಮೀಶನು ಬಣ್ಣಿಸಿದ್ದಾನೆ. ಸ್ತ್ರೀಯರಿಗೆ ಬಡನಡು ಸೌಂದರ್ಯಲಕ್ಷಣ. ಇಲ್ಲಿ ಆ ನಡು ಬಡವಾಗಿರುವುದಕ್ಕೆ ಕವಿ ಕಲ್ಪಿಸುವ ಕಾರಣೋತ್ಪ್ರೇಕ್ಷೆ ವರ್ಣನೆಯ ಚೆಲುವನ್ನು ಹೆಚ್ಚಿಸಿದೆ. ಅಂಗಾಂಗಗಳಲ್ಲಿ ಪುಷ್ಪಗಳನ್ನು ಧರಿಸಿದ್ದ, ನಾನಾ ಪುಷ್ಪಗಳ ಗುಚ್ಛವೇ ಆಗಿದ್ದ ಸುಂದರಿಯರು ಮತ್ತೆ ನಿಸರ್ಗದ ಕುಸುಮಗಳನ್ನೇಕೆ ಕೊಯ್ಯುತ್ತಿದ್ದಾರೆ ಎಂಬ ಚಿಂತೆಯಿಂದ ನಡು ಬಡವಾಗಿದೆ ಎಂದು ವಾಚ್ಯೋತ್ಪ್ರೇಕ್ಷೆಯಿಂದ ಕವಿ ಹೇಳುತ್ತಾನೆ.

ಬಳೆ ಮುದ್ರೆ ಬಂದಿ ಪುಟ್ಟಿಗೆ
ಬಳಸದ ಬಿಚ್ಚೋಲೆ ಹರಿಹು ಹೆಱೆ ತಿಲಕಂ ಕಂ
ಗಳನಲಸದೆ ಕೇದಗೆವೂ
ಗಳೊಳೆತ್ತಂ ಮಾಡಿಕೊಟ್ಟರಬಲೆಯರೆಲ್ಲಂ ||
—ಸೂ. ಸು., ಪು. ೨೯೧, ಪ. ೫೦

ಎಂಬಲ್ಲಿ ಸ್ವಭಾವೋಕ್ತಿ, ಕೇದಗೆಹೂವಿನ ಅಲಂಕಾರದ ಸಂಭ್ರಮ ಇಲ್ಲಿದೆ. ಆದರೆ ಕವಿ ಲಕ್ಷ್ಮೀಶನ ಸಂಧಿ ೮ ಪದ್ಯ ೨೧ರ ವಿಶೇಷವೆಂದರೆ ಕಾರಣೋತ್ಪ್ರೇಕ್ಷೆಯಿಂದ ಒಂದು ಚಮತ್ಕಾರವನ್ನು ಒಡಮೂಡಿಸಿದ್ದು; ಸಹಜಸುಂದರಿಯರಿಗೆ ಹೂವಿನ ಅಗತ್ಯವಿಲ್ಲ ಎಂದದ್ದು. ಈ ಚಮತ್ಕಾರ ಮೇಲಣ ಕಂದಪದ್ಯದಲ್ಲಿ ಇಲ್ಲ.

ಕವಿ ಲಕ್ಷ್ಮೀಶನು ವನವಿಹಾರ ವರ್ಣನೆಯಲ್ಲಿ ತೂಗುಯ್ಯಲೆಯಾಟ, ಮಾವಿನ ತೋಪಿನಲ್ಲಿ ವಿಹಾರ, ಗಿರ್ಯಾರೋಹಣ ಇತ್ಯಾದಿ ವರ್ಣನೆಗಳನ್ನು ಸೇರಿಸದೆ, 'ಭೂಪರ್ ತರುಣಿಯರೊಡನೆ ಆನಂದದಿಂದೆಯ್ದೆ ಪೋಪ ಆ ಬನದೊಳ್ ಪೂಗೊಯ್ವ,

ಪೂವಿಂ ತುಡುಗೆಯನೊಲವಿಂ ಮಾಳ್ಪ' ಎಂಬಲ್ಲಿ ವನವಿಹಾರವರ್ಣನೆಯನ್ನು ಮುಗಿಸಿದ್ದಾನೆ. ಏಕೆಂದರೆ ಅಷ್ಟರಲ್ಲಿ ಮದನಮಂಜರಿಗೆ ಯಜ್ಞಾಶ್ವವು ದೃಗ್ಗೋಚರವಾಗುತ್ತದೆ. ಕೂಡಲೆ 'ಅದಂ ಕಂಡು ಮುತ್ತಿದರ್ ಮತ್ತಗಜಗಾಮಿನಿಯರು.' ಸರಿ, ವನವಿಹಾರ ಇಲ್ಲಿಗೆ ಮುಗಿಯಿತು. ಅಂದರೆ ಲಕ್ಷ್ಮೀಶನ ವನವಿಹಾರವರ್ಣನೆಯಲ್ಲಿ 'ಅಲರ್ಗೊಯ್ವ ನಿಜಾತಿಶಯಲೀಲೆ'ಯೆ ಮುಖ್ಯ. ಅವರ ಹೂಗೊಯ್ವ ಲೀಲೆಯನ್ನು ಕವಿ ಈ ರೀತಿ ವರ್ಣಿಸುತ್ತಾನೆ :

ಕರವೀರವರ್ಗಮಂ ಬಾಗಿಸಿದರದಟರಂ
ತಿರದೆ ಪುನ್ನಾಗಮಂ ಪತ್ತಿರಂಜಿಸಿದರ್ಜ
ದುರವಮಾವುತಿಗರಂತೆ ಜಾತಿಯಂತರವನಱಿದಾಯ್ದರವನೀಶರಂತೆ ||
ಸುರಗಿಯಂ ತುಡುಕಿದರ್ಭಟರಂತೆ ಬಗೆಗೆಳಸಿ
ಪರಿದರ್ಸುವಿಟರಂತೆ ಪಾದಱಿಯನಱಸಿ ಪಿಡಿ
ದುರವಣಿಸಿದರ್ ನಗರಶೋಧನೆಯ ತಳವಾಱರಂತೆ ಬನದೊಳ್ಪೆಣ್ಗಳು || (೮-೨೨)

## ಜಲಕ್ರೀಡಾವರ್ಣನಂ

ಕನ್ನಡ ಜೈಮಿನಿ ಭಾರತದಲ್ಲಿ ಸಂಧಿ ೩೦ ರಲ್ಲಿ ಪದ್ಯ ೨ರಿಂದ ೧೮ರವರೆಗೆ ಜಲಕ್ರೀಡಾವರ್ಣನವನ್ನು ಕಾಣುತ್ತೇವೆ. ವಿಷಯೆ ಚಂಪಕಮಾಲಿನಿಯರು ವಿನೋದಕ್ಕಾಗಿ ವಸಂತಕಾಲದಲ್ಲಿ ಗೆಳತಿಯರೊಂದಿಗೆ ಉದ್ಯಾನಕ್ಕೆ ಬಂದಿರುತ್ತಾರೆ. ಆಗವರು,

ಕಂಡಕಂಡವನಿಜಾತಂಗಳಂ ಚಿಗುರಿಸಿದರೊಡನೆ ಪೂದೋಱಿಸಿದರು ||
ತಂಡ ತಂಡದೊಳಲ್ಲಿ ಪರಿಪರಿಯಲಗೊರ್ಯ್ದು
ಬೆಂಡಾಗಿ ಬಂದು ನಿರ್ಮಲಸರೋವರವನು
ದ್ದಂಡದೊಳ್ಪೊಕ್ಕರಂಬುಕ್ರೀಡೆಗಗಂಗಜನ ಸೊಕ್ಕಾನೆಗಳ ತೆಱದೊಳು || (೩೦-೫)

ಗ್ರೀಷ್ಮದ ತಾಪವನ್ನು ಪರಿಹರಿಸಿಕೊಳ್ಳಲೆಂದು ಜಲಕ್ರೀಡೆಗಾಗಿ ಬಂದ ಸಖಿಯರು ಇವರಲ್ಲ. ಇವರು 'ಪರಿಪರಿಯಲಗೊರ್ಯ್ದು ಬೆಂಡಾಗಿ' ವಿನೋದಕ್ಕಾಗಿ ಜಲಕ್ರೀಡೆಯಾಡುವರು. ಲಕ್ಷ್ಮೀಶನು ವಿಷಯೆ ಚಂಪಕಮಾಲಿನಿ ಮತ್ತು ಸಖಿಯರ ರೂಪವನ್ನು ಕವಿಸಮಯದಂತೆ 'ಒಚ್ಚೇಱಿಗಣ್ಣ ಕೋಮಲೆಯರೊಪ್ಪಿಡಿನಡುವಿನಚ್ಚಿಗದ ಬಾಲಕಿಯರು' ಎಂದಿತ್ಯಾದಿಯಾಗಿ ಬಣ್ಣಿಸಿದ್ದಾನೆ. ಆ ಎಲ್ಲ ವರ್ಣನೆಯನ್ನು ಒಂದೇ ಒಂದು ಮಾತಿನಲ್ಲಿ ಸಂಗ್ರಹಿಸಿ 'ಪೊಕ್ಕರಂಬುಕ್ರೀಡೆಗಂಗಜನ ಸೊಕ್ಕಾನೆಗಳ ತೆಱದೊಳು' ಎಂಬಲ್ಲಿ ಹೇಳಿದ್ದಾನೆ.

ಲಲನೆಯರ್ತಾವರೆದೆಱಿದ ಮೇಲುದಿನೊಳೆಸವ
ನೆಲೆಮೊಲೆಗಳಲುಗೆ ತಾವರೆದೆಱಿದ ಕೈಗಳಿಂ
ತುಡುಕಿಪರ್ ಚೆಲ್ವ ಕಂಕಣರವಂ ಮಿಗೆ ಚೆಲ್ವ ಕಂಕಣರವಂಗಳೊಡನೆ ||
ವಿಲಸಿತದ ಕಾಸಾರದಂಬುಗಳನೆಸವ ಜೀ
ಕೊರ್ಳವಿಗಳ ಕದನಕಾಸಾರದಂಬುಗಳವೋ
ಲಳವಡಿಸಿ ಸರಸಕೇಳಿಗೆ ಪೊಕ್ಕರಡಿಗಡಿಗೆ ಸರಸಕೇಳಿಗೆಯಾಗಲು || (೩೦-೬)

ಹರಿಯ ಲೋಚನಮಜಂ ಕುಳ್ಳಿರ್ಪ ತಾಣಮಿಂ
ದಿರೆಯ ನಿಳಯಂ ದಿವಾಕರನ ಕೆಳೆ ಮನ್ಮಥನ
ಸರಳಾರಡಿಗಳಿಕ್ಕೆ ಪರಿಮಳದ ಬೀಡೆನಿಸಿಕೊಂಡು ಸಂಪೂರ್ಣತೆಯೊಳು ||
ಪರಿಶೋಭಿಸಿದುವಲ್ಲಿ ನೆಱೆದಿಂಗಳಂ ಪೋಲ್ವ
ತರುಣಿಯರ ಚೆಲ್ವನಗೆಮೊಗದ ಮುಂದೀಗ ತಾ
ವರೆಯಾದುವೆಂಬಂತೆ ಪೆಣ್ಗಳಾಸ್ಯಕೆಸೋಲ್ದುವಾಕೊಳದ ಕಮಲಂಗಳು || (೩೦–೯)

ಜಲಕ್ರೀಡೆಯ ಸೊಗಸನ್ನು, ಸರಸವನ್ನು ಬಣ್ಣಿಸುವ ಈ ಪದ್ಯಗಳಲ್ಲಿ 'ತಾವರೆ' ಎಂಬ ಒಂದು ಪದವನ್ನು ಕವಿಯು ಚೆನ್ನಾಗಿ ದುಡಿಸಿಕೊಂಡಿದ್ದಾನೆ. ತಾವರೆ ಸಾಮಾನ್ಯವಲ್ಲ—ಹರಿಯ ಕಣ್ಣು, ಬ್ರಹ್ಮನ ಪೀಠ, ಸೂರ್ಯನ ಸಖ, ಲಕ್ಷ್ಮಿಯ ಮನೆ. ಇಂತಹ ತಾವರೆಗಳು ಜಲಕ್ರೀಡೆಗೆ ಬಂದ ತರುಣಿಯರ ಮುಖಸೌಂದರ್ಯಕ್ಕೆ ಸೋತು, (೧) ತಾವು+ಅರೆ ಆದುವು.—ಅವರ ಮುಖದ ಮುಂದೆ ತಮ್ಮ ಸೌಂದರ್ಯ ಕೊರತೆಯುಳ್ಳುದಾದುದರಿಂದ ತಾವರೆ ಎನಿಸಿದುವು. ಮೊದಲ ಪದ್ಯದ ಅರ್ಥಶ್ಲೇಷದಲ್ಲಿ (೧) ತಾವು+ಅರೆ+ತೆರದ ಮೇಲುದ, (೨) ತಾವರೆ+ತೆರದ ಕೈ ಎಂದೆರಡು ಅರ್ಥಗಳನ್ನು ಹೊರಡಿಸಿದ್ದಾನೆ. ಶಬ್ದವನ್ನು ಅಥವಾ ಪದವನ್ನು ಕೂಡಿಸುವ ಮತ್ತು ಒಡೆಯುವ ಚಮತ್ಕೃತಿ ಇಲ್ಲಿ ಒಳ್ಳೇ ಸ್ವಾರಸ್ಯವಾಗಿದೆ. ಕನ್ನಡನುಡಿಯ ಬೆಡಗನ್ನು ಇಲ್ಲಿ ಕವಿ ತೋರಿದ್ದಾನೆ. ತಾವರೆ= ಕಮಲ; (ತಾವು)+ಅರೆ ತೆರದ= ಅರ್ಧ ಅರಳಿದ; (ತಾವು)+ಅರೆಯಾದವು = ನ್ಯೂನವಾದವು ; ತಾವರೆ+ತೆರದ (ತಾವರೆದೆರದ)= ಕಮಲದಂತಹ.

ಮೇಲಕುಪ್ಪರಿಸಿ ತಲೆಕೆಳಕಾಗಿ ಬಿದ್ದೊಡಂ
ಲೋಲಲೋಚನಕೆ ಪಾಸಟಿಯಗದಿರೆ ಮೀನ್ಗ
ಳಾಳದೊಳ್ಮುಳುಗಿದವು ಗತಿಗಳವಿಲಾಸಮಂ ಕಂಡು ಕಲಹಂಸಂಗಳು ||
ಕಾಲಿಂದೆ ನಡೆಯಲೊಲ್ಲದೆ ನಭಕೆ ಪಾಱಿದುವು
ಬಾಲೆಯರ ಕಣ್ಣಹೊಳಹಿಗೆ ಗಮನದುಜ್ಜುಗಕೆ
ಸೋಲದವರಾರೆಂಬ ತೆಱನಾಗೆ ಸಲಿಲದೊಳ್ ಕ್ರೀಡಿಸಿದರಂಗನೆಯರು|| (೩೦–೧೦)

ಈ ಪದ್ಯದಲ್ಲಿ ಜಲಕ್ರೀಡಾಸಕ್ತರಾದ ಸಖಿಯರ ಕಣ್ಣಕಾಂತಿ ಮತ್ತು ನಡಿಗೆಯ ಗತಿಯನ್ನು ಕಾರಣೋತ್ಪ್ರೇಕ್ಷೆಯಿಂದ ವರ್ಣಿಸಿದ್ದಾನೆ. ಮೀನಗಳು ನೀರೊಳಗೆ ಮುಳುಗುವುದಕ್ಕೂ ಹಂಸಗಳು ಮುಗಿಲಿಗೆ ಹಾರುವುದಕ್ಕೂ ಸಂಭಾವ್ಯಕಾರಣವನ್ನು ಕವಿ ಕಲ್ಪಿಸಿದ್ದಾನೆ.

ಜಲಕ್ರೀಡಾವರ್ಣನೆಯ ಪದ್ಯಗಳಲ್ಲಿ ಮನೋಹರವಾದುವೆಂದರೆ,

ಕೂಲವನಡರ್ದು ನನೆದಂಗದೊಳ್ಪತ್ತಿದ ದು
ಕೂಲದೊಳಿರಲ್ಕೆ ತಾಪಸರ ದೃಢಮತಿಗೆ ಪ್ರತಿ
ಕೂಲಕೃತಿಗಳೊ ಮೋಹನದ ರಸದೊಳಾದ್ರ್ರತೆಯನಾಂತ ಚೆಲ್ವಿನ ಕಣೆಗಳೊ||
ಸಾಲಮಣಿಮಯದ ಸೋಪಾನದೊಳ್ನಿಲಿಸಿರ್ದ
ಸಾಲ ಭಂಜಿಕೆಗಳೊ ವಿಚಿತ್ರಮೆನೆ ರಂಜಿತರ
ಸಾಲಪಲ್ಲವಪಾಣಿಪಾದತಳದಬಲೆಯರ ರೂಪುಗಳ್ ಕಣ್ಗೆಸೆದುವು || (೩೦–೧೩)

ಎಂಬಲ್ಲಿ ರೂಪಕಮಾಲೆಯಿಂದ, ಜಲಕ್ರೀಡೆ ಮುಗಿದು ಸರೋವರದಿಂದ ಹೊರಮಟ್ಟಿ ನಿಂದ ಅವರ ವಿಲಾಸವನ್ನು ಕವಿ ವರ್ಣಿಸಿದ್ದಾನೆ. ಮುಂದೆ,

ಅದಟಿಂದೆ ಮನ್ಮಥಂ ತ್ರಿಜಗಮಂ ಗೆಲ್ವೆಡೆಯೊ
ಳೊದವಿದ ಪಲವು ಕೈದುಗಳನಲ್ಲಿ ಜಾಡಿಸಿ ತೊ
ಳೆದು ತೀರದೊಳ್ನಿಲಿಸಿ ಮೇಲಣಿಂದೊರೆಗಳಂ ತುಡಿಸಿದನೊ ಪೇಳೆನಲ್ಕೆ ||
ಉದಕಮಂ ಪೊಱಮಟ್ಟು ನಿಂದ ನೀಱೆಯರ ಕಾ
ಯದ ಬಳಿಯೆ ನನೆದು ನಿಡಿದಾಗಿ ಮಿಡಿಪರಿಯಂತಿ
ಳಿದು ಜೋಲ್ವ ಕೇಶಪಾಶಂಗಳಾರಾಜಿಸಿದುವೇನೆಂಬೆನಚ್ಚರಿಯನು || (೩೦–೧೪)

ಎಂಬಲ್ಲಿಯ ಉತ್ಪ್ರೇಕ್ಷೆ ನವ್ಯವಾಗಿದೆ. ಮನ್ಮಥನು ತನ್ನ ಆಯುಧಗಳನ್ನು ತೊಳೆದು ದಂಡೆಯಲ್ಲಿ ನಿಲ್ಲಿಸಿ ಮೇಲಣಿಂದ ಒರೆಯನ್ನು ಸೇರಿಸಿರುವಂತೆ ಹಿಮ್ಮಡಿಯವರೆಗೂ ಆವರಿಸಿದ ತೊಯ್ದ ಕೂದಲಿನ ಸುಂದರಿಯರು ಕಂಡರು ಎಂದಿರುವುದು ಅಪೂರ್ವ ವಾಗಿದೆ. ಮನ್ಮಥನ ಕೈದು ಎಂಬ ಪ್ರತಿಮೆ ಸಖಿಯರ ರೂಪರಾಶಿಯನ್ನು ಬಣ್ಣಿಸಿದರೆ ಒರೆ ಅವರ ಕೇಶಪಾಶವನ್ನು ಬಣ್ಣಿಸುತ್ತಿದೆ. ಇಂತಹ ಯುವತಿಯರು ಜಲಕ್ರೀಡೆ ಯನ್ನು ಮುಗಿಸಿ,

ತಡಿಗಡರ್ದೊಡನೆ ಮಡಿವರ್ಗಮಂ ತೆಗೆದುಟ್ಟು
ನಿಡುಗುರುಳ್ಗೆಸವ ಧೂಪದ ಪೊಗೆಗಳಂ ಕೊಟ್ಟು
ತೊಡವೆಲ್ಲವಂ ತೊಟ್ಟು ಪಣೆಗೆ ತಿಲಕವನಿಟ್ಟು ತಿಗುರಿಂದ ಸೊಬಗುವಟ್ಟು ||
ಅಡಿಗಲತಿಗೆಯನಕ್ಷಿಗಂಜನವನಲರ್ಗಳಂ
ಮುಡಿಗೆ ಸುಣ್ಣದಪಿಂಗೆ ಮಕರಪತ್ರಮನಾಂತು
ಬಿಡದೆ ಮಧುಪಾನಮಂ ಮಾಡಿ ಕಪ್ಪುರವೀಳೆಯಂಗೊಂಡು ಸೊಗಯಿಸಿದರು ||
(೩೦–೧೬)

ಅಲಂಕಾರಮಾಡಿಕೊಳ್ಳುವರು. ಇಲ್ಲಿಗೆ ಜಲಕ್ರೀಡೆಯ ವರ್ಣನೆ ಮುಗಿಯುತ್ತದೆ. ಮುಂದೆ ಸಖಿಯರು ಆನಂದದಿಂದ ಹೂಗಳನ್ನು ಕೊಯ್ದುಕೊಳ್ಳುತ್ತ ಅಲೆದಾಡುತ್ತಾರೆ.

ಜಲಕ್ರೀಡೆಯನ್ನು ಮುಗಿಸಿ ಹೊರಬರುವ ದೃಶ್ಯವನ್ನು 'ನೀರಾಟವಾಡಿ ಪೊಱ ಮಡುವೈರಾವತದಂತೆ' ಎಂದು 'ಅನಂತನಾಥಪುರಾಣ'ದಲ್ಲಿ ಕವಿ ಉಪಮಿಸಿದ್ದಾನೆ (ಸೂ. ಸು., ಪು. ೩೧೬, ಪ. ೮೭). ದಂಡೆಯ ಮೇಲೆ ಬಂದು ನಿಂತ ಸುಂದರಿಯರನ್ನು 'ಜಗನ್ನಾಥವಿಜಯ'ದಲ್ಲಿ,

ಪರೆದಾ ನೀಲಾಳಕಂ, ಜೋಲ್ದಲೆವ ಕಚಭರಂ, ಕೆಂಪುವೆತ್ತಿರ್ದ್ದ ಕಣ್ದಾ
ವರೆ, ಬೆಳ್ಪೇಱಿರ್ದ ಬಿಂಬಾಧರಮಣಿ, ತನುವಂ ನಾಂದು ಪತ್ತಿರ್ದ್ದ ಚೇನಾಂ
ಬರಮಿಂಬಾಗಿರ್ಪನಂ ಬಂದುದು ಮೃದುತರಲೀಲಾಪದನ್ಯಾಸಮುದ್ಯ
ದ್ದರಹಾಸಂ ಪೆಂಡವಾಸಂ ವಿಜಿತರತಿವಿಳಾಸಂ ಸುಖಶ್ರೀನಿವಾಸಂ ||
—ಸೂ. ಸೂ., ಪು. ೩೧೭, ಪ. ೮೯

ಎಂದು ರುದ್ರಭಟ್ಟನು ವರ್ಣಿಸಿದ್ದಾನೆ. ಇಲ್ಲಿ ಸ್ವಭಾವೋಕ್ತಿಯ ಸರಳತೆಯಿದೆ. ಕವಿ ಲಕ್ಷ್ಮೀಶನ ಮೇಲಣ ಪದ್ಯಗಳಲ್ಲಿ (೩೦.೧೩, ೧೪) ಕಲ್ಪನಾರಮ್ಯತೆಯಿದೆ.

ಚೆಮರಂ ವಾರಿವಿಲಾಸಮುಂ ಸಲಿಲಧಾರಾಯಂತ್ರಮುಂ ವಾಃಪ್ರವೇ
ಶಮನಾಲೇಪನಕಂಪಮುಂ ಮುಳಿಸು ಲೀಲಾಯುದ್ಧಮುಂ ಕಾಮಿನೀ
ಶ್ರಮಮುಮಂ ಮೂಡಿ ಮುೞುಂಗುತಿರ್ಪ ಪರಿಯಂ ಮೆಯ್ಯುರ್ಬುಮಂ ಚೆಲ್ವುಮಂ
ಕ್ರಮದಿಂದಂ ಪೊಱಮಟ್ಟು ನಿಂದ ನಿಲವಂ ಪೇೞ್ವರ್ ಜಲಕ್ರೀಡೆಯೊಳ್ ||
—ಸೂ. ಸು., ಪು. ೩೦೧, ಪ. ೧

ಎಂದು ಸೂಕ್ತಿಸುಧಾರ್ಣವಕಾರನು ಹೇಳಿದ್ದಾನೆ. ಆದರೆ, ಕನ್ನಡ ಜೈಮಿನಿ ಭಾರತದಲ್ಲಿ ಈ ಎಲ್ಲ ಅಂಶಗಳ ಸಮಾವೇಶವಿಲ್ಲ. ವಾಃಪ್ರವೇಶ, ಚೆಲ್ವು, ಪೊಱಮಟ್ಟು ನಿಂದ ನಿಲವು ಇಷ್ಟೇ ಅಂಶಗಳು ಇಲ್ಲಿ ಪ್ರಮುಖವಾಗಿ ಬಂದಿವೆ. ಶ್ರಮ, ಕಂಪ, ಮುಳಿಸು, ಲೀಲಾಯುದ್ಧ ಇಲ್ಲೇಕೆ ಎಂದು ಕವಿಯ ವಿಚಾರವಿರಬಹುದು. ವಿನೋದಕ್ಕಾಗಿ ಜಲ ಕ್ರೀಡೆ ನಡೆಸಿರುವ ತರುಣಿಯರೊಂದಿಗೆ ಪ್ರಿಯ–ಪುರುಷಪಾತ್ರವಿಲ್ಲದಿರುವುದರಿಂದ ಮುಳಿಸಿನ ಲೀಲೆಯ ಯುದ್ಧದ ಸಂಭವವಿಲ್ಲ.

ಲಕ್ಷ್ಮೀಶನ ಈ ಜಲಕ್ರೀಡೆಯ ವರ್ಣನಾಪದ್ಯಗಳಲ್ಲಿ 'ಪೊರಮಟ್ಟು ನಿಂತ ನಿಲವಿನ' ವರ್ಣನೆ ಓದುಗರ ಹೃದಯದಲ್ಲಿ, ಹಾಗೆಯೇ ಸರಸಸಾಹಿತ್ಯದಲ್ಲಿ ಮೇಲ್ಮಟ್ಟದ ಸ್ಥಾನ ವನ್ನು ಪಡೆಯಬಲ್ಲವು.

## ಮಧುಪಾನವರ್ಣನಂ

ಮದಿರಾಪಾನ ವಿಕಾರಮುಂ, ನವವಯಸ್ಸಂಪತ್ತಿಯುಂ, ಬಂದು ನೋ
ಡದವೋಲ್ ನೋಡುವ ನಲ್ಲನಿರ್ಪಿರವುಮುತ್ಕೃತ್ಸಾಹಮುಂ ಮಾಡೆ ಚಿ
ತ್ತದೊಳಾಗಳ್ ತನುಮಧ್ಯೆಗೇನೆಸೆದುದೋ ನೃತ್ಯಂ ಚತುರ್ಭಂಗಿ ಭೇ
ದದ ಲೀಲಾಭಿನಯಪ್ರಧಾನವಿಧಿಯಿಂ ಕಾದಂಬರೀಗೋಷ್ಠಿಯೊಳ್ ||
—'ಶೃಂಗಾರರತ್ನಾಕರಂ', ೨–೭೧; ಸೂ. ಸು., ಪು. ೮೨೧, ಪ. ೧

ಮಧುಪಾನದ ಉಲ್ಲೇಖ ಕನ್ನಡ ಜೈಮಿನಿ ಭಾರತದಲ್ಲಿ ಎರಡು ಸಂದರ್ಭಗಳಲ್ಲಿ ಮಾತ್ರ ಬರುತ್ತದೆ : ಸಂಧಿ ೧೫, ಪದ್ಯ ೪೪, ೪೫, ೪೬ ರಲ್ಲಿ ಮತ್ತು ಸಂಧಿ ೩೦, ಪದ್ಯ ೧೭, ೧೮ ರಲ್ಲಿ.

ಸಂಧಿ ೧೫ : ಪ್ರಮೀಳಾರಾಜ್ಯದ ನಾರಿಯರು ಪುರುಷರೊಡನೆ ಒಂದು ತಿಂಗಳು ರತಿವಿಲಾಸದಲ್ಲಿ ತೊಡಗಿರುವ ಸಂದರ್ಭ. ಆಗವರು 'ಸುಖಿಸುವರ್ ಒಂದು ತಿಂಗಳು ಉತ್ತಮ ಸುಗಂಧಾನುಲೇಪನದಿಂದೆ ಮೊಗವಾಸದಮಲತಾಂಬೂಲದಿಂ ಮಧುರಮಧು ಪಾನದಿಂದೆಸವ ಸಂಯೋಗದಿಂದೆ' (೧೫.೪೪). ಇದರ ತರುವಾಯದ ಎರಡು ಪದ್ಯ ಗಳು (೪೫, ೪೬) ಮಧುಪಾನವರ್ಣನೆಯಲ್ಲಿ ಮಹತ್ತ್ವದವು.

ವಿಧವಿಧದೊಳೆಸವ ಕುಸುಮೋತ್ಕರದ ಪರಿಮಳದ
ಮಧುರಾಸವಕೆ ತಮ್ಮ ಮುಖವಾಸದೊಳ್ಗಂಪಿ
ನಧರದಿನಿದಂ ಬೆರಸುವಂತೆ ಮೊಗಮಿಟ್ಟು ಪೊಂಬಟ್ಟಲೊಳ್ಸವಿದು ಮಿಕ್ಕ ||
ಮಧುವಂ ಮಧುರನೇತ್ರದಿಂ ನೋಡಿ ನಸುನಗೆಯ
ಸುಧೆಯನೊಯ್ಯನೆ ಸೂಸಿ ಸರಸದಿಂದಾದರಿಸಿ
ವಿಧುಬಿಂಬವದನೆಯರ್ ಕೊಟ್ಟರೀಂಟುವ ಸೊಗಸಿಗೆಳಸದವರಾರಿಳೆಯೊಳು ||

ಪೊಂಬಟ್ಟಲೊಳ್ ತೀವಿದಾಸವದ ರುಚಿಗಿರ್ವ
ರುಂ ಬಿಡದೆ ಮೊಗಮಿಟ್ಟರಲ್ಕದಳಿಯೊಳೆಸವ ಪಡಿ
ಬಿಂಬದಾನನದ ಭಾವಂಗಳಂ ಕಾಣುತನ್ಯೋನ್ಯಸಂಪ್ರೀತಿಯಿಂದೆ ||
ತುಂಬಿರ್ದ ಚಷಕಮಧು ತೀರಲ್ಕೆ ಬಯಲಪ್ಪು
ದೆಂಬ ಶಂಕೆಯೊಳೊಯ್ಯನೊಯ್ಯನಾಸ್ವಾದಿಸಿ ವಿ
ಳಂಬಮಂ ಮಾಡುವರದೆಂತೊ ಪುರುಷಸ್ತ್ರೀಯರೊಂದಾಗಿ ಸವಿವ ಸೊಗಸು ||

ಈ ಎರಡೂ ವರ್ಣನೆಗಳಲ್ಲಿ ಮಧುಪಾನವು ಶೃಂಗಾರದ ಉದ್ದೀಪನಕ್ಕಾಗಿ ಇದೆ. ಮದಿರಾಪಾನದ ವಿಕಾರವನ್ನು ಕವಿ ವರ್ಣಿಸಲು ಹೋಗಿಲ್ಲ. ಮದಿರಾಪಾನವಿನೋದ ದಲ್ಲಿ ಪ್ರಮೀಳಾರಾಜ್ಯದ ಪುರುಷಸ್ತ್ರೀಯರು ಹೇಗೆ ತಲ್ಲೀನರಾಗಿರುತ್ತಿದ್ದರು ಎಂಬು ದನ್ನು ಇಲ್ಲಿ ಕವಿ ವರ್ಣಿಸಿದ್ದಾನೆ.

ಸಂಧಿ ೩೦ : ಇಲ್ಲಿ ಮಧುಪಾನದ ವರ್ಣನೆಯಿಲ್ಲ; ಉಲ್ಲೇಖ ಮಾತ್ರ ಇದೆ. ಸಂದರ್ಭ, ವಿಷಯೆ ಚಂಪಕಮಾಲಿನಿಯರ ಜಲಕೇಳಿ ಮತ್ತು ವನಕೇಳಿ. ಜಲಕ್ರೀಡೆಯ ತರುವಾಯ ಅವರು ಅಲಂಕೃತರಾಗಿ 'ಮಧುಪಾನಮಂ ಮಾಡಿ, ಕಪ್ಪುರವೀಳೆಯಂ ಗೊಂಡು ಸೊಗಯಿಸುತ್ತಾರೆ.' ಇಲ್ಲಿ ಮಧುಪಾನ ಅವರ ಶ್ರಮಪರಿಹಾರದ ಪೇಯ ವಾಗುತ್ತದೆ. ಆದರೆ ಮುಂದೆ ೧೮ನೆಯ ಪದ್ಯದಲ್ಲಿ ಮನೆಗೆ ಮರಳುತ್ತಿದ್ದ ಅವರು

'ಲಲಿತ ಮಧು ಚಷಕಮಂ ಬೇಡುತ್ತ ಕಾಡುತ್ತ'

ಕಣ್ಗೆಸೆದರು ಎನ್ನುತ್ತಾನೆ ಕವಿ. ಇಲ್ಲಿ, ಮತ್ತೆ ಮತ್ತೆ ಸೇವಿಸಿದ ಮಧು ಮನೋರಂಜ ನೆಯ ವಿಲಾಸಪೇಯವಾಗಿ ತೋರುತ್ತದೆ.

ಗಾಳಿಗೆ ಮಾತನಾಡುವರು ಹಾಱುವ ಹಕ್ಕಿಗೆ ಜೋಹಚೆಂಬರೆ
ಳ್ದೊಳುವ ನಾಯ್ಗೆ ಮುದ್ದುಗೊಡಲೀಕ್ಷಿಸುವರ್ ಮರುಳಿಂಗೆ ಬುದ್ಧಿಯಂ
ಹೇಳುವರುಟ್ಟುದಂ ಕಳೆದು ನೆತ್ತಿಗೆ ಸುತ್ತವರಳ್ತಿಯಿಂದೆ ಕಾ
ಳ್ಕೋಳಿಗಳಾಗಿ ಕೂಗುವರದೇಂ ಮಧುಪಾನದ ಸೊರ್ಕು ಸಾಲದೆ ||

—ಸೂ. ಸು., ಪು. ೩೨೬, ಪ. ೩೦

ಎಂಬಂತಹ ಎಚ್ಚರಗೆಟ್ಟ ಮದೋನ್ಮತ್ತತೆಯ ವರ್ಣನೆ ಕನ್ನಡ ಜೈಮಿನಿ ಭಾರತದಲ್ಲಿಲ್ಲ. ಈ ಕಾವ್ಯದಲ್ಲಿ ಮಧುಪಾನವರ್ಣನೆ ಒಂದು ಉದ್ದೀಪನ ವಿಭಾವವಾಗಿ ಬರುತ್ತದೆ. ಮಧು ಶೃಂಗಾರಕ್ಕೆ ಪೋಷಕದ್ರವ್ಯ.

## ಸಂಭೋಗವರ್ಣನಂ

ಪರಿರಂಭಂ ಚುಂಬನಂ ಸೀತ್ಕೃತಿಗಳರುತಿ ದಂತಕ್ಷತಂ ರೇಖೆ ಪೊಯ್ಲುಗಳ್
ಕರಣಂಗಳ್ ಪಲ್ಲಟಂ ನಚ್ಚಿನ ಮುಖರತೆ ಸುಯ್ ಕಂಪನಂ ಸ್ವೇದಮುಂಗಾಂ
ತರಪೂರಂ ರೋಮಹರ್ಷಂ ನಯನಮುಕುಳನಂ ಮಂಚಚಂಚಚ್ಚಕುಂತೀ
ಸ್ವರಮೊಪ್ಪಲ್ಕೊಪ್ಪುವನ್ನಂ ಮೆಱೆಗೆ ಕವಿತೆಯೊಳ್ ನಾಡೆ ಸಂಭೋಗದೊಳ್ಪಂ||

—ಸೂ. ಸು., ಪು. ೩೨೮, ಪ. ೧

ಕನ್ನಡ ಜೈಮಿನಿ ಭಾರತದಲ್ಲಿ ನಾಲ್ಕು ಸಂಧಿಗಳಲ್ಲಿ (೬, ೧೧, ೧೫, ಮತ್ತು ೨೬) ಸಂಭೋಗವರ್ಣನ ಪದ್ಯಗಳು ಬರುತ್ತವೆ.

ಅಚ್ಚ ಪಳದಿಯ ಕಾಯ ಜೋಡ ಮೇಲೊತ್ತದಡೆ
ನಚ್ಚಿರ್ದ ಕೈಯ ಕರಿದಿನ ಹಿಂಡ ಹಿಡಿಯದಡೆ
ಮೆಚ್ಚಿನಾಟಕೆ ಮೀಱಿ ಬಂದ ಕೆಂಪಿನ ಹಣ್ಣನಂಡಲೆದು ಬಿಡದಿರ್ದಡೆ ||
ಬಚ್ಚ ನಾಲಗೆಯೆ ಬೀಳೆಂದು ಹಾಸಂಗಿಯಂ
ಪಚ್ಚಿಯ ವಿದೂಷಕನುರುಳ್ಚಿದಂ ಬಾಲೆಯರ
ಮುಚ್ಚಿಸುವ ಕಟಕಿವಾತುಗಳ ಜಾಣ್ಮೆಗಳಿಂದೆ ಪಗಡೆಯಾಡುವ ನೆವದೊಳು ||
(೬–೩೧)

ಕತ್ತಲೆಯನಡಸಿ ಪಿಡಿದವರುಂಟೆ ತಾರೆಗಳ
ಮೊತ್ತಮಂ ಪೊಯ್ದುಕೆಡಪಿದರುಂಟೆ ಬೆಟ್ಟಗಳ
ನೊತ್ತಿ ಕರದಿಂದೆ ಕದುಬಿದರುಂಟೆ ಗಗನಮಂ ತಕ್ಕೈಗೊಂದಿಸಿದರುಂಟೆ ||
ವೃತ್ತದಿಂದೆಸವ ಶಶಿಯಂ ಚುಂಬಿಸಿದರುಂಟೆ
ಚಿತ್ತಜಾಹವದ ಭಟರಂಗವಣೆ ಪೊಸತೆಂದು
ಹತ್ತಿರಿಹ ಪಂಜರದ ರಾಜಕೀರಂ ಪೇಳ್ದುದೊರ್ವ ನಾಯಕಿಯ ಕೂಡೆ || (೨೬–೨೧)

೬ ಮತ್ತು ೨೬ನೆಯ ಸಂಧಿಗಳಲ್ಲಿ ವಾರಾಂಗನಾವಾಟದ ವರ್ಣನೆಯಲ್ಲಿ ಇಂತಹ ಚಮತ್ಕಾರದ ಪದ್ಯಗಳು ಕೆಲವು ಬರುತ್ತವೆ. ಮೇಲಣ ಮೊದಲನೆಯ ಪದ್ಯದಲ್ಲಿ ವೇಶ್ಯಾಸ್ತನಗ್ರಹಣ, ಕೇಶಾಕರ್ಷಣ, ಅಧರಚುಂಬನಗಳನ್ನು ಅಪ್ರಸ್ತುತಪ್ರಶಂಸಾಲಂಕಾರದಿಂದ ವರ್ಣಿಸಿದ್ದರೆ, ಎರಡನೆಯ ಪದ್ಯದಲ್ಲಿ ಅವೇ ಕ್ರಿಯೆಗಳನ್ನು, ಮನ್ಮಥ ಸಂಗ್ರಾಮದ ವೀರಭಟರ ವರ್ತನೆಯನ್ನು, ಅವರ ವೀರ ಅದ್ಭುತವೆಂದು ಪಂಜರದ ಅರಗಿಳಿ ಬೇರೊಂದು ಬಗೆಯಿಂದ ಬಣ್ಣಿಸಿ ನಾಯಕಿಗೆ ಹೇಳುತ್ತದೆಂದು ವರ್ಣಿಸಿದೆ. ಎರಡರಲ್ಲಿಯೂ ಸಂಭೋಗವರ್ಣನೆಯ ಅಂಶಗಳನ್ನು ಚಮತ್ಕಾರದಿಂದ ಸೂಚಿಸಲಾಗಿವೆ.

ಕವಿಸುವರ್ ಮೋಹನವನೆಸವ ರತಿಕೇಳಿಯೊಳ್
ಸವಿಸುವರ್ ಚೆಂದುಟಿಯ ತನಿರವನಾಸಱಿ
ತವಿಸುವರ್ ಬಲ್ಮೊಲೆಯೊಳೊತ್ತಿ ಬಿಗಿಯಪ್ಪಿ ದನಿಗೈವ ಪಾರಿವದಂತಿರೆ ||
ರವಿಸುವರ್ ಕಂಠದೊಳ್ ಬಂಧಗಳ ಬಗೆಯನನು
ಭವಿಸುವರ್ ಕೂಟದೊಳ್ ಮನಮುಳುಗಿ ಸೌಖ್ಯದಿಂ
ದ್ರವಿಸುವರ್ ಕಾಮುಕಲೆಯಱಿದಂಗನೆಯರಲ್ಲಿ ದೊರೆಕೊಂಡ ಪುರುಷರೊಡನೆ ||
(೧೫–೪೭)

ಮರಣಮುಹುದೆಂದಱಿದು ನಡುವೆ ಮುರಿದೊಲ್ಲದನ
ಚರಣಕೆರಗುವರೊಡಂಬಡಿಸುವರ್ ದೈನ್ಯದಿಂ
ಕರುಣಭಾವಂಗಳಂ ತೋಱುವರ್ ಮೀಱಿದೊಡೆ ಚೀರುವರ್ ಘಾತಿಸುವರು ||
ಅರುಣಾಧರದ ಚುಂಬನವನಿತ್ತು ಕರಜಪ್ರ
ಹರಣದಿಂ ಕಲೆಗಳಂ ತುಡುಕಿ ಸೊಗಸಂ ಬಲಿದು
ಹರಣಮುಳಿವಲ್ಲಿ ಪರಿಯಂತರಂ ಬಿಡರವನನಲ್ಲಿಯ ವಿಷಾಂಗನೆಯರು || (೧೫–೪೮)

ಹೀಗೆ ಈ ಸಂಧಿಯಲ್ಲಿ ಪದ್ಯ ೪೩ ರಿಂದ ೪೮ರ ವರೆಗೆ ಪ್ರಮೀಳಾರಾಜ್ಯದ ವಿಷ

ಕನ್ಯೆಯರ ಸಂಭೋಗವರ್ಣನವು ಬರುತ್ತದೆ. ಈ ಸಂಭೋಗವೆಂದರೆ ಸಾವು ಹತ್ತಿರವಾದ ಮೋಹಾಂಧನ ಕ್ಷಣಿಕಸುಖವೆಂದು 'ಅಚ್ಚಸಂಪಗೆಯಲರ್ಗೆಱಗಿದಾಱಡಿಯಂತೆ ಮೆಚ್ಚಿ ಮಡಿವಂ ಮಾಸಮಾತ್ರಮಾಗಲ್ಕೆ' ಎಂಬ ಮಾರ್ಮಿಕವಾದ ಮಾತಿನಿಂದ ಕವಿ ತಿಳಿಸುತ್ತಾನೆ. ಇಲ್ಲಿಯ ಸಂಭೋಗ ಸತ್ಯಸುಖದಾಯಿಯಲ್ಲ; ಇದು ನಿಶ್ಚಿತ ಮರಣದ ತಾಣ.

ಸಂಧಿ ೧೧ರಲ್ಲಿ ಸುಧನ್ವ–ಪ್ರಭಾವತಿಯರ ಸಂಭೋಗವರ್ಣನೆ ಬರುತ್ತದೆ. ಇದು ಸಂಭೋಗವರ್ಣನೆಗೆ ತಕ್ಕ ಎಡೆ. ಇಲ್ಲಿಯ ಸಂಭೋಗ ಸುಖದಾಯಕ; ವಿವೇಕನೆಂಬ ಪುತ್ರನ ಜನನಕ್ಕೆ ಆವಾಹನ. ಇಲ್ಲಿ ಪದ್ಯ ೧೧ ರಿಂದ ೨೫ರ ವರೆಗೆ ಸಂಭೋಗದ ಕಾಲೌಚಿತ್ಯದ ಚರ್ಚೆ, ರತಿವಿಲಾಸ ಮತ್ತು ಸಂಭೋಗದ ವರ್ಣನೆ ಅರಳಿ ಬರುತ್ತದೆ.

ಸುಧನ್ವನೂ ಪ್ರಭಾವತಿಯೂ ಇಲ್ಲಿ ಆಲಂಬನವಿಭಾವ. ಪ್ರಭಾವತಿ 'ಮುಡಿಯ ಪೊಸಮಲ್ಲಿಗೆಯ, ಸೂಸುವೆಳನಗೆಯ ........ ಮಿಸುಪ ಕಡೆಗಣ್ಣ, ತಳತಳಿಪ ಕಂಠ ಮಾಲೆಯ, ಚಂದ್ರಕಾಂತದಿಂ ನಿರ್ಮಿಸಿದ ಪುತ್ಥಳಿ (೧೧.೧೦).' ಹೀಗೆಯೆ ಅವರ ರೂಪ ವರ್ಣನೆಯನ್ನು ಇನ್ನೂ ಕೆಲವು ಪದ್ಯಗಳಲ್ಲಿ ಮಾಡುತ್ತಾನೆ. ಇದು ಉದ್ದೀಪನ ವಿಭಾವ. ಇದು, ಯುದ್ಧಕ್ಕೆ ಹೊರಡಬೇಕಾದ ಸಕಾಲ, ಸಂಭೋಗಕ್ಕೆ ಯುಕ್ತವೋ ಅಯುಕ್ತವೋ ಎಂಬ ಕರ್ತವ್ಯದ ಪ್ರಶ್ನೆ ಏಳುತ್ತದೆ. ಯುಕ್ತ ಎನ್ನುತ್ತಾಳೆ ಪತ್ನಿ, ಅಯುಕ್ತ ಎನಿಸುತ್ತದೆ ಪತಿಗೆ. ಇಬ್ಬರಲ್ಲಿಯೂ ಸಂಭಾಷಣೆ ನಡೆದು ಕೊನೆಗೆ ಸುಧನ್ವನು,

'ಗಮನಕನುಕೂಲೆಯಾಗೆನುತೆ ಗಲ್ಲಂ ಬಿಡಿದು ಕಮಲಾಕ್ಷಿಯಂ ಮುದ್ದುಗೈದು'

ಕೇಳುತ್ತಾನೆ. ಪ್ರಭಾವತಿ ಕೂಡಲೆ ಮೇಲ್ವಾಯ್ದು,

ಅಂಗವಿಲ್ಲದನ ಸಮ್ಮರಂಗಮಂ ಪುಗಲಂಜಿ
ತುಂಗವಿಕ್ರಮ ವಿಜಯಸಂಗರಕೆಳಸುವೆನೆಂ
ಬಂಗವಣೆಯೆಂತುಟೆಂದಂಗನೆ ಬಲಾತ್ಕಾರದಿಂ ಗುರುಕುಚದ್ವಯವನು ||
ಸಂಗಡಿಸುವಂತಾರ್ಪಿನಿಂ ಗಾಢತರದೊಳಾ
ಲಿಂಗನಂ ಗೈದು ಕುಡಿಗಂಗಳಿಂದವನ ಮೊಗ
ದಿಂಗಿತವನಾರೈವ ಶೃಂಗಾರಚೇಷ್ಟೆಯ ಬೆಡಂಗನು... || (೧೧–೧೬)

ತೋರಿಸುತ್ತಾಳೆ; 'ಮಂಚದ ಅಂಚೆದುಪ್ಪುಳ ಹಾಸಿಗೆ ಎಳೆದೊಯ್ಯುವಳು ಬಲ್ಪಿನಿಂದೆ ಇನಿಯನನ್ನು.' ಈ ಮೋಹದ ಬಲೆ ಸುಧನ್ವನಿಗೆ ಬಿಡಿಸಿಕೊಳ್ಳಲಾಗದಂತೆ ಬಿಗಿಯುತ್ತದೆ. ಆ ಬಿಗಿತವನ್ನು ಕವಿ

ಪ್ರಿಯನ ತನುಚಂದನಮಹೀಜಮಂ ಸುತ್ತಿದ ಫ
ಣಿಯೊ, ವಲ್ಲಭಾಂಗದಾಲಸ್ತಂಭಮಂ ತೊಡ
ರ್ದ ಯುಗಶರಕರಿಯ ಶುಂಡಿಲೊ, ಕಾಂತಕಾಯಬಲಮಂ ಬಂಧಿಸಿದ ಮದನನ
ಜಯಪಾಶವೊ...

ಎಂಬಂತಿತ್ತು ಎನ್ನುತ್ತಾನೆ. ಆಗ, ಪ್ರಭಾವತಿ ಹೇಳಿದ ಧರ್ಮವಿಚಾರದಂತೆ, ಯುದ್ಧಕ್ಕೆ ಹೊರಡಬೇಕಾದ ಸಮಯವಿಮಾರುವುದೆಂಬ ತನ್ನ ವಾದವನ್ನು ಹಿಂದಿಟ್ಟು, ರತಿಯಲ್ಲಿ ತೊಡಗುತ್ತಾನೆ ಸುಧನ್ವ.

ಒದವಿದ ಸೊಬಗಿನ ಶೃಂಗಾರದಾತುರದ ವೀ
ರದ ಲಲ್ಲೆವಾತಿನ ಕರುಣದ ನಗೆಮೊಗದ ಹಾ
ಸ್ಯದ ನಖಕ್ಷತದ ರೌದ್ರದ ಕಾತರದ ಭಯದ ಬೆಮರಿಉೂಗೆದ ಬೀಭತ್ಸದ ||
ಪುದಿದ ರೋಮಾಂಚದದ್ಭುತದ ಸೊಗಸಿನ ಮೋಹ
ನದ ಶಾಂತದೆಸವ ನವರಸದೇಳ್ಗೆಯಾದ ಸುರ
ತದ ನವರಸವನುಱಿ ಸವಿದು ಸೊಕ್ಕಿ ಮಱಿದರನ್ಯೋನ್ಯಭಾವಮನವರ್ಗಳು ||
(೧೧—೨೩)

ಎಂಬಲ್ಲಿ ಸುರತದಲ್ಲಿಯೂ ನವರಸಗಳ ಸಮಾವೇಶಗೊಂಡಿವೆ ಎಂಬುದನ್ನು ವರ್ಣಿಸಿ, ಮುಂದಿನ ಪದ್ಯದಲ್ಲಿ

ಕೊರುಗುರ್ಗಳ ಗೆರೆಯ ಸೂತ್ರಬಂಧದೊಳೆಸವ
ತೋರಮೊಲೆಗಳ ಕುಂಭಸಂಸ್ಥಾಪನಂಗೆಯ್ದು
ಚಾರುತರಗಳರವದ ಮಂತ್ರದಿಂ ರೋಮಾಂಚನದ ಕುಶಾಗ್ರಂಗಳಿಂದೆ ||
ವೀರರತಿಸಾಮ್ರಾಜ್ಯಪಟ್ಟದೊಳ್ ಬೆಮರ್ವನಿಯ
ವಾರಿಸೇಚನದಿಂದೆ ಕೃತಕೃತ್ಯನಾದಂತೆ
ರಾರಾಜಿಸಿದನವಂ ಮೆಲ್ಪಾಸಿನೊಳ್ ಮೆಱವ ಮಣಿಮಂಚದಾಸನದೊಳು ||
(೧೧—೨೪)

ಎಂಬಲ್ಲಿ ರಾಜ್ಯಪಟ್ಟಾಭಿಷೇಕದ ರೂಪಕದಿಂದ ಸುಧನ್ವನಿಗಾದ ಮನಸ್ತೃಪ್ತಿಯನ್ನು ಬಣ್ಣಿಸಲಾಗಿದೆ. ಇಲ್ಲಿ ಅವನಿಗೆ ತಾನು ಕೃತಕೃತ್ಯನೆಂದೆನಿಸುವಿಕೆ, ಪಿತ್ರಾಜ್ಞೆಗೆ ಭಂಗ ವುಂಟಾದರೂ ಮಾಡಿದ ಸಂಭೋಗವು ಧರ್ಮಾವಿರೋಧ ಎಂಬ ಸಮಾಧಾನದಿಂದ ಉಂಟಾದುದು.

ಪ್ರಕಟಿಸಿದ ಕಟಿ, ತಳ್ಳುವಳ್ಳಿ, ಬೆಂಡಾದ ಮೈ,
ಸುಕಲೆಗಳನಾಂತ ಮೊಲೆ, ಕದಡು ಲೇಪದ ಬೆಮರ್,
ವಿಕಸಿತಸುಖದೊಳದ್ದ ಮನಮೆದ್ದ ರೋಮಾಂಚಮುಸವಳಿದ ಮೈ, ಮಸುಳ್ದ ||
ಮಕರಪತ್ರದ ಕದಪು, ಮಾಣ್ದ ರವದೊಳ್ಗೊರಲ್,
ಮುಕುಳಿತವಿಲೋಚನಂ, ನಱುಸುಯ್, ನಿಮಿರ್ದ ನಾ
ಸಿಕಮಳಿದ ತಿಲಕಂ, ಪರೆದ ಕುರುಳ್, ಸೊಪ್ಪಾದಧರಮೊಪ್ಪಿತಾ ಕಾಂತೆಗೆ ||
(೧೧—೨೫)

ಎಂಬಲ್ಲಿ ಸುರತಾನಂತರದ ತುರುಣಿಯ ಚಿತ್ರವನ್ನು ಕವಿ ಚಿತ್ರಿಸಿದ್ದಾನೆ.

ಎಂದರೆ ಈ ಸಂದರ್ಭದಲ್ಲಿ ಸಂಭೋಗಪೂರ್ವದ, ಸಂಭೋಗಕಾಲದ, ಸಂಭೋಗೋತ್ತರದ ವರ್ಣನೆಯನ್ನು ಮಾಡಿ ಅದರ ಪರಿಪೂರ್ಣಚಿತ್ರವನ್ನು ಕವಿ ಕೊಡುತ್ತಾನೆ. ಸಂಭೋಗವನ್ನು ಅತಿಶೃಂಗಾರದಿಂದ ವರ್ಣಿಸದೆ ಚಮತ್ಕಾರದಿಂದ ವರ್ಣಿಸುವುದು ಕವಿ ಲಕ್ಷ್ಮೀಶನ ರೀತಿ ಎಂದು ತೋರುತ್ತದೆ. ಸಂಭೋಗವರ್ಣನೆ ೧೮ನೆಯ ಆಶ್ವಾಸದಲ್ಲಿಯೂ ಸ್ವಲ್ಪ ಬಂದಿದೆ—ಒಂದು ಪದ್ಯದಲ್ಲಿ. ಅದು ರಾಮಸೀತೆಯರ ಕೂಟದ ಪ್ರಸಂಗ ಇಬ್ಬರೂ ಸಂತಾನಾಪೇಕ್ಷೆಯುಳ್ಳವರಾಗಿ, ಯುಕ್ತವಾದ ತತಿಯಲ್ಲಿ ಕೂಡುತ್ತಾರೆ. ಸಂಭೋಗವೊಂದು ಪವಿತ್ರವಾದ ಕರ್ತವ್ಯ ಅಲ್ಲಿ.

## ವಿಪ್ರಲಂಭವರ್ಣನಂ

ಸಂಭೋಗಶೃಂಗಾರದಲ್ಲಿ ವಿಪ್ರಲಂಭದ ಭಯ ಮತ್ತು ವಿಪ್ರಲಂಭ ಶೃಂಗಾರದಲ್ಲಿ ಸಂಭೋಗದ ಇಚ್ಛೆ ಇರುತ್ತದೆ ಎಂದು ಲಾಕ್ಷಣಿಕರು ಹೇಳುತ್ತಾರೆ. ಕನ್ನಡ ಜೈಮಿನಿ ಭಾರತದಲ್ಲಿ ಸುಧನ್ವ–ಪ್ರಭಾವತಿ, ರಾಮ–ಸೀತೆ, ವಿಟ–ವಾರಾಂಗನೆ ಇವರ ಸಂಬಂಧದ ಸಂಭೋಗ ವರ್ಣನೆಗಳಿವೆ.ರಾಮ–ಸೀತೆಯರ ಸುರತದಲ್ಲಿ ವಿಪ್ರಲಂಭತೆಯ ಚಿತ್ರಣವಿಲ್ಲ; ಸುಧನ್ವ–ಪ್ರಭಾವತಿಯರ ಸುರತದಲ್ಲಿ ವಿಪ್ರಲಂಭದ ಭಯಕ್ಕಿಂತ ಸಂತಾನಾಪೇಕ್ಷೆ ಪ್ರಬಲವಾಗಿದೆ; ವಿಟ–ವಾರಾಂಗನಾ ಸಂಯೋಗದಲ್ಲಿ ವಿಪ್ರಲಂಭ ನಿಶ್ಚಿತವೆ.

ಕನ್ನಡ ಜೈಮಿನಿ ಭಾರತದಲ್ಲಿಯ ವಿಪ್ರಲಂಭಶೃಂಗಾರವು ಸಂಭೋಗಾನಂತರದ ವಿಪ್ರಲಂಭವಲ್ಲ. ಇಲ್ಲಿಯ ವಿಪ್ರಲಂಭವರ್ಣನೆಯಲ್ಲಿ ಸಂಭೋಗೇಚ್ಛೆಯ ಕಾರಣವೂ ಇಲ್ಲ.ಆದುದರಿಂದ ನಾವು ಇಲ್ಲಿ ವಿಪ್ರಲಂಭಕ್ಕೆ ಪ್ರಿಯರ, ಪತಿಪತ್ನಿಯರ ಅಗಲುವಿಕೆ ಎಂಬ ಅರ್ಥದಲ್ಲಿ ವಿಚಾರವಿನಿಮಯ ಮಾಡುವುದು ಅಗತ್ಯ. ಪತಿಪತ್ನಿಯರ ಅಗಲುವಿಕೆಯ ಚಿತ್ರಗಳು ಹಲವು. ಅವುಗಳಲ್ಲಿಯ ವೈವಿಧ್ಯ, ನಾವೀನ್ಯವನ್ನು ಇನ್ನು ನೋಡೋಣ.

ದ್ರೌಪದಿ ಧರ್ಮನಿಂದ ಅಗಲಿರುತ್ತಾಳೆ. ಅದು ಅಸಿಧಾರಾವ್ರತ. ಅಶ್ವಮೇಧ ಯಜ್ಞದ ಧಾರ್ಮಿಕ ಬಂಧನವಾಗಿದೆ.

ನೀಲಧ್ವಜನನ್ನು ಅಗಲಿ ಜ್ವಾಲೆ ಹೋಗುತ್ತಾಳೆ. ಇದು ವಿಲಕ್ಷಣ. ಪತಿಯನ್ನು ಧಿಕ್ಕರಿಸುವ ತಾಮಸವೃತ್ತಿಯ ಮೂಲಕ ಆದದ್ದು. ಮರಣವೆಂಬ ದುರವಸ್ಥೆಯನ್ನು ಅವಳು ಛಲದಿಂದ ತಂದುಕೊಳ್ಳುತ್ತಾಳೆ.

ಉದ್ದಾಲಕನಿಂದ ಚಂಡಿ ಅಗಲುವುದು ಶಾಪದ ದೆಸೆಯಿಂದ. ಕಲ್ಲಾಗಿ ಬೀಳುವ ಚಂಡಿಯಲ್ಲಿ ಸಂಭೋಗೇಚ್ಛೆ ಎಲ್ಲಿ ಬರಬೇಕು? ಯಜ್ಞಾಶ್ವದ ಪಾದಸ್ಪರ್ಶಕ್ಕಾಗಿ ಕಾಯಬೇಕಾಗಿದೆ ಅಷ್ಟೆ.

ಸಂಧಿ ೧೦ರಲ್ಲಿ (ಪ. ೪೯),

> ಸಮರಕೈದುತಿರ್ದುದು ಸಕಲ ಪಟುಭಟರ
> ದಂ ಸತಿಯರೀಕ್ಷಿಸಿದರುಪ್ಪರಿಗೆಗಳ ಮೇಲಿನಿಯರನಾದರಿಸಿ ಕಳುಹಿ

ಎಂಬಲ್ಲಿಂದ ಪದ್ಯ ೫೪ರ ವರೆಗೆ ವೀರಯೋಧರ ಪತ್ನಿಯರು ಪಡೆದ ಸಂಭೋಗಾನಂತರದ ಸುಖಚಿಹ್ನಗಳಿವೆ. ಅವುಗಳ ಮೇಲಿಂದ ಪರಸ್ಥ ಹಾಸ್ಯ ಮಾಡುವ ರೀತಿಯ ವರ್ಣನೆಯಿದೆ. ಅಲ್ಲಿಯೂ ಶ್ರೀಕೃಷ್ಣನನ್ನು ಸೂಚಿಸುವ ಧ್ವನಿಯುಕ್ತ ಉಕ್ತಿಗಳಿವೆ. ಈ ಪತ್ನಿಯರು ಪತಿಗಳನ್ನು ಅಗಲಿದ ತರುವಾಯ ವಿರಹದಿಂದ ಹೇಗೆ ನೊಂದರು ಎಂಬ ಚಿತ್ರಕ್ಕೆ ಇಲ್ಲಿ ಸ್ಥಾನವೇ ಇಲ್ಲ. ಅಗಲುವಾಗ ಅವರು ತೋರಿದ ವೀರ ವೃತ್ತಿಯ ಚಿತ್ರಣ ಈ ರೀತಿಯಿದೆ:

> ವಿಮಳದಧಿ ಲಾಜ ದೂರ್ವಾಕ್ಷತೆಗಳಂ ತಳಿದು
> ಕ್ರಮದೊಳಾರತಿಗಳಂ ತಂದೆತ್ತಿ ಯಕ್ಷಕ
> ರ್ದಮವಿಲೇಪನ ಕುಸುಮ ತಾಂಬೂಲಮಂ ಕೊಟ್ಟು ಪರಸಿ ಸೇಸೆಗಳನಿಟ್ಟು ||

ರಮಣರಂ ತೆಗೆದು ಬಿಗಿಯಪ್ಪಿ ಶುಭವಾಕ್ಯದಿಂ
ಸಮರಭೂಮಿಗೆ ಕಳುಹಿ ಸತಿಯರ್ಸುರರತ್ನ ಕು
ಟ್ಟಿಮದ ಹರ್ಮ್ಯಂಗಳನಡರ್ದರ್ದಿವಿಜಪುರದ ಲಕ್ಷ್ಮೀಶನಂ ನೋಡಲು || (೧೦–೫೪)

ಸಂಧಿ ೧೧ರಲ್ಲಿ ಸುಧನ್ವ ಪ್ರಭಾವತಿಯರ ಅಗಲುವಿಕೆ ಇದೆ. ಪ್ರಭಾವತಿಗೆ 'ಚಕ್ರಿಗಭಿಮುಖನಾದ ಬಳಿಕಲ್ಲಿ ಮುಕ್ತಿಯಲ್ಲದೆ ಬೇಱೆ ಜಯಮುಂಟೆ? ಜನಿಸದು ವಿವೇಕಸಂತತಿ' ಎಂಬ ಮಾತು ಮನದಟ್ಟಾಗಿದೆ. ಆದುದರಿಂದ ಇಲ್ಲಿ ವಿಪ್ರಲಂಭದ ಭಯದ ಪ್ರಶ್ನೆಯೆ ಇಲ್ಲ. ವಿಪ್ರಲಂಭ ಶೃಂಗಾರದ ವರ್ಣನೆಯೂ ಇಲ್ಲ. ಸಂಭೋಗ ಶೃಂಗಾರ, ಪ್ರಭಾವತಿಯ ಮೇಲೆ ಅದರ ಪರಿಣಾಮ ಚಿಹ್ನಗಳಾದೊಡನೆ

'ಮನ್ವಾದಿ ಋಷಿಗಳಭಿಮತಮೆಂದಱಿದಾ ಸು
ಧನ್ವಂ ಋತುಸ್ನಾತೆಯಂ ಮಾಜಿದೊಡಗೂಡಿ
ತನ್ವಿಯಂ ಬೀಳ್ಕೊಂಡು ಸಮರಕ್ಕೆ ಅನುವಾಗುತಿರಲ್' || (೧೧–೨೬)

ಎಂಬ ಮಾತಿಗೆ ಲಕ್ಷ್ಮೀಶನು ಬರುತ್ತಾನೆ. ಆಮೇಲೆ ಹಂಸಧ್ವಜನ ಕೋಪ ಇತ್ಯಾದಿ ಕಥೆ ಮುಂದುವರಿಯುತ್ತದೆ.

ಮುಂದೆ೧೫ನೆಯ ಸಂಧಿಯಲ್ಲಿ ಪಾರಿಪ್ಲವ ಕ್ಷೇತ್ರದಲ್ಲಿ ಪಾರ್ವತಿ ನಡಸಿದ ತಪಸ್ಸಿನ ವರ್ಣನೆಯಿದೆ. ಪಾರ್ವತಿ ಪರಮೇಶ್ವರನಿಂದ ಅಗಲಿದುದು ದೈಹಿಕವಾಗಿ ಮಾತ್ರವೆ; ಮಾನಸಿಕವಾಗಿ ಅಗಲಲಿಲ್ಲ. ಅವಳು ಪರಮೇಶ್ವರನ ಅರ್ಧಾಂಗಿ, ನಾರಿಯರಿಗೆ ಆದರ್ಶ.

ಪ್ರಮೀಳೆ ಅರ್ಜುನನೊಡನೆ ವಿವಾಹವಾಗಬೇಕಾದದ್ದು, ಯಜ್ಞಸಮಾಪ್ತಿಯ ವರೆಗೆ ಅವಳು ಅವನನ್ನು ಅಗಲಿರಬೇಕಾದದ್ದು, ಇಷ್ಟೇ ಅಲ್ಲ, ಶ್ರೀಕೃಷ್ಣನು ಆಕೆಯ ವಿಷಕನ್ಯಾತ್ವವನ್ನು ಹರಣಮಾಡುವವರೆಗೆ ಕೂಟಕ್ಕೆ ಎಡೆಯಿಲ್ಲದಿರುವುದು—ಎಲ್ಲವೂ ದೈವಸಂಕಲ್ಪ.

ಚಿತ್ರಾಂಗದೆ ಅರ್ಜುನನನ್ನು ಕೂಡಿದುದು ಪುತ್ರಪ್ರಾಪ್ತಿಗಾಗಿ. ಯಾತ್ರೆಗಾಗಿ ಬಂದಿದ್ದ ಅರ್ಜುನನು ಅಗಲಿ ಹೋಗುವುದು ನಿಶ್ಚಿತ; ಸಂಭೋಗ ಅಚಿರ. ಅವಳು ಅವನನ್ನು ತನ್ನ ಸ್ವಾಮಿ ಎಂಬ ನಿಷ್ಠೆಯಿಂದ ಕೊನೆಯವರೆಗೆ ನಡೆದುಕೊಳ್ಳುತ್ತ ವಿರಹ ಜೀವನವನ್ನು ಸಾಗಿಸಿರುತ್ತಾಳೆ.

ರಾಮಸೀತೆಯರ ಅಗಲುವಿಕೆಗೆ ಕರುಣರಸದ ಕಳೆಕಟ್ಟಿದೆ. ಇವರು ಸಂಭೋಗ ಮಾಡಿದ್ದೇ ಪುತ್ರಪ್ರಾಪ್ತಿಗಾಗಿ. ಇವರ ಅಗಲಿಕೆ ಸಂಭವಿಸಲು ಸೀತೆಯ ಬಯಕೆ ಮತ್ತು ರಜಕನಾಡಿದ ಅಪವಾದ. ಸೀತೆಗೆ ಅಗಲುವಿಕೆಯ ಭಯವಾಗಲಿ ಸಂಭೋಗೇಚ್ಛೆ ಯಾಗಲಿ ಇತ್ತು ಎಂದು ಕವಿ ಎಲ್ಲಿಯೂ ಹೇಳಿಲ್ಲ. ಈ ಅಗಲಿಕೆ ಆಕೆಗೆ ಅಜ್ಞಾತ, ಅನಪೇಕ್ಷಿತ.

ಉಕ್ಕಿದುವು ಕಂಬನಿಗಳಧರೋಷ್ಠ ಮದಿರಿತಲ
ಗಿಕ್ಕಿ ತಿರುಪಿದವೊಲಾಯ್ತೊಡಲೊಳೆದೆವರಿಯದುಸಿ
ರೊಕ್ಕುದುಱಿ ಕಂಪಿಸಿದುದವಯಂ ಕರಗಿತೆರ್ದೆ ಸೈರಣೆ ಸಮತಿಗೆಟ್ಟುದು ||

ಸಿಕ್ಕಿದುವು ಕಂಠದೊಳ್ ಮಾತುಗಳ್ ಸೆರೆಬಿಗಿದು
ಮಿಕ್ಕಿಮೀಱುವ ಶೋಕದಿಂದೆ ಬೆಂಡಾಗಿ ಕಡು
ಗಕ್ಕಸದ ಕೆಲಸಮಸುಸಿರಲಱಿಯದವನೊಯ್ಯನವನಿಸುತೆಗಿಂತೆಂದನು || (೧೯–೧೪)

ಎಂಬಲ್ಲಿ, ಲಕ್ಷ್ಮಣನು ವಸ್ತುಸ್ಥಿತಿಯನ್ನು ಸೀತೆಗೆ ತಿಳಿಸುವುದಕ್ಕೆ ಮನದಲ್ಲಿ ಎಷ್ಟು ಕಷ್ಟ ಪಟ್ಟನು ಎಂಬುದನ್ನು ಕವಿ ವರ್ಣಿಸಿದ್ದಾನೆ. ನಿರಪರಾಧಿಯಾದ ಸೀತೆ ಈ ಅಪವಾದ ವನ್ನು ಕೇಳಿದಾಗ,

ಬಿಱುಗಾಳಿ ಪೊಡೆಯಲ್ಕೆ ಕಂಪಿಸಿ ಫಲಿತಕದಳಿ
ಮುಱಿದಿಳೆಗೊರಗುವಂತೆ ಲಕ್ಷ್ಮಣನ ಮಾತು ಕಿವಿ
ದೆಱೆಗೆ ಬೀಳದ ಮುನ್ನ ಹಮ್ಮೈಸಿ ಬಿದ್ದಳಂಗನೆ ಧರೆಗೆ ನಡನಡುಗುತೆ ||
ಮಱೆದಳಂಗೋಪಾಂಗಮಂ ಬಳಿಕ ಸೌಮಿತ್ರಿ
ಮಱುಗಿ ತಣ್ಣೀರ್ದಳಿದು ಪತ್ರದೊಳ್ ಕೊಡೆವಿಡಿದು
ಸೆಱಗಿಂದೆ ಬೀಸಿ ರಾಮನಸೇವೆ ಸಂದುದೇ ತನಗೆಂದು ರೋದಿಸಿದನು || (೧೯–೧೬)

ಹೀಗೆ ಪ್ರಜ್ಞೆತಪ್ಪಿ ಬಿದ್ದುದು ಏನಾಶ್ಚರ್ಯ. ಲಕ್ಷ್ಮಣನು ಸೀತೆಯನ್ನು ಗಾಳಿಹಾಕಿ ಪ್ರಜ್ಞೆಗೆ ತರಲು ಪ್ರಯತ್ನಿಸಬೇಕಾಗುತ್ತದೆ. ಈ ಕಾರ್ಯವನ್ನು–ರಾಮಸೇವೆಯನ್ನು— ತಾನು ಮಾಡಬೇಕಾಯ್ತಲ್ಲ ಎಂದು ನೊಂದುಕೊಳ್ಳುತ್ತಾನೆ. ಅವನು ಮನಸ್ಸಿಲ್ಲದ ಮನಸ್ಸಿನಿಂದ ಅವಳನ್ನು ಅಡವಿಯಲ್ಲಿ ಬಿಟ್ಟು ಹೊರಡಬೇಕಾಗಿದೆ. ಆಗವನು ತೋಡಿ ಕೊಂಡ ಅಂತಃಕರಣವು ಈ ಕೆಳಗಣ ಪದ್ಯದಲ್ಲಿ ರೂಪಿತವಾಗಿದೆ:

ಎಲೆ ವನಸ್ಥಳಗಳಿರ ವೃಕ್ಷಂಗಳಿರ ಮೃಗಂ
ಗಳಿರ ಕ್ರಿಮಿಕೀಟಂಗಳಿರ ಪಕ್ಷಿಗಳಿರ ಲತೆ
ಗಳಿರ ತೃಣಗುಲ್ಮಂಗಳಿರ ಪಂಚಭೂತಂಗಳಿರ ದೆಸೆಗಳಿರ ಕಾವುದು ||
ಎಲೆ ಧರ್ಮದೇವತೆ ಜಗಜ್ಜನನಿ ಜಾಹ್ನವಿಯೆ
ಸಲಹಿಕೊಳ್ವುದು ತನ್ನ ಮಾತೆಯಂ ಜಾನಕಿಯ
ನೆಲೆ ತಾಯೆ ಭೂದೇವಿ ನಿನ್ನ ಮಗಳಿಹಳೆಂದು ಸೌಮಿತ್ರಿ ಕೈಮುಗಿದನು ||
(೧೯–೨೮)

ಲಕ್ಷ್ಮಣನು ಹೋದ ಬಳಿಕ ಸೀತೆಯ ಸ್ಥಿತಿ ಇನ್ನೂ ಶೋಚನೀಯ

ಬಾಯೊಱೆ ಕಂಗೆಟ್ಟು ಲಕ್ಷ್ಮಣನ ತಲೆ ಮಸುಳ
ಲಾಯೆಂದೊರಲ್ದು ಭಯ ಶೋಕದಿಂದಸವಳಿದು
ಕಾಯಮಂ ಮಱೆದವನಿಗೊರಗಿದಳ್ ಬೇರ್ಗೊಯ್ದು ಬಿಸುಟೆಳೆಯ ಬಳ್ಳಿಯಂತೆ ||
(೧೯–೩೧)

ಅವಳಾದಳು. ಈ ವಿರಹಾವಸ್ಥೆಯ ಕರುಣಚಿತ್ರದಲ್ಲಿ, ಲಕ್ಷ್ಮಣನ ಒಳಮರುಗಿನಲ್ಲಿ 'ರಾಮನ ಹೃದಯ ವಜ್ರಾದಪಿ ಕಠೋರವಪ್ಪಾ' ಎಂದೆನಿಸುತ್ತದೆ. ಎಂದರೆ ಇಲ್ಲಿಯ ವಿಪ್ರಲಂಭ ಶೃಂಗಾರವು ಕರುಣರಸದ ಮಡುವು. ವಾಲ್ಮೀಕಿ ಋಷಿಯ ದರ್ಶನವಾಗುವ ವರೆಗೆ ಸೀತೆ ಪರಿಪರಿಯಾಗಿ ದುಃಖಿಸುತ್ತಾಳೆ. ಅವಳೊಂದಿಗೆ ನಿಸರ್ಗವೇ ದುಃಖಪಡು ತ್ತದೆ. ಪರಿಸರ ವಾತಾವರಣ ಎಲ್ಲಾ ದುಃಖಮಯ. ಈ ಮನೋವೇದಕ ವಿಪ್ರಲಂಭ

ದೃಶ್ಯವು ೧೯ನೆಯ ಸಂಧಿಯ ೧೯ ನೆಯ ಪದ್ಯದಿಂದ ೩೭ನೆಯ ಪದ್ಯದವರೆಗೆ ಹಬ್ಬಿಕೊಂಡಿದೆ.

ಕೊನೆಯದಾಗಿ ಕುಮುದ್ವತಿ ಮಯೂರಧ್ವಜರ ಅಗಲುವಿಕೆಯ ರೌದ್ರದರ್ಶನ. ಕುಮುದ್ವತಿ ಮಗನೊಡನೆ ಕೂಡಿಕೊಂಡು ಗರಗಸದಿಂದ ಗಂಡನ ತಲೆಯನ್ನು ಕೊಯ್ಯುವ, ದೇಹವನ್ನು ಇಬ್ಭಾಗ ಮಾಡಲುಜ್ಜುಗಿಸುವ ದೃಶ್ಯ. ಪತಿಯ ಧರ್ಮವನ್ನು ಪಾಲಿಸುವುದಕ್ಕಾಗಿ ಅತಿ ಭಕ್ತಿಯಿಂದ ಮತ್ತೊಂದು ಮಾತಿಲ್ಲದೆ ಅವಳು ಈ ಕೆಲಸವನ್ನು ಕೈಕೊಳ್ಳುತ್ತಾಳೆ.

ವಿಷಯಾ-ಚಂದ್ರಹಾಸರ ಅಗಲುವಿಕೆ ಆಯೋಗಶೃಂಗಾರ ಜಾತಿಯದು. ಅಲ್ಲಿ ವಿಷಯೆಗೆ ಸಂಭೋಗ ಇಚ್ಛೆಯಿದೆ. ಚಂದ್ರಹಾಸ ನಿರ್ಲಿಪ್ತ. ಈ ಯಾವುದರ ಅರಿವೂ ಇಲ್ಲ ಅವನಿಗೆ. ಶ್ರೀಕೃಷ್ಣನ ಪರಮ ಭಕ್ತಿಯಲ್ಲಿ ನಿಶ್ಚಿಂತಪುರುಷನವನು.

ಒಟ್ಟಾರೆ, ಕನ್ನಡ ಜೈಮಿನಿ ಭಾರತದಲ್ಲಿ ವಿಪ್ರಲಂಭಕ್ಕೆ ಶೃಂಗಾರಕ್ಕಿಂತ ದೈವೀ ಛಾಯೆ ಹೆಚ್ಚಾಗಿದೆ. ಇದು ಶೃಂಗಾರ ಕಾವ್ಯವಲ್ಲ, ಭಕ್ತಿಕಾವ್ಯ ಎಂಬುದೇ ಇದಕ್ಕೆ ಕಾರಣ.

## ಮಂತ್ರವರ್ಣನಂ

ಕರಣೀಯೋಪಾಯಮಂ ಚಿಂತಿಸುವುದು ಪುರುಷಂ ದ್ರವ್ಯಸಂಪತ್ತಿಯೊಳ್ ತ
ತ್ಪರನಾಗುತ್ತಿರ್ಪ ಬಿರ್ದಿರ್ದುದನೆ ನೆಗಳ್ವುದೀ ಕಾಲದೊಳ್ ತಾನಿದಂ ಚಾ
ತುರದಿಂದಂ ಕೊಳ್ವುದೆಂತುಂ ನಯಮಿದನಯಮೆಂಬುಕ್ತಿಯಂ ಕಲ್ವುದುರ್ವೀ
ಶ್ವರನಾದಂ ಕೆಟ್ಟುದಂ ಸಂವರಿಪುದಿದುವೆ ಪಂಚಾಂಗಮಂತ್ರಪ್ರಯೋಗಂ ॥

—ಸೂ. ಸು., ಪು. ೩೫೭, ಪ. ೧೬

ಎಂದು ಸೂಕ್ತಿಸುಧಾರ್ಣವದಲ್ಲಿ ರಾಜನೀತಿಯ ಐದು ಮಂತ್ರಗಳನ್ನು ಹೇಳಿದೆ. ಅಶ್ವಮೇಧಯಜ್ಞವನ್ನು ಮಾಡಲೋ ಬಿಡಲೋ? ಕುದುರೆಯನ್ನು ಕಟ್ಟಬೇಕೋ ಬೇಡವೋ? ಎಂಬುದರ ಬಗ್ಗೆ 'ಕರಣೀಯೋಪಾಯವನ್ನು ಚಿಂತಿಸುವ' ವಿವಿಧ ಪ್ರಕಾರಗಳನ್ನು ಕನ್ನಡ ಜೈಮಿನಿ ಭಾರತದಲ್ಲಿ ಕಾಣುತ್ತೇವೆ. ಇದರೊಂದಿಗೆ ಆ ಆ ರಾಜನ ಗುಣಕೀರ್ತನ, ಪ್ರಜೆಗಳ ನೀತಿ ನಡೆವಳಿಕೆ, ಸತಿ ಸುತ ಅನುಜ ಮಂತ್ರಿ ಪುರೋಹಿತಾದಿಗಳ ಸಂಬಂಧ ವಿಶೇಷಗಳ ಬಗ್ಗೆ ವಿವರ ಅಲ್ಲಲ್ಲಿ ಬರುತ್ತದೆ.

ಮೊಟ್ಟಮೊದಲು ಅಶ್ವಮೇಧವನ್ನು ಮಾಡಬೇಕೆ ಬಿಡಬೇಕೆ ಎಂಬ ಪ್ರಶ್ನೆ ಧರ್ಮನಿಗೆ ಉಂಟಾಗುತ್ತದೆ. ವ್ಯಾಸರ ಮಾರ್ಗದರ್ಶನ, ಭೀಮ, ವೃಷಕೇತು ಮೇಘನಾದರ ಬೆಂಬಲ, ಶ್ರೀಕೃಷ್ಣನ ಆಶ್ವಾಸನದೊಂದಿಗೆ ಯಜ್ಞವನ್ನು ಹೂಡುವುದೆಂದು ನಿಶ್ಚಯವಾಗುತ್ತದೆ.

ಸಂಧಿ ೧೦ ಪದ್ಯ ೩೭ ರಿಂದ ೪೬ರ ವರೆಗೆ ಹಂಸಧ್ವಜ ಮತ್ತು ಅವನ ರಾಜ್ಯದ ವರ್ಣನೆ ಬಂದಿದೆ.

ಆ ನಗರದರಸು ಹಂಸಧ್ವಜಂ ಕೇಳ್ದನೀ
ಸೇನೆ ಸಹಿತರ್ಜುನಂ ವರಮುಖತುರಂಗರ
ಕ್ಷಾನಿಮಿತ್ತಂ ಬಂದು ಸೀಮೆಯಂ ಪೊಕ್ಕುದಂ ದೂತಮುಖದಿಂದೆ ಬಳಿಕ ॥
ಧ್ಯಾನಿಸಿದನೊಂದೆರಡು ಗಳಿಗೆ ತನ್ನಾಪ್ತಪ್ರ
ಧಾನರೆಲ್ಲರನಾಗ ಕರೆಸಿಕೊಂಡವರೊಳ್ ನಿ
ದಾನಿಸಿ ನುಡಿದನಂದು ಶ್ರದ್ಧಾಳು ಸುಮತಿ ಪ್ರಮತಿಯೆಂಬ ಮಂತ್ರಿಗಳ್ಗೆ ॥
(೧೦–೩೭)

ಈ ನುಡಿಯ ಉತ್ತರಾರ್ಧವು ಮಂತ್ರವರ್ಣನ ಮಂತ್ರಿಗಳೊಡನೆ ಮಾತನಾಡಿ ಅರಸನು,

ಈ ಧನಂಜಯನ ತುರಗವನೀಗ ಕಟ್ಟಿದೊಡೆ
ಮಾಧವಂ ತಾನೆ ಮೈದೋಱುವನೆಮಗೆ ಕೃಷ್ಣ
ನೀ ಧರೆಯೊಳಿರುತಿರ್ದುಮಿನ್ನೆಗಂ ಕಂಡುದಿಲ್ಲಚ್ಯುತನ ಮೂರುತಿಯನು ॥
ಬಾಧಿಸುವುದೀದೇಹಮುಂ ನರೆತೆರೆಗಳಿನ್ನು
ಸಾಧಿಸುವುದೇನು ಸುರರಿಪು ಬಂದು ತನ್ನೊಳ್ಕಿ
ರೋಧಿಸಿದೊಡಿನಿತಱಿಂದಳಿದೊಡೇನುಳಿದೊಡೇನು...॥ (೧೦–೩೮)

ಎಂದು ನಿರ್ಣಯಕ್ಕೆ ಬರುತ್ತಾನೆ. ಇವನಿಗೆ ಸುಧನ್ವ–ಸುರಥರಂತಹ ಪರಾಕ್ರಮಿಗಳಾದ ಮಕ್ಕಳು, ಧನಬಲ, ಚಂದ್ರಕೇತು ವರಚಂದ್ರದೇವ ಇತ್ಯಾದಿ ಅನುಜರು, ಶ್ರದ್ಧಾಳು, ಸುಮತಿ ಪ್ರಮತಿ ಎಂಬ ಮಂತ್ರಿಗಳು, ಶಂಖಲಿಖಿತರು ಇದ್ದರು. ಅಲ್ಲದೆ ಇವನ ಪ್ರಜೆಗಳು 'ಏಕಪತ್ನೀವ್ರತರು, ಅನಂತಪೂಜಾರತರು, ನೀತಿ–ಶಾಸ್ತ್ರಸ್ಮೃತಿ–ವಿಚಾರರತರು.'

ಹೀಗೆಯೆ ಪ್ರಮೀಳಾರಾಜ್ಯದಲ್ಲಿ, ಭೀಷಣರಾಜ್ಯದಲ್ಲಿ, ಬಭ್ರುವಾಹನ ರಾಜ್ಯದಲ್ಲಿ, ಮಯೂರಧ್ವಜ ವೀರವರ್ಮರ ರಾಜ್ಯಗಳಲ್ಲಿ ಯಜ್ಞಾಶ್ವವನ್ನು ಕಟ್ಟುವ ನಿರ್ಣಯದ ವಿಚಾರ ಬರುತ್ತದೆ. ಅವರವರ ಉದ್ದೇಶ, ಅವರವರ ರೀತಿಗಳು ಭಿನ್ನವಾಗಿವೆ.

ಶಶಿಕುಲೋದ್ಭವ ಯುಧಿಷ್ಠಿರ ನೃಪನ ಕುದುರೆ ಗಡ
ವಸುಧೆಯೊಳಿದಂ ಬಲ್ಲಿದರ್ ಕಟ್ಟಬೇಕು ಗಡ
ದೆಸೆಯೊಳಿದಕರ್ಜುನನ ಕಾಪಿನಾರ್ತಿಕೆ ಗಡ ಪಿಡಿದೊಡೆ ಬಿಡಿಸುವರ್ಗಡ ॥
ಪೊಸತಲಾ ನಮಗೆಂದು ನಾರಿಯರ್ ಬಿನ್ನೈಸೆ
ನಸುನಗುತೆ ಲಾಯದೊಳ್ ಕಟ್ಟಿಸಿದಳಾಹಯವ
ನೆಸೆವ ಭದ್ರಾಸನವನಿಳಿದು ಸಂಗ್ರಾಮಕ್ಕೆ ಪೊಱಮಟ್ಟಳಾ ಪ್ರಮೀಳೆ ॥ (೧೬–೨)

ಎಂಬಲ್ಲಿ ವಿಚಾರವಿನಿಮಯವಿಲ್ಲ. ಒಮ್ಮೆಲೆ ಯಜ್ಞಾಶ್ವವನ್ನು ಕಟ್ಟಿಸಿ ಬಿಡುತ್ತಾಳೆ ಪ್ರಮೀಳೆ.

ತನ್ನ ತಂದೆಯಾದ ಬಕನನ್ನು ಭೀಮನು ಕೊಂದ ಸೇಡನ್ನು ತೀರಿಸಿಕೊಳ್ಳುವ ವೈರದಿಂದ ಭೀಷಣನು ಕುದುರೆಯನ್ನು ಕಟ್ಟುತ್ತಾನೆ. ಅವನಿಗೆ ಆ ರೀತಿಯ ಮಂತ್ರಾಲೋಚನೆ ಪುರೋಹಿತನಿಂದ ದೊರೆಯುತ್ತದೆ.

ಯಜ್ಞಾಶ್ವವು ಮಣಿಪುರವನ್ನು ಪ್ರವೇಶಿಸಿದಾಗ ಹಂಸಧ್ವಜನು ಬಭ್ರುವಾಹನನ ಶೌರ್ಯ, ರಾಜ್ಯವಿಸ್ತಾರ, ವೈಭವಗಳನ್ನು ಅರ್ಜುನನಿಗೆ ವಿವರಿಸುತ್ತಾನೆ. ಬಭ್ರುವಾಹನನ ಓಲಗದ ವರ್ಣನೆಯನ್ನು ವಿಸ್ತಾರವಾಗಿ ಲಕ್ಷ್ಮೀಶನು ಮಾಡಿದ್ದಾನೆ.

ಮಂತ್ರಾಲೋಚನೆಯ ಸ್ಥಾನವಾದ ಓಲಗದ ವರ್ಣನೆಯು ಮಂತ್ರವರ್ಣನೆಯ ಒಂದು ಪ್ರಮುಖವಾದ ಅಂಗವಾಗಿದೆ.

ಬಳಿಕ ಮಹಾಸ್ಥಾನದೊಳ್ ಬಭ್ರುವಾಹನಂ
ನಲವಿಂದೆ ಕುಳ್ಳಿರ್ದು ನಗುತೆ ಪರಮಂಡಲ
ಸ್ಥಳದಿಂದೆ ಬಂದ ರಾಯರ ಯಜ್ಞತುರಗನಂ ಕಟ್ಟಿಕೊಂಡೆವು ಮನೆಯೊಳು ||
ಕೊಳುಗುಳಕೆ ಮಿಡುಕುಳ್ಳವರ್ ನಾವು ನಾಳೆ ಹಿಂ
ದುಳಿಯಬಾರದು ಕದನಕನುವಾಗಿರಲಿ ಪಾಯ
ದಳವೆಂದು ನುಡಿದಂ ಸುಬುದ್ಧಿ ಮೊದಲಾಗಿಹ ಶಿರಃಪ್ರಧಾನಿಗಳ ಕೂಡೆ ||

(೧೭–೩೦)

ಇದು ಮಣಿಪುರದಲ್ಲಿ ನಡೆದ ಮಂತ್ರವರ್ಣನದ ಮಾದರಿ. ಮಂತ್ರಿಗಳಿಂದ, ತಾಯಿಯಿಂದ ಬಭ್ರುವಾಹನನು ಮಾರ್ಗದರ್ಶನ ಪಡೆಯುತ್ತಾನೆ.

ಏಳಧ್ವರಂ ಪಿಂತೆ ಕೃಷ್ಣವರ್ಜಿತವಾಯ್ತು
ಪೇಳಲೇನಿದು ಕೃಷ್ಣಸಂಯುಕ್ತವಾದಪುದು
ಕಾಳೆಗಂ ಕೃಷ್ಣನೊಳ್ ದೊರಕೊಳ್ವುದೀಗಳೆಂದುಬ್ಬೇಱಿದಂ ಮನದೊಳು ||

ಈ ಬಗೆಯಿಂದ ತಾಮ್ರಧ್ವಜನು ಅಶ್ವಬಂಧನವನ್ನು ನಿರ್ಣಯಿಸಿದರೆ ವೀರವರ್ಮನು

ಈ ಪಾಂಡವನ ಕುದುರೆಗಳ್
ಕಾವ ಪಡೆಸಹಿತ ನಿಜರಾಷ್ಟ್ರಕೈತಂದುವೆಂ
ಬೀವಾರ್ತೆಯಂ ಕೇಳ್ದು ನಗುತೆ ಖತಿಗೊಂಡು ಕೃಷ್ಣಾರ್ಜುನರ ಸಾಹಸವನು
ನಾವಱಿದುಕೊಂಬೆವಶ್ವಂಗಳಂ ಕಟ್ಟುವುದು (೨೭–೪)

ಎಂದು ತೀರ್ಮಾನಿಸುತ್ತಾನೆ. ಚಂದ್ರಹಾಸನ ಪಟ್ಟಣದಲ್ಲಿ ಯುದ್ಧದ ಮಾತಿಲ್ಲ. ಅವನ ಮಕ್ಕಳಾದ ಮಕರಧ್ವಜ ಪದ್ಮಾಕ್ಷರು ಕಟ್ಟಿದ ಯಜ್ಞಾಶ್ವಗಳನ್ನು ಬಿಡಿಸಿ, ಅವರನ್ನು ಅದರ ರಕ್ಷಣೆಗೆ ಚಂದ್ರಹಾಸನು ಕಳಿಸುತ್ತಾನೆ. ಅತಿ ವೃದ್ಧನಾದ ಪರಿಪಕ್ವಮತಿ ಚಂದ್ರಹಾಸನೇ ಪ್ರಬುದ್ಧರಾದ ಮಕ್ಕಳಿಗೆ ದಿಗ್ದರ್ಶಕನಾಗಿದ್ದಾನೆ.

ಇದು ಲಕ್ಷ್ಮೀಶನ ಕಾವ್ಯದಲ್ಲಿಯ ಮಂತ್ರವರ್ಣನದ ರೀತಿ.

## ದೂತಾಂಗವರ್ಣನಂ

ಚದುರಂ ಭಾವಕನಿಂಗಿತಜ್ಞನಱಿವುಳ್ಳಂ ದೇಶಭಾಷಾನ್ವಿತಂ
ಪದವಾಕ್ಯಾರ್ಥವಿವಕ್ಷಿತಂ ಬಹುಕಳಾಸಂಪನ್ನನಾಸ್ಥಾನ ಸಂ
ಮ್ಮದವಾ[ಗ್ವೀ]ತ್ತನೆನಿಪ್ಪನಂ ನೃಪವರಂ ಕೈಕೊಂಡು ಸತ್ಪಾತ್ರನಂ
ಪದಪಿಂ ನೆಟ್ಟನೆ ಸಂಧಿವಿಗ್ರಹಿಯೆನಲ್ ಭಾವಿಪ್ಪುದೆಲ್ಲಾಗಳುಂ

—ಸೂ. ಸು., ಪು. ೩೭೩. ಪ. ೨೬

ಈ ಪದ್ಯದಲ್ಲಿ ರಾಜದೂತನು ಎಂತಹವನಿರಬೇಕೆಂಬುದನ್ನು ಹೇಳಿದೆ. ಯುದ್ಧ ಸನ್ನಿವೇಶಗಳಲ್ಲಿ ಸಾಮ, ಧಾನ, ಭೇದ, ದಂಡ ಎಂಬುಪಾಯಗಳಲ್ಲಿ ಯಾವುದನ್ನು ಅನುಸರಿಸಬೇಕು ಎಂಬುದನ್ನು ನಿಶ್ಚಯಿಸುವ ಮೊದಲು ದೂತನನ್ನು , ರಾಯಭಾರಿಯನ್ನು

ಪರರಾಷ್ಟ್ರಕ್ಕೆ ಕಳಿಸುವುದು ರಾಜನೀತಿ. ಇದು ದೂತಾಂಗವರ್ಣನ. ಈ ಬಗೆಯ ದೂತಾಂಗದ ವರ್ಣನವು ಕನ್ನಡ ಜೈಮಿನಿ ಭಾರತದಲ್ಲಿ ಇರುವುದೇ ಇಲ್ಲ.

ಈ ಕಾವ್ಯದಲ್ಲಿ ಇಬ್ಬರು ದೂತರ ಪ್ರವೇಶವಿದೆ. ಒಬ್ಬ ಭೀಮ : ಕೃಷ್ಣನನ್ನು ಯಜ್ಞಕ್ಕೆ ಕರೆಯಲು ದ್ವಾರಕೆಗೆ ಹೋಗುತ್ತಾನೆ. ಇನ್ನೊಬ್ಬ : ಯಮಧರ್ಮ ಮತ್ತು ವೀರವರ್ಮರಲ್ಲಿಗೆ ವಿವಾಹಸಂಘಟನಾರ್ಥವಾಗಿ ಅಡ್ಡಾಡುವ ನಾರದ. ಇಬ್ಬರೂ ಚಾತುರ್ಯವಂತರು. ಭೀಮನು ಕೃಷ್ಣನಾಡುವ ಮಾತಿನ ಅರ್ಥವನ್ನರಿತು ತಾನೂ ಹಾಸ್ಯವಾಡಿ, ಕೋಪವನ್ನು ಪ್ರಕಟಿಸಿ, ಕೊನೆಗೆ ಕೃಷ್ಣನನ್ನು ಮನವೊಲಿಸುತ್ತಾನೆ. ಇದು ಸಮರ ಸನ್ನಿವೇಶವಲ್ಲ; ಕೃಷ್ಣನು ಪಾಂಡವರಿಗೆ ಪರನಲ್ಲ.

ನಾರದನು ದೂತನಾಗಿ ಅಡ್ಡಾಡುವುದು ಮಾಲಿನೀಪರಿಣಯದ ವಿಷಯದಲ್ಲಿ.

ನಾರದ ಮುನೀಶ್ವರಂ ಕಾಲನಲ್ಲಿಗೆ ಬಂದು
ವೀರವರ್ಮಕನೃಪನ ತನುಜೆ ಮಾಲಿನಿಯಂ ವಿ
ಚಾರಿಸದೆ ಸುಮ್ಮನಿರ್ದಪರೆ ನೀಂ ಧರೆಯ ಮಾನವರನೊಲ್ಲದೆ ನಿನ್ನನು ||
ಹಾರೈಸಿ ಪತಿಯಾಗಬೇಕೆಂದು ಭಜಿಸುವಳ್
ಚಾರಿತ್ರ ಗುಣಶೀಲ ಸತ್ಯ ಧರ್ಮಂಗಳಿಂ
ಸಾರಸ್ವತಾಖ್ಯಪುರಮಂ ಪಾವನಂಗೈವಳಾಕೆಯಂ ವರಿಸೆಂದನು ||

ನಿಜವಾಗಿ ಮನದೊಳನ್ಯವನುಳಿದು ತನ್ನನೇ
ಭಜಿಪ ಶರಣಾಗತರನಾದರಿಸದಿರ್ದಪರೆ
ಸುಜನರೆಲೆ ತರಣಿಸುತ ನಾಲ್ಕು ಚರಣವನೂಱಿನಡೆವ ಧರ್ಮದೊಳದರ್ದ ||
ಪ್ರಜೆಗಳಿಂದೆಸೆವ ಸಾರಸ್ವತಪುರಕ್ಕೆ ಮಾ
ನುಜವೇಷಮಂ ತಾಳ್ದು ನೀಂ ಪೋಗಿ ವರಿಸು ಭೂ
ಭುಜನ ಕುವರಿಯನೆಂದೊಡೊಪ್ಪಿ ವೈವಸ್ವತಂ ಕಳುಹಿದಂ ಸುರಮುನಿಯನು ||

(೨೭. ೧೮–೧೯)

ಹೀಗೆ ಯಮನ ಒಪ್ಪಿಗೆಯನ್ನು ಪಡೆದ ನಾರದನು ವೀರವರ್ಮನಲ್ಲಿಗೆ ಬಂದು,

ಧರ್ಮರಾಜನ ಪೊರೆಗೆ ಪೋಗಿರ್ದೆನೆಲೆ ವೀರ
ವರ್ಮಕೇಳಿನ್ನೆಗಂ ನೀನಾರ್ಜಿಸಿದ ಪುಣ್ಯ
ಕರ್ಮಫಲದಿಂದೆ ವೈಶಾಖಮಾಸದ ಶುಕ್ಲಪಕ್ಷದೊಳ್ ಧರೆಗೆ ಬಂದು ||
ನಿರ್ಮಲಚರಿತ್ರೆ ತವ ತನುಜೆ ಮಾಲಿನಿಯಂ ಜ
ನರ್ಮಚ್ಚೆ ಮದುವೆಯಾದಪೆನೆಂದನಂತಕಂ
ಪೆರ್ಮೆಯಿಂಪಾದರಿಸುವಂತೆ ಸಂಪಾದಿಸುವುದೆಂದು ಮುನಿಪತಿ ನುಡಿದನು ||

(೨೭–೨೧)

ಹೀಗೆ ನಾರದನ ದೂತಕರ್ಮದ ವಿವರಣೆ ಇಲ್ಲಿದೆ. ನಾರದನು ಸ್ವಯಂಪ್ರೇರಣೆಯ ದೂತ. ಇವನನ್ನು ವೀರವರ್ಮನಾಗಲಿ, ಯಮಧರ್ಮನಾಗಲಿ ದೂತನನ್ನಾಗಿ ಕಳಿಸಿರಲಿಲ್ಲ.

## ಯಾತ್ರಾಂಗ ವರ್ಣನಂ

ಮಹಾಭಾರತ ಮತ್ತು ರಾಮಾಯಣಗಳಲ್ಲಿ ದಿಗ್ವಿಜಯವನ್ನು ವರ್ಣಿಸಿದೆ. ಮಹಾಭಾರತದ ರಾಜಸೂಯ ದಿಗ್ವಿಜಯುವನ್ನು ಪಂಪ, ಕುಮಾರವ್ಯಾಸರು ವರ್ಣಿಸಿದ್ದಾರೆ, ರಾಮಾಯಣದ ಅಶ್ವಮೇಧ ದಿಗ್ವಿಜಯವನ್ನು ಪದ್ಮಪುರಾಣ, ಜೈಮಿನಿ ಭಾರತ, ಮತ್ತು ರಾಮಾಶ್ವಮೇಧಗಳು ವರ್ಣಿಸಿವೆ.

ಕಾಲಿದಾಸನ ರಘುವಂಶದಲ್ಲಿ ಗುಪ್ತರ ಕಾಲದ ದಿಗ್ವಿಜಯ, ಬಾಣನ ಹರ್ಷಚರಿತದಲ್ಲಿ ಹರ್ಷನ ದಿಗ್ವಿಜಯ ವರ್ಣನೆ ಇದ್ದಂತೆ ಐಹೊಳೆಯ ಒಂದು ಶಾಸನದಲ್ಲಿ ಪುಲಕೇಶಿಯ ದಿಗ್ವಿಜಯದ ವರ್ಣನೆ ಮತ್ತು ಭರತನ ದಿಗ್ವಿಜಯವನ್ನು ಆದಿಪುರಾಣ ಮತ್ತು ಭರತೇಶ ವೈಭವಗಳಲ್ಲಿ ವರ್ಣಿಸಲಾಗಿದೆ. ಇದರ ಮೇಲಿಂದ ಮಹಾಕಾವ್ಯಂಗಳಲ್ಲಿ ಯಾತ್ರಾಂಗ ವರ್ಣನೆ ಅವಶ್ಯ ಎಂಬುದು ಸ್ಪಷ್ಟವಾಗುತ್ತದೆ. ಹೀಗೆಯೆ ಸಂಸ್ಕೃತ–ಕನ್ನಡ ಕವಿಗಳೆಲ್ಲ ಯಾತ್ರಾಂಗ ವರ್ಣನೆಯನ್ನು ಮಾಡಿದ್ದಾರೆ. ಕನ್ನಡ ಜೈಮಿನಿ ಭಾರತವು ಸಂಪೂರ್ಣವಾಗಿ ದಿಗ್ವಿಜಯವನ್ನು ಕುರಿತ ಕಾವ್ಯವೇ ಆಗಿದೆ. ಇಲ್ಲಿ ಅಶ್ವಮೇಧಯಜ್ಞವೇ ವಿಷಯ, ಕುದುರೆ ನಾಡು ನಾಡು ಸುತ್ತುವುದೇ ಕೆಲಸ, ಅದನ್ನು ಕಟ್ಟಿದವರನ್ನು ಕದನದಿಂದ, ಕಟ್ಟದವರನ್ನು ಒಳ್ಳೆ ಮಾತಿನಿಂದ ಸ್ವಾಧೀನಪಡಿಸಿಕೊಳ್ಳುವುದೆ ಉದ್ದೇಶ.

ದಂಡಯಾತ್ರೆಯಲ್ಲದೆ ಇನ್ನೂ ಒಂದು ಯಾತ್ರೆ ಇಲ್ಲಿದೆ. ಯೌವನಾಶ್ವನು ಹಸ್ತಿನಾವತಿಗೆ ಹೊರಡುವುದು, ಶ್ರೀಕೃಷ್ಣನು ಹಸ್ತಿನಾವತಿಗೆ ತೆರಳುವುದು. ಶ್ರೀಕೃಷ್ಣನ ಯಾತ್ರೋದ್ಯೋಗವನ್ನು ವರ್ಣಿಸಿದಷ್ಟು ಉಳಿದ ಯಾವ ರಾಜರ ಹೊರಡುವಿಕೆಯನ್ನೂ ವರ್ಣಿಸಿಲ್ಲ. ಈ ಕಾವ್ಯ ಕೃಷ್ಣ ಚರಿತಾಮೃತವಾದುದರಿಂದ ಅವನಿಗೆ ಅಷ್ಟು ಪ್ರಾಶಸ್ತ್ಯ. ಇತರ ಬೇರೆ ಬೇರೆ ರಾಜರು ಯುದ್ಧಕ್ಕೆ ಹೊರಡುವ ಯಾತ್ರಾಂಗ ವರ್ಣನೆಗಳು ಸಾಮಾನ್ಯವಾಗಿ ಅನ್ಯಕಾವ್ಯಗಳಲ್ಲಿಯ ವರ್ಣನೆಗಳನ್ನೇ ಹೋಲುತ್ತವೆ ಎಂದು ಹೇಳಬಹುದು.

ಶ್ರೀಕೃಷ್ಣನ ಯಾತ್ರಾಂಗವರ್ಣನೆಯನ್ನು ಕವಿ ಮನದುಂಬಿ ಮಾಡಿದ್ದಾನೆ, ಏಳನೆಯ ಸಂಧಿಯಲ್ಲಿ. ಆ ಸಂಭ್ರಮವನ್ನು ನೋಡಿ :

> ವಾರಣನಗರಿಗೀಗ ನಮ್ಮೊಡನೆ ನಡೆತರಲಿ
> ದ್ವಾರಕೆಯೊಳಿರ್ದ ಜನವೆಲ್ಲರುಂ ಪೊಯ್ಸು ಗೂ
> ಡಾರನುಂ ಪೊಱಗೆ ಸಾಱಿಸು ಪುರದೊಳೆಂದು ಮಧುಸೂದನಂ ನೇಮಿಸಿದನು ||
> (೭–೧)

> ಬಳಿಕ ಕೃತವರ್ಮಕನ ನೇಮದಿಂ ನಗರದೊಳ್
> ಮೊಳಗಿದುವು ನಿಸ್ಸಾಳಕೋಟಿಗಳ್ ಪೊಱಮಟ್ಟು
> ದುಳಿಯದೆ ಸಮಸ್ತಜನಮೈದಿದುದು ದೇವಕಿಯಶೋದೆಯರ ದಂಡಿಗೆಗಳು ||
> ಕೆಳದಿಯರ್ವೆರಸಿ ರುಕ್ಮಿಣಿಸತ್ಯಭಾಮಾದಿ
> ಲಲನೆಯರ ಪಲ್ಲಕ್ಕಿಗಳ ಸಾಲ್ಗಳೆಂದು ಕೆಲ
> ಬಲದ ಸುಯ್ದಾನದಿಂ ತೆರಳಿದುವು ಕೋಶದ ಸುವಸ್ತುಗಳನೆತ್ತಿಸಿದರು || (೭–೩)

ಸುತಸೋದರಜ್ಞಾತಿಮಿತ್ರಬಾಂಧವಪುರೋ
ಹಿತರೊಡನೆ ಪೊಱಮಟ್ಟನಸುರಾಂತಕಂ ಸಮಾ
ವೃತವಟುಗಳಿಂದೆ ಸನ್ನಿಹಿತಶಾಸ್ತ್ರಂಗಳಿಂ ದ್ವಿಜರಾಯುಧಂಗಳಿಂದೆ ||
ಚತುರಂಗಬಲದಿಂದೆ ಭೂಭುಜರ್ ದ್ರವ್ಯದಿಂ
ದತುಳಸಂಭಾರದಿಂ ವೈಶ್ಯರೈದಿತು ಶೂದ್ರ
ವಿತತಿ ನಾನಾಜಾತಿಗಳ ನೆರವಿಯಿಂ ತಮ್ಮ ತಮ್ಮ ವಿನಿಯೋಗದಿಂದೆ || (೭-೪)

ಒಟ್ಟೆಗಳ ವೇಸರದ ಪೊಱಿಯಾಳ ಕಂಬಿಗಳ
ಕೊಟ್ಟಿಗೆಯ ಕೊಲ್ಲಾರ ಬಂಡಿಗಳ ಮೇಲೆ ಸರ
ಕಿಟ್ಟಣಿಸಿ ನೂಂಕಿದುದು ಗೋಮಹಿಷಿಕುಲದ ಕೀಲಾರ ಬಿಡದೆಯ್ದಿತೊಡನೆ ||
ದಟ್ಟಿಸಿದುವಾನೆ ಕುದುರೆಯ ರಥದ ಸೇನೆ ಪೊಱ
ಮಟ್ಟುದಂದಣದ ಪಲ್ಲಕ್ಕಿಗಳ ರಾಜಿ ಸಾ
ಲಿಟ್ಟು ನಡೆದುವು ಛತ್ರಚಾಮರಪತಾಕೆಗಳ್ ತೆರಳಿತು ಜನಂ ಮುದದೊಳು|| (೭-೫)

ವಿಟರ ಮೇಳಂಗಳಿಂ ಚೇಟಿಯರ ಗಡಣದಿಂ
ನಟವಿದೂಷಕವಂದಿ ಗಾಯಕರ ತಂಡದಿಂ
ಕಟಕಿಧ್ವನಿವ್ಯಂಗ್ಯ ಸರಸೋಕ್ತಿಗಳ ಬೆಡಗುಗಳ ಬಯಲ ನಗೆನೋಟಂಗಳ ||
ನಟನೆಗಳ ನಡೆಯ ಭಂಗಿಯ ಬಱಿಯ ಬೇಟದತಿ
ಕುಟಿಲಾಂಗದೊಲವುಗಳ ವಾರನಾರೀಜನಂ
ಕಟಕದೊಳ್ ಕಾಮುಕರ ನಡೆಗೆಡಿಸುತೊಗ್ಗಿನಿಂ ಪೊಱಮಟ್ಟುಬರುತಿರ್ದುದು||(೭-೬)

ನಾಗಪತಿಗಸದಳಂ ಕಮಠಂಗಳಿದು ದಿಶಾ
ನಾಗತತಿಗಳವಲ್ಲ ಧರಿಸಲರಿದೆಂಬಂತೆ
ನಾ ಗಣಿಸಲಱಿಯೆನಿದು ಪೊಸತೆನಲ್ ಪಟಹ ನಿಸ್ಸಾಳ ಕಹಳಾರವದೊಳು ||
ಸಾಗರದ ಮಧ್ಯದಿಂದೆದ್ದುದೋ ಮತ್ತೊಂದು
ಸಾಗರಂ ಪೇಳೆನಲ್ಕಖಿಳಯಾದವ ಕಟಕ
ಸಾಗರಂ ದ್ವಾರಕಾನಗರಮಂ ಪೊಱಮಟ್ಟು ನಡೆಗೊಂಡುದೇವೇಳ್ವೆನು || (೭-೭)

ಈ ವರ್ಣನೆಯಲ್ಲದೆ ಶ್ರೀಕೃಷ್ಣನಿಗೆ ಹಾದಿಯಲ್ಲಿ ಪಾರ್ವರು, ನರ್ತಕಿಯರು ಭೆಟ್ಟಿಯಾದುದರ ವರ್ಣನೆ ಬರುತ್ತದೆ.

ರಣರಂಗನಾಯಕನಾದ ಅರ್ಜುನನು ಯಜ್ಞಾಶ್ವರಕ್ಷಣೆ,ದಿಗ್ವಿಜಯ ಯಾತ್ರೆಗಾಗಿ ಹೊರಡುವ ರೀತಿ ಹೀಗಿದೆ :

ಇಭಮುಖಾರ್ಚನೆಯಂ ನವಗ್ರಹದ ಪೂಜೆಯಂ
ವಿಭವದಿಂ ಮಾಡಿ ಧರ್ಮಜಭೀಮ ಕುಂತಿಗ
ಳ್ಗಭಿನಮಿಸಿ ಕೃಷ್ಣನ ಪದಾಂಬುಜಕ್ಕೆಱಗಿ ದಿಕ್ಪಾಲರಂ ಬೇಡಿಕೊಂಡು ||
ಶುಭಮುಹೂರ್ತದೊಳರಸಿಯರಸೇಸೆವೆತ್ತು ಮುನಿ
ಸಭೆಗೆ ವಂದಿಸಿ ಪರಕೆಗೊಂಡು ಪಾಠಕರ ಜಯ
ರಭಸದಿಂದೆಸವ ಮಂಗಳವಾದ್ಯಘೋಷದಿಂದರ್ಜುನಂ ಪೊಱಮಟ್ಟನು || (೮-೧೧)

ಊಹಿಸುವೊಡರಿದೆನೆ ತುರಂಗಮದ ಕೂಡೆ ಸ
ನ್ನಾಹದಿಂ ಮೇರೆದಪ್ಪಿದ ಮಹಾರ್ಣವದ ಪ್ರ
ವಾಹಮೆನೆ ತಳ್ತಿಡಿದ ತರುಗುಲ್ಮಲತೆಗಳಂ ನಡೆಗೊಂಡ ಕಾನನಮೆನೆ ||

ಮೋಹರಂ ಭೂತಳಮನೊಳಕೊಂಡು ಬರುತಿರ್ದು
ದಾಹಯಂ ಬಳಿಕ ದಕ್ಷಿಣದಿಶಾ ಮುಖವಾಗಿ
ಮಾಹಿಷ್ಮತೀಪಟ್ಟಣದ ಬಹಿರ್ಭಾಗದುಪವನದೆಡೆಗೆ ನಡೆತಂದುದು || (೮–೧೪)

ಸಂಧಿ ೧೦ರಲ್ಲಿ ಹಂಸಧ್ವಜನು ಯಜ್ಞಾಶ್ವವನ್ನು ಕಟ್ಟಿ, ಯುದ್ಧಕ್ಕೆ ಹೊರಡುವಂತೆ ಡಂಗುರ ಹೊಯ್ಸುತ್ತಾನೆ. ಕೂಡಲೆ ಸೈನ್ಯವು ಹೊರಟುಬಿಟ್ಟಿತು :

ಮೊಳಗಿದುವು ಮೇಲೆ ನಿಸ್ಸಾಳಂಗಳಾಹವಕೆ
ದಳದುಳಿಸಿತಾಗ ಸುಭಟಪ್ರತತಿ ಜೋಡಿಸಿತ–
ಖಿಳ ಕರಿರಥಾಶ್ವಕುಲವೊದಗಿತು ಪದಾತಿ ಸನ್ನಾಹದಿಂದಾಕ್ಷಣದೊಳು || (೧೦–೪೭)

ಸುರಪಸುತನೆಂಬ ವೈರಕೆ ಧನಂಜಯನ ಮೇ
ಲಿರದೆ ಮುಳಿದೆದ್ದುದೊ ಕುಲಾದ್ರಿಗಳ ಬಳಗಮೆನೆ
ಕರಿಘಟೆಗಳೈದಿದುವು ತನ್ನ ಮಗನಂ ಕೊಂದನೆಂದು ನರನೊಳ್ಕನಲ್ದು ||
ತರಣಿ ತಾಳ್ದನೊ ನಿಜಾಕಾರ ಕೋಟಿಗಳನೆನೆ
ತೆರಳಿದುವು ಮಣಿಮಯವರೂಥಂಗಳೀದುದೋ
ಧರೆ ಮಂದಿಕುದುರೆಗಳನೆನೆ ನಡೆದುದಾಹವಕೆ ಪರಿವಾರವಾ ನೃಪತಿಯ || (೧೦–೪೮)

ಪ್ರಮೀಲೆ ಕುದುರೆಯನ್ನು ಕಟ್ಟಿಹಾಕಿ ಕಾಳಗಕ್ಕೆ ಅಣಿಯಾಗುತ್ತಾಳೆ. ಆಗ ಸ್ತ್ರೀಸೈನ್ಯವು ಹೊರಟ ಬಗೆಯನ್ನು ಕವಿ ಬಣ್ಣಿಸುತ್ತಾನೆ :

ತೆಗೆದುಟ್ಟ ಚಲ್ಲಣದ ಬಿಗಿದ ಮೊಲೆಗಟ್ಟುಗಳ
ಪೊಗರುಗುವ ವೇಣಿಗಳ ಮೃಗಮದದ ಬೊಟ್ಟುಗಳ
ತಿಗುರಿದನುಲೇಪನದ ಮಗಮಗಿಪ ಕಂಪುಗಳ ಝಗಝಗಿಸುವಾಭರಣದ ||
ನಗೆಮೊಗದ ಮಿಂಚುಗಳ ದೃಗುಯುಗದ ಕಾಂತಿಗಳ
ಮಿಗೆ ತೊಳಗುವಂಘ್ರಿಗಳ ಸೊಗಯಿಸುವ ಬಾಹುಗಳ
ಬಗೆಬಗೆಯ ಕೈದುಗಳ ವಿಗಡೆಯರ್ನೆರದು ಕಾಳೆಗಕೆ ಮುಂಕೊಳುತಿರ್ದರು ||
(೧೭–೪)

ಪ್ರಮೀಲಾ ರಾಜ್ಯದಿಂದ ಹೊರಟು ಮುಂದಿನ ಯಾತ್ರೆಯಲ್ಲಿ—

ಮತ್ತೆ ಮುಂದೈದುವ ತುರಂಗಮದ ಕೂಡೆ ನಡೆ
ಯುತ್ತೆ ಬಱಿದೊವಲುಡೆಯವರ ವಕ್ರಾಂಗಿಗಳ
ನೊತ್ತೋಳದರನೊಂದುಕಾಲವರನೊಂದುಕಣ್ಣವರ ಮೂಱಡಿಗಳವರ ||
ಉತ್ತುಂಗನಾಸಿಕದವರ ಮೂರು ಕಣ್ಣವರ
ನೆತ್ತಿಗೋಡೆರಡುಳ್ಳವರನೊಂದು ಕೋಡವರ
ಕತ್ತೆಮೊಗ ಕುದುರೆಮೊಗದವರ ದೇಶಂಗಳಂ ಕಂಡನಾ ಕಲಿಪಾರ್ಥನು || (೧೭-೨೦)

ಎಂದು ಪ್ರವಾಸಕಾಲದ ವಿಲಕ್ಷಣವೈವಿಧ್ಯವನ್ನು ಕವಿ ಬಣ್ಣಿಸುತ್ತಾನೆ. ಭೀಷಣನೆಂಬ ದೈತ್ಯನ ರಾಜ್ಯಕ್ಕೆ ಹೋಗುವ ದಾರಿಯಲ್ಲಿ ಇಂತಹ ವಿಚಿತ್ರ ದೇಶಗಳಿರುವುದು ಸಂಗತ. ಕಲ್ಪನೆಯಾದರೂ ಓದುಗರ ರುಚಿವೈವಿಧ್ಯವನ್ನು ತಣಿಸುವ ಹೊರತು ಬೇರೊಂದು ಫಲ ಇದಕ್ಕಿದ್ದಂತೆ ಕಾಣೆ. ಮುಂದೆ ಭೀಷಣನ ಸಮರಸನ್ನಾಹ ತಕ್ಕಂತೆ ಭೀಷಣವೇ ಆಗಿದೆ ಇಲ್ಲಿ :

ಅಸುರಕೋಟಿತ್ರಯದೊಡನೆ ಬಂದು ಭೀಷಣಂ
ಮುಸುಕಿದಂ ಕೈದುಗಳ ಮಳೆಗಳಂ ಕಱೆಯುತ್ತೆ
ಮುಸಗಿದುರಿ ಪೊಗೆ ಸಿಡಿಲ್ ಮಿಂಚು ಕತ್ತಲೆ ಗಾಳಿ ಮುಗಿಲೊಡ್ಡು ದೊಳ್ಗಳಿಂದೆ ||
ದೆಸೆಗೆಡಿಸುತಹಿ ಸಿಂಹ ಶರಭ ಗಜ ಭೇರುಂಡ
ಪಸಿದ ಪುಲಿ ಪಂದಿ ವೃಕ ವೃಷಭಂಗಳಾಗಿ ಗ
ರ್ಜಿಸುತುಗ್ರಭೂತಂಗಳಾಗಿ ಬಾಯ್ದೆಱೆದಬ್ಬರಿಸುತೆ ಪಾರ್ಥನ ಪಡೆಯನು ||

(೧೬-೩೭)

ಮಾಯಾಯುದ್ಧದ ಭಯಂಕರ ಮಾದರಿ ಇದು.

ಬಭ್ರುವಾಹನನು ತಾಯಿಯ ಆದೇಶದಂತೆ ಅರ್ಜುನನನ್ನು ತಂದೆಯೆಂಬ ನಯ ವಿನಯದಿಂದಲೇ ಕಾಣುತ್ತಾನೆ. ಆದರೆ ಅರ್ಜುನನು ಅವನನ್ನು ಹೇಡಿಯೆಂದು ಮನ ಬಂದಂತೆ ತೆಗಳಿದ್ದರಿಂದ ಅವನ ಕೋಪದ ಕಟ್ಟೊಡೆದು ಸಂಧಾನದ ಯತ್ನವು ಭಗ್ನ ವಾಗುತ್ತದೆ.

ತೆಗಸಿದಂ ತಂದಖಿಳವಸ್ತುವಂ ಕುದುರೆಯಂ
ಬಿಗಿಸಿದಂ ಲಾಯದೊಳ್ ಪುರಜನಸ್ತ್ರೀಯರಂ
ಪುಗಿಸಿದಂ ಪಟ್ಟಣಕೆ ಕರಸಿದಂ ಸಚಿವರಂ ಸೇನಾಧಿನಾಯಕರನು ||
ಜಗಿಸಿದಂ ಚತುರಂಗಮಂ ನೆರಹಿ ಧಾತ್ರಿಯಂ
ಮಿಗಿಸಿದಂ ವಾದ್ಯರವದಿಂದಬ್ಧಿ ಘೋಷಮಂ
ಮುಗಿಸಿದಂ ತಾವರೆಯನಾಬಭ್ರುವಾಹನಂ ದೂಳ್ಗಳಿನನಂ ಮುಸುಕಲು|| (೧೭-೫೭)

ಬಭ್ರುವಾಹನನ ವೃತ್ತಿ ಒಮ್ಮೆಲೆ ಈ ರಭಸದ ಏರಾಟಿಕೆಯಲ್ಲಿ ಪರಿಣಮಿಸುತ್ತದೆ. ಮುಂದೆ ಸಂಜೀವಕದ ಮಣಿಗಾಗಿ ಬಭ್ರುವಾಹನನು ನಾಗಲೋಕಕ್ಕೆ ದಾಳಿಯಿಟ್ಟ ಯಾತ್ರಾ ಪ್ರಸಂಗ ಬರುತ್ತದೆ.

ಯಜ್ಞಾಶ್ವದ ಹಣೆಯ ಮೇಲಣ ಬಿರುದಿನ ಲೇಖನವನ್ನು ಓದಿ—

...ಕನಲ್ದು ತಾಮ್ರಧ್ವಜಂ ಕಟ್ಟಿದಂ
ತೋಳ ಬಲ್ಪಿಂದೆ ಪಾರ್ಥನ ತುರಗಮಂ ಬಳಿಕ
ಮೇಳೈಸಿ ನಿಲಿಸಿದಂ ನಿಜಬಲದ ಪೌಜುಗಳನರ್ಧಚಂದ್ರಾಕೃತಿಯೊಳು || (೨೫-೧೦)

ಹೀಗೆ ಎದುರಿಸುವನು. ವೀರವರ್ಮನ ಸೈನ್ಯವು 'ಮಹಾವಿಭವದಿಂದೆ ಕರಿತುರಗರಥ ಪಾಳಯದಳವೊತ್ತರಿಸಿ ಪೊಱಮಟ್ಟುದು' (೨೭-೪).

ಚಂದ್ರಹಾಸ, ಬಕದಾಲ್ಭ್ಯ, ದುಃಶಳೆಯರ ಪ್ರದೇಶದಲ್ಲಿ ಯಜ್ಞಾಶ್ವವು ಹಾದು ಬರುತ್ತದೆ. ಆದರೆ ಅಲ್ಲಿ ಯುದ್ಧಪ್ರಸಂಗವಿಲ್ಲ. ವರ್ಷವೂ ಮುಗಿಯುತ್ತದೆ. ಆಗ 'ದೇವನಗರೀಶ ಲಕ್ಷ್ಮೀಕಾಂತನು ತಾನೆ ಸಲ್ಲಲಿತಹರಿಗಳಂ ಪಿಡಿದು ಇಳಾವಲ್ಲಭರ ಮುಂದೆ ಕರುಣದಿಂ ಕಟ್ಟಿದನು' (೩೨-೫೭). ಇಲ್ಲಿಗೆ ದಿಗ್ವಿಜಯದ ಮುಕ್ತಾಯ ವಾಯಿತು.

ಈ ದಿಗ್ವಿಜಯದಲ್ಲಿ ವಿವಿಧ ದೇಶಗಳ,ಬೇರೆ ಬೇರೆ ಋತುಗಳ ವರ್ಣನೆ ಬರುತ್ತದೆ. ಪಾಮರಿಯರು, ವಾರಾಂಗನಾನಾಟಿಯುವರು, ಬೇಡಬೇಡತಿಯರು, ಪ್ರಮೀಳಾರಾಜ್ಯದ

ಯೋಧಸ್ತ್ರೀಯರು, ಭೀಷಣ ರಾಜ್ಯದ ರಕ್ಕಸ ರಕ್ಕಸಿಯರು, ನಾಗಲೋಕದ ನಾಗರು ಮೊದಲಾದವರ ಪರಿಚಯ ನಮಗಾಗುತ್ತದೆ.

### ವಿರೋಧಿಜಯಂ ವರ್ಣನಂ

ಈ ಭಾಗವು ಸೂಕ್ತಿಸುಧಾರ್ಣವಕಾರನಿಗೆ ದೊರೆತಿಲ್ಲ. ಆದುದರಿಂದ ಇದರ ಲಕ್ಷಣಗಳು ಸ್ಪಷ್ಟವಿಲ್ಲ. ಆದರೂ ಇಲ್ಲಿ ಯುದ್ಧವರ್ಣನೆಯೆ ಪ್ರಮುಖವಾದದ್ದು ಎಂಬುದು 'ವಿರೋಧಿ ವಿಜಯ' ಎಂಬ ಶೀರ್ಷಿಕೆಯಿಂದ ಸ್ಪಷ್ಟವಿದೆ.

ಕನ್ನಡ ಜೈಮಿನಿ ಭಾರತದಲ್ಲಿ ಅನೇಕ ಯುದ್ಧವರ್ಣನೆಗಳಿವೆ. ಆದರೆ ಈ ಯಾವ ವರ್ಣನೆಗಳೂ ಪಂಪ ಕುಮಾರವ್ಯಾಸರ ಯುದ್ಧವರ್ಣನೆಗಳಂತೆ ಇಲ್ಲ. ಕುಮಾರವ್ಯಾಸನು ಆಯುಧಗಳ ಲೆಕ್ಕ, ವಾದ್ಯಗಳ ಲೆಕ್ಕ, ರಣರಂಗದಲ್ಲಿರುವ ಹಡಪಿಗ ವೈದ್ಯಾದಿಗಳು, ಯುದ್ಧಸಿದ್ಧತೆ, ಮುಳ್ಳುಬೇಲಿ ಕಟ್ಟಿಕೊಳ್ಳುವುದು, ಗಜ ಅಶ್ವಯೋಧರಿಗೆ ಚಿಕಿತ್ಸೆ ನಡೆಯುವ ರೀತಿ-ಹೀಗೆ ವಿವಿಧ ಅಂಗಗಳನ್ನು ವರ್ಣಿಸುತ್ತಾನೆ. ಜೈಮಿನಿ ಭಾರತದಲ್ಲಿ ಇವುಗಳಿಗೆ ಸ್ಥಾನವಿಲ್ಲ. ಏಕೆಂದರೆ ಈ ಕಾವ್ಯದಲ್ಲಿ ವಿರೋಧಿಗಳೊಂದಿಗೆ ಯುದ್ಧವಾಗದೆ ಶ್ರೀಕೃಷ್ಣಭಕ್ತರೊಂದಿಗೆ ಯುದ್ಧವಾಗುತ್ತದೆ. ವಿರೋಧಿ ಜಯದ ಮಾತೇ ಇಲ್ಲ. ಇಲ್ಲಿಯ ವಿರೋಧ ಕ್ಷಣಿಕ. ೧೮ ದಿನದ ಘನಘೋರ ಕುರುಕ್ಷೇತ್ರಯುದ್ಧದಂತಲ್ಲ. ಭಕ್ತಿಯ ಉದಯದೊಂದಿಗೆ ಯುದ್ಧ ಸಮಾಪ್ತಿಯಿದೆ, ಲಕ್ಷ್ಮೀಶನ ಜೈಮಿನಿಭಾರತದಲ್ಲಿ. ವಿರೋಧಿಭಕ್ತರನ್ನು ಗೆಲ್ಲುವ ರೀತಿಯಲ್ಲಿಯೂ ವೈವಿಧ್ಯವಿದೆ.

ಅಗ್ನಿಸ್ತುತಿಯಿಂದ ನೀಲಧ್ವಜನನ್ನು, ಸುತರ ಸಂಹಾರ ಮಾಡಿ ಹಂಸಧ್ವಜನನ್ನು, ಆಕಾಶವಾಣಿಯಿಂದ ಪ್ರಮೀಳೆಯನ್ನು, ಪಶ್ಚಾತ್ತಾಪದಿಂದ ಬಭ್ರುವಾಹನನನ್ನು, ಕಪಟ ವೇಷದಿಂದ ದಾನಬೇಡಿ ಮಯೂರಧ್ವಜನನ್ನು, ಪದಸ್ಪರ್ಶದಿಂದ ವೀರವರ್ಮನನ್ನು ಮತ್ತು ಆಲಿಂಗನದಿಂದ ಚಂದ್ರಹಾಸನನ್ನು ಗೆದ್ದ ಬಗೆ ಜೈಮಿನಿ ಭಾರತದಲ್ಲಿದೆ. ಭೀಷಣನು ಕೃಷ್ಣಭಕ್ತನಲ್ಲ, ರಾಕ್ಷಸ. ಮುನಿವೇಷದ ಕಪಟವನ್ನು ಹೂಡುತ್ತಾನೆ. ಇಲ್ಲಿ ಮಾತ್ರ ಅರ್ಜುನನು ಅವನನ್ನು ಗೆಲ್ಲುತ್ತಾನೆ ಎಂದು ಹೇಳಬಹುದು. ಇದೊಂದನ್ನು ಬಿಟ್ಟು ಉಳಿದೆಲ್ಲ ಕಡೆ ಎದುರಾಳಿಗಳು ಭಕ್ತರಾಗಿದ್ದು ಕೊನೆಗೆ ವಿರೋಧವು ಮೈತ್ರಿಯಲ್ಲಿ ಪರಿಣಮಿಸುತ್ತದೆ.

ಲಕ್ಷ್ಮೀಶನ ಜೈಮಿನಿ ಭಾರತದಲ್ಲಿ ಈ ಹದಿನೆಂಟು ಸಾಂಪ್ರದಾಯಿಕ ವರ್ಣನೆಗಳಲ್ಲದೆ ಇನ್ನೂ ಅನೇಕ ವರ್ಣನೆಗಳಿವೆ. ನೀರು, ಗಾಳಿ, ಚಂದ್ರ, ಹಾವು, ಶುಭ ಅಶುಭ ಸೂಚನೆ, ಬೇರೆ ಬೇರೆ ಯೋಧರ ಮುಖವರ್ಣನೆ, ಶ್ರೀಕೃಷ್ಣನ ಸ್ತುತಿಪರ ವರ್ಣನೆ ಇತ್ಯಾದಿಗಳು ಅಭ್ಯಾಸಕ್ಕೆ ತಕ್ಕುವಾಗಿವೆ.

### ರಸಚಕ್ರ

೧೫ ಮತ್ತು ೧೬ನೆಯ ಶತಮಾನಗಳು ಭಕ್ತಿ ಸಂಪ್ರದಾಯದ ದೃಷ್ಟಿಯಿಂದ ಮಹತ್ತ್ವವನ್ನು ಸಂಪಾದಿಸಿವೆ. ಚೈತನ್ಯ (೧೪೮೫-೧೫೩೩), ವಿಷ್ಣುಸ್ವಾಮಿ,

ವಲ್ಲಭಾಚಾರ್ಯ (೧೪೭೯-೧೫೩೧), ರೂಪಗೋಸ್ವಾಮಿ (೧೫೦೦-೧೫೬೦)—ಈ ಎಲ್ಲ ಭಕ್ತಶ್ರೇಷ್ಠರು ಭಕ್ತಿರಸಕ್ಕೆ ಅಗ್ರಸ್ಥಾನವನ್ನು ಕೊಟ್ಟು ತಮ್ಮ ಗ್ರಂಥಗಳನ್ನು ರಚಿಸಿದರು. ತಮ್ಮ ದಿವ್ಯ ಜೀವನದಿಂದ ಜನರಲ್ಲಿ ಭಗವದ್ಭಕ್ತಿ ಜಾಗೃತವಾಗುವಂತೆ ಮಾಡಿದರು. ಚೈತನ್ಯ, ವಲ್ಲಭಾಚಾರ್ಯರು ಇಡೀ ಹಿಂದೂಸ್ಥಾನವನ್ನು ಸುತ್ತಾಡಿ ತಮ್ಮ ಪ್ರಭಾವವನ್ನು ಬೀರಿದರು.

ಶರಣ, ದಾಸ ಪರಂಪರೆಯ ಮೂಲಕ ಕರ್ನಾಟಕದಲ್ಲಿಯೂ ಭಕ್ತಿಗೆ ಪ್ರಾಧಾನ್ಯ ಬಂದಿತ್ತು. ಇಂಥ ಕಾಲ ಪ್ರಭಾವದಲ್ಲಿ ಹುಟ್ಟಿ, ಬೆಳೆದ ಕವಿ ಲಕ್ಷ್ಮೀಶನ ಜೈಮಿನಿ ಭಾರತವು ಭಕ್ತಿರಸ ಪ್ರಧಾನವಾದ ಕಾವ್ಯವಾಗಿದೆ. ಕವಿಯು 'ನವರಸೋದರಭರಿತದಿಂದ ವಿಲಸಿತವಾಗಿ'ದೆ ತನ್ನ ಕಾವ್ಯ ಎಂದು ಹೇಳಿದ್ದು ನಿಜ. ಆದರೆ ಭಕ್ತಿರಸವೇ ಸ್ಥಾಯಿರಸ ಈ ಕಾವ್ಯದಲ್ಲಿ ಎಂದು ಹೇಳಬೇಕೆನಿಸುತ್ತದೆ.

ದೃತಸ್ಯ ಭಗವದ್ ಧರ್ಮಾತ್ ಧಾರಾವಾಹಿ ಕತಾಂ ಗತಾ
ಸರ್ವೇಶೇ ಮನಸೋ ವೃತ್ತಿರ್ಭಕ್ತಿರಿತ್ಯಾಭಿಧೀಯತೇ ॥

ಭಗವಂತನ ಗುಣಶ್ರವಣ, ನಾಮ ಸಂಕೀರ್ತನದಿಂದ ಭಗವಂತನಲ್ಲಿ ತಾದಾತ್ಮ್ಯನಾಗಿ ಬಿಡುವುದು, ಚಿತ್ತವೃತ್ತಿಯಲ್ಲಿ ಭಗವಂತನೇ ಅಖಂಡವಾಗಿ ವ್ಯಾಪಿಸಿ ಬಿಡುವುದು- ಭಕ್ತಿ. ಕನ್ನಡ ಜೈಮಿನಿ ಭಾರತದಲ್ಲಿ ಕವಿಗೆ ಹೇಳಬೇಕಾದದ್ದು 'ಶ್ರೀಕೃಷ್ಣ ಚರಿತಾ ಮೃತಂ.' ಭಗವಂತನ ಗುಣಕೀರ್ತನವಿದ್ದ ಈ ಕಾವ್ಯವು ಒಂದು ಭಕ್ತಿ ಗ್ರಂಥವಾಗಿದೆ.

ಈ ಕಾವ್ಯದಲ್ಲಿ ನವರಸಗಳು ಹೇಗೆ ಅಭಿವ್ಯಕ್ತವಾಗಿವೆ ಎಂಬುದನ್ನು ಇಲ್ಲಿ ನೋಡೋಣ.

## ೧. ಶೃಂಗಾರ ರಸ

ಶೃಂಗಾರ ರಸಕ್ಕೆ ರತಿಯೇ ಸ್ಥಾಯೀಭಾವ. ಶೃಂಗಾರದಲ್ಲಿ ಆಯೋಗ, ವಿಯೋಗ ಮತ್ತು ಸಂಭೋಗ ಎಂದು ಮೂರು ವಿಧಗಳನ್ನು ಶಾಸ್ತ್ರಕಾರರು ಹೇಳುತ್ತಾರೆ.

ಆಯೋಗ ಶೃಂಗಾರ: ಏಕಮನಸ್ಸಿನವರಾದ ಹೊಸಬರಿಬ್ಬರು (ಪರಸ್ಪರ) ಅನುರಾಗವಿದ್ದು ಕೂಡ, ಪರತಂತ್ರತೆಯಿಂದಲೋ ದೈವದಿಂದಲೋ ಬೇರೆಗೊಳಿಸಲ್ಪಟ್ಟು ಕೂಡದಿರುವುದು—ಆಯೋಗ ಎಂದು ಲಾಕ್ಷಣಿಕರು ಹೇಳುತ್ತಾರೆ. ಈ ಬಗೆಯ ಶೃಂಗಾರವನ್ನು ನಾವು ಚಂದ್ರಹಾಸ-ವಿಷಯೆಯರ ವಿವಾಹಪೂರ್ವ ಸನ್ನಿವೇಶದಲ್ಲಿ ಕಾಣಬಹುದು. ಇದು ಪರಸ್ಪರಾನುರಾಗದ ಸಂದರ್ಭವಲ್ಲ — ಚಂದ್ರಹಾಸನು ಅನುರಾಗದಿಂದ ಅಲಿಪ್ತನೇ ಆಗಿದ್ದಾನೆ. ವಿಷಯೆಯಲ್ಲಿ ಶೃಂಗಾರ ಭಾವನೆಯನ್ನು ಉದ್ದೀಪನಪಡಿಸಿದ್ದು ಮತ್ತು ಅವಳನ್ನು ಚಂದ್ರಹಾಸನಿಂದ ದೂರಿರಿಸಿದ್ದು ದೈವವೇ ಆಗಿದೆ.

ಈ ಆಯೋಗ ಶೃಂಗಾರಕ್ಕೆ ಅಭಿಲಾಷಾ, ಚಿಂತನ, ಸ್ಮೃತಿ, ಗುಣಕಥನ, ಉದ್ವೇಗ, ಪ್ರಲಾಪ, ಉನ್ಮಾದ, ಸಂಜ್ವರ, ಜಡತೆ, ಮತ್ತು ಮರಣ ಎಂಬ ಹತ್ತು ಅವಸ್ಥೆಗಳನ್ನು ಕಲ್ಪಿಸುತ್ತಾರೆ.

ಸಂಧಿ-೩೦, ಪದ್ಯ-೨೦, ೨೧ರಲ್ಲಿ ವಿಷಯೆಗೆ ಚಂದ್ರಹಾಸನು 'ಕಬ್ಬುವಿಲ್ಲ, ಸೋಮ, ಕುಸುಮಾಕರ'; 'ಗೀರ್ವಾಣ, ಯಕ್ಷ ಕಿನ್ನರ ಸಿದ್ಧ ಗರುಡ ಗಂ-| ಧರ್ವರೊಳಗಾವನೋ? ಮನುಜನಲ್ಲ' ಎಂದು ತೋರುತ್ತಾನೆ. ಇದು **ವಿಭಾವ.** 'ಸರ್ವಾಂಗಮಂ ಬಿಡದೆ ನೋಡಿದಳ್ವಿಷಯೆ ವಿಷಯಾಸಕ್ತೆಯಾಗಿ ಬಳಿಕ.' 'ಬೆಚ್ಚರಿಂದೇಳ್ವ ರೋಮಾಂಚನದೊಳಾಸೆ ಮುಂ| ಬೆಚ್ಚ ಬೆಮರುವ ಬಾಲೆ ಬೇಸಱದೆ ನಿಂದು ನಿಟ್ಟಿಸುತಿರ್ದಳೇವೇಳ್ವೆನು.'

ಸುತ್ತ ನೋಡುವಳೊಮ್ಮೆ ನೂಪುರವಲುಗದಂತೆ
ಹತ್ತೆ ಸಾರುವಳೊಮ್ಮೆ ಸೋಂಕಲೆಂತಹುದೆಂದು
ಮತ್ತೆ ಮುರಿದಪಳೊಮ್ಮೆ ಹೆಜ್ಜೆ ಹೆಜ್ಜೆಯ ಮೇಲೆ ಸಲ್ವಳಮ್ಮದೆ ನಿಲ್ವಳು ||
ಚಿತ್ತದೊಳ್ನಿಶ್ಚೈಸಿ ನೆರೆಯಲೆಳಸುವಳೊಮ್ಮೆ
ಹೊತ್ತಲ್ಲದನುಚಿತಕೆ ಬೆದಱಿ ಹಿಂಗುವಳೊಮ್ಮೆ
ತತ್ತಳದ ಬೇಟದೊಳ್ಬೆಂಡಾಗಿ ವಿಷಯೆ ನಿಂದಿರ್ದಳಾತನ **ಪೊರೆಯೊಳು** || (೩೦-೨೩)

ಎಂಬ ಪದ್ಯಗಳಲ್ಲಿ ಕವಿ ಲಕ್ಷ್ಮೀಶನು ಅನುಭಾವಗಳ ಪದರುಗಳನ್ನು ಬಿಚ್ಚಿ ಬಿಚ್ಚಿ ತೋರಿದ್ದಾನೆ. ಈ ವಿಭಾವಾನುಭಾವಗಳಿಂದ ವಿಷಯೆಯಲ್ಲಿ 'ರತಿ' ಎಂಬ ಭಾವವು ಸ್ಥಾಯಿಯಾಗಿರಲು ಸಾಕು. ರತಿವಶಳಾಗಿ ವಿಷಯೆ ಚಂದ್ರಹಾಸನ ಸೆರಗಿನಲ್ಲಿದ್ದ ಪತ್ರವನ್ನು ತಿದ್ದುವ ಸಾಹಸವನ್ನೆಸಗುತ್ತಾಳೆ. ಈ ರತಿಯ ಪರಿಣಾಮ :

ದಿಟ್ಟಿ ಮುರಿಯದು ಕಾಲ್ಗಳಿತ್ತ ಬಾರವು ಮನಂ
ನಟ್ಟು ಬೇರೂಱಿದುದು ಕಾಮನಂಬಿನ ಗಾಯ
ಬಿಟ್ಟಣಿಸಿತಂಗಲತೆ ಕಾಹೇಱಿತೊಡಲೊಳಗೆ ವಿರಹದುರಿ ತಲೆದೋರಿತು ||
ಬಟ್ಟೆವಿಡಿದೊಡನೆ ತಿರುತಿರುಗಿ ನೋಡುತಡಿ
ಯಿಟ್ಟಳೀಚೆಗೆ ಬಳಿಕ ಬೆರಸಿದಳ್ಕೆಳದಿಯರ
ತಟ್ಟನೊಳ್ಸಂಭ್ರಮದ ಸಂತಾಪದೆಡೆರಯಾಟದಂತರಂಗದ ಬಾಲಿಕೆ || (೩೦-೩೧)

ಇಲ್ಲಿಗೆ ಅಯೋಗ ಶೃಂಗಾರದ ಅಭಿಲಾಷಾ ಅವಸ್ಥೆ ಮುಗಿಯಿತು. ಸಂ. ೩೦, ಪ. ೩೪-೪೧ ರ ವರೆಗೆ ವಿಷಯೆಯ ವಿರಹಸ್ಥಿತಿಯ ವರ್ಣನೆ ಇದೆ. ವಿಷಯೆಗೆ ಒಂದು ಗಳಿಗೆಯೆಂದರೆ ಹತ್ತು ಸಾವಿರ ಯುಗದಂತೆ ಎನಿಸಹತ್ತಿತ್ತು. ಯಾರೊಡನೆಯೂ ಮಾತನಾಡಳು; ನಿಂತಲ್ಲಿ ನಿಲ್ಲಲಾರಳು.

.........ಶೈತ್ಯ ವಸ್ತುಗಳಿಂದೆ..................
ಪಣ್ಣಿದುಪಚಾರಮಂ ಹೃದಯದೊಳ್ನೀರ್ವೊಯ್ದ
ಸುಣ್ಣಮುರಳ್ದಂತಾದುದೆಂದು ಕಾತರಿಸುವಳಬಲೆ ಕಾಮತಾಪದಿಂದೆ ||

ಎಂದು ಲಕ್ಷ್ಮೀಶನು ಅವಳ ವಿರಹಸ್ಥಿತಿಯನ್ನು ವರ್ಣಿಸುತ್ತಾನೆ. ಅವಳು ಯಾವಾಗಲೂ 'ನುಣ್ಗಲ್ಲದೊಳ್ಕೈಯಿಟ್ಟು ಬೆರಗಾಗಿ **ಚಿಂತಿಸುವ** ತೆರದೊಳಿರುತಿರ್ದಳು.' 'ಚಿತ್ತದೊಳ್ತನ್ನ ಪಿತನ | ಶಾಸನವನಿಂದು ಮದನಂ ಪಾಲಿಪಂತೆ ನೀಂ | ಸೂಸು ಕಾರುಣ್ಯ ವರ್ಷವನೆನ್ನ ಮೇಲೆಂದು | ಮಾಸಧತಿ ಭಕ್ತಿಯಿಂ ಬೇಡಿಕೊಳುತಿರ್ದಳಾನತೆಯಾಗಿ ಪಾರ್ವತಿಯನು' || (೩೦-೪೧)

ಚಿಂತೆಯಂ ಬಿಡು ತರಳೆ ಕೈಸಾರ್ದುದೀಗ ನಿ
ನ್ನಂತರಂಗದ ಬಯಕೆ....................ಮುದನಂ
..........................ನಿನ್ನನಾತಂಗೆ ಕುಡುವನೆಂದವಳೊರೆದಳು || (೩೧–೩)

ಎಂದು ಸಖಿ ಹೇಳಿದಾಗ ಉಂಟಾದ ವಿಷಯೆಯ ಸ್ಥಿತಿಯನ್ನು

ರಜ್ಜು ಬಂಧವನುಗಿದ ಮೃಗದಂತೆ ತಾಂ ನೆನೆದ
ಕಜ್ಜಮೊಡಗೂಡಲ್ಕೆ ಮೊಗಮರಲ್ದುದು ಬಳಿಕ
ಲಜ್ಜೆ ಮೊಳೆದೋಱುದುದು ತಲೆವಾಗಿ ನೆಲನನುಂಗುಟದಿಂದೆ ಬರೆಯುತಿರಲು ||

ಎಂದು ಕವಿ ಬಣ್ಣಿಸುತ್ತಾನೆ. ಇದು ಕೂಡ ವಿಭವಾನುಭಾವ ವರ್ಣನೆಯೇ ಆಗಿದೆ.

ಕವಿ ಲಕ್ಷ್ಮೀಶನ ಆಯೋಗ ಶೃಂಗಾರ ವರ್ಣನೆಯಲ್ಲಿ ಅಭಿಲಾಷೆ, ಚಿಂತನ ಎಂಬ ಎರಡು ಅವಸ್ಥೆಗಳ ಚಿತ್ರಣವಿದೆ. ಉಳಿದ ಎಂಟು ಅವಸ್ಥೆಗಳ ಚಿತ್ರಣವಿಲ್ಲ.

ಕವಿ ಲಕ್ಷ್ಮೀಶನು ಶೃಂಗಾರದ ಆಯೋಗ, ವಿಯೋಗ, ಸಂಭೋಗ ಎಂಬ ಮೂರು ಮುಖಗಳನ್ನು ತನ್ನ ಕಾವ್ಯದಲ್ಲಿ ಪಡಿಮೂಡಿಸಿದ್ದಾನೆ. ವಿಯೋಗ = ವಿಪ್ರಲಂಭ ಶೃಂಗಾರ ಮತ್ತು ಸಂಭೋಗ ಶೃಂಗಾರ ಇವು ಅಷ್ಟಾದಶ ವರ್ಣನೆಗಳಲ್ಲಿ ಬರುವುದರಿಂದ ಇವುಗಳನ್ನು ಆ ಸಂದರ್ಭದಲ್ಲಿ ವಿವೇಚಿಸಲಾಗಿದೆ.

ಶೃಂಗಾರದಲ್ಲಿ ಭಕ್ತಿ : ಸಂಧಿ ೧೦–೫೧ ; ಸಂಧಿ ೨೬, ಪದ್ಯ ೧೮, ೧೯, ೨೦ ಪದ್ಯಗಳು ವಾರಾಂಗನಾ ವಾಟಿಯ ವರ್ಣನೆಯ ಪದ್ಯಗಳಾಗಿವೆ. ಅಲ್ಲಿಯ ವೇಶ್ಯೆಯರಾಡಿದ ಮಾತು ಹೀಗಿವೆ :

ವಿಚಲಮುಪ್ಪುದೆ ಕೃಷ್ಣಹೃದಯಮೆಂದವಳೊಬಱಿ
ವಚನ ದೋಷಕೆ ಬೇಡಿಕೊಂಬವೋಲ್ಕಾಲ್ಗೆಱಗಿ ಸಂತೈಸಿದಂ ಪ್ರಿಯಳನು ||
(೨೬–೧೮)

............ಎಲೆ ಮರುಳೆ ತಪ್ಪನಾಡಿದೆ ದೃಷ್ಟಿ
ಗೊಚ್ಚತಂಗೊಂಡು ರಂಜಿಪ ಕೃಷ್ಣರೂಪಮಿರಲನ್ಯಮಿನ್ನೇಕೆಂದಳು || (೨೬–೧೯)

............ಪೊತ್ತಿರ್ದನಂದು ಕೃ
ಷ್ಣಂ ಗಿರಿಯನೊಂದನೆರಡದ್ರಿಗಳನೀಗಳಾಂ
ಹಿಂಗದಾಂತಿಹೆನೆನಗೆ ಕೃಷ್ಣಭಾವಂ ಬರ್ಪುದಚ್ಚರಿಯೆ ಪೇಳೆಂದನು || (೨೬–೨೦)

ಎಂಬಲ್ಲಿ ಕೃಷ್ಣ ಎಂಬ ಪದವನ್ನು ಶ್ಲೇಷಾರ್ಥದಿಂದಲೂ ರೂಪಕವಾಗಿಯೂ ಉಪಯೋಗಿಸಲಾಗಿದೆ. ಕಪ್ಪು ಬಣ್ಣ ಮತ್ತು ಶ್ರೀಕೃಷ್ಣ ಎರಡಕ್ಕೂ ಆ ಪದ ಅನ್ವಯಿಸುತ್ತದೆ.ಕಪ್ಪು ಬಣ್ಣವನ್ನು ವರ್ಣಿಸುವುದು ಪ್ರಸ್ತುತವಿಷಯ.ಆದರೆ ಆ ಪುರದ ವಾರಾಂಗನಾವಾಟಿಯೂ ಶ್ರೀಕೃಷ್ಣನ ಸ್ಮರಣೆಗೆ ಹೊರತಾಗಿಲ್ಲವೆಂಬುದು ಅಲ್ಲಿಯ ಧ್ವನಿ.

## ೨. ವೀರರಸ

ಈ ಕಾವ್ಯದಲ್ಲಿ ಅನೇಕ ಯುದ್ಧ ಪ್ರಸಂಗಗಳಿರುವುದರಿಂದ, ವೀರರಸಕ್ಕೆ ಪ್ರಾಧಾನ್ಯವಿದೆ. ವೀರರಸ ಅಭಿವ್ಯಕ್ತಗೊಳ್ಳಲು ಸಿಕ್ಕಷ್ಟು ಸ್ಥಾನ ಮತ್ತಾವ ರಸಕ್ಕೂ

ಈ ಕಾವ್ಯದಲ್ಲಿ ದೊರೆತಿಲ್ಲ. ವೀರರಸದ ಸ್ಥಾಯೀಭಾವವು ಉತ್ಸಾಹ. ದಯಾವೀರ, ರಣವೀರ ಮತ್ತು ದಾನವೀರ ಎಂದು ವೀರರಸದಲ್ಲಿ ಮೂರು ಭೇದಗಳನ್ನು ಹೇಳುತ್ತಾರೆ.

ಪಟಹ ನಿಸ್ಸಾಣ ತಮ್ಮಟ ಭೇರಿಗಳ ಸಮು
ತ್ಕಟ ನಾದಮುಗ್ರ ಗಜ ಘಟೆಯ ಘಂಟಾರವಂ
ಚಟುಲ ವಾಜಿಗಳ ಖರಪುಟದ ರಭಸಂ ಹರಿವ ಸುಟಿಯ ರಥಚಕ್ರಧ್ವನಿ ||
ಲಟಿಕಟಿಪ ಸಮರ ಲಂಪಟರ ಭುಜಗಳ ಹೊಯ್ಲು
ದಟರ ಚಾಪಸ್ವನಂ ಪಟುಭಟರ ಬೊಬ್ಬೆಯಾ
ರ್ಭಟೆಗಳೊಂದಾಗಿ ಸಂಘಟಿಸಿತೀ ಬ್ರಹ್ಮಾಂಡಘಟಮಿಂದೊಡೆಯದಿರದೆನಗೆ ||(೪-೧೮)

ಎಂಬ ವಿಭಾವದೊಡನೆ 'ರಣೋತ್ಸಾಹದಿನ್ನಡೆವ ಚಾತುರಂಗದ ಪದಹತಕ್ಕೇಳ್ವಧೂಳ್ಮ ಸಗಿತಂಬರದೊಳು.'

ತಱಿತಱಿದು ಕತ್ತರಿಸಿ ಚುಚ್ಚಿ ನಟ್ಟುಚ್ಚಳಿಸಿ
ಕೊಱಿದಱಿದು ಕಡಿದಿಱಿದು ಬಗಿದುಗಿದು ಗಬ್ಬರಿಸಿ
ಪಱಿದು ಸೀಳ್ದುತ್ತರಿಸಿ ಕೆತ್ತಿ ಖಂಡಿಸಿ ಬಳಿಚಿ ತಿವಿದಿಕ್ಕಿ ಕೊಯ್ದು ಪೊಯ್ದು ||
ಎಱಗಿ ಕವಿದಿಡಿದೊತ್ತಿ ಕದುಕಿ ಕೀಲಿಸಿ ಕೇಱಿ
ತುಱುಗಿ ತುಂಡಿಸಿ ತುಳುಕಿ ನಾಂಟಿ ಮುಱುಮೊನೆಗೊಂಡು
ನೆಱಿ ಪೊರಳ್ಚಿದುವರಿಚತುರ್ಬಲವನೆಲ್ಲಮುಂ ಕರ್ಣಜನಿಸುವ ಕಣೆಗಳು || (೪-೪೪)

ಆನೆಯಂ ಪೊಯ್ದೆಳೆವ ಸಿಂಗಮುಂ ಮುತ್ತುವ ಮೃ
ಗಾನೀತಮುಂ ಕಂಡೆವಿಂದೆನುತೆ ತುಳುಕಿದನ
ನೂನ ಶರಜಾಲಮುಂ ಕರಿತುರಗರಥಪದಾತಿಗಳ ಸಂದಣಿ ದಣಿಯಲು || (೪-೪೩)

ಎಂಬ ಅನುಭಾವಗಳನ್ನು ಲಕ್ಷ್ಮೀಶನು ಉಲ್ಲೇಖಿಸುತ್ತಾನೆ.

ಯುದ್ಧದಲ್ಲಿ : ೧. ಪೊಡೆವ ಸಿಡಿಲ್ಗಱಿವ ಮಳೆ ಜಡಿವ ಕಲ್ಗುಂಡು ದೂ
ಳಿಡುವ ಬಿಱುಗಾಳಿ ಕಂಗೆಡಿಪ ಕತ್ತಲೆ ಮೇಲೆ
ಕೆಡೆವ ಗಿರಿ ತರುಗಳುಱಿ ಕಡಿಪ ವಿವಿಧಾಯುಧಂ ನಡುವ
ಶಸ್ತ್ರಾಸ್ತ್ರಂಗಳು || (೪-೨೩)

ಎಂಬ ಮಾಯಾ ಸೃಷ್ಟಿ :

೨. ಹೆಂಗುಸಂ ಕೊಂದದಟತನದಿಂದೆ ಬಂಡಿಯಂ
ಭಂಗಿಸಿದ ಬಲ್ಪಿಂದೆಯೆತ್ತು ಕತ್ತೆಯನಿಱಿದ
ತುಂಗ ವಿಕ್ರಮದಿಂದೆ............................ ||
ಸಂಗರದೊಳಾಳಹನೆ,ಗೋಪನ ವನಂ ಯುದ್ಧ
ರಂಗದೊಳ್ತೊಲಗಿ ಯಾವುದೆಮ್ಮೊಡನೆ ಸೆಣಸಿದೆಯೆನುತೆ ತೆಗೆದೆಚ್ಚನನುಸಾಲ್ವನು ||
(೭-೫೯)

ಎಂಬ ಹೀಯಾಳಿಕೆ :

೩. ಕ್ಷೋಣಿಗೆ ಸುಧನ್ವನಾನಿರೆ ನೀಂ ಸುಧನ್ವನೇ
ಮಾಣಿಸುವೆನೀ ಪೆಸರನೀಕ್ಷಣದೊಳೆಂದು ಪೊಸ
ಸಾಣೆಯಲಗಿನ ಸರಳ್ಗಳನೆಚ್ಚು ಕರ್ಣಜಂ ಪೋರ್ಗಳನವನ ಮೈಯೊಳು ||

ಕಾಣಿಸೆ ಕೆರಳ್ದಿಲವೊ ಮೇದಿನಿಗೆ ರಿಪು ಪಂಚ
ಬಾಣ ವೃಷಕೇತು ತಾನಿರಲಾಗಿ ವೃಷಕೇತು
ಮೇಣುಂಟೆ? ಹೇಳೆನುತಿವಂ ಕಣೆಗಱಿದನವನ ತನುವನುಚ್ಚಳಿಸುವಂತೆ ||
(೧೨–೨೧)

ಎಂಬ ಪಂಥವನ್ನು ಹಾಡುವ, ಉತ್ತರ–ಪ್ರತ್ಯುತ್ತರ ರೀತಿ,

೪. ಇತ್ತಲಿಂತಿರಲಿತ್ತಲವನ ಸಾರಥಿ ಬೇಗ
ಮತ್ತೊಂದು ರಥಮಂ ತರಲ್ಕದನಡರ್ದು ಮಸೆ
ವೆತ್ತ ಕೂರ್ಗಣೆಗಳಂ ಕರ್ಣಜಂ ತೆಗೆದೆಚ್ಚೊಡಾ ಸುಧನ್ವನ ಮೈಯೊಳು ||
ತೆತ್ತಿಸಿದುವಂಬೊಡಲೊಳಿಡಿದ ತನಿ ವೀರರಸ
ಮೊತ್ತರಿಸಿ ಮೇಲುಕ್ಕುವಂದದಿಂ ಬಸಿವ ಬಿಸಿ
ನೆತ್ತರೆಸೆದಿರೆ ತೆರಳ್ದವನೆಚ್ಚೊಡಾ ಕೋಲ್ಗಳಂತಱಿಯುತಿವನೆಚ್ಚನು ||
(೧೨–೨೫)

ಎಂಬ ಬಾಣ—ಪ್ರತಿಬಾಣ ಪ್ರಯೋಗ ವರ್ಣನೆ,

೫. ಕೇಳವನಿಪಾಲಕ ಸುಧನ್ವನಿಸುವಿಸುಗೆಯಂ
ಪೇಳಲಱಿಯೆಂ ತಿರುಗುತಿರ್ದುದು ವರೂಥಂ ಕು
ಲಾಲ ಚಕ್ರದವೊಲಸವಳಿದಂ ಕಪೀಶ್ವರಂ ಭ್ರಮಣೆಯಿಂ ಧ್ವಜದ ಮೇಲೆ ||
ಕಾಲಾಟವಡಗಿದುವು ಕುದುರೆಗಳ್ಸೂತನಂ
ಕಾಲನೊಯ್ದಂ ಧನಂಜಯನೊಡಲೊಳಂಬುಗ
ಳ್ಕೀಲಿಸಿದುವಿಕ್ಕೆಲದ ಸೇನೆಯಂ ಸವರಿದುವು ಹೊಗರುವ ಹೊಸಗಣೆಗಳು ||
(೧೩–೨೦)

ಎಂಬ ಅದ್ಭುತವನ್ನು—

೬. ತಾತ ಚಿತ್ತೈಸಿದರೊಳೇನಹುದು ತಿರುಗಿ ಬಿಸು
ಡೀತಲೆಯನಸುರಾಂತಕನ ಚರಣದೆಡೆಗೆ ಸಹ
ಜಾತನಂ ಕೊಂದಾತನಂ ಕೊಲ್ವೆನೆಂದು ಸುರಥಂ ರಥಕಡರ್ದ ಬಳಿಕ ||
(೧೩–೬೩)

ಎಂಬ ದೃಢ ನಿಶ್ಚಯವನ್ನು—

೭. ಬಳಿಕಾ ಪ್ರಮೀಲೆ ಪಾರ್ಥನ ಮೋಹರಕೆ ತನ್ನ
ದಳ ಸಹಿತ ನಡೆತಂದು ಕಂಡಳುನ್ನತ ಕಪಿಯ
ಪಳವಿಗೆಯ ಮಣಿರಥದೊಳೊಪ್ಪುವ ಕಿರೀಟಿಯಂ ನಗುತೆ ಮಾತಾಡಿಸಿದಳು ||
ಫಲುಗುಣಂ ನೀನೆ ನಿನ್ನಶ್ವಮಂ ತಡೆದೆನಾಂ
ಛಲವೊ ವಿನಯವೊ ಬಿಡಿಸಿಕೊಳ್ವ ಬಗೆಯಾವುದಿ
ನ್ನಳವಿಯೊಳ್ಕಾಣಬಹುದೆನುತೆ ಬಿಲ್ದೆಗೆದು ಜೇಗೆಯ್ಯೆ...........|| (೧೬–೬೯)

ಎಂಬ ಅಬಲೆಯ ಪೌರುಷವನ್ನು—

೮. ತಾತ ಚಿತ್ತೈಸು ನಿನ್ನಾತ್ಮಜಂ ತಾನೆನ್ನ
ಮಾತೆ ಚಿತ್ರಾಂಗದೆ ಸಲಹಿದವಳುಲೂಪಿ ಸಂ
ಪ್ರೀತಿಯಿಂದಿವರಾದರಸಿಯರ್ನೀನಂದು ತೀರ್ಥಯಾತ್ರೆಗೆ ಬಂದಿರೆ ||

ಜಾತನಾದೆಂ ಬಭ್ರುವಾಹನಂ ತಾನೀಗ
ಈ ತುರಗಮಂ ಪಿಡಿದು ಕಟ್ಟಿ ತಪ್ಪಿದೆ ಗುಣಾ
ತೀತಮಂ ಕ್ಷಮಿಸೆಂದು ಮುಗುಳೆಱಗಿದಂ ಪಾರ್ಥನಡಿಗಮಂ ಭೀತಿಯಿಂದೆ ||

(೧೭–೪೯)

ಎಂಬಲ್ಲಿಯ ವಿನಯವನ್ನು—

೯. ಹಿಡಿಗೆಯ್ಯೊಳಿರ್ದ ಸುರರಿಪು ಪಾರ್ಥನಂ ಕರೆದು
ತುಡು ಮಹಾಸ್ತ್ರವನೆಂದು ನೇಮಿಸಲ್ಫಲುಗುಣಂ
ಫಡಯೆನುತೆ ಬಾಣಮಂ ಗಾಂಡೀವದೊಳ್ತೊಡುವನ್ನೆಗಂ ಭರದೊಳೊದಗಿ ||
ತಡೆಗಾಲೊಳಾತನಂ ಕೆಡಹಿ ಭುಜಯುಗ್ಮಮಂ
ತೊಡರಿಕೊಂಡುಪ್ಪರಿಸಿ ನರ–ಕೃಷ್ಣರಿರ್ವರಂ
ಮಿಡುಕಲೀಯದೆ ಬಿಗಿದು ತಾಮ್ರಧ್ವಜಂ ಧರೆಗೆ ಬಿದ್ದನಗಧರನೊದೆಯಲು ||

(೨೫–೩೪)

ಎಂಬಲ್ಲಿಯ ವಿಸ್ಮಯವನ್ನು—

೧೦. ಈ ವೀರರೊರ್ವರುಂ ತನಗೆ ಪಾಡಲ್ಲ ರಾ
ಜೀವಲೋಚನ ನಿನ್ನೊಳೀ ನರನೊಳೀ ಧ್ವಜದ
ಪಾವನಿಯೊಳುಱಿ ಕಾದಿ ಮದ್ಭುಜದ ಕಂಡೂತಿಯಂ ಕಳೆಯುವೇಳ್ಪುದೀಗ ||
ಮೂವರುಂ ತೊಲಗದಿರಿ ಸಾಕೆನುತೆ ಕೃಷ್ಣಗಾಂ
ಡೀವಿ ಪವನಜರನಾಱೀಳೆಂಟು ಸರಳನೆ
ಚ್ಚಾವಸುಮತೀಶನುಳಿದವರನೈದೈದು ಬಾಣಂಗಳಿಂ ಘಾತಿಸಿದನು || (೨೭–೩೫)

ಎಂಬಲ್ಲಿ ವೀರವರ್ಮನ ಕ್ಷಾತ್ರಮೋಹವನ್ನು ಕಾಣುತ್ತೇವೆ.

ಈ ರೀತಿ ಕನ್ನಡ ಜೈಮಿನಿ ಭಾರತದಲ್ಲಿ ವೀರರಸಪೋಷಕವಾದ ಅಂಶಗಳನ್ನು ಕಾಣುವುದಲ್ಲದೆ, ವೃಷಕೇತುವಿನಂತಹ ದಯಾವೀರ, ಸುಧನ್ವ–ಸುರಥರಂತಹ ರಣವೀರ ಮತ್ತು ಮಯೂರಧ್ವಜನಂತಹ ದಾನವೀರರನ್ನು ಕಾಣುತ್ತೇವೆ.

ರಣಾಂಗಣದಲ್ಲಿ ಯೌವನಾಶ್ವನು ಮೂರ್ಛೆಹೋದಾಗ ವೃಷಕೇತು ಉಪಚಾರ ಮಾಡಿ ಅವನನ್ನು ಎಬ್ಬಿಸುವನು. ಸುಧನ್ವ–ಸುರಥರು ಹೋರಾಡುತ್ತಲೇ ಮಡಿದು ವೀರಸ್ವರ್ಗವನ್ನು ಪಡೆಯುವರು. ಮಯೂರಧ್ವಜನು ತನ್ನ ದೇಹವನ್ನೇ ಕೊಯ್ದು ಕೊಡುವಲ್ಲಿ ದಾನವೀರತೆಯನ್ನು ಮೆರೆಯುತ್ತಾನೆ.

**ವೀರರಸದಲ್ಲಿ ಭಕ್ತಿ :** ಇಲ್ಲಿ ಬರುವ ವೀರರೆಲ್ಲ ಶ್ರೀಕೃಷ್ಣಭಕ್ತರೆಂದು ತೋರಿಸಿದೆ. ವೀರರಸದ ದೃಷ್ಟಿಯಿಂದ ನೋಡಿದಾಗ ಸುರಥ–ಸುಧನ್ವರಿಬ್ಬರೇ ನಿಜವಾದ ವೀರರು. ಉಳಿದೆಲ್ಲ ವೀರರು ಕೆಲವು ಕಾಲದವರೆಗೆ ಹೋರಾಡಿ, ಒಮ್ಮೆಲೆ ಯುದ್ಧವನ್ನು ನಿಲ್ಲಿಸಿ ಕೃಷ್ಣಭಕ್ತಿಯತ್ತ ಹೊರಳುತ್ತಾರೆ. ಇದು ವೀರರಸಕ್ಕೆ ಅಡ್ಡಿಯನ್ನು ತರುವಂತೆ ತೋರುತ್ತದೆ; ವೀರರಸಕ್ಕೆ ಬಾಧೆಯನ್ನುಂಟು ಮಾಡುತ್ತದೆ; ರಸಭಂಗವಾಗುತ್ತದೆ. ಲಕ್ಷ್ಮೀಶನು ಎಲ್ಲರನ್ನೂ ಭಕ್ತರನ್ನಾಗಿ ತೋರಿಸುವುದೇ ತನ್ನ ಕಾವ್ಯದ ಆದರ್ಶವಾಗಿಟ್ಟುಕೊಂಡಿದ್ದರಿಂದ ಈ ಕುಂದಿಗೆ ಪಕ್ಕಾಗಿರಬಹುದು. ಆದರೆ ವೀರರಸವನ್ನು ಭಕ್ತಿರಸದಲ್ಲಿ

ಸಂಗಮಿಸುವಂತೆ ಮಾಡುವಲ್ಲಿ ಲಕ್ಷ್ಮೀಶನ ಚಮತ್ಕಾರವಿದೆ ಎಂದು ಹೇಳಬಹುದು.

## ೩. ಬೀಭತ್ಸ

ಹುಳು, ಕೊಳೆತವಾಸನೆ, ವಮನ ಕಾರಣವಾಗಿ ಜುಗುಪ್ಸಾ ಎಂಬ ಸ್ಥಾಯೀ ಭಾವ ಉಂಟಾಗುವುದೇ 'ಬೀಭತ್ಸರಸ'ದ ಲಕ್ಷಣ. ಇದರಲ್ಲಿಯೂ ಉದ್ವೇಗಿ, ಕ್ಷೋಭಣ ಮತ್ತು ಶುದ್ಧ ಬೀಭತ್ಸ ಎಂದು ಮೂರು ವಿಧಗಳನ್ನು ಲಾಕ್ಷಣಿಕರು ಹೇಳುತ್ತಾರೆ.

ಸಾಮಾನ್ಯವಾಗಿ ರಣಭೂಮಿಯ ದೃಶ್ಯವು ಬೀಭತ್ಸ ರಸವನ್ನು ವ್ಯಕ್ತಪಡಿಸುತ್ತದೆ. ಲಕ್ಷ್ಮೀಶನ ಉದಾಹರಣೆಗಳನ್ನೇ ನೋಡಬಹುದು :

೧. ಕಡಿಕಡಿದು ಬಿದ್ದ ಕೈಕಾಲ್ಗಳಿಂ ತೋಳ್ಗಳಿಂ
ಪೊಡೆಗೆಡೆದ ಹೇರೊಡಲ ಸೀಳ್ಗಳಿಂ ಪೋಳ್ಗಳಿಂ
ಮುಡಿಮುಡಿದುರುಳ್ವ ಕಟ್ವಾಳ್ಗಳಿಂ ಬಾಳ್ಗಳಿಂದೊಡೆದ ತಲೆವೋಳ್ಗಳಿಂದ ||
ಕಡುಭಯಂಕರಮಾಗಲಾ ರಣದ ಮಾರಣದ
ನಡುವೆ ಕಲ್ಪಾಂತ ಭೈರವನಂತೆ ಜವನಂತೆ
ಕಡುಮುಳಿದವನ ಕಾಣುತಲೆ ಬಿಟ್ಟು ಸಲೆಕೆಟ್ಟು ಸರಿದರೆಣ್ದೆಸೆಗೆ ಭಟರು ||

(೪–೪೬)

೨. ............ರಿಪುಸೈನ್ಯಮಂ ತಾಗಿದಂ ಮೀರ್ದು ಗ
ರ್ಜಿಸಿ ವನಾಂತರಕೆ ಸಿಡಿಲೆಱಗಿದಂತಿದಿರಾಂತ ಭಟರ ಗೋಣ್ಗಳನರಿಯಲು ||
ಮುಸಗಿ ಚಿಮ್ಮುವ ರಕ್ತಧಾರೆಗಳ್ಕೂಡೆ ಕ
ಣ್ಗೆಸೆದುವಲ್ಲಿಯ ಕಿಚ್ಚಿನಂತೊಡನೆ ಮುಸುಕಿತೆ–
ಣ್ದೆಸೆಯನಿಸುವಂಬು ಬಿಱುವಳೆಯಂತೆ ಹೊನಲಾಯ್ತು ರುಧಿರಂ ಪ್ರವಾಹದಂತೆ ||

(೭–೪೩)

ಇವು ಕ್ಷೋಭಣ ಬೀಭತ್ಸಕ್ಕೆ ಉದಾಹರಣೆಗಳಾಗಿವೆ. ಜುಗುಪ್ಸೆ ಮೂಲವಾದ ಉದ್ವೇಗಿ ಬೀಭತ್ಸಕ್ಕಾಗಲಿ ಅಥವಾ ವಿರಹ ಮೂಲ ಶುದ್ಧ ಬೀಭತ್ಸಕ್ಕಾಗಲಿ ಇಲ್ಲಿ ಸ್ಥಾನವಿಲ್ಲ.

## ೪. ರೌದ್ರರಸ

ಮತ್ಸರದ ಮೂಲಕ ಅಥವಾ ಶತ್ರುಗಳ ಮೂಲಕ ಒದಗುವ ಅಪಕಾರ, ಕೃತಘ್ನತೆಗಳಿಂದುಂಟಾಗುವ 'ಕ್ರೋಧ' ಎಂಬ ಸ್ಥಾಯೀಭಾವದ ಉತ್ಕರ್ಷವು ರೌದ್ರರಸ ಪೋಷಕವಾಗಿರುತ್ತದೆ. ಶಸ್ತ್ರಗಳನ್ನು ಝಳಪಿಸುವುದು, ಆತ್ಮಪ್ರಶಂಸಾರೂಪವಾದ ಮಾತು, ಕೃತಿ, ಪ್ರತಿಜ್ಞೆಯನ್ನು ಹಟದಿಂದ ನಿಶ್ಚೈಸುವುದು ಇವುಗಳಲ್ಲಿ ರೌದ್ರರಸವು ಪ್ರಕಟವಾಗುತ್ತದೆ.

೧. ಅಣ್ಣನಂ ಕೊಂದೆಮ್ಮ ಸೌಭನಗರವನಿಱಿದ
ಬೆಣ್ಣೆಗಳ್ಳನ ಕೊಬ್ಬಿದುದರದೊಳ್ಪೊಚ್ಚ ಪೊಸ
ಸುಣ್ಣಮಂ ಪೊಯ್ದು ನೀರೆಱಿದಂತೆ ಮಾಡಿ ಯಾದವ–ಪಾಂಡವರ ಬಿಂಕದ ||

ಬಣ್ಣಮಂ ಕೆಡಿಸಿ ಕಾಳಗದೊಳುಬ್ಬಸಮನುಣಿಸಿ
ಹಣ್ಣಿದಲ್ಲದೆ ಮಾಣೆನಹಿತರ್ಗೆ ಪಗೆಯೆನ್ನ
ಕಣ್ಣ ಮುಂದೇಂ ಸುಳಿದು ಜೀವಿಪನೆ ಸೇನೆ ಸನ್ನದ್ಧಮಾಗಿರಲೆಂದನು || (೭–೨೯)

ಹೀಗೆ ಅನುಸಾಲ್ವನು ಶ್ರೀಕೃಷ್ಣನು ತನ್ನ ಅಣ್ಣನನ್ನು ಕೊಂದ ಸ್ಮೃತಿಯಿಂದ ಕ್ರೋಧಾವಿಷ್ಟನಾಗಿ ಯುದ್ಧದ ದೃಢನಿಶ್ಚಯವನ್ನು ಮಾಡುತ್ತಾನೆ. ಯುದ್ಧದಲ್ಲಿ ಪ್ರತಿಯೊಬ್ಬ ವೀರರು ಕಾಲಕಾಲಕ್ಕೆ ಕುಪಿತರಾಗಿ ಎದುರಾಳಿಯನ್ನು ಕೊಲ್ಲುವ, ಎದುರಾಳಿಯ ಬಾಣವನ್ನು ಭೇದಿಸುವ ಪ್ರತಿಜ್ಞೆಯನ್ನು ಮಾಡಿದ್ದಾರೆ.

**ಉದಾ :** ಗರ್ವದಿಂ ನುಡಿದೆಲಾ ಪಾರ್ಥ ಕೃಷ್ಣನ ಮುಂದೆ
ಗೀರ್ವಾಣರೆಲ್ಲರುಂ ನೋಡುತಿರಲೀಗ ನೀಂ
ಸರ್ವಶಕ್ತಿಯೊಳಿಸುವ ಮೂಱು ಬಾಣಂಗಳಂ ನಡುವೆ ಖಂಡಿಸದಿರ್ದೊಡೆ ||
ಉರ್ವಿಯೊಳ್ಪಾತಕಿಗಳಾಗಿರ್ದವರ ಗತಿ ಗ
ಡರ್ವೆನೆಂದಾ ಸುಧನ್ವನಂ ಬಳಿಕ ಮೇದಿನಿಯ
ದಿರ್ವಿನಂ ತೆಗೆದೆಚ್ಚನರ್ಜುನನ ತೇರೊಂದು ನಲ್ಪಮಾತ್ರಂ ತೊಲಗಲು || (೧೩–೩೧)

ರೌದ್ರರಸದ ವಿಭಾವಾನುಭಾವಗಳನ್ನು ಲಕ್ಷ್ಮೀಶನು ಈ ರೀತಿ ವಿವರಿಸಿದ್ದಾನೆ :

**ವಿಭಾವ :** ಸುರ್ರನೆ ಸುಳಿದು ಸುತ್ತಿ ಚೆಂಡಾಗಿ ಕುದುರೆ ಗ
ಕ್ಕಿರ್ರನೆ ಕಪೀಶ್ವರಂ ಪಲ್ಗಿರಿದು ಚೀರಲ್ಕೆ
ಕರ್ರನೆ ಕವಿಯೆ ಕಣ್ಗೆ ಕತ್ತಲೆ ಶಿರೋಭ್ರಮಣೆಯಿಂ ಕೃಷ್ಣ–ಫಲುಗುಣರ್ಗೆ ||
ಘುರ್ರನೆ ಪೊರಳ್ದು ಗಾಲಿಗಳೇಳೆ ಧರಣಿಯಿಂ
ತಿರ್ರನೆ ತಿರುಗುವ ಸುಟ್ಟುರೆಗಾಳಿಯಂದದಿಂ
ಸರ್ರನೆ ಸರಿದುದು ಹಿಂದಕ್ಕೆ ರಥಂ ಮತ್ತವನಸುರಾರಿ ಬಣ್ಣಿಸಿದನು || (೧೩–೩೪)

**ಅನುಭಾವ :** ಪೊಡವಿಪತಿ ಕೇಳ್ಬಳಿಕ ಕಣ್ಕೆಂಡದಂತಾಗೆ
ಕುಡಿಹುಬ್ಬು ಧೂಮಲತೆಯೆಂಬೊಲಿರೆ ಹುಂಕಾರ
ದೊಡನೆ ನಿಶ್ವಾಸಮಂ ಬಿಡುವನಾಸಾಪುಟಂ ಜ್ವಾಲೆಯಂದದೊಳೊಪ್ಪಿರೆ ||
ಕಿಡಿಯಿಡುವ ಕೋಪಮಂ ತಾಳ್ದಂ ಧನಂಜಯಂ
ಕಡೆಗಾಲದಂದಿನ ಧನಂಜಯಂ ತಾನೆನ
ಲ್ಪಡದೆ ನಡುಗೆ ಬೊಬ್ಬಿರಿದು ಪೂಡಿದಂ ಬಾಣಮಂ ಸೆಳೆದು ನಿಜಕಾರ್ಮುಕವನು||
(೧೩–೩೬)

ವಿಧುಹಾಸನಂ ಪಲವುಪಾಯದಿಂದೀಗ ನಾಂ
ವಧಿಸದಿರ್ದೊಡೆ ತನ್ನ ಸಂತತಿಗೆ ಧರೆಯನಾ
ಳ್ವಧಿಕ ಸಂಪದಮಾಗದದರಿಂದೆ ಕುಲಘಾತಕಗೆ ಮದುವೆಯಾದ ವಿಷಯೆ ||
ವಿಧವೆಯಾಗಿರಲೆಂದು ಹೃದಯದೊಳ್ನಿಶ್ಚೈಸಿ
ಮಧುರೋಕ್ತಿಯಿಂದೆ ಮದುಮಕ್ಕಳಂ ಮನ್ನಿಸಿ ವಿ
ವಿಧ ವೈಭವಂಗಳಂ ನಡಿಸಿ ಜಾಮಾತನಂ ಮಂತ್ರಿ ಕರೆದಿಂತೆಂದನು|| (೩೧–೩೭)

ಎಂಬಲ್ಲಿ ಮತ್ಸರ, ಅಸೂಯೆಯಿಂದ ಬಂದ ಕ್ರೋಧವನ್ನು ದುಷ್ಟಬುದ್ಧಿ ಮರೆಮಾಡಿದ್ದಾನೆ. ಇದು ಮತಿಯನ್ನು ಕಳೆದುಕೊಂಡ ರೌದ್ರ. ಇದರಂತೆ ಜ್ವಾಲೆ ಅರ್ಜುನನ

ಮರಣವನ್ನೇ ಸಾಧಿಸುವುದಕ್ಕಾಗಿ ಮನೆಬಿಟ್ಟು, ಅಣ್ಣನ ಮನೆಯಿಂದಲೂ ಹೊರಗೆ ಹಾಕಿಸಿಕೊಂಡು, ಗಂಗಾನದಿಯಿಂದ ಶಾಪಕೊಡಿಸಿ, ಅಗ್ನಿಪ್ರವೇಶವನ್ನು ಮಾಡುತ್ತಾಳೆ.

## ೫. ಹಾಸ್ಯರಸ

ವಿಕಾರವಾದ ಆಕೃತಿ, ವಿಚಿತ್ರವಾದ ಮಾತು, ವಿಲಕ್ಷಣವಾದ ವೇಷ, ಇವುಗಳಿಂದ ಉಂಟಾಗುವ 'ಹಾಸ' ಎಂಬ ಸ್ಥಾಯೀಭಾವವು ಹಾಸ್ಯರಸಕ್ಕೆ ಕಾರಣವಾಗಿದೆ. ಉತ್ತರಮರಲ್ಲಿ–ಸ್ಮಿತ, ಹಸಿತ; ಮಧ್ಯಮರಲ್ಲಿ–ವಿಹಸಿತ, ಉಪಹಸಿತ; ಅಧಮರಲ್ಲಿ—ಅಪಹಸಿತ, ಅತಿಹಸಿತ ಕಂಡುಬರುತ್ತವೆ. ಹಾಸ್ಯವನ್ನು ಆತ್ಮಸ್ಥ, ಪರಸ್ಥ ಎಂದೂ ವಿಭಜಿಸುತ್ತಾರೆ.

ಕನ್ನಡ ಜೈಮಿನಿ ಭಾರತದಲ್ಲಿ ಹಾಸ್ಯರಸ ಸ್ಥಾನಗಳು ಮೂರು, ನಾಲ್ಕು ಇವೆ. ಮೊದಲನೆಯದಾಗಿ ದ್ವಾರಕೆಯಲ್ಲಿ ಶ್ರೀಕೃಷ್ಣನನ್ನು ಭೀಮನು ಕಾಣುವುದು. ಸಂಧಿ–೬, ಪದ್ಯ ೪೭ ರಿಂದ ೫೪ರ ವರೆಗೆ.

ಕದ್ದು ಮನೆಮನೆ ಪೊಕ್ಕು ಬೆಣ್ಣೆ ಪಾಲ್ಗೆನೆಗಳಂ
ಮೆದ್ದು ಗೋವಳರ ಮೇಳದ ಕಲ್ಲಿಗೂಳ ಕೈ
ಮುದ್ದೆಯಂ ತೆಗೆದುಂಡು ತುಱುಗಾವ ಪಳ್ಳಿಯಂ ಬಿಟ್ಟು ಬಳಿಕೆರವಿಲ್ಲದೆ ||
ಹೊದ್ದಿ ಪಾಂಡವರನೋಲೈಸಲಾದುದು ಭಾಗ್ಯ
ಮಿದ್ದಪುವು ರಾಜಭೋಜ್ಯಂಗಳಿವು ಪಡೆದವ
ರ್ಮೃದ್ದುಗೈದಪರೂಟದೆಡೆಗಳೊಳ್ ಚೋದ್ಯಮೆಂದಳ್ ಸತ್ಯಭಾಮೆ ನಗುತೆ ||
(೬–೪೭)

ಹೀಗೆ ಸತ್ಯಭಾಮೆ ಶ್ರೀಕೃಷ್ಣನನ್ನುದ್ದೇಶಿಸಿ ಹಾಸ್ಯ ಮಾಡಿದಾಗ;

ಸತ್ಯಭಾಮಾದೇವಿ ನುಡಿದ ಕಟಕಿಯ ಮಾತಿ
ಗತ್ಯಂತ ಹರ್ಷಮಂ ತಾಳ್ದದಕೆ ನಸುನಗುತೆ
ಪ್ರತ್ಯುತ್ತರಂಗುಡುವೆನೆಂಬನಿತಱೊಳ್ ಭೀಮಸೇನನೈತರುತಿಹುದನು || (೬–೫೦)

ಶ್ರೀಕೃಷ್ಣನೂ ಪ್ರತ್ಯುತ್ತರ ಕೊಡುವಷ್ಟರಲ್ಲಿ ಭೀಮಸೇನನು ಬಂದನು. ಆಗ ಅವನನ್ನು ಒಳಗೆ ಬರದಂತೆ ತಡೆದು ಕೃಷ್ಣನು ಗಟ್ಟಿಯಾಗಿ ಸುರಿಯುತ್ತ, ತೇಗುತ್ತ ಉಣ್ಣುವುದು, ಆಗ ಭೀಮಸೇನನು 'ಆರೋಗಣೆಯಮಾರ್ಗೆ ಭೂಶಂ ಪೊಯ್ಯು | ದಾರ ನೀಮನೆಯೊಳಿಂ ತೀಗಳೇತಕೆ ಮೌನ |' ಇತ್ಯಾದಿ ವಿಚಾರಿಸಿದಾಗ ಶ್ರೀಕೃಷ್ಣನು ಮಾತನಾಡುವುದಿಲ್ಲ. ಆದರೆ—

ಭೀಮನಾಡಿದ ನುಡಿಯ ಕೇಳಿ ರುಕ್ಮಿಣಿ–ಸತ್ಯ
ಭಾಮೆಯರ ಮೊಗನೋಡಿ ನಸುನಗುತೆ ಮುರಹರಂ
ತಾಮತ್ತೆ ರಭಸದಿಂ ಭೋಜನಂಗೈಯುತೊಡನೊಡನೆ ಧರ್ರನೆ ತೇಗಲು ||

ಹೊಟ್ಟೆತುಂಬಿದ ಕೃಷ್ಣನ ತೇಗು, ಹೊರಗಿರುವ ಹಸಿದ ಭೀಮನಿಗೆ ಕೇಳುವಂತೆ ಆಗಲು ಭೀಮನು ಕೆರಳುತ್ತಾನೆ. ಶ್ರೀಕೃಷ್ಣ ಬಂದು ಅವನನ್ನು ಸಂತೈಸಿ, ಮನೆಯೊಳಗೆ ಕರೆದುಕೊಂಡು ಹೋಗುತ್ತಾನೆ.

ವಿಭಾವ : ದಾನವಂಗಿದಿರಾಗಿ ಪೋಗಿ ರಣದೊಳ್ಪ್ರಾಣ
ದಾನವಂ ಪಡೆದು ಮರಳಿದ ನನ್ನ ಸತ್ವದ ನಿ
ದಾನವಂ ತಿಳಿದಹಿತರೇಗೆಯ್ಯರಕಟ ನಿಜಶೌರ್ಯದಿಂ ಪ್ರದ್ಯುಮ್ನನ ||
ಮಾನವಂ ಭಂಗಿಸಿದೆ ನಿನ್ನಂ ಜಗದೊಳಾವ
ಮಾನವಂ ಬಣ್ಣಿಸುವನಿನ್ನು ನಿನ್ನದಟಿಗೆ ಸ
ಮಾನವಂ ಕಾಣೆನೆಂದಳ್ಸತ್ಯಭಾಮೆ ನಗುತುಱಿ ಜಱಿದು ನಿಜಪತಿಯನು ||
(೭–೫೭)

ಅನುಭಾವ : ಕಂದೆಱಿದು ವಲ್ಲಭೆಯ ನುಡಿಗೆ ಲಜ್ಜಿಸಿ ಮನಂ
ಕಂದೆ, ಕಣ್ಣಾಲಿಗಳ್ಕೆಂಪಡರೆ, ಖತಿ ಮಿಗ
ಲ್ಕಂದೆಡಬಲಂಗಳಂ ನೋಡಿ ಹರಿ ಮತ್ತೆ ರಣಕನುವಾಗುತಿರಲಿತ್ತಲು ||
(೭–೫೮)

ಎಂಬಲ್ಲಿ ಲಕ್ಷ್ಮೀಶನು ಹಾಸ್ಯರಸದ ವಿಭಾವಾನುಭಾವಗಳನ್ನು ಸೂಕ್ಷ್ಮವಾಗಿ ವಿವರಿಸಿದ್ದಾನೆ. ಹಾಸ್ಯವು ಪರಸ್ಥವಿದ್ದಾಗ ಲಜ್ಜೆ, ಕಣ್ಣಾಲಿ ಕೆಂಪಾಗುವಿಕೆ, ಖತಿ ಹೆಚ್ಚಾಗುವುದು, ಹೊರಟು ಹೋಗುವುದು ಇತ್ಯಾದಿ ಅನುಭಾವಗಳನ್ನು ಕಾಣುತ್ತೇವೆ.

ನೀಲಧ್ವಜನ ಪಟ್ಟಣಕ್ಕೆ ಅಗ್ನಿಯು ಕನ್ಯಾರ್ಥಿಯಾಗಿ ಬಂದಾಗ ಅವನು ಅಗ್ನಿ ಅಹುದೋ ಅಲ್ಲವೋ ಎಂಬ ಪರೀಕ್ಷೆ ನಡೆಯುತ್ತದೆ. ಆಗ ಅವನನ್ನು ದಿಟ್ಟಿಸಿ ನೋಡಿದ ಮಂತ್ರಿಯ ಗಡ್ಡ-ಮೀಸೆಗಳು, ಸ್ವಾಹೆಯ ಅಬಚಿಯ ಮೇಲುದ ಸುಡುವುದರ ವರ್ಣನೆ ಇದೆ. ಇವೂ ಹಾಸ್ಯವನ್ನುಂಟುಮಾಡುತ್ತವೆ. ಆದರೆ ಇದು ರಸಕ್ಕೆ ಏರುವ ಹಾಸ್ಯವಲ್ಲ.

ನರವಿನುಪವೀತದಿಂ ಕಣ್ಣಾಲಿಗಳ್ಕೋದ
ಕೊರಳತಾವಡದಿಂದೆ, ನರರ ತಲೆಗಳ ಜಪದ
ಸರದಿಂದೆ, ಪಂದೊವಲ ಧೋತ್ರದಿಂದೊಟ್ಟೆಯೆಲುಗಳ ಕುಂಡಲಂಗಳಿಂದೆ ||
ಕರಿಶಿರದ ಡೊಗೆಯ ಸಲಿಲದ ಕಮಂಡಲದಿಂದೆ
ಯುರುಗಜದ ಬೆನ್ನಸ್ಥಿಯಷ್ಟಿಯಿಂ ಸಲೆ ಭಯಂ
ಕರರೂಪನಾದ ಮೇದೋ ಹೋತನೈತಂದೊಡಿದಿರೆದ್ದನಸುರೇಂದ್ರನು || (೧೬–೨೪)

ಏನಿ ಬಿಜಯಂಗೈದಿರೆನಲಟ್ಟಹಾಸದಿಂ
ದಾನವಂಗೆಂದನೇತಕೆ ಸುಮ್ಮನಿರ್ದಪೆ ನಿ
ಧಾನವನೆಡಹಿ ಕಂಡೊಲಾಯ್ತು ನಿಮ್ಮಯ್ಯ ಬಕನಂ ಕೊಂದ ಭೀಮನೆಂಬ || (೧೬–೨೫)

ಇತ್ಯಾದಿ ವರ್ಣನೆ ಭೀಷಣನ ರಾಜ್ಯದಲ್ಲಿ ಯಜ್ಞಾಶ್ವವು ಬಂದಾಗ ಇದೆ. ಇಲ್ಲಿ ವಿದೂಷಕನ ವಿಚಿತ್ರ ವೇಷವಿಲ್ಲ. ಬೀಭತ್ಸ, ಭಯಾನಕ, ಅಟ್ಟಹಾಸದ ವಿಚಿತ್ರತೆ ಇದೆ. ಈ ವಿಚಿತ್ರತೆಯಿಂದ ಹಾಸ್ಯ, ಭಯ ಎರಡೂ ಹುಟ್ಟಬಹುದು.

## ೬. ಅದ್ಭುತ ರಸ

ಅದ್ಭುತ ರಸಕ್ಕೆ 'ವಿಸ್ಮಯ' ಎಂಬುದು ಸ್ಥಾಯೀಭಾವ :

ಅಂದು ಪೆಣ್ಣುದುರೆಯಾಗಿದ್ದ ವಿಜಯನ ವಾಜಿ
ಬಂದು ಕೊಳನಂ ಪೊಕ್ಕು ನೀರ್ಗುಡಿದು ಪುಲಿಯಾಗಿ
ಮುಂದುಗೆಡಿಸಿತು ಮತ್ತೆ ಫಲುಗುಣಂ ಕಂಡು ವಿಸ್ಮಿತನಾಗಿ ಚಿಂತಿಸಿದನು|| (೧೫–೪೩)

ನೃಪನ ಹಯಮೇಧವಿನ್ನೆಂತಹುದೊ ? ಮೂಜಗದೊ
ಳಪಹಾಸಕೆಡೆಯಾದುದಾರ ಶಾಪದ ಫಲವೊ
ವಿಪರೀತಮಿದು ಶಿವಶಿವಾಯೆನುತೆ ನಡುನಡುಗಿ ಪಾರ್ಥನತಿ ಭೀತಿಯಿಂದೆ ||
ಕಪಟದೊಳ್ಪಿಂತೆ ದುರ್ಯೋಧನಾದಿಗಳೆಸಗಿ
ದುಪಹತಿಗಳಂ ತೆಗೆಸಿ ತಲೆಗಾಯ್ದಲೈ ಕೃಷ್ಣ
ಕೃಪೆಮಾಡಬೇಹುದೆನಗೆಂದು ಮುರವೈರಿಯಂ ನೆನೆದು ಚಿಂತಿಸುತಿರ್ದನು ||

(೧೫–೩೪)

ಈ ಎರಡೂ ಪದ್ಯಗಳಲ್ಲಿ ಲಕ್ಷ್ಮೀಶನು 'ವಿಸ್ಮಯ' ಎಂಬ ಸ್ಥಾಯೀಭಾವ ಮತ್ತು ಆವೇಗ ಎಂದರೆ ಭ್ರಮೆ, ದಿಗ್ಭ್ರಮೆ (ಅರ್ಜುನನ) ಎಂಬ ಸಂಚಾರೀ ಭಾವಗಳನ್ನು ಅರಳಿಸಿ ತೋರಿಸಿದ್ದಾನೆ. ಅದ್ಭುತ ರಸಪುಷ್ಟಿಗೆ ಈ ಆವೇಗವೆಂಬ ಸಂಚಾರಿಭಾವ ಮತ್ತು ವಿಸ್ಮಯ ಎಂಬ ಸ್ಥಾಯೀಭಾವ ಪೋಷಕವಾಗಿದೆ.

ಪ್ರಮೀಳಾ ರಾಜ್ಯ ಮತ್ತು ಭೀಷಣನ ರಾಜ್ಯಗಳು ಅದ್ಭುತರಸದ ಮಡುವುಗಳು. ಮೃದು, ಕೋಮಲ ಹೃದಯದ ಸ್ತ್ರೀಯರು ರಣಾಂಗಣದಲ್ಲಿ ಹೋರಾಡುವ ಅದ್ಭುತವನ್ನು ಇಲ್ಲಿ ತೋರಿಸಲಾಗಿದೆ. ಭೀಷಣನ ರಾಜ್ಯದಲ್ಲಿ—

ಓಡಿಸಿ ಬಲೌಘಮಂ ಬೀಸಿ ಬಿಱುವೊಲೆಗಳಿಂ
ತಾಡಿಸುವ ಯೋಜನಸ್ತನಿಯನುಱೆ ಬಾಯ್ದೆಱೆದು
ನಾಡೆ ಪಡೆಯಂ ತುತ್ತುಗೊಂಬ ಲಂಬೋದರಿಯನುಳಿದಸುರಿಯರ ಕೃತ್ಯವ ||
ನೋಡಿ ವಿಸ್ಮಿತನಾಗಿ ಪೂರ್ವಮಂ ನೆನೆದು ಕೊಂ
ಡಾಡಿ ನಸುನಗುತೆ ದೆಸೆದೆಸೆಗೆ ವಾಲಾಗ್ರಮಂ
ನೀಡಿ ತೆಗೆತೆಗೆದಿಳೆಯೊಳಪ್ಪಳಿಸಿ ಕೊಂದನವರೆಲ್ಲರಂ ಕಲಿಹನುಮನು || (೧೬–೪೧)

ಎಂಬಲ್ಲಿ ಯೋಜನಸ್ತನಿ ಲಂಬೋದರಿಯರೊಡನೆ ಹನುಮನು ಮಾಡುವ ಯುದ್ಧ ಅದ್ಭುತವಾದುದು. ಈ ಅದ್ಭುತಕ್ಕೆ ಭಯಾನಕದ ಛಾಯೆ ಉಂಟು—

ಪ್ರೋಕ್ಷಿಸಿ ಕರಾಗ್ರದಿಂ ಪಿಡಿದು ಹಯದೆಡಗಿವಿಯ
ನಾಕ್ಷೋಭದಿಂ ಸೀಳಿದೊಡೆ ನೆತ್ತರಿಲ್ಲದೆ ಮ
ಹಾಕ್ಷೀರಧಾರೆ, ಪೊಱಮಟ್ಟುದು ಸಮಸ್ತ ಲೋಕಂ ಕಂಡು ಬೆಱಗಾಗಲು ||

(೩೪–೧೬)

ಬಿತ್ತರದ ಪರಿಪೂತ ವಾಜಿಶಿರಮಂ ಛೇದಿ
ಸುತ್ತಿರಲದಿಳೆಗೆ ಬೀಳದೆ ನಭಸ್ಥಳಕಡರ್ದಡಗಿತಿನ ಮಂಡಲದೊಳು || (೩೪–೧೭)

ಏವೇಳ್ವೆನಾಶ್ಚರ್ಯಮಂ ಬಳಿಕ ವಾಜಿಯ ಕ
ಳೇವರಂ ಕರ್ಪೂರವಾದುದತಿ ಶುಭ್ರದಿಂ
ಭಾವಿಸಿ ಮಹಾಮುನಿಗಳಿದು ಕೃಷ್ಣಮಹಿಮೆಯೆಂದಾಗ ವಿಸ್ಮಿತರಾಗಲು ||

(೩೪–೧೯)

"ನಡೆದುದು ಮಖಂ ತ್ರಿಜಗದ ಚರಾಚರಂ ಮಿಗೆ ತಣಿಯಲು" (೩೪–೨೨)

"ಮಖದೊಳಾ ಹಿಮಕರಾನ್ವಯ ಲಲಾಮನೆಸೆದಂ ಪೂತನಾಗಿ ಸಂತೋಷದಿಂದ"

(೩೪–೨೪)

"ಅಖಿಳ ಮುನಿಜನಮೈದೆ ಕೊಂಡಾಡಲು" (೩೪–೨೫)

ಎಲ್ಲೆಲ್ಲಿಯೂ ವಿಸ್ಮಯ ಎಂಬ ಸ್ಥಾಯೀಭಾವದ ವಿವಿಧ ಚಿತ್ರಗಳನ್ನು ಕಾಣುತ್ತೇವೆ. ಅದಲ್ಲದೆ ಹರ್ಷ ಮತ್ತು ಧೃತಿ ಎಂಬ ಸಂಚಾರೀಭಾವಗಳು ಜನರಲ್ಲಿ, ಮುನಿಗಳಲ್ಲಿ ಒಡ ಮೂಡಿದ್ದರ ಬಗ್ಗೆ ಲಕ್ಷ್ಮೀಶನು ಉಲ್ಲೇಖಿಸಿದ್ದಾನೆ.

"ತೇರಿರದೆ ತಿರ್ರನೆ ತಿಗುರಿಯಂತೆ ತಿರುಗಿತದನೇನೆಂಬೆನ**ದ್ಭುತವನು**" (೧೩–೫) ಎಂಬಂತಹ ಸಮರಾದ್ಭುತಗಳಂತೂ ಸುಧನ್ವ, ಸುರಥ, ಬಭ್ರುವಾಹನ, ತಾಮ್ರಧ್ವಜ, ವೀರವರ್ಮ ಕಥೆಗಳಲ್ಲಿ ತುಂಬಿವೆ. ಅದರ ವರ್ಣನೆ ಅಲ್ಲಲ್ಲಿ ಬಂದಿದೆ.

## ೭. ಭಯಾನಕ ರಸ

ವಿಕೃತವಾದ ಸ್ವರ, ಅಳಿದು ಹೋದ ಸತ್ತ್ವ, ಶಕ್ತಿ ಇವುಗಳಿಂದ 'ಭಯ' ಎಂಬ ಸ್ಥಾಯೀ ಭಾವವು ವಿಭಾವಿತವಾಗುತ್ತದೆ. ಸರ್ವಾಂಗಗಳ ಕಂಪನ, ಬೆವರು, ಶೋಷ, ಮನಸ್ಸು ಸ್ತಬ್ಧವಾಗುವುದು ಇತ್ಯಾದಿ ಅನುಭಾವಗಳನ್ನು ಇಲ್ಲಿ ಕಾಣಬಹುದು.

ಸುಧನ್ವನ ಮರಣದ ಮುನ್ಸೂಚನೆಯನ್ನು ಲಕ್ಷ್ಮೀಶನು—

ಹೆದಱಿತುಭಯದ ಸೇನೆ, ಕೆದಱಿತು ಸುರಸ್ತೋಮ
ಮೊದಱಿತಿನಮಂಡಲಂ, ಬೆದಱಿತು ಜಗತ್ರಯಂ
ಬಿದಿಱಿತು ಕುಲಾದ್ರಿಚಯ, ಮುದಿಱಿತುಡು ಸಂದೋಹಮದಿಱಿತಿಳೆ
ತತ್ಕ್ಷಣದೊಳು ॥ (೧೩–೪೭)

ಇಂಥ ಭಯಾನಕ ಘಟನೆಯಿಂದ ಕೊಡುತ್ತಾನೆ. ಅದರಂತೆ ಸುಧನ್ವನು ಮಡಿಯುತ್ತಾನೆ.—

ಕೆತ್ತಿದುವು ದಿಕ್ತಟದ ಭಿತ್ತಿಗಳನದ್ರಿಗಳ
ನೆತ್ತಿದುವು ಧರೆಯನುಚ್ಚಳಿಸಿ ಕೂರ್ಮನ ಬೆನ್ನ
ನೊತ್ತಿದುವು ಕಲಕಿದುವು ಸಾಗರವನಾದಿತ್ಯಮಂಡಲವನಂಡಲೆದುವು ॥
ಮುತ್ತಿದುವು ಬಾಂದಳವನೆಲ್ಲಮಂ ಕೆಲಕೆಲವು
ಪತ್ತಿದುವು ಪರಿದುವಿಳಿದುವು ಸಕಲ ಲೋಕಕ್ಕೆ
ಬಿತ್ತಿದುವು ಭೀತಿಯಂ ಬಭ್ರುವಾಹನನ ಶರಜಾಲಮದನೇವೇಳ್ವೆನು ॥ (೨೩–೩೮)

ಎಂದು ಅರ್ಜುನ–ಬಭ್ರುವಾಹನನ ಭೀಕರ ಕದನವನ್ನು ಕವಿಯು ವರ್ಣಿಸಿದ್ದಾನೆ. ಇದೇ ರೀತಿ ಶ್ಮಶಾನದ ಭೀಕರ ಚಿತ್ರವನ್ನು—

ಪಱಿದ ಪೂಮಾಲೆಗಳ ಬಣ್ಣಗೂಳ್ಗಳ ಬಲಿಯ
ಮೊಱಿದ ಪಳಗೊಳ್ಳಿಗಳ ಭಸ್ಮದೊಡೆದೋಡುಗಳ
ಮುಱಿದ ಗೂಡಂಗಳ ಕಳಲ್ದ ಶಿಬಿಕೆಗಳ ಚಿತೆಯೊಳ್ಬೇವ ಕುಣಪಂಗಳ ॥
ತುಱುಗಿದೆಲುವಿನ ಜಂಬುಕಾವಳಿಯ ಗೂಗೆಗಳ
ಬಿಱುದನಿಯ ಭೂತವೇತಾಳ ಸಂಕುಲದಡಗಿ
ನಱಿಕೆಗಳ ಸುಡುಗಾಡೊಳಾ ಮಂತ್ರಿ ಚಂಡಿಕಾಲಯದೆಡೆಗೆ ನಡೆತಂದನು ॥
(೨೧–೫೫)

ಈ ಪದ್ಯದಲ್ಲಿ ಕಾಣುತ್ತೇವೆ.

## ೮. ಕರುಣ ರಸ

ಇಷ್ಟನಾಶದಿಂದ, ಅನಿಷ್ಟ ಪ್ರಾಪ್ತಿಯಿಂದ ಉಂಟಾಗುವ 'ಶೋಕ' ಎಂಬ ಸ್ಥಾಯೀಭಾವವು ಕರುಣ ರಸಕ್ಕೆ ಕಾರಣ. ನಿಶ್ವಾಸ, ಅಳು, ಸ್ತಂಭ, ಪ್ರಲಾಪಿಸುವುದು ಈ ರಸದ ಅನುಭಾವಗಳು.

ಸುಧನ್ವನ ತಪ್ತ ತೈಲದ ದಿವ್ಯ ಮತ್ತು ಮರಣ, ಕರುಣರಸ ಅಭಿವ್ಯಕ್ತಿಯ ಪ್ರಥಮಸ್ಥಾನವಾಗಿದೆ, ಈ ಕಾವ್ಯದಲ್ಲಿ. ಸಂಧಿ-೧೩, ಪದ್ಯ-೫೩ ರಿಂದ ೬೦ರ ವರೆಗೆ— ಹಂಸಧ್ವಜನ ಪುತ್ರಶೋಕವನ್ನು ಕವಿಯು ಈ ರೀತಿಯಾಗಿ ವರ್ಣಿಸಿದ್ದಾನೆ :

ಹಾ ಪುತ್ರಯೆನುತೆತ್ತಿಕೊಂಡು ಮುಂಡಾಡಿ ಪಣೆ
ಗಾಪಣೆಯನೊಂದಿಸಿ ಪೊಸೆದು ಚೀರ್ದು ಬಹಳ ಪ್ರ
ಲಾಪದಿನಳಲ್ದಂ ಮರಾಳಧ್ವಜಂ ಪೊರೆಯ ಕಲ್ಮರಂ ಕರಗುವಂತೆ ‖ (೧೩–೫೩)

ಬೀಳ್ವೆನೋ ಶೈಲಾಗ್ರದಿಂದೆ ಕರ್ಪುಡುವಿನೊಳ
ಗಾಳ್ವೆನೋ ನಿನ್ನ ನಿಟ್ಟೆಪ ತನ್ನ ಕಂಗಳ
ಕೀಳ್ವೆನೋ ಪರಸಿ ಪಡೆಪೊಡಲನುಱಿ ಸೀಳ್ವೆನೋ ನಿನ್ನ ನುಡಿಗಳನೆಂದಿಗೆ ‖
ಕೇಳ್ವೆನೋ ಜನ್ಮ ಜನ್ಮಾಂತರದೊಳಾದೊಡಂ
ಪೇಳ್ವೆನೋ ನಿನಗೆ ಬೆಸನಂ ಮಗನೆ ಶೋಕಮಂ
ತಾಳ್ವೆನೋ ತಾನೆನ್ನೊಳುಸಿರಲಾಗದೆ ಮೌನಮೇಕಕಟ ನಿನಗೆಂದನು ‖ (೧೩–೫೪)

ಅಣ್ಣದೇವಂ ಕದನಮಂ ಜಯಿಸಿ ಬಹನೆಂದು
ಬಣ್ಣದ ಸೊಡರ್ಗಳಂ ಕೈಗೈಸುವನುಜೆಯಂ
ಹುಣ್ಣಿಮೆಯ ಶಶಿಯಂಪದಾಸ್ಯದೆಳನಗೆಯೊಳೈತಹ ನಿನ್ನವಲ್ಲಭೆಯನು ‖
ಹಣ್ಣಿದುತ್ಸಾಹಮಂ ಕೇಳ್ದು ತನ್ನೊಡಲೊಳಗೆ
ತಣ್ಣಸಂ ತಳ್ತು ಬಹ ನಿನ್ನ ನಿಜ ಮಾತೆಯಂ
ಕಣ್ಣಾರೆ ಕಾಣ್ಬೆನೆಂತಕಟ ವಿಪರೀತಮಾದೊಡೆ ತನಯ ಹೇಳೆಂದನು ‖ (೧೩–೫೭)

ಕಾಳಾದುದಕಟ ಚಂಪಕನಗರದರಸುಗಳ
ಬಾಳುವೆ ಮಹಾದೇವ ಹಾಯೆಂದೊರಲ್ದು ಪಡೆ
ಗೋಳಿಟ್ಟುದಾನೆ ಕುದುರೆಗಳೊಱಿವ ಕಂಬನಿ ಬಳಲ್ಗಿವಿಗಳಿಂ ಜೋಲ್ದುವು ‖ (೧೩–೬೦)

ಹೀಗೆ ಮಗನ ಗುಣಮಾಲೆಗಳನ್ನು ನೆನೆನೆನೆದು, ಮನೆಯ ಎಲ್ಲಾ ಜನಗಳಿಗೆ ಅವನ ಬಗೆಗಿರುವ ಪ್ರೀತಿ, ಸಂಭ್ರಮಗಳನ್ನು ಸ್ಮರಿಸಿಕೊಂಡು, ತನ್ನ ದುಃಖವನ್ನು ಹಂಸಧ್ವಜನು ತೋಡಿಕೊಳ್ಳುತ್ತಾನೆ. ಅದೇ ಸುರಥನ ಮರಣದ ಕಾಲಕ್ಕೆ ಮತ್ತೆ ಲಕ್ಷ್ಮೀಶನು ಹಂಸಧ್ವಜನ ಶೋಕವನ್ನು ವರ್ಣಿಸುತ್ತ ಕೂಡುವುದಿಲ್ಲ. ಆಗ—

ಇತ್ತಲರ್ಜುನ ಕೃಷ್ಣರಿಂದೆ ಸುರಥಂ ಮಡಿದ
ವೃತ್ತಾಂತಮಂ ಕಂಡು ಹಂಸಧ್ವಜಂ ತನ್ನ
ಚಿತ್ತದೊಳ್ಕಡುನೊಂದಳಲ್ದು ಮಿಗೆ ಮರಣಮಂ ನಿಶ್ಚೈಸಿ ರೋಷದಿಂದೆ ‖
ತತ್ತ ರಣದೊಳ್ಕಾದಿ ಮುರಹರಂ ಮೆಚ್ಚಲಾ
ನುತ್ತಮದ ಗತಿವಡೆವೆನೆಂದು ರಥವೇಱಿ ಬಾ
ಗೊತ್ತಿ ನಿಜ ಚಾಪಮಂ ಜೇಗೈದು ಪಡೆಸಹಿತ ಫಲುಗುಣಂಗಿದಿರಾದನು ‖ (೧೪–೨೪)

ಎಂದು ಹೇಳಿಕೊಂಡು ಮುಂದುವರಿಸುತ್ತಾನೆ ಕಥನವನ್ನು. ಹಂಸಧ್ವಜನ ಮನಸ್ಸು ದುಃಖದಿಂದ ಕಲ್ಲಾಗಿದೆ; ಕಠೋರವಾಗಿದೆ ಈಗ. ಅವನಿಗೆ ಅಳುವಿಗಿಂತ ರೋಷ ಹೆಚ್ಚಾಗಿ ಹೊರಚಿಮ್ಮುತ್ತದೆ. ಸುಧನ್ವನು ಮಡಿದಾಗ ಲಕ್ಷ್ಮೀಶನು ಕರುಣರಸದ **ಅನುಭಾವಗಳನ್ನು** ಚಿತ್ರಿಸಿ, ಸುರಥನ ಮರಣದ ಕಾಲಕ್ಕೆ ಔಗ್ರ್ಯ ಎಂಬ ವ್ಯಭಿಚಾರಿ ಭಾವವನ್ನು ಚಿತ್ರಿಸಿದ್ದಾನೆ. ಇದು ಪುರುಷನು ದುಃಖಿಸುವ ಬಗೆ.

ಇನ್ನು ಒಬ್ಬ ಸ್ತ್ರೀ ಪತಿಯನ್ನು ಕಳೆದುಕೊಂಡಾಗ ದುಃಖಿಸುವ ರೀತಿ ಚಿತ್ರಾಂಗದೆ ಮತ್ತು ಉಲೂಪಿಯರ ಜೀವನದ ವಿಷಗಳಿಗೆ—

ಕಾತರಿಸಿ, ಕರಗಿ, ಕಂಬನಿಯೊಳಾಳ್ದಾಗ ಶೋ
ಕಾತಿಶಯದಿಂದೆ ಪಾರ್ಥನ ಪಾದದೊಳ್ಪೊರ
ಳ್ದಾತನ ಗುಣಂಗಳಂ ಸಾಲ್ಗೊಳಿಸಿ ಬಣ್ಣಿಸಿ ಪೊರಳ್ದು ಗೋಳಿಡುತಿರ್ದರು ||
(೩೩-೫೮)

ಅಡಿಯೊಳ್ಪೊರಳ್ದು ಕಾಯವನಪ್ಪಿ ಕೈಗಳಂ
ಪಿಡಿದುರಸ್ಥಳಕೆ ತೆಗೆದೊಂದಿಸಿ ಕೊರಲ್ಗೆ ಕಡಿ
ವಡೆದ ತಲೆಯಂ ಕೂಡಿ ನೋಡಿ ಮುಂಡಾಡಿ ಪಣೆಗಿಟ್ಟು ಮೊಗಮಂ ಚುಂಬಿಸಿ ||
ಒಡನೊಡನೆ ಪಾರ್ಥನ ಚರಿತ್ರಮಂ ಸಾಲ್ಗೊಳಿಸಿ
ನುಡಿನುಡಿಗಳಲ್ಲು ಕೆಲದೊಳ್ಕಡೆದ ಕರ್ಣಜಂ
ಗೊಡಲುರಿಯೊಳಕಟ ಸುತ ಹಾಯೆಂದು ಮರುಗಿದರುಲೂಪಿ
ಚಿತ್ರಾಂಗದೆಯರು || (೩೩-೬೦)

ಹಿಂದಿನ ಹಂಸಧ್ವಜನ ಶೋಕ (೧೩-೫೩) ಮತ್ತು ಈ ಉಲೂಪಿ-ಚಿತ್ರಾಂಗದೆಯರ ಶೋಕಗಳ ಅನುಭಾವಗಳನ್ನು ಸೂಕ್ಷ್ಮದೃಷ್ಟಿಯಿಂದ ನೋಡಿದರೆ ಗಂಡುಗರುಳಿನ ಹಾಗೂ ಹೆಂಗರುಳಿನ ಶೋಕದ ರೀತಿಯಲ್ಲಿಯ ಭೇದವು ಎದ್ದು ಕಾಣುತ್ತದೆ. ೧೩-೫೩ ರಲ್ಲಿಯ 'ಅಡಿಯೊಳ್ಪೊರಳ್ದು, ಕಾಯವನಪ್ಪಿ' ಮೊದಲಾದ ಅನುಭಾವಗಳ ವರ್ಣನೆ ಇಲ್ಲ. ಇದು ಕವಿಯ ಲೋಕಾನುಭವದ ಸೂಕ್ಷ್ಮದರ್ಶನದ ಪ್ರತೀಕವಾಗಿದೆ—

ಸೆಳೆದು ಪೊಡೆ ಖಡ್ಗದಿಂದೆಮ್ಮೀ ಶಿರಂಗಳಂ
ಬಳಿಕ್ಕೈದೆ ಭಾರ್ಗವಂ ಕೊಂದುದಿಲ್ಲವೆ ತಾಯ
ನಳುಕದಿರ್ಪಿತನ-ಮಾತೃದ್ವಯದ ವಧೆ ನಿನಗೆ ಸಫಲಮಾದಪುದೆಂದಳು|| (೩೩-೬೨)

ಎಂಬಲ್ಲಿ ಶೋಕಾವೇಶವಿದೆ. ಇದು ಅಪಸ್ಮಾರ ಸಂಚಾರಿ ಭಾವದ ಲಕ್ಷಣ. ಇದರಿಂದ ಬಭ್ರುವಾಹನನ ಮನಸ್ಸಿನ ಮೇಲೆ ಪರಿಣಾಮವಾಗಿ ಅವನೂ ಅಗ್ನಿಪ್ರವೇಶ ಮಾಡುವುದಾಗಿ ನಿಶ್ಚಯಿಸುತ್ತಾನೆ.

ಮಱುಗಿದಂ ಮೈದುನಂಗಸುರಾರಿ ಮಾನವರ
ತೆಱದಿಂದೆ, ದೇವಕಿ-ಯಶೋದೆಯರ್ವೆರಸಿ ಮೈ
ಮಱೆದಳಾ ಕುಂತಿ ನಿಜತನಯನಿರವಂ ಕಂಡು ಶೋಕದಿಂದಾಕ್ಷಣದೊಳು ||
ಕಱೆದುವಶ್ರುಗಳಾ ವೃಕೋದರನ ಕಂಗಳಿಂ
ತುಱುಗಿತಳಲೊಡಲೊಳ್ಸಹೋದರನ ಮರಣದೊ
ಳ್ಪೊಱಗೆಗಿರ್ಪಂ ಕೃಷ್ಣನೆಂದು ಮನದೊಳ್ತಿಳಿದು ಕಲಿಭೀಮನಿಂತೆಂದನು|| (೨೪-೫೨)

ಈ ಪದ್ಯದಲ್ಲಿ ಕೃಷ್ಣನಿಂದ ಭೀಮನವರೆಗೆ ಯಾರ ಯಾರ ಸ್ಥಿತಿ ಎಂತೆಂತಾಯಿತು ಎಂಬುದರ ವಿವರಣೆ ಇದೆ.—

ಮೀಂಟುವಗ್ಗದ ಶೋಕದಿಂದಿರದೆ ಪೊಱಮಟ್ಟು
ನಾಂಟುವೊತ್ತುವ ಮುಳ್ಳು ಕಲ್ಗಳಂ ಬಗೆಗೊಳದೆ
ದೀಂಟಿಗುಳಿಗಳನಱಿಯದೇಳುತ್ತೆ ಬೀಳುತ್ತೆ ತಲೆಗೆದರಿ ಬಾಯ್ಬಿಡುತ್ತೆ ॥
ಕೋಂಟೆಗಳನೇಱಿಳಿದು ಪರಿಖೆಯ ಜಲಂಗಳಂ
ದಾಂಟಿ ಕತ್ತಲೆಯೊಳೊರ್ವನೆ ಮಂತ್ರಿ ಪೊಳಲ ಪೊಱ
ದೋಂಟದೆಡೆಯೊಳ್ನೆಲಸಿದಂಬಿಕಾಭವನಮಂ ಸಾರ್ದನದನೇವೇಳ್ವೆನು ॥ (೩೧–೫೪)

ದುಷ್ಟಬುದ್ಧಿಗೆ ಅವನ ದುಷ್ಟತನದ ಪ್ರತಿಫಲವಾಗಿ ಬಂದ ಶೋಕದ ವರ್ಣನೆ ಇದು :

ಪಾಕಶಾಸನ ತನಯ ಕೇಳ್ಬಳಿಕ ಮಂತ್ರಿಸುತ
ಶೋಕದಿಂದಲ್ಲಿಹ ಮರುಳ್ಗಳಂ ಕಾಣದ ವಿ
ವೇಕದಿಂ ಬೇವ ಕುಣಪದ ಚಿತಿಯೊಳುರಿವ ಕಾಷ್ಠಂಗಳಂ ತೆಗೆದುಕೊಂಡು ॥
ಆ ಕಾಳಿಕಾಲಯಕೆ ಬಂದದಱ ಬೆಳಕಿನೊ
ಳ್ವ್ಯಾಕೀರ್ಣ ಕೇಶದ ನಿಮಿರ್ದ ಕೈಕಾಲುಗಳ
ನೇಕಾಯುಧದ ಗಾಯದೊಡಲ ರುಧಿರ ಪೊನಲ ಸುಕುಮಾರನಂ ಕಂಡನು ॥
(೩೧–೫೭)

ಎಂಬಲ್ಲಿ ದುಷ್ಟಬುದ್ಧಿಯ ವಿವೇಕಶೂನ್ಯತೆಯ ಚಿತ್ರಣವಿದೆ. ಇದು ಉನ್ಮಾದ ಎಂಬ ಸಂಚಾರೀ ಭಾವ.

ಕಯ್ಯೊಳಿಹ ಕಾಷ್ಠಂಗಳಂ ಬಿಸುಟು ತನುಭವನ
ಮೆಯ್ಯ ಗಾಯಂಗಳಂ ತಡಹಿ ತಕ್ಕೈಸಿ ಮಗು
ಳ್ದೊಯ್ಯನೊಯ್ಯನೆ ಕುಳ್ಳಿರಿಸಿ ಮೊಗಕೆ ಮೊಗವಿಟ್ಟು ಚುಂಬಿಸಿ ಕುಮಾರ ನಿನ್ನ ॥
ಅಯ್ಯನಾಂ ಬಂದೆನೇಳ್ಕೈ ತಂದೆ ನಾಡ ನಾ
ರಯ್ಯ ಬೇಡವೆ ಕಂದ ಕುಂತಳಾಧೀಶನೇ
ಗೆಯ್ಯ ಹೇಳಿದನೆನಗೆ ವಿವರಿಸದೆ ಸುಮ್ಮನಿರ್ದಪೆಯೆಂದೊರಲ್ದನವನು ॥ (೩೧ ೫೯)

ಮುಂತಾಗಿ ದುಃಖಪಡುತ್ತ ಕೊನೆಗೆ—

ಕಂಬನಿಗಳರುಣಾಂಬುವಂ ತೊಳೆಯೆ ಮುಂಡಾಡಿ
ಹಂಬಲಿಸಿ ಹಲುಬಿದಂ ಮಱುಗಿ ತನ್ನಿಂದಳಿದ
ನೆಂಬಳಲ್ಮಿಗೆ ಮಂತ್ರಿ ಸೈರಿಸದೆ ಕೆಲಬಲದ ಕಂಬಂಗಳಂ ಪಾಯಲು ॥
ಕುಂಬಳದ ಕಾಯಂತೆ ಚಿಪ್ಪಾಗಿ ನಿಜ ಮಸ್ತ
ಕಂ ಬಿರಿದು ಬಿದ್ದನುರ್ವಿಗೆ ಪೋದುದಸು ಕಾಯ
ದಿಂ ಬಳಿಕ ನಂದಿದ ಸೊಡರ್ಗಳೆನೆ ಮೃತರಾಗಿ ಸುತ–ತಾತರಿರುತಿರ್ದರು ॥ (೩೧–೬೨)

ದುರಂತ ಮರಣಕ್ಕೆ ಶರಣುಹೋಗುತ್ತಾನೆ ಶೋಕೋಃನ್ಮತ್ತ ದುಷ್ಟಬುದ್ಧಿ.

ವೃಷಕೇತುವಿನ ಮರಣದಿಂದ ಅರ್ಜುನನಿಗೆ ದುಃಖವಾಗಿ ಅದರಿಂದ ಕ್ರೋಧೋದ್ವಿಗ್ನನಾಗಿ ಅವನು ಬಭ್ರುವಾಹನನೊಂದಿಗೆ ಹೋರಾಡುತ್ತಾನೆ.

ಕರುಣದಲ್ಲಿ ಭಕ್ತಿ : ಅರ್ಜುನ-ವೃಷಕೇತು ಇವರನ್ನು ಪುನಃ ಎಬ್ಬಿಸಿದ ಶಕ್ತಿ —ಕೃಷ್ಣಪ್ರೇಮ ಮತ್ತು ಕೃಷ್ಣಭಕ್ತಿ. ದುಷ್ಟಬುದ್ಧಿ ಮತ್ತು ಮದನನನ್ನು ಎಬ್ಬಿಸಿದವನು—ಶ್ರೀಕೃಷ್ಣಭಕ್ತ ಶ್ರೇಷ್ಠನಾದ ಚಂದ್ರಹಾಸ. ಅಂದರೆ ಭಕ್ತರಿಗೆ ಕಷ್ಟಗಳಿಲ್ಲ, ದುಃಖವಿಲ್ಲ. ಇಷ್ಟೇ ಏಕೆ ಮರಣ ಬಂದರೂ ದೇವಶಕ್ತಿ ಅವರನ್ನು ಎಬ್ಬಿಸುತ್ತದೆ ಎಂಬುದನ್ನು ಇಲ್ಲಿ ಸೂಚಿಸಲಾಗಿದೆ.

## ೯. ಶಾಂತರಸ

ಶಾಂತರಸಕ್ಕೆ ಶಮವೇ ಸ್ಥಾಯೀಭಾವ. ಬಕದಾಲ್ಭ್ಯ ಮುನಿಯು ಶಮದ ಸಾಕಾರಮೂರ್ತಿ. ಅವನ ಚಿತ್ರಣವನ್ನೇ ಲಕ್ಷ್ಮೀಶನು ಶಾಂತರಸ ಅಭಿವ್ಯಕ್ತಿಗೆ ತೆಗೆದುಕೊಂಡಿದ್ದಾನೆ.

ಸಾಗರದ ನಡುವೆ ಕುರ್ವಕೆ ವರಹಯಂಗಳತಿ
ವೇಗದಿಂದೈದಲದಱಿಂದೊಡನೆ ಪಾರ್ಥಾದಿಗ
ಳ್ಪೋಗಿ ಬಕದಾಲ್ಭ್ಯ ಋಷಿಯಂ ಕಂಡರಲ್ಲಿ ಕಣ್ಣೆವೆಗಳಂ ಮುಚ್ಚಿಕೊಂಡು ||
ಯೋಗದಿಂದಿರುತಿರ್ದನಧ್ರುವದ ಕಾಯಮಂ
ಸಾಗಿಸಲದೇಕೆಂದು ಕೊಳತೊಣಗಿ ಥಿಸ್ಸಂಗ
ಳಾದ ಸೆಲದಿಗಳಿಕ್ಕಿದಾಲದೆಲೆಯಂ ತನ್ನ ತಲೆಮಱೆಗೆ ಕಯ್ಯೊಳಾಂತು || (೩೨-೨೫)

ಬಕದಾಲ್ಭ್ಯನಿರುವುದು ವನ, ಕಟ್ಟರಣ್ಯಗಳಂತಹ ಶಾಂತಸ್ಥಳವಲ್ಲ. ಇವನಿರುವುದು ಸಾಗರದ ನಡುವಿನ ಕುರುವ. ಅಲ್ಲಿ ಯಾರೂ ಬದುಕುವುದೇ ಸಾಧ್ಯವಿಲ್ಲ. ಅಂಥಲ್ಲಿ ಯೋಗದಿಂದ ಬಕದಾಲ್ಭ್ಯನು ಶಮಭಾವದಲ್ಲಿ ಇದ್ದಾನೆ.

ಅತ್ಯಲ್ಪರಾಗಿ ಮಾರ್ಕಂಡೇಯ ರೋಮಶ
ಪ್ರತ್ಯೇಕರಳಿದರಿವರೆನಿಬರೆಂದಱಿಯೆನಾಂ
ಸತ್ಯಲೋಕವನಾಳ್ದರಿಪತ್ತು ಕಮಲಸಂಭವರಿನಿತಱಿಕೊಳ್ಮಡಿದರು ||
ಕ್ಷಿತ್ಯಾದಿಗಳ್ ಜಲಮಯಂಗಳಪ್ಪಂದಾಥಿ
ಪತ್ಯದ ಚತುರ್ವದನರವಸಾನವಾದಂದು
ನಿತ್ಯಮಾಗಿರವು ಪದವಿಗಳೆಂದು ತಾನಿಲ್ಲಿ ಬಯಲೊಳಿದ್ದಪೆನೆಂದನು || (೩೨-೩೧)

ಎಂದು ಹೇಳಿ ಬಕದಾಲ್ಭ್ಯನು ತಾನು ಕಂಡ—ಪ್ರಳಯಕಾಲದ ವಟಪತ್ರಶಾಯಿ ಬಾಲ ಕೃಷ್ಣನಿಂದ ಹಿಡಿದು ಚತುರ್ಮುಖ ಬ್ರಹ್ಮ, ಸಹಸ್ರಮುಖ ಬ್ರಹ್ಮನವರೆಗಿನ ದರ್ಶನವನ್ನು ಅರ್ಜುನನಿಗೆ ವಿವರಿಸುತ್ತಾನೆ.

ಶಾಂತರಸದಲ್ಲಿ ಭಕ್ತಿ :

ಅಂದು ಸಲಿಲದೊಳಾಳ್ದತನಗಾಲದೆಲೆಯ ಮೇ
ಲೊಂದೊಂದು ಬಾರಿ ಬಾಲಕನಾಗಿ ಮೈದೋಱಿ
ನಿಂದು ಮಾತಾಡಿಸದೆ ನೋಡದೆ ವಿಚಾರಿಸದೆ ದೂರದೂರದೊಳಿರ್ಪನು ||
ಇಂದು ನಿಮ್ಮೆಯ್ವರಂ ಕೂಡಿಕೊಂಡಿಲ್ಲಿಗೈ
ತಂದು ಕರುಣಿಸಿದನೀ ಹರಿ ಕೃಷ್ಣರೂಪದಿಂ
ಸಂದುದಿನ್ನೀತನೆ ಸದಾಶ್ರಯಂ ಮಱವುಗುವೊಡೆನಗೆಂದು ಮುನಿನುಡಿದನು || (೩೨-೩೩)

..................ಹರ್ಷದಿಂ ಬಕದಾಲ್ಭ್ಯ ಶಿ
ಮುನಿಬಂದು ಕೃಷ್ಣನಂ ತಕ್ಕೈಸಿ ಮತ್ತೆ ಪಾ
ರ್ಥನ ಕೂಡೆ ಪೇಳ್ದಂ ಸದಾವಾಸಕೀ ಹರಿಯ ದೇಹವಿದು ಗೇಹಮೆನಗೆ ||
ಅನುಕೂಲೆಯಾದ ಸತಿ ಮುಕ್ತಿಯಲ್ಲದೆ ಬೇಱೆ
ಮನೆಯಿಲ್ಲ ಮಡದಿಯಿಲ್ಲದಕಾಗಿ ತಾನೀಸು
ದಿನಮಿಲ್ಲಿ ತಲೆಗೆ ತರಗೆಲೆವಿಡಿದುಕೊಂಡಿರ್ದೆನೆನಲರ್ಜುನಂ ನುಡಿದನು || (೩೨–೩೫)

ಮುಂತಾಗಿ ಬಕದಾಲ್ಭ್ಯಮುನಿಯು ತನ್ನ ಕೃಷ್ಣಭಕ್ತಿಯನ್ನೇ ವ್ಯಕ್ತಪಡಿಸುತ್ತಾನೆ. ಯೋಗಧ್ಯಾನಕ್ಕಿಂತ ಶ್ರೀಕೃಷ್ಣನ ಸಹವಾಸವನ್ನು ಬಯಸಿ, ಶಿಬಿಕಾರೋಹಣಂಗೈದು ಶ್ರೀಕೃಷ್ಣಾರ್ಜುನರೊಂದಿಗೆ ಬಕದಾಲ್ಭ್ಯನು ಹಸ್ತಿನಾವತಿಯತ್ತ ಧರ್ಮಯಜ್ಞಕ್ಕಾಗಿ ನಡೆಯುತ್ತಾನೆ.

ದೇವ ನಿಮ್ಮಡಿಯ ಕಾರುಣ್ಯವೊಂದುಳ್ಳೊಡೆ ಸ
ದಾ ವಿಜಯರಾವದಾರಿದ್ದೇನ ಮಾಳ್ಪರರಿ
ದಾವುದೊಲಿದೆನ್ನನುದ್ಧರಿಸವೇಳ್ಕೆಂದು ನೃಪನಚ್ಯುತನ ಪದಕೆಱಗಲು ||
ಭೂವರನ ಮಕುಟಮಂ ಪಿಡಿದೆತ್ತಿ ರಾಜ ವಂ
ಶಾವಳಿಯೊಳುಂಟೆ ನಿನ್ನಂದದರಸಿನ್ನು ನಿನ
ಗೀ ವಾಜಿಮೇಧಮೇನಚ್ಚಱಿಯೆ ಕೈಕೊಳಾವಿರ್ದು ನಡೆಸುವೆವೆಂದನು || (೨–೬೩)

ಎಂಬ ಪದ್ಯದಲ್ಲಿ ಧರ್ಮಾದಿಗಳ ಕೃಷ್ಣಭಕ್ತಿ ಮತ್ತು ಶ್ರೀಕೃಷ್ಣನಿಂದ ಯಜ್ಞಕ್ಕೆ ಒಪ್ಪಿಗೆ ದೊರೆತು ಕಾವ್ಯವು ಪ್ರಾರಂಭವಾಗಿ,

ನಯದೊಳರಸಂ ಬಳಿಕ ಭೂಪಾಲ ಮುನಿವರ ನಿ
ಚಯದಿಂದೆ ಸಕಲ ಜನಜಾಲದಿಂದೆಸೆವ ಮಣಿ
ಮಯ ಸಭಾಮಧ್ಯದೊಳ್ದಿವ್ಯ ಸಿಂಹಾಸನದ ಮೇಲೆ ಮುರಹರನನಿರಿಸಿ ||
ಪ್ರಿಯದಿಂದಲಂಕಾರ ಪೂಜೆಗಳೊಳುಪಚರಿಸಿ
ಹಯಮೇಧ ಫಲವನಚ್ಯುತಕರದೊಳೀಯಲ್ಕೆ
ಜಯಜಯೆಂದುದು ಲೋಕವರಳಮಳೆಕಱೆದು ಮೊಳಗಿದುವು ಸುರದುಂದುಭಿಗಳು ||
(೩೪–೩೧)

ಯಜ್ಞಫಲವನ್ನೂ ಶ್ರೀಕೃಷ್ಣನಿಗೆ ಅರ್ಪಿಸುವ ಭಕ್ತಿಯಿಂದ ಕಾವ್ಯವು ಮುಕ್ತಾಯಗೊಳ್ಳುತ್ತದೆ. ಭಕ್ತಿರಸದಿಂದ ಪ್ರಾರಂಭವಾಗಿ ನವರಸಗಳೊಳಗೆ ವಿಲಾಸಹೊಂದಿ ಭಕ್ತಿರಸದಲ್ಲಿಯೇ ಕಾವ್ಯವು ಮುಕ್ತಾಯ ಹೊಂದುತ್ತದೆ. ಆದುದರಿಂದ ಇದೊಂದು **ರಸಚಕ್ರ**ವಾಗಿದೆ.

## ಊಹಾಚಿತ್ರದ ಸಂಖ್ಯೆಗಳು ಸೂಚಿಸುವದೇನನ್ನು ?

೧. ಶ್ರೀಕೃಷ್ಣ
೨. ಅಶ್ವ
೩. ಹಸ್ತಿನಾವತಿ
೪. ಮರುತ್ತನ ಕಥೆ
೫. ಧರ್ಮರಾಜನಿಗೆ ವ್ಯಾಸರಿಂದ ಉಪದೇಶ

| | |
|---|---|
| ೬. ಸೌಭರಿಯ ಕಥಾನಕ | ೧೮. ಭೀಷಣ |
| ೭. ಚಂಡಿಯ ಕಥಾನಕ | ೧೯. ಬಭ್ರುವಾಹನ |
| ೮. ಪಾರಿಪ್ಲವ, ಪಾರ್ವತಿಯ ತಪಸ್ಸು | ೨೦. ಪಾತಾಳ ಲೋಕ |
| ೯. ದ್ವಾರಕಾ | ೨೧. ರಣಾಂಗಣ |
| ೧೦. ಯೌವನಾಶ್ವ | ೨೨. ರಾಮಾಯಣ |
| ೧೧. ಅನುಸಾಲ್ವ | ೨೩. ಮಯೂರಧ್ವಜ |
| ೧೨. ಸರಪಣಿ | ೨೪. ವೀರವರ್ಮ |
| ೧೩. ನೀಲಧ್ವಜ | ೨೫. ದುಶ್ಯಳೆ |
| ೧೪. ಹಂಸಧ್ವಜ | ೨೬. ಯಜ್ಞಸಿದ್ಧತೆ |
| ೧೫. ಸುಧನ್ವ | ೨೭. ಯಜ್ಞ ಮುಕ್ತಾಯ |
| ೧೬. ಸುರಥ | ೨೮. ಚಂದ್ರಹಾಸ |
| ೧೭. ಪ್ರಮೀಳೆ | ೨೯. ಬಕದಾಲ್ಭ್ಯ |

### ಕಾವ್ಯದಲ್ಲಿಯ ಐಕ್ಯವಿಚಾರ

ಅರಿಸ್ಟಾಟಲನು ನಾಟ್ಯವಾಙ್ಮಯದ ಬಗ್ಗೆ ಬರೆಯುವಾಗ ನಾಟಕದ ದೃಷ್ಟಿಯಿಂದ ವಸ್ತ್ವೈಕ್ಯ, ಸ್ಥಳೈಕ್ಯ ಮತ್ತು ಕಾಲೈಕ್ಯವಿರಬೇಕು ಎಂದು ಹೇಳಿದ್ದಾನೆ. ಕಥಾನಕವು ಒಂದೇ ಸ್ಥಳದಲ್ಲಿ, ಒಂದು ಸೂರ್ಯನ ಸುತ್ತು (೨೪ ತಾಸು) ಮುಗಿಯುವುದರಲ್ಲಿ ಮುಗಿಯುವಂತಹ ಪರಿಣಾಮಕಾರಿಯಾದಂಥ ಕಥಾವಸ್ತುವಿದ್ದರೆ ಮಾತ್ರ ಐಕ್ಯತ್ರಯ ಗಳನ್ನು ಸಾಧಿಸುವುದು ಸಾಧ್ಯವೆಂದು ಅವನು ಹೇಳುತ್ತಾನೆ. ಕ. ಜೈ. ಭಾರತದಲ್ಲಿ ಒಂದು ವರ್ಷ ಕಾಲಾವಧಿಯಿದ್ದು, ಯಜ್ಞಾಶ್ವ ಪರಿಭ್ರಮಣವು ಕಥಾವಸ್ತುವಿನ ಒಂದು ಪ್ರಮುಖ ಅಂಶವಾಗಿದ್ದರಿಂದ ಅರಿಸ್ಟಾಟಲನು ಹೇಳುವಂತಹ ಐಕ್ಯತ್ರಯಗಳನ್ನು ಕಾಣು ವುದು ಸಾಧ್ಯವಿಲ್ಲ.

ಕನ್ನಡ ಜೈಮಿನಿ ಭಾರತದಲ್ಲಿ ಉದ್ದಿಷ್ಟ ಪರಿಣಾಮವನ್ನು **ಸಮಷ್ಟಿ ಪರಿಣಾಮ ಪದ್ಧತಿಯಿಂದ** ಸಾಧಿಸುವ ಒಂದು ಐಕ್ಯ ತತ್ತ್ವವನ್ನು ನಾವು ಕಾಣಬಹುದು. ಒಬ್ಬ ಶಿಲ್ಪಿಯ ಅಥವಾ ಚಿತ್ರಕಾರನ ದೃಷ್ಟಿಯು ಸ್ಥಿರವಾದಾಗ ಅವನಿಂದ ಒಂದು ಉತ್ತಮ ಶಿಲ್ಪಕೃತಿ ಅಥವಾ ಚಿತ್ರದ ನಿರ್ಮಾಣವಾಗುತ್ತದೆ. ದೃಷ್ಟಿಕೇಂದ್ರವನ್ನು ಬದಲಾಯಿಸುತ್ತ ಬೇರೆ ಬೇರೆ ಅಂಶಗಳನ್ನು ಕಾಣುತ್ತ, ಎಲ್ಲವನ್ನೂ ಒಟ್ಟಿಗೆ ಗ್ರಹಿಸಲು ಅನುಕೂಲಿಸು ವಂತೆ ವಿವರಗಳನ್ನು ಚಿತ್ರಿಸುವ ಒಂದು ಪದ್ಧತಿಯೂ ಉಂಟು. ಆ ಪದ್ಧತಿಯನ್ನು ಕವಿ ಲಕ್ಷ್ಮೀಶನು ಅವಲಂಬಿಸಿದ್ದಾನೆ ಎಂದು ಹೇಳಬಹುದು. ಇಲ್ಲಿ ಹಂಪೆಯ ಹಜಾರರಾಮ ಗುಡಿಯನ್ನು ಉದಾಹರಣೆಗೆ ತೆಗೆದುಕೊಳ್ಳಬಹುದು. ಅಲ್ಲಿ ಗುಡಿಯ ಹೊರಗಿನ ವಲಯ ದಲ್ಲಿ ಭಿತ್ತಿಚಿತ್ರದಲ್ಲಿ ರಾಮಾಯಣ ಕಥೆಯನ್ನು ಕೆತ್ತಲಾಗಿದೆ. ಒಳಗಿನ ಭಾಗದಲ್ಲಿ ದೇವಾಲಯದ ಹೊರಗೆ ಗೋಪುರದ ಕಡೆಗೆ ಬೇರೆ ಬೇರೆ ಶಿಲ್ಪಕೃತಿಗಳು ಇವೆ. ಹೀಗೆ

ಭಿನ್ನ ಭಿನ್ನ ಶಿಲ್ಪಕೃತಿಗಳಿರುವುದರಿಂದ ಶಿಲ್ಪಕಲಾಕೃತಿಯಲ್ಲಿ ಐಕ್ಯತತ್ತ್ವವಿಲ್ಲ ಎಂದು ಆರೋಪಿಸಬಹುದೇ? ಇಲ್ಲ. ಇಲ್ಲಿಯು ಐಕ್ಯ, ಭಿನ್ನತ್ವದಲ್ಲಿ ಐಕ್ಯಸಾಧನೆ ಎಂದು ಬೇಕಾದರೆ ಹೇಳಬಹುದು. ಅದರಂತೆ ಕವಿ ಲಕ್ಷ್ಮೀಶನ ಜೈಮಿನಿ ಭಾರತದ ಶಿಲ್ಪ ಸೌಂದರ್ಯವು ಹೇಗೆ ಕಾಣಬಹುದು ಎಂಬ ಊಹಾಚಿತ್ರವನ್ನು ಈ ಲೇಖನದ ಕೊನೆಯಲ್ಲಿ ನೋಡ ಬಹುದು.

ಯೋಧನ ದೃಷ್ಟಿಯು ಸ್ಥಿರವಾದಾಗ ಇಟ್ಟಗುರಿಗೆ ಬಾಣವು ತಾಕುತ್ತದೆ. ಹಾಗೆ ಕವಿ ಲಕ್ಷ್ಮೀಶನ ದೃಷ್ಟಿಯು ಶ್ರೀಕೃಷ್ಣನ ಮೇಲೆ ಸ್ಥಿರವಾಗಿದೆ :

ವಿದಿತ ವೇದಾರ್ಥವಂ ವಿಷ್ಣುವೆಂದಱಿದು ಬಹು
ವಿಧ ಶಾಸ್ತ್ರತತಿ ಹರಿಯ ಗತಿಯೆಂದು ತಿಳಿದು ತಾ
ನಧಿಕರಿಸಿ ಬಳಿಕ ನಿಜಭಕ್ತಿಚಾಪಕೆ ಸತ್ತ್ವಗುಣವನಳವಡಿಸಿ ತನ್ನ ||
ಸುಧಿಯ ಶರವಂ ಪೂಡಿ ಕೃಷ್ಣನಂ ಗುಱಿಮಾಡಿ
ವಿಧುಹಾಸನನುಪಮ ಧನುರ್ವಿದ್ಯೆಯಂ ಜಗದೊ
ಳಧಿಕತರಮಾಗೆ ಸಾಧಿಸಿ ಪರಮಭಾಗವತ ಕಲೆಗಳಿಂದೆಸೆದಿರ್ದನು || (೨೯–೮)

ಈ ಚಂದ್ರಹಾಸನ ವಿದ್ಯಾಭ್ಯಾಸ ವರ್ಣನೆಯಲ್ಲಿ ಕವಿ ಲಕ್ಷ್ಮೀಶನ ಕಾವ್ಯರಚನೆಯ ದೃಷ್ಟಿಕೋನ ಮೇಲ್ಕಾಣಿಸಿದಂತೆ ವ್ಯಕ್ತವಾಗಿದೆಯೆಂದು ಹೇಳಬಹುದು. ಕವಿ ಲಕ್ಷ್ಮೀಶನು ಕಾವ್ಯಮುಖದಿಂದ ಯಾವ ಉದ್ದಿಷ್ಟ ಪರಿಣಾಮವನ್ನು ಅಪೇಕ್ಷಿಸುವ ನೆಂದರೆ—ಭಕ್ತರಲ್ಲಿ ಭಕ್ತಿಯ ಬೆಳವಣಿಗೆ. ಆದುದರಿಂದ ಭಕ್ತಿಯ ಅನೇಕಮುಖ ಗಳನ್ನು ಬೇರೆ ಬೇರೆ ಕಥಾನಕಗಳ ಮುಖಾಂತರ ತೋರಿಸಿದ್ದಾನೆ.

ಚಿತ್ರಸೂಚಿಯಲ್ಲಿರುವ ಊಹಾಚಿತ್ರವನ್ನು ನೋಡಿರಿ. ಕವಿ ಲಕ್ಷ್ಮೀಶನ ದೃಷ್ಟಿ ಸ್ಥಿರವಾಗುವುದು ಕೃಷ್ಣಭಕ್ತಿಯಲ್ಲಿ, ಮತ್ತು ಕಾವ್ಯದಲ್ಲಿಯ ಅನೇಕ ಕಥಾನಕಗಳಲ್ಲಿ ಕೃಷ್ಣದರ್ಶನ, ಕೃಷ್ಣ ಸಾಮೀಪ್ಯ, ಕೃಷ್ಣ ಸಾಯುಜ್ಯವೇ ಫಲ. ಆದ್ದರಿಂದ ಊಹಾ ಚಿತ್ರದ ಮಧ್ಯಭಾಗದಲ್ಲಿ ಶ್ರೀಕೃಷ್ಣನ ಚಿತ್ರವನ್ನು (೧) ಹಾಕಿದ್ದೇವೆ. ಶ್ರೀಕೃಷ್ಣನು ಯಜ್ಞಕ್ಕೆ ಅಧಿಪತಿ. ಯಜ್ಞಕ್ಕೆ ಯಜ್ಞಾಶ್ವವು ಸಾಧನ. ಯಜ್ಞಾಶ್ವದ ಬಂಧ ಮತ್ತು ವಿಮೋಚನೆಯೆ ಈ ಕಾವ್ಯದಲ್ಲಿಯ ಎಲ್ಲ ಕಥಾನಕಗಳಲ್ಲಿಯ ಮುಖ್ಯ ಘಟನೆ. ಯಜ್ಞಾ ಶ್ವವು ಸಾಧನ; ಶ್ರೀಕೃಷ್ಣನು ಸಾಧ್ಯ. ಆದುದರಿಂದ ಶ್ರೀಕೃಷ್ಣನ ಎದುರು ಅಶ್ವದ (೨) (ಯಜ್ಞಾಶ್ವದ) ಚಿತ್ರವನ್ನು ತೋರಿಸಿದ್ದೇವೆ.

ಹಸ್ತಿನಾವತಿ (೩), ಮರುತ್ತನ ಕಥೆ (೪), ಧರ್ಮೋಪದೇಶ (೫), ಸೌಭರಿ (೬) ಮತ್ತು ಚಂಡಿಯ ಕತೆ (೭), ಪಾರಿಪ್ಲವ, ಪಾರ್ವತಿಯ ತಪಸ್ಸು (೮), ಮತ್ತು ದ್ವಾರಕೆ ಯಲ್ಲಿ ಕೃಷ್ಣ (೯), ಈ ಕಥಾನಕಗಳಲ್ಲಿ ಶ್ರೀಕೃಷ್ಣನನ್ನು ಸಾಧ್ಯಮಾಡಿಕೊಳ್ಳುವುದು ಮುಖ್ಯ ಸೂತ್ರವಲ್ಲ. ಆದುದರಿಂದ ಆ ಕಥಾನಕಗಳನ್ನು ಶ್ರೀಕೃಷ್ಣಮಂದಿರದ ಹೊರ ವಲಯ (ಪೌಳಿ)ದಲ್ಲಿ ತೋರಿಸಿದ್ದೇವೆ. ಯೌವನಾಶ್ವ (೧೦) ಮತ್ತು ಅನುಸಾಲ್ವ (೧೧) ಈ ಎರಡು ಕಥಾನಕಗಳನ್ನು ಪ್ರವೇಶದ್ವಾರದ ಕಂಭಗಳಂತೆ ತೋರಿಸಿ ಒಂದು ಸರಪಣಿ ಯನ್ನು (೧೨) ತೋರಿಸಿದ್ದೇವೆ. ಇದಕ್ಕೆ ಕಾರಣ ಈ ಎರಡು ಕಥಾನಕಗಳಲ್ಲಿ ಯಜ್ಞಕ್ಕೆ

ಸಾಧನವಾದ ಯಜ್ಞಾಶ್ವಪ್ರಾಪ್ತಿಯೇ ಮೂಲಸೂತ್ರವಾಗಿದೆ. ಅದು ದೊರೆಯುತ್ತದೆ, ಅನುಸಾಲ್ವನಿಂದ ಅಪಹರಿಸಲ್ಪಡುತ್ತದೆ, ಮತ್ತೆ ದೊರಕಿಸಬೇಕಾಗುತ್ತದೆ. ಹೀಗೆ ಯಜ್ಞಾಶ್ವ ಪ್ರಾಪ್ತಿಯೇ ಕಾವ್ಯ-ಕಥೆಯ ಪ್ರಾರಂಭವಾಗುವುದರಿಂದ ಆ ಎರಡು ಕಥಾನಕಗಳು ಎಂದರೆ-ಪ್ರವೇಶ ದ್ವಾರದ ಎರಡು ಕಂಭಗಳಿದ್ದಂತೆ ಎಂದು ತೋರಿಸಿದೆ.

ಇನ್ನು ಪೌಳಿಯನ್ನು ದಾಟಿ ಒಳಗೆ ಹೋಗೋಣ. ಶ್ರೀಕೃಷ್ಣಮಂದಿರದ ಸೋಪಾನ. ನೀಲಧ್ವಜ (೧೩), ಹಂಸಧ್ವಜ (೧೪), ಸುಧನ್ವ (೧೫), ಸುರಥ (೧೬), ಪ್ರಮೀಳೆ (೧೭), ಭೀಷಣ (೧೮) ಇವರೇ ಸೋಪಾನ. ಅರ್ಜುನನು ಅಶ್ವರಕ್ಷಕನಾಗಿ ಶ್ರೀಕೃಷ್ಣಮಂದಿರದ ಒಂದೊಂದು ಸೋಪಾನವನ್ನು ಏರುತ್ತಾನೆ. ಬಭ್ರುವಾಹನನ ಕಥಾನಕದಲ್ಲಿ ಅಶ್ವರಕ್ಷಕನಾದ ಅರ್ಜುನನೆ ಮರಣಹೊಂದುವುದರಿಂದ ಯಜ್ಞಕ್ಕೆ ಬಾಧೆ ಬಂದಂತಾಯಿತು. ಆದುದರಿಂದ ಆ ಕಥಾನಕವನ್ನು ದೇವಾಲಯದ ಮುಚ್ಚಿದ ಬಾಗಿಲದ (೧೯) ಮೇಲೆ ತೋರಿಸಿದೆ. ರಣಾಂಗಣದ ಕತೆ (೨೧), ಪಾತಾಳಲೋಕದ ಕತೆ (೨೦) ಬಭ್ರುವಾಹನನ ಕಥಾನಕದಲ್ಲಿ ಪ್ರಮುಖ. ಆದುದರಿಂದ ಅವೆರಡನ್ನೂ ಬಭ್ರುವಾಹನನ ಕಥಾನಕದ ಎಡಬಲಕ್ಕೆ ತೋರಿಸಿದ್ದೇವೆ. ಇಲ್ಲಿಯೇ ಉಪಮಾ ಸಂಬಂಧಿಯಾದ ರಾಮಾಯಣದ ಕಥಾನಕವು (೨೨) ಬರುವುದರಿಂದ (ಹಜಾರರಾಮ ದೇವಾಲಯದಂತೆ) ರಾಮಾಯಣದ ಕಥೆಯನ್ನು ಶ್ರೀಕೃಷ್ಣಮಂದಿರದ ಹೊರಗಿನ ಗೋಡೆಯ ಸುತ್ತಲೂ ಇದೆ ಎಂದು ತೋರಿಸಿದ್ದೇವೆ.

ಇನ್ನು ದೇವಾಲಯದ ಒಳಗೆ ಸಾಗೋಣ. ಒಳಗಿನ ಎಡಭಾಗದ ಎಲ್ಲ ಗೋಡೆಗಳ ಮೇಲೆ ಮಯೂರಧ್ವಜ ಆಖ್ಯಾನ (೨೩), ಮತ್ತೊಂದು ಬಲಗಡೆಯ ಗೋಡೆಯ ಮೇಲೆ ವೀರವರ್ಮನ ಆಖ್ಯಾನವನ್ನು (೨೪) ತೋರಿಸಿದ್ದೇವೆ. ಮಯೂರಧ್ವಜನು ದೇಹದ ಅರ್ಧಭಾಗವನ್ನು ಬ್ರಾಹ್ಮಣ ಸ್ವರೂಪಿ ಶ್ರೀಕೃಷ್ಣನಿಗೆ ಒಪ್ಪಿಸಿದರೆ 'ಪುರುಷೋತ್ತಮನ ಪದಸ್ಪರ್ಶವಾಯ್ತೆನಗಿನ್ನು ಮೃತ್ಯುವೆತ್ತಣದು ?' ಎನ್ನುತ್ತಾನೆ ವೀರವರ್ಮ.

ಗರ್ಭಗುಡಿಯ ಪ್ರವೇಶದ ಹತ್ತರ ಒಂದು ಸಣ್ಣ ಸೋಪಾನವನ್ನು ತೋರಿಸಿದೆ. (ದುಶ್ಶಳೆ) (೨೫) ಕಾವ್ಯದಲ್ಲಿ ಅತಿ ಸಣ್ಣ ಕಥಾನಕವೆಂದರೆ ದುಶ್ಶಳೆಯದು. ಅಲ್ಲಿ ಯಜ್ಞಾಶ್ವವನ್ನು ಕಟ್ಟುವ ಮಾತಿಲ್ಲ. ಆದುದರಿಂದ ಆ ಕಥಾನಕದ ಹೆಸರು ಯಜ್ಞಾಶ್ವದ ಚಿತ್ರದನಂತರ ತೋರಿಸಲಾಗಿದೆ. ಗರ್ಭಗುಡಿಯ ಮೇಲಿನ ಭಾಗಕ್ಕೆ 'ಸದಾವಾಸಕೆ ಈ ಹರಿಯ ದೇಹವಿದು ಗೇಹಮೆನಗೆ' ಎಂಬ ವಾಕ್ಯವನ್ನು ಬರೆದಿದೆ. ಇದು ಬಕದಾಲ್ಭ್ಯನು ಹೇಳಿದ ಋಷಿವಾಕ್ಯವಾಗಿದೆ. ಗರ್ಭಗುಡಿಯ ಹೊರಭಾಗದ ಎಡಗೋಡೆಯ ಮೇಲೆ ಯಜ್ಞಸಿದ್ಧತೆ (೨೬) ಮತ್ತು ಬಲಗೋಡೆಯ ಮೇಲೆ ಯಜ್ಞಮುಕ್ತಾಯ (೨೭) ಇವು ಯಜ್ಞಪತಿಯಾದ ಶ್ರೀಕೃಷ್ಣನ ಎಡಗೈ-ಬಲಗೈ ಇದ್ದಂತೆ ಎಂದು ಹಾಗೆ ತೋರಿಸಿದೆ. ಗರ್ಭಗುಡಿಯಲ್ಲಿ ಪ್ರತಿಷ್ಠಾಪಿಸಿದ ಶ್ರೀಕೃಷ್ಣನ ಮೂರ್ತಿಯ ಸುತ್ತಲಿನ ಗೋಡೆಗಳ ಮೇಲೆ ಚಂದ್ರಹಾಸನ ಕಥಾನಕವಿದೆ. ಏಕೆಂದರೆ ಅವನು 'ಪರಮಭಾಗವತ.' ಎಲ್ಲ ಕಥಾನಕಗಳಲ್ಲಿಯ ಎಲ್ಲ ಕಥಾನಾಯಕರಿಗಿಂತ ಅವನು ಶ್ರೇಷ್ಠ ಭಕ್ತ ಎಂದು ಕಾವ್ಯದಲ್ಲಿ ತೋರಿ

ಸಿದೆ. ಆದುದರಿಂದ ಆ ಕಥಾನಕವನ್ನು ಗರ್ಭಗುಡಿಯ ಗೋಡೆಯಾಗಿ ತೋರಿಸಿದ್ದೇವೆ (೨೮). ಶ್ರೀಕೃಷ್ಣ ಮೂರ್ತಿಯ ಸುತ್ತಲೂ ಒಂದು ವರ್ತುಳದ ಪೀಠವಿದೆ. ಆ ಪೀಠ ಎಂದರೆ ಬಕದಾಲ್ಭ್ಯನ ಮನೋವಾಕ್ಕಾಯದಲ್ಲಿ ಶ್ರೀಕೃಷ್ಣನು ತುಂಬಿದ್ದನು ಎಂಬುದನ್ನು ವರ್ತುಳದಿಂದ ಸೂಚಿಸಿದೆ. ಈ ವರ್ತುಳವೇ ಯಜ್ಞಪತಿ ಶ್ರೀಕೃಷ್ಣ ವಿಗ್ರಹದ ಪೀಠ ವಾಗಿದೆ (೨೯). ಇದರ ಮೇಲೆ ಕಾವ್ಯನಾಯಕನಾದ ಶ್ರೀಕೃಷ್ಣ ಮೂರ್ತಿಯನ್ನು ಪ್ರತಿ ಷ್ಠಾಪಿಸಿದ್ದೇವೆ. ಈ ರೀತಿ ಕ. ಜೈ. ಭಾರತ ಕಾವ್ಯದ ಶಿಲ್ಪ ಸೌಂದರ್ಯವನ್ನು ಚಿತ್ರ ಮುಖದಿಂದ ಕಾಣಲು ಸಾಧ್ಯ ಎಂದು ತೋರಿಸಲಾಗಿದೆ. ಕಾವ್ಯವಸ್ತುವಿನ ಐಕ್ಯದ ರೇಖಾ ಚಿತ್ರವನ್ನು ಮತ್ತು ಕಲಾತ್ಮಕ ವಾಸ್ತುಚಿತ್ರವನ್ನು ನೋಡಬಹುದು.

**ಕವಿ ಲಕ್ಷ್ಮೀಶನು ತನ್ನ ಕ. ಜೈ. ಭಾರತ ಕಾವ್ಯದಲ್ಲಿ ಋತು ವರ್ಣನೆ ಗಳನ್ನು ಸೇರಿಸಿದ್ದು ಕಲಾತ್ಮಕ ದೃಷ್ಟಿಯಿಂದ ಅತ್ಯಂತ ಮಹತ್ತ್ವದ್ದು.** ಸಂಸ್ಕೃತ, ತೆಲುಗು ಮತ್ತು ಮರಾಠಿ ಜೈಮಿನಿ ಭಾರತಗಳಲ್ಲಿ ಋತುವರ್ಣನೆಗಳಿಲ್ಲ. ಲಕ್ಷ್ಮೀಶನು ಋತುವರ್ಣನೆಗಳನ್ನು ಸೇರಿಸಿದ್ದರಿಂದ ಕಾವ್ಯಕಥೆಗೆ ಒಂದು ನಿಶ್ಚಿತ ಪ್ರಾರಂಭ ಮತ್ತು ಉಚಿತ ಮುಕ್ತಾಯ ಉಂಟಾಯಿತು. ಕಾವ್ಯಕಥೆಯು ಚಂದ್ರಹಾಸನ ಕಥೆಗೆ ಏಕೆ ಮುಗಿಯಿತು ಎಂದು ಕೇಳಿದರೆ ವರ್ಷಮುಗಿಯಿತು, ಯಜ್ಞಾಶ್ವ ಪರಿಭ್ರಮಣ ಮುಗಿಯಲೇಬೇಕು ಎಂದು ಹೇಳಲು ಬರುವಂತಿದೆ. ಕವಿ ಲಕ್ಷ್ಮೀಶನು ಋತುವರ್ಣನೆ ಗಳನ್ನು ಸೇರಿಸಿದ್ದರಿಂದ ಕಾವ್ಯಕ್ಕೆ ಐಕ್ಯಸಿದ್ಧಿಯಾಗಿದೆ. ಋತುವರ್ಣನೆಗಳಿಲ್ಲದೆ ಚಂದ್ರ ಹಾಸನ ಕಥಾನಕಕ್ಕೆ ಕಾವ್ಯವನ್ನು ಮುಗಿಸಿದ್ದರೆ ಮುಕ್ತಾಯವು ಕೃತ್ರಿಮವಾಗಿ ತೋರು ತ್ತಿತ್ತು ; ಮತ್ತು ಚಂದ್ರಹಾಸನ ಕಥಾನಕಕ್ಕೆ ಕಾವ್ಯವನ್ನು ಮುಗಿಸಲೇಬೇಕು ಎಂಬ ಆವಶ್ಯಕತೆ, ಬಂಧನವೇನು ಎಂಬ ಪ್ರಶ್ನೆ ಸಹಜವಾಗಿ ತಲೆ ಎತ್ತುತ್ತಿತ್ತು; **ಈ ನ್ಯೂನತೆ ಯನ್ನು ಮರಾಠಿ ಜೈಮಿನಿ ಭಾರತದಲ್ಲಿ ಕಾಣಬಹುದು. ಋತುಕಲ್ಪನೆ ಯಿಲ್ಲದುದರಿಂದ ಶ್ರೀಧರ ಕವಿಯು ಚಂದ್ರಹಾಸನ ಕಥಾನಕವಾದ ಮೇಲೆ ಹೊಸ ಆರು ಕಥೆಗಳನ್ನು ಹೇಳಿ ಮುಕ್ತಾಯಕ್ಕೆ ಬರುತ್ತಾನೆ.**

ಕ. ಜೈ. ಭಾರತವನ್ನು ಪೂರ್ಣವಾಗಿ ಓದಿದ ಮೇಲೆ ಓದುಗನ ಮನಸ್ಸಿನಲ್ಲಿ ಭಕ್ತಿಯ ವೃದ್ಧಿ, ಭಗವದ್ಭಕ್ತರ ಬಗ್ಗೆ ಆದರ, ಆತ್ಮೀಯತೆ ಮತ್ತು ಭಗವಂತನ ಭಕ್ತ ವಾತ್ಸಲ್ಯ, ಕಾರುಣ್ಯ ಇವುಗಳ ಅರಿವು ಮೂಡಿ ನಿಲ್ಲುತ್ತವೆ. ಇದೇ ಕವಿಯ ಉದ್ದಿಷ್ಟ ಪರಿಣಾಮ. **ಸಮಷ್ಟಿ ಪರಿಣಾಮಕ್ಕೆ** (Unity of impression) **ಬಾಧೆ ಬರ ದಂತೆ ಮತ್ತು ಪೋಷಕವಾಗುವಂತೆ ಕಾವ್ಯಕಥಾನಕಗಳನ್ನು ಚಿತ್ರಿಸು ವುದೇ ಈ ಕಾವ್ಯದಲ್ಲಿ ಐಕ್ಯವನ್ನು ಸಾಧಿಸುವ ತಂತ್ರವಾಗಿದೆ.**

ಕವಿ ಲಕ್ಷ್ಮೀಶನು ಯೌವನಾಶ್ವನ ಶರಣಭಕ್ತಿ, ಅನುಸಾಲ್ವನ ಆಸುರಭಕ್ತಿ, ನೀಲಧ್ವಜನ ತಾಮಸಭಕ್ತಿ, ಹಂಸಧ್ವಜ-ಸುಧನ್ವ-ಸುರಥರ ಕ್ಷಾತ್ರಭಕ್ತಿ, ಪ್ರಮೀಳೆಯ ಕಾಮುಕ ಭಕ್ತಿ, ಬಭ್ರುವಾಹನನ ಪಿತೃಭಕ್ತಿ, ಮಯೂರಧ್ವಜನ ಸಮರ್ಪಣಭಕ್ತಿ, ವೀರವರ್ಮನ ಅಹಂಕಾರಿಕ ಭಕ್ತಿ, ಚಂದ್ರಹಾಸನ ಸ್ಥಿರಭಕ್ತಿ, ಬಕದಾಲ್ಭ್ಯನ ಶಾಂತ

ಊಹಾಚಿತ್ರ



ಕಾವ್ಯದಲ್ಲಿಯ ಐಕ್ಯವಿಚಾರದ ಊಹಾಚಿತ್ರ



ಕಾವ್ಯವಸ್ತುವಿನ ಐಕ್ಯದ ರೇಖಾಚಿತ್ರ



ಕಾವ್ಯವಸ್ತುವಿನ ಐಕ್ಯದ ಕಲಾತ್ಮಕ ವಾಸ್ತುಚಿತ್ರ




ಕಾವ್ಯವಸ್ತುವಿನ ಐಕ್ಯದ ಕಲಾತ್ಮಕ ವಾಸ್ತುಚಿತ್ರ
(ದೇವಾಲಯದ ಒಳಗಿನ ಪ್ರವೇಶದ್ವಾರ ಮತ್ತು ಸುತ್ತಲಿನ ಗೋಡೆ)




ಕಾವ್ಯವಸ್ತುವಿನ ಐಕ್ಯದ ಕಲಾತ್ಮಕ ವಾಸ್ತುಚಿತ್ರ (ದೇವಾಲಯದ ಒಳಗಿನ ಮತ್ತು ಗರ್ಭಗುಡಿಯ ಭಾಗ)

(ಗುಪ್ತ) ಭಕ್ತಿ ಮತ್ತು ದುಶ್ಯಳೆಯ ಪುತ್ರಭಕ್ತಿಯನ್ನು ತೋರಿಸಿ ಈ ಐಕ್ಯ ತಂತ್ರವನ್ನು ಸಾಧಿಸಿದ್ದಾನೆ.

ಕವಿ ಲಕ್ಷ್ಮೀಶನು ಕಾವ್ಯದಲ್ಲಿ ಐಕ್ಯವನ್ನು ಸಾಧಿಸಿದ ರೀತಿಯನ್ನು ಇನ್ನೊಂದು ಬಗೆಯಿಂದ ವಿವರಿಸಬಹುದು. ಇದು ತಾತ್ತ್ವಿಕ ರೀತಿ—ಯೌವನಾಶ್ವ, ಅನುಸಾಲ್ವ, ನೀಲಧ್ವಜ, ಹಂಸಧ್ವಜ, ಪ್ರಮೀಳೆ, ಬಭ್ರುವಾಹನ, ಮಯೂರಧ್ವಜ, ವೀರವರ್ಮ, ಚಂದ್ರಹಾಸ, ಬಕದಾಲ್ಭ್ಯ, ದುಶ್ಯಳೆ ಮತ್ತು ದ್ವಾರಕೆಯಲ್ಲಿ ಕೃಷ್ಣ ಈ ಕಥಾನಕಗಳಲ್ಲಿ ಶ್ರೀಕೃಷ್ಣ ಚರಿತಾಮೃತವೇ ಉಸಿರಾಗಿದೆ. ಸೌಭರಿ, ಚಂಡಿಯ ಕತೆ, ಪಾರಿಪ್ಲವ, ಪಾರ್ವತಿಯ ತಪಸ್ಸಿನ ಭೂಮಿ ಇವು ಯಜ್ಞಾಶ್ವಕ್ಕೆ ಸಂಬಂಧಿಸಿದವು. ಬಭ್ರುವಾಹನ ಮತ್ತು ಅರ್ಜುನನ ಯುದ್ಧವು ಲವಕುಶ ಮತ್ತು ರಾಮ ಇವರ ಯುದ್ಧದಂತೆ ನಡೆಯಿತು ಎಂದು ತೋರಿಸಿದ್ದರಿಂದ ಸಂಗ್ರಹ ರಾಮಾಯಣವು ಮೂಲಕಥಾನಕಕ್ಕೆ ಉಪಮಾಸಂಬಂಧಿಯಾಗಿದೆ. **ಶ್ರೀಕೃಷ್ಣ=ಅಶ್ವ=ಯಜ್ಞ=ಧರ್ಮ ಎಂಬ ಸಮೀಕರಣದಿಂದ ಜೈ.ಭಾರತದಲ್ಲಿ ಐಕ್ಯತತ್ತ್ವ, ಏಕಸೂತ್ರತೆ ಇದೆ ಎಂದು ತೋರಿಸಬಹುದು.** ಅದು ಹೇಗೆಂದರೆ ಅಶ್ವವು ಹರಿ ಮತ್ತು ಶ್ರೀಕೃಷ್ಣನೂ ಹರಿ.ಧರ್ಮಸಂಸ್ಥಾಪನೆಗಾಗಿ ಶ್ರೀಕೃಷ್ಣನು ಅವತರಿಸುತ್ತಾನೆ. ಶ್ರೀಕೃಷ್ಣನೇ ಯಜ್ಞಕ್ಕೆ ಅಧಿಪತಿ. ಮತ್ತು ಸಂಗ್ರಹ ರಾಮಾಯಣದಲ್ಲಿಯ ರಾಮನೆಂದರೆ ಶ್ರೀಕೃಷ್ಣನ ಅವತಾರ. ಹೀಗೆ ಲಕ್ಷ್ಮೀಶನ ಕಾವ್ಯಕಥೆಯಲ್ಲಿ ಏಕಸೂತ್ರತೆಯನ್ನು ಕಾಣುತ್ತೇವೆ. ಕಾವ್ಯದಲ್ಲಿ ಬರುವ ಎಲ್ಲ ಕಥಾನಕಗಳಲ್ಲಿ ಸಂಬಂಧವನ್ನು ಕಾಣುತ್ತೇವೆಯಲ್ಲದೆ ಅಸಂಬದ್ಧ ಕಥಾನಕವನ್ನು ಕಾಣುವುದಿಲ್ಲ. ಆದರೆ ಸಂಗ್ರಹ ರಾಮಾಯಣ, ಸೌಭರಿ, ಚಂಡಿಯಕತೆ, ಧರ್ಮೋಪದೇಶದ ಸನ್ನಿವೇಶ, ಮರುತ್ತನ ಕಥೆ ಇವು ಮೂಲಕಥಾನಕಕ್ಕೆ ಅಸಂಬಂಧಿ ಎಂದು ಕೆಲವರ ವಾದವಿದೆ.

ಏಕಸೂತ್ರತೆ, ಸಮಷ್ಟಿ ಪರಿಣಾಮ ಎಂಬ ದೃಷ್ಟಿಕೋನದಿಂದ ಕಾವ್ಯದ ಕಥಾನಕಗಳ ಕಡೆಗೆ ನೋಡಿ ಇಲ್ಲಿ ನಾವು ಐಕ್ಯತತ್ತ್ವವನ್ನು ಪರಾಮರ್ಶಿಸಲು ಪ್ರಯತ್ನಿಸಿದ್ದೇವೆಯೆ ಹೊರತು ವಸ್ತ್ವೈಕ್ಯ, ಸ್ಥಳೈಕ್ಯ ಮತ್ತು ಕಾಲೈಕ್ಯ ಎಂಬ ಅರಿಸ್ಟಾಟಲನ ಒರೆಗಲ್ಲಿಗೆ ಹಚ್ಚಿ ಅಲ್ಲ.

## ಕಥಾವಸ್ತುವಿನ ಐಕ್ಯದ ಕಲಾತ್ಮಕ ವಾಸ್ತುಚಿತ್ರಗಳು (ವಿವರಣೆ)

ಕಥಾವಸ್ತುವಿನ ಐಕ್ಯದ ಕಲಾತ್ಮಕ ವಾಸ್ತುಚಿತ್ರವನ್ನು ನಿರ್ಮಿಸುವುದಕ್ಕಾಗಿ ಬಳಸಿದ ರೇಖಾಚಿತ್ರವನ್ನು ಚಿತ್ರಸೂಚಿಯಲ್ಲಿ ಕಾಣಬಹುದು. ಈ ರೇಖಾಚಿತ್ರವನ್ನು ಆಧರಿಸಿ ತೆಗೆದ ಕಲಾತ್ಮಕ ವಾಸ್ತುಚಿತ್ರವೇ ಆ ಭಾಗದಲ್ಲಿದೆ. ಒಂದು ಕಲಾತ್ಮಕ ರೂಪವನ್ನು ಇದಕ್ಕೆ ಕೊಟ್ಟಿದ್ದೇವೆ. ದೇವಾಲಯದ ಹೊರಭಾಗ. ದೇವಾಲಯದ ಒಳಗಿನ ಪ್ರವೇಶದ್ವಾರ ಮತ್ತು ಸುತ್ತಲಿನ ಗೋಡೆ, ದೇವಾಲಯದ ಒಳಗಿನ ಮತ್ತು ಗರ್ಭಗುಡಿಯ ಭಾಗ, ಇವುಗಳನ್ನು ಸೂಚಿಸಲಾಗಿದೆ. ಈ ರೀತಿಯ ಕಲ್ಪನೆಯಿಂದ ತೆಗೆದ

ಕಲಾತ್ಮಕ ವಾಸ್ತುಚಿತ್ರವು ಸಾಮಾನ್ಯಜನರ ಲಕ್ಷವನ್ನು ಮೂಲಕಾವ್ಯವನ್ನು ಓದುವತ್ತ ಹೊರಳಿಸಬಹುದು ಎಂದು ನಮಗೆ ತೋರುತ್ತದೆ. ಲಕ್ಷ್ಮೀಶನ ಜೈಮಿನಿ ಭಾರತ ಕಾವ್ಯಕ್ಕೆ ಒಂದು ಕಲಾತ್ಮಕ ದೇವಾಲಯದ ಸೌಂದರ್ಯವಿದೆ ಎಂದು ತೋರುತ್ತದೆ. ಪ್ರತಿಯೊಂದು ಕಥಾನಕದ ಮಹತ್ತ್ವವನ್ನು ಅನುಲಕ್ಷಿಸಿ ದೇವಾಲಯದಲ್ಲಿ ಅದರ ಸ್ಥಾನ ವನ್ನು ನಿರ್ಧರಿಸಿದ್ದೇವೆ. ಚಿತ್ರಸೂಚಿಯಲ್ಲಿರುವ 'ಕಾವ್ಯದಲ್ಲಿಯ ಐಕ್ಯವಿಚಾರದ ಊಹಾ ಚಿತ್ರಕ್ಕೆ' ಮೂರ್ತಸ್ವರೂಪವನ್ನು ಕೊಡಲಾಗಿದೆ. ಈ ಕಲಾತ್ಮಕ ವಾಸ್ತುಚಿತ್ರದಲ್ಲಿ.

ಚಿತ್ರಸೂಚಿಯಲ್ಲಿರುವ ರೇಖಾಚಿತ್ರದಲ್ಲಿಯ ಅ, ಬ, ಕ ಎಂಬ ಸಂಕೇತಗಳು ಅನು ಕ್ರಮವಾಗಿ ಚಿತ್ರುಗಳ ರೂಪರೇಖೆಯಾಗಿವೆ. (ಚಿತ್ರಸೂಚಿ ಕೃತಿಯ ಕೊನೆಯಲ್ಲಿ ಇದೆ.)

## ಜೈಮಿನಿ ಭಾರತದಲ್ಲಿಯ ಧರ್ಮಾರ್ಥಕಾಮ ಮೋಕ್ಷ ವಿಚಾರ

ಅಶ್ವಮೇಧಿಕ ಪರ್ವದಮಲಸತ್ಕಥೆ ಯೌವ
ನಾಶ್ವಾದಿ ನೃಪರ ಚರಿತಂಗೇಳ್ದ ಮಾನವ
ಗೈಶ್ವರ್ಯಮಾರೋಗ್ಯಮಾಯುಷ್ಯಮಭಿವೃದ್ಧಿ ಕಲಿನಾಶನಂ ಧರೆಯೊಳು ||
ಆ ಶ್ವೇತಕೀರ್ತಿ ಸುತಲಾಭ ಶತ್ರುಕ್ಷಯಾ
ಶಾಶ್ವತಸ್ವರ್ಗ ಭೋಗಂಗಳಾದಪುವು ಸ
ರ್ವೇಶ್ವರನ ಭಕ್ತಿದೊರೆಕೊಂಡಪುದು ದೇವಪುರ ಲಕ್ಷ್ಮೀಶನಾಜ್ಞೆಯಿಂದೆ ||

ಮತ್ತು

ಉಪವನ ತಟಾಕ ಪ್ರತಿಷ್ಠೆ ದೇವಾಲಯ
ಪ್ರಪೆಗಳ ಸಕಲದಾನಧರ್ಮೋಪಕಾರವೇ
ದಪುರಾಣ ಶಾಸ್ತ್ರಶ್ರವಣದ ಪುಣ್ಯಕ್ಷೇತ್ರವಾಸ ತೀರ್ಥಸ್ನಾನದ ||
ಜಪ ಹೋಮ ಸುವ್ರತ ಸಮಾಧಿಯೋಗಧ್ಯಾನ
ತಪಸುಗಳ ಹರಿಹರಾರ್ಚನೆಯ ಸುಕೃತಂಗಳಾ
ದಪುವು ಜೈಮಿನಿಭಾರತದೊಳೊಂದು ವರ್ಣಮಂ ಪ್ರೀತಿಯಿಂ ಕೇಳ್ದವರ್ಗೆ ||

(೩೪. ೪೨–೪೩)

ಎಂದು ಲಕ್ಷ್ಮೀಶನು ಕಥೆಯ ಫಲವನ್ನು ಹೇಳಿದ್ದಾನೆ. ಇದರಲ್ಲಿ ದಾನಧರ್ಮ ಉಪ ಕಾರ, ಐಶ್ವರ್ಯದಾರೋಗ್ಯಸುತಲಾಭ ಮತ್ತು ಶಾಶ್ವತಸ್ವರ್ಗಭೋಗ ಎಂಬ ಪದ ಪುಂಜಗಳಿಂದ ಧರ್ಮ, ಅರ್ಥ, ಕಾಮ, ಮೋಕ್ಷ ಪ್ರಾಪ್ತಿಯನ್ನು ಸೂಚಿಸಲಾಗಿದೆ. ಕಥೆಯ ಫಲವು ನಾಲ್ಕು ಪುರುಷಾರ್ಥಗಳಲ್ಲಿ ಒಂದೇ ಆಗಿದ್ದರೆ ಆ ಕಾವ್ಯವು **ಶುದ್ಧ ಕಾವ್ಯ**ವಾಗುತ್ತದೆ; ಎರಡು ಪುರುಷಾರ್ಥಗಳು ಫಲಿಸಿದರೆ ಏಕಾನುಬಂಧಿಯಾಗುತ್ತದೆ; ಧರ್ಮ, ಅರ್ಥ, ಕಾಮ ಮೂರನ್ನೂ ಕೊಡುವುದಾದರೆ ಅನೇಕಾನುಬಂಧಿಯಾಗಿ ಆ ಕಾವ್ಯದ ಸ್ವರೂಪವು ತ್ರಿವರ್ಗರೂಪವುಳ್ಳದ್ದಾಗುತ್ತದೆ ಎಂದು 'ದಶರೂಪಕ'ದಲ್ಲಿ ಹೇಳ ಲಾಗಿದೆ:

'ಕಾರ್ಯಂ ತ್ರಿವರ್ಗಸ್ತಚ್ಛುದ್ಧಮೇಕಾನೇಕಾನುಬಂಧಿ ಚ'

—'ದಶರೂಪಕ', ೧–೧೬

ಕನ್ನಡ ಜೈಮಿನಿ ಭಾರತವು ಧರ್ಮ, ಅರ್ಥ, ಕಾಮ ಮೂರನ್ನು ಕೊಡುವುದೆಂದು ಹೇಳಿರುವುದರಿಂದ ಇದು ಅನೇಕಾನುಬಂಧಿಯಾಗಿದ್ದು ತ್ರಿವರ್ಗರೂಪ ಉಳ್ಳ ಕಾವ್ಯ ವಾಗಿದೆ. ಇದಲ್ಲದೆ ಮೋಕ್ಷಸೂಚಕವಾಗಿ ಸ್ವರ್ಗಫಲವನ್ನು ಸೇರಿಸಿರುವುದು ಒಂದು ಹೆಚ್ಚಳವಾಗಿದೆ.

ಪಂಪ ಮೊದಲಾದ ಕವಿಗಳು ತಮ್ಮ ಕಾವ್ಯಗಳನ್ನು ಲೌಕಿಕ ಮತ್ತು ಆಗಮಿಕ ಕಾವ್ಯ ಎಂದು ವಿಭಾಗ ಮಾಡಿಕೊಂಡು ಆಗಮಿಕ ಕಾವ್ಯಗಳಲ್ಲಿ ಮೋಕ್ಷವಿಚಾರ ಮತ್ತು ಲೌಕಿಕ ಕಾವ್ಯಗಳಲ್ಲಿ ಧರ್ಮಾರ್ಥಕಾಮ ವಿಚಾರವಿಟ್ಟಿದ್ದಾರೆ. ಕವಿ ಲಕ್ಷ್ಮೀಶನು ತನ್ನ ಲೌಕಿಕ ಕಾವ್ಯಕ್ಕೆ ಆಗಮಿಕದ ಕಳೆ ಕಟ್ಟಿದ್ದರಿಂದ ಒಂದೇ ಕಾವ್ಯದಲ್ಲಿ ನಾಲ್ಕೂ ಪುರು ಷಾರ್ಥಗಳು ಬಂದುಬಿಟ್ಟವೆ. ಜೈಮಿನಿ ಭಾರತ ಇದೊಂದು ಭಕ್ತಿಕಾವ್ಯ. ಭಕ್ತಿಯು ಯೋಗಕ್ಕೆ ಮುಕ್ತಿಯು ಸಿದ್ಧಿ. ಭಕ್ತಿಯನ್ನು ಪಂಚಮ ಪುರುಷಾರ್ಥವೆಂದೂ ಕರೆಯು ಲಾಗಿದೆ.

ಸಂಧಿ ೧ರಲ್ಲಿ ಧರ್ಮ ಮತ್ತು ವ್ಯಾಸರಲ್ಲಿ ಆದ ಸಂವಾದ ಧರ್ಮವಿಷಯದ್ದಾಗಿದೆ. ಧರ್ಮನಿಗೆ ಕುರುಕ್ಷೇತ್ರದ ಯುದ್ಧದ ಮೂಲಕ, ಅದರಲ್ಲಿ ಗುರುಹತ್ಯೆ, ಗೋತ್ರಹತ್ಯೆ ಮಾಡಿದ ಮೂಲಕ ಕ್ಷತ್ರಿಯ ಧರ್ಮದ ಬಗ್ಗೆ ಹೇಯಭಾವನೆ ಉಂಟಾಗಿದೆ. ವನ ವಾಸಕ್ಕೆ ಹೋಗುವ ವಿಚಾರವು ಅವನಲ್ಲಿ ತಲೆ ಎತ್ತಿದೆ. ಬ್ರಹ್ಮಹತ್ಯಾದೋಷವು ತನಗೆ ತಟ್ಟಿದೆ ಎಂಬ ವಿಷಾದ ಧರ್ಮನಿಗೆ ಉಂಟಾಗಿದೆ. ಈ ವಿಷಾದಯೋಗವನ್ನು ಹೋಗ ಲಾಡಿಸಲು ಧರ್ಮನಿಗೆ ವ್ಯಾಸರು ಉಪದೇಶಮಾಡುತ್ತಾರೆ. ರಾಮನು ರಾವಣನನ್ನು ಸಂಹರಿಸಿದನಂತರ, ಬ್ರಹ್ಮಹತ್ಯಾದೋಷನಿವಾರಣೆಗಾಗಿ ಅಶ್ವಮೇಧಯಜ್ಞವನ್ನೇ ಮಾಡಿದನು. ನೀನೂ ಅದನ್ನು ಮಾಡು ಎಂದು ವ್ಯಾಸನು ಧರ್ಮನಿಗೆ ಧರ್ಮೋಪದೇಶ ಮಾಡುತ್ತಾನೆ. ಅಶ್ವಮೇಧಯಜ್ಞದ ವಿಧಿವಿಧಾನಗಳ ವಿವರಗಳನ್ನು ತಿಳಿದುಕೊಂಡ ಧರ್ಮನಿಗೆ **ಅರ್ಥ ವಿಚಾರವು** ಎದುರಿಸುತ್ತದೆ. ಅಶ್ವಮೇಧಯಜ್ಞವನ್ನು ಮಾಡು ವುದು ಸಾಮಾನ್ಯ ಕೆಲಸವಲ್ಲ. ಅದಕ್ಕೆ ವಿಪುಲವಾದ ಸಂಪತ್ತುಬೇಕು. ಅದು ನಮ್ಮಲ್ಲಿ ಇಲ್ಲವೆಂದು ಧರ್ಮನು ಸ್ಪಷ್ಟವಾಗಿ ಹೇಳುತ್ತಾನೆ. ಆಗ ವ್ಯಾಸರು ಮರುತ್ತನು ಯಜ್ಞದಲ್ಲಿ ದಾನವಿತ್ತ ಧನವನ್ನು ಬ್ರಾಹ್ಮಣರು ಒಯ್ಯಲಾರದೆ ಹಿಮಾಲಯದಲ್ಲಿ ಬಿಸುಟುಹೋದ ದ್ರವ್ಯವನ್ನೂ, ಯಜ್ಞೋಚಿತ ಹಯವಿಲ್ಲ ಎಂದುದಕ್ಕೆ ಅದು ಯೌವ ನಾಶ್ವನಲ್ಲಿ ಇದೆ ಎಂದು ವ್ಯಾಸನು ತೋರಿಸುತ್ತಾನೆ. ಭೀಮ ವೃಷಕೇತು ಮೇಘ ನಾದರು ಯಜ್ಞಾಶ್ವವನ್ನು ತರುವುದಾಗಿ ಪಣತೊಡುತ್ತಾರೆ. ಆದರೂ ಅಶ್ವಮೇಧ ಯಜ್ಞಮಾಡುವುದು ಧರ್ಮನ **ಕಾಮ**ವಾಗುವದಿಲ್ಲ. ಅಧಿಯಜ್ಞನ **ಕಾಮ**ಪೂರ್ತಿ ಗೊಳ್ಳುವುದರಲ್ಲಿ ನಾವು ಸಹಾಯಕರಾಗಬೇಕು ಎಂಬುದೇ ಧರ್ಮನ ಅಭೀಪ್ಸೆ. ಹೀಗಾಗಿ ಕೃಷ್ಣನ ಒಪ್ಪಿಗೆ ದೊರೆಯುವವರೆಗೆ ಧರ್ಮನು ಯೋಚನೆಯಲ್ಲಿ ತೊಳಲಾಡುತ್ತಾನೆ.

ಸಂಧಿ ೫ ಪ. ೪೮ ರಿಂದ ೬೯ರ ವರೆಗೆ ವ್ಯಾಸನು ಧರ್ಮನಿಗೆ ಧರ್ಮೋಪದೇಶ ಮಾಡುವುದು ಈ ಕಾವ್ಯದ ಒಂದು ವೈಶಿಷ್ಟ್ಯವಾಗಿದೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ

ಶೂದ್ರರ ಧರ್ಮ ಯಾವುದು? ಸ್ತ್ರೀಯರಲ್ಲಿ, ಪತಿವ್ರತೆಯರಲ್ಲಿ ಮತ್ತು ಜಾರೆಯರಲ್ಲಿ ಇರುವ ಲಕ್ಷಣಗಳೇನು? ಭೇದಗಳು ಯಾವವು? ಲಕ್ಷ್ಮಿಯು ಸ್ಥಿರವಾಗಿ ನಿಲ್ಲುವ ಬಗೆ ಯಾವುದು? ಸುಖಪ್ರಾಪ್ತಿಯ ಮಾರ್ಗ ಯಾವುದು? ಎಂಬ ವಿಷಯಗಳ ಮೇಲೆ ವ್ಯಾಸನು ವಿಸ್ತರಿಸಿ, ತಿಳಿಸಿ ಹೇಳುತ್ತಾನೆ. ಧರ್ಮನೊಂದಿಗೆ ಹಿಮಾಲಯಕ್ಕೆ ಹೋಗಿ ದ್ರವ್ಯವನ್ನು ಹಸ್ತಿನಾವತಿಗೆ ತಂದು ಮುಟ್ಟಿಸುತ್ತಾನೆ. ಇದರ ಮುಂದಿನ, ಯಜ್ಞ ಪೂರ್ತಿಯಾಗುವವರೆಗಿನ ಕಾರ್ಯಕ್ಕೆ ಅಧಿಯಜ್ಞನೇ ಸಾಕ್ಷಿಯಾಗಿ ನಿಲ್ಲುತ್ತಾನೆ.

ಯೌವನಾಶ್ವನಿಂದ ಹಿಡಿದು ಚಂದ್ರಹಾಸನವರೆಗಿನ ಕಥೆಗಳೆಲ್ಲ ಕ್ಷತ್ರಿಯರ ಕ್ಷಾತ್ರ ತೇಜಸ್ಸಿನ ಕಥೆಗಳು. ವೀರರು ಯಜ್ಞಾಶ್ವವನ್ನು ಕಟ್ಟಿದ್ದು ಮತ್ತು ಯುದ್ಧ ಮಾಡಿದ್ದು ಕ್ಷಾತ್ರಧರ್ಮದ ಪರಿಪಾಲನೆಗಾಗಿ. ಅವರಿಗೆ ಯುದ್ಧದಲ್ಲಿ ಸೋಲು, ಗೆಲವು ಮುಖ್ಯವಲ್ಲ. ಕ್ಷತ್ರಿಯ ಧರ್ಮಕ್ಕೆ ಚ್ಯುತಿ ಬರದಂತೆ ನಡೆದುಕೊಳ್ಳುವುದು ಅವರಲ್ಲಿಯ ಕ್ಷಾತ್ರಗುಣ ವಾಗಿದೆ. ಹೋರಾಡುವುದರಲ್ಲಿ ಅವರಿಗೆ ಅಮಿತ ಉತ್ಸಾಹ ಉಂಟು. ಈ ಕಾವ್ಯದಲ್ಲಿ ಬರುವ ಕ್ಷತ್ರಿಯರೆಲ್ಲ ಕೃಷ್ಣಭಕ್ತರಾಗಿರುವುದು ಈ ಕಾವ್ಯದ ಇನ್ನೊಂದು ವೈಶಿಷ್ಟ್ಯ ವಾಗಿದೆ. ಅಂದರೆ, ಇಲ್ಲಿಯ ಕ್ಷಾತ್ರಧರ್ಮಭಕ್ತಿಗೆ ವಿರೋಧಿಯಾಗಿರದೆ, ಭಕ್ತಿಗೆ ಅಧೀನ ವಾಗಿದೆ. ಪರಸ್ಪರ ವಿರೋಧವನ್ನು ಶಮನಿಸುವ, ಸಂಧಿಯನ್ನುಂಟುಮಾಡುವ ಸ್ನೇಹ ಸೂತ್ರವಾಗಿದೆ ಭಕ್ತಿ.

ಸುಧನ್ವ ಮತ್ತು ಚಂದ್ರಹಾಸನ **ಕಾಮ** ಅಧಿಯಜ್ಞನಿಗೆ ಒಪ್ಪಿಗೆಯಾಗುವಂಥ ಕಾಮ. ಇದರ ಮೂಲಕವೇ ಸುಧನ್ವನನ್ನು ಕೊಪ್ಪರಿಗೆಯಲ್ಲಿ ಕಾಯುತ್ತಾನೆ; ಚಂದ್ರ ಹಾಸನ ಚಂಡಿಕಾಲಯದಲ್ಲಿಯ, ಅರಣ್ಯದಲ್ಲಿಯ ಮರಣವನ್ನು ತಪ್ಪಿಸುತ್ತಾನೆ. ಸ್ವಾಹಾ ಮತ್ತು ಮಾಲಿನಿ ಇವರೂ ತಪಸ್ಸಿನಿಂದ **ವರ**ನನ್ನು ಪಡೆಯುತ್ತಾರೆ. ರಾಮನ ಸಂತಾ ನಾಪೇಕ್ಷೆ ಮದನಾರ್ಥದ ಕಾಮವಲ್ಲ, ಅದು ಪಿತೃಋಣದ ಬಂಧನ–ಧರ್ಮಾರ್ಥದ **ಕಾಮ.**

ಕ್ಷತ್ರಿಯರು ಯುದ್ಧದಲ್ಲಿ ಸೋತನಂತರ ಅರ್ಜುನಾದಿ ವೀರರಿಗೆ ತಮ್ಮ ಪಟ್ಟಣಕ್ಕೆ ಕರೆದೊಯ್ದು ಸ್ವಾಗತಿಸುವುದನ್ನು ನಾವು ಕಾಣುತ್ತೇವೆ. ಪ್ರತ್ಯಕ್ಷ ಕೃಷ್ಣನೇ ನಡೆಸು ವಂಥ ಧರ್ಮನ ಯಜ್ಞಕ್ಕೆ ಅನುಕೂಲರಾಗಿ ತಮ್ಮಲ್ಲಿದ್ದ ದ್ರವ್ಯವನ್ನು, ಯಜ್ಞಾಶ್ವ ಗಳನ್ನು ಮತ್ತು ಸರ್ವಸ್ವವನ್ನು ಅರ್ಜುನನಿಗೆ ಅರ್ಪಿಸುತ್ತಾರೆ.

ಉಪಕಥೆಗಳಲ್ಲಿ ಬರುವ ನೀಲಧ್ವಜ, ಹಂಸಧ್ವಜ, ಬಭ್ರುವಾಹನ, ಮಯೂರ ಧ್ವಜ, ವೀರವರ್ಮ, ಚಂದ್ರಹಾಸರು ಕೃಷ್ಣವಿರೋಧಿಗಳಲ್ಲ; ಕೃಷ್ಣಭಕ್ತರು. ಕೃಷ್ಣನಿ ಗಾಗಿ ತನು, ಮನ, ಧನವನ್ನು ಅರ್ಪಿಸಲು ಸಿದ್ಧ. ಕೃಷ್ಣವಿರೋಧಿಯಾಗಿ ನಿಲ್ಲುವ ಇಚ್ಛೆ ಯಾರಿಗೂ ಇಲ್ಲ. ಎಲ್ಲರೂ ಕೃಷ್ಣದರ್ಶನ ಅಪೇಕ್ಷೆ ಉಳ್ಳವರಾಗಿದ್ದಾರೆ. ಯಜ್ಞಾಶ್ವವನ್ನು ಕಟ್ಟುವುದು ಕೃಷ್ಣದರ್ಶನಕ್ಕಾಗಿ. ಸುಧನ್ವನು ಕೃಷ್ಣನನ್ನು ಯುದ್ಧ ದಿಂದ (ಕ್ಷಾತ್ರ **ಧರ್ಮ**ದಿಂದ) ಮೆಚ್ಚಿಸಬೇಕು ಎಂದು ಬಯಸಿದರೆ; ಯೌವನಾಶ್ವನು ತನ್ನ ಸಂಪತ್ತು ಸರ್ವಸ್ವ (ಅರ್ಥ)ವನ್ನೇ ಧರ್ಮನಿಗೆ, ಕೃಷ್ಣನಿಗೆ ಯಜ್ಞಕ್ಕಾಗಿ ಅರ್ಪಿಸು

ತ್ತಾನೆ. ಕೃಷ್ಣನ ಪಾದಸ್ಪರ್ಶದಿಂದ ಪುಲಕಿತ, ಪುನೀತ, ಅಮರನಾಗುವುದೇ ವೀರ ವರ್ಮನ ಕಾಮವಾಗಿದೆ. ಮಯೂರಧ್ವಜನಂತೂ ದಾನವೀರ. ತನ್ನ ದೇಹದ ಬಲಭಾಗ ಮಾತ್ರ ಕೃಷ್ಣಾರ್ಪಿತವಾಗಿ ಎಡಭಾಗ ಅರ್ಪಿತವಾಗಲಿಲ್ಲವಲ್ಲ ಎಂದು ಮರ ಗುವ ಅನುಪಮ ಭಕ್ತ.

ಕೃಷ್ಣನು ಕುರುಕ್ಷೇತ್ರದಲ್ಲಿ ಅರ್ಜುನನಿಗೆ ಯುದ್ಧವೇ ಕ್ಷತ್ರಿಯನ ಧರ್ಮ ಎಂದು ಭಗವದ್ಗೀತೆಯನ್ನು ಹೇಳಿದನು. ಜೈಮಿನಿ ಅಶ್ವಮೇಧದಲ್ಲಿ ಅನೇಕ ಯುದ್ಧಗಳಾದರೂ ಅವು ಕೃಷ್ಣಭಕ್ತಿ ವಿರೋಧದವರ ಯುದ್ಧಗಳಾಗಿರದೆ, ಕೃಷ್ಣಭಕ್ತರ ಸಂವಾದಯುದ್ಧ ಗಳಾಗಿವೆ. ಸಂಧಿ ೩೨, ಪ. ೧೪ ರಲ್ಲಿ ಚಂದ್ರಹಾಸನನ್ನು ಕೃಷ್ಣನು ಆಲಿಂಗಿಸಿ, ಅರ್ಜುನನಿಗೂ ಅವನನ್ನು ಆಲಿಂಗಿಸಲು ಹೇಳುತ್ತಾನೆ. ಅರ್ಜುನನು ಭಗವದ್ಗೀತೆಯ ಧರ್ಮೋಪದೇಶವನ್ನು ಕೃಷ್ಣನಿಗೆ ನೆನಪು ಮಾಡಿದಾಗ, ಕೃಷ್ಣನು 'ಎನ್ನ ಭಕ್ತರ ನಾದರಿಪುದು ಅಧರ್ಮವೇ?' ಎಂದು ಪ್ರಶ್ನಿಸಿದ್ದು ಔಚಿತ್ಯಪೂರ್ಣವಾಗಿದೆ. ಅರ್ಜುನನಿಗೆ ಕೃಷ್ಣನು ಕುರುಕ್ಷೇತ್ರದಲ್ಲಿ ಕೃಷ್ಣಭಕ್ತಿವಿರೋಧಿಗಳ ದರ್ಶನವನ್ನು ಮಾಡಿಸಿ ಅವರ ಸಂಹಾರ ಮಾಡಲು ಅನುಕೂಲನಾದನು. ಇಲ್ಲಿ ಕೃಷ್ಣಭಕ್ತರ ದರ್ಶನವನ್ನು ಮಾಡಿಸಿ ಆಲಿಂಗನ ಸುಖವನ್ನು ಕೃಷ್ಣನು ಅರ್ಜುನನಿಗೆ ಕೊಡಿಸುತ್ತಾನೆ. ಸಂಧಿ ೩೨, ಪ. ೧೭ ರಲ್ಲಿ ಚಂದ್ರಹಾಸನು 'ಹಲವು ಮಾತುಗಳೇಕೆ? ನಮಗೆ ನಿಮಗಾಶ್ರಯಂ ಜಲಜಾಕ್ಷ ನಾಗಿರ್ದ ಬಳಿಕಾವ ಧರ್ಮಕೌಶಲಮಕಟ, ಸಾಕಿನ್ನು ಪಾರ್ಥ ನಿನ್ನಶ್ವಂಗಳಂ ತರಿಸಿ, ಕುಡುವೆ' ಎಂದು ಹೇಳಿ ಅರ್ಜುನನಿಗೆ ಕ್ಷಾತ್ರದ ಅಹಂಕಾರವನ್ನು ಬಿಡೆಂದು ಎಚ್ಚರಿಸುತ್ತಾನೆ.

ಈ ಕಾವ್ಯದಲ್ಲಿ ಬರುವ ಅನೇಕ ಪ್ರತಿನಾಯಕರಲ್ಲಿ ರಣಾಂಗಣದಲ್ಲಿ ಮಡಿದವರು ಸುಧನ್ವ ಮತ್ತು ಸುರಥ. ಅವರಿಬ್ಬರಿಗೂ ಕೃಷ್ಣಸಾಯುಜ್ಯಪ್ರಾಪ್ತಿಯಾಗುತ್ತದೆ. ಚಂದ್ರಹಾಸನು ಸಂಧಿ ೩೨ ಪದ್ಯ ೨೧ರಲ್ಲಿ 'ಕೃಷ್ಣದರ್ಶನದಿಂದ ತಪ್ಪದೆನಗಿನ್ನು ಮೋಕ್ಷದ ಲಾಭಂ' ಎಂದಿದ್ದಾನೆ. ಬಕದಾಲ್ಭ್ಯನು ಸಂಧಿ ೩೨ ಪ. ೩೫ರಲ್ಲಿ 'ಸದಾವಾಸಕೀ ಹರಿಯ ದೇಹವಿದು ಗೇಹಮೆನಗೆ. ಅನುಕೂಲೆಯಾದ ಸತಿ ಮುಕ್ತಿಯಿಲ್ಲದೆ ಬೇರೆ ಮನೆಯಿಲ್ಲ. ಮಡದಿಯಿಲ್ಲದಕ್ಕಾಗಿ ತಾನೀಸುದಿನಮಿಲ್ಲಿ ತಲೆಗೆ ತರಗೆಲೆವಿಡಿದುಕೊಂಡಿರ್ದೆ' ಎಂದು ಚಮತ್ಕಾರದಿಂದ ಮುಕ್ತಿಯ ವಿಷಯವನ್ನು ವಿವರಿಸುತ್ತಾನೆ.

ಈ ಕಾವ್ಯದಲ್ಲಿಯ ಕ್ಷತ್ರಿಯರ ಯುದ್ಧ→ಧರ್ಮ→ಕಾಮ ಕೃಷ್ಣದರ್ಶನಕ್ಕಾಗಿ. ಇವರ ಅರ್ಥವು ಕೃಷ್ಣನು ನಡೆಸುವ ಧರ್ಮನ ಯಜ್ಞಕ್ಕೆ ಮೀಸಲು ಮತ್ತು ಕೃಷ್ಣ ದರ್ಶನವೇ ಇವರಿಗೆ ಮುಕ್ತಿಯನ್ನು ದಯಪಾಲಿಸುವ ಶಕ್ತಿಯಾಗಿದೆ. ಇಲ್ಲಿಯ ಕ್ಷತ್ರಿಯರು ಧರ್ಮಾರ್ಥಕಾಮಗಳ ಪರಿಪಾಕವುಳ್ಳವರಾಗಿ, ದೈವಿಕತೆಯನ್ನು ಒಪ್ಪುವವ ರಾಗಿದ್ದಾರೆ. ಆದುದರಿಂದ ಇಲ್ಲಿ ಭಕ್ತಿಯೇ ಎಲ್ಲರ ಸ್ಥಾಯೀಗುಣವಾಗಿ ಧರ್ಮಾರ್ಥಕಾಮ ಮೋಕ್ಷಗಳು ಸಂಚಾರಿಯಾಗಿವೆ. ಅಂದರೆ ಈ ಕಾವ್ಯದಲ್ಲಿ ಭಕ್ತಿಯ ವಿಷಯ ಪ್ರಮುಖ ವಾಗಿದ್ದು ಉಳಿದೆಲ್ಲ ಪುರುಷಾರ್ಥವಿಚಾರಗಳು ಅಲ್ಲಲ್ಲಿ ಸಾಲುದೀವಿಗೆಯಂತೆ ಬರುತ್ತವೆ.

ಲಕ್ಷ್ಮೀಶನ ಕಾವ್ಯವು ಲೋಕಸಂಗ್ರಹ ದೃಷ್ಟಿಯುಳ್ಳ ಕಾವ್ಯವಾಗಿದೆ. ಧರ್ಮಾರ್ಥ ಕಾಮ ಮೋಕ್ಷಗಳಲ್ಲಿ ಸಮತೂಕವನ್ನು ತೋರಿಸಲಾಗಿದೆ. ಧರ್ಮನಯಜ್ಞಕ್ಕಾಗಿ ಕೃಷ್ಣಾರ್ಜುನರು ದಿಗ್ದೇಶಗಳನ್ನು ಅಡ್ಡಾಡಿ ಭಕ್ತರನ್ನು ಸಂಗ್ರಹಿಸುತ್ತಾರೆ. ಈ ಕಾವ್ಯದಲ್ಲಿ ಬರುವ ಕ್ಷತ್ರಿಯರು ಕೃಷ್ಣಭಕ್ತರಾಗಿದ್ದಲ್ಲದೆ, ಸೌಭರಿ, ಬಕದಾಲ್ಭ್ಯರಂತಹ ಜ್ಞಾನಿಗಳೂ ಕೃಷ್ಣಭಕ್ತರಾಗಿದ್ದಾರೆ. ಯಜ್ಞದ ಸಮಯಕ್ಕೆ ಕೃಷ್ಣಭಕ್ತರ ಸಮ್ಮೇಳನವೇ ನಡೆಯುತ್ತದೆ. ಇಲ್ಲಿ ಬರುವ ಭಕ್ತರು ಮೂಢನಂಬಿಕೆಯ ಭಕ್ತರಲ್ಲ. ಸಜ್ಞಾನ-ಸುಜ್ಞಾನ ಭಕ್ತಿಯಿಂದ ಯುದ್ಧಕರ್ಮವನ್ನು ಆಚರಿಸಿದ ಭಕ್ತರಾಗಿದ್ದಾರೆ.

## ಕಾವ್ಯದಲ್ಲಿ ಕಥನಕಲೆ

> "ತ ಏವ ಪಡವಿನ್ಯಾಸಾಸ್ತಾ ಏವಾರ್ಥವಿಭೂತಯಃ,
> ತಥಾಪಿ ನವ್ಯಂ ಭವತಿ–ಕಾವ್ಯಂ ಗ್ರಥನ ಕೌಶಲಾತ್."

[ಯಾವುದೇ ಕಾವ್ಯದಲ್ಲಿ ಬಳಸಿರುವ ಶಬ್ದ, ಅರ್ಥ ಒಂದೇ ಇರುತ್ತದೆ. ಆದರೆ ಅವುಗಳನ್ನು **ಹೊಂದಿಸುವ ಕೌಶಲ್ಯ** ಆ ಕವಿಯದು. ಹೊಸ ಹೊಸ ಹೊಂದಿಕೆಯಿಂದ ಕಾವ್ಯಕ್ಕೆ ಹೊಸತನ, ನವೀನತೆ ಬರುತ್ತದೆ.]

ಹೂವು ಮತ್ತು ದಾರ ಇರುವುದರಿಂದ ಮಾತ್ರವೆ ಮಾಲೆಯಾಗಲಾರದು. ಆ ಹೂವುಗಳನ್ನು ಸುಂದರವಾಗಿ ದಾರದಿಂದ ಕಟ್ಟುವಲ್ಲಿ ಮಾಲೆಯ ಸೌಂದರ್ಯವಿದೆ. ಕವಿ ಲಕ್ಷ್ಮೀಶನ ಕಡೆಗೆ ಕನ್ನಡ, ಸಂಸ್ಕೃತ ಶಬ್ದಾರ್ಥಭಂಡಾರವಿದೆ. ಸಂಸ್ಕೃತ ಜೈಮಿನಿ ಭಾರತದ ಕಥಾನಕವಿದೆ. ಆ ಕಥಾನಕವನ್ನು ಕನ್ನಡ ಭಾಷೆಯಲ್ಲಿ ಹೇಳಿದ್ದಾನೆ ಎಂದರೆ ಮುಗಿಯಿತೆ? ಇಲ್ಲ. ತನ್ನ ಕಾವ್ಯವನ್ನು ಕಥಿಸುವಲ್ಲಿ ನವೀನತೆಯನ್ನು ತೋರಿಸಿದ್ದಾನೆ. ಅವನೊಬ್ಬ ಮಾಲೆಗಾರ, ಒಳ್ಳೆಯ ಕತೆಗಾರ, ಸರಸ ಕವಿ.

ಕವಿ ಲಕ್ಷ್ಮೀಶನು ಉಪಯೋಗಿಸಿದ 'ಶ್ರೀಕೃಷ್ಣ ಚರಿತಾಮೃತಂ' 'ಹರಿಹರಾರ್ಚನೆಯ ಸುಕೃತಂಗಳಾದಪುವು ಜೈಮಿನಿ ಭಾರತದೊಳೊಂದು ವರ್ಣಮಂ ಪ್ರೀತಿಯಿಂ ಕೇಳ್ದವರ್ಗೆ', 'ಈ ಕಥೆಗೇಳ್ದೊಡಾಯುರಾರೋಗ್ಯಮತಿ | ಮಂಜುಳ ಸುಕೀರ್ತಿ ಸುಖ ಸಂಪತ್ಕಳತ್ರ ಸುತ | ಸಂಜಾತ ಹರಿಭಕ್ತಿ ಸವನಿಪುದು ದೇವಪುರ ಲಕ್ಷ್ಮೀಶನಾಜ್ಞೆಯಿಂದೆ' ಎಂಬ ಪದ್ಯಭಾಗಗಳ ಮೇಲಿಂದ 'ಲಕ್ಷ್ಮೀಶನು ಬರಿಯ ಪುರಾಣವನ್ನಲ್ಲ ವೈಷ್ಣವ ಸಂಪ್ರದಾಯದ ಪುರಾಣವನ್ನು ಬರೆಯುತ್ತಲಿದ್ದಾನೆ. ಅದಕ್ಕಾಗಿ ವೈಷ್ಣವ ಸಂಪ್ರದಾಯದಲ್ಲಿ ಹೆಸರಾದ ವೈಷ್ಣವ ಭಕ್ತರ ಕಥೆಗಳನ್ನು ವಿಸ್ತಾರವಾಗಿ ಬಣ್ಣಿಸುತ್ತಾನೆ. ಕವಿಯು ಪುರಾಣವನ್ನೇ ಬರೆಯುವ ಉದ್ದೇಶವನ್ನಿಟ್ಟುಕೊಂಡಿದ್ದಾನೆ. ಆ ಪುರಾಣವು ಶ್ರವಣೀಯವಾಗುವದಕ್ಕಾಗಿ ಕಾವ್ಯಮಯವಾಗಿ ಮಾಡಿದ್ದಾನೆ ಎಂದು ಬೇಕಾದರೆ ಒಪ್ಪಬಹುದು'[1] ಎಂದು ಒಂದು ಅಭಿಪ್ರಾಯವಿದೆ.

---

[1] 'ಜೈಮಿನಿ ಭಾರತ ವಿಹಾರ ವಿಮರ್ಶೆ'—ಆರ್. ವ್ಹಿ. ಜಾಗೀರದಾರ, ಕ.ಸಾ.ಪ.ಪ., ಸಂ. ೨೬, ಸಂಚಿಕೆ ೨.

ವೇದ, ಮಹಾಭಾರತವಾದ ಮೇಲೆ ಪುರಾಣಕ್ಕೆ ಸ್ಥಾನ.

"ಪುರಾಂ ಪರಂಪರಾಂ ವೇತ್ತಿ ಪುರಾಣಂ ತೇನ ವೈಸ್ಮೃತಂ"

—'ಪದ್ಮಪುರಾಣ', ೨-೫೩

ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ
ವಂಶಾನುಚರಿತಂ ಚೇತಿ ಪುರಾಣಂ ಪಂಚ ಲಕ್ಷಣಂ ||

—'ಬ್ರಹ್ಮವೈವರ್ತ ಪುರಾಣ'

ಎಂದು ಪುರಾಣದ ವ್ಯಾಖ್ಯೆಯನ್ನು ಹೇಳಲಾಗಿದೆ. 'ಸರ್ಗ' ದಲ್ಲಿ ಸೃಷ್ಟಿಯ ಉತ್ಪತ್ತಿ, ಪ್ರತಿಸರ್ಗದಲ್ಲಿ ಸೃಷ್ಟಿಯ ಸಂಹಾರ ಮತ್ತು ಉತ್ಪತ್ತಿ, ವಂಶದಲ್ಲಿ ದೇವರ ವಂಶಾವಳಿ, ಮನ್ವಂತರದಲ್ಲಿ ಬೇರೆ ಬೇರೆ ಮನುಗಳ ಕಾಲದ ಕಥಾನಕ, ವಂಶಾನುಚರಿತದಲ್ಲಿ ರಾಜರ ವಂಶಾವಳಿ, ದಾನ, ವ್ರತ, ತೀರ್ಥ, ಶ್ರಾದ್ಧ ಇವುಗಳ ವರ್ಣನೆ ಇರಬೇಕು ಎನ್ನುತಾ ರೆ. ಸಮಾಜಕ್ಕೆ ಧಾರ್ಮಿಕ ರೀತಿ-ನೀತಿ ಕಲಿಸುವುದೇ ಪುರಾಣಗಳ ಉದ್ದೇಶ. ಪುರಾಣಗಳನ್ನು ನಂಬಿದ್ದರಿಂದ— (೧) ದೈವವಾದದಲ್ಲಿ ಅತಿಯಾದ ನಂಬಿಕೆ (೨) ಕಲಿಕಲ್ಪನೆ (೩) ಅವತಾರ (೪) ಧರ್ಮಭೋಳೆತನ (೫) ದಾಂಭಿಕತನ (೬) ಜಾತಿಭೇದದಂಥ ಸಮಾಜ ವಿಘಾತಕ ಅಂಶಗಳೂ ಸಮಾಜದಲ್ಲಿ ಸೇರಿಕೊಂಡಿವೆ. ಶಿವ ಪಾರಮ್ಯ, ವಿಷ್ಣುಪಾರಮ್ಯವನ್ನು ಹೇಳುವ ಪುರಾಣಗಳ ಮೂಲಕ ಶೈವ, ವೈಷ್ಣವ ಪಂಗಡಗಳು ಹುಟ್ಟಿಕೊಂಡವು ಎಂದು ಹೇಳಲಾಗುತ್ತದೆ.

ಕನ್ನಡ ಜೈಮಿನಿ ಭಾರತವು ಪಾರಮ್ಯವಾದವನ್ನು ಎತ್ತಿಹಿಡಿಯುವುದಿಲ್ಲ. ಹರಿಹರ ಸಮಾನತೆಯನ್ನು ಒಪ್ಪುತ್ತದೆ. ಸಂಸ್ಕೃತ ಜೈಮಿನಿ ಭಾರತದಲ್ಲಿ ಇರುವ ಪೌರಾಣಿಕ ಶೈಥಿಲ್ಯ, ನೀತಿ, ಉಪದೇಶದ ಆವೇಶ, ಶೈಲಿಯ ಸಾಮಾನ್ಯತ್ವ ಕನ್ನಡ ಜೈಮಿನಿ ಭಾರತದಲ್ಲಿ ಬರದಂತೆ ಕವಿಯು ಎಚ್ಚರವನ್ನು ವಹಿಸಿದ್ದಾನೆ. ಮೂಲಕಥೆಯ ನ್ಯೆಗೆಡಲೀಯದೆ ನವರಸರುಚಿರವಾಗಿ ತನ್ನ ಕಾವ್ಯವನ್ನು ವಿಸ್ತರಿಸಿದ್ದಾನೆ. ಮನ್ವಂತರಾದಿಗಳ ವರ್ಣನೆಗೆ ತೊಡಗದೆ ಕಾವ್ಯಾಂಶಗಳಾದ ಅಷ್ಟಾದಶ ವರ್ಣನೆಗಳನ್ನು ವರ್ಣಿಸುವಲ್ಲಿ ಕವಿಯು ತನ್ನ ಪ್ರತಿಭೆಯ ನವನವೋನ್ಮೇಷವನ್ನು ತೋರಿಸಿದ್ದಾನೆ.

೧. ಛಂದಸ್ಸು ಲಕ್ಷಣಮಲಂಕಾರ ಭಾವರಸ
ವೊಂದಿ ಕಳೆವೆತ್ತ ಸತ್ಕೃತಿ ಚಮತ್ಕೃತಿ ಯುಕ್ತಿ
ಯೊಂದುಮಿಲ್ಲದ ಕಾವ್ಯಮುಶ್ರಾವ್ಯಮಹುದು......|| ಪೀಠಿಕಾ ಪ ೬.

೨. ಚತುರ ಪದಗತಿಯ, ಸರಸಧ್ವನಿಯ ವರ್ಣ ಶೋ
ಭಿತದಲಂಕಾರದ ಸುಲಕ್ಷಣದ ಲಾಲಿತ
ಶ್ರುತಿ ರಂಜನದ ವಿಶೇಷಾರ್ಥ ಸಂಚಿತದ ವಿಸ್ತಾರದಿಂ ಪೊಸತೆನಿಸುವ ||
ನುತ ಸತ್ಕವಿ ಪ್ರೌಢತರ ಸುಪ್ರಬಂಧದಂತೆ......... (೪-೮)

೩. ಸುಕವೀಂದ್ರನಂತೆ ಸಂ
ಘಟಿತ ಚಾತುರ್ಯ ಪದರಚನೆಯಿಂ ವಿವಿಧ ವಿಷಯಂಗ
ಳೊಳ್ಕಾಣಿಸಿದುದು || (೨೫-೬)

೪. ವಿಲಸಿತದ ಕೃತಿ ಲಲನೆ ಮೃದು ಪದ ವಿಲಾಸದಿಂ
ಸಲೆ ಸೊಗಸಲಡಿಗಡಿಗೆ ನಡೆಯಲ್ಕೆ ಚಿತ್ತಂಗ
ಳೊಲಿದೆಬಿಗದಿರ್ದಪುವೆ ಧರೆಯೊಳಗೆ ರಸಿಕರಾಗಿರ್ದ ಭಾವಕನಿಕರದ ||

(೩೪–೪೪)

ಎಂಬ ಅವತರಣಿಕೆಗಳಿಂದ ಕವಿ ಲಕ್ಷ್ಮೀಶನು ಕನ್ನಡ ಜೈಮಿನಿ ಭಾರತವನ್ನು ಬರೆಯುವಾಗ ಕಾವ್ಯಾಂಶಗಳನ್ನೇ ಮನಸ್ಸಿನಲ್ಲಿಟ್ಟುಕೊಂಡಿದ್ದನು ಮತ್ತು **ಅವನು ಕಾವ್ಯವನ್ನೇ ರಚಿಸಿದ್ದಾನೆ ಪುರಾಣವನ್ನಲ್ಲ ಎಂಬುದು ಸ್ಪಷ್ಟವಿದೆ.**

ವಾಙ್ಮಯದ ದೃಷ್ಟಿಯಿಂದ ಪುರಾಣಗಳಿಗೆ ಮಹತ್ತ್ವವಿಲ್ಲ. ಧಾರ್ಮಿಕ ಮತ್ತು ಸಾಮಾಜಿಕ ಇತಿಹಾಸ ಸಾಧನಗಳೆಂದು ಪುರಾಣದ ಉಪಯೋಗ ಅಭ್ಯಾಸಕರಿಗೆ ಹೆಚ್ಚಾಗಿ ಆಗುತ್ತದೆ. ಈ ರೀತಿಯ ಉಪಯೋಗವನ್ನು ನಾವು ಕನ್ನಡ ಜೈಮಿನಿ ಭಾರತದಲ್ಲಿ ಅಷ್ಟು ಕಾಣುವುದಿಲ್ಲ.

ಕನ್ನಡ ಜೈಮಿನಿ ಭಾರತ ಮತ್ತು ಸಂಸ್ಕೃತ ಜೈಮಿನಿ ಭಾರತ ಇವುಗಳ ತುಲನಾತ್ಮಕ ಅಭ್ಯಾಸ ಪ್ರಕರಣ ೬ರಲ್ಲಿ, ಕ. ಜೈ. ಭಾರತವು ಸಂ. ಜೈ. ಭಾರತದ ಪುರಾಣ ಪ್ರಧಾನ ಕಥನವನ್ನು ಕಾವ್ಯಪ್ರಧಾನ ಕಥನವನ್ನಾಗಿ ಹೇಗೆ ಮಾರ್ಪಡಿಸಿದೆ ಎಂಬುದನ್ನು ವಿವರವಾಗಿ ತೋರಿಸಿದ್ದೇವೆ. ಇಲ್ಲಿ ಕೆಲವು ಅಂಶಗಳನ್ನು ಮಾತ್ರ ಸಂಗ್ರಹಿಸಿ, ಲಕ್ಷ್ಮೀಶನ ಕಥನಕಲೆಯನ್ನು ಪ್ರದರ್ಶಿಸಿದರೆ ಸಾಕು.

ಧರ್ಮನ ಮ್ಲಾನ ವದನವನ್ನು ರಾಜ್ಯವೈಭವದ ಕಾಲಕ್ಕೆ, ಆನಂದ ಪಡಬೇಕಾದ ಕಾಲಕ್ಕೆ ತದ್ವಿರುದ್ಧವಾಗಿದ್ದ ಮುಖವನ್ನು ನೋಡಿ ವ್ಯಾಸನು ದುಃಖದ ಕಾರಣವನ್ನು ಕೇಳುತ್ತಾನೆ. ಆ ದುಃಖ ನಿವಾರಣೆಗಾಗಿ ಅಶ್ವಮೇಧ ಯಜ್ಞದ ಉಪಾಯವನ್ನು ಸೂಚಿಸುತ್ತಾನೆ. ಅಶ್ವಮೇಧವನ್ನು ಮಾಡುವುದಾದರೂ ಹೇಗೆ? ಯಜ್ಞಾಶ್ವದ ಲಕ್ಷಣವೇನು? ಯಜ್ಞಕ್ಕೆ ದ್ರವ್ಯವನ್ನು ಎಲ್ಲಿಂದ ಸಂಗ್ರಹಿಸಲಿ? ಇತ್ಯಾದಿ ಅನೇಕ ಪ್ರಶ್ನೆಗಳನ್ನು ಯುಧಿಷ್ಠಿರನು ಕೇಳುತ್ತಾನೆ. ಇವುಗಳಿಗೆಲ್ಲ ಪರಿಹಾರವನ್ನು ವ್ಯಾಸನು ಸೂಚಿಸುತ್ತಾನೆ. ಈ ರೀತಿ ಕನ್ನಡ ಜೈಮಿನಿ ಭಾರತ ಕಾವ್ಯ ಪ್ರಾರಂಭವಾಗುತ್ತದೆ.

ಕನ್ನಡ ಜೈಮಿನಿ ಭಾರತದಲ್ಲಿಯ ವ್ಯಾಸ ಮತ್ತು ಧರ್ಮರಾಯರ ಪ್ರಶ್ನೋತ್ತರದ ರೀತಿ ಸಂಸ್ಕೃತ ಜೈಮಿನಿ ಭಾರತದಲ್ಲಿಲ್ಲದ ಹೊಸರೀತಿ. ವ್ಯಾಸರು ಉಪದೇಶ ಮಾಡಲು ಕಾರಣವೇನೂ ಮೂಲದಲ್ಲಿ ಸೂಚಿಸಿಲ್ಲ. ವ್ಯಾಸರು ಹೇಳಿದರು ಎಂಬುದು ಒಂದು ಘಟನೆ; ಧರ್ಮನು ಕೇಳಿದನು ಎಂಬುದು ಇದು ಇನ್ನೊಂದು ಘಟನೆ ಇಷ್ಟೆ.

ಉದಾ: ರಾಜನು ಸತ್ತನು, ರಾಣಿಯು ಸತ್ತಳು ಎಂದು ಎರಡು ಘಟನೆಗಳಿಂದ ಒಂದು ಕಥೆಯನ್ನು ಹೇಳಬಹುದು. ಇದರಿಂದ ಕೇಳುವವನಲ್ಲಿ ಯಾವ ಕುತೂಹಲವೂ ಉಂಟಾಗುವುದಿಲ್ಲ. ಅದಲ್ಲದೆ ಇಬ್ಬರೂ ಏಕೆ ಸತ್ತರು ಎಂಬ ಸಂಶಯದಿಂದ ಮನಸ್ಸು ಮುಚ್ಚಿಕೊಳ್ಳುತ್ತದೆ. ರಾಜನು ಸತ್ತನು ಮತ್ತು ರಾಣಿಯು ಎದೆ ಒಡೆದುಕೊಂಡು, ಅಂಜಿ, ಕಣ್ಣೀರು ತೆಗೆಯಲಾರದೆ ಸತ್ತಳು. ರಾಜನು ಸತ್ತನು ಎಂಬ ಸುದ್ದಿಯನ್ನು ಕೇಳಿ ಸತ್ತಳು. ಈ ರೀತಿ ಹೇಳಿದರೆ ನಾವು ಒಂದು **ಕಥಾನಕ**ವನ್ನು ಹೆಣೆದಂತೆ ಆಗುತ್ತದೆ.

ಇಬ್ಬರು ಸಾಯುವ ಎರಡು ಘಟನೆಗಳಲ್ಲಿ ಕಾರ್ಯ–ಕಾರಣ ಸಂಬಂಧವನ್ನು ತೋರಿಸು ತ್ತೇವೆ. ಈ ಕಾರ್ಯ–ಕಾರಣ ಸಂಬಂಧದ ಮೂಲಕ ಕಥೆಯನ್ನು ಕೇಳುವವನ ಮನಸ್ಸು ಅರಳುತ್ತದೆ. ಮುಂದಿನ ಕಥೆಯನ್ನು ಕುತೂಹಲದಿಂದ ಕೇಳುತ್ತಾನೆ. ಎರಡು ಘಟನೆಗಳಲ್ಲಿ ಕಾರ್ಯ–ಕಾರಣ ಸಂಬಂಧವನ್ನು ಹೊಂದಿಸುವುದೇ (ಗ್ರಥನಕೌಶಲ) ಕಥಾನಕದ ಜೀವಾಳ. ಈ ಕಾರ್ಯವನ್ನು ಕವಿ ಲಕ್ಷ್ಮೀಶನು ಮಾಡಿದ್ದಾನೆ. ಹೀಗೆ ಕಾರ್ಯ–ಕಾರಣ ಸಂಬಂಧವನ್ನು ಹೊಂದಿಸಿದ ಇನ್ನೂ ಎರಡು ಸನ್ನಿವೇಶಗಳನ್ನು ನೋಡೋಣ:

೧. ರಾಮನು ಚಾರರಿಂದ ಗುಣಕೀರ್ತನ ಮತ್ತು ಅಪವಾದ ಕಥನವನ್ನು ಕೇಳಿದನು–ಒಂದು ಘಟನೆ. ರಾಮನಿಗೆ ದಃಸ್ವಪ್ನ ಬಿದ್ದಿತ್ತು–ಇನ್ನೊಂದು ಘಟನೆ. ಹೀಗೆ ಎರಡು ಘಟನೆಗಳು ಸಂ. ಜೈ. ಭಾರತದಲ್ಲಿ ಇವೆ. ಅವುಗಳನ್ನು ಕವಿ ಲಕ್ಷ್ಮೀಶನು ಈ ರೀತಿ ಹೊಂದಿಸುತ್ತಾನೆ: ರಾಮನಿಗೆ ದುಃಸ್ವಪ್ನ ಬಿದ್ದಿತ್ತು. ಅದರಿಂದ ಅವನು ಚಿಂತಾತುರನಾದನು. ಮನಃಶಾಂತಿಗಾಗಿ ರಾತ್ರಿ ನಗರಸಂಚಾರಕ್ಕಾಗಿ ಹೊರಟನು; ಆಗ ಅವನಿಗೆ ಚಾರನು ರಾಮನ ಗುಣಕೀರ್ತನ ಮತ್ತು ಅಪವಾದ ಕಥನವನ್ನು ಮಾಡು ತ್ತಾನೆ. ಅಪವಾದವನ್ನು ಕೇಳುವುದಕ್ಕೆ ದುಃಸ್ವಪ್ನವೇ ಕಾರಣ ಎಂಬುದು ಇಲ್ಲಿ ಸೂಚ್ಯ ವಾಗಿ ವೇದ್ಯವಾಗುವಂತಿದೆ.

೨. ಕುಳಿಂದಕ ಅರಣ್ಯಕ್ಕೆ ಬಂದನು; ಚಂದ್ರಹಾಸನನ್ನು ಎತ್ತಿಕೊಂಡು ಚಂದನಾವತಿಗೆ ಹೋದನು ಎಂಬ ಎರಡು ಘಟನೆಗಳು ಸಂ. ಜೈ. ಭಾರತದಲ್ಲಿ ಇವೆ. ಲಕ್ಷ್ಮೀಶನು ಕೇವಲ ಇಷ್ಟನ್ನೇ ಹೇಳುವುದಿಲ್ಲ. ಕುಳಿಂದಕನು ಬೇಡ ದೊರೆ; ಬೇಟೆ ಗಾಗಿ ಅಡವಿಗೆ ಬಂದನು. ಬೇಟೆಯನ್ನು ಆಡುಆಡುತ್ತ ದೈವವಶಾತ್ ಚಂದ್ರಹಾಸ ಬಾಲಕನಿರುವ ಸ್ಥಾನಕ್ಕೆ ಬಂದನು. ಮಗನಿಲ್ಲದ ಕುಳಿಂದಕನಿಗೆ ಶೋಕಾಕುಲನಾದ ಈ ಮುದ್ದು ಮಗುವನ್ನು ನೋಡಿ ಕರುಣೆ, ಪ್ರೇಮ, ವಾತ್ಸಲ್ಯ ಒಡಮೂಡಿತು. ಆದುದ ರಿಂದ 'ಹರಿನಾಮವನೇ ಜಪಿಸುತಿಹ' ಚಂದ್ರಹಾಸನನ್ನು ತನ್ನ ಪಟ್ಟಣಕ್ಕೆ ಚಂದನಾ ವತಿಗೆ ಒಯ್ಯುತ್ತಾನೆ. ಹೀಗೆ ಘಟನೆಗಳ ಸಹಜ ಜೋಡಣೆಯಿಂದ ಸನ್ನಿವೇಶವನ್ನು ಚಿತ್ರಿಸುವ ಜಾಣ್ಮೆಯನ್ನು ಇಲ್ಲಿ ಕಾಣುತ್ತೇವೆ.

ಕವಿ ಲಕ್ಷ್ಮೀಶನು ಜನಕ್ಕೆ ಏನು ಹೇಳಬೇಕಾಗಿದೆಯೋ, ಜನದ ಮನದಲ್ಲಿ ಯಾವ ಪರಿಣಾಮವನ್ನು ಮೂಡಿಸಬೇಕಾಗಿದೆಯೋ ಆ ಮಾತನ್ನು ಪಾತ್ರದ ಮುಖಾಂತರ ಹೇಳಿಸಿ, ಕೃತಿಯಲ್ಲಿ ತೋರಿಸಿ, ಅದರಿಂದ ಪ್ರತಿಪಾತ್ರದ ಮೇಲಾಗುವ ಪರಿಣಾಮ, ಕ್ರಿಯೆ, ಪ್ರತಿಕ್ರಿಯೆಗಳ ವಿಲಾಸವನ್ನು ತೋರಿಸಿ, ಉದ್ದೇಶವನ್ನು ಸಾಧಿ ಸುವ ರೀತಿಯು ಪ್ರಭಾವಶಾಲಿಯಾಗಿದೆ.

ಉದಾ: ವೃಷಕೇತು ಯುದ್ಧಕ್ಕಾಗಿ ಹೊರಡಲಿದ್ದಾನೆ. ತನ್ನ ಪತ್ನಿ ಪ್ರಭಾವತಿಯ ಒಪ್ಪಿಗೆಯನ್ನು ಪಡೆಯಲು ಹೋಗಿದ್ದಾನೆ. ಆಗ ಪ್ರಭಾವತಿ 'ಮುರಹರನ ರಾಣಿಯರ್ ಧುರಧೀರ ಕರ್ಣಸುತನರಸಿಯೆಂದೆನ್ನಂ ಪೊಗಳ್ವಂತೆ ಮಿಗೆ ಸಂಗರದೊಳರಿಗಳಂ

ಗೆಲ್ವುದು' ಎಂದು ಹಾರೈಸಿ, ಆರತಿ ಎತ್ತಿ, ಆಲಿಂಗನವನ್ನು ಕೊಟ್ಟರೆ ವೃಷಕೇತು ಒಂದು ಮಾತನ್ನೂ ಆಡದೇ ಮುದ್ದಿಟ್ಟು, ಉಗುರಿನಿಂದ ಕುರುಳನ್ನು ತೀಡಿ, ತನ್ನ ಉಂಗುರವನ್ನು ಅವಳ ಬೆರಳಿಗಿಟ್ಟು ಯುದ್ಧಕ್ಕೆ ಹೊರಟನಂತೆ.

೨. ಅನುಸಾಲ್ವನೊಂದಿಗೆ ಹೋರಾಡಿ ಕೃಷ್ಣನು ಮೂರ್ಛಿತನಾಗುತ್ತಾನೆ. ಆಗ ಸತ್ಯಭಾಮೆ ಕೃಷ್ಣನನ್ನು ಉದ್ದೇಶಿಸಿ ಛೇಡಿಸಿ ಮಾತನಾಡುತ್ತಾಳೆ. ಆಗ ಕೃಷ್ಣನ ಮೇಲೆ ಆದ ಪರಿಣಾಮ 'ನುಡಿಗೆ ಲಜ್ಜಿಸಿ, ಮನಂ ಕಂದೆ, ಕಣ್ಣಾಲಿಗಳ್ ಕೆಂಪಡರೆ?' ಕೃಷ್ಣನು ರಣಾಂಗಣಕ್ಕೆ ಮತ್ತೆ ಹೊರಟನು. ಇಂಥ ಚಿತ್ರಣದಲ್ಲಿ ಕವಿ ಲಕ್ಷ್ಮೀಶನ ಸೂಕ್ಷ್ಮದೃಷ್ಟಿಯನ್ನು ನಾವು ಕಾಣಬಹುದು.

೩. ವಾಲ್ಮೀಕಿಯು, ಅರಣ್ಯದಲ್ಲಿ ಒಬ್ಬಂಟಿಗಳಾಗಿದ್ದ ಜಾನಕಿಯನ್ನು ಕುರಿತು 'ನೀನಾವಳೌ? ಕಂಡ ಕುಜಿಪಾಗಿರ್ಪುದು; ಭೀರು ಹೇಳೌ ಹೆದರ ಬೇಡ. ವಾಲ್ಮೀಕಿ ನಾಂ; ಭೂರಿ ಶೋಕಾರ್ತರಾಗಿರ್ದರಂ ಕಂಡು ಸುಮ್ಮನೆ ಪೋಪನಲ್ಲ' ಎನ್ನುತ್ತಾನೆ. ಇಲ್ಲಿಯ ಸುಟ್ಟವಾಕ್ಯಗಳನ್ನು ನೋಡಿರಿ. ಈ ಭಾಷೆಯನ್ನೇ ಲಕ್ಷ್ಮೀಶನು ಸಂಭಾಷಣೆಯಲ್ಲಿ ಉಪಯೋಗಿಸುತ್ತಾನೆ.

ವಾಲ್ಮೀಕಿಯ ಮಾತನ್ನು ಕೇಳಿದ್ದೊಂದೇ ಅವಕಾಶ, 'ಹರುಷಮೊತ್ತರಿಸಿದುದು, ಶೋಕ ಇಮ್ಮಡಿಸಿದುದು, ಬೆರಸಿದುದು ಲಜ್ಜೆ' ಜಾನಕಿಗೆ. ಮನೋಧರ್ಮದ ಸೂಕ್ಷ್ಮದರ್ಶನ ಪಡೆದ ಲಕ್ಷ್ಮೀಶನು ಕೊಡುವ ಸೀತೆಯ ಚಿತ್ರವಿದು. ಭಾವಭಾವಗಳ ಪದರುಗಳನ್ನು ಬಿಚ್ಚಿ ತೋರಿಸುವ ಕಲೆ ಈ ಕವಿಗೆ ಕರತಲಾಮಲಕವಾಗಿದೆ.

೪. ಶ್ರೀಕೃಷ್ಣನು ಹಂಸಧ್ವಜನಿಗೆ ಭೆಟ್ಟಿಯಾಗುವ ರೀತಿಯನ್ನು 'ಕುದುರೆಗಳ ವಾಘೆಯ ನಿಲಿಸಿ, ಜಗುಳಿದ ಪೀತಾಂಬರವನು ಅಂಸದೊಳು ಸಾರ್ಚುತೆ, ವರೂಥವನು ಇಳಿದು, ಸಿಂಹವನು ಸೋಲಿಸುವ ಗತಿಯಿಂದ ತನ್ನನು ಸೇವಿಸುವವರಿಗೆ (ತಾನು) ಸೇವಕನು ಎಂಬುದನ್ನು ತೋರುತ್ತಾ ಆತನ ಸಮೀಪಕ್ಕಾಗಿ ಐತಂದನು' ಎಂದು ವರ್ಣಿಸುತ್ತಾನೆ. ಭಕ್ತನನ್ನು ಬರಮಾಡಿಕೊಳ್ಳುವಲ್ಲಿ ಕೃಷ್ಣನಿಗಿದ್ದ ಆತುರ ಇಲ್ಲಿ ಚೆನ್ನಾಗಿ ದೃಶ್ಯವಾಗಿದೆ.

೫. ಸಜ್ಜುಕಂ ಮುಡಿವ, ತಿಲಕಮನೀಡುವ, ಮೊಗಮುರಿವ, ಕಜ್ಜಳಂ ಬರೆವ, ಕನ್ನಡಿಯಂ ನಿಟ್ಟಿಪ, ಪಾಡುವುಜ್ಜುಗದ, ನರ್ತನದ ತೋಪುಗಳ, ವೀಣಾದಿ ವಾದ್ಯಮಂ ಬಿತ್ತರಿಸುವ ಗೊಂಬೆಗಳಿಂದ ಬಭ್ರುವಾಹನನ ಓಲಗದ ವರ್ಣನೆಯನ್ನು ಕವಿಯು ಮಾಡುತ್ತಾನೆ.

೬. ಕುಳಿಂದಕನು ಮಗು ಚಂದ್ರಹಾಸನನ್ನು ತನ್ನ ಸತಿ ಮೇಧಾವಿನಿಗೆ ತಂದು ಕೊಟ್ಟಾಗ ಆಕೆ 'ಕಂದನಂ ತೆಗೆದೆತ್ತಿಕೊಳುತ ಬಿಗಿಯಪ್ಪಿ, ಸಾನಂದದಿಂ ಪೊರೆಯೇರಿದಳ್; ತನ್ನ ಬಂಜೆತನನಿಂದು ಪೋದುದು, ಪುತ್ರವತಿಯಾದೆ, ಎನ್ನ ಪುಣ್ಯದ್ರುಮಂ ಫಲಿಸಿತಿಂದು' ಎಂದು ತನ್ನ ಮನೋಭಾವವನ್ನು ವ್ಯಕ್ತಪಡಿಸುತ್ತಾಳೆ. ಈ ಮೂರು ವರ್ಣನೆಗಳು (೪-೫-೬) ಶಬ್ದಚಿತ್ರಗಳಲ್ಲದೆ ಮತ್ತೇನು? ಇಂಥ ಶಬ್ದಚಿತ್ರಗಳ

ಮೂಲಕ ಶ್ರಾವ್ಯ ಕಾವ್ಯಕ್ಕೂ ದೃಶ್ಯಕಾವ್ಯದ, ನಾಟಕದ, ರೂಪಕದ ಸೊಬಗು ಬರುತ್ತದೆ.

ಕಥಾನಕದ ದೃಷ್ಟಿಯಿಂದ ಕಾವ್ಯದ ರಸಾತ್ಮಕತೆಗೆ ಭಂಗವನ್ನು ತರುವಂತಹ ಅಥವಾ ಹಿತಮಿತವಲ್ಲದ ಭಾಗಗಳನ್ನು ತನ್ನ ಕಾವ್ಯದಲ್ಲಿ ತೆಗೆದುಹಾಕುವ ವಿಶಿಷ್ಟ ಪ್ರತಿಭೆ, ಬುದ್ಧಿ ಸ್ವಾತಂತ್ರ್ಯ ಇವು ಕಥನ ಕಲೆಯ ಒಂದು ಮುಖ್ಯ ಅಂಶವಾಗಿವೆ.

ಲಕ್ಷ್ಮೀಶನು ಕೃಷ್ಣನ ಭೋಜನದ ವರ್ಣನೆ, ಭೀಷಣನ ಅತಿ ವಾಚಾಳಿತನ, ವೀರವರ್ಮನ ಕಥಾನಕದಲ್ಲಿಯ ಕರ್ಮವಿಪಾಕ ಕಥನ, ಇವುಗಳನ್ನು ರಸಪೋಷಕವಾಗುವಂತೆ ಸಂಗ್ರಹಿಸುತ್ತಾನೆ. ಹೆಚ್ಚೆನಿಸಿದ ಭಾಗವನ್ನು ತೆಗೆದುಹಾಕುತ್ತಾನೆ. ರಾಮನ ಜನನದಿಂದ ಪಟ್ಟಾಭಿಷೇಕದವರೆಗಿನ ಪೂರ್ವರಾಮಾಯಣದ ವಿಸ್ತಾರವಾದ ಭಾಗವನ್ನು ೮ ಪದ್ಯಗಳಲ್ಲಿ ಸಂಗ್ರಹಿಸುತ್ತಾನೆ. ಇಂಥ ಸನ್ನಿವೇಶಗಳಲ್ಲಿ ಕವಿ ಲಕ್ಷ್ಮೀಶನು ಸಂಪಾದಕೀಯ ಪರಿಜ್ಞಾನವನ್ನು ತೋರಿಸಿದ್ದಾನೆ.

'ಮುಂದೆ ಶೋಭಿಸಿತು ವರ್ಷಾಗಮಂ ಧರೆಯ ಬೇಸಗೆಯ ಬೇಸಱಂ ತವೆ ತವಿಸುತೆ' ಅಥವಾ 'ಘೋರ ನಕ್ರಾಕುಲದ ಪೆರ್ಮಡುಗಳಿಂದೆ ಗಂ | ಭೀರಮಾಗಿಹ ಮಹಾನದಮಿರ್ದ್ದುದೊಂದದಂ | ಭೂರಿ ಪೋತ ಪ್ರಕರದಿಂ ಕಳಿದನಮನಗರೀ ಶ್ರೀಶನಾಜ್ಞೆಯಿಂದೆ' ಇಂಥ ವರ್ಣನಾಪದ್ಯಗಳು ಮುಂದೊದಗುವ ಘಟನೆಯನ್ನು ಅನ್ಯೋಕ್ತಿಯಿಂದ ಸೂಚಿಸುತ್ತವೆ. ವರ್ಷಾಗಮನದ ವರ್ಣನೆಯು ಬಭ್ರುವಾಹನನ ಕಥೆಯಲ್ಲಿ ಬರಲಿರುವ ದುಃಖವನ್ನು ಮತ್ತು ಅನಂತರದಲ್ಲಿ ಬರುವ ಯುದ್ಧಕಾಂತಿಯ ಆನಂದವನ್ನು ಸೂಚಿಸುತ್ತದೆ. 'ಘೋರ ನಕ್ರಾಕುಲದ ಪೆರ್ಮಡು'ವಿನಂತಿರುವ ಚಂದ್ರಹಾಸ ಕಥಾನಕದ ಸೂಚನೆಯು ೨೭ನೆಯ ಸಂಧಿಯ ಮುಕ್ತಾಯದ ಪದ್ಯದಲ್ಲಿ ಕೊಡಲ್ಪಡುತ್ತದೆ. ಲಕ್ಷ್ಮೀಶನ ಈ ವಿಶಿಷ್ಟವಾದ ರೀತಿ ಕಾವ್ಯವನ್ನು ಧ್ವನಿ ಕಾವ್ಯದ ಮಟ್ಟಕ್ಕೆ ಏರಿಸುತ್ತದೆ.

ಸಂಸ್ಕೃತ ಜೈಮಿನಿ ಭಾರತದಲ್ಲಿ ಇಲ್ಲದೇ ಇದ್ದ ಸಂಧ್ಯಂಗ ಲಕ್ಷಣಗಳನ್ನು ಸೇರಿಸಿ, ಕಾವ್ಯದ ರಸಮಯತೆಯನ್ನು ಯಾವ ರೀತಿ ಬೆಳೆಸಿದ್ದಾನೆ ಎಂಬುದನ್ನು 'ತುಲನಾತ್ಮಕ ಅಭ್ಯಾಸ' ಮತ್ತು 'ಕಾವ್ಯವಸ್ತು' ಎಂಬ ಪ್ರಕರಣಗಳಲ್ಲಿ ತೋರಿಸಿದೆ.

ಸಂಸ್ಕೃತ ಜೈಮಿನಿ ಭಾರತದ ಕಥಾವಸ್ತುವಿಗೆ ಅಷ್ಟಾದಶ ವರ್ಣನೆಗಳನ್ನು ಸೇರಿಸಿ, ಒಂದು ಹೊಸ ಕಳೆಯನ್ನು, ಕಾವ್ಯಕ್ಕೆ ಏಕಮುಖತೆಯನ್ನು ಲಕ್ಷ್ಮೀಶನು ಸಾಧಿಸಿದ್ದಾನೆ. ಯಜ್ಞಾಶ್ವವು ಒಂದು ವರ್ಷದವರೆಗೆ ಪರಿಭ್ರಮಣವನ್ನು ಮಾಡಬೇಕು. ಸಂ. ಜೈ. ಭಾರತದಲ್ಲಿ ಋತುವರ್ಣನೆಗಳು ಇಲ್ಲದ್ದರಿಂದ ಕಥೆಗಳನ್ನು ಹೇಳುವುದು ಎಲ್ಲಿಗೆ ಮುಗಿಸಬೇಕು ಎಂಬ ಬಂಧನವಿಲ್ಲ. ಅಲ್ಲಿ ಬರುವ ಅನೇಕ ಕಥಾನಕಗಳೊಂದಿಗೆ ಇನ್ನೂ ಹಲ ಕೆಲವು ಕಥಾನಕಗಳನ್ನು ಸೇರಿಸಲು ಅಲ್ಲಿ ಸ್ಥಾನವಿದೆ. ಆದರೆ ಕನ್ನಡ ಕಾವ್ಯದಲ್ಲಿ ಋತುವರ್ಣನೆಯ ಮೂಲಕ ಕಾವ್ಯದಲ್ಲಿ ಹೊಸ ಕಥಾನಕಗಳನ್ನು ಸೇರಿಸಲು ಬರುವಂತಿಲ್ಲ. ವರ್ಷ ಮುಗಿದೊಡನೆ ಯಜ್ಞವಾಗಲೇಬೇಕು. ಯಜ್ಞ ಮುಕ್ತಾಯದೊಂದಿಗೆ ಕಾವ್ಯ ಮುಕ್ತಾಯ.

೧. ಪುರಾಣಪ್ರಧಾನ ಕಥನವನ್ನು ಕಾವ್ಯಪ್ರಧಾನ ಕಥನಮಾಡುವಲ್ಲಿ ೨. ಕಥೆಯನ್ನು ಕಥಾನಕವಾಗಿ ಮಾರ್ಪಡಿಸುವಲ್ಲಿ ೩. ಮಾತು-ಪರಿಣಾಮ, ಕ್ರಿಯೆ-ಪ್ರತಿಕ್ರಿಯೆಗಳನ್ನು ಸೂಕ್ಷ್ಮವಾಗಿ ನೋಡುವಲ್ಲಿ ೪. ಸಂವಾದ ಚಾತುರಿಯಲ್ಲಿ ೫. ಭಾವ ಭಾವಗಳ ಪದರುಗಳನ್ನು ಬಿಚ್ಚಿ ತೋರಿಸುವಲ್ಲಿ ೬. ಸನ್ನಿವೇಶಗಳನ್ನು ಹೊಂದಿಸುವಲ್ಲಿ ೭. ವರ್ಣನೆಗಳಿಂದ ಮುಂಬೊದಗುವ ಘಟನೆಗಳನ್ನು ಸೂಚಿಸುವಲ್ಲಿ ೮. ಕಾವ್ಯ ಕಥೆಗೆ ಋತುವರ್ಣನೆಗಳಿಂದ ಹೊಸ ಚೌಕಟ್ಟನ್ನು ಹಾಕಿ, ಏಕಮುಖತೆಯನ್ನು ಸಾಧಿಸುವಲ್ಲಿ ೯. ಕಾವ್ಯ ಪ್ರಾರಂಭದಿಂದ ಮುಕ್ತಾಯದವರೆಗೆ ಓದುಗನ ಕುತೂಹಲವನ್ನು ಜಾಗ್ರತವಾಗಿ ಇಡುವಲ್ಲಿ ೧೦. ಹಲ ಕೆಲವು ಭಾಗಗಳನ್ನು ವಿಸ್ತರಿಸಿ, ಸಂಗ್ರಹಿಸಿ, ತೆಗೆದುಹಾಕಿ, ಸಂಪಾದಕೀಯ ಪ್ರಜ್ಞೆ ತೋರಿಸುವಲ್ಲಿ ೧೧. ಶಬ್ದಚಿತ್ರಗಳಿಂದ ಶ್ರಾವ್ಯ ಕಾವ್ಯಕ್ಕೆ ದೃಶ್ಯ ಕಾವ್ಯದ ರೂಪು ಕೊಡುವಲ್ಲಿ, ಮತ್ತು ೧೨. ಸಂ. ಜೈ. ಭಾರತದಲ್ಲಿ ಇಲ್ಲದ ಸಂಧ್ಯಂಗ ಲಕ್ಷಣಗಳನ್ನು ಸೇರಿಸಿ ಕಾವ್ಯವನ್ನು ರಸಮಯವಾಗಿ ಮಾಡುವಲ್ಲಿ ಕವಿ ಲಕ್ಷ್ಮೀಶನು ಹೊಸತನವನ್ನು, ವಿನೂತನತೆಯನ್ನು, ಸ್ವತಂತ್ರ ಪ್ರತಿಭೆಯನ್ನು ತೋರಿಸಿದ್ದಾನೆ. ಇದು ಕವಿ ಲಕ್ಷ್ಮೀಶನ ಕಥನ ಕಲೆಯ ಹಂದರ.

## ಜೈಮಿನಿ ಭಾರತದ ಶೈಲಿ : ರೀತಿ

ಶೈಲಿ ಎಂದರೆ ಏನು? ಎಂಬುದರ ಬಗ್ಗೆ ಸಾಕಷ್ಟು ಭಿನ್ನಾಭಿಪ್ರಾಯಗಳಿವೆ. ಅವುಗಳನ್ನೆಲ್ಲ ಎಸ್. ವಿ. ರಂಗಣ್ಣನವರು 'ಶೈಲಿಯ ಸ್ವರೂಪ' (ಶೈಲಿ-೧) ಎಂಬ ಲೇಖನದಲ್ಲಿ ವಿಸ್ತಾರವಾಗಿ ಚರ್ಚಿಸಿದ್ದಾರೆ. ಕವಿಯ ಶೈಲಿ ಅವನ ಅಂತರಂಗಕ್ಕೆ ಸಂಬಂಧಿಸಿದ್ದೋ? ಅಥವಾ ಕಾವ್ಯದ ಅಂತರಂಗದ ಸತ್ತ್ವವೋ? ಅಥವಾ ಕಾವ್ಯದ ಬಹಿರಂಗದ ಅಲಂಕಾರ, ಭೂಷಣವೋ? ಎಂಬುದರ ಬಗ್ಗೆ ಬೇರೆ ಬೇರೆ ಮತಗಳಿವೆ. ಎಸ್. ವಿ. ರಂಗಣ್ಣನವರು 'ವಸ್ತು ಪರಮೇಶ್ವರನಾದರೆ ರೀತಿ ಪಾರ್ವತಿ' ಎಂಬ ಅಭಿಪ್ರಾಯಕ್ಕೆ ಬಂದಿದ್ದಾರೆ. ವಸ್ತು ಮತ್ತು ರೀತಿ (ಎಂದರೆ ಶೈಲಿ) ಒಂದನ್ನೊಂದು ಬಿಟ್ಟು ಇಲ್ಲ. ವಾಗರ್ಥಗಳು ಸಂಪೃಕ್ತವಾಗಿರುವಂತೆ ಒಂದನ್ನೊಂದು ಕೂಡಿಕೊಂಡೇ ಇರುತ್ತವೆ.

ಆಂಗ್ಲ ಸಾಹಿತ್ಯವಿಮರ್ಶಕರು ಶೈಲಿಯ ಬಗ್ಗೆ ಬೇರೆ ಬೇರೆ ಅಭಿಪ್ರಾಯವುಳ್ಳವರಾಗಿದ್ದಾರೆ. ಅವುಗಳಲ್ಲಿ ಕೆಲವನ್ನು ಇಲ್ಲಿ ನೋಡೋಣ :

೧. 'ಕವಿಯ ಭಾವ-ಭಾವನೆಗಳು, ವ್ಯಕ್ತಿಶಕ್ತಿಯೂ ಭಾಷೆಯ ಮೂಲಕ ಪ್ರಕಾಶಗೊಳ್ಳುವ ವಿಸ್ಮಯ ವಿದ್ಯಮಾನವನ್ನು ನಿರ್ದೇಶಿಸಲು ಸಾಹಿತ್ಯವಿಮರ್ಶೆ "ಶೈಲಿ" ಎಂಬ ಪದವನ್ನು ಬಳಸುತ್ತದೆ.'

೨. 'ಭಾವನೆ ಕೊಡಬಹುದಾದ ಪ್ರತಿಫಲ.'

೩. 'ಆಲೋಚನೆಗೆ ಸಾಕಷ್ಟು ಸಮರ್ಪಕಭಾಷೆಯನ್ನು ತೊಡಿಸುವ ಸಮಾರಂಭವೇ ಶೈಲಿ. ಕಾವ್ಯದ ವಸ್ತು ಒಂದು ಶಿಲಾವಿಗ್ರಹವಾದರೆ, ಕಾವ್ಯಶೈಲಿ ಆ ವಿಗ್ರಹದ

ಆಕೃತಿಯನ್ನು ಅಂಗಭಂಗಿಯನ್ನೂ ಮುದ್ದಾಗಿ ಪ್ರದರ್ಶಿಸುವ ನಿರಿಗೆವಸ್ತ್ರದಂತೆ.'

೪. 'ಶೈಲಿ ಲೇಖಕನ ಅಂಗಿಯಲ್ಲ, ತೊಗಲು.'

೫. 'ಸುಂದರ ಕಾವ್ಯದೇವಿಯ ಮುಖಬಣ್ಣದ ಹೊಳಪೇ ಶೈಲಿ, ಕವಿ ತನ್ನ ಸ್ವಂತ ಆಸ್ತಿಯಿಂದಲೋ ಇತರರಿಂದ ಎರವು ಪಡೆದೋ ಅದನ್ನು ಆವಳಿಗೆ ದಾನವೀಯುತ್ತಾನೆ.'

೬. 'ಆಲೋಚನೆಯ ಅವತಾರ.'

೭. 'ಕವಿಯೇ ಶೈಲಿ.'

೮. 'ಕವಿಯು ಇದ್ದ ಕಾಲ, ಆಗಿನ ಭಾಷೆ, ಶಬ್ದಗಳ ಅರ್ಥವಹೌಲ್ಯ, ಶಬ್ದಗಳ ರೂಪ ನಿಷ್ಪತ್ತಿ ಮತ್ತು ಶಬ್ದಗಳ ನಾದಮಾಧುರ್ಯ ಇವುಗಳನ್ನು ಅರಿತಾಗ ಆ ಕವಿಯ ಶೈಲಿಯನ್ನು ಗುರುತಿಸಬಹುದು.'[1]

ಈ ಎಲ್ಲ ಅಭಿಪ್ರಾಯಗಳನ್ನು ನೋಡಿದಾಗ ಆಂಗ್ಲ ವಿಮರ್ಶಕರಲ್ಲಿ ಕೆಲವರು ಶೈಲಿ ಎಂಬುದು ಬಾಹ್ಯಾಂಗ ಸೌಂದರ್ಯವೆಂದರೆ ; ಕೆಲವರು ಭಾಷೆ ಎಂಬುದು ಬಣ್ಣ ಎಂದು ಅಭಿಪ್ರಾಯಪಟ್ಟಿದ್ದಾರೆ. ಇನ್ನು ಕೆಲವರು ಶೈಲಿ ಎಂಬುದು ಕವಿಯ ಅಂತರಂಗಕ್ಕೆ ಸಂಬಂಧಿಸಿದುದು ಎನ್ನುತ್ತಾರೆ. ಭಾಷೆಯ ಸೌಂದರ್ಯ ಮತ್ತು ಭಾವಜಾಗ್ರತಿ, ರಸ ನಿಷ್ಪತ್ತಿಗೆ ಆಂಗ್ಲವಿಮರ್ಶಕರ ವಿಚಾರಗಳು ನಿಲ್ಲುತ್ತವೆ.

ಭಾರತೀಯ ಸಾಹಿತ್ಯಶಾಸ್ತ್ರವಿಮರ್ಶಕರಲ್ಲಿ ಭಾಮಹ, ದಂಡಿ, ವಾಮನ ಮೊದಲಾದವರು ಕಾವ್ಯದ ಶೈಲಿಯ ಬಗ್ಗೆ ವಿಚಾರಗಳನ್ನು ವ್ಯಕ್ತಪಡಿಸಿದ್ದಾರೆ. ಶೈಲಿ ಇದು ಕಾವ್ಯದ ಗುಣ. ಈ ಗುಣ ವಕ್ರೋಕ್ತಿಯ ಮೂಲಕ, ಅಲಂಕಾರಗಳ ಮೂಲಕ ಕಾವ್ಯಕ್ಕೆ ಪ್ರಾಪ್ತವಾಗುತ್ತದೆ, ಸ್ವಭಾವೋಕ್ತಿಯಿಂದಲ್ಲ ಎಂದು ಭಾಮಹನು ಅಭಿಪ್ರಾಯ ಪಟ್ಟಿದ್ದಾನೆ. ಶ್ಲೇಷಯುಕ್ತಸ್ವಭಾವೋಕ್ತಿಯೂ ಕಾವ್ಯಸೌಂದರ್ಯಾತಿಶಯವನ್ನು ಸಾಧಿಸುತ್ತದೆ ಎಂದು ದಂಡಿಯ ಅಭಿಪ್ರಾಯ. ಕಾವ್ಯದ ಶೈಲಿಗೆ 'ರೀತಿ' ಎಂಬ ಪದವನ್ನು ಬಳಸಿ, ಅದು ಕಾವ್ಯದ ಆತ್ಮ ಎಂದು ಹೇಳಿದವನು ವಾಮನ. ಉಳಿದೆಲ್ಲ ಆಲಂಕಾರಿಕರು 'ರೀತಿ' ಎಂದರೆ ಕಾವ್ಯಶರೀರದ ಅಂಗವಿನ್ಯಾಸ ಎಂದು ಅಭಿಪ್ರಾಯಪಟ್ಟಿದ್ದರು. ವಾಮನನು, 'ರೀತಿ' ಎಂಬುದು ಬಾಹ್ಯಾಲಂಕಾರವಲ್ಲ, ಕಾವ್ಯದ ಅಂತರಂಗ–ಅಂತಃಕರಣ ಎಂದು ತೋರಿಸಿಕೊಟ್ಟನು. ಕಾವ್ಯದಲ್ಲಿ ಸೌಂದರ್ಯ ಬರಲು ಕಾರಣ ಶಬ್ದಾರ್ಥಗುಣ ಮತ್ತು ಅಲಂಕಾರ. ಗುಣ ಮತ್ತು ಅಲಂಕಾರ ಇವೆರಡಕ್ಕೂ ಮೊದಲಿನದಾಗಿ ಅಂತರಂಗದ ಸತ್ತ್ವವಾಗಿ 'ರೀತಿ' ಇರುತ್ತದೆ. ಶಬ್ದಗತಸಾದೃಶ್ಯ, ಅರ್ಥಗತಸಾದೃಶ್ಯ, ಅಕ್ಷರ ಸಾದೃಶ್ಯ, ನಾದಸಾದೃಶ್ಯ ಇವುಗಳನ್ನು ಕಂಡು ಕಾಂತಿಗುಣಯುಕ್ತವಾಗಿ, ರಸೋದ್ದೀಪನವನ್ನುಂಟುಮಾಡಿ, ರಸಿಕನಲ್ಲಿ ಆನಂದವನ್ನುಂಟುಮಾಡುವುದೇ ಕಾವ್ಯದ ರೀತಿ

---

[1] ೧ ರಿಂದ ೮ ಅಭಿಪ್ರಾಯಗಳನ್ನು 'ಶೈಲಿ' (ಭಾಗ ೨) ಎಸ್. ವಿ. ರಂಗಣ್ಣ *Theory of Literature*, Rene Wellek & Austin Warren ಮತ್ತು *Style*, F. L. Lucas ಈ ಪುಸ್ತಕಗಳಿಂದ ಸಂಗ್ರಹಿಸಿದೆ.

ಎಂದು ವಾಮನನ ಅಭಿಪ್ರಾಯ. ಶಬ್ದಾರ್ಥಗತವಾದ ಕವಿಯ ಅಖಂಡಮನೋಧರ್ಮವೇ ರೀತಿ. ರಸಿಕನಲ್ಲಿ ಆನಂದವನ್ನುಂಟುಮಾಡುವುದೇ ಕವಿಯ ರೀತಿಯ ಸಿದ್ಧಿ ಎಂಬ ವಿಶಾಲಾರ್ಥದಲ್ಲಿ ವಾಮನನು 'ರೀತಿ' ಎಂಬ ಪದವನ್ನು ಬಳಸುತ್ತಾನೆ. ಗುಣ, ಅಲಂಕಾರ, ಛಂದಸ್ಸು, ಲಕ್ಷಣ, ಭಾವ, ರಸ ಇವುಗಳ ಸಮಷ್ಟಿಪರಿಣಾಮ ಆನಂದ. ಈ ಆನಂದಕ್ಕೆ ಕಾರಣ ಕವಿಯ ಮತ್ತು ಕಾವ್ಯದ ರೀತಿ.

ಆಂಗ್ಲಸಾಹಿತ್ಯಶಾಸ್ತ್ರವಿಮರ್ಶಕರ ಶೈಲಿಯ ವಿಚಾರವು ರಸಿಕರ ಭಾವೋದ್ದೀಪನ, ರಸಪುಷ್ಟಿಯವರೆಗೆ ಮುಟ್ಟುತ್ತದೆಯೇ ಹೊರತು ಆನಂದನಿರ್ಮಿತಿಯತ್ತ ಹೋಗುವುದಿಲ್ಲ. ಅವರ ದೃಷ್ಟಿ ಭಾಷೆಯ ಸೌಂದರ್ಯ ಭಾವಜಾಗ್ರುತಿಯತ್ತ ಕೇಂದ್ರೀಕರಿಸಲ್ಪಟ್ಟಿದೆ.

ಆದುದರಿಂದಲೇ ಕೆ. ಕೃಷ್ಣಮೂರ್ತಿಯವರು 'ಇಂಗ್ಲಿಷಿನಲ್ಲಿ "**style**" ಎಂಬ ಶಬ್ದ ಎಷ್ಟು ಅರ್ಥದಲ್ಲಿ ಉಪಯೋಗಿಸುತ್ತಾರೋ ಅದಕ್ಕೂ ಹೆಚ್ಚಿನ ವಿಶಾಲಾರ್ಥ ವಾಮನನ ಸಿದ್ಧಾಂತದಲ್ಲಿ "ರೀತಿ" ಎಂಬ ಶಬ್ದಕ್ಕಿದೆ' ಎಂದು ಅಭಿಪ್ರಾಯಪಟ್ಟಿದ್ದಾರೆ (ಕನ್ನಡ ಕಾವ್ಯಾಲಂಕಾರ ಸೂತ್ರವೃತ್ತಿ–ಪು. ೧೫). ಅದೇನೇ ಇದ್ದರೂ ಸ್ಥೂಲಮಾನದಿಂದ ನಾವು ಇನ್ನು ಮೇಲೆ ಕಾವ್ಯದ ಶೈಲಿಗೆ–ಶೈಲಿ ಮತ್ತು ರೀತಿ ಇವೆರಡನ್ನೂ ಸಮಾನಾರ್ಥಕ ಪದಗಳಾಗಿ ತಿಳಿದು ಉಪಯೋಗಿಸುತ್ತೇವೆ.

'ಶೈಲಿ ಎಂದರೆ ಪ್ರತಿಯೊಬ್ಬ ವ್ಯಕ್ತಿಯ ಸ್ವಭಾವವೈಚಿತ್ರ್ಯ, ಕಥಾಪ್ರದರ್ಶನ ತಂತ್ರ, ಒಂದು ಉನ್ನತ ಸಾಹಿತ್ಯ ಸಾಧನೆ' ಎಂದು ಜೆ. ಮಿಡಲಟನ್ ಮರ್ರಿ *(The Problem of Style*, p. 8*)* ಯವರು ವಿವರಿಸಿದರೆ, ಹರ್ಬರ್ಟ್ ರೀಡ್ *(The London Book of English Prose)* ಅವರು 'ಶೈಲಿ ಎಂದರೆ ಅಲಂಕಾರವಲ್ಲ, ಕಸರತ್ತು ಕುಣಿದಾಟವಲ್ಲ; ಅದೊಂದು ವೈಯುಕ್ತಿಕ ಅರ್ಥಭಾವನೆ. ಆ ವ್ಯಕ್ತಿಯು ತನ್ನ ಜ್ಞಾನವನ್ನು ಅತಿಯೋಗ್ಯ ಶಬ್ದಗಳಲ್ಲಿ ತಿಳಿಸುವ ತಂತ್ರ' ಎಂದು ವಿವರಿಸಿದ್ದಾರೆ. ಈ ಎರಡೂ ವಿವರಣೆಗಳನ್ನು ಅನುಲಕ್ಷಿಸಿದಾಗ, ಕವಿಯ ಶೀಲವೇ ಕಾವ್ಯದ ಶೈಲಿ ಎಂದು ಹೇಳಬೇಕೆನಿಸುತ್ತದೆ. ಕವಿ ಲಕ್ಷ್ಮೀಶನ ಭಕ್ತಿಶೀಲವು ಅವನ ಜೈಮಿನಿ ಭಾರತದಲ್ಲಿ ವ್ಯಕ್ತವಾಗಿದೆ, ಜೈಮಿನಿ ಭಾರತವು ಶ್ರೀಕೃಷ್ಣಭಕ್ತಿಯ ಒಂದು ಶ್ರೇಷ್ಠಕಾವ್ಯವಾಗಿದೆ.

ಕವಿಯ ಭಕ್ತಿಶೀಲವನ್ನು 'ಜೀವನಚರಿತ್ರೆ'ಯನ್ನು ಬರೆಯುವಾಗ ವಿವರಿಸಿದ್ದೇವೆ. ಆದುದರಿಂದ ಇಲ್ಲಿ ಕಾವ್ಯದ ಶೈಲಿಯನ್ನು, ರೀತಿಯನ್ನು ಮಾತ್ರ ವಿವರಿಸುತ್ತೇವೆ.

ಜೈಮಿನಿ ಭಾರತದ ವಸ್ತುವಿನ ರೀತಿ : ವಸ್ತುವನ್ನು ಪಂಚಸಂಧಿ, ಸಂಧ್ಯಂಗಗಳಲ್ಲಿ ವಿಭಜಿಸಿ ಕಥಾನಿರೂಪಣೆಯನ್ನು ಮಾಡುವ ಚಂಪೂಕಾವ್ಯದ ರೀತಿಯನ್ನು ವರ್ಣಕ ಕಾವ್ಯದಲ್ಲಿ ತೋರಿಸಿದುದು ಮಾರ್ಗಕ್ಕೆ ವಸ್ತುಕದ ತೊಡುಗೆಯನ್ನು ತೊಡಿಸಿದ್ದುದು ಕವಿ ಲಕ್ಷ್ಮೀಶನ ಮೇಲ್ಮೆ ಎಂದು ಹೇಳಬಹುದು. ಕಾವ್ಯವಸ್ತುವಿಗೆ ಒಂದು ವಾಸ್ತುವಿನ, ಶಿಲ್ಪಕಲಾಮಂದಿರದ ಸೊಬಗನ್ನು ಕವಿ ಲಕ್ಷ್ಮೀಶ ತಂದಿದ್ದಾನೆ.

ಪಾತ್ರಗಳ ರೀತಿ : ಪಾತ್ರಗಳ ಹೆಸರುಗಳು ಅವರವರ ನೀತಿ, ಸ್ವಭಾವಗಳನ್ನು ಎತ್ತಿತೋರಿಸುವುದು ಭಾಗವತದ ರೀತಿ. ಸುರುಚಿ, ಸುನೀತಿ ಮೊದಲಾದ ನಾಮಗಳು

ಒಳ್ಳೆಯ ರುಚಿ, ಒಳ್ಳೆಯ ನೀತಿಯನ್ನೇ ತನ್ನ ಸ್ವಭಾವವನ್ನಾಗಿ ಮಾಡಿಕೊಂಡ ಪಾತ್ರಗಳೆಂದು ಸೂಚಿಸುತ್ತವೆ. ಇದರಂತೆ ಲಕ್ಷ್ಮೀಶನ ಪಾತ್ರಗಳಾದ ಹಂಸಧ್ವಜ–ಹಂಸತತ್ತ್ವ, ಆತ್ಮ ತತ್ತ್ವವನ್ನು ಅರಿತಂಥವನು; ಸುರಥ–ರಥವನ್ನು ನಡೆಸುವಲ್ಲಿ ಪ್ರಾವೀಣ್ಯವನ್ನು ಪಡೆದವನು; ಸುಧನ್ವ–ಧನುರ್ವಿದ್ಯೆಯಲ್ಲಿ ಅಗ್ರಗಣ್ಯನು; ಚಂಡಿ–ಚಂಡಿತನದಲ್ಲಿ ಅಗ್ಗಳೆಯಳು; ಜ್ವಾಲೆ–ಕೋಪಾಗ್ನಿಯ ಪ್ರತೀಕಳು; ಚಂದ್ರಹಾಸ–ಚಂದ್ರನಂತೆ ಯಾವಾಗಲು ಸ್ವಚ್ಛ, ನಿರ್ಮಲ ಸ್ವಭಾವದವನಾಗಿದ್ದಾನೆ. ಆದುದರಿಂದ ಕವಿ ಲಕ್ಷ್ಮೀಶನ ಪಾತ್ರಚಿತ್ರಣದ ರೀತಿ ಭಾಗವತ ರೀತಿ ಎಂದು ತೋರದೆ ಇರದು.

**ಕಾವ್ಯದ ಛಂದಸ್ಸಿನ ರೀತಿ :** 'ಕನ್ನಡ ಕೈಪಿಡಿ'ಯಲ್ಲಿ (ಸಂಪುಟ ೧, ಪು. ೧೭೬) ಷಟ್ಪದಿಯ ಚರಿತ್ರೆಯನ್ನು ವಿವರಿಸುವಲ್ಲಿ 'ಷಟ್ಪದಿ ಈಗ ಮಾತ್ರೆಗಳಿಂದ ನಡೆದರೂ, ಒಮ್ಮೆ ಅಂಶಗಳಿಂದ ನಡೆಯುತ್ತಿದ್ದಿತೆಂಬುದನ್ನೂ, ಮಾತ್ರೆ ಪ್ರಧಾನವಾದರೂ ಪಾದವನ್ನು ಗಣವಾಗಿ ಒಡೆಯುವುದೇ ಅಲ್ಲದೆ ಅಂಶವಾಗಿಯೂ ಒಡೆಯುವ ಹಾಗಿರಬೇಕೆಂಬುದನ್ನೂ ಮರೆಯಬಾರದು. ಒಳಗೆ ಕುಳಿತಿರುವ ಅಂಶವನ್ನು ಲಕ್ಷಿಸದೆ ಹೋದರೆ ಹಾಡಿನ ಸೊಗಸು ಕೆಟ್ಟು ಛಂದಸ್ಸು ಕಿವಿಗೆ ಇಂಪಾಗಲಾರದು' ಎಂದು ನಿರ್ಣಯಕ್ಕೆ ಬಂದಿರುವುದು ಜೈಮಿನಿ ಭಾರತವನ್ನು ಓದುವಾಗ ನೆನೆಯಬೇಕಾದ ಮಾತು. ಲಕ್ಷ್ಮೀಶನು ಮಾತ್ರಾಗಣ ವಿಭಜನೆಯೊಡನೆ ಅಂಶಗಣವಿಭಜನೆಯತ್ತಲೂ ಸಾಕಷ್ಟು ಲಕ್ಷ್ಯವನ್ನು ಪೂರೈಸಿದ್ದಾನೆ. ಅವನ ಕಾವ್ಯದಲ್ಲಿ ಯಾವ ಗಣವೂ ಒಂದೇ ಲಘುವಿನಿಂದ ಪ್ರಾರಂಭವಾಗುವುದಿಲ್ಲ. ಒಂದು ಗುರು ಅಥವಾ ಎರಡು ಲಘುಗಳಿಂದಲೇ ಪ್ರಾರಂಭವಾಗುತ್ತದೆ. ಇದು ಅಂಶಗಣಗಳ ವೈಶಿಷ್ಟ್ಯ. ಪ್ರತಿಯೊಂದು ಗಣವು ೫ ಮಾತ್ರೆಯ ಗಣವೇ ಆಗಿದೆ ಎಂದು ತೋರಿದರೂ ಅದು ಹಲವೆಡೆಗೆ ವಿಷ್ಣುಗಣವಾಗಿದ್ದು ಕೆಲವೆಡೆಗೆ ರುದ್ರಗಣವಾಗಿದೆ. ವಿಷ್ಣುಗಣ, ರುದ್ರಗಣ ಹೀಗೆ ವೈವಿಧ್ಯವಿದ್ದರೂ ಮಾತ್ರಾಗಣದ ರೀತಿಯಿಂದ ಎಲ್ಲ ಗಣಗಳು ಸಮವಾಗಿವೆ. ಹೀಗೆ ಸಮತೆಯಲ್ಲಿ ವೈವಿಧ್ಯ ಮತ್ತು ವೈವಿಧ್ಯದಲ್ಲಿ ಸಮತೆ ಇದ್ದ ಈ ವಾರ್ಧಕ ಷಟ್ಪದಿ ಕಿವಿಗೆ ಇಂಪಾಗಿ, ಸುಶ್ರಾವ್ಯವಾಗಿ ಕೇಳಿಸುತ್ತದೆ.

ಯಕ್ಷಗಾನಗಳ ಛಂದಸ್ಸನ್ನು ಅಭ್ಯಸಿಸಿ ಕ. ಪು. ಸೀತಾರಾಮ ಕೆದಿಲಾಯ ಅವರು ಪಂಚಮಾತ್ರಾಗಣ ವಿಭಜನೆಯ ಪದ್ಯದ ಸಾಲನ್ನು ಭೈರವಿ, ಕಾಂಬೋಧಿ, ಮಾರಕವಿ, ಕಲ್ಯಾಣಿ, ಕೇದಾರಗೌಳ, ತುಜಾವಂತು, ಮುಖಾರಿ, ನೀಲಾಂಬರಿ, ನಾಟಿ, ತೋಡಿ, ದ್ವಿಜಾವಂತಿ, ಆಹೇರಿ ರಾಗಗಳಲ್ಲಿ ಝಂಪೆ ತಾಳದಲ್ಲಿ ಹಾಡುವ ಪರಿಪಾಠ ಬೆಳೆದುಬಂದಿತ್ತು ಎಂದು ತೋರಿಸಿದ್ದಾರೆ. ಲಕ್ಷ್ಮೀಶನ ಜೈಮಿನಿ ಭಾರತವು ಪಂಚಮಾತ್ರಾಗಣ ವಿಭಜನೆಯಿಂದ ಸಾಲಂಕೃತವಾಗಿರುವುದರಿಂದ ಮತ್ತು ಅದರ ಅಂಶೀಗಣದ ರೀತಿಯು ರಾಗವಿಸ್ತಾರ, ರಾಗಸಂಕೋಚಕ್ಕೆ ಅನುಕೂಲವಾಗಿದ್ದುದರಿಂದ ಅದರ ಪ್ರಭಾವವು ಯಕ್ಷಗಾನಗಳ ಮೇಲೆ ಸಾಕಷ್ಟು ಆದದ್ದು ಕಂಡುಬರುತ್ತದೆ. ಲಕ್ಷ್ಮೀಶನ ವಾರ್ಧಕ ಛಂದಸ್ಸು ಅಂಶೀಗಣಭೂಯಿಷ್ಠವಾಗಿದೆ. ಇದರ ಸೊಗಸನ್ನು ಗಮಕಿಗಳು ಹಾಡಿ ತೋರಿಸಬೇಕಾಗುತ್ತದೆ.

ಲಕ್ಷಣದ ರೀತಿ: ವಾಚಿಕಾಭಿನಯವಾದ ಪಾತ್ರಗಳ ಮಾತು ಲಕ್ಷಣಯುಕ್ತವಾಗಿರುವಂತೆ ಲಕ್ಷ್ಮೀಶನು ಪಾತ್ರಗಳಿಂದ ಆಡಿಸುತ್ತಾನೆ.

ಅಲಂಕಾರದ ರೀತಿ: ಭಿನ್ನ ಭಿನ್ನ ಶಬ್ದಾಲಂಕಾರ ಮತ್ತು ಅರ್ಥಾಲಂಕಾರಗಳನ್ನು ಲಕ್ಷ್ಮೀಶನು ಬಳಸಿದ್ದರೂ ಅವನು ವಿಶೇಷತಃ ಕಾರಣೋತ್ಪ್ರೇಕ್ಷಾಪ್ರಿಯ. ಅವನು ಕಾರಣವನ್ನು ಕಲ್ಪಿಸಿ, ಕಾರ್ಯಕಾರಣಗಳನ್ನು ಹೊಂದಿಸಿ ಕಥಾನಕವನ್ನು ಹೆಣೆಯುತ್ತಾನೆ. (ಕಾರಣೋತ್ಪ್ರೇಕ್ಷೆಯ ಉದಾಹರಣೆಗಳನ್ನು ಅನುಬಂಧದಲ್ಲಿ ಕೊಟ್ಟಿದೆ.)

ರಸದ ರೀತಿ : ಜೈಮಿನಿ ಭಾರತವು ನವರಸಭರಿತ ಕಾವ್ಯವಾಗಿದ್ದರೂ ಭಕ್ತಿರಸಕ್ಕೆ ಇದರಲ್ಲಿ ಪ್ರಾಶಸ್ತ್ಯವಿದೆ. ಪಾತ್ರಗಳ ಭಾವಗಳನ್ನು ಬಿಚ್ಚಿತೋರಿಸುವಲ್ಲಿ ಸಹಜತೆಯಿದೆ. ಎಲ್ಲ ರಸಗಳು ಭಕ್ತಿರಸದಲ್ಲಿ ಲೀನವಾಗುತ್ತವೆ.

ಕವಿ ಲಕ್ಷ್ಮೀಶನೇ ತನ್ನ ಕಾವ್ಯವು 'ವರವರ್ಣ, ಸುವರ್ಣ, ಮಂಜುಳಶಬ್ದ, ಚತುರ ಪದಗತಿ, ಮೃದುಪದವಿಲಾಸ, ಸುಶ್ರಾವ್ಯತೆ, ವೀಣೆಯಿಂ ಗಾನಮಂ ನುಡಿಸಿದಂತಿರುವ ಅಂದ, ಜಾಣರಂ ತಲೆದೂಗಿಸುವ ಬಗೆ, ವಿನೂತನತೆ, ಅರ್ಥ, ಯತಿ, ಅನ್ವಯ, ಗುಣ ಇವುಗಳಿಗೆ ಬಾಧೆಬಾರದ ರಚನೆ, ಛಂದಸ್ಸು, ಲಕ್ಷಣ, ಅಲಂಕಾರ, ಭಾವ ರಸ ಚಮತ್ಕಾರಯುಕ್ತತೆ, ರೂಪವಿಸ್ತರದ ಚೆಲ್ವು, ಮಧುರತರರಸೋದರಭರಿತತೆ, ಸುಮನೋನುರಾಗ ಪ್ರಚುರತೆ, ಸುಲಲಿತ ಷಟ್ಪದಿ, ನವರಸಪ್ರೌಢಿ, ಲಾಲಿತ್ಯ, ನಾನಾ ವಿಚಿತ್ರಾರ್ಥ' ಇತ್ಯಾದಿ ಗುಣಗಳಿಂದ ಕೂಡಿರಬೇಕು ಎಂದು ಇಚ್ಛಿಸಿದ್ದಾನೆ. ತನ್ನ ಕಾವ್ಯವು 'ಶಾರದೆಯ ಸಂಮೋಹನಾಂಗಲಾವಣ್ಯದಂತೆ ಭಾವುಕರ ಕಿವಿದೊಡವಿಗೊದವಿದ ಹಿರಣ್ಯ'ದಂತೆ ಆಗಲಿ ಎಂದು ಕವಿ ಆಶಿಸಿದ್ದಾನೆ. ಎಂದರೆ ಆತನು ತನ್ನ ಕಾವ್ಯವನ್ನು ತಾನೇ ವಿಮರ್ಶಿಸಿಕೊಂಡಿದ್ದಾನೆ. ಅವನ ಇಚ್ಛೆ, ಬಯಕೆ ಈ ಕಾವ್ಯರಚನೆಯಲ್ಲಿ ಬಹುಮಟ್ಟಿಗೆ ಪೂರ್ಣಗೊಂಡಿದೆ, ಫಲಿಸಿದೆ.

'ಪದವಿನ್ಯಾಸಕ್ರಮೋ ರೀತಿಃ' ಎಂದು ಸಾಮಾನ್ಯವಾಗಿ ಹೇಳಲಾಗುತ್ತಿದ್ದರೂ ವಾಮನನು ಪದವಿನ್ಯಾಸದೊಡನೆ ಅರ್ಥಸ್ವರೂಪವನ್ನೂ ಗಮನಿಸಬೇಕೆಂದು ಹೇಳುತ್ತಾನೆ. ಅವನು ಕಾವ್ಯಗುಣವನ್ನು ಶಬ್ದಗುಣ ಮತ್ತು ಅರ್ಥಗುಣ ಎಂದು ವಿವರಿಸಿದ್ದಾನೆ. ಕಾವ್ಯದಲ್ಲಿ ದೋಷಗಳಿಲ್ಲದಿರುವುದೇ ಗುಣಗಳ ಲಕ್ಷಣ. ಈ ಗುಣಗಳ ಮೇಲಿಂದ ಕಾವ್ಯದ ರೀತಿಯನ್ನು ನಿಶ್ಚಯಿಸಲಾಗುತ್ತದೆ. ಮಾಧುರ್ಯಗುಣ ಪ್ರಮುಖವಾದುದು ವೈದರ್ಭಿ, ಓಜೋಗುಣಪ್ರಮುಖವಾದುದು ಗೌಡಿ, ಮಿಶ್ರವರ್ಣಗಳಿಂದ ಕೂಡಿದ ಸಣ್ಣ ಸಣ್ಣ ಸಮಸ್ತ ಪದಗಳುಳ್ಳದು ಪಾಂಚಾಲಿ, ವೈದರ್ಭಿ ಮತ್ತು ಪಾಂಚಾಲಿ ರೀತಿಗಳ ಮಧ್ಯೆ ಇರುವುದೇ ಲಾಟಿ ಎಂದು ಹೇಳಲಾಗುತ್ತದೆ. ಕವಿ ಲಕ್ಷ್ಮೀಶನು ವಾಮನನ ಸಂಪ್ರದಾಯದವನು ; ಕಾರಣ, ಅವನು ತನ್ನ ಕಾವ್ಯದಲ್ಲಿ ಶಬ್ದಗುಣ, ಅರ್ಥಗುಣ ಮತ್ತು ಪದರಚನೆಯತ್ತ ಸಾಕಷ್ಟು ಲಕ್ಷ್ಯವನ್ನು ಪೂರೈಸಿದ್ದಾನೆ.

ಜೈಮಿನಿ ಭಾರತದ ಶಬ್ದಗುಣ: ಓಜೋಗುಣವನ್ನು ಬಿಟ್ಟು ಉಳಿದೆಲ್ಲ ಗುಣಗಳು ಈ ಕಾವ್ಯದಲ್ಲಿವೆ. ಅದರಲ್ಲಿಯೂ ಮಾಧುರ್ಯ, ಸೌಕುಮಾರ್ಯ, ಅರ್ಥವ್ಯಕ್ತಿ ಈ

ಗುಣಗಳು ಹೆಚ್ಚು ಎದ್ದುಕಾಣುತ್ತವೆ. ಮಾಧುರ್ಯಗುಣ ವ್ಯಂಜಕ ವರ್ಣಗಳಿರುವುದರಿಂದ ಈ ಕಾವ್ಯದರೀತಿ ವೈದರ್ಭೀರೀತಿಯೆಂದು ಹೇಳಬೇಕೆಂದು ತೋರುತ್ತದೆ.

ರಾರಾಜಿಸುವ ಕನ್ನಡದ ನುಡಿಗಳ
ಬಗೆಯಱಿದರಾವ ಲಕ್ಷಣದಿಂದ ಮುನ್ನ ಕ
ಬ್ಬಗಳನುಸುರಿದರದೇ ಲಕ್ಷ್ಯಮಲ್ಲದೆ ಪೆಱತೆ–
ನಗೆ ಸಲ್ಲದದಱಿಂದೆ ಪೂರ್ವಸತ್ಕವಿಗಳ್ಗೆ ನಮಿಸಿ ನಾಂ ಕೃತಿವೇಳ್ವೆನು || ಪೀಠಿಕೆ, ೧೦.

ನೀತಿವಿದನಾಚಾರಸಂಪನ್ನನುತ್ತಮಂ
ದಾತನೆಂಬೀಸುಗುಣಮುಳ್ಳ ಕುವರಂ ನಿನ್ನ
ನೀ ತಪ್ತತೈಲದೊಳಗೆಂತಕಟ ಬೀಳಿಸುವೆನೆಂದೊಡವನಿಂತೆಂದನು || (೧೬–೨೬)

ಶಿವನಂತೆ ಗಂಗಾಹಿಮುಕರಾವಹಂ (೬–೫)

ಈ ಮೂರು ಅವತರಣಿಕೆಗಳಲ್ಲಿ ಪೆಱತೆನಗೆ ಸಲ್ಲದು, ದಾತನೆಂಬೀಸುಗುಣ, ಗಂಗಾಹಿಮುಕರ ಎಂಬ ಪದಗಳು ಒಂದೇ ಶಬ್ದದಂತೆ ಕಂಡರೂ ಅವುಗಳಲ್ಲಿ i. ಪೆಱತೆ? + ನಗೆ + ಸಲ್ಲದು, ii. ದಾತನ್ + ಎಂಬ + ಈ+ಸುಗುಣ, ದಾತನ್+ಎಂಬ + ಈಸು + ಗುಣ, iii. ಗಂಗಾ + ಅಹಿ + ಮಕರ, ಗಂಗಾ + ಹಿಮ + ಕರ ಎಂಬ ಬೇರೆ ಬೇರೆ ಶಬ್ದಗಳು ಅಡಗಿವೆ. ಹೀಗೆ ಲಕ್ಷ್ಮೀಶನ ಅನೇಕ ಪದ್ಯಗಳಲ್ಲಿ, ಸಾಮಾನ್ಯ ಬಳಕೆಯ ಪದಗಳಲ್ಲಿ ಎರಡೆರಡು ಅರ್ಥವುಳ್ಳ ಶ್ಲೇಷವನ್ನು ಕಾಣುತ್ತೇವೆ. "The highest style is that wherein the two current meanings of the word blend"–ಚಲಾವಣೆಯಲ್ಲಿದ್ದ ಎರಡು ಅರ್ಥಗಳು ಒಂದೇ ಶಬ್ದದಲ್ಲಿ ಮಿಶ್ರವಾಗಿರುವಿಕೆ ಉನ್ನತಶೈಲಿಯ ಲಕ್ಷಣ ಎಂದು ಮರ್‍ರಿ *The Problem of Style* ಎಂಬ ತನ್ನ ಪ್ರಬಂಧದಲ್ಲಿ ಹೇಳಿದ್ದಾರೆ. ಆದರೆ ಕಾವ್ಯದ ಈ ಶ್ಲೇಷಗುಣ ಕೆಲವರಿಗೆ ಒಪ್ಪಿಗೆಯಾಗುವುದಿಲ್ಲ. ಅಂಥವರಲ್ಲಿ ಎಸ್. ವಿ. ರಂಗಣ್ಣನವರು ಒಬ್ಬರು. ಅವರು ಲಕ್ಷ್ಮೀಶನ ಶೈಲಿಯ ಬಗ್ಗೆ ಬರೆಯುವಾಗ "ವರ್ಣನಾಪ್ರಾರಂಭದ ಘಂಟೆಯನ್ನು ಬಾರಿಸಿದೊಡನೆಯೆ ನಾನಾರ್ಥದೇವತೆಗೆ ಆಹ್ವಾನ. ಅಭಂಗ ಶ್ಲೇಷೆಯೆಂದರೆ ಕವಿಗೆ ಅಳೆಯಲಾಗದ ವ್ಯಾಮೋಹ. ಶ್ಲೇಷಾಲಂಕಾರದ ಪ್ರಯೋಗದ ಪ್ರಯತ್ನದಲ್ಲಿ ಲಕ್ಷ್ಮೀಕಾಂತನಿಗೆ ಉಪಯುಕ್ತವಾದುದು ಅವನ ಎಡಗೈ. ಉಪಮಾಲಂಕಾರದ ರಸವದ್ವಿನಿಯೋಗದಲ್ಲಿ ಅವನಿಗೆ ನೆರವಾದುದು ಬಲಗೈ"[1] ಎಂದು ಅಭಿಪ್ರಾಯಪಟ್ಟಿದ್ದಾರೆ.

ಲಕ್ಷ್ಮೀಶನ ಶಬ್ದಾಲಂಕಾರಗಳು ಜೈಮಿನಿ ಭಾರತದ ಇನ್ನೊಂದು ಪ್ರಮುಖವಾದ ಗುಣ. ಈ ಶಬ್ದಾಲಂಕಾರಗಳಿಂದ ಲಕ್ಷ್ಮೀಶನು ಶಬ್ದಸಾಮ್ರಾಜ್ಯಕ್ಕೆ ಚಕ್ರವರ್ತಿಯಾಗಿದ್ದಾನೆ ಎಂಬುದು ಅನುಭವಕ್ಕೆ ಬರುವುದು. "ಈತನ ಕಾವ್ಯದಲ್ಲಿ ವೃತ್ತ್ಯನುಪ್ರಾಸ ಛೇಕಾನುಪ್ರಾಸ, ಆದ್ಯಂತಾಕ್ಷರಪ್ರಾಸ, ಯಮಕಗಳಿಲ್ಲದಿರುವ ಪದ್ಯ ಒಂದೂ ಇಲ್ಲ. ಪ್ರಾಸಕ್ಕಾಗಿ ಸಂಯುಕ್ತಾಕ್ಷರಗಳನ್ನು ಸಲೀಸಾಗಿ ಉಪಯೋಗಿಸಿದ್ದು ಲಕ್ಷ್ಮೀಶನ

---

1 'ಶೈಲಿ' (ಭಾಗ ೨), ಪು. ೧೬೦

ಶಬ್ದಶಕ್ತಿಯಗುಣ.'[1] ಆದುದರಿಂದಲೆ ಕುಕ್ಕೆ ಸುಬ್ರಹ್ಮಣ್ಯಶಾಸ್ತ್ರಿಗಳು ಲಕ್ಷ್ಮೀಶನು ವಶ್ಯವಾಕ್ಕಾದ ಕನ್ನಡ ಭವಭೂತಿ ಎಂದು ಕರೆದಿದ್ದಾರೆ. 'ಷ್ಟ, ಳ್ಗ, ಜ್ಞ, ತ್ಪ, ಣ್ಮ, ಷ್ಣ, ಶ್ಯ, ದ್ಭ, ಲ್ಮ, ಪ್ರ, ತ್ಸ, ಗ್ನ' ಮುಂತಾದ ಯಾವ ಸಂಯುಕ್ತಾಕ್ಷರ ಕೃಷ್ಣಸರ್ಪವಾದರೂ ಅವನಿಗೆ ಹೆದರಿಕೆಯಿಲ್ಲ. ಕವಿತ್ವಪುಂಗಿಯನ್ನೂದಿ ಅದನ್ನು ಸಂಮೋಹನಗೊಳಿಸಿ ವಿಷದ ಹಲ್ಲನ್ನು ಕಿತ್ತು, ತಾಳಲಯಕ್ಕನುಸಾರವಾಗಿ ಅದು ಹೆಡೆಯಾಡುವಂತೆ ಮಾಡುವ ಗಾರುಡವಿದ್ಯೆ ಲಕ್ಷ್ಮೀಶನ ಕೈವಶವಾಗಿದೆ'[2] ಎಂದು ಎಸ್. ವಿ. ರಂಗಣ್ಣನವರು ತಮ್ಮ ಮೆಚ್ಚಿಕೆಯನ್ನು ತೋರಿಸಿದ್ದಾರೆ.

ಅರ್ಥಗುಣ : ಶ್ರೀಕೃಷ್ಣನನ್ನು ಸ್ತುತಿಸುವಾಗ, ವೃಷಕೇತು, ಸುರಥ, ಸುಧನ್ವರ ರುಂಡಗಳನ್ನು ವರ್ಣಿಸುವಾಗ, ಪುರವರ್ಣನೆಯ ಸಂದರ್ಭದಲ್ಲಿ ಲಕ್ಷ್ಮೀಶನು ನವನವೋನ್ಮೇಷವನ್ನು ತೋರಿಸುತ್ತಾನೆ. ಕಥೆಯ ಗತಿ ಖಂಡಿಸದಂತೆ, ಓದುಗನ ಕುತೂಹಲ ಸತತವಾಗಿ ಜಾಗ್ರತವಾಗಿ ಉಳಿಯುವಂತೆ ಲಕ್ಷ್ಮೀಶನು ನೋಡಿಕೊಳ್ಳುತ್ತಾನೆ. ಸ್ಫುಟತೆ, ಸರಳತೆಯೇ ಅವನ ಕಾವ್ಯದ ಜೀವಾಳ. ಸಂಧಿ ೬, ಪದ್ಯ ೫ರಲ್ಲಿ ಸಂಭೋಗಶೃಂಗಾರವನ್ನು ಗ್ರಾಮ್ಯತೆಗೆ ಇಳಿಸದೆ, ಪಗಡೆಯಾಟದ ನೆವದಿಂದ ಪ್ರಕಾರಾಂತರವಾಗಿ ವರ್ಣಿಸುವಲ್ಲಿ ಕವಿಯ ಜಾಣ್ಮೆಯಿದೆ.

ಪದರಚನಾರೀತಿ : ಭಾವಕ್ಕೆ ತಕ್ಕಂತೆ, ವಿಷಯಕ್ಕೆ ತಕ್ಕಂತೆ ಪದಗಳನ್ನು ಹೊಂದಿಸುವ ಪದ್ಯಕ್ಕೆ ಗತಿ ನಡಿಗೆ ಕುಣಿತವನ್ನು ಹುಡುಕುವ ವಿದ್ಯೆ ಕವಿ ಲಕ್ಷ್ಮೀಶನ ಸಹಜ ಗುಣವಾಗಿದೆ. ಉದಾ:–ವನದಲ್ಲಿಯ ಭೃಂಗಾವಳಿಯ ಗುಂಗುಂಗಾನವನು :

ಈ ವನದ ನಡುನಡುವೆ ತೊಳತೊಳಗುತಿರುತಿಹ ಸ
ರೋವರ ವರದೊಳೆ ದಳೆದಳೆದು ಬಳೆಬಳೆದ ರಾ
ಜೀವದಲರಲರ ತುಳಿತುಳಿದಿಡಿದಿಡಿದ ಬಂಡನೊಡನೊಡನೆ ಸವಿದು ಸವಿದು ||
ಆವಗವಗಲದೆ ಯುಗಯುಗವಾಗಿ ನೆರೆನೆರೆದು
ಕಾವ ಸೊಗಸೊಗಸಿನಲಿ ನಲಿದು ಮೊರೆಮೊರೆದ ಭೃಂ
ಗಾವಳಿಯ ಗಾವಳಿಯ ಕಳಕಳಂಗಳ ನೋಡು ನೋಡು ರವಿ ತನಯ ತನಯ ||

(೩–೩೭)

ಎಂದು ಲಕ್ಷ್ಮೀಶನು ವರ್ಣಿಸಿದ್ದಾನೆ. ಇಲ್ಲಿ ಅಕ್ಷರಗಳ ಪುನರಾವೃತ್ತಿ ಭೃಂಗಗಳ ನಾದ ಮತ್ತು ಅವುಗಳ ಸುತ್ತಿಸುಳಿವ ಹಾರಾಟವನ್ನು ಸೂಚಿಸುತ್ತದೆ.

ಯುದ್ಧವನ್ನು ಹೀಗೆ ವರ್ಣಿಸಿದ್ದಾನೆ :

ತಱಿಂತಱಿದು ಕತ್ತರಿಸಿ ಚುಚ್ಚಿ ನಟ್ಟುಚ್ಚಳಿಸಿ
ಕೊಱಿಕೊಱಿದು ಕಡಿದಿಱಿದು ಬಿಗಿದುಗಿದು ಗಬ್ಬರಿಸಿ
ಪಱಿದು ಸೀಳ್ದುತ್ತರಿಸಿ ಕೆತ್ತಿ ಖಂಡಿಸಿ ಬಳಿಚಿ ತಿವಿದಿಕ್ಕಿ ಕೊಯ್ದು ಪೊಯ್ದು||

(೪–೪೪)

---

1 'ಲಕ್ಷ್ಮೀಶನ ಶೈಲಿ'—ಪು. ೨೩೯
2 'ಶೈಲಿ' (ಭಾಗ ೨)—ಎಸ್. ವಿ. ರಂಗಣ್ಣ.

ಹಂಸಧ್ವಜನ ಶೋಕವನ್ನು ವರ್ಣಿಸುವಾಗ,

ಕೊಳುಗುಳಕೆ ನಡೆ ತಂದೆ, ಬಿಲ್ವಿಡಿಯುತ್ತೈ ತಂದೆ
ಫಲುಗುಣನೊಡನೆ ಹೋರಿ ಜಯಿಸಬೇಡವೆ ಹೋರಿ

ಎಂದು ಪ್ರವಹಿಸುವ ಪದರಚನೆ ನಿಂತು ನಿಂತು ಬರುವ ದುಃಖಾವೇಗವನ್ನು ಸೂಚಿಸುತ್ತದೆ. ಕವಿ ಲಕ್ಷ್ಮೀಶನ ಪದರಚನಾ ರೀತಿ, ಕ್ರಮ ಭಾವಬೋಧಕ ಮತ್ತು ರಸೋದ್ದೀಪಕವಾಗಿದೆ.

ಲಕ್ಷ್ಮೀಶನು ಪಂಡಿತಕವಿ, ನಾದಲೋಲ, ಅವನ ಕಾವ್ಯದಲ್ಲಿ ಮಾಧುರ್ಯ ಸೌಕುಮಾರ್ಯ ಗುಣವೇ ಅಧಿಕವಾಗಿದೆ ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಶಬ್ದ ಶ್ಲೇಷವನ್ನು ಕಂಡುಹಿಡಿಯುವಲ್ಲಿ ಲಕ್ಷ್ಮೀಶನು ಪಾಂಡಿತ್ಯವನ್ನು ತೋರಿಸಿ, ಅಕ್ಷರಗಳ ಪುನರಾವೃತ್ತಿಯಲ್ಲಿ ನಾದಲೋಲತೆ, ಪದಗಳ ಜೋಡಣೆಯಲ್ಲಿ ಮಾಧುರ್ಯ ಮತ್ತು ಸೌಕುಮಾರ್ಯ ಗುಣವನ್ನು ತೋರಿಸಿದ್ದಾನೆ ಎಂದು ಹೇಳಬಹುದು.

ಲಕ್ಷ್ಮೀಶನ ಜೈಮಿನಿ ಭಾರತ ಫಲಸಿದ್ಧಿಯ ಆನಂದಕಾವ್ಯ. ಅಪೇಕ್ಷಿಸಿದ ಫಲ ದೊರೆಯುವುದೇ ಈ ಆನಂದದ ಲಕ್ಷಣ. ಧರ್ಮನಿಗೆ ಯಜ್ಞಪೂರ್ತಿಯ ಆನಂದ, ಪಾಂಡವರಿಗೆ ತಮ್ಮ ಜೀವನ ಸಫಲವಾದ ಆನಂದ, ಉಳಿದೆಲ್ಲ ರಾಜರಿಗೆ ಶ್ರೀಕೃಷ್ಣದರ್ಶನದ ಆನಂದ, ಬಕದಾಲ್ಭ್ಯನಿಗೆ ಜ್ಞಾನಾನಂದ, ಯಜ್ಞಾಶ್ವಕ್ಕೆ ಸಾಯುಜ್ಯ ಮುಕ್ತಿಯ ಆನಂದ—ಈ ಆನಂದ ಕಾವ್ಯದಲ್ಲಿ. ೧. ವಸ್ತುವನ್ನು ವಾಸ್ತುವಾಗಿ ಕಾಣುವುದು, ೨. ಪಾತ್ರಗಳ ಹೆಸರುಗಳಲ್ಲಿ ಗುಣಸೂಚಕತೆಯಿರುವುದು, ೩. ಕಥೆಗಳನ್ನು ಕಥಿಸುವಲ್ಲಿ ಕುತೂಹಲವನ್ನು ಕೆರಳಿಸುವುದು, ೪. ಭಾವಬೋಧಕ, ರಸೋದ್ದೀಪಕ ಪದರಚನಾ ಕ್ರಮವನ್ನು ಅನುಸರಿಸುವುದು, ೫. ಮಾತ್ರಾಗಣದ ಷಟ್ಪದಿಯಲ್ಲಿ ಅಂಶೀಗಣದ ವಿನ್ಯಾಸವು ಜೀವಾಳವಾಗಿ ಕಾವ್ಯದ ಛಂದಸ್ಸಿನಲ್ಲಿ ವೈವಿಧ್ಯ ತಲೆದೋರುವುದು ಲಕ್ಷ್ಮೀಶನ ಕಾವ್ಯದ ಶೈಲಿ ಅಥವಾ ರೀತಿ ಎಂದು ಹೇಳಬಹುದು. ಜೈಮಿನಿ ಭಾರತದ ಪ್ರಮುಖವಾದ ಗುಣ ಓಜೋಗುಣವಲ್ಲ. ಪಂಡಿತ ಪಾಮರರಂಜಕವಾದ, ಸಣ್ಣ ಸಣ್ಣ ಸಮಾಸವುಳ್ಳ, ಕಾವ್ಯವನ್ನು ಓದುತ್ತ ಹೋದಂತೆ ಕಥೆಯು ತಿಳಿಯುವ, ಕಿವಿಗಿಂಪಾದ, ಸುಶ್ರಾವ್ಯವಾದ ಪದಜೋಡಣೆಯಿದ್ದ ಮಾಧುರ್ಯ-ಸೌಕುಮಾರ್ಯಗಳೆ ಜೈಮಿನಿ ಭಾರತ ಕಾವ್ಯದ ಪ್ರಮುಖ ಗುಣಗಳಾಗಿವೆ. **ಪ್ರೌಢವಾದರೂ ಸರಳತೆಯೇ ಲಕ್ಷ್ಮೀಶನ ಕಾವ್ಯದ ರೀತಿ.** ಲಕ್ಷ್ಮೀಶನ ಕಾವ್ಯಕನ್ನಿಕೆ ವಜ್ರವೈಢೂರ್ಯಪೀತಾಂಬರ ಕಿರೀಟಧಾರಿಣಿಯಲ್ಲ; ಶುಭ್ರವಸ್ತ್ರಾನ್ವಿತೆ, ವೀಣಾವರದಂಡಮಂಡಿತಕರೆಯಾದ ಸಹಜಸ್ಫುರದ್ರೂಪಿಣಿ.

## ಸಮಾರೋಪ

ಕಾವ್ಯದ ಮುಖ್ಯ ಅಂಗಗಳಾದ ಛಂದಸ್ಸು, ಲಕ್ಷಣ, ಅಲಂಕಾರ, ರಸ ಎಂಬ

ವಿಚಾರಗಳ ಚರ್ಚೆಯನ್ನು ಮಾಡಿದ್ದೇವೆ. ಕಾವ್ಯದ ಕಾಂತಿ ಗುಣವನ್ನು ಬೆಳೆಸಲು ಈ ಎಲ್ಲ ಅಂಗಗಳು ಸಹಾಯಕವಾಗಿವೆ.

ಈ ಕಾವ್ಯದ ಮಾತ್ರಾಗಣ ಛಂದಸ್ಸಿಗೂ ಅಂಶೀಗಣದ ಮೆರಗು ಇದೆ. ಪಾತ್ರಗಳು ಆಡುವ ಮಾತುಗಳು ಲಕ್ಷಣೋಕ್ತಿಗಳಾಗಿವೆ. ವಿಷ್ಣುಪುರಾಣ, ಶಿವಪುರಾಣ, ನಾಟ್ಯಶಾಸ್ತ್ರ, ಕಾಮಶಾಸ್ತ್ರ ಮೊದಲಾದವುಗಳ ಅಭ್ಯಾಸ ಲಕ್ಷ್ಮೀಶನಿಗಿದೆ. ನಿಸರ್ಗ ಪ್ರೀತಿಯು ಅವನು ಆರಿಸುವ ಉಪಮಾನಗಳ ವೈಶಿಷ್ಟ್ಯವಾಗಿದೆ.

ಕವಿ ಲಕ್ಷ್ಮೀಶನ ಅಷ್ಟಾದಶವರ್ಣನೆಗಳು ಅವನ ಕಾವ್ಯಾಭ್ಯಾಸದ ವಿಲಾಸವನ್ನು ತೋರಿಸುತ್ತವೆ. ಕಾವ್ಯದಲ್ಲಿಯ ಅಷ್ಟಾದಶವರ್ಣನೆಗಳು ಕಾವ್ಯಸಂಪ್ರದಾಯಕ್ಕೆ ಅನುಸರಿಸಿ ಬಂದವುಗಳಲ್ಲ, ಕಾವ್ಯಕಥೆಗೆ ಪೋಷಕವಾಗಿ ಬಂದಿವೆ ಎಂಬುದನ್ನು ಅವನ ಸಂಪಾದಕೀಯ ಪ್ರಜ್ಞೆ ಸಮರ್ಥಿಸುತ್ತದೆ. ಉದಾ: ಪರ್ವತವರ್ಣನೆಯಲ್ಲಿ ಬರಬೇಕಾದ ಬೇಟೆಯ ವರ್ಣನೆಯನ್ನು ಲಕ್ಷ್ಮೀಶನು ಚಂದ್ರಹಾಸನ ಕಥಾನಕಕ್ಕಾಗಿ ಮೀಸಲಿಡುತ್ತಾನೆ. ಇದು ಕವಿಯ ಸ್ವತಂತ್ರ ಪ್ರಜ್ಞೆ ಎಂದು ಹೇಳಬಹುದು.

ಕವಿ ಲಕ್ಷ್ಮೀಶನು ಕಥನಕಲಾನಿಪುಣನು. ಉತ್ಸುಕತೆಗೆ ಖಂಡ ಬರದಂತೆ ಕಥಾ ಪ್ರದರ್ಶನ (exposition) ಮಾಡುವುದು ಅವನ ಗುರಿಯಾಗಿದೆ. ಈ ಕಾವ್ಯದಲ್ಲಿಯ ನಾಟ್ಯಾಂಶವು ಅದರ ಅತಿ ಪ್ರಚಾರಕ್ಕೆ ಒಂದು ಪ್ರಮುಖ ಕಾರಣ. ಇದರಿಂದಲೇ ಈ ಕಾವ್ಯವು ಯಕ್ಷಗಾನಗಳಿಗೆ ಗುರುಸ್ಥಾನದ ಶ್ರೇಷ್ಠ ಕೃತಿಯಾಗಿದೆ.

ಜೈಮಿನಿ ಭಾರತ ಕಾವ್ಯದಲ್ಲಿಯ ಐಕ್ಯವಿಚಾರವು ಸಮಷ್ಟಿ ಪರಿಣಾಮದ್ದಾಗಿದ್ದರಿಂದ ಅದರ ಬಂಧ ಸೌಂದರ್ಯವನ್ನು ಒಂದು ಕಲಾತ್ಮಕ ದೇವಾಲಯವಾಗಿ ಊಹಿಸಿ, ಅದನ್ನು ನಿರೂಪಿಸುವ ಪ್ರಯತ್ನವನ್ನು ಈ ಪ್ರಕರಣದಲ್ಲಿ ಮಾಡಿದ್ದೇವೆ. ಅನೇಕ ಕಾವ್ಯಗಳಿಂದ ಪ್ರಭಾವಿತನಾಗಿಯೂ ಸ್ವತಂತ್ರ ಪ್ರಜ್ಞೆಯುಳ್ಳ ಲಕ್ಷ್ಮೀಶನ ಸ್ಥಾನವನ್ನು ಕನ್ನಡ ಕಾವ್ಯಲೋಕದಲ್ಲಿ ಗುರುತಿಸಲು ಇನ್ನು ಮುಂದಿನ ಪುಟಗಳಲ್ಲಿ ಪ್ರಯತ್ನಿಸುತ್ತೇವೆ.

'ಅತಿತುಂಗಾಕೃತಿಯಾದೊಡಾಗದದಱೊಳ್ ಸೌಂದರ್ಯಮೌನ್ನತ್ಯಮುಂ
ನುತ ಸೌಂದರ್ಯಮುಮಾಗೆ ಮತ್ತತಿಶಯಂ ತಾನಾಗದೌನ್ನತ್ಯಮುಂ
ನುತ ಸೌಂದರ್ಯಮುಮೂರ್ಜಿತಾತಿಶಯಮುಂ ತನ್ನಲ್ಲಿನಿಂದಿರ್ದುವೇಂ
ಕ್ಷಿತಿ ಸಂಪೂಜ್ಯಮೊಗೊಮ್ಮಟೇಶ್ವರ ಜಿನಶ್ರೀರೂಪಮಾತ್ಮೋಪಮಂ'

—ಕವಿಚರಿತೆ

# ೫/ಕನ್ನಡ ಕಾವ್ಯಲೋಕದಲ್ಲಿ ಕವಿ ಲಕ್ಷ್ಮೀಶನ ಸ್ಥಾನ

- ಪ್ರಸ್ತಾವನೆ
- ಕಾವ್ಯದ ವಿನೂತನತೆ
- ವಾರ್ಧಕ ಷಟ್ಪದಿ ಕಾವ್ಯಗಳೊಂದಿಗೆ ಜೈಮಿನಿ ಭಾರತ
- ಜೈಮಿನಿ ಭಾರತವು ಮಹಾಕಾವ್ಯವೆ ?
- ಪಂಪ, ಕುಮಾರವ್ಯಾಸ, ರತ್ನಾಕರ ಇವರ ಹೆಗಲಿಗೆ ಹೆಗಲು ಹಚ್ಚಿ ಕವಿ ಲಕ್ಷ್ಮೀಶನು ನಿಲ್ಲುವನೆ ?
- ಸಮಾರೋಪ

## ಪ್ರಸ್ತಾವನೆ

'ಉತ್ತಮ ಕಾವ್ಯದಲ್ಲಿ ಪ್ರಾಸಾದಿಕ ಶೈಲಿ, ಆಕರ್ಷಕ ಕಥಾವಸ್ತು, ವಿನೂತನ ವರ್ಣನೆ, ಒಳ್ಳೆಯ ರಸಭಾವ ನಿರೂಪಣೆ, ಶ್ಲಾಘ್ಯವಾದ ಅರ್ಥಾಲಂಕಾರ ಮತ್ತು ಶಬ್ದಾಲಂಕಾರಗಳು, ಚೈತನ್ಯಪೂರ್ಣವಾದ ಪಾತ್ರಸೃಷ್ಟಿ, ಕುಶಲ ಸಂಭಾಷಣೆ, ಅಪೂರ್ವಪದಪ್ರಯೋಗ, ಜಾಣ್ನುಡಿಗಳ ಸಮಾಕರಣ ಇರಬೇಕು. ಕವಿಗೆ ಶಾಸ್ತ್ರಜ್ಞಾನ ಮತ್ತು ಲೋಕಾನುಭವ ಇರಬೇಕು. ಕನ್ನಡ ಜೈಮಿನಿ ಭಾರತದಲ್ಲಿ ಈ ಎಲ್ಲ ಗುಣಗಳ ಸಂಗಮವಾಗಿದ್ದು, ಕವಿಯೂ ಶಾಸ್ತ್ರಜ್ಞನೂ ಲೋಕಾನುಭವಿಯೂ ಆಗಿದ್ದಾನೆ. ಪಂಪನ ಗಂಭೀರ ಭಾವನೆ, ರನ್ನನ ವೀರರಸ ಪ್ರತಿಪಾದನೆ, ಹರಿಹರನ ಭಕ್ತಿರಸ ಪ್ರತಿಪಾದನೆ, ರಾಘವಾಂಕನ ಅನಾದೃಶ ಕರುಣರಸ, ಷಡಕ್ಷರಿಯ ಶೃಂಗಾರವಿಲಾಸ, ಕುಮಾರವ್ಯಾಸನ ಪಾತ್ರಸೃಷ್ಟಿ ಈ ಎಲ್ಲ ಗುಣಗಳನ್ನು ಲಕ್ಷ್ಮೀಶನಲ್ಲಿ ಕಾಣಬಹುದು.

ಕನ್ನಡ ಕವಿಗಳಲ್ಲಿ ಕವಿತಾ ಆವೇಶವುಳ್ಳ ಕವಿಗಳು ಮತ್ತು ಕವಿತಾವಿಚಕ್ಷಣ ಕವಿಗಳು ಎಂದು ಎರಡು ಗುಂಪುಮಾಡಬಹುದು. ಆದರೆ ಈ ಎರಡೂ ಗುಣಗಳು ಒಂದಾ

ಗಿರುವುದು ಲಕ್ಷ್ಮೀಶ ಮತ್ತು ಚಾಮರಸರಲ್ಲಿ ಮಾತ್ರ. ಕವಿಗಳಲ್ಲಿ ವಾಗ್ವಶ್ಯರೂ ಮತ್ತು ವಶ್ಯವಾಕ್ಕುಗಳು ಎಂದೂ ಎರಡೂ ಬಗೆಯವರಿದ್ದಾರೆ. ವಾಗ್ವಶ್ಯರನ್ನು ಸಾಮಾನ್ಯಕವಿಗಳೆಂದೂ, ವಶ್ಯವಾಕ್ ಕವಿಗಳನ್ನು ಮಹಾಕವಿಗಳೆಂದೂ ವಿದ್ವಾಂಸರು ಕರೆಯುತ್ತಾರೆ. ಕನ್ನಡ ಜೈಮಿನಿ ಭಾರತದಲ್ಲಿ ಬರುವ ಯತಿ, ಗಣ, ಪ್ರಾಸ, ಅನುಪ್ರಾಸ, ಯಮಕ ಮೊದಲಾದ ಕಾವ್ಯಾಂಶಗಳನ್ನೂ, ಶ್ಲೇಷ, ಉತ್ಪ್ರೇಕ್ಷೆ, ಉಲ್ಲೇಖ, ಉಪಮೆ, ರೂಪಕ, ದೃಷ್ಟಾಂತ, ಸ್ವಭಾವೋಕ್ತಿ, ಅತಿಶಯೋಕ್ತಿ ಮೊದಲಾದ ಅಲಂಕಾರಗಳನ್ನೂ ಪರಿಶೀಲಿಸಿದಾಗ ಲಕ್ಷ್ಮೀಶನು ವಶ್ಯವಾಕ್ಕಾದ ಮಹಾಕವಿ ಎಂದು ಧಾರಾಳವಾಗಿ ಒಪ್ಪಿಕೊಳ್ಳಬಹುದು.

ಪಂಪಭಾರತದಂತೆ–ನಾರಿಕೇಳ ಪಾಕದಂತೆ ಲಕ್ಷ್ಮೀಶನ ಕಾವ್ಯ ಕಠಿಣವಲ್ಲ. ಕನಕದಾಸರ ನಳಚರಿತ್ರೆಯಂತೆ–ದ್ರಾಕ್ಷಾಪಾಕದಂತೆ ಇದು ಸುಲಭವೂ ಅಲ್ಲ. ರಾಘವಾಂಕನ–ಹರಿಶ್ಚಂದ್ರ ಕಾವ್ಯ, ಚಾಮರಸನ–ಪ್ರಭುಲಿಂಗಲೀಲೆ, ರತ್ನಾಕರನ ಭರತೇಶ ವೈಭವ, ಕುಮಾರವ್ಯಾಸ ಮತ್ತು ಕುಮಾರ ವಾಲ್ಮೀಕಿಗಳ ಭಾರತ ಮತ್ತು ರಾಮಾಯಣಗಳಂತೆ ಕದಳೀಪಾಕದಿಂದ ಲಕ್ಷ್ಮೀಶನ ಜೈಮಿನಿ ಭಾರತವು ಕೂಡಿದೆ ಎಂದು ದೇವುಡು ಮತ್ತು ಬಿ. ಶಿವಮೂರ್ತಿಶಾಸ್ತ್ರಿಗಳು ಕವಿ ಲಕ್ಷ್ಮೀಶನ ಕಾವ್ಯದ ಮೇಲ್ಮೆಯನ್ನು 'ಉಘೋ ಉಘೋ' ಎಂದು ಸ್ತುತಿಸಿದ್ದಾರೆ:

'ಪುಷ್ಪ ಸಮುದಾಯದಲ್ಲಿ ಗುಲಾಬಿ ಹೇಗೋ, ಕವಿ ಸಮುದಾಯದಲ್ಲಿ ಲಕ್ಷ್ಮೀಶ ಹಾಗೆ. ಗುಲಾಬಿಗಿಂತಲೂ ಸುಂದರವಾದ ಪುಷ್ಪಗಳಿರಬಹುದು; ಅವುಗಳಿಗೆ ಇದರ ಸುವಾಸನೆ ಇಲ್ಲ. ಗುಲಾಬಿಗಿಂತಲೂ ತಂಪಾದ ಕಂಪನ್ನು ಪಡೆದಿರುವ ಪುಷ್ಪಗಳಿರಬಹುದು; ಆದರೆ ಅವುಗಳಿಗೆ ಇದರ ಸೊಬಗು ಇಲ್ಲ. ಸುವಾಸನೆ ಮತ್ತು ಸೊಬಗು ಇವೆರಡನ್ನೂ ಏಕಕಾಲದಲ್ಲಿ ಪಡೆದು ಮೆರೆಯುವ ಭಾಗ್ಯ ಗುಲಾಬಿಯದು. ಲಕ್ಷ್ಮೀಶನಿಗಿಂತ ದೊಡ್ಡ ಕವಿತಾಶಕ್ತಿಯುಳ್ಳವರು ಕನ್ನಡ ಸಾಹಿತ್ಯ ಜಗತ್ತಿನಲ್ಲಿ ಇದ್ದಾರೆ. ಆದರೆ ಈ ಪಾಂಡಿತ್ಯ, ಈ ಷಟ್ಪದ ಝೇಂಕಾರ, ಈ ಹಿತಮಿತ ಜ್ಞಾನ, ಈ ಪ್ರಜ್ಞೆ ಇವು ಇನ್ನೆಲ್ಲಿ ದೊರೆತಾವು? ಲಕ್ಷ್ಮೀಶನಿಗಿಂತಲೂ ಪಂಡಿತರಾದ ಕವಿಗಳಿಗೆ ನಮ್ಮಲ್ಲಿ ಏನೂ ಕೊರತೆ ಇಲ್ಲ. ಆದರೆ ಈತನ ಪದಲಾಲಿತ್ಯ, ಪ್ರಜ್ಞಾಪೂರ್ಣ ಪ್ರತಿಭೆ ನುತ್ತೆಲ್ಲಿ ದೊರೆತಾವು?' ಎಂದು ತ. ಸು. ಶಾಮರಾಯರು ಪ್ರಶ್ನಿಸಿ, ಅಲಂಕಾರಿಕವಾಗಿ ಕವಿ ಲಕ್ಷ್ಮೀಶನ ಪ್ರತ್ಯೇಕತೆಯನ್ನು ಸಮರ್ಥಿಸಿದ್ದಾರೆ.

'ಸಮಗ್ರ ಕಾವ್ಯದ ದೃಷ್ಟಿಯಿಂದ ಆತನು ಉದ್ದಾಮ ಕವಿ ಎಂದು ತೋರಿದರೂ ಪ್ರಥಮ ಶ್ರೇಣಿಗೆ ಸೇರಿದ ಮಹಾಕವಿ ಎಂದು ಕರೆಯುವುದು ಅತಿಶಯೋಕ್ತಿಯ ಮಾತಾದೀತು. ಲಕ್ಷ್ಮೀಶನು ಅದೃಷ್ಟಶಾಲಿ. ಆತನಲ್ಲಿ ಶಬ್ದಭಾಂಡಾಗಾರವೂ ನಿರರ್ಗಳವಾದ ಓಟವೂ, ಮೃದುಮಧುರ ಮನರಂಜನೆಯೂ, ಉಪಮಾನಗಳೂ ಇಲ್ಲದೆ ಹೋಗಿದ್ದರೆ ನಾವುಗಳು ಯಾರೂ ಕನ್ನಡ ಜೈಮಿನಿ ಭಾರತವನ್ನು ಮುಟ್ಟುತ್ತಿರಲಿಲ್ಲ' ಎಂದು ಎಂ. ಆರ್. ಶ್ರೀ. ಅವರು ಅಭಿಪ್ರಾಯಪಟ್ಟಿದ್ದಾರೆ.

'ಕನ್ನಡ ನುಡಿಗಳ "ಬಗೆಯರಿ"ದ ನುಡಿಜಾಣ ಲಕ್ಷ್ಮೀಶನು ಮಾತಿಗೆ ಸೋತು ಮಾತನ್ನು ಬಳಸುವವನಲ್ಲ. ಮಾತಿನ ಹಿಂದಿನ ಮನೋಲೋಕ, ಆ ಲೋಕಧರ್ಮ, ಆ ಹೃದಯಸ್ಪಂದನ ಸಂಕೇತವಾಗಿ ಮಾತನ್ನು ಸೂಚಿಯಾಗಿ ಬಳಸುವ ಬಲ್ಲಹನಿವನು. ಹೀಗೆ ಮಾತುಗಳನ್ನು ಆರಿಸಿ, ಜೋಡಿಸಿ, ಬಳಸುವ ಕಲೆಯಲ್ಲಿ ಒಂದು ಕಡೆ ಕುಮಾರ ವ್ಯಾಸ, ಇನ್ನೊಂದು ಕಡೆ ರತ್ನಾಕರವರ್ಣಿ–ಇವರ ಮಧ್ಯೆ ಲಕ್ಷ್ಮೀಶನು ನಿಲ್ಲುತ್ತಾನೆ.

'ಕವಿತಾಧೋರಣೆ, ಶಬ್ದಸೌಷ್ಟವ, ಪ್ರತಿಭೆಯ ಸಂಪತ್ತು, ಕಥೆಯನ್ನು ಹೇಳುವ ಜಾಣ್ಮೆ, ಪಾತ್ರರಚನಾ ವೈಖರಿ ಪಾಂಡಿತ್ಯ ಪ್ರದರ್ಶನದ ವಿನ್ಯಾಸ ಇವುಗಳೆಲ್ಲದರಲ್ಲಿಯೂ ಲಕ್ಷ್ಮೀಶನ ಜೈಮಿನಿ ಭಾರತವು ಶ್ರೇಷ್ಠತರಗತಿಯ ಗ್ರಂಥವಾಗಿದೆ' ಎಂದು ತಿ. ತಾತಾ ಚಾರ್ಯಶರ್ಮರು ನಿರ್ದೇಶಿಸಿದ್ದಾರೆ.

ಕವಿ ಲಕ್ಷ್ಮೀಶನ ಜೈಮಿನಿ ಭಾರತವು ಒಂದು ಮಹೋನ್ನತ ಕಾವ್ಯ ಎಂಬುದರ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿಲ್ಲ. ಆದರೆ ಅವನು ಮಹಾಕವಿಯೆ? ಮಹಾ ಕವಿಯಾದರೆ ಕನ್ನಡ ಸಾಹಿತ್ಯದಲ್ಲಿ ಅವನ ಸ್ಥಾನ ಎಲ್ಲಿ? ಮೊದಲಾದ ಪ್ರಶ್ನೆಗಳ ಬಗ್ಗೆ ಭಿನ್ನ ಮತಗಳಿವೆ. ಇದೇ ಹಾದಿಯಲ್ಲಿ ನಾವೂ ಸಾಗಿ ಈ ಪ್ರಕರಣದಲ್ಲಿ ನಮ್ಮ ಅಭಿ ಪ್ರಾಯವನ್ನು ತೇಲಿಸುತ್ತೇವೆ.

## ಕಾವ್ಯದ ವಿನೂತನತೆ

ಪುರಾಣಮಿತ್ಯೇವ ನ ಸಾಧು ಸರ್ವಂ ನ ಚಾಪಿ ಕಾವ್ಯಂ ನವಮಿತ್ಯವದ್ಯಂ
ಸಂತಃ ಪರೀಕ್ಷ್ಯಾನ್ಯತರದ್ಭಜಂತೇ ಮೂಢಃ ಪರಪ್ರತ್ಯಯನೇಯ ಬುದ್ಧಿಃ ||
—'ಮಾಲವಿಕಾಗ್ನಿಮಿತ್ರ', ಅಂಕ ೧, ಶ್ಲೋ. ೨

ಜನಿಸಿದ ಪದಾರ್ಥಮಂ ತಿಳಿದು ನೋಡದೆ ವಿನೂ
ತನ ಕವಿತೆಯೆಂದು ಕುಂದಿಟ್ಟು ಜಱೆದೊಡೆ, ಪೇಳ್ದ
ವನೊಳಾವದೂಣೆಯಂ ಜಾಣರಿದನಱಿದು ಮತ್ಸರವನುಳಿದಾಲಿಸುವುದು ||
—ಪೀಠಿಕಾ–೬

ಈ ಎರಡು ಉಕ್ತಿಗಳನ್ನು ಅವಲೋಕಿಸಿದಾಗ ಪ್ರತಿಯೊಬ್ಬ ಕವಿಯು ತನ್ನ ದೃಷ್ಟಿಯಿಂದ ತನ್ನ ಕಾವ್ಯದಲ್ಲಿ ಏನಾದರೊಂದು ಹೊಸತನವನ್ನು, ನವ್ಯತೆಯನ್ನು ತಂದಿರುತ್ತಾನೆ. ಆ ನವ್ಯತೆ, ವಿನೂತನತೆ ರಸಿಕರ ಮೆಚ್ಚುಗೆಯನ್ನು ಪಡೆಯಬಹುದೆ ಎಂಬ ಸಂದೇಹವೂ ಅವನಿಗಿರುತ್ತದೆ. ಆದುದರಿಂದಲೇ ಲಕ್ಷ್ಮೀಶನು 'ಜಾಣರಿದನಱಿದು ಮತ್ಸರವನುಳಿದಾಲಿಸುವುದು' ಎಂದಿದ್ದಾನೆ. ಹಾಗಾದರೆ ಲಕ್ಷ್ಮೀಶನು ತೋರಿದ ವಿನೂತ ನತೆ ಯಾವುದು? ಎಂಬುದನ್ನು ಕಾವ್ಯಮಂಥನದಿಂದಲೇ ತಿಳಿದುಕೊಳ್ಳೋಣ.

ಕಾವ್ಯದಲ್ಲಿ ವಸ್ತುಕ ಮತ್ತು ವರ್ಣಕ ಎಂದು ಎರಡು ಭಾಗಗಳನ್ನು ಮಾಡು ತ್ತಾರೆ. ಅವುಗಳನ್ನೇ ಅನುಕ್ರಮವಾಗಿ ಓದುಗಬ್ಬ ಮತ್ತು ಹಾಡುಗಬ್ಬ ಎಂದು ಕರೆಯು ತ್ತಾರೆ. ಈ ವಸ್ತುಕ ಓದುಗಬ್ಬವನ್ನು ಗಮಕದಿಂದ ಓದಬಹುದು ; ಆದರೆ ಸುಶ್ರಾವ್ಯ ವಾಗಿ ಹಾಡಲು ಬರುವಂತಿಲ್ಲ. ಇದಕ್ಕೆ ಕಾರಣ ಈ ಕಾವ್ಯಪ್ರಕಾರವು ಬಳಸುವ

ಛಂದಸ್ಸು ಅಕ್ಷರವೃತ್ತ ಮತ್ತು ಕಂದ. ಇದರ ಪ್ರತಿಯಾಗಿ ವರ್ಣಕ ಕಾವ್ಯಗಳು ಅಂಶೀ ಇಲ್ಲವೆ ಮಾತ್ರಾ ಛಂದಸ್ಸನ್ನು ಉಪಯೋಗಿಸುವುದರಿಂದ ಅವುಗಳನ್ನು ಸುಶ್ರಾವ್ಯವಾಗಿ ಹಾಡಬಹುದು. ಅಂಶೀ ಛಂದಸ್ಸಿನ ಗೇಯ ಗುಣ ಅಕ್ಷರ ವೃತ್ತಗಳಿಗೆ ಇಲ್ಲ. 'ವೀಣೆಯಿಂ ಗಾನಮಂ ನುಡಿಸುವಂದದೊಳು' ಹೇಳಿದ ಲಕ್ಷ್ಮೀಶನ ಜೈಮಿನಿ ಭಾರತದಲ್ಲಿ ಗೇಯತೆಯೆ ಪ್ರಮುಖ ಲಕ್ಷಣವಾಗಿದೆ. ಈ ಕವಿಯ ಶಬ್ದಾಲಂಕಾರಗಳು ಸಂಗೀತಪ್ರಜ್ಞೆಯಿಂದ ರೂಪುಗೂಂಡಿವೆ. ಸುಶ್ರಾವ್ಯತೆ ಭಾರತೀಯ ಸಂಗೀತ ಪ್ರಮುಖ ಲಕ್ಷಣಗಳಲ್ಲಿ ಒಂದಾಗಿದೆ. ಈ ಸುಶ್ರಾವ್ಯತೆಯನ್ನೇ ಕವಿ ಲಕ್ಷ್ಮೀಶನು ವಾಣೀ ದೇವತೆಯಲ್ಲಿ ಬೇಡಿಕೊಂಡಿದ್ದಾನೆ.

'ಸಂಸ್ಕೃತ ಚಂಪೂಲಕ್ಷಣವನ್ನೂ ಸರಣಿಯನ್ನೂ, ಅನುಸರಿಸಿ ಬರೆದಿರುವ ಗದ್ಯ–ಪದ್ಯಾತ್ಮಕವಾದ ಕಾವ್ಯಕ್ಕೆ "ವಸ್ತುಕ"ವೆಂದೂ ಯಾವುದೊಂದು ವಿಶೇಷ ಕಾವ್ಯ ಲಕ್ಷಣವನ್ನಾಗಲಿ, ಸಂಸ್ಕೃತ ಕಾವ್ಯದ ಮಾದರಿಯನ್ನಾಗಲಿ ಇಟ್ಟುಕೊಳ್ಳದೆ ಬರೆದಿರುವ ಪದ್ಯಕಾವ್ಯಕ್ಕೆ "ವರ್ಣಕ"ವೆಂದೂ ಹೆಸರು ಸಲ್ಲುವಂತೆ ಹೇಳಬೇಕಾಗುತ್ತದೆ.'[1] ಹೀಗಾಗಿ ಚಂಪೂಕಾವ್ಯಗಳೆಲ್ಲ ವಸ್ತುಕವೆಂದೂ ಉಳಿದ ತ್ರಿಪದಿ, ಷಟ್ಪದಿ, ಸಾಂಗತ್ಯ ಕಾವ್ಯಗಳೆಲ್ಲ ವರ್ಣಕವೆಂದೂ ಹೇಳುವುದು ವಾಡಿಕೆಯ ಮಾತಾಗಿದೆ. 'ಕನ್ನಡ ಕೈಪಿಡಿ'ಯಲ್ಲಿ ಹೇಳಿದ ವರ್ಣಕ ಕಾವ್ಯದ ಲಕ್ಷಣದ ಪ್ರಕಾರ ತ್ರಿಪದಿ, ಷಟ್ಪದಿ, ಸಾಂಗತ್ಯ ಕಾವ್ಯಗಳು ಕಾವ್ಯ ಲಕ್ಷಣಯುಕ್ತವಾಗಬಾರದು ಎಂದು ಹೇಳಿದಂತಾಗುತ್ತದೆ. ಆದರೆ ಕಾವ್ಯಲಕ್ಷಣಯುಕ್ತವಾದ ವರ್ಣಕ ಕಾವ್ಯಗಳು ಇರುವುದರಿಂದ ಮೇಲೆ ಉಲ್ಲೇಖಿಸಿದ ವಾಡಿಕೆಯ ಮಾತು ತಪ್ಪಾಗಿದೆ ಎಂದು ಹೇಳದೇ ಗತಿ ಇಲ್ಲ, **ಲಕ್ಷ್ಮೀಶ ಮತ್ತು ವಿರೂಪಾಕ್ಷ ಪಂಡಿತರು ತಮ್ಮ ಕಾವ್ಯಕ್ಕೆ 'ವಿನೂತನ ಕಾವ್ಯ' ಎಂದು ಕರೆಯುವಲ್ಲಿ ಅವು ಕಾವ್ಯಲಕ್ಷಣಯುಕ್ತವಾಗಿವೆ ಎಂದೇ ಸೂಚಿಸುವಂತಿದೆ.** ನಾವು ವಸ್ತುಕ ಕಾವ್ಯವೆಂದರೆ ಓದುಗಬ್ಬ, ಮತ್ತು ವರ್ಣಕ ಕಾವ್ಯವೆಂದರೆ ಹಾಡುಗಬ್ಬ ಎಂಬ ವ್ಯಾಖ್ಯೆಯನ್ನೇ ಒಪ್ಪುತ್ತೇವೆ.

ಆಂಗ್ಲಕಾವ್ಯ ಮೀಮಾಂಸಾಕಾರರು ತಮ್ಮ ಕಾವ್ಯಗಳನ್ನು Classical ಹಾಗೂ Romantic ಎಂದು ವಿಭಜಿಸುತ್ತಾರೆ. ಈ ವಿಭಜನೆಯ ಪ್ರಕಾರ ನಮ್ಮ ವಸ್ತುಕ ಕಾವ್ಯಗಳು Classical ಮತ್ತು ವರ್ಣಕ ಕಾವ್ಯಗಳು Romantic ಎಂದು ಕರೆಯಬಹುದು. ಸಂಪ್ರದಾಯಶರಣತೆ ಅಥವಾ ಲಕ್ಷಣಬದ್ಧತೆ Classical ಕಾವ್ಯದ ಪ್ರಮುಖ ಲಕ್ಷಣವಾದರೆ, ಕಲ್ಪನಾ ರಮ್ಯತೆ ಮತ್ತು ನಿರೂಪಣ ಭಾವನಾ ಸ್ವಾತಂತ್ರ್ಯ Romantic ಕಾವ್ಯದ ಪ್ರಮುಖ ಲಕ್ಷಣವೆನ್ನಬಹುದು. **ಈ ದೃಷ್ಟಿಯಿಂದ ಲಕ್ಷ್ಮೀಶನ ಜೈಮಿನಿ ಭಾರತವನ್ನು ಮಥಿಸಿ ನೋಡಿದರೆ ಅದು ಏಕಕಾಲಕ್ಕೆ ಸಂಪ್ರದಾಯ ಶರಣವಿದ್ದೂ ಕಲ್ಪನಾರಮ್ಯ ಮತ್ತು ನಿರೂಪಣ–ಸ್ವಾತಂತ್ರ್ಯಯುಕ್ತವಾದ ಕಾವ್ಯವಾಗಿದೆ, ಎಂದು ಮನದಟ್ಟು** ಆಗುವುದು. ಬೀಜ, ಬಿಂದು

1 'ಕನ್ನಡ ಕೈಪಿಡಿ', ಸಂ. ೧. ಪು. ೧೮೪.

ಇತ್ಯಾದಿ ಪಂಚ ಅವಸ್ಥೆಗಳಲ್ಲಿ ಕಾವ್ಯಕಥಾನಕವನ್ನು ಹಬ್ಬಿಸುವ, ಅಷ್ಟಾದಶ ವರ್ಣನಾ ಯುಕ್ತ ಸಂಪ್ರದಾಯಶರಣತೆ ಜೈಮಿನಿ ಭಾರತದಲ್ಲಿದೆ. ಧರ್ಮಬೋಧೆಯನ್ನು ಹಿತ ಮಿತವಾಗಿ ಮಾಡುವಲ್ಲಿ, ಅಷ್ಟಾದಶ ವರ್ಣನೆಗಳನ್ನು ತನಗೆ ತೋಚುವಂತೆ ಬಳಸುವಲ್ಲಿ ಲಕ್ಷ್ಮೀಶನು ನಿರೂಪಣ ಸ್ವಾತಂತ್ರ್ಯವನ್ನು ವಹಿಸಿದ್ದಾನೆ. ಅಷ್ಟಾದಶ ವರ್ಣನೆಗಳಲ್ಲಿ ವಿಪ್ರಲಂಭ ಶೃಂಗಾರ, ವಿರೋಧಿಜಯ ಮತ್ತು ಪರ್ವತ ವರ್ಣನೆಗಳನ್ನು ಮಾಡುವಾಗ ಅವನು ಸ್ವತಂತ್ರ ಪ್ರಜ್ಞೆಯನ್ನು ಅವಲಂಬಿಸಿದ್ದಾನೆ. ಸಂಪ್ರದಾಯಾನುಸಾರವಾಗಿ ಬರುವ ವಿಪ್ರಲಂಭವನ್ನು ಜೈಮಿನಿ ಭಾರತದಲ್ಲಿ ಕಾಣಲಾರೆವು. ಲಕ್ಷ್ಮೀಶನು ವಿರೋಧಿ ಜಯವೆಂಬ ಅಂಗವನ್ನು ವರ್ಣಿಸುವಾಗ ವಿರೋಧ ಪರಿಹಾರವನ್ನು ವರ್ಣಿಸಿದ್ದಾನೆ. ಇದರಂತೆಯೇ ಪರ್ವತ ವರ್ಣನೆಯಲ್ಲಿ ಬರಬೇಕಾದ ಬೇಟೆಯ ವರ್ಣನೆಯನ್ನು ಚಂದ್ರ ಹಾಸನ ಕಥಾನಕಕ್ಕಾಗಿ ತೆಗೆದಿಟ್ಟುಕೊಂಡಿದ್ದಾನೆ. ಸಂ. ಜೈ. ಭಾರತದಲ್ಲಂತೂ ಬೇಟೆಯ ವರ್ಣನೆಯೇ ಇಲ್ಲ. ಈ ಮೊದಲಿನ ಪ್ರಕರಣಗಳಲ್ಲಿ ಅಲ್ಲಲ್ಲಿ ಕಥಾವಸ್ತು, ಪಾತ್ರ, ರಸ ವಿಚಾರ ಇವುಗಳ ದೃಷ್ಟಿಯಿಂದ ಇರುವ ಜೈಮಿನಿ ಭಾರತದ ವಿನೂತನತೆಯನ್ನು ತೋರಿಸಿದ್ದೇವೆ. ಅದಲ್ಲದೆ, ಈ ವರ್ಣಕ ಕಾವ್ಯದ ಲಾಕ್ಷಣಿಕತೆಯೊಂದಿಗೆ ಬಂದಿರುವ ನಿರೂಪಣ ಸ್ವಾತಂತ್ರ್ಯ ಮತ್ತು ಕಲ್ಪನಾರಮ್ಯತೆ ಮತ್ತು ಕಾವ್ಯದಲ್ಲಿಯ ಗೇಯಗುಣ ಇವುಗಳು ಸಹ ಲಕ್ಷ್ಮೀಶನ ಜೈಮಿನಿ ಭಾರತದ 'ವಿನೂತನತೆ' ಎಂದು ನಮಗೆ ತೋರುತ್ತದೆ.

ವಸ್ತುಕ ಮತ್ತು ವರ್ಣಕ ಕಾವ್ಯದ ಇತಿಹಾಸವನ್ನು ಕೆ. ಕೃಷ್ಣಮೂರ್ತಿಯವರು 'ಕನ್ನಡದಲ್ಲಿ ಕಾವ್ಯತತ್ತ್ವ' ಎಂಬ ಗ್ರಂಥದಲ್ಲಿ ವಿವರವಾಗಿ ವಿಮರ್ಶಿಸಿದ್ದಾರೆ. ಅದನ್ನು ಈ ರೀತಿಯಾಗಿ ಸಂಗ್ರಹಿಸಬಹುದು. ಸಂಸ್ಕೃತದಲ್ಲಿ ಧರ್ಮಕಥಾಪರವಾದ ಅಷ್ಟಾದಶ ಪುರಾಣಗಳೂ, ಉಪಪುರಾಣಗಳೂ ಉಂಟು. ಪ್ರಾಯಿಕವಾಗಿ ಇವು ಪದ್ಯರೂಪ ದಲ್ಲಿಯೇ ಇವೆ. ಇವುಗಳಿಗಿರುವ ಪ್ರಾಶಸ್ತ್ಯ ಲಾಕ್ಷಣಿಕರ ದೃಷ್ಟಿಯಿಂದ 'ವಸ್ತು' ನಿಷ್ಠವೇ ಹೊರತು ವರ್ಣನಾನಿಷ್ಠವಲ್ಲ. ಇದನ್ನೆಲ್ಲ ಋಷಿಪ್ರೋಕ್ತವೆಂಬ ಭಕ್ತಿಯಿಂದಲೂ ಧರ್ಮಶ್ರದ್ಧೆಯಿಂದಲೂ ಪಾರಾಯಣ ಪ್ರವಚನಾದಿಗಳಿಗೆ ಉಪಯೋಗಿಸುವುದು ನಮ್ಮ ರೂಢಿ. ಆದರೆ ಇವನ್ನು 'ಕಾವ್ಯ'ವೆಂದು ಸಂಸ್ಕೃತ ಲಾಕ್ಷಣಿಕರು ಎಣಿಸುವುದಿಲ್ಲ. ಸರ್ಗ, ಪ್ರತಿಸರ್ಗ, ರಾಜವಂಶಗಳು, ತೀರ್ಥ ಮಹಿಮೆಗಳು ಇತ್ಯಾದಿ ಪುರಾಣಲಕ್ಷಣಗಳು ಅಲ್ಲಿ ಅನ್ವಯಿಸುವವೇ ಹೊರತು ಕಾವ್ಯಲಕ್ಷಣಗಳಲ್ಲ. ಆದರೆ ಕನ್ನಡದ ಕಾವ್ಯರಚನೆಯ ಆರಂಭಯುಗದಲ್ಲಿ ಪ್ರಮುಖರಾದ ಜೈನಕವಿಗಳಿಗೆ ಪ್ರಚೋದನೆ ಬಂದುದು ಈ ಸಂಸ್ಕೃತ ಪುರಾಣಗಳಿಂದಲ್ಲ; ಬಹಳಮಟ್ಟಿಗೆ ಪುರಾಣ ಲಕ್ಷಣದೊಡನೆ ಕಾವ್ಯಲಕ್ಷಣವನ್ನೂ ಒಡಮೂಡಿಸಿಕೊಂಡ ಜಿನಸೇನಾಚಾರ್ಯರ (ಕ್ರಿ.ಶ. ೯ನೆಯ ಶತಮಾನ) ಆದಿಪುರಾಣ ಮುಂತಾದ ಗ್ರಂಥಗಳಿಂದ. ಜಿನಸೇನರು ಹೇಳುವ ಪುರಾಣ ಲಕ್ಷಣವನ್ನೇ ಪಂಪನು (ಆದಿಪುರಾಣದಲ್ಲಿ) ಅನುವಾದಿಸಿಕೊಂಡಿದ್ದಾನೆ. ಸಾಹಿತ್ಯ ಸಂಪ್ರದಾಯದಲ್ಲಿ ಧಾರ್ಮಿಕ ಕಥಾವಸ್ತು, ವರ್ಣನೆ ಎರಡಕ್ಕೂ ಸಮಪ್ರಾಧಾನ್ಯ ದೊರೆತಿದ್ದುದು ವ್ಯಕ್ತವಾಗುತ್ತದೆ.

ಮಹಾಪುರಾಣಗಳನ್ನು ಬರೆಯುವವರೇ ಮಹಾಕವಿಗಳೆಂಬ ರೂಢಿ ಜೈನರಲ್ಲಿ ಪ್ರಚಲಿತವಾಗಿದ್ದಂತೆ ತೋರುತ್ತದೆ. ಇದರ ಫಲವಾಗಿ ಕನ್ನಡದ ಕವಿಚಕ್ರವರ್ತಿಗಳೆಲ್ಲ ತಂತಮ್ಮ ಮಹಾಕೃತಿಗಳನ್ನು 'ಪುರಾಣ'ಗಳೆಂದು ಹೆಸರಿಸುವರೇ ಹೊರತು 'ಕಾವ್ಯ'ವೆಂದಲ್ಲ. ಇವರು ಧರ್ಮ ಮತ್ತು ಕಾವ್ಯಧರ್ಮಗಳೆರಡಕ್ಕೂ ನಂಟನ್ನು ಜೋಡಿಸಿ ಗಂಟು ಹಾಕಿದ ಕಾರಣ 'ಪುರಾಣ', 'ಮಹಾಕಾವ್ಯ' ಇವೆರಡಕ್ಕೂ ಸಂಸ್ಕೃತ ಲಾಕ್ಷಣಿಕರು ತೋರಿಸುತ್ತಿದ್ದ ವಿಭಿನ್ನತೆ ಜೈನಸಾಹಿತ್ಯ ರಚನೆಯಲ್ಲಿ ಇಲ್ಲದಂತಾಯಿತು. **'ಪುರಾಣ ಕಾವ್ಯ' ಸಂಪ್ರದಾಯವು ಕಥಾವಸ್ತುವಿನ ಮಹಾತ್ಮ್ಯ ದೃಷ್ಟಿಯಿಂದ 'ವಸ್ತುಕ'ವೆನಿಸುವ ಅಂಶಗಳನ್ನೂ, ವರ್ಣನಾ ಚಮತ್ಕಾರದ ದೃಷ್ಟಿಯಿಂದ 'ವರ್ಣಕ'ವೆನಿಸುವ ಅಂಶಗಳನ್ನೂ ಕೂಡಿಯೇ ಒಳಗೊಳ್ಳುತ್ತಿದ್ದುವೆಂಬುದು ಈ ಹಿನ್ನೆಲೆಯಲ್ಲಿ ವಿಶದವಾಗುತ್ತದೆ.** ಆದ್ದರಿಂದಲೇ 'ಚಂಪೂ' ಅಥವಾ 'ಕಾವ್ಯ' ಅಥವಾ 'ಪುರಾಣ' ಅಥವಾ 'ವಸ್ತುಕ' ಅಥವಾ 'ವಸ್ತುಕೃತಿ' ಈ ಎಲ್ಲ ಹೆಸರುಗಳೂ ಒಂದೇ ಜಾತಿಯ ಪ್ರಬಂಧಗಳಿಗೆ ಒಪ್ಪುವಂತಾಯಿತು.

ಈ ಅವತರಣಿಕೆಯಲ್ಲಿ ವಸ್ತುಕ ಮತ್ತು ಚಂಪೂ ಇವು ಸಮಾನಾರ್ಥಕ ಪದಗಳು ಎಂದು ಹೇಳಿದೆ. ಮತ್ತು ಈ ವಸ್ತುಕ ಕಾವ್ಯದಲ್ಲಿ 'ವರ್ಣಕ'ಎನಿಸುವ ಅಂಶಗಳೂ ಒಳಗೊಳ್ಳುತ್ತಿದ್ದವು ಎಂದು ಉಲ್ಲೇಖಿಸಿದೆ. ಇದರ ಮೇಲಿಂದ 'ವಸ್ತುಕ' ಎಂದರೆ 'ಚಂಪೂ'; 'ವರ್ಣಕ'ವೆಂದರೆ ಷಟ್ಪದಿ ಎಂದು ಹೇಳುವುದಾಗಲಿ, ಅಥವಾ 'ವಸ್ತುಕ'ವೆಂದರೆ ಕಥಾನಕ, 'ವರ್ಣಕ'ವೆಂದರೆ ವರ್ಣನಾಂಶ ಎಂದು ಹೇಳುವುದಾಗಲಿ ಅಷ್ಟು ಸಮಂಜಸವಾಗಿ ತೋರುವುದಿಲ್ಲ. 'ವಸ್ತುಕ' ಕಾವ್ಯದಲ್ಲಿ ವರ್ಣನಾಂಶ ಮತ್ತು 'ವರ್ಣಕ' ಕಾವ್ಯದಲ್ಲಿ ವಸ್ತುವಿನ ಅಂಶ ಇರುವುದರಿಂದ ಬರಬರುತ್ತ ವಸ್ತುಕ ಕಾವ್ಯ ಮತ್ತು ವರ್ಣಕ ಕಾವ್ಯದ ವ್ಯಾಖ್ಯೆಯನ್ನು ಅಥವಾ ಲಕ್ಷಣವನ್ನು ಹೇಳುವುದು ಜಟಿಲವಾಯಿತೆಂದು ತೋರುತ್ತದೆ. ವಸ್ತುಕ ಕಾವ್ಯಕ್ಕೆ ಓದುಗಬ್ಬ ಮತ್ತು ವರ್ಣಕ ಕಾವ್ಯಕ್ಕೆ ಹಾಡುಗಬ್ಬ ಎಂಬ ಪದಗಳನ್ನು ಇಟ್ಟುಕೊಂಡಿದ್ದಾದರೆ ಯಾವ ಜಟಿಲತೆಯೂ ಇಲ್ಲ.

ತ್ರಿಪದಿ, ಷಟ್ಪದಿ ಮತ್ತು ಸಾಂಗತ್ಯ ಕಾವ್ಯಗಳು ಹಾಡುವುದಕ್ಕೆ ಅನುಕೂಲವಾಗಿರುವುದರಿಂದ ಅವುಗಳಿಗೆ 'ವರ್ಣಕ' ಕಾವ್ಯಗಳೆನ್ನುತ್ತಾರೆಯೇ ಹೊರತು ಅದರಲ್ಲಿ ಅಷ್ಟಾದಶ ವರ್ಣನೆಗಳಿರುತ್ತವೆ ಎಂಬುದರಿಂದ ಅಲ್ಲ. ಏಕೆಂದರೆ ವಸ್ತುಕ ಕಾವ್ಯದಲ್ಲಿಯೂ ಅಷ್ಟಾದಶವರ್ಣನೆಗಳಿರುತ್ತವೆ.

' "ಪದ" ಎಂಬ ಶಬ್ದವು "ಹಾಡು" ಎಂಬ ಅರ್ಥದಲ್ಲಿ ಕೆಲವು ಕಡೆ ರೂಢಿಯಾಗಿರುವಂತೆ "ವರ್ಣ" ಅಥವಾ "ವರ್ಣಕ" ಎಂಬ ಶಬ್ದವೂ "ಹಾಡು" ಎಂಬ ಅರ್ಥದಲ್ಲಿ ಹಿಂದೆ ರೂಢವಾಗಿದ್ದಿರಬಹುದು. ಸಂಗೀತದಲ್ಲಿ "ವರ್ಣ" ಎಂಬ ಭೇದವಿದೆ. "ಸೊಬಗಿನ ಸೋನೆಯ ಹಾಡು" ಎಂಬುದಕ್ಕೆ ಬದಲಾಗಿ "ಸೊಬಗಿನ ಸೋನೆಯ ವರ್ಣ" ಎಂದು ಮುಂತಾಗಿ ಹಿಂದಿನ ಯಕ್ಷಗಾನ ಗ್ರಂಥಗಳಲ್ಲಿ ಉಲ್ಲೇಖಿಸಿದ್ದು ಕಂಡು ಬರುತ್ತದೆ.'[1]

1 'ಕನ್ನಡ ಕೈಪಿಡಿ', ಸಂ. ೧., ಪು. ೧೪೬.

ಇದೇ ಅರ್ಥದಿಂದ ಸೋಬಾನೆ ಪದ, ಗೌರಿ ಹಾಡು, ಹಂತಿ ಪದ ಮತ್ತು ಪ್ರಕೃತಿ ವರ್ಣನೆ, ಸ್ತ್ರೀಪ್ರಶಂಸೆ, ರಾಜಸ್ತುತಿ ಮುಂತಾದವುಗಳನ್ನು ಕುರಿತು ಇರುವ ಚಾಟು ಶ್ಲೋಕಗಳೆಲ್ಲ 'ವರ್ಣಕ' ಎಂದು ಎನಿಸಿಕೊಳ್ಳುತ್ತಿದ್ದವು. ಇವುಗಳೆಲ್ಲ ಹಾಡುವ ರೀತಿಗೆ ಒಳಪಟ್ಟುದರಿಂದಲೇ ಇವು ವರ್ಣಕಗಳಾಗಿವೆ.

ಮೇಲೆ ಉಲ್ಲೇಖಿಸಿದ ಈ ವರ್ಣಕಗಳು ಬರಬರುತ್ತ ೧೨ನೆಯ ಶತಮಾನದ ದವರೆಗಿನ ಎಲ್ಲ ಚಂಪೂ ವಸ್ತುಕ ಕಾವ್ಯಗಳಲ್ಲಿ ಸ್ಥಾನವನ್ನು ಪಡೆದವು. 'ವಸ್ತುಕವು ಕ್ರಮಕ್ರಮವಾಗಿ ಕ್ಷೀಣಗೊಳ್ಳುತ್ತ ನಡೆದು ಲುಪ್ತಪ್ರಾಯವಾದಂತೆ ಮೇಲ್ನೋಟಕ್ಕೆ ತೋರಿದರೂ ವಸ್ತುತಃ ಅದು ತನ್ನ ಸಾರಸರ್ವಸ್ವವನ್ನೆಲ್ಲ ವರ್ಣಕಕ್ಕೆ ಧಾರೆಯೆರೆದಿತ್ತು. ಅದೇ ವರ್ಣಕವನ್ನು ಮೇಲ್ಮಟ್ಟಕ್ಕೆ ಮುಟ್ಟಿಸಿತೆನ್ನಬೇಕು. ವಸ್ತುಕದ ಪ್ರಾಬಲ್ಯಕಾಲ ದಲ್ಲಿ ವರ್ಣಕಕ್ಕೆ ಪ್ರಾಸಂಗಿಕ-ಪ್ರವೇಶವಿದ್ದರೆ ವರ್ಣಕದ ಪ್ರಾಬಲ್ಯಕಾಲದಲ್ಲಿ ವಸ್ತುಕದ ಸಂಪೂರ್ಣ ಲಕ್ಷಣಗಳೆಲ್ಲವೂ ವರ್ಣಕಪ್ರವಿಷ್ಟವಾಗಿದ್ದುವು. ಸು.೧೬೦೦ರ ಹೊತ್ತಿಗೆ ಲಕ್ಷಣ ಬಂಧುರವಾದ ವರ್ಣಕವು ವಸ್ತುಕದಷ್ಟೇ ಪುರಸ್ಕಾರಯೋಗ್ಯವೆನ್ನುವ ಭಾವನೆ ಯಿರಲಿ, ವಸ್ತುಕಕ್ಕಿಂತಲೂ ಸ್ವಲ್ಪ ಹೆಚ್ಚಿನ ಯೋಗ್ಯತೆಯುದೆನ್ನುವ ಭಾವನೆ ನಿರ್ಮಾಣವಾಗಿತ್ತು. ಬಾಹುಬಲಿಯ ಈ ಪದ್ಯ ವರ್ಣಕದ ಮಹತಿಯನ್ನು ಹೀಗೆ ಹೇಳಿದೆ :

> ಚಿಪ್ಪಿನೊಳಿಹ ಮುತ್ತು ವಸ್ತುಕ, ವರ್ಣಕ
> ಚಿಪ್ಪ ಕಳೆದು ಸರಗೈದ
> ಸುಪ್ಪಾಣಿ ಮುತ್ತಿನ ಹಾರವೆಂದೆನಿಪೊಂ
> ದೊಪ್ಪದೋರದೊಡವ ಕವಿಯೆ ?

—'ನಾಗಕುಮಾರ ಚರಿತೆ', I. 62. [1]

ಎಂದು ಕೆ. ಕೃಷ್ಣಮೂರ್ತಿಯವರು ವಸ್ತುಕ, ವರ್ಣಕ ಇತಿಹಾಸವನ್ನು ವಿವೇಚಿಸಿ ದ್ದಾರೆ.

ಈ ರೀತಿಯ ಇತಿಹಾಸವು ನಿರ್ಮಾಣವಾಗಲು ಲಕ್ಷ್ಮೀಶನ ಜೈಮಿನಿ ಭಾರತ ಮತ್ತು ವಿರೂಪಾಕ್ಷ ಪಂಡಿತನ 'ಚೆನ್ನಬಸವ ಪುರಾಣ'ಗಳೇ ಕಾರಣ ಎಂದು ನಿಸ್ಸಂಶಯ ವಾಗಿ ಹೇಳಬಹುದು. ವರ್ಣಕ ಕಾವ್ಯದಲ್ಲಿಯೂ ಪಾಮರರಂಜಕ ವರ್ಣಕ ಕಾವ್ಯ ಮತ್ತು ಪಂಡಿತ ಪಾಮರ ರಂಜಕ ಕಾವ್ಯ ಎಂದು ವಿಭಜನೆಯನ್ನು ಮಾಡಬಹುದು. ಕೇವಲ ಸ್ತ್ರೀವರ್ಣನೆ, ಪ್ರಕೃತಿ ವರ್ಣನೆ, ಸಂಭೋಗ-ವಿಪ್ರಲಂಭ ಶೃಂಗಾರ ವರ್ಣನೆಯ ವರ್ಣಕಗಳು ಪಾಮರ ರಂಜಕ ಕಾವ್ಯಗಳೆಂದೆನಿಸಿಕೊಳ್ಳುತ್ತವೆ. ಜೈಮಿನಿ ಭಾರತ ಮತ್ತು 'ಚೆನ್ನಬಸವಪುರಾಣ' ಈ ಬಗೆಯ ವರ್ಣಕ ಕಾವ್ಯಗಳಲ್ಲ. ವಸ್ತುಕದ ಪಟ್ಟವನ್ನು ವರ್ಣಕಕ್ಕೆ ಕಟ್ಟಿದವುಗಳು; ಪಂಡಿತಪಾಮರರನ್ನು ಮಂತ್ರಮುಗ್ಧರನಾಗಿ ಮಾಡಿದ ರಸವತ್ಕಾವ್ಯಗಳು ಇವಾಗಿವೆ.

---

[1] 'ಕನ್ನಡದಲ್ಲಿ ಕಾವ್ಯತತ್ತ್ವ', ಪು. ೯೨-೯೩.

## ವಾರ್ಧಕ ಷಟ್ಪದಿ ಕಾವ್ಯಗಳೊಂದಿಗೆ ಜೈಮಿನಿ ಭಾರತ

ಷಟ್ಪದಿಯ ಪುನರುತ್ಥಾಪಕನಾದ ರಾಘವಾಂಕನ 'ಹರಿಶ್ಚಂದ್ರ ಕಾವ್ಯ'ದಿಂದ ಮುದ್ದಣನ 'ರಾಮಪಟ್ಟಾಭಿಷೇಕ'ದವರೆಗೆ ಷಟ್ಪದಿ ಕಾವ್ಯಗಳು ವಿವಿಧ ಕಥಾವಸ್ತುಗಳನ್ನು ವಿವಿಧ ಷಟ್ಪದಿಯ ಮಾಧ್ಯಮದಲ್ಲಿ ಅಭಿವ್ಯಕ್ತಿಗೊಳಿಸಿವೆ.

ಕನ್ನಡ ಜೈಮಿನಿಭಾರತವು ವಾರ್ಧಕ ಷಟ್ಪದಿಯಲ್ಲಿರುವುದರಿಂದ ಇದನ್ನು **ಉಳಿದ ವಾರ್ಧಕ ಷಟ್ಪದಿ** ಕಾವ್ಯಗಳೊಂದಿಗೆ ಮಾತ್ರ ತೂಗಿ ನೋಡುವುದು ಯುಕ್ತ ಎಂದು ನಮಗೆ ತೋರುತ್ತದೆ.

ವಾರ್ಧಕ ಷಟ್ಪದಿಯಲ್ಲಿಯ ಪ್ರಥಮ ಕೃತಿ ರಾಘವಾಂಕ ಕವಿಯ 'ಹರಿಶ್ಚಂದ್ರ ಕಾವ್ಯ.' ಇವನ ಎರಡನೆಯ ಕೃತಿಯಾದ 'ಸಿದ್ಧರಾಮ ಪುರಾಣ'ವೂ ವಾರ್ಧಕದಲ್ಲಿಯೇ ಇದೆ. ಈ ಎರಡೂ ಕಾವ್ಯಗಳು ಒಂದು ಗಾತ್ರದ ಅಥವಾ ಒಬ್ಬ ವ್ಯಕ್ತಿಯ ಕಥಾನಕವನ್ನೇ ಪರಿಪೂರ್ಣವಾಗಿ ಚಿತ್ರಿಸುತ್ತವೆ. ಇದರಂತೆ 'ಅಮಲ ಬಸವರಾಜ ಚಾರಿತ್ರ', 'ಸೌಂದರನಂಬಿ ಪುರಾಣ', 'ರೇವಣ ಸಿದ್ಧೇಶ್ವರ ಪುರಾಣ'ಗಳೂ ಬಸವಣ್ಣ, ಸೌಂದರನಂಬಿ ಮತ್ತು ರೇವಣಸಿದ್ಧರ ಪಾತ್ರವು ಕಣ್ಣಮುಂದೆ ಕಟ್ಟಿನಿಲ್ಲುವಂತೆ ಚಿತ್ರಿಸಿದ ಕಾವ್ಯಗಳಾಗಿವೆ. ಕನ್ನಡ ಜೈಮಿನಿ ಭಾರತದಲ್ಲಿರುವ ಕಥೆಗಳ ವಿಸ್ತಾರ ಮೇಲಿನ ಕಾವ್ಯಗಳಿಗೆ ಇಲ್ಲ.

ಕಥೆಗಳ ದೃಷ್ಟಿಯಿಂದ ನೋಡಿದಾಗ ಲಕ್ಕಣದಂಡೇಶನ 'ಶಿವತತ್ತ್ವ ಚಿಂತಾಮಣಿ' ಮತ್ತು ಗುಬ್ಬಿಯ ಮಲ್ಲಣಾರ್ಯನ 'ವೀರಶೈವ ಪುರಾಣ'ಗಳಲ್ಲಿ ನೂತನ ಪುರಾತನ ಶಿವ ಶರಣರ ಅನೇಕ ಕಥಾನಕಗಳು ಬರುತ್ತವೆ. ಇವೆರಡೂ ಲಕ್ಷ್ಮೀಶನ ಜೈಮಿನಿ ಭಾರತಕ್ಕಿಂತ ಬೃಹತ್ ಗ್ರಂಥಗಳಾಗಿವೆ. 'ವೀರಶೈವ ಪುರಾಣ'ದಲ್ಲಿ ೭೧೦೦೦ ಪದ್ಯಗಳಿವೆ. 'ಶಿವತತ್ತ್ವಚಿಂತಾಮಣಿ'ಯಲ್ಲಿ ೨ ಸಾವಿರದ ೨೦೦ ಪದ್ಯಗಳಿವೆ. ಈ ಎರಡೂ ಗ್ರಂಥಗಳೂ ಮತೀಯ ಗ್ರಂಥಗಳು. ಇವುಗಳಲ್ಲಿ ಶಿವನ ಪಂಚವಿಂಶತಿ ಲೀಲೆಗಳು, ನೂತನ ಪುರಾತನರ ಕಥೆಗಳು, ಅಷ್ಟಾವರಣ ಮಹಿಮೆ, ಷಟ್‌ಸ್ಥಲ ಸಿದ್ಧಾಂತ ಇತ್ಯಾದಿ ವಿಷಯಗಳು 'ವೀರಶೈವಾಮೃತ ಪುರಾಣ'ದಲ್ಲಿ ಬಂದಿದ್ದರೆ; 'ಶಿವತತ್ತ್ವ ಚಿಂತಾಮಣಿ'ಯ ಗುರಿ ಲಿಂಗಾಂಗಸಾಮರಸ್ಯರೂಪವಾದ ಶಿವಾದ್ವೈತನಿರೂಪಣೆಯದಾಗಿದೆ.

'ವೀರಶೈವಾಮೃತಪುರಾಣ'ವು ವೀರಶೈವ ಧರ್ಮಗ್ರಂಥವಾಗಿದ್ದರೂ ಕಾವ್ಯಧರ್ಮದಿಂದ ವಂಚಿತವಾಗಿಲ್ಲ. ಇದೇ ಮಾರ್ಗದಲ್ಲಿ ಇನ್ನೊಂದು ಕೃತಿ ಎಂದರೆ ವಿರೂಪಾಕ್ಷ ಪಂಡಿತನ 'ಚೆನ್ನಬಸವಪುರಾಣ'. ಇದೂ ಕೂಡ ೬೩ ಸಂಧಿ, ೨೯೦೦ ವಾರ್ಧಕ ಪದ್ಯಗಳುಳ್ಳ ಬೃಹತ್ ಕಾವ್ಯವಾಗಿದೆ. ಇದರಲ್ಲಿ ೫ ಕಾಂಡಗಳಿದ್ದು—ಚೆನ್ನಬಸವಣ್ಣನವರ ಅವತಾರ ಮಹಿಮೆ, ಈಶ್ವರಲೀಲೆ, ಷಟ್‌ಸ್ಥಲ ವಿವೇಚನೆ, ಪುರಾತನರು, ವಿರಕ್ತರು ಇವರ ಅಮರ ಗುಣಗಳು, ಕಾಲಜ್ಞಾನ ಇತ್ಯಾದಿ ಮತೀಯ ವಿಷಯಗಳೇ ಹೆಚ್ಚಾಗಿ ಬರುತ್ತವೆ. ಲಕ್ಷ್ಮೀಶನ ಜೈಮಿನಿ ಭಾರತವು ಮತೀಯ ಗ್ರಂಥವಲ್ಲ; ಇದು ಭಾಗವತ ದರ್ಶನಯುಕ್ತವಾದ ಕಥನಕಾವ್ಯ :

'ಹರಿಯಂತೆ ಬಲಯುತಂ, ಶಿವನಂತೆ ರಾಜಶೇ
ಖರನಬ್ಜಭವನಂತೆ ಚತುರಾನನಂ ಸರಿ
ದ್ವರನಂತೆ ರತ್ನಾಕರಂ ದಿವಾಕರನಂತೆ ನಿರ್ದೋಷನಿಂದ್ರನಂತೆ ॥
ಪರಿಚಿತ ಸುರಭಿರಮ್ಯನಮೃತಾರ್ಚಿಯಂತೆ ವಿ
ಸ್ತರಿತ ಕುವಲಯನೆಂದು ಧರ್ಮಜನ ಧರೆ ಪೊಗಳು
ತಿರೆ.......................................
.........................................|| (೨–೧೩)

ಎಂಬ ಪದ್ಯವು ಧರ್ಮರಾಜನ ವರ್ಣನಾ ಪದ್ಯವಾಗಿದ್ದರೂ ಅದು ಬ್ರಹ್ಮ, ವಿಷ್ಣು, ಮಹೇಶ್ವರ, ಸೂರ್ಯ, ಇಂದ್ರ ಇತ್ಯಾದಿ ನಾಮಗಳು ಹಲವಾಗಿದ್ದರೂ ದೇವತತ್ತ್ವ ಒಂದೇ ಎಂಬುದನ್ನು ಅರಿತು ಬಾಳುವುದೇ ಧರ್ಮ ಎಂದು ಸೂಚಿಸುವಂತೆ ತೋರುತ್ತದೆ. ಅಗ್ನಿ ಉಪಾಸಕ ನೀಲಧ್ವಜ, ಆತ್ಮತತ್ತ್ವವನ್ನು ಅರಿತಂಥ ಹಂಸಧ್ವಜ, ಶಿವನ ರುಂಡ ಮಾಲೆಯಲ್ಲಿ ಸ್ಥಾನವನ್ನು ಪಡೆದ ಸುಧನ್ವ–ಸುರಥ, ಅನುಸಾಲ್ವನಂತಹ ರಕ್ಕಸ- ಇವರೆಲ್ಲರೂ ತಮ್ಮ ತಮ್ಮ ಇಷ್ಟ ದೇವರನ್ನು ಶ್ರೀಕೃಷ್ಣನಲ್ಲಿ ಕಾಣುತ್ತಾರೆ. ಶ್ರೀಕೃಷ್ಣ ದರ್ಶನದಿಂದ ತೃಪ್ತರಾಗುತ್ತಾರೆ ಎಂಬುದು 'ಏಕಂ ಸತ್ ವಿಪ್ರಾ ಬಹುಧಾ ವದಂತಿ' ಎಂಬ ಶಾಸ್ತ್ರಕ್ಕೆ ಪುಷ್ಟಿಯನ್ನು ಕೊಡುತ್ತದೆ. ಆದುದರಿಂದ 'ಏಕಂ ಸತ್ ವಿಪ್ರಾ ಬಹುಧಾ ವದಂತಿ' ಎಂಬ ಶಾಸ್ತ್ರವಾಕ್ಯಕ್ಕೆ ಭಾಷ್ಯವನ್ನು ಬರೆದಂತಿದೆ ಲಕ್ಷ್ಮೀಶನ ಜೈಮಿನಿ ಭಾರತ ಎಂದು ಹೇಳಬಹುದು. 'ವೀರಶೈವಾಮೃತಪುರಾಣ' ಮತ್ತು 'ಚೆನ್ನಬಸವ ಪುರಾಣ'ದಲ್ಲಿ ಧರ್ಮನಿರೂಪಣೆಯೊಂದಿಗೆ ಕಾವ್ಯತನವೂ ಇರುವುದರಿಂದ ಅವು ಜನ ಪ್ರಿಯ ಗ್ರಂಥಗಳಾದುವು. ಪಂಡಿತ ಪಾಮರ ರಂಜಕ ಕಾವ್ಯಗಳೆಂಬ ಗುಂಪಿಗೆ ಈ ಮೂರೂ ಕೃತಿಗಳನ್ನು ಸೇರಿಸಬಹುದು.

ವಾರ್ಧಕ ಷಟ್ಪದಿಯ ಇತಿಹಾಸವನ್ನು[1] ಅವಲೋಕಿಸಿದರೆ ಹೆಚ್ಚಾಗಿ ವೀರಶೈವ ಕವಿಗಳು ಈ ಛಂದಸ್ಸನ್ನು ತಮ್ಮ ಕಾವ್ಯಕ್ಕೆ ಉಪಯೋಗಿಸಿ, ಕವಿ ರಾಘವಾಂಕನ ಸಂಪ್ರದಾಯವನ್ನು ಮುಂದುವರಿಸಿದ್ದಾರೆ. ಈ ವಿಭಾಗದಲ್ಲಿಯ ಅನೇಕ ಕಾವ್ಯಗಳ ವಿಷಯ ಶಿವಶರಣರ ಚರಿತ್ರೆ ಅಥವಾ ವೀರಶೈವ ಧರ್ಮಬೋಧನೆಯೇ ಆಗಿದೆ.

ರಾಘವಾಂಕನ 'ಹರಿಶ್ಚಂದ್ರ ಕಾವ್ಯ' ರನ್ನನ 'ಗದಾಯುದ್ಧ'ದಂತೆ ಮಧ್ಯಮ ಗಾತ್ರ ದಲ್ಲಿಯ ಮಹಾಕೃತಿಯಾಗಿದೆ.

ತನಯನೆಂದುಂ ಬಪ್ಪ ಹೊತ್ತಿಗೆ ಬಾರದಿರೆ
ಮನನೊಂದಿದೇಕೆ ತಳುವಿದನೆನ್ನ ಕಂದನೆಂ
ದೆನುತ ಸುಯ್ಯುತ್ತ, ಮಱುಗುತ್ತ ಬಸುಱಿಂ ಹೊಸೆದು ಕೊನೆವೆರಳ
ಮುರಿದುಕೊಳುತ ||

[1] ನೋಡಿ 'ಕನ್ನಡ ಸಾಹಿತ್ಯದ ಷಟ್ಪದಿ ವೃತ್ತಗಳ ವಿಕಾಸಕ್ರಮ'—ಡಾ. ಸದಾನಂದ ನಾಯಿರ್ *'The Journal of the Karnatak University'*, vol. III, 1974.

ತನುವ ಮಱೆದಡಿಗಡಿಗೆ ಹೊಱಗನಾಲಿಸಿ ಮತ್ತೆ
ಮನೆಯೊಡತಿಗಂಜಿ ಕೆಲಸವನು ಮಾಡುತ್ತಿಪ್ಪ
ವನಿತೆಗಾದಾಪತ್ತನಾಲಿಸದೆ ಕೆಟ್ಟು ದಟ್ಟಿಸುವರದನೇನೆಂಬೆನು ||

—'ಹರಿಶ್ಚಂದ್ರ ಕಾವ್ಯ', ೧೨-೧೧

ಉಟ್ಟಱುವೆಯಂ ಉರದ ಮೇಲಕ್ಕೆ ತೆಗೆಯುತ್ತ
ಬಿಟ್ಟ ಹಂಕಣಿದತಿಯನಡಿಗಡಿಗೆ ತುಱಿಸುತ್ತ
ನಟ್ಟದಿಟ್ಟಿಯೊಳು ತನಯನ ಬರವ ನೋಡುತ್ತ ಕದಪಿನೊಳು ಕೈಯನಿಟ್ಟು ||
ಕೆಟ್ಟನಿನ್ನೇಗುವೆನು ಏನ ಮಾಡುವೆ ಮಗನ
ಬಟ್ಟೆಯಂ ನೋಡಿ ಬೆಱಗಾಗುವಿನಿತಕ್ಕೊಡತಿ
ಧಟ್ಟಿಸುವಳೆಂದು ಸಿಡಿಮಿಡಿಗೊಂಡು ಮಱುಗುತ್ತನಿಂದು ಸುರ್ರನೆ ಸುಯ್ದಳು ||

—'ಹರಿಶ್ಚಂದ್ರ ಕಾವ್ಯ', ೧೨-೧೬

ರಾಘವಾಂಕನ ಈ ಪದ್ಯಗಳು ಮತ್ತು

ಭೂರಮಣ ಕೇಳ್ಮುರಧ್ವಂಸಿ ನರಲೀಲಾವ
ತಾರಮಂ ತಾಳ್ದು, ಹೊಂದೇರನಿಳಿದೈತಂದು
ಚಾರುಹಾಸದೊಳಾ ಯುಧಿಷ್ಠಿರನ ಕಾಲ್ಗೆಱರಲಾ ನೃಪಂ ಕೂಡೆ ತೊಲಗಿ ||
ವಾರಿಜಾಂಬಕನ ಪದವಲ್ಲವಕೆ ಮಣಿಯುತಿರ
ಲಾರಾಯನಂ ತೆಗೆದು ತಕ್ಕೈಸಲರಸನಸು
ರಾರಿಯಂ ಪ್ರೇಮದಿಂ ಬಿಗಿಯಪ್ಪಿದಂ ಮತ್ತೆ ಮುನಿಜನಂ ಬೆಱಗಾಗಲು ||

—'ಜೈಮಿನಿ ಭಾರತ', ೨-೪೯

ಶ್ರೀಕರಾಂಬುಜ ಯುಗ್ಮದಿಂದೆತ್ತಿಕೊಂಡು, ಕಮ
ಲಾಕಾಂತನಾ ಶಿರವನೀಕ್ಷಿಸಿ, ಕರುಣದಿಂದ
ಮಾಕಾಶದೆಡೆಯೊಳಿಹ ಗರುಡನಂ ಕರೆದಿತ್ತು, ಜವದಿಂ ಪ್ರಯಾಗಕೈದಿ ||
ಈಕಪಾಲವನಲ್ಲಿ ಹಾಯ್ಕೆಂದು ಬೆಸಸಲದ
ನಾ ಖಗೇಶ್ವರನೊಯ್ಯುತಿರೆ, ಗಗನ ಪಥದೊಳ್ಪಿ
ನಾಕಿ ಕಂಡಳ್ತಿಯಿಂದಾ ತಲೆಗೆ ಕಳುಹಿದಂ ಭೃಂಗೀಶನಂ ಮುದದೊಳು ||

—'ಜೈಮಿನಿ ಭಾರತ', ೧೪-೧೮

ಲಕ್ಷ್ಮೀಶನ ಈ ಪದ್ಯಗಳನ್ನು ಹೋಲಿಸಿ ನೋಡಿದಾಗ ಇಬ್ಬರ ಸರಳ ಶೈಲಿ, ಸಣ್ಣ ಸಣ್ಣ ಸಮಾಸ ಮಾಡುವ ರೀತಿಯ ಅರಿವು ಆಗದೇ ಇರದು. ಇಬ್ಬರಲ್ಲಿಯೂ ಭಾವನೆಯನ್ನು ಸರಾಗವಾಗಿ ವಾರ್ಧಕ ಷಟ್ಪದಿಯಲ್ಲಿ ನಿರೂಪಿಸುವ ಸಾಮರ್ಥ್ಯವಿದೆ. ಆದರೆ ಲಕ್ಷ್ಮೀಶನ ಬಭ್ರುವಾಹನನ ಓಲಗದ ವರ್ಣನೆಯನ್ನು—

ನೀಲಮಣಿ ಕಾಂತಿಗಳ ಕತ್ತಲೆಯ, ಮುತ್ತುಗಳ
ಡಾಳಗಳ ಕೌಮುದಿಯ, ಮಾಣಿಕದ, ರಶ್ಮಿಗಳ,
ಬಾಲಾತಪದ, ವಿದ್ರುಮಚ್ಛವಿಯ, ಸಂಜೆಗೆಂಪಿನ, ಪಗಲಿರುಳ್ಗಳಲ್ಲಿ ||
ತೇಲದಿಹುವಲ್ಲದೆ ದಿವಾರಾತ್ರಿಯುಂಟೆಂಬ
ಕಾಲಭೇದವನಱಿಯದಾ ಮಹಾಸಭೆ ಸುರಪ
ನೋಲಗದ ಮಂಟಪದ ಸೌಭಾಗ್ಯಕೆಂಟುಮಡಿಯಾಗಿರ್ಪುದಚ್ಚರಿಯೆನೆ || (೧೭-೨೬)

ಕಸ್ತುರಿ ಜವಾದಿಗಳ ಸಾರಣೆಯ ಕುಂಕುಮ ಪ
ರಿಸ್ತರಣದ ಗುರು ಚಂದನ ಧೂಪವಾಸಿತದ
ವಿಸ್ತರದ ಕರ್ಪೂರ ತೈಲದಿಂದಲ್ಲಲ್ಲಿಗುರಿವ ಬೊಂಬಾಳಂಗಳ ॥
ಶಸ್ತ ರತ್ನ ಪ್ರದೀಪ ಜ್ವಾಲೆಗಳ ಸಭೆ ಸ
ಮಸ್ತ ಸೌಭಾಗ್ಯದಿಂದೊಪ್ಪುತಿರಲಾಗ ಭೂ
ಪಸ್ತೋಮ ಸಹಿತ ಬಂದಾ ಬಭ್ರುವಾಹನಂ ಕುಳ್ಳಿರ್ದನೋಲಗದೊಳು ॥ (೧೭–೨೭)

ಓದಿದಾಗ, ರಾಘವಾಂಕನ ದೇವೇಂದ್ರನ ಓಲಗದ ಕೆಳಗಣ ಪದ್ಯಗಳಲ್ಲಿಯ ವರ್ಣನೆ ಎಷ್ಟು ಮನೋಹರವಾಗಬೇಕಿತ್ತೋ ಅಷ್ಟು ಆಗಿಲ್ಲ ಎಂದು ತೋರುತ್ತದೆ.

ಪರುಷವಂಗಣದ ಕಲು ಸುರಭಿ ಕಱಹಂ ಕಲ್ಪ
ತರು ವನಂ ಸ್ವರ್ಗ ನಿಜದೇಶವಮರಾವತಿಯೆ
ಪುರದುರ್ಗವಮರರಾಳ್ ಮೇರು ಕೇಳೀ ಶೈಲವಮೃತವೇ ಮನೆಯ ಬೀಯ ॥
ವರರಂಭೆ ಸೂಳೆ ಶಚಿರಾಣಿಯೈರಾವತಂ
ಕರಿ ವಜ್ರವಾಯುಧಂ ನವನಿಧಿಯೆ ಭಂಡಾರ
ಹೊರೆವಾಳ್ದನಭವನೆಂದೆನಿಪ ದೇವೇಂದ್ರನೊಂದಿರಳೋಲಗವನಿತ್ತನು ॥

—'ಹರಿಶ್ಚಂದ್ರ ಕಾವ್ಯ', ೨–೧

ತರದ ತಂಡದ ಗಡಣದೋರಣದ ವಂಗಡದ
ಪರಿವಿಡಿಯ ಸಾಲ ಸೇರುವೆಯ ಪರಿಪಂಕ್ತಿಗಳ
ಸುರರ ವಿದ್ಯಾಧರರ ಕಿನ್ನರರ ಖೇಚರರ ಗುಹ್ಯಕರ ಗಂಧರ್ವರ-
ತುರಗ ವದನರ ಮಯೂರರ ಮಹೋರಗರ ಸಿ
ದ್ಧರ ಧರಾಚರರ ಗರುಡರು ಕಿಂಪುರುಷರ ಮು
ಖ್ಯರ ನಟ್ಟನಡುವೆ ಮಣಿಭದ್ರಾಸನದೊಳಿರ್ದನಿಂದ್ರನನಿಮಿಷಚಂದ್ರನು ॥

—'ಹರಿಶ್ಚಂದ್ರ ಕಾವ್ಯ', ೨–೨

'ಹರಿಶ್ಚಂದ್ರ ಕಾವ್ಯ' ೨–೨ ಪದ್ಯ ಇಂದ್ರನಾಸ್ಥಾನದಲ್ಲಿಯ ದಟ್ಟಣೆಯನ್ನು ಸೂಚಿಸುತ್ತದೆ. ಮೊದಲನೆಯ ಪದ್ಯದಲ್ಲಿ 'ಪುರುಷವಂಗಣದ ಕಲು ಸುರಭಿ' ಎಂಬಲ್ಲಿ ಸ್ವಲ್ಪ ಇಂದ್ರನ ವೈಭವವೂ ವ್ಯಕ್ತವಾಗಿದೆ. ಆದರೆ 'ಹರಿಶ್ಚಂದ್ರ ಕಾವ್ಯ'ದಲ್ಲಿಯ ಇಂದ್ರನೋಲಗದ ವರ್ಣನೆಯ ಪದ್ಯಗಳಲ್ಲಿ ಇನ್ನುಳಿದ ಪದ್ಯಗಳಂತೆ ಸುಮಧುರ, ಸುಲಲಿತ ಪದಸಂಯೋಜನೆಯು ಬಂದಿಲ್ಲ. ಲಕ್ಷ್ಮೀಶನು ವರ್ಣನಾಚಾತುರಿಯಲ್ಲಿ ರಾಘವಾಂಕನನ್ನು ಮೀರುತ್ತಾನೆ. ಲಕ್ಷ್ಮೀಶನಿಗೆ ವರ್ಣನೆಯ ಕಾಲಕ್ಕಿರುವ ಉತ್ಸಾಹ, ವೈಭವ ರಾಘವಾಂಕನಿಗಿಲ್ಲ. ನಾಟ್ಯವಿಷಯವಾದ ಭಾವಾಭಿನಯವನ್ನು ವಿವರಿಸುವಲ್ಲಿ–ಅರಳಿಸುವಲ್ಲಿ ಮಾತ್ರ ಇಬ್ಬರೂ ಸಮಾನ ಶಕ್ತಿಯುಳ್ಳವರು.

ಪರಮ ಹರ್ಷದಿ ನಿಂತು ಗುರುಕುಲಾಗ್ರಣಿಯಿರು
ತ್ತಿರೆ ಮೆಲ್ಲಮೆಲ್ಲನೆ ಹಿಮಂ ಸರಿಯೆ ಪೊಸವಿಸಿ
ಲ್ಪೊರೆಯೇರೆ ಮೆಯ್ಯ ಬಿರುಬುಗಳಡಂಗಿ ಲಸತ್ಪ್ರಸನ್ನತೆಯನಪ್ಪುಗೆಯ್ಯೆ ॥
ಕೊರಗಿದಂಬುಜವನಂ ಸೊಂಪೇರೆ ಬಲ್ಗಾಳಿ
ಸರಿದು ತಂಬೆಲರ ಕಾಲಾಟ ವಗ್ಗಳಿಸೆನಸು
ಮೊರೆಯುತುಂ ತುಂಬಿ ಸುಳಿದಾಡೆ ಮೆರೆದುದು ಮಾಗಿಯಪಜಯಂ

–ಮಧುವಿನ ಜಯಂ ॥

ಪರಿಯೆ ಮದಮುಂ ಮಾಗಿ ಕರೆಯೆ ಸೊಗಸಂ ಮಾವು
ನೆರೆಯೆ ಕಳೆಪೆರ್ಚಿ ಸಸಿ ಮೆರೆಯೆ ಮಾಧವಿ ಪೂತು
ತೊರೆಯೆ ಲಜ್ಜೆಯನವನಿಜರೆಯೆ ತಪಮುಂಯಮಿಗಳಿರಿಯೆನನೆಗಣೆಯೋಪರಂ||
ಮುರಿಯೆ ವಿರಹಿಯಗುಟ್ಟು ಬೆರೆಯೆ ಕುಸುಮೇಷುಕುಕಿ
ಲರಿಯೆ ಕೋಗಿಲೆ ದುಃಖವರೆಯೆ ಸುಖಿಜನಕೆ ಕ
ಣ್ದೆರೆದುದು ವಸಂತಮಾಸಂ ಭೋಗಿ ತತಿಯ ಮುಖ ವಿಕಾಸಂ ಸುಖೈಕವಾಸಂ ||

—'ಪ.ರಾ.ಪು.', ಸಂ. ೮, ಪ. ೨-೩

ಎಂಬ ಈ ಪದ್ಮಣಾಂಕ ಕವಿಯ ವಸಂತ ವರ್ಣನಾ ಪದ್ಯಗಳನ್ನು ಲಕ್ಷ್ಮೀಶನ ವಸಂತ ವರ್ಣನಾ ಪದ್ಯಗಳೊಡನೆ ಹೋಲಿಸಿ ನೋಡಬೇಕು.

ಮಿಱುಗುವ ತಳಿರ್ದೋರಣಂಗಳಂ ಕಟ್ಟಿಸುತ
ಮಱಿಗೋಗಿಲೆಗಳ ಬಾಯ್ಗಳ ಬಲಿದ ಬಂಧನದ
ಸೆಱೆಗಳಂ ಬಿಡಿಸುತ್ತ ತುಂಬಿಗಳ ದಳಕೆ ಕಮ್ಮಲರ್ಗಳಂ ಸೂಱೆವಿಡುತ ||
ಕಿಱುವೆಲರೊಳೆತ್ತಲುಂ ಸಾರಿಸುತ ವಿರಹಿಗಳ
ನೆಱಗಿಸುತ ಜೊನ್ನದ ಜಸಂ ಪೆರ್ಚೆ ಮಧುನೃಪಂ
ಪೊಱಮಟ್ಟು ಮಾಗಿಯನ್ನುಡುಗಿಸಿ ಸಮಸ್ತ ವನರಾಷ್ಟ್ರಮಂ ಕೈಕೊಂಡನು ||

—ಸಂ. ೮, ಪ. ೩

ಈ ಮೊದಲಾದ ವಸಂತ ವರ್ಣನೆಗಳ ತೂಕಕ್ಕೆ ಪದ್ಮಣಾಂಕ ಕವಿಯ ವಸಂತ ವರ್ಣನಾ ಪದ್ಯಗಳು ಬರಲಾರವು. 'ಮಾಗಿಯುಪಜಯಂ ಮಧುವಿನ ಜಯಂ' ಎಂಬುದನ್ನೇ ಲಕ್ಷ್ಮೀಶನು 'ಮಧುನೃಪಂ ಪೊರಮಟ್ಟು ಮಾಗಿಯನ್ನುಡುಗಿಸಿ ಸಮಸ್ತ ವನರಾಷ್ಟ್ರಮಂ ಕೈಕೊಂಡನು' ಎಂದಿದ್ದಾನೆ. ಈ ಎರಡರಲ್ಲಿ ಮೊದಲನೆಯದು ಶುಷ್ಕ ಉಕ್ತಿಯಾದರೆ ಎರಡನೆಯದು ರಸವತ್ ಉಕ್ತಿಯಾಗುತ್ತದೆ. 'ಮಧುನೃಪಂ' ಎಂಬ ಪದಕ್ಕಿರುವ ಶಕ್ತಿ 'ಮಧುವಿನಜಯಂ' ಎಂಬುದಕ್ಕೆ ಇಲ್ಲ. ಇದರಂತೆಯೆ ಪದ್ಮಣಾಂಕನ 'ತುಂ ತುಂಬಿ ಸುಳಿದಾಡೆ' ಮತ್ತು 'ಕುಕಿಲಿರಿಯೆ ಕೋಗಿಲೆ' ಎಂಬ ಪದಗಳಲ್ಲಿ 'ಮರಿಗೋಗಿಲೆಗಳ ಬಾಯ್ಗಳ ಬಲಿದ ಬಂಧನದ ಸೆರೆಗಳಂ ಬಿಡಿಸುತ್ತ' 'ತುಂಬಿಗಳ ದಳಕೆ ಕಮ್ಮಲರ್ಗಳಂ ಸೂರೆವಿಡುತ' ಎಂಬಲ್ಲಿಯ ಕಾವ್ಯಾಂಶವಿಲ್ಲ. ಪದ್ಮಣಾಂಕನ ವರ್ಣನಾ ರೀತಿಯಲ್ಲಿ ಸ್ಪಷ್ಟೋಕ್ತಿ ಅಥವಾ ವಾಚ್ಯಾಂಶ ಹೆಚ್ಚು. ಲಕ್ಷ್ಮೀಶನ ಪದಗಳಿಗೆ ವ್ಯಂಜನಾ ಸಾಮರ್ಥ್ಯವಿದೆ; ಸೂಚಕತೆ ಇದೆ. 'ಕುಕಿಲಿರಿಯೆ ಕೋಗಿಲೆ' ಎಂಬುದನ್ನು ಲಕ್ಷ್ಮೀಶನ 'ಮರಿಗೋಗಿಲೆಗಳ ಬಾಯ್ಗಳ ಬಲಿದ ಬಂಧನದ ಸೆರೆಗಳಂ ಬಿಡಿಸುತ್ತ' ಎಂಬುದು ಸೂಚಿಸುತ್ತದೆ.

ಬಭ್ರುಸದ್ಭ್ರುಷ್ಟ ಚಿತ್ತಭ್ರಾಂತಿ ಕೃಲ್ಲುಳ
ತ್ರಭ್ರಾಜಿತೋದ್ಧೃತ್ಯಕುಬ್ಭ್ರಮಿತ ಘೃಣಿಚಯಾ
ದಭ್ರಸ್ಫುಲಿಂಗವಮಿ ವಿಭ್ರಮವಿಭ್ರುತ್ಖಡ್ಗ ಶುಭ್ರ ದಕ್ಷಕರಾಕ್ಷತಾ ||

—'ಪ.ರಾ.ಪು.', ಸಂ. ೧, ಪ. ೭

ಅಥವಾ

ಅಗ್ರಹ ಪ್ರಗ್ರಹೋರುಗ್ರಂಥಿದಗ್ರ ಹಗ
ದಾಗ್ರಜಾದ್ಯಗ್ರೇಸ ರಾಗ್ರಾವ್ಯುವಾಗ್ರಮಾ
ವಿಗ್ರತ್ವದೋಗ್ರ ಮಾಯಾಗ್ರಹಾವಗ್ರಹ ವ್ಯಗ್ರತಾ ನಿಗ್ರಹಕರ ||
—'ಪ.ರಾ ಪು.', ಸಂ. ೮, ಪ. ೧

ಇಂಥ ಪದ್ಮಣಾಂಕ ಕವಿಯ ಶ್ರುತಿಕಟು ಪದ್ಯರಚನೆ ಲಕ್ಷ್ಮೀಶನಲ್ಲಿ ಎಲ್ಲಿಯೂ ಇಲ್ಲ. ಶಾಬ್ದಿಕ ಗುರು ಪದ್ಮಣಾಂಕನು ಬಳಸುವ ಸಂಸ್ಕೃತ ಪದಗಳು ಪಂಡಿತರನ್ನೂ ಬೆರಗುಗೊಳಿಸುತ್ತವೆ. ಇಂಥ ಪಾಂಡಿತ್ಯದ ರೀತಿ ಲಕ್ಷ್ಮೀಶನದಲ್ಲ. ಲಕ್ಷ್ಮೀಶನದು ಶ್ರುತಿಸಹ್ಯ ಸುಮಧುರ ಶೈಲಿ ; ಚಮತ್ಕೃತಿಯಿಂದ ಪಂಡಿತರನ್ನು ಮೆಚ್ಚಿಸುವ ಶೈಲಿ.

ಗುಬ್ಬಿಯ ಮಲ್ಲಣಾರ್ಯನು ಅಮೃತವತಿಯ ಪುತ್ರೇಚ್ಛೆಯನ್ನು 'ಭಾವಚಿಂತಾ ರತ್ನ'ದಲ್ಲಿ ಈ ರೀತಿಯಾಗಿ ವ್ಯಕ್ತಪಡಿಸಿದ್ದಾನೆ—

ಚೆಲ್ಲೆಗಂಗಳ ಮಿನುಗುವರಳೆಲೆಯ ಮಾಂಗಾಯ್ಗ
ಳುಲ್ಲಾಸದಿಂ ಮಿಱುಗುವೆಳನಗೆಯ ಮೊಳೆವಲ್ಲ
ಗಲ್ಲದೆಡೆಯೊಳಗೊಸರ್ವ ಲಾಲಾ ಜಲಾಮೃತದೊಳಚ್ಚೆಂಬ ಸುತನ ತೊದಲ ||
ಸೊಲ್ಲನಾಲಿಸಿ ನೋಡಿ ತೆಗೆದು ಮೂರ್ಧ್ನಿಘ್ರಾಣ
ದಲ್ಲಿ ತಟ್ಟಿಕ್ಕೈಸಿ ಬಾಯೊಳ್ ಬಾಯನಿಟಲ್ಕ
ಅಲ್ಲಿ ಮುಂಡಾಡುವೆಂ ಪಾಡುವೆಂ ಮುದ್ದುಗಳ ಬೇಡುವೆನೆನುತ್ತೆ ನಲಿದಳ್ ||

ಈ ಪದ್ಯದಲ್ಲಿ ಬಾಲಕನ ಬಾಹ್ಯಾಂಗ ಸೌಂದರ್ಯವನ್ನು ಅಪೇಕ್ಷಿಸಿ ನೇತ್ರಾನಂದಕ್ಕಾಗಿ, ಶ್ರವಣಾನಂದಕ್ಕಾಗಿ, ಹಾತೊರೆಯುವ ಅಮೃತವತಿಯನ್ನು ನಾವು ಕಾಣುತ್ತೇವೆ. 'ಮೂರ್ಧ್ನಿಘ್ರಾಣದಲ್ಲಿ ತಟ್ಟಿಕ್ಕೈಸಿ' ಎಂಬ ಪದಗಳ ಹೊಂದಿಕೆ ಅಷ್ಟು ಸರಿ ಇಲ್ಲ.

ಕಂದನಾಡುವ ಬಾಲಲೀಲೆಯಂ ನೋಡಿ, ತೊದ
ಲೊಂದಿದಿನಿವಾತನುಱಿಕೇಳ್ದು, ಮುದ್ದಿನ ಮುದ್ದೆ
ಯಂದದಂಗವನೆತ್ತಿಕೊಂಡು, ನಳಿತೋಳ್ಗಳಿಂದಪ್ಪಿ, ಕೆಂಗುರುಳ್ಗಳೊಲೆವ ||
ಮುಂದಲೆಯ ಕಂಪನಾಘ್ರಾಣಿಸಿ, ತೊರೆದ ಜೊಲ್ಲ
ಚೆಂದುಟಿಯ ಬಾಯ್ದೆಱೆಯನೈದೆ ಚುಂಬಿಸಿ, ಸೊಗಸು
ಗುಂದದಾಯೆಂದು ಪಂಚೇಂದ್ರಿಯ ಪ್ರೀತಿಯಂ ಪಡೆವರಿನ್ನಾವ ಕೃತರೋ ||
—'ಜೈಮಿನಿ ಭಾರತ', ಸಂ. (೧೮–೨೦) ಅಥವಾ (೧೮–೨೧)

ತೇಲ್ದೋಸರಿಸಿ ಮೇಲುದಂ ಸೆಳೆವ, ಕಮಲವಂ
ಪೋಲ್ದ ಕಣ್ಗೊನೆಯಿಂದ ತಾಯಮೊಗಮಂ ನೋಳ್ಪ
ಕಾಲ್ದುದಿಗಳಂ ಬಿದಿರಿ ತಡವರಿಸಿ ಕೈಯಿಡುವ ಬಾಲಂಗೆ ಮೋಹದಿಂದ ||
ಜೋಲ್ದೊಲೆವ ಹಾರಮಂ ಸರಿದು ಮುಯ್ಪಿಗೆ ಸಾರ್ಚಿ
ಪಾಲ್ದೊರೆದ ಮೊಲೆಯೂಡಿ, ಕೂಡೆ ತೊಟ್ಟಿಲೊಳಿಟ್ಟು
ಸಾಲ್ದ ಸೈಪಿಂದ ಜೋಗುಳವಾಡಿ ತೂಗುವಳದೇಂ ಸುಕೃತಿಯೊ? ಧರೆಯೊಳು ||
—'ಜೈಮಿನಿ ಭಾರತ', ಸಂ. ೧೮, ಪು. ೨೧

ಎಂಬ ಲಕ್ಷ್ಮೀಶನ ಜಾನಕಿಯ ಪುತ್ರೇಚ್ಛೆಯನ್ನು ಚಿತ್ರಿಸುವ ರೀತಿಯನ್ನೂ, ಅಮೃತವತಿಯ ಪುತ್ರೇಚ್ಛೆಯನ್ನೂ ಚಿತ್ರಿಸುವ ಗುಬ್ಬಿಯ ಮಲ್ಲಣಾರ್ಯನ ರೀತಿಯನ್ನೂ

ಹೋಲಿಸಿ ನೋಡಬಹುದು. ಎರಡರಲ್ಲಿ ಸಾಮ್ಯವಿದೆ. ಎರಡೂ ಬಾಲಕನಿಂದ ಪಂಚೇಂದ್ರಿಯುಗಳಿಗಾಗುವ ಆನಂದವನ್ನು ವರ್ಣಿಸುತ್ತವೆ. ಆದರೆ ಗುಬ್ಬಿಯ ಮಲ್ಲಣಾರ್ಯ ಪಂಚೇಂದ್ರಿಯ ಪ್ರೀತಿಯ ವಿಷಯವನ್ನಾಡುವುದಿಲ್ಲ ; ಲಕ್ಷ್ಮೀಶನು 'ಆಯೆಂದು ಪಂಚೇಂದ್ರಿಯ ಪ್ರೀತಿಯಂ ಪಡೆವರಿನ್ನಾವ ಕೃತರೊ?' ಎಂದಿದ್ದಾನೆ. ಈ ಒಂದು ಸಾಲಿನಲ್ಲಿ ಮೇಲಿನ ೫ ಸಾಲುಗಳ ಸಾಮರ್ಥ್ಯವು ತುಂಬಿದೆ. 'ಆಯೆಂದು' ಎಂಬುದು ಮನಸ್ಸಿನ ತೃಪ್ತಿಯನ್ನು, ಹೃದಯದ ಆನಂದವನ್ನು ವ್ಯಕ್ತಪಡಿಸುತ್ತದೆ. ಈ ಹೃದಯದಾನಂದವನ್ನು ಪಡೆಯುವುದು ಪುಣ್ಯದಿಂದ, ಸುಕೃತದಿಂದ ಮಾತ್ರ ಸಾಧ್ಯ ಎಂದು ಜಾನಕಿಯು ಹೇಳುತ್ತಾಳೆ. ಈ ಸುಕೃತದ ಮಾತು ಅಮೃತವತಿಗೆ ಹೊಳೆದಿಲ್ಲ.

ಕಾವ್ಯಗುಣದೃಷ್ಟಿಯಿಂದ ಗುಬ್ಬಿಯ ಮಲ್ಲಣಾರ್ಯನ 'ಭಾವಚಿಂತಾರತ್ನ' ಮತ್ತು ಲಕ್ಷ್ಮೀಶನ 'ಜೈಮಿನಿ ಭಾರತ' ಇವೆರಡರಲ್ಲಿಯೂ ಭಕ್ತಿರಸವೇ ಪ್ರಧಾನವಾದ ರಸ. ಇಬ್ಬರಿಗೂ ಕಥನಕಾವ್ಯದ ಹದವಿದೆ. 'ಕೃತಿಯೊಳುತ್ಪ್ರೇಕ್ಷೆಯಿಲ್ಲದುದೊಂದು ಪದವಿಲ್ಲ' ಎಂದು ಗುಬ್ಬಿಯ ಮಲ್ಲಣಾರ್ಯನು ಹೇಳಿದ್ದಾನೆ. ಲಕ್ಷ್ಮೀಶನ ಕಾವ್ಯದಲ್ಲಿ ಉತ್ಪ್ರೇಕ್ಷಾ ಅಲಂಕಾರಕ್ಕೆ ಪ್ರಾಧಾನ್ಯವಿದೆ. 'ಭಾವಚಿಂತಾರತ್ನ'ದಲ್ಲಿ ಕೆಲವೆಡೆಗೆ ಬರುವ ಅತಿ ಪ್ರೌಢತೆ ಜೈಮಿನಿ ಭಾರತದಲ್ಲಿ ಕಾಣುವುದಿಲ್ಲ. ಜೈಮಿನಿ ಭಾರತದ ವಾರ್ಧಕಗಳಲ್ಲಿರುವ ಲಲಿತ ಶೈಲಿ ಪದ್ಮಣಾಂಕ ಮತ್ತು ಗುಬ್ಬಿ ಮಲ್ಲಣಾರ್ಯರ ವಾರ್ಧಕಗಳಲ್ಲಿ ಅಪೇಕ್ಷಿಸುವಂತಿಲ್ಲ. ಇವು ಎರಡೂ ಸ್ವಲ್ಪ ಪ್ರೌಢಕೃತಿಗಳೇ.

ಮಂಗರಸನ ಸಮ್ಯಕ್ತ್ವ ಕೌಮುದಿಯು ಶೃಂಗಾರಿಕ ಕಾವ್ಯ. ಅಲ್ಲಲ್ಲಿ ದಾತೃವಿನ ಗುಣ, ನವವಿಧ ಪುಣ್ಯ, ಚತುರ್ವಿಧದಾನ ಗುರು ಮೊದಲಾದ ತಾತ್ವಿಕ ವಿಷಯಗಳು ಬರುತ್ತವೆ. ಇದು ಜೈಮಿನಿ ಭಾರತದಂತೆ ಅನೇಕ ಕಥೆಗಳಿಂದ ಕೂಡಿದ ಕಾವ್ಯವಾಗಿದೆ. ಆದರೆ ಎರಡೂ ಕಾವ್ಯಗಳ ದೃಷ್ಟಿ ಬೇರೆಬೇರೆ. ಸಮ್ಯಕ್ತ್ವ-ಕೌಮುದಿ ಶೃಂಗಾರಿಕ ಕಾವ್ಯವಾದರೆ, ಜೈಮಿನಿ ಭಾರತವು ಭಕ್ತಿರಸದ ಕಾವ್ಯ. ಜೈಮಿನಿ ಭಾರತದ ಕಥಾ ನಿರೂಪಣೆಯಲ್ಲಿರುವ ಆಕರ್ಷಕತೆ ಸಮ್ಯಕ್ತ್ವ ಕೌಮುದಿಯ ಕಥಾ ನಿರೂಪಣೆಯಲ್ಲಿಇಲ್ಲ. ಎರಡೂ ಕಾವ್ಯಗಳಲ್ಲಿರುವ ಕತೆಗಳು ಮನೋಹರವಾಗಿವೆ. ಹೀಗೆಯೆ ಇನ್ನುಳಿದವಾರ್ಧಕ ಷಟ್ಪದಿ ಕಾವ್ಯಗಳೊಡನೆ ಜೈಮಿನಿ ಭಾರತವನ್ನು ಹೋಲಿಸಿನೋಡಬಹುದು.

ವಾರ್ಧಕ ಷಟ್ಪದಿಯ ಕಟ್ಟನಲ್ಲಿಯೇ[1] ಲಕ್ಷ್ಮೀಶನ ಜೈಮಿನಿ ಭಾರತದ ಸ್ಥಾನವನ್ನು ವಿಚಾರಿಸಿದರೆ, ಇದೊಂದು **ಮಹಾಗಾತ್ರದ ಲೋಕಪ್ರಿಯ** ಕೃತಿಯಾಗಿದೆ.

---

[1] ೧ ರಾಘವಾಂಕ_ಹರಿಶ್ಚಂದ್ರಕಾವ್ಯ, ಸಿದ್ಧರಾಮ ಪುರಾಣ ೨ ಪದ್ಮಣಾಂಕ–ಪದ್ಮರಾಜ ಪುರಾಣ, ೩ ಬೊಮ್ಮರಸ–ಸೌಂದರ ಪುರಾಣ, ೪ ಚತುರ್ಮುಖ ಬೊಮ್ಮರಸ_ರೇವಣಸಿದ್ಧೇಶ್ವರ ಪುರಾಣ, ೫ ಸಿಂಗಿರಾಜ_ಮಲಬಸವಚಾರಿತ್ರ, ೬ ಮಂಗರಸ–ಸಮ್ಯಕ್ತ್ವ ಕೌಮುದಿ, ೭ ಗುಬ್ಬಿಯ ಮಲ್ಲಣಾರ್ಯ–ಭಾವಚಿಂತಾರತ್ನ, ವೀರಶೈವಾಮೃತ ಪುರಾಣ, ೮ ಲಕ್ಕಣ ದಂಡೇಶ–ಶಿವತತ್ತ್ವ ಚಿಂತಾಮಣಿ, ೯ ಲಕ್ಷ್ಮೀಶ–ಜೈಮಿನಿ ಭಾರತ, ೧೦ ವಿರೂಪಾಕ್ಷ ಪಂಡಿತ_ಚೆನ್ನಬಸವ ಪುರಾಣ, ೧೧ ಗೋಪಕವಿ_ನಂದೀಮಹಾತ್ಮ್ಯ, ಚಿತ್ರಭಾರತ, ೧೨ ಬಬ್ಬೂರರಂಗ_ಪರಶುರಾಮರಾಮಾಯಣ, ೧೩ ಮುದ್ದಣ--ರಾಮಪಟ್ಟಾಭಿಷೇಕ.

'ವೀರಶೈವಾಮೃತಪುರಾಣ', 'ಚೆನ್ನಬಸವ ಪುರಾಣ', ಮತ್ತು ಶಿವತತ್ತ್ವಚಿಂತಾಮಣಿ'ಯ ವಿಸ್ತಾರ ಜೈಮಿನಿ ಭಾರತಕ್ಕಿಲ್ಲ. ಆದರೆ ಇನ್ನುಳಿದೆಲ್ಲ ವಾರ್ಧಕ ಕಾವ್ಯಗಳಿಗಿಂತ ಜೈಮಿನಿ ಭಾರತವು ವಿಸ್ತೃತವಾಗಿದೆ.

**ಜೈಮಿನಿ ಭಾರತವು ಸರ್ವಮಾನ್ಯ ಕಾವ್ಯವಾಗಿದೆ** ಎಂಬುದಕ್ಕೆ ಜೈಮಿನಿ ಭಾರತದ ಹಸ್ತಪ್ರತಿಗಳೇ ನಿದರ್ಶನ. ಜಾಯಗೊಂಡ ದೇಸಾಯಿ ಮೊದಲಾದ ಅನೇಕ ವೀರಶೈವರು ಪ್ರತಿಮಾಡಿಸಿದ ಹಸ್ತಪ್ರತಿಗಳು ನೋಡಲು ದೊರೆಯುತ್ತವೆ. ಇದರಂತೆ ಅನೇಕ ಬ್ರಾಹ್ಮಣರು ಪ್ರತಿಮಾಡಿಸಿದ್ದೂ ಉಂಟು. ಶರೀಫ ಸಾಹೇಬರು ಬರೆದುಕೊಂಡ ಜೈಮಿನಿ ಭಾರತವೂ ನಮಗೆ ನೋಡಲು ದೊರೆಯಿತು. **ಆದುದರಿಂದ ಜೈಮಿನಿ ಭಾರತದ ಸ್ಥಾನವು ಭಾಗವತ ದರ್ಶನದ, ಸರ್ವಮಾನ್ಯ, ಲೋಕಪ್ರಿಯ, ಮಹಾಗಾತ್ರದ, ರಮ್ಯಕಥಾನಕಗಳ ಭಕ್ತಿರಸಪ್ರಧಾನ ವಾರ್ಧಕಕಾವ್ಯ ಎಂದು ನಿರ್ಣಯಿಸಬಹುದು**. ಈ ಎಲ್ಲ ಗುಣಗಳಿಂದ ಯುಕ್ತವಾದ ವಾರ್ಧಕಕಾವ್ಯ ಇನ್ನೊಂದಿಲ್ಲ.

ಈ ಸರ್ವಮಾನ್ಯ ಕಾವ್ಯವು ಪಾರಂಪರಿಕ ಮತ್ತು ಆಧುನಿಕ ಅರ್ಥದಲ್ಲಿ ಮಹಾಕಾವ್ಯವಾಗಿದೆಯೇ? ಎಂಬುದನ್ನು ಮುಂದಿನ ಪುಟಗಳಲ್ಲಿ ಚರ್ಚಿಸುತ್ತೇವೆ.

## ಜೈಮಿನಿ ಭಾರತವು ಮಹಾಕಾವ್ಯವೇ ?

'Poetry is the expression of the emotions at their highest pitch' [ಅತ್ಯುನ್ನತವಾದ ರಸಾನುಭವದ ಅಭಿವ್ಯಕ್ತಿಯನ್ನು ಭಾಷೆ ಎಂಬ ಮಾಧ್ಯಮದ ಮೂಲಕ ಕಾವ್ಯವು ಮೂಡಿಸುತ್ತದೆ.] ಎಂದು ಆಂಗ್ಲ ವಿಮರ್ಶಕರು ಅಭಿಪ್ರಾಯಪಡುತ್ತಾರೆ. ಕಾವ್ಯದಲ್ಲಿ ಭಾಷೆಗೆ, ಭಾವಗೀತದಲ್ಲಿ ಸಂಗೀತಕ್ಕೆ ಮತ್ತು ನಾಟಕದಲ್ಲಿ ಕ್ರಿಯೆಗೆ ಪ್ರಾಧಾನ್ಯವಿರುತ್ತದೆ. ಮೇಲಿನ ಈ ಪ್ರತಿಯೊಂದು ಸಾಹಿತ್ಯ ಪ್ರಕಾರದಲ್ಲಿ ಮೂರೂ ಅಂಶಗಳು ಇದ್ದೇ ಇರುತ್ತವೆ; ಆದರೆ ಒಂದರ ಪ್ರಾಧಾನ್ಯವಿರುತ್ತದೆ. ಕಾವ್ಯದಲ್ಲಿ ಭಾಷೆಗೆ ಪ್ರಾಧಾನ್ಯವಿರುವುದರಿಂದ ಅದರ ಮಹತಿಯನ್ನು ನಿರೀಕ್ಷಿಸೋಣ.

ಮಾನವನ ಮನಸ್ಸಿನ ಮೇಲೆ ಭಾಷೆಗಿರುವ ಶಕ್ತಿಯು ಚತುರ್ಮುಖವಾದದ್ದು ಎಂದು ಅಃಬರಕ್ರಾಂಬಿಯು ಅಭಿಪ್ರಾಯಪಡುತ್ತಾನೆ:[1] ೧) ವಾಕ್ಯಕ್ರಮದಲ್ಲಿ ಅರ್ಥದ ರಚನೆ, ೨) ಬಿಡಿಶಬ್ದಗಳ ಕಲ್ಪನಾವರ್ಮೌಲ್ಯ—ಇವು ಅರ್ಥಸಂಬಂಧಿಯಾಗಿದ್ದು, ೩) ಲಯದಲ್ಲಿ ನಾದದ ನಿರ್ಮಾಣ, ಮತ್ತು ೪) ಬಿಡಿ ಅಕ್ಷರಗಳ ಗುಣ–ಇವು ಶಬ್ದಸಂಬಂಧಿ ಎಂದು ಅವನು ಹೇಳುತ್ತಾನೆ.

ಕನ್ನಡ ಜೈಮಿನಿ ಭಾರತದಲ್ಲಿ ಬಿಡಿ ಅಕ್ಷರಗಳ ಗುಣವು ಭಾವದ ಅಭಿವ್ಯಕ್ತಿಯನ್ನು ಹೇಗೆ ಮಾಡುತ್ತದೆ. ಮತ್ತು ಅನುನಾಸಿಕ, ಅನುಸ್ವಾರ, ರ,ಸ,ಲ,ಳ ಎಂಬ ನಾದಯುಕ್ತ ಅಕ್ಷರಗಳ ನಾದ ಮತ್ತು ಲಯ ನಿರ್ಮಿತಿಯನ್ನು ಹೇಗೆ ಮಾಡುತ್ತವೆ ಎಂಬ

1 'ಸಾಹಿತ್ಯ ವಿಮರ್ಶೆಯ ತತ್ತ್ವಗಳು', ಅನು : ಸಿ.ಪಿ.ಕೆ., ಪು. ೨೦.

ವಿವರಣೆಯನ್ನು 'ಛಂದಸ್ಸು' ಎಂಬ ವಿಭಾಗದಲ್ಲಿ (ಪ್ರಕರಣ-೪) ನೋಡಬಹುದು.

ಕನ್ನಡ ಛಂದಃಶಾಸ್ತ್ರದಲ್ಲಿ ಅರ್ಥಯತಿಗೆ ಮಹತ್ತ್ವವಿರುವುದರಿಂದ ವಾಕ್ಯಕ್ರಮ ದಲ್ಲಿ ಅರ್ಥದ ರಚನೆ ಮಾಡುವಲ್ಲಿ ಕನ್ನಡ ಕವಿಗಳು ಜಾಗರೂಕರಾಗಿರುತ್ತಾರೆ. ಕವಿ ಲಕ್ಷ್ಮೀಶನು ಯತಿಸ್ಥಾನಗಳ ಪಲ್ಲಟದಿಂದ ವಾರ್ಧಕ ಷಟ್ಪದಿಯಲ್ಲಿ ವೈವಿಧ್ಯವನ್ನು ತೋರಿಸಿದ್ದಾನೆ. ಸಂ. ೨೮. ಪ. ೪೫ರಲ್ಲಿ 'ನಡೆ, ಪಚ್ಚೆವಿಡಿ, ಪೋಗು, ತಡೆ, ನಿಲ್ಲು, ಜಡಿ, ಬೊಬ್ಬೆಗುಡು ಎಂಬಲ್ಲಿಯ' ಅರ್ಥರಚನೆಯನ್ನು ಸಂ.೨೮.ಪ.೧೮: 'ಮೊಳೆಹಲ್ಲು, ಉಗುವಜೊಲ್ಲು, ದಟ್ಟಿತಡಿ, ತೊದಲನುಡಿ' ಎಂಬಲ್ಲಿಯ ಅರ್ಥರಚನೆಗೆ ಹೋಲಿಸಿದಾಗ ಮತ್ತು ಸಂ. ೧೯ ಪ. ೩೫ 'ಸುರನದಿಯ ತೆರೆತೆರೆಯ, ನಡುನಡುವೆ ಬಿದ್ದೆದ್ದು ಬರಲಾರ ದಿರ್ದೊಡಂ' ಎಂಬಲ್ಲಿಯ ಅರ್ಥರಚನೆಯೊಡನೆ ತೂಗಿನೋಡಿದಾಗ ಯತಿಸ್ಥಾನದ ವೈವಿಧ್ಯ, ಸೊಬಗು ಕಂಡುಬರುತ್ತದೆ. ಮೊದಲನೆಯ ಪದ್ಯದಲ್ಲಿ ಕ್ರಿಯೆಯ ರಭಸ ವನ್ನು ದ್ರುತಗತಿಯಿಂದ, ದ್ರುತಯತಿಗಳಿಂದ ತೋರಿಸಿದರೆ, ಎರಡನೆಯ ಪದ್ಯದಲ್ಲಿ ಮಗು ವಿನ ಅಂಗಾಂಗ ಸೌಂದರ್ಯ ವಿವರಣಾ ದೃಷ್ಟಿಯಿಂದ ಮಧ್ಯಮಗತಿ, ಮಧ್ಯಮಯತಿ ಗಳಿಂದ ತೋರಿಸಿದ್ದಾನೆ. ಮೂರನೆಯ ಪದ್ಯದಲ್ಲಿ ಗಾಳಿಯ ಆಲಸ್ಯ, ಜಡಭಾವ, ಬರ ಬೇಕೋ ? ಬರಬಾರದೋ? ಎಂಬ ವಿವೇಕದ ತಾಕಲಾಟವು ಮಂದಗತಿ, ಮಂದಯತಿ ಗಳಿಂದ ತೋರಿಸಲಾಗಿದೆ.

ಸಂ. ೧೩. ಪ. ೫೫ರಲ್ಲಿ 'ಫಲುಗುಣನೊಡನೆ ಹೋರಿ ಜಯಿಸಬೇಡವೆ ಹೋರಿ' ಎಂಬಲ್ಲಿ ಎರಡನೆಯ ಹೋರಿ ಎಂಬ ಬಿಡಿಶಬ್ದದ ಕಲ್ಪನಾ ವೈಶಾಲ್ಯವನ್ನು ನೋಡ ಬಹುದು. ಇಲ್ಲಿ 'ಹೋರಿ' ಎಂಬ ಶಬ್ದವು ಪುನರಾವೃತ್ತವಾದರೂ ಅರ್ಥದಿಂದ ಅದು ಭಿನ್ನವಾಗಿದೆ. 'ಹೋರಿ' ಎಂಬ ಶಬ್ದದೊಡನೆ ಮದೋನ್ಮತ್ತವಾದ, ಶೂರವಾದ ಹೋರಿಯ ಕಾಲ್ಪನಿಕ ಚಿತ್ರವು ನಮ್ಮ ಕಣ್ಣ ಮುಂದೆ ಬಂದು ನಿಲ್ಲುತ್ತದೆ. ಹೀಗೆ ಬಿಡಿ ಶಬ್ದದಿಂದ ಕಲ್ಪನಾಚಿತ್ರವನ್ನು ನಿರ್ಮಿಸಿಕೊಡುವ ಶಕ್ತಿ ಕವಿಯಲ್ಲಿ ಬೇಕು.

ಕಾವ್ಯದಲ್ಲಿ ಕಾವ್ಯಸಂಕೇತ, ಅಲಂಕಾರ ಇವುಗಳಿಂದ ಕೂಡಿದ ಕೃತಕ ಭಾಷೆಗಿಂತ ಕಲ್ಪನಾರಮ್ಯತೆಗೆ ಜೀವಂತ ಭಾಷೆಬೇಕು. ಕಾವ್ಯದಲ್ಲಿ ಕಲ್ಪನೆಗೆ ಪ್ರಾಧಾನ್ಯ ಎಂಬ ವಿಚಾರವನ್ನು : "Good sense is the body of poetic genius, *Fancy* (ಚಮತ್ಕೃತಿ) its drapery, Motion its life and imagination (ಕಲ್ಪನೆ) the soul that is everywhere and in each and forms all into one graceful and intelligent whole"[1] [ಉತ್ತಮ ಅರ್ಥವು ಕಾವ್ಯ ಪ್ರತಿಭೆಯ **ದೇಹ**-ಕಾವ್ಯಕ್ಕಾಗಿ ಉಪಯೋಗಿಸುವ ಚಮತ್ಕೃತಿಯುಕ್ತಿ ಕಾವ್ಯಾಂಗಕ್ಕೆ **ವಸ್ತ್ರ ವಿನ್ಯಾಸ**ದಂತಿದ್ದು ಕಾವ್ಯದಲ್ಲಿ ಜೀವಕಳೆಯನ್ನು ತುಂಬುತ್ತದೆ. ಕಾವ್ಯವು ಎಲ್ಲ ದೃಷ್ಟಿ ಯಿಂದ ಪರಿಪೂರ್ಣವಾಗಿ ಸುಂದರವಾದ ಕೃತಿಯಾಗಬೇಕಾದರೆ ಕವಿಯಲ್ಲಿ **ಕಲ್ಪನೆ** ಬೇಕು. ಕಲ್ಪಕತೆಯೇ ಕಾವ್ಯಕ್ಕೆ **ಆತ್ಮ**] ಎಂಬ ವಿಚಾರವನ್ನು ಡೆವಿಡ್ ಡೈಚೆಸ್ಸನು

1 *Critical Approaches to Literature*—David Daiches, p. 105

ವ್ಯಕ್ತಪಡಿಸಿದ್ದಾನೆ. ಕವಿ ಲಕ್ಷ್ಮೀಶನು ವರ್ಣನಾವಸರದಲ್ಲಿ ಕಾವ್ಯ ಸಾಂಕೇತಿಕ ಅಲಂಕಾರಿಕ ಭಾಷೆಯನ್ನು ಹೆಚ್ಚಾಗಿ ಬಳಸುತ್ತಾನೆ. ಆದರೆ ಕಲ್ಪನಾರಮ್ಯತೆಗೇನೂ ಅವನಲ್ಲಿ ಕೊರತೆಯಿಲ್ಲ. ಕಾರಣೋತ್ಪ್ರೇಕ್ಷೆಗಳನ್ನು ಕಲ್ಪಿಸುವಲ್ಲಿ, ಅಷ್ಟಾದಶವರ್ಣನೆಗಳನ್ನು ಸನ್ನಿವೇಶಕ್ಕೆ ತಕ್ಕಂತೆ ಹೊಂದಿಸುವಲ್ಲಿ ಮತ್ತು ಕಥಾನಿರೂಪಣೆಯಲ್ಲಿ ಕಲ್ಪನಾರಮ್ಯತೆಯನ್ನು ಕವಿ ಲಕ್ಷ್ಮೀಶನು ತೋರಿಸುತ್ತಾನೆ.

ಒಂದು ಕಾವ್ಯವು ಮಹೋನ್ನತ ಕಾವ್ಯವಾಗಬೇಕಾದರೆ, ಕೇವಲ ಕಲ್ಪನಾರಮ್ಯತೆ ಒಂದೇ ಇದ್ದರೆ ಸಾಕೇ? ಎಂಬುದು ಒಂದು ಮಹತ್ತ್ವದ ಪ್ರಶ್ನೆಯಾಗಿದೆ. ವಿ. ಕೃ. ಗೋಕಾಕ ಅವರು 'ಮಹೋನ್ನತಿವೆತ್ತ ಕೃತಿಗಳಲ್ಲಿ—೧. ಭಾಷಾ ಸಂಪತ್ತಿ-ಶೈಲಿ, ೨. ತಾಳ-ಲಯ-ಛಂದಸ್ಸು, ೩. ಕಾವ್ಯವಸ್ತು, ೪. ರೀತಿ ಇಲ್ಲವೆ ಕೃತಿಶರೀರ, ೫. ಭಾವನಾಸಂಪತ್ತಿ, ೬. ಕಲ್ಪನಾಶಕ್ತಿ, ೭. ಅರ್ಥಗೌರವ, ೮. ಕವಿಯ ವ್ಯಕ್ತಿತ್ವ ಎಂಬ ಅಷ್ಟಾಂಗಗಳಿರಬೇಕು"[1] ಎನ್ನುತ್ತಾರೆ. ಮತ್ತು ಮಹೋನ್ನತಿಯನ್ನು ಸ್ಥಾಯಿಯಾಗಿ ನಿಲ್ಲಿಸಿದ ಉದ್‌ಗ್ರಂಥವೇ ಮಹಾಕಾವ್ಯ ಎಂದು ಅಭಿಪ್ರಾಯಪಟ್ಟಿದ್ದಾರೆ.[2] ಈ ಲಕ್ಷಣಗಳನ್ನು ಗಮನಿಸಿ ಕ. ಜೈ. ಭಾರತವನ್ನು ಓದಿದಾಗ-ಅದರಲ್ಲಿ ಕವಿಯ ಭಕ್ತಶೀಲ, ಭಕ್ತಶೀಲಕ್ಕೆ ತಕ್ಕಂತೆ ಭಾವನೆ, ಭಾವನೆಯಂತೆ ಭಾಷೆ, ಕಲ್ಪಕತೆ, ಅರ್ಥಗೌರವ ಇರುವುದನ್ನು ಅರಿಯುತ್ತೇವೆ. ಆದುದರಿಂದ ಇದೂ ಒಂದು ಮಹೋನ್ನತ ಕಾವ್ಯ ಎಂದು ಎನಿಸದೇ ಇರದು.

ಸಾಹಿತ್ಯದರ್ಪಣ VI—ಪು. 315–324 ರಲ್ಲಿ ಕೊಟ್ಟ ಮಹಾಕಾವ್ಯದ ಲಕ್ಷಣಗಳನ್ನು ಗಮನಿಸಿ ಕ.ಜೈ. ಭಾರತವನ್ನು ಓದಿದಾಗಲೂ—ಅಷ್ಟಾದಶವರ್ಣನೆ,ಅಲಂಕಾರ ವೈಭವ, ಚತುರ್ವಿಧ ಪುರುಷಾರ್ಥಪ್ರಾಪ್ತಿ ಮೊದಲಾದ ಪ್ರಮುಖ ಲಕ್ಷಣಗಳು ಕಂಡು ಬರುತ್ತವೆ.

ಆಂಗ್ಲ ವಿಮರ್ಶಕರು ಮಹಾಕಾವ್ಯದ ಬೆಳವಣಿಗೆ ನಾಲ್ಕು ಹಂತಗಳಲ್ಲಿ ಆಯಿತು ಎಂದು ಹೇಳುತ್ತಾರೆ. ೧. ಮಹಾಕಾವ್ಯವು ಕಥನರೀತಿಯ ಮೂಲಕ ನಾಟಕದಿಂದ ಭಿನ್ನವಾಯಿತು. ೨. ಮಹಾಕಾವ್ಯವು ರಾಜಮನೆತನಗಳ, ಮುಂದಾಳುಗಳ, ಶೂರರ ಚರಿತ್ರವನ್ನು ಕಥನರೀತಿಯಲ್ಲಿ ಹೇಳುವ ಕಾವ್ಯಪ್ರಕಾರ. ೩. ರಾಷ್ಟ್ರಪ್ರೀತಿ, ಭಕ್ತಿ, ಆವೇಶವನ್ನು ಬೆಳೆಸುವಂಥ ಒಂದು ಕಾವ್ಯಪ್ರಕಾರ. ೪. ಉತ್ತಮ ಕವಿಯಿಂದ ಹೇಳಲ್ಪಟ್ಟ ಅತ್ಯುತ್ತಮ ಕಥೆಗಳ ಸಂಗ್ರಹ. ಹೀಗೆ ಮಹಾಕಾವ್ಯ ಎಂಬ ಸಾಹಿತ್ಯ ಪ್ರಕಾರವು ಆಂಗ್ಲ ಸಾಹಿತ್ಯದಲ್ಲಿ ಬದಲಾವಣೆಯನ್ನು ಪಡೆಯುತ್ತಬಂದಿದೆ. ಅವರು ಮಹಾಕಾವ್ಯದ ವ್ಯಾಖ್ಯೆಯನ್ನು "A narrative poem, organic in structure dealing with great actions and great characters in a style commensurate with the lordliness of its theme which tends to realize

---

1 'ಕವಿ, ಕಾವ್ಯ ಮಹೋನ್ನತಿ', ಪು. ೪೮.

2 ಅದೇ. ಪು. ೫೬.

these characters and actions, and to sustain and embellish its subject by means of episode and amplification. The epic depicts a victorian hero, who represents a country or a cause which triumphs with his triumph, it presents a great or important action and the characters are great or important; a certain elevation of tone pervades the whole poem ; the action in comparison with the drama is slow, and episodical and achieves no more than a diffuse unity; the larger the scope of human interest and experience, the greater the success of the poem. Epic carries the imagination into the past into the land of dreams and ideals."[1]
[ಕಥನಕಾವ್ಯದಲ್ಲಿ ಉನ್ನತವಾದ ಕಥಾನಕಕ್ಕೆ ಸರಿಹೊಂದುವ ಉನ್ನತ ಪಾತ್ರ ಹಾಗೂ ಉನ್ನತ ಕ್ರಿಯೆಗಳಿರಬೇಕು. ಈ ಉನ್ನತ ಪಾತ್ರ ಹಾಗೂ ಕ್ರಿಯೆಗಳು (ಪ್ರೇಕ್ಷಕ ಮತ್ತು ಓದುಗರಿಗೆ) ಮನಮುಟ್ಟುವಂತಾಗುವದಕ್ಕಾಗಿ ಕವಿಯು ಉಪಕಥಾನಕಗಳಿಂದಾಗಲಿ, ವಸ್ತುವಿಸ್ತಾರದಿಂದಾಗಲಿ ಕಥಾನಕವನ್ನು ಅಲಂಕರಿಸುತ್ತಾನೆ. ಮಹಾಕಾವ್ಯದ ನಾಯಕನು ಶಕ್ತಿಸಾಮರ್ಥ್ಯವುಳ್ಳವನಾಗಿರಬೇಕು. ನಾಯಕನ ವಿಜಯೋತ್ಸವ ಹಾಗೂ ದೇಶದ ವಿಜಯೋತ್ಸವವು ಪರಸ್ಪರಾವಲಂಬಿಗಳು. ಉಚ್ಚಕ್ರಿಯೆ ಹಾಗು ಉಚ್ಚ ಪಾತ್ರವಿದ್ದಂತೆ ಕಾವ್ಯವೂ ಉನ್ನತ ಮಟ್ಟವನ್ನು ಮುಟ್ಟುತ್ತದೆ. ಕಾವ್ಯದಲ್ಲಿ ಕ್ರಿಯೆಯು ನಾಟಕದ ಕ್ರಿಯೆಗಿಂತ ನಿಧಾನವಾಗಿರುತ್ತದೆ. ಕಾವ್ಯದ ಕ್ರಿಯೆ ಉಪಕಥೆಗಳ ಮೂಲಕ ಸ್ವಲ್ಪ ಶಿಥಿಲ ಐಕ್ಯವನ್ನು ಸಾಧಿಸುತ್ತದೆ. ಮಾನವನ ಆಸಕ್ತಿ ಹಾಗೂ ಅನುಭವದ ಆಳವು ಹೆಚ್ಚಿದಂತೆ ಕಾವ್ಯವು ಸಫಲತೆಯತ್ತ ಸಾಗುತ್ತದೆ. ಮಹಾಕಾವ್ಯವು ಕಲ್ಪಕತೆಯನ್ನು ಕನಸು ಮತ್ತು ಧ್ಯೇಯಗಳ ಲೋಕಕ್ಕೆ ಕರೆದೊಯ್ಯುತ್ತದೆ.] ಎಂದು ಮಾಡಿದ್ದಾರೆ. Nettle Ship ಎಂಬುವನು "Lectures and Essays on Subjects connected with Latin Literature and Scholarship" ಎಂಬ ಲೇಖನದಲ್ಲಿ— (ಪು. ೯೭–೧೪೨) ಮಹಾಕಾವ್ಯದ ಹತ್ತು ಲಕ್ಷಣಗಳನ್ನು ಕೊಟ್ಟಿದ್ದಾನೆ.[2] ಅವುಗಳಲ್ಲಿಯ ೧. ಮಹಾಕಾವ್ಯದ ವಿಸ್ತಾರ, ೨. ವಿಷಯ ವಿವೇಚನೆ ಮಾಡುವಾಗ ಸುಲಭ ಭಾಷೆಗಿಂತ ಸೂಕ್ಷ್ಮಭಾಷಾ ಪ್ರಯೋಗ, ೩. ಪರಿಣಾಮಕ್ಕಾಗಿ ವಸ್ತುಸ್ಥಿತಿಯ ಮೇಲೆ ಆರೋಪಮಾಡಿ ಅಲಂಕಾರಗಳನ್ನು ನಿರ್ಮಿಸುವ ರೀತಿ ಮೊದಲಾದ ಕೆಲವು ಲಕ್ಷಣಗಳು ಕ. ಜೈ. ಭಾರತದಲ್ಲಿಯೂ ಕಾಣಬಹುದು.

ಇವುಗಳ ಮೇಲಿಂದ ಕವಿ ಲಕ್ಷ್ಮೀಶನು ಕಾವ್ಯಸಂಪ್ರದಾಯವನ್ನು ಅವಲಂಬಿಸಿ ಕಾವ್ಯವನ್ನು ರಚಿಸಿದ್ದಾನೆ ಎಂದು ಹೇಳಬೇಕಾಗುತ್ತದೆ. ಮಹಾಕವಿಯು ಪ್ರಚಾರ

---

[1] *Critical Approaches to Literature*, David Daiches.

[2] *Methods and Materials of Literary Criticism*, Gayley and Kurtz, p. 424.

ದಲ್ಲಿದ್ದ ಕಥಾನಕಗಳನ್ನೇ ತನ್ನ ಮಹಾಕಾವ್ಯಕ್ಕೆ ಉಪಯೋಗಿಸುತ್ತಾನೆ. ಕಾವ್ಯ ಸಂಪ್ರದಾಯವನ್ನು ಅವಲಂಬಿಸಿಯೇ ಮಹಾಕಾವ್ಯವನ್ನು ರಚಿಸುತ್ತಾನೆ. "The poet's powers are devoted not to making a story, but to making an epic out of a famous story." [ಕವಿಗಳ ಶಕ್ತಿಯು ಕಥಾನಕಗಳನ್ನು ನಿರ್ಮಿಸುವಲ್ಲಿ ವ್ಯಯಿಸಲಾಗುವುದಿಲ್ಲ; ಆ ಪ್ರಖ್ಯಾತ ಕಥಾನಕಗಳ ಸಹಾಯದಿಂದ ಕಾವ್ಯವನ್ನು ಮಹಾಕಾವ್ಯದ ಎತ್ತರಕ್ಕೆ ಏರಿಸುವಲ್ಲಿ ವ್ಯಯಿಸಲಾಗುತ್ತದೆ][1] ಎಂದು ಶಿಪ್ಲೀ ಎಂಬ ಆಂಗ್ಲಕೋಶಕಾರರು ಅಭಿಪ್ರಾಯಪಟ್ಟಿದ್ದಾರೆ.

ಇಲ್ಲಿ ಮಹಾಕಾವ್ಯದ ವಿಷಯಕ್ಕಿಂತ ಮಹಾಕಾವ್ಯದಲ್ಲಿಯ ಕಥನರೀತಿಗೆ ಪ್ರಾಧಾನ್ಯವನ್ನು ಕೊಡಲಾಗಿದೆ. ಮಹಾಕಾವ್ಯವೆಂದರೆ ಕಥನರೀತಿಯಲ್ಲಿದ್ದ ಕಾವ್ಯ ಎಂಬ ಅಭಿಪ್ರಾಯದ ಬಗ್ಗೆ ಎಲ್ಲ ಆಂಗ್ಲ ವಿಮರ್ಶಕರಲ್ಲಿ ಒಮ್ಮತವಿದೆ. ಕ. ಜೈ. ಭಾರತ ದಲ್ಲಿ ಕವಿ ಲಕ್ಷ್ಮೀಶನ ಕತೆಗಳ ಕಥನಕೌಶಲವೇ ಪ್ರಮುಖ ಗುಣವಾಗಿದೆ ಎಂಬುದನ್ನು ನೋಡಬಹುದು.

ವಸ್ತುಕಕಾವ್ಯಕ್ಕೆ ಅಂದರೆ ಚಂಪೂಕಾವ್ಯಕ್ಕೆ ಮಹಾಕಾವ್ಯದ ಲಕ್ಷಣಗಳೆಲ್ಲ ಇರುವುದು ಅವಶ್ಯ. ಆದರೆ ವರ್ಣಕಕಾವ್ಯಕ್ಕೆ (ಷಟ್ಪದಿ) ಲಕ್ಷಣಗಳು ಕಡಿಮೆ ಇದ್ದರೂ, ಇಲ್ಲದಿದ್ದರೂ ನಡೆದೀತು ಎಂಬ ಒಂದು ವಿಚಾರಪ್ರವಾಹ ಕನ್ನಡ ಸಾಹಿತ್ಯಕ್ಷೇತ್ರ ದಲ್ಲಿತ್ತು–ಎಂಬ ಮಾತನ್ನು ಕವಿ ರತ್ನಾಕರ 'ಸಕಲ ಲಕ್ಷಣವು ವಸ್ತುಕಕೆ, ವರ್ಣಕಕಿಷ್ಟು ವಿಕಳವಾದರೂ ದೋಷವಿಲ್ಲ. ಸಕಲ ಲಕ್ಷಣಕ್ಕಾಗಿ ಬಿರುಸು ಮಾಡಿದರೆ ಪುಸ್ತಕದ ಬದನೇಕಾಯಹುದು' (೧–೯) ಎಂಬ ಅವತರಣಿಕೆಯ ಮೇಲಿಂದ ಅನುಮಾನಿಸ ಬಹುದು. ಈ ವಿಚಾರಪ್ರವಾಹಕ್ಕೆ ವಿರೋಧ ಮಾಡುವ ಮತ್ತು ವರ್ಣಕಕಾವ್ಯ ವನ್ನು ಲಕ್ಷಣಬದ್ಧವಾಗಿ ರಚಿಸಿಯೂ ಕಾವ್ಯವು 'ಪುಸ್ತಕದ ಬದನೆಕಾಯಿಯಾಗದೆ' ಸರಸ ಕಾವ್ಯವನ್ನು ರಚಿಸಿಸುವುದು ಸಾಧ್ಯ ಎಂದು ಪ್ರತಿಪಾದಿಸುವ ಇನ್ನೊಂದು ಗುಂಪೂ ಇತ್ತು ಎಂದು ತರ್ಕಿಸುವಂತಿದೆ. ಈ ಗುಂಪಿಗೆ ಕವಿ ಲಕ್ಷ್ಮೀಶನು ಸೇರಿದವನು. ಸಂಪ್ರದಾಯಬದ್ಧವಾದ, ಕಥನರೀತಿ ಪ್ರಧಾನವಾದ ಸರಸಕಾವ್ಯವನ್ನು ಅವನು ರಚಿಸಿ ದ್ದಾನೆ. ಇದೇ ರೀತಿಯನ್ನು ವಿರೂಪಾಕ್ಷ ಪಂಡಿತನು 'ಚೆನ್ನಬಸವ ಪುರಾಣ'ದಲ್ಲಿ ಅನುಸರಿಸಿದ್ದಾನೆ.

**ಪಂಪ, ಕುಮಾರವ್ಯಾಸ ಮತ್ತು ರತ್ನಾಕರ ಇವರ ಹೆಗಲಿಗೆ ಹೆಗಲುಹಚ್ಚಿ ಕವಿ ಲಕ್ಷ್ಮೀಶನು ನಿಲ್ಲಬಲ್ಲನೇ?**

ರಾಮಾಯಣ ಮಹಾಭಾರತಗಳನ್ನು ಆರ್ಷ ಮಹಾಕಾವ್ಯ ಮತ್ತು ಕಾಲಿದಾಸಾದಿ ಕವಿಗಳ ಕುಮಾರ ಸಂಭವ, ರಘುವಂಶ, ಶಿಶುಪಾಲವಧ, ನೈಷಧೀಯ ಚರಿತೆಗಳನ್ನು ವಿದಗ್ಧ ಮಹಾಕಾವ್ಯಗಳೆಂದು ಸಂಸ್ಕೃತ ಸಾಹಿತ್ಯಶಾಸ್ತ್ರದಲ್ಲಿ ವಿಭಜಿಸಲಾಗುತ್ತದೆ.

[1] *Dictionary of World Literature*, Joseph Shipley.

ಅದರಂತೆ ನಾವೂ ಪಂಪಭಾರತವನ್ನು ವಿದಗ್ಧ ಮಹಾಕಾವ್ಯದ ಗುಂಪಿಗೆ ಸೇರಿಸಿ, ಪಂಡಿತ ಪಾಮರ ರಂಜಕ ಮಹಾಕಾವ್ಯ ಎಂದು ಇನ್ನೊಂದು ಗುಂಪನ್ನು ನಿರ್ಮಿಸೋಣ. ಈ ಗುಂಪಿನಲ್ಲಿ ಕುಮಾರವ್ಯಾಸಭಾರತ, ಪ್ರಭುಲಿಂಗಲೀಲೆ, ಜೈಮಿನಿ ಭಾರತ, ಚೆನ್ನಬಸವ ಪುರಾಣ ಮತ್ತು ಷಡಕ್ಷರಿಯ ರಾಜಶೇಖರ ವಿಳಾಸ, ಶಬರಶಂಕರ ವಿಳಾಸ ಮತ್ತು ರತ್ನಾಕರನ ಭರತೇಶ ವೈಭವವನ್ನು ಸೇರಿಸುವುದು ಸಮಂಜಸ ಎಂದು ನಮಗೆ ತೋರುತ್ತದೆ. ಈ ಗುಂಪಿನಲ್ಲಿ ಜೈಮಿನಿ ಭಾರತ ಮತ್ತು ರಾಜಶೇಜರ ವಿಳಾಸ ಎರಡನ್ನೇ ಹಳ್ಳಿಹಳ್ಳಿಗೆ ಓದುವ ಕಾಲ ಒಂದಿತ್ತು ಎಂಬ ಆಖ್ಯಾಯಿಕೆಯಿದೆ. ಕುಮಾರವ್ಯಾಸ ಭಾರತ ಮತ್ತು ಭರತೇಶವೈಭವ ಈ ಗುಂಪಿನಲ್ಲಿಯ ಬೃಹದ್ಗ್ರಂಥಗಳಾಗಿವೆ.

ಪಂಪಭಾರತದಲ್ಲಿ ೧೪ ಆಶ್ವಾಸಗಳು ಕುಮಾರವ್ಯಾಸ ಭಾರತದಲ್ಲಿ ೩೦ ಸಾವಿರ ಪದ್ಯಗಳೋ ೫೦ ಸಾವಿರ ಪದ್ಯಗಳೋ ಇನ್ನೂ ನಿರ್ಣಯವಾಗಬೇಕಾಗಿದೆ. ಭರತೇಶ ವೈಭವವು ೮೦ ಸಂಧಿ ೯೯೬೯ ಪದ್ಯಗಳುಳ್ಳ ಕಾವ್ಯವಾಗಿದೆ. ಜೈಮಿನಿ ಭಾರತವು ಕೇವಲ ಒಂದೇ ಒಂದು ಅಶ್ವಮೇಧಿಕ ಪರ್ವದ ೧೯೧೯ ಪದ್ಯಗಳುಳ್ಳ ಕಾವ್ಯವಾಗಿದೆ. ಇದರಲ್ಲಿ ಪಂಡಿತ ಪಾಮರರನ್ನು ರಂಜಿಸುವ ಶಕ್ತಿ ಅಗಾಧವಾಗಿದೆ.

ಭರತೇಶವೈಭವದ ಶೈಲಿಯಲ್ಲಿ ವೈವಿಧ್ಯವಿಲ್ಲ. ಕುಮಾರವ್ಯಾಸನ ದೇಸಿಯು ಮಾರ್ಗವನ್ನು ನುಂಗಿಬಿಡುತ್ತದೆ. ಆದರೆ ಪಂಪನ ದೇಸಿಮಾರ್ಗಗಳು ಒಡಂಬಡುತ್ತವೆ. ದೇಸಿಮಾರ್ಗಗಳನ್ನು ಒಡಂಬಡಿಸುವ ಇನ್ನೊಂದು ಪ್ರಯತ್ನ ಕವಿ ಲಕ್ಷ್ಮೀಶನದು.

ಕುಮಾರವ್ಯಾಸ ಭಾರತವೆಂದರೆ ಒಂದು ಅಡವಿಯನ್ನು ಹೊಕ್ಕಂತೆ. ಅಲ್ಲಿ ಸಂಕ್ಷೇಪಕ್ಕಿಂತ ವಿಸ್ತಾರದೆಡೆಗೆ ಒಲವಿದೆ. ಪಂಪಭಾರತವೆಂದರೆ ಆ ಅರಣ್ಯದಲ್ಲಿ ದೊರೆತ ಗುಡಿಗಳ ಗುಂಪಿನಂತೆ. ಇಲ್ಲಿ ಸಮತೂಕವಿದೆ. ಇದು ಗುಡಿಗಳ ಗುಂಪಾಗಿದ್ದರಿಂದ ನಮ್ಮ ಲಕ್ಷ್ಯವು ಅನೇಕ ಕಡೆಗೆ ಚೆದರಿಹೋಗುತ್ತದೆ. ಲಕ್ಷ್ಮೀಶನ ಜೈಮಿನಿ ಭಾರತವೆಂದರೆ ಕಲಾತ್ಮಕವಾಗಿ ಕೆತ್ತಿದ ಒಂದೇ ಒಂದು ಗುಡಿ. ಇದರ ಉಸಿರು ಚಿಕ್ಕದು, ವಿಸ್ತಾರ ನಿಯಂತ್ರಿತ. ಆದಿಪುರಾಣದಲ್ಲಿ ೧೦ ಜನ್ಮಗಳ ಕಥಾನಕವಿದ್ದರೆ ನಾಗಚಂದ್ರನ ಮಲ್ಲಿನಾಥ ಪುರಾಣದಲ್ಲಿ ಎರಡೇ ಜನ್ಮಗಳ ಕಥಾನಿರೂಪಣೆ ಇರುವಂತೆ, ಜೈಮಿನಿ ಭಾರತವು ಒಂದೇ ಪರ್ವದ ಕಥಾನಕವಾಗಿದೆ. ನಾಗಚಂದ್ರ ಮತ್ತು ಲಕ್ಷ್ಮೀಶ ವಸ್ತು ವಿಸ್ತಾರವನ್ನು ತ್ಯಜಿಸಿ, ವಸ್ತು ನಿಯಂತ್ರಣ, ಕಲಾತ್ಮಕ ನಿರೂಪಣದತ್ತ ಲಕ್ಷ್ಯ ಕೊಟ್ಟ ಕವಿಗಳಾಗಿದ್ದಾರೆ.

ಸಮುಚಿತ ಸ್ತ್ರೀಧರ್ಮದಿಂದೆ ನಾಲ್ಕನೆಯ ದಿನ
ದಮಲ ಮಜ್ಜನದಲಂಕಾರದೊಳೆಸೆದಳಂದು
ನಿಮಿಷದೊಳ್ತ್ರಿಜಗಮಂ ಗೆಲ್ವೆನೆಂದಂಗಜಂ ಮಸೆದಡಾಯುಧವೋ ಮೇಣ್ ||
ಕ್ರಮದಿಂದೆ ಮನ್ಮಥಂ ಕಲುಷಮಂ ಶೋಧಿಸಿದ
ರಮಣೀಯ ಸೌಂದರ್ಯ ಸಾರವೋ ಸ್ಮರನ ನಿರು
ಪಮ ಯಶಃಶ್ರೀಯ ಸಾಕಾರವೋ ? ಪೇಳೆನಲ್ಸೀತೆ ರಾಘವನ ಕಣ್ಗೆ || (೧೪-೨೬)

ಎಂಬ ಪದ್ಯವನ್ನು

ಹಾರಮರೀಚಿ ಮಂಜರಿ, ಸುಧಾರಸಧಾರೆ, ಸುಧಾಂಶುಲೇಖೆ ಕ
ರ್ಪೂರ ಶಲಾಕೆ ನೇತ್ರ ಸುಖದಾಯಕ ಮಾ ದೊರೆತಲ್ಲವೀಕೆ ಶೃಂ
ಗಾರ ಸಮುದ್ರಮಂ ಕಡೆಯೆ ಹೃದ್ಭವನುದ್ಭವೆಯಾದಳೆಂದು ಕ
ಣ್ಣಾರೆ ದಶಾಸ್ಯನೀಕ್ಷಿಸಿದ ನೀಕ್ಷಿಸಿ ಕಣ್ಣಱಂದಾರೆ ಮನ್ಮಥಂ

ನಾಗಚಂದ್ರನ ಸೀತಾವರ್ಣನೆಯೊಂದಿಗೆ ಮತ್ತು ಕ.ಜೈ.ಭಾ. ಸಂ. ೧೯ ಪದ್ಯ ೧

ಅರಸ ಕೇಳ್ಸೌಮಿತ್ರಿ ವೈದೇಹಿಯಂ ಕೊಂಡು
ತೆರಳುವ ರಥಾಗ್ರದೊಳ್ಚಲಿಸುವ ಪತಾಕೆ ರಘು
ವರನಂಗನೆಯ ಸುಳಿದ ನಹಹ ! ಯೆಂದಡಿಗಡಿಗೆ ತಲೆಗೊಡಹುವಂತಿರಲ್ಕೆ ||
ಪರಮದಾರುಣಮಾಯ್ತು ದೆಂದಯೋಧ್ಯಾಪುರದ
ನೆರವಿಯ ಜನಂ ಗುಜುಗುಜಿಸಿ, ಮನದೆ ಕರಗಿ ಕಾ
ತರಿಸುತಿರೆ ಪರಿಸಿದಂ ಕಾಳ್ಪಟ್ಟೆಗೊಂಡನಿಲವೇಗದಿಂದಾ ರಥವನು ||

ಎಂಬುದನ್ನು ನಾಗಚಂದ್ರನ

ಪ್ರತಿಕೂಲಾನಿಲನಿಂ ಪತಾಕೆ ಮಗುಱಂಬಂತಾಗೆ ಕೈಸನ್ನೆಯಿಂ
ಶ್ರುತಿಯಂ ಸಾರ್ತರೆಪೋಪುದಲ್ತು ನಯಮೆಂಬಂತಾಗಿ ಘಂಟಾರಣ
ತ್ಕೃತಿ ಸಾರ್ತಂದುದು ಪುಣ್ಯದೇವತೆಯ ಕಣ್ಣೀರೆಂಬಿನಂ ಮೇಘ ಸಂ
ಹತಿಯಿಂದಲ್ಲುಗೆ ಮುತ್ತು ಪುಷ್ಪಕವಿಮಾನಂ ದಂಡಕಾರಣ್ಯಮಂ ||

ಎಂಬ ವರ್ಣನಾ ಪದ್ಯದೊಡನೆ ಹೋಲಿಸಿ ನೋಡಿದರೆ ಇವರಿಬ್ಬರ ಶೈಲಿಯಲ್ಲಿಯ ಲಲಿತ ಗುಣವೆಂಬ ಸಾಮ್ಯವು ಕಂಡುಬರುತ್ತದೆ.

ಲಕ್ಷ್ಮೀಶನ ಮೇಲೆ ಅನೇಕ ಪೂರ್ವಕವಿಗಳ ಪ್ರಭಾವವಾಗಿದೆ. ಆದರೆ ಯಾವ ಕವಿಯ ಹೆಸರನ್ನೂ ಲಕ್ಷ್ಮೀಶನು ಬಾಯಿಬಿಚ್ಚಿ ಹೇಳಿಲ್ಲ. ಆದರೆ ಇವನ ಮೇಲೆ ಪ್ರಭಾವಬೀರಿದ ಕವಿಗಳ ಕಾವ್ಯ ಮತ್ತು ಜೈಮಿನಿ ಭಾರತ ಇವುಗಳಲ್ಲಿಯ ಸಾಮ್ಯವನ್ನು ಅಲ್ಲಲ್ಲಿ ಊಹಿಸಲಾಗಿದೆ—'ಅಷ್ಟಾದಶವರ್ಣನೆ' (ಪ್ರಕರಣ-೪) ಎಂಬ ವಿಭಾಗದಲ್ಲಿ. ಲಕ್ಷ್ಮೀಶನ ಕಾವ್ಯದ ಶೈಲಿ ಪಂಪನಂತೆ ಓಜಸ್ವಿಯಲ್ಲ. ಕುಮಾರವ್ಯಾಸನಂತೆ ಶಬ್ದ ಸೌಂದರ್ಯವು ಉಗ್ರವಲ್ಲ. ನಾಗಚಂದ್ರನಂತೆ ಲಲಿತವಾದದ್ದು ಮತ್ತು ಹರಿಹರನಂತೆ ಸರಳವಾದದ್ದು—ಲಕ್ಷ್ಮೀಶನ ಶೈಲಿ.

ದೆಸೆಪಸುರೇಱಿ ಪಚ್ಚೆಯೊಳೆ ಮುಚ್ಚಿ ಮುಸುಂಕಿದ ಮಾೞ್ಕೆಯಾದುದಾ
ಗಸಮಳಿ ನೀಳ ನೀಳಗಳ ಕಂಡ ತಮಾಳ ವಿನೀಳ ನೀರದ
ಪ್ರಸರ ವಿಭಾಸಿಯಾದುದು ಸಮೀರನುದಾರ ಕದಂಬ ಕೇತಕೀ
ಪ್ರಸರ ರಜಸ್ಸರ ಪ್ರಕಟ ಪಾಂಸುಳಮಾದುದು ಮೇಘಕಾಲದೊಳ್ ||

ಎಂಬ ಪಂಪನ ವರ್ಷಾಕಾಲದ ವರ್ಣನೆಯ ಪದ್ಯದಲ್ಲಿಯ ಬಿಗುವನ್ನು ಅಥವಾ

ಪೊಳೆವಮರೇಂದ್ರ ಗೋಪದ ಪಸುರ್ತೆಳವುಲ್ಗಳ ತಳ್ತ ಕಾರ್ಮುಗಿ
ಲ್ಗಳ ಕಿಱುಗೊಂತು ಗೊಂಕಿದ ಪೊನಲ್ಗಳ ಕೆಂಪು ಪಸುರ್ಪುಬೆ
ಳ್ಪೊಳಕೊಳೆ ಶಕ್ರ ಕಾರ್ಮುಕ ವಿಳಾಸಮನೇನೆರ್ದೆಗೊಂಡು ಬೇಟದ
ತ್ತಳಗಮುಸುಂಟು ಮಾಡಿದುದೊ ಕಾಮನ ಕಾರ್ಮುಕದಂತೆ ಕಾರ್ಮುಕಂ ||

ಎಂಬಲ್ಲಿಯ ಮಿತವಾದ ಮಾತುಗಳಿಂದ ಮನೋಹರವಾದ ಚಿತ್ರವನ್ನು ಬರೆಯಬಲ್ಲ ಶಕ್ತಿ ಲಕ್ಷ್ಮೀಶನಿಗಿಲ್ಲ.

ಪಂಪನು ರನ್ನನಿಗೆ, ಹರಿಹರನು ರಾಘವಾಂಕನಿಗೆ, **ಕುಮಾರವ್ಯಾಸನು ಲಕ್ಷ್ಮೀಶನಿಗೆ** ಸ್ಫೂರ್ತಿಸ್ಥಾನದಲ್ಲಿದ್ದವರು ಎಂದು ನಿಶ್ಚಿತವಾಗಿ ಹೇಳಬಹುದು. ಅನುಬಂಧ ಪ್ರಕರಣದಲ್ಲಿ'ಪುರುಷಾಮೃಗ ಕಥಾನಕ'ವನ್ನು ಕುಮಾರವ್ಯಾಸ ಮತ್ತು ಲಕ್ಷ್ಮೀಶ ಚಿತ್ರಿಸುವ ರೀತಿಯನ್ನು ತೋರಿಸಿದೆ. ಅದರಂತೆ ಜೈಮಿನಿ ಭಾರತ ಮತ್ತು ಕುಮಾರವ್ಯಾಸನ ಸಭಾಪರ್ವ ಇವುಗಳನ್ನು ಹೋಲಿಸಿ ಕುಮಾರವ್ಯಾಸ ಲಕ್ಷ್ಮೀಶರ ನಿಕಟ ಸಂಬಂಧವನ್ನು ಅರಿಯಬಹುದು. ಲಕ್ಷ್ಮೀಶನು ಕುಮಾರವ್ಯಾಸನ ಪ್ರಭಾವಕ್ಕೆ ಸಿಕ್ಕಿ, ಬಿಡಿಸಿಕೊಂಡು ಎದ್ದ, ಗೆದ್ದ ಕವಿ.

## ಸಮಾರೋಪ (ಲಕ್ಷ್ಮೀಶನ ಸ್ಥಾನ ನಿರ್ಣಯ)

ಕವಿ ಲಕ್ಷ್ಮೀಶನಲ್ಲಿ ಸಂಗ್ರಹಚಾತುರ್ಯವಿದೆ; ಕಥನಕೌಶಲ್ಯವಿದೆ ಎಂಬುದರ ಬಗ್ಗೆ ಭಿನ್ನಾಭಿಪ್ರಾಯವಿಲ್ಲ. ಅವನ ಶಬ್ದಾಲಂಕಾರಗಳ ಬಗ್ಗೆ ಕೆಲವರಿಗೆ ಜುಗುಪ್ಸೆ ಉಂಟು. ಲಕ್ಷ್ಮೀಶನ ಶ್ಲೇಷ ಪಾಂಡಿತ್ಯ ಮತ್ತು ಶಬ್ದಾಲಂಕಾರಗಳ ಮೂಲಕ ವಾರ್ಧಕ ಷಟ್ಪದಿಯಲ್ಲಿ ಸಾಧಿಸುವ ವೈವಿಧ್ಯವನ್ನು ಲಕ್ಷ್ಯಕ್ಕೆ ತೆಗೆದುಕೊಂಡರೆ ಆ ಜುಗುಪ್ಸಾ ಭಾವನೆ ತಿಳಿದೀತು ಎಂದು ನಮಗೆ ತೋರುತ್ತದೆ.

ಲಕ್ಷ್ಮೀಶನು ಪ್ರಥಮ ದರ್ಜೆಯ ಕಥನಕಾರ. ಕಾವ್ಯಕಥೆಗಳನ್ನು ಕಥಿಸುವಲ್ಲಿ ಕಥನಚಾತುರ್ಯ, ಸರಳತೆ, ಅರ್ಥವ್ಯಕ್ತಿಯ ಗುಣಗಳಿದ್ದು ರಸಾತ್ಮಕತೆ, ಕಲಾತ್ಮಕತೆಯೇ ಎಲ್ಲ ಕಥಾನಕಗಳ ಜೀವಾಳವಾಗಿದೆ. ಸಂಧಿ ಸಂಧ್ಯಂಗ ಲಕ್ಷಣ, ೩೬ ಕಾವ್ಯ ಲಕ್ಷಣಗಳನ್ನು ಸೇರಿಸುವಲ್ಲಿ ಕವಿ ಲಕ್ಷ್ಮೀಶನ ಸಂಪ್ರದಾಯಶರಣತೆಯನ್ನು ಕಂಡರೆ, ವಸ್ತುಕವರ್ಣಕವನ್ನು ಬೆರೆಸುವಲ್ಲಿ ಅವನ ವಿನೂತನತೆ, ಕಲಾತ್ಮಕತೆಯನ್ನು ಕಾಣುತ್ತೇವೆ. ಅಷ್ಟಾದಶವರ್ಣನೆಗಳಲ್ಲಿ ಪೂರ್ವಕವಿಗಳ ಪ್ರಭಾವವನ್ನು ಕಂಡರೂ ಪ್ರಕೃತಿಯು ಮಾನವನ ಮೇಲೆ ಮಾಡುವ ಪರಿಣಾಮ, ಪ್ರಕೃತಿ ಮತ್ತು ಮಾನವರಲ್ಲಿಯ ಸಂವೇದನಾಶೀಲತೆಯನ್ನು ಚಿತ್ರಿಸುವಲ್ಲಿ ವಿನೂತನತೆ ಇದೆ.

ಲಕ್ಷ್ಮೀಶನು ಕುಮಾರವ್ಯಾಸಾದಿಗಳಿಂದ ಪ್ರಭಾವಿತನಾದಂತೆ ತಾನು ಅನೇಕ ಕವಿಗಳ ಮೇಲೆ, ಯಕ್ಷಗಾನಕರ್ತೃಗಳ ಮೇಲೆ ಪ್ರಭಾವವನ್ನು ಬೀರಿದ್ದಾನೆ. ಲಕ್ಷ್ಮೀಶನ ದೃಷ್ಟಿ, ಕಾವ್ಯದ ಶಕ್ತಿಗಿಂತ, ಕಾವ್ಯದ ರಸಾತ್ಮಕತೆಯತ್ತ ಸ್ಥಿರವಾಗಿ ನಿಲ್ಲುತ್ತದೆ. ರಸಾತ್ಮಕತೆ ಇದು ನಾಟಕದ ಗುಣ. ಆದುದರಿಂದಲೇ ಈ ಕಾವ್ಯವು ಯಕ್ಷಗಾನಕರ್ತೃಗಳ ಗುರು ಮತ್ತು ಪ್ರೇರಕ ಶಕ್ತಿಯಾಗಿದೆ.

ಕುಮಾರವ್ಯಾಸನ ಕೃತಿಯ ವಿಸ್ತಾರ-ಅತಿ ತುಂಗಾಕೃತಿ, ಜೈಮಿನಿಭಾರತಕ್ಕಿಲ್ಲ. ಆದರೆ ಜೈಮಿನಿ ಭಾರತವು ಮಿತ ತುಂಗಾಕೃತಿಯುಳ್ಳ, ಕಲಾತ್ಮಕ ಸೌಂದರ್ಯವುಳ್ಳ, ಮತ್ತು ಶ್ರೀಕೃಷ್ಣಭಕ್ತಿಯ ಅತಿಶಯವುಳ್ಳ ಕಾವ್ಯವಾಗಿದೆ. ಜೈಮಿನಿ ಭಾರತವು

ಗೊಮ್ಮಟನ ಜಿನಶ್ರೀರೂಪದಂತೆ–ಚೊಕ್ಕಾದ, ಮನೋಹರವಾದ, ಕಲಾತ್ಮಕಕಾವ್ಯವಾಗಿದೆ.

ಕವಿ ಲಕ್ಷ್ಮೀಶನು ಪಂಪನ ಎತ್ತರಕ್ಕೆ ಏರುವುದಿಲ್ಲ. ಆದರೆ ಕುಮಾರವ್ಯಾಸನ ಸರಿಜೋಡಿಯಾಗಿ ನಿಲ್ಲಬಲ್ಲ ಮಹಾಕವಿ. ಜೈಮಿನಿ ಭಾರತವು ವಿದಗ್ಧ ಮಹಾಕಾವ್ಯವಲ್ಲ. ಪಂಡಿತ–ಪಾಮರರಂಜಕ ಮಹಾಕಾವ್ಯಗಳಲ್ಲಿ ಒಂದು ಶ್ರೇಷ್ಠಕೃತಿ. ಯಕ್ಷಗಾನ ಸಾಹಿತ್ಯಕ್ಕೆ ಗುರುಸ್ಥಾನದಲ್ಲಿದ್ದ ಮಹಾಕೃತಿಯಾಗಿದೆ.

"ಉಪಮಾನದಲ್ಲಿ ಅಪಮಾನಕೆಲ್ಲಿದೆ ಸ್ಥಾನ ?
ಕೆಲವು ಪ್ರಮಾಣ ; ಕೆಲವೊಂದು ಅನುಮಾನ."

—ಅಂದತ್ತ

## ೬/ತುಲನಾತ್ಮಕ ಅಭ್ಯಾಸ

- ಪ್ರಸ್ತಾವನೆ
- ವ್ಯಾಸಭಾರತ ಮತ್ತು ಜೈಮಿನಿ ಭಾರತಗಳಲ್ಲಿಯ ಅಶ್ವಮೇಧಿಕ ಪರ್ವ.
- ತಿಮ್ಮಣ್ಣಕವಿಯ ಅಶ್ವಮೇಧಿಕಪರ್ವ ಮತ್ತು ಲಕ್ಷ್ಮೀಶನ ಜೈಮಿನಿ ಭಾರತದ ಅಶ್ವಮೇಧಿಕ ಪರ್ವ.
- ಸಂಸ್ಕೃತ ಜೈಮಿನಿ ಭಾರತ ಮತ್ತು ಲಕ್ಷ್ಮೀಶನ ಜೈಮಿನಿ ಭಾರತ ಇವುಗಳ ಮುಖ, ಪ್ರತಿಮುಖ, ಗರ್ಭ, ಅವಮರ್ಶ ಮತ್ತು ನಿರ್ವಹಣ ಸಂಧಿಗಳ ಹಂತಗಳಲ್ಲಿ ತುಲನೆ.
- ಶ್ರೀಧರ ಕವಿಯ ಮರಾಠಿ ಜೈಮಿನಿ 'ಅಶ್ವಮೇಧ ಕಾವ್ಯ'.
- ಸಂಸ್ಕೃತ, ತೆಲುಗು, ಕನ್ನಡ ಮತ್ತು ಮರಾಠಿ ಜೈಮಿನಿ ಭಾರತಗಳಲ್ಲಿಯ ವೀರ ವರ್ಮನ ಕಥಾನಕದ ತುಲನಾತ್ಮಕ ಅಭ್ಯಾಸ
- ಸಮಾರೋಪ

### ಪ್ರಸ್ತಾವನೆ

'ಸಂಸ್ಕೃತದಲ್ಲಿ ೬೮ ಅಧ್ಯಾಯಗಳಲ್ಲಿ ವಿಸ್ತಾರವಾಗಿ ವರ್ಣಿಸಿರುವ ಜೈಮಿನಿ ಭಾರತದ ಕಥೆಯನ್ನು ಲಕ್ಷ್ಮೀಶನು ಅದರ ಅರ್ಧದಷ್ಟರಲ್ಲಿ ಸಂಗ್ರಹಿಸಿದ್ದಾನೆ. ಅವನು ಶ್ರೇಷ್ಠವರ್ಗದ ಸಂಗ್ರಹಕಾರ. ಕಥಾಸರಣಿಯಲ್ಲಾಗಲಿ, ಪಾತ್ರಸೃಷ್ಟಿಯಲ್ಲಾಗಲಿ ಆತನು ಹೆಚ್ಚು ವ್ಯತ್ಯಾಸವನ್ನು ಮಾಡಿಕೊಂಡಿಲ್ಲ. ಹೊಸದಾಗಿ ಯಾವ ಸನ್ನಿವೇಶ ವನ್ನಾಗಲಿ, ಪಾತ್ರಗಳನ್ನಾಗಲಿ ಸೃಷ್ಟಿಸಿಕೊಳ್ಳದೆ ಮೂಲವನ್ನು ಬಹುಮಟ್ಟಿಗೆ ಅನುಸರಿ ಸಿದ್ದಾನೆ. ರಸನಿರೂಪಣೆಯಲ್ಲಿಯೂ ವಿಶೇಷತಃ ಮೂಲಕ್ಕೇ ಋಣಿಯಾಗಿದ್ದಾನೆ. ಕಥಾಶರೀರದ ಬೇರೆಬೇರೆ ಭಾಗದ ಪರಿಣಾಮವೂ ಮೂಲಗ್ರಂಥದಲ್ಲಿರುವಂತೆಯೇ ಇದೆ. ಆದರೂ ಈಚೆಗೆ ಕವಿಯ ವೈಭವವನ್ನು ಕೊಂಡಾಡಬೇಕೆಂಬ ಉತ್ಸಾಹದಿಂದಲೂ ಮೂಲದ ಪರಿಚಯವು ವಿಶೇಷವಿಲ್ಲದಿರುವುದರಿಂದಲೂ ಅವನಿಗೆ ಸಲ್ಲಬೇಕಾದುದಕ್ಕಿಂತ

ಹೆಚ್ಚಿನ ಗೌರವವೂ ಮರ್ಯಾದೆಯೂ ಹೊಗಳಿಕೆಯೂ ಅವನಿಗೆ ಸಂದಿವೆ. ಹೀಗೆ ಮಾಡುವುದರಿಂದ ಮೂಲಗ್ರಂಥಕ್ಕೆ ಅನ್ಯಾಯ ಮಾಡಿದಂತಾಗುತ್ತದೆ. ಲಕ್ಷ್ಮೀಶನಿಗೆ ಈಗ ದೊರೆತಿರುವ ಬಹುಭಾಗದ ಗೌರವಕ್ಕೆ ಮೂಲಗ್ರಂಥವೇ ಕಾರಣ. ಕನ್ನಡ ಜೈಮಿನಿ ಭಾರತದಲ್ಲಿ ತೋರಿಬರುವ ಕಥಾ ಸಂವಿಧಾನ ಕೌಶಲ, ಸಂಭಾಷಣೆಗಳ ಸ್ವಾರಸ್ಯ, ಹಾಸ್ಯ ರಸ ಪ್ರತಿಪಾದನೆ ಇವೆಲ್ಲವೂ ಮೂಲಗ್ರಂಥದಲ್ಲಿಯೇ ಸ್ಪಷ್ಟವಾಗಿವೆ. ಕನ್ನಡ ಗ್ರಂಥದ ಬಹುಭಾಗವು ಸಂಸ್ಕೃತ ಗ್ರಂಥದ ಅನುವಾದ ಮಾತ್ರವಾಗಿದೆ.'[1] ಎಂದು ಎನ್. ಅನಂತ ರಂಗಾಚಾರ್ ಅವರು ಅಭಿಪ್ರಾಯಪಟ್ಟರು. ಈ ಅಭಿಪ್ರಾಯವು 'ತುಲನಾತ್ಮಕ ಅಭ್ಯಾಸ' ಎಂಬ ಪ್ರಕರಣಕ್ಕೆ ಜನ್ಮ ಕೊಟ್ಟಿತು.

ನಾವು ಅಭ್ಯಾಸ ಮಾಡಲಿರುವ ಲಕ್ಷ್ಮೀಶನ ಕನ್ನಡ ಜೈಮಿನಿ ಭಾರತವೆಂದರೆ— ಜೈಮಿನಿ ಭಾರತದೊಳಗಿನ ಅಶ್ವಮೇಧಿಕಪರ್ವ ಒಂದನ್ನೆ. ವ್ಯಾಸ ಮಹಾಭಾರತದಲ್ಲಿಯೂ ಅಶ್ವಮೇಧಿಕಪರ್ವವಿದೆ. ಅದನ್ನು ಜೈಮಿನಿ ಅಶ್ವಮೇಧಿಕಪರ್ವದೊಂದಿಗೆ ಹೋಲಿಸಿ ನೋಡಬೇಕು ಎಂಬ ವಿಚಾರ ಬಂದಿತು. ಜೈಮಿನಿ ಅಶ್ವಮೇಧಿಕ ಪರ್ವವು[2] ಅತ್ಯಂತ ಪ್ರಭಾವ ಮತ್ತು ಪ್ರಚಾರಹೊಂದಿದ ಕಾವ್ಯ ಎಂಬ ಎರಡನೆಯ ಅಂಶ ಲಕ್ಷ್ಯಕ್ಕೆ ಬಂದಿತು. ಮೂಲ ಸಂಸ್ಕೃತ ಜೈಮಿನಿ ಭಾರತ ಅಶ್ವಮೇಧಿಕ ಪರ್ವವನ್ನು ಆಧರಿಸಿ ತೆಲುಗು, ಹಿಂದಿ, ಮರಾಠಿ, ಮತ್ತು ಕನ್ನಡ ಕಾವ್ಯಗಳು ರೂಪಗೊಂಡದ್ದನ್ನು ಕಂಡು ಕೊಂಡೆವು. ಇದರೊಂದಿಗೆ ತಿಮ್ಮಣ್ಣಕವಿರಚಿತ ಅಶ್ವಮೇಧಿಕ ಪರ್ವದ ವಿಚಾರವನ್ನೂ ಮಾಡಿದೆವು. ಈ ಎಲ್ಲ ಕಾವ್ಯಗಳಿಗೆ ಆಧಾರ–ಹಂದರ–ಸಂಸ್ಕೃತ ಜೈಮಿನಿ ಭಾರತ ವಾಗಿದ್ದರೂ, ಅದರ ಮೇಲೆ ಹಬ್ಬಿದ ಬಳ್ಳಿಗಳಂಥ ಕಾವ್ಯಗಳನ್ನು ಅಭ್ಯಸಿಸುವುದು ಈ ಪ್ರಕರಣದ ಪ್ರಮುಖ ಉದ್ದೇಶವಾಗಿದೆ. ಲಕ್ಷ್ಮೀಶನ ಕನ್ನಡ ಜೈಮಿನಿ ಭಾರತವು ಮೂಲ ಸಂಸ್ಕೃತ ಜೈಮಿನಿ ಭಾರತದಿಂದ ಎಷ್ಟು ಭಿನ್ನವಾಗಿದೆ, ಸ್ವಂತಿಕೆಯನ್ನು ಮೆರೆದಿದೆ, ರಸೋತ್ಕೃಷ್ಟವಾಗಿದೆ ಮತ್ತು ಗ್ರಥನ ಕೌಶಲದಿಂದ ಕೂಡಿದೆ ಎಂಬುದನ್ನು ರಸಿಕ ವಾಚಕರ ಮುಂದೆ ಮಂಡಿಸುತ್ತೇವೆ.

ವ್ಯಾಸ ಮಹಾಭಾರತದ ಅಶ್ವಮೇಧಿಕ ಪರ್ವದ ಯಜ್ಞಾಶ್ವವು ಉತ್ತರದಿಂದ ಪೂರ್ವದೆಡೆಗೆ ಸಂಚಾರಕ್ಕೆ ಹೋದರೆ, ಜೈಮಿನಿ ಭಾರತದ ಅಶ್ವಮೇಧಿಕ ಪರ್ವದ

---

1 'ಲಕ್ಷ್ಮೀಶ', ಎನ್. ಅನಂತರಂಗಾಚಾರ್, ಪು. ೭, ೮.

2 ಅಶ್ವಮೇಧಿಕ ಪರ್ವ

೧. ವ್ಯಾಸ ಮಹಾಭಾರತದ ಅಶ್ವಮೇಧಿಕ ಪರ್ವ
೨. ಜೈಮಿನಿ ಭಾರತದ ಅಶ್ವಮೇಧಿಕ ಪರ್ವ
೪. ತಿಮ್ಮಣ್ಣಕವಿಯ ಅಶ್ವಮೇಧಿಕ ಪರ್ವ
೩. ಪಿಲ್ಲಲಮರ್ರಿಪಿನ ವೀರಭದ್ರನ ಅಶ್ವಮೇಧಿಕ ಪರ್ವ
೫. ಕವಿ ಲಕ್ಷ್ಮೀಶನ ಅಶ್ವಮೇಧಿಕ ಪರ್ವ
೬. ಶ್ರೀಧರ ಕವಿಯ ಅಶ್ವಮೇಧಿಕ ಪರ್ವ

ಯಜ್ಞಾಶ್ವವು ದಕ್ಷಿಣ ದಿಕ್ಕನ್ನು ಕುರಿತು ಪ್ರಯಾಣ ಬೆಳೆಸುತ್ತದೆ. ಆದುದರಿಂದ ಈ ಎರಡೂ ಕಾವ್ಯಗಳಲ್ಲಿ ಮಣಿಪುರ ಮತ್ತು ಸಿಂಧೂದೇಶ ಎರಡನ್ನುಳಿದು ಉಳಿದ ದೇಶಗಳ ಮತ್ತು ರಾಜರ ವಿಷಯದಲ್ಲಿ ಸಾಮ್ಯವಿಲ್ಲ.

ಸಂಸ್ಕೃತ ಜೈಮಿನಿ ಭಾರತದಲ್ಲಿಯ ಚಿತ್ತವೇಧಕ ಕಥಾನಕಗಳ ಮೂಲಕ ಆಕರ್ಷಿಸಲ್ಪಟ್ಟ ಪಿಲ್ಲಲಮರ್ರಿಪಿನ ವೀರಭದ್ರನು (ಕ್ರಿ.ಶ. ೧೪೫೦–೧೪೪೦) 'ಜೈಮಿನಿ ಭಾರತಮು' ಕಾವ್ಯವನ್ನು ರಚಿಸಿದನು. ಸಾಳುವ ಗುಂಡ ನರಸಿಂಹ–I ನೃಪಾಲನಿಗೆ ಈ ಕಾವ್ಯವನ್ನು ಒಪ್ಪಿಸಿದನು. ಈ ಕಾವ್ಯವು ಸಂಸ್ಕೃತ ಜೈಮಿನಿ ಭಾರತವನ್ನು ಹೆಚ್ಚು ಅಂಶಗಳಲ್ಲಿ ಹೋಲುತ್ತದೆ.

ತಿಮ್ಮಣ್ಣ ಕವಿಯು (ಕ್ರಿ.ಶ. ೧೫೧೯–೧೫೨೯) ಸಂಸ್ಕೃತ ಜೈಮಿನಿ ಭಾರತ ಮತ್ತು ತೆಲುಗು 'ಜೈಮಿನಿ ಭಾರತಮು' ಈ ಎರಡೂ ಕಾವ್ಯಗಳನ್ನು ಕಂಡಿದ್ದನು ಎಂಬುದು ಕಾವ್ಯಾಭ್ಯಾಸದಿಂದ ಗೊತ್ತಾಗುತ್ತದೆ. ಆದರೆ ಈ ಕಾವ್ಯವು ವ್ಯಾಸ ಮಹಾಭಾರತದ ಆಶ್ವಮೇಧಿಕ ಪರ್ವವನ್ನೇ ಹೆಚ್ಚಾಗಿ ಅನುಸರಿಸುವುದನ್ನು ಕಾಣಬಹುದು.

ಕವಿ ಲಕ್ಷ್ಮೀಶನು (ಕ್ರಿ.ಶ. ೧೫೧೪–೧೫೭೪) ಸಂಸ್ಕೃತ ಜೈಮಿನಿ ಭಾರತವನ್ನು ಅನುಸರಿಸಿಯೂ 'ವಿನೂತನ' ಕಾವ್ಯವನ್ನು ರಚಿಸಿದನು. ಈ ವಿನೂತನ ಕಾವ್ಯವು—

೧. ಮೂಲ ಸಂಸ್ಕೃತ ಜೈಮಿನಿ ಭಾರತವನ್ನು ಎಷ್ಟರಮಟ್ಟಿಗೆ ಅನುಸರಿಸುತ್ತದೆ?
೨. ಎಷ್ಟರಮಟ್ಟಿಗೆ ಮೂಲವನ್ನು ತ್ಯಜಿಸುತ್ತದೆ?
೩. ಮೂಲದಲ್ಲಿ ಎಷ್ಟರಮಟ್ಟಿಗೆ ವ್ಯತ್ಯಾಸಗಳನ್ನು ಮಾಡಿಕೊಂಡಿದೆ?
೪. ಮೂಲವನ್ನು ಎಷ್ಟರಮಟ್ಟಿಗೆ ವಿಸ್ತರಿಸಿದೆ? ಮತ್ತು
೫. ಮೂಲವನ್ನು ಎಷ್ಟರಮಟ್ಟಿಗೆ ಸಂಕ್ಷೇಪಿಸುತ್ತದೆ?

ಎಂಬುದನ್ನು ಅಭ್ಯಸಿಸುವುದೇ 'ತುಲನಾತ್ಮಕ ಅಭ್ಯಾಸ' ಎಂಬ ಈ ಪ್ರಕರಣದ ಮುಖ್ಯ ಉದ್ದೇಶವಾಗಿದೆ.

ಮೂಲ ಸಂಸ್ಕೃತ ಜೈಮಿನಿ ಭಾರತದ ಅನುವಾದ ರೂಪವಾಗಿ ವಿವಿಧ ರೂಪಗಳನ್ನು ಪಡೆದ ತೆಲುಗು ಭಾರತ ಮತ್ತು ಮರಾಠಿ ಭಾರತ ಇವುಗಳ ಅಭ್ಯಾಸವನ್ನು ಆನುಷಂಗಿಕವಾಗಿ ಈ ಪ್ರಕರಣದಲ್ಲಿ ಮಾಡಿದೆ. ತೆಲುಗು ಮತ್ತು ಕನ್ನಡ ಭಾಷೆಗಳು ಪಂಚದ್ರಾವಿಡ ಭಾಷೆಗಳ ಗುಂಪಿಗೆ ಸೇರಿದ ಸಂಬಂಧಿಗಳಾಗಿವೆ. ಮರಾಠಿ ಭಾಷಿಕರು ನಮ್ಮ ನೆರೆಹೊರೆ ನಾಡಿನ ಬಾಂಧವರು. ಈ ಸಂಬಂಧಬಂಧವನ್ನು ಅನುಲಕ್ಷಿಸಿ ಸಂಸ್ಕೃತ, ತೆಲುಗು, ಕನ್ನಡ ಮತ್ತು ಮರಾಠಿ ಆಶ್ವಮೇಧಿಕ ಪರ್ವದಲ್ಲಿ ವೀರವರ್ಣನ ಕಥಾನಕವು ಹೇಗೆ ರೂಪಗೊಂಡಿದೆ ಎಂಬುದನ್ನು ಈ ಪ್ರಕರಣದಲ್ಲಿ ತೋರಿಸಿದ್ದೇವೆ.

ಮರಾಠಿ ಜೈಮಿನಿ ಆಶ್ವಮೇಧ ಕಾವ್ಯವನ್ನು ಅಲ್ಲಲ್ಲಿ ಕನ್ನಡ ಜೈಮಿನಿ ಭಾರತದೊಡನೆ ಹೋಲಿಸಿ ನೋಡಲಾಗಿದೆ. ಪ್ರತಿಪದ್ಯವನ್ನು ಹೋಲಿಸಿ ನೋಡಿಲ್ಲ. ಅದೊಂದು ಸ್ವತಂತ್ರ ಅಭ್ಯಾಸದ ವಿಷಯವೇ ಆಗಿದೆ. ಇಲ್ಲಿ ಸ್ಥೂಲಮಾನದಿಂದ ಹೋಲಿಸಿ ಎರಡೂ ಕಾವ್ಯಗಳ ಗುಣಗ್ರಹಣವನ್ನು ಮಾಡಿದ್ದೇವೆ.

ಸಂಸ್ಕೃತ, ತೆಲುಗು ಮತ್ತು ಮರಾಠಿ ಕಾವ್ಯಗಳಲ್ಲಿ ಕಥಾನಿರೂಪಣೆಯ ದ್ರುತ ಗತಿಯು ಪುರಾಣಗಳಲ್ಲಿಯ ಕಥಾನಿರೂಪಣೆಯ ರೀತಿಯನ್ನು ಹೋಲುತ್ತದೆ. ಆದುದ ರಿಂದ ಈ ಪ್ರಕರಣದಲ್ಲಿ ಸಂಸ್ಕೃತ ಜೈಮಿನಿ ಭಾರತವನ್ನು ಕೆಲವೆಡೆಗೆ ಸಂಸ್ಕೃತ **ಪುರಾಣ** ಎಂದು ಕರೆದಿದ್ದೇವೆ.

ಈ ಪುರಾಣ ಗ್ರಥನ ರೀತಿಯನ್ನು ಕವಿ ಲಕ್ಷ್ಮೀಶನು ಕಾವ್ಯವಾಗಿ ಮಾಡಿದ್ದಾನೆ. ಅಷ್ಟಾದಶ ವರ್ಣನೆಗಳನ್ನು ಸೇರಿಸಿ ಕಾವ್ಯಕ್ಕೆ ಬೆಡಗು, ಸೊಬಗು ರಮ್ಯತೆಯ ಸಂಸ್ಕಾರ ವನ್ನು ಕೊಟ್ಟಿದ್ದಾನೆ.

ಸಂಸ್ಕೃತ ಜೈಮಿನಿ ಭಾರತ ಮತ್ತು ಕನ್ನಡ ಜೈಮಿನಿ ಭಾರತ ಎರಡೂ ಕಾವ್ಯ ಲಕ್ಷಣಯುಕ್ತವಾಗಿವೆ ಎಂಬುದನ್ನು 'ಕಾವ್ಯವಸ್ತು' ಎಂಬ ಎರಡನೆಯ ಪ್ರಕರಣದಲ್ಲಿ ವಿವರವಾಗಿ ವಿಚಾರಮಾಡಿದ್ದೇವೆ. ಆದುದರಿಂದ ಸಂ.ಜೈ. ಭಾರತದಲ್ಲಿ **ಇಲ್ಲದ ಯಾವ ಲಕ್ಷಣಗಳು** ಕ.ಜೈ.ಭಾರತದಲ್ಲಿ ಬಂದಿವೆ, ಅವುಗಳಿಂದ ಕಾವ್ಯದ ಸೌಂದರ್ಯಕ್ಕೆ ಏನು ಹೆಚ್ಚಳವಾಗಿದೆ ಎಂಬುದನ್ನು ಮಾತ್ರ ಈ ಪ್ರಕರಣದಲ್ಲಿ ವಿಮರ್ಶಿಸುತ್ತೇವೆ.

ಕನ್ನಡ ಜೈಮಿನಿ ಭಾರತ ಕಾವ್ಯವನ್ನು ಭರತನಾಟ್ಯ ಶಾಸ್ತ್ರವು ಹೇಳುವ ಮುಖ, ಪ್ರತಿಮುಖ, ಗರ್ಭ, ಅವಮರ್ಶ ಮತ್ತು ನಿರ್ವಹಣ ಎಂಬ ಪಂಚಸಂಧಿಗಳಲ್ಲಿ ಒಡೆದು ಕೊಂಡು ಪ್ರತಿಸಂಧಿಯಲ್ಲಿ ಯಾವ ಸಂಧ್ಯಂಗ ಲಕ್ಷಣಗಳು ಹೆಚ್ಚಾಗಿ ಬಂದವು, ಏನೇನು ಬದಲಾವಣೆಗಳನ್ನು ಕವಿ ಲಕ್ಷ್ಮೀಶನು ಮಾಡಿಕೊಂಡಿದ್ದಾನೆ ಎಂಬುದನ್ನು ತೋರಿಸುವ ಪ್ರಯೋಗವನ್ನು ಮುಂದಿನ ಪುಟಗಳಲ್ಲಿ ನಾವು ಮಾಡುತ್ತೇವೆ.

## ವ್ಯಾಸ ಮಹಾಭಾರತ ಮತ್ತು ಜೈಮಿನಿ ಭಾರತಗಳಲ್ಲಿಯ ಆಶ್ವಮೇಧಿಕ ಪರ್ವ

ವ್ಯಾಸ ಮಹಾಭಾರತದ ಆಶ್ವಮೇಧಿಕ ಪರ್ವದಲ್ಲಿ ೯೨ ಅಧ್ಯಾಯಗಳಿವೆ. ಜೈಮಿನಿ ಭಾರತದ ಆಶ್ವಮೇಧಿಕ ಪರ್ವದ ಅಧ್ಯಾಯಗಳ ಸಂಖ್ಯೆ ೬೮. ವ್ಯಾಸಭಾರತದಲ್ಲಿ ಜನ ಮೇಜಯನಿಗೆ ಈ ಕಥೆಯನ್ನು ವೈಶಂಪಾಯನ ಮುನಿ ಹೇಳುತ್ತಾನೆ; ಜೈಮಿನಿ ಭಾರತ ದಲ್ಲಿ ಜೈಮಿನಿ ಮುನಿ ಹೇಳುತ್ತಾನೆ.

ಧರ್ಮನು ತಪಸ್ಸಿಗೆ ಹೋಗುವ ಇಚ್ಛೆಯನ್ನು ವ್ಯಕ್ತಪಡಿಸುವುದು, ವ್ಯಾಸರು ಅವನಿಗೆ ಅಶ್ವಮೇಧ–ರಾಜಸೂಯ ಯಾಗ ಮಾಡಲು ಹೇಳುವುದು, ಧರ್ಮನು ಅದಕ್ಕೆ ಹಣವಿಲ್ಲ ಎನ್ನುವುದು, ಬಳಿಕ ಅವನು ವ್ಯಾಸರೊಡಗೂಡಿ ಹಿಮಾಲಯಕ್ಕೆ ಹೋಗಿ ದ್ರವ್ಯವನ್ನು ತರುವುದು, ಪೌರ್ಣಿಮೆಯ ದಿವಸ ಯಜ್ಞದೀಕ್ಷಿತನಾಗುವುದು, ಅರ್ಜುನನು ಅಶ್ವರಕ್ಷಣೆಗೆ ಹೊರಡುವುದು, ಅರ್ಜುನನೆಸಗಿದ ಯುದ್ಧಗಳನ್ನು ಶ್ರೀಕೃಷ್ಣನು ಧರ್ಮ ರಾಯನಿಗೆ ತಿಳಿಸುವುದು ಮತ್ತು ನಕುಲೋಪಾಖ್ಯಾನ ಇವುಗಳು ವ್ಯಾಸಭಾರತ, ಜೈಮಿನಿ ಭಾರತ ಎರಡರಲ್ಲಿಯೂ ಸಾಮಾನ್ಯವಾಗಿವೆ.

ಧೃತರಾಷ್ಟ್ರನು ಧರ್ಮನಿಗೆ ಸಮಾಧಾನದ ಮಾತುಗಳನ್ನಾಡುವುದು, ತಾನು

ವಿದುರನ ಹಿತೋಕ್ತಿಗಳನ್ನು ಕೇಳದೇ ದುರ್ಯೋಧನನೆಂದಂತೆ ನಡೆದು ಕೆಟ್ಟೆನಲ್ಲಾ ಎಂದು ಪಶ್ಚಾತ್ತಾಪಪಡುವುದು, ಕೃಷ್ಣನಿಂದ ಧರ್ಮನಿಗೆ ಬ್ರಹ್ಮಜ್ಞಾನದ ಉಪದೇಶ, ಸಿದ್ಧ ಮತ್ತು ಕಾಶ್ಯಪರಲ್ಲಿ ಬ್ರಹ್ಮವನ್ನೂ ಜನನ-ಮರಣಗಳನ್ನೂ ಕುರಿತು ನಡೆದ ಸಂವಾದ, ಧರ್ಮಚರ್ಚೆ, ಮಹರ್ಷಿ ಉತ್ತಂಕನ ಸುದೀರ್ಘ ಕಥಾನಕ, ಕೃಷ್ಣನು ಅಶ್ವಮೇಧದ ತಿಥಿಯನ್ನು ತಿಳಿದು, ತಾನಾಗಿಯೇ ಸುಭದ್ರೆಯೊಡನೆ ಹಸ್ತಿನಾವತಿಗೆ ಆಗಮಿಸುವುದು, ಪರೀಕ್ಷಿತನ ಮರಣ ಮತ್ತು ಕೃಷ್ಣನಿಂದ ಪುನರುಜ್ಜೀವನ ಮೊದಲಾದ ವಿವರಗಳು ಕೇವಲ ವ್ಯಾಸಭಾರತದಲ್ಲಿ ಬಂದಿವೆ. ಇವುಗಳ ಸುಳಿವು ಸಹ ಜೈಮಿನಿ ಭಾರತದಲ್ಲಿ ಇಲ್ಲ.

ವ್ಯಾಸರ ಯಜ್ಞಾಶ್ವವು ಉತ್ತರದಿಂದ ಪೂರ್ವದೆಡೆಗೆ ಸಂಚಾರ ಹೊರಡುತ್ತದೆ; ಜೈಮಿನಿಯ ಯಜ್ಞಾಶ್ವವು ದಕ್ಷಿಣ ದಿಕ್ಕನ್ನು ಕುರಿತು ಪ್ರಯಾಣ ಬೆಳೆಸುತ್ತದೆ.

ಹಯೋ ಗತೋ ದಕ್ಷಿಣಾಶಾಂ ಪ್ರೇರಿತಃ ಕೃಷ್ಣವೀಕ್ಷಣೈಃ ।

—ಅ. ೧೪, ಶ್ಲೋ ೭೧

ಆದುದರಿಂದ ವ್ಯಾಸಭಾರತದಲ್ಲಿ ಅರ್ಜುನನು ಎದುರಿಸುವ ರಾಜರನ್ನು ಜೈಮಿನಿ ಭಾರತದಲ್ಲಿ ಕಾಣಲಾರೆವು. ಬಭ್ರುವಾಹನನ ಆಖ್ಯಾನವು ಮಾತ್ರ ಎರಡರಲ್ಲಿಯೂ ಬಂದಿದೆ. ವ್ಯಾಸರ ಅರ್ಜುನನ ಪರಿಭ್ರಮಣವು-ತ್ರಿಗರ್ತ, ವಜ್ರದತ್ತ, ಸೈಂಧವ, ಬಭ್ರುವಾಹನ, ಮಗಧ, ವಂಗ, ಪುಂಡ್ರ, ಕೋಸಲ, ಮ್ಲೇಚ್ಛ, ಚೇದಿ, ಕಾಶಿ, ಕಿರಾತ, ತಂಗರ ದಶಾರ್ಣ, ನಿಷಾಧ, ದ್ರವಿಡ, ಆಂಧ್ರ, ಮಾಹಿಷಿಕ, ಕೊಲ್ಲಾ ಪರ್ವತ, ಗೋಕರ್ಣ ಇತ್ಯಾದಿ ದೇಶಗಳನ್ನು ಸುತ್ತಾಡಿ-ಪುಷ್ಯ ನಕ್ಷತ್ರದಿಂದೊಡಗೂಡಿದ ಮಾಘ ಶುದ್ಧ ದ್ವಾದಶಿಯಂದು ಮುಗಿಯುತ್ತದೆ. ದಕ್ಷಿಣಾಭಿಮುಖಿಯಾದ ಜೈಮಿನಿ ಭಾರತದ ಯಜ್ಞಾಶ್ವವು ನೀಲಧ್ವಜ, ಹಂಸಧ್ವಜ, ಪ್ರಮೀಳಾ, ಭೀಷಣ, ವೀರವರ್ಮ, ಮಯೂರಧ್ವಜ, ಚಂದ್ರಹಾಸ, ಬಕದಾಲ್ಭ್ಯ ಇವರ ರಾಜ್ಯಪ್ರದೇಶಗಳನ್ನು ಹೊಕ್ಕು ಹೊರಡುವುದು.

ವ್ಯಾಸರ ಬಭ್ರುವಾಹನನ ಕಥಾನಕದಲ್ಲಿ ಉಲೂಪಿ ಬಭ್ರುವಾಹನನಿಗೆ ಅರ್ಜುನನೊಡನೆ ಯುದ್ಧಮಾಡುವಂತೆ ಸಲಹೆ ನೀಡುತ್ತಾಳೆ. ಮರಣ ಹೊಂದಿದ ಅರ್ಜುನನನ್ನು ಸಂಜೀವಕ ಮಣಿಯಿಂದ ಎಬ್ಬಿಸುವವಳೂ ಅವಳೆ. ಇದಕ್ಕೆ ಅವಳು ''ಭೀಷ್ಮನಿಗೆ ಶಿಖಂಡಿಯನ್ನು ಎದುರು ಮಾಡಿ ಅವನನ್ನು ಕೊಂದವನು ಅರ್ಜುನ. ಗಂಗೆ ಕಾವೇರಿಯರ ಶಾಪದ ವಿಮೋಚನೆಗಾಗಿ ಇದನ್ನೆಲ್ಲ ನಾನು ಮಾಡಿದೆನು' ಎಂದು ಕಾರಣವನ್ನು ಕೊಡುತ್ತಾಳೆ. ಜೈಮಿನಿ ಭಾರತದಲ್ಲಿ ಕಾಣಿಸಿಕೊಳ್ಳುವ ಜ್ವಾಲೆಯ ವಿಷಯವಾಗಲಿ, ಶ್ರೀಕೃಷ್ಣನು ಬಕದಾಲ್ಭ್ಯನ ಅರಣ್ಯದಿಂದ ಅರ್ಜುನ ವೃಷಕೇತುಗಳ ರುಂಡಗಳನ್ನು ತರಿಸಿ ಅವರನ್ನು ಎಚ್ಚರಿಸುವ ಮಾತಾಗಲಿ ವ್ಯಾಸರಲ್ಲಿ ಸಿಕ್ಕುವುದಿಲ್ಲ. ಜೈಮಿನಿ ಭಾರತದ ಬಭ್ರುವಾಹನನ ಕಥಾನಕದಲ್ಲಿ ಕಂಡುಬರುವ ಮಾನಸಿಕ ಹೋರಾಟವು ವ್ಯಾಸಭಾರತದಲ್ಲಿ ಕಂಡುಬರುವುದಿಲ್ಲ.

ವ್ಯಾಸಕಥಿತ ಅಶ್ವಮೇಧವು ಕರ್ಮಪ್ರಧಾನವಾಗಿದ್ದು ಕ್ಷಾತ್ರ ಪೌರುಷದ ಹಿರಿಮೆಯನ್ನು ಎತ್ತಿ ತೋರಿಸುವುದಾದರೆ, ಜೈಮಿನಿ ಕಥಿತ ಅಶ್ವಮೇಧ ಯಜ್ಞವು ಭಕ್ತಿಪ್ರಧಾನವಾಗಿದ್ದು ಶ್ರೀಕೃಷ್ಣ ಮಹಿಮೆಯನ್ನು ಸಾರುತ್ತದೆ.

## ತಿಮ್ಮಣ್ಣ ಕವಿಯ ಭಾರತ ಮತ್ತು ಲಕ್ಷ್ಮೀಶನ ಜೈಮಿನಿ ಭಾರತ

ತಿಮ್ಮಣ್ಣ ಕವಿ, ಕುಮಾರವ್ಯಾಸನು ಹೇಳದೇ ಉಳಿಸಿದ್ದ ಮಹಾಭಾರತದ ಯುದ್ಧೋತ್ತರ ಕಥಾಭಾಗವನ್ನು ಬರೆದು ಪೂರಯಿಸಿದ್ದಾನೆ. ಅದು 'ಕೃಷ್ಣರಾಯ ಭಾರತ ಕಥಾಮಂಜರಿ' ಎಂದು ಹೆಸರುಗೊಂಡಿದೆ. ಗದಾಪರ್ವದ ತರುವಾಯದ ಕಥೆಯ ಎಂಟು ಪರ್ವಗಳು ಇದರಲ್ಲಿವೆ:

| | | | | | |
|---|---|---|---|---|---|
| ೧. | ಸ್ತ್ರೀಪರ್ವ | ೪ | ಸಂಧಿಗಳು | ೨೪೩ | ಪದ್ಯಗಳು |
| ೨. | ಶಾಂತಿಪರ್ವ | ೧೧ | ,, | ೧೦೦೭ | ,, |
| ೩. | ಅನುಶಾಸನ ಪರ್ವ | ೧೧ | ,, | ೯೪೮ | ,, |
| ೪. | ಅಶ್ವಮೇಧಿಕ ಪರ್ವ | ೯ | ,, | ೯೬೪ | ,, |
| ೫. | ಆಶ್ರಮವಾಸ ಪರ್ವ | ೪ | ,, | ೪೦೮ | ,, |
| ೬. | ಮೌಸಲ ಪರ್ವ | ೩ | ,, | ೨೪೦ | ,, |
| ೭. | ಮಹಾಪ್ರಸ್ಥಾನ ಪರ್ವ | ೧ | ,, | ೭೭ | ,, |
| ೮. | ಸ್ವರ್ಗಾರೋಹಣ ಪರ್ವ | ೧ | ,, | ೯೪ | ,, |

ಈ ಎಂಟು ಪರ್ವಗಳ ಭಾರತಕ್ಕೆ ವ್ಯಾಸಭಾರತವು ಮೂಲವಾಗಿದೆ. ವ್ಯಾಸ ಭಾರತದಲ್ಲಿಯ ಹಲವು ಅಧ್ಯಾಯಗಳನ್ನು ಇಲ್ಲಿ ಒಂದೊಂದು ಅಧ್ಯಾಯದಲ್ಲಿ ಸಂಗ್ರಹಿಸಲಾಗಿದೆ. ಈ ಭಾರತವನ್ನು ಕುರಿತು, 'ತಿಮ್ಮಣ್ಣ ಕವಿ ಆಯ್ದುಕೊಂಡ ಕಥಾವಸ್ತು ರಸಭರಿತವಾದುದಲ್ಲ. ಅಲ್ಲಿ ಬರುವ ರಾಜರ ಅಥವಾ ಋಷಿಗಳ ಉಪಾಖ್ಯಾನಗಳಲ್ಲಿ ಲೌಕಿಕ ಅಥವಾ ಪಾರಲೌಕಿಕವಾದ ಧರ್ಮಜಿಜ್ಞಾಸೆ, ರಾಜನೀತಿ, ವೇದಾಂತವಿಚಾರ ಇವೇ ಹೆಚ್ಚು. ಹೃದಯದ ರಸಸ್ಥಾನಗಳನ್ನು ಮಿಡಿಯುವ ಸನ್ನಿವೇಶಗಳು ಇಲ್ಲಿ ಅಪೂರ್ವ. ಇಂತಹ ನೀರಸಭಾಗವನ್ನಾಯ್ದುಕೊಂಡುದೇ ಅನ್ಯಾಯವೆಂದರೆ ಆ ಭಾಗವನ್ನು ಸಂಸ್ಕೃತದಿಂದ ನೇರವಾಗಿ ತೆಗೆದುಕೊಳ್ಳದೇ ಕವಿ ತೆಲುಗುಕವಿಗಳನ್ನು ಆಶ್ರಯಿಸಿದ್ದಾನೆ' ಎಂಬುದಾಗಿ ತ. ಸು. ಶಾಮರಾಯರು ಅಭಿಪ್ರಾಯಪಟ್ಟಿದ್ದಾರೆ.[1] ಈ ವಾದದಲ್ಲಿ, ತಿಮ್ಮಣ್ಣ ಕವಿಯ ವ್ಯಾಸಭಾರತಾಭ್ಯಾಸವು ನೇರವಾದುದಾಗಿರದೇ ತೆಲುಗು ಸಾಹಿತ್ಯದ ಮುಖಾಂತರವಾಗಿದೆ ಎಂಬ ಮಾತನ್ನೇನೊ ಒಪ್ಪಬಹುದು. ತೆಲುಗು ಬಲ್ಲಂತಹ ಕವಿ ತೆಲುಗು ಕಾವ್ಯಗಳನ್ನು ಅಭ್ಯಸಿಸುವುದು ಸಹಜ. ಆದರೆ ಅವುಗಳನ್ನು ಆಶ್ರಯಿಸಿದ್ದರಿಂದಲೇ ತಿಮ್ಮಣ್ಣ ಕವಿಯ ಭಾರತವು ನೀರಸವಾಗಿದೆ ಎಂದೆನ್ನುವುದು ಒಪ್ಪತಕ್ಕಂತಹ ಮಾತಲ್ಲ. ಏಕೆಂದರೆ 'ತೆಲುಗು ಚಂಪೂಭಾರತ ನನ್ನಯ್ಯ ಕವಿಯಿಂದ ಆರಂಭವಾಗಿ,

1 'ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ', ಪು. ೩೫೩.

ತಿಕ್ಕಣಕವಿಯಲ್ಲಿ ಕೊನೆಗಂಡಿದೆ. ಅದು ಅತ್ಯಂತ ರಸಭರಿತವಾದುದು ಎಂಬುದರಲ್ಲಿ ಸಂದೇಹವಿಲ್ಲ' ಎಂಬ ಅಭಿಪ್ರಾಯವನ್ನು ತ. ಸು. ಶಾಮರಾಯರೇ ಮಂಡಿಸಿದ್ದಾರೆ.[1] ಆದುದರಿಂದ ನಾವು, ತಿಮ್ಮಣ್ಣ ಕವಿಯ ಕನ್ನಡ ಭಾರತವು ಧರ್ಮಜಿಜ್ಞಾಸೆ, ರಾಜನೀತಿ, ವೇದಾಂತವಿಚಾರಗಳನ್ನು ವಿವೇಚಿಸುವಲ್ಲಿ ನೀರಸವಾಗಿದೆ ಎಂಬ ಅಭಿಪ್ರಾಯವನ್ನು ಇಟ್ಟುಕೊಳ್ಳಲಾದೀತೇ ಹೊರತು ನೀರಸತನಕ್ಕೆ ವ್ಯಾಸಭಾರತವಾಗಲಿ, ತೆಲುಗು ಭಾರತವಾಗಲಿ ಕಾರಣವೆಂಬ ವಾದವನ್ನು ನಿರಾಕರಿಸಬಹುದಲ್ಲವೇ ?

ಈ ತಿಮ್ಮಣ್ಣ ಕವಿ ವಿಜಯನಗರದ ಕೃಷ್ಣದೇವರಾಯನ (೧೫೦೯-೧೫೨೯) ಆಸ್ಥಾನಕವಿ. 'ಕರ್ನಾಟಕ ಕವಿಕುಲಸಾರ್ವಭೌಮ' ಎಂಬ ಬಿರುದು ಇವನಿಗಿದ್ದಂತೆ ತೋರುತ್ತದೆ. ಈತನ ಕಾಲವನ್ನು ಕವಿ ಚರಿತ್ರಕಾರರು ಕ್ರಿ. ಶ. ಸು. ೧೫೧೦ ಎಂದಿದ್ದಾರೆಯೇ ಹೊರತು ಆಧಾರಗಳಿಂದ ಖಚಿತಪಡಿಸಿಲ್ಲ. ಆದುದರಿಂದ ಈ ಕವಿಯ ಕಾಲದ ಕೆಳಗಿನ ಗಡುವು ಮೇಲಿನ ಗಡುವುಗಳು ಹಿಂದೆಮುಂದೆ ಸರಿದಾಡುವುದು ಸಂಭವನೀಯ.

ವ್ಯಾಸಭಾರತದ ೯೨ ಅಧ್ಯಾಯಗಳ ಆಶ್ವಮೇಧಿಕ ಪರ್ವವನ್ನು ಕಥಾದೃಷ್ಟಿಯಿಂದ ೯ ಸಂಧಿಗಳಲ್ಲಿ ತಿಮ್ಮಣ್ಣಕವಿ ಅಳವಡಿಸಿದ್ದಾನೆ.

| ವ್ಯಾಸಭಾರತ | ವಿಷಯ | ಕನ್ನಡ ಭಾರತ |
|---|---|---|
| ಅ. ೧-೧೦ | ವ್ಯಾಸಯುಧಿಷ್ಠಿರ ಸಂಭಾಷಣೆ, ಮರುತ್ತನ ಆಖ್ಯಾನ | ಸಂ. ೧. |
| ಅ. ೧೧-೫೧ | ಶ್ರೀಕೃಷ್ಣನಿಂದ ಯುಧಿಷ್ಠಿರನ ಚಿಂತಾ ಪರಿಹಾರ, ಅರ್ಜುನನಿಗೆ ಉಪದೇಶ | ಸಂ. ೨. |
| ಅ. ೫೨-೬೫ | ಉತ್ತಂಕನ ಕಥೆ | ಸಂ. ೩. |
| ಅ. ೬೬-೭೧ | ಪರೀಕ್ಷಿತ ಜನ್ಮಕಥನ | ಸಂ. ೪. |
| ಅ. ೭೨-೭೭ | ಯಜ್ಞಸಾಮಗ್ರಿ ಸಂಪಾದನೆ | ಸಂ. ೫. |
| ಅ. ೭೮-೮೧ | ಅರ್ಜುನ-ಬಭ್ರುವಾಹನ ಯುದ್ಧ | ಸಂ. ೬. |
| ಅ. ೮೨-೮೭ | ಮಗಧನ ಪರಾಭವ, ಯಜ್ಞಾಶ್ವದ ಇತರ ದೇಶ ಸಂಚಾರ | ಸಂ. ೭. |
| ಅ. ೮೮-೮೯ | ಅಶ್ವಮೇಧ ಯಾಗದ ಆರಂಭ-ಸಮಾಪ್ತಿ | ಸಂ. ೮. |
| ಅ. ೯೦-೯೨ | ನಕುಲೋಪಾಖ್ಯಾನ. | ಸಂ. ೯. |

ಕಾವ್ಯದೃಷ್ಟಿಯಿಂದ ತಿಮ್ಮಣ್ಣ ಕವಿಯ ಭಾರತ ಹಾಗೂ ಲಕ್ಷ್ಮೀಶನ ಜೈಮಿನಿ ಭಾರತಗಳನ್ನು ತುಲನೆ ಮಾಡಿದರೆ ಲಕ್ಷ್ಮೀಶನ ಕೃತಿ ಸರಸವಾಗಿದೆ ಎಂದು ಒಪ್ಪಲೇಬೇಕಾಗುತ್ತದೆ. ಲಕ್ಷ್ಮೀಶನು ತನ್ನ ಕಾವ್ಯದಲ್ಲಿ ಕಥಾವಸ್ತುವಿಗೆ ಚೌಕಟ್ಟು ಕೊಡಿಸುವಲ್ಲಿ ಚಾತುರ್ಯ, ಪಾತ್ರಚಿತ್ರಣದಲ್ಲಿ ಕೌಶಲ್ಯ, ವರ್ಣನೆಯಲ್ಲಿ ವೈವಿಧ್ಯ ವೈಖರಿ ತೋರಿ

[1] ಅದೇ. ಪು. ೩೫೩.

ದ್ದಾನೆ. ಓದುಗರ ಸಕುತೂಹಲ ಆಸಕ್ತಿಯನ್ನು ಸದಾ ಜಾಗೃತವಾಗಿರಿಸುವ ಈ ಗುಣ ತಿಮ್ಮಣ್ಣ ಕವಿಯಲ್ಲಿ ಕಾಣುವುದಿಲ್ಲ. ಅವನ ಕಾವ್ಯವು ಹೆಚ್ಚಾಗಿ ಪುರಾಣಕಥನದ ರೀತಿಯನ್ನೇ ಅನುಸರಿಸಿದೆ. ಪರೀಕ್ಷಿತನ ಜನನ, ಅರ್ಜುನ–ಬಭ್ರುವಾಹನನ ಯುದ್ಧ, ಯಜ್ಞಕಾಲದಲ್ಲಿ ವಸಂತಾಗಮ, ಅಶ್ವಸಂಚಾರ ಸಮಯದಲ್ಲಿ ಬರುವ ವಿಂಧ್ಯಪರ್ವತ ಇಂತಹ ಸನ್ನಿವೇಶಗಳನ್ನು ಮಾತ್ರ ತಿಮ್ಮಣ್ಣನು ಕವಿಹೃದಯದಿಂದ ಚಿತ್ರಿಸಿದ್ದಾನೆ. ವಿಂಧ್ಯಗಿರಿ, ವಸಂತ ಋತುಗಳ ವರ್ಣನೆಯು ವ್ಯಾಸಭಾರತದಲ್ಲಿ ಇಲ್ಲ. ಮಧುಮಾಸ ಪ್ರಿಯ ಕನ್ನಡ ಕವಿಗಳ ಗುಂಪಿಗೆ ಸೇರಿದ ತಿಮ್ಮಣ್ಣ ಕವಿ,

> ಕವಿದು ತೆಂಕಣಗಾಳಿಯೆಂದೆನಿ
> ಸುವ ಮಹಾತಸ್ಕರನು ವರವನ
> ಯುವತಿಯಂಗದ ಕಂಠಭೂಷಾವಳಿಯ ಕೀಳುತಿರೆ ||
> ಅವನಿಗುದುರಿದ ಹೊನ್ನತಾಳಿಗ
> ಳವೊಲು ಹಣ್ಣೆಲೆಗಳು ವಿರಾಜಿಸಿ
> ದವು ನಿರೀಕ್ಷಿಸಿಯದನು ಕೋಗಿಲೆಯಾಗಕೂಗಿದುದು || —ಸಂ. ೫, ಪ. ೨.

ಎಂದು ಮುಂತಾಗಿ ಉತ್ಪ್ರೇಕ್ಷೆಯಿಂದಲಂಕರಿಸುತ್ತ ೧೫ ಪದ್ಯಗಳಷ್ಟು ವರ್ಣನೆಯನ್ನು ಬೆಳಸಿದ್ದಾನೆ.

ಲಕ್ಷ್ಮೀಶನ ಜೈಮಿನಿ ಭಾರತದಲ್ಲಿ 'ಬರುತಿರ್ದದಾಹಯಂ ಬಳಿಕ ದಕ್ಷಿಣದಿಶಾ ಮುಖವಾಗಿ' (೮.೧೪) ಎಂಬ ಮಾತಿದೆ. ನೀಲಧ್ವಜ, ಹಂಸಧ್ವಜ, ಪ್ರಮೀಳೆ, ಬಭ್ರುವಾಹನ, ಮಯೂರಧ್ವಜ, ಚಂದ್ರಹಾಸ ಇವರ ರಾಜ್ಯಗಳನ್ನು ಸುತ್ತಾಡಿ ಯಜ್ಞಾಶ್ವವು ಹಸ್ತಿನಾವತಿಗೆ ಬರುತ್ತದೆ. ಆದರೆ ತಿಮ್ಮಣ್ಣ ಕವಿಯ ಯಜ್ಞಾಶ್ವವು ವ್ಯಾಸರ ಕುದುರೆಯನ್ನನುಸರಿಸಿ ಉತ್ತರಾಭಿಮುಖವಾಗಿ (೫–೩೨) ತ್ರಿಗರ್ತ, ವಜ್ರದತ್ತ ರಾಜ್ಯ, ಬಭ್ರುವಾಹನನ ರಾಜ್ಯಗಳನ್ನು ತಿರುಗಿ ಸಿಂಧುದೇಶ, ಕಳಿಂಗ, ಮ್ಲೇಂಛ, ಚೇದಿ ದೇಶಗಳನ್ನು ಸಂಚರಿಸುತ್ತದೆ ಮತ್ತು ಆಂಧ್ರ, ಪೌಂಡ್ರ, ದ್ರವಿಡ, ಕೇರಳ, ಕುಂತಳ ದೇಶಗಳಲ್ಲಿ ಅಡ್ಡಾಡಿ ಮಾಘ ಶುದ್ಧ ದ್ವಾದಶಿಯಂದು ತಿರುಗಾಟವನ್ನು ಮುಗಿಸುತ್ತದೆ.

> ಜನಪದಂಗಳೊಳಿರದೆ ಪೋಯಿತು
> ಮುನಿಯ ತೆರದಲಿ ಘೋರ ಕಾನನ
> ವನು ಪೊಗುತ ಪೊರಮಟ್ಟು ಪೋಯಿತು ವಾಯುವಂದದಲಿ ||
> ಘನಗಿರಿಯ ದಾಂಟಿದುದು ಕಾದಂ
> ಬಿನಿಯ ತೆರದಲಿ ನದಿಯ ದಾಂಟಿತು
> ಜನಪ ನಾವಿಕನಂತೆ ಯಜ್ಞತುರಂಗ ನಿಮಿಷದಲಿ || —ಸಂ. ೫, ಪ. ೩೧

ಎಂದು ತಿಮ್ಮಣ್ಣ ಕವಿ ಯಜ್ಞಾಶ್ವದ ಪರಿಭ್ರಮಣದ ಆರಂಭವನ್ನು ಸುಂದರ ಸಹಜ ರೂಪಗಳಿಂದ ಸೂಚಿಸುತ್ತಾನೆ.

ಲಕ್ಷ್ಮೀಶನ ಜೈಮಿನಿ ಭಾರತದಲ್ಲಿ ಕುದುರೆ ಸಿಂಧು ದೇಶಕ್ಕೆ ಹೋಗುವುದು ಎಲ್ಲಕ್ಕೂ ಕೊನೆಗೆ; ಅಲ್ಲದೆ ಅಲ್ಲಿ ಯುದ್ಧ ಘಟಿಸುವುದೂ ಇಲ್ಲ. ಆದರೆ ತಿಮ್ಮಣ್ಣ ಕವಿಯ ಕುದುರೆಯ ಸಂಚಾರಕ್ರಮದಲ್ಲಿ ತ್ರಿಗರ್ತ ಪ್ರಾಗ್ಜ್ಯೋತಿಷಗಳ ತರುವಾಯ ಸಿಂಧು

ದೇಶ; ನಾಲ್ಕನೆಯದೇ ಮಣಿಪುರ. ಸಿಂಧು ದೇಶದಲ್ಲಿಯೂ ಅರ್ಜುನನಿಗೆ ಹೋರಾಟದ ಪ್ರಸಂಗವಿದೆ; ಘನಘೋರವೇ ಆಗುತ್ತದೆ ಯುದ್ಧ. ಪ್ರತಿಪಕ್ಷ ಎಷ್ಟು ಪ್ರಬಲವೆಂದರೆ ಅರ್ಜುನ ಮೂರ್ಛಿತನಾಗಿ ಗಾಂಡೀವ ಧನುಸ್ಸು ಅವನ ಕೈಯಿಂದ ಜಾರಿ ಬೀಳುತ್ತದೆ (೫. ೮೬-೮೮). ಮುಂದೆ ಮಣಿಪುರಕ್ಕೆ ಯಜ್ಞಾಶ್ವ ಹೋದಾಗ ಬಭ್ರುವಾಹನನನ್ನು ಯುದ್ಧಕ್ಕೆ ಹುರಿದುಂಬಿಸಿದವಳು ಉಲೂಪಿ ಎಂದು ವ್ಯಾಸರು ಹೇಳಿದಂತೆಯೆ ತಿಮ್ಮಣ್ಣನೂ ಹೇಳುತ್ತಾನೆ. ಅಲ್ಲಿ ಅರ್ಜುನನೊಬ್ಬನೇ ಮಡಿಯುತ್ತಾನೆ; ವೃಷಕೇತುವಿನ ಪಾತ್ರವೇ ಅಲ್ಲಿಲ್ಲ. ಅರ್ಜುನನಿಗೆ ಸಾವು, ಬಭ್ರುವಾಹನನಿಗೆ ಮೈಮರೆವು ಸಂಭವಿಸಿದಾಗ, ಚಿತ್ರಾಂಗದೆ ಉಲೂಪಿಯನ್ನು ಛೀಗಳೆದು ಮಾತನಾಡುತ್ತಾಳೆ. ಕೊನೆಗೆ ಉಲೂಪಿ ಸಂಜೀವಕ ಮಣಿಯಿಂದ ಅರ್ಜುನನನ್ನು ಎಬ್ಬಿಸುತ್ತಾಳೆ. ಇದನ್ನೆಲ್ಲ ತಾನು ಮಾಡಿದುದು ಗಂಗೆಯಿಂದ ತಟ್ಟಬಹುದಾಗಿದ್ದ ಶಾಪದ ಪರಿಹಾರಕ್ಕಾಗಿ ಎಂದು ಅವಳು ಹೇಳುತ್ತಾಳೆ. ಇದರಲ್ಲಿ ಜೈಮಿನಿಯಲ್ಲಿಯಂತೆ ಕೃಷ್ಣನ ಕೈವಾಡ-ಪ್ರವೇಶ ಕೂಡ ಇಲ್ಲ. ತಿಮ್ಮಣ್ಣನ ಉಲೂಪಿ ಶಕ್ತಿಮಂತಳಾಗಿದ್ದಾಳೆ.

ತಿಮ್ಮಣ್ಣ ಕವಿಯ ಭಾರತದಲ್ಲಿ ಅರ್ಜುನ ಒಬ್ಬನೇ ಸೈನ್ಯದೊಂದಿಗೆ ಅಶ್ವರಕ್ಷಣೆಗೆ ಹೊರಟು ಪರಿಭ್ರಮಣವನ್ನು ಮುಗಿಸುತ್ತಾನೆ. ಭೀಮ, ವೃಷಕೇತು, ಪ್ರದ್ಯುಮ್ನ ಮೊದಲಾದ ಯಾವ ಪಾತ್ರವೂ ಅಲ್ಲಿ ಬರುವುದಿಲ್ಲ. ಯಾವ ಯುದ್ಧ ಪ್ರಸಂಗದಲ್ಲಿಯೂ ಅರ್ಜುನನ ಸಹಾಯಕ್ಕೆ ಶ್ರೀಕೃಷ್ಣನು ಬರುವುದಿಲ್ಲ. ಕುಮಾರವ್ಯಾಸನ ಕಾವ್ಯದ ಉಸಿರಾದ ಶ್ರೀಕೃಷ್ಣನಿಗೆ ತಿಮ್ಮಣ್ಣನ ಕಾವ್ಯದಲ್ಲಿ ಗೌಣಸ್ಥಾನ ಸಿಕ್ಕಿದೆ. ಅಲ್ಲೊಮ್ಮೆ ಇಲ್ಲೊಮ್ಮೆ ಧರ್ಮರಾಜನಿಂದ, ಅರ್ಜುನನಿಂದ ಕೃಷ್ಣಸ್ತುತಿ ಕೇಳಿಬರುತ್ತಿದೆ. ಕುಮಾರವ್ಯಾಸ ಮತ್ತು ಲಕ್ಷ್ಮೀಶರ ಕೃತಿಗಳಲ್ಲಿಯಂತೆ ಕೃಷ್ಣಸ್ತುತಿಯ ಸಂತತ ಝೇಂಕಾರ ತಿಮ್ಮಣ್ಣನ ಕೃತಿಯಲ್ಲಿ ಕಿವಿದುಂಬುವುದಿಲ್ಲ. ಲಕ್ಷ್ಮೀಶನ ಜೈಮಿನಿಯ ಬಕದಾಲ್ಭ್ಯನು ಸಾಗರದ ನಡುವೆ ಕುರುವದಲ್ಲಿ ಅಜ್ಞಾತವಾಗಿರುವಂತೆ ತಿಮ್ಮಣ್ಣ ಭಾರತದ ಕೃಷ್ಣನ ಸ್ಥಿತಿಯಾಗಿದೆ.

ವ್ಯಾಸಭಾರತದಲ್ಲಿ (ಅ. ೮೩, ಶ್ಲೋ ೧-೭)

'ದಕ್ಷಿಣಾಂ ದಿಶಮಾಸ್ಥಾಯ ಚಾರಯಾಮಾಸ ತಂ ಹಯಮ್ ।'

ಎಂದು ಹೇಳಿ, ಯಜ್ಞಾಶ್ವವು ಚೇದಿ, ಕಾಶಿ, ಕೋಸಲ, ಕಿರಾತ, ದಶಾರ್ಣ ದೇಶಗಳನ್ನು ಸುತ್ತಿ, ಶಿಶುಪಾಲಸುತ ಚಿತ್ರಾಂಗದ ರಾಜರನ್ನು ಕಂಡು, ನಿಷಾದ ರಾಜನಾದ ಏಕಲವ್ಯನಲ್ಲಿಗೆ ಬಂದಿತೆಂದು ವರ್ಣನೆ ಇದೆ. ತಿಮ್ಮಣ್ಣನಾದರೋ ಅದು ಚೇದಿ ಪಟ್ಟಣವನ್ನು ಹಾಯಿದು, ಶಿಶುಪಾಲಸುತನಿಂದ ಭಕ್ತಿಯ ಪೂಜೆಯನ್ನು ಕೈಕೊಂಡು, 'ಸೇರಿತಧ್ವರ ತುರಗ ತೆಂಕಣ ದಿಕ್ಕಿನಲಿ ಬಹುನೃಪರ ದೇಶಗಳ' (ಭಾ. ೭-೧೩) ಎಂದು ಹೇಳುತ್ತಾನೆ. ಅಲ್ಲದೆ,

'ನೀಲಕೇತುವ ಚಿತ್ರಕೇತು ಮ
ರಾಳಕೇತು ಮಯೂರಕೇತು ವ
ರಾಳ ದೇಶದ ಚಂದ್ರಕೇತು ನೃಪಾಲರನು ಜಯಿಸಿ ||

**ಮೇಲೆ ಕಾತ್ಯನು ವೀರವರ್ಮನು**
**ಸಾಲುವನ ತಮ್ಮನು ಯುವಾಶ್ವನ**
**ಕಾಳಗದಿ ಗೆಲಲೈದಿತಶ್ವ ದಶಾರ್ಣ ದೇಶವನು ||** —ಭಾ. ಸಂ. ೭, ಪ. ೧೪

ಎಂಬ ಹೆಚ್ಚಿನ ವಿಷಯವೂ ಇದೆ. ಇದಕ್ಕೆ ವ್ಯಾಸಭಾರತದ ಆಧಾರವಿಲ್ಲ. ಈ ಎಲ್ಲ ರಾಜರ ಹೆಸರುಗಳು ಲಕ್ಷ್ಮೀಶನ ಜೈಮಿನಿ ಭಾರತದಲ್ಲಿಯ ಹೆಸರುಗಳಿಗೆ ಹೊಂದುತ್ತಿವೆ. ಆದುದ ರಿಂದ ಎರಡು ರೀತಿಯ ಊಹೆಗಳನ್ನು ಮಾಡಬಹುದು:

೧. **ತಿಮ್ಮಣ್ಣಕವಿ ಲಕ್ಷ್ಮೀಶನ ಜೈಮಿನಿ ಭಾರತವನ್ನು ಓದಿರಲು ಸಾಕು** ಎಂದು ಊಹಿಸಬಹುದು.

೨. ಇದರಂತೆಯೆ, ತಿಮ್ಮಣ್ಣಕವಿ ಕುಮಾರವ್ಯಾಸ ಭಾರತ ಕಥೆಯನ್ನೇನೊ ಪೂರ್ತಿ ಗೊಳಿಸಿದ್ದಾನೆ. ಆದರೆ, ಕುಮಾರವ್ಯಾಸನ ಕಾವ್ಯದ ಸತ್ತ್ವವಾದ ಕೃಷ್ಣಚರಿತ್ರೆಗೆ ಅಲ್ಲಿ ಪ್ರಾಧಾನ್ಯ ಬಂದಿಲ್ಲವೆಂಬುದನ್ನು ಕಂಡ ಲಕ್ಷ್ಮೀಶನು ಮರುಗಿ, ಕುಮಾರ ವ್ಯಾಸನ ಕೃಷ್ಣಪಾತ್ರಕ್ಕೆ ಸರಿಜೋಡಿಯಾಗಿ ನಿಲ್ಲಬಲ್ಲ ಕೃಷ್ಣನ ಅಸ್ತಿತ್ವವನ್ನು ಎದ್ದುಕಾಣಿಸುವ ಜೈಮಿನಿ ಭಾರತವನ್ನು ವಿದ್ವತ್ಸಭಾವಲಯಮರಿಯೆ ವಿರಚಿಸಿ, ಈ ನನ್ನ ಕೃತಿಯನ್ನೂ ತಿಮ್ಮಣ್ಣ ಕವಿಯ ಭಾರತವನ್ನೂ ತೂಗಿ ನೋಡಿರಿ ಎಂಬಂತೆ, 'ಅವನು ರಾಜಾಸ್ಥಾನದ ಕವಿ, ನಾನೋ ಸಾಮಾನ್ಯ' ಎಂಬ ಭೇದ ವನ್ನೆಣಿಸದೆ 'ಮತ್ಸರವನುಳಿದಾಲಿಸುವುದು' ಎಂದು ವಿದ್ವಾಂಸರಲ್ಲಿ ಅರಿಕೆ ಮಾಡಿ ಕೊಂಡಿದ್ದಾನೆ ಎಂದೂ ಊಹಿಸಬಹುದಲ್ಲವೇ ?

ತಿಮ್ಮಣ್ಣ ಮತ್ತು ಲಕ್ಷ್ಮೀಶ ಇಬ್ಬರೂ ಸರಿಸುಮಾರಾಗಿ ಸಮಕಾಲೀನರು (೧೫೦೯–೧೫೨೯). ಇವರ ಕೃತಿಗಳಲ್ಲಿ ಯಾವುದು ಮೊದಲು ಯಾವುದು ಹಿಂದುಗಡೆ ಎಂದು ಖಚಿತವಾಗಿ ಹೇಳಲು ಬರುವಂತಿಲ್ಲ. ಅದು ಊಹೆಯ ಸಾಮಂಜಸ್ಯವನ್ನೇ ಅವಲಂ ಬಿಸಿದೆ. ಲಕ್ಷ್ಮೀಶನ ಜೈಮಿನಿ ಭಾರತವು ಎಲ್ಲ ರೀತಿಯಿಂದ ತಿಮ್ಮಣ್ಣನ ಭಾರತವನ್ನು ಮೀರಿ ನಿಂತಿರುವುದು ಮಾತ್ರ ನಿಜ. ತಿಮ್ಮಣ್ಣ ಕವಿಯ ಭಾರತದ ಕಥಾವಸ್ತುವಿನಲ್ಲಿ ಏಕ ಮುಖತೆ, ಏಕರೂಪತೆ ಕಂಡುಬರುವುದಿಲ್ಲ. ೯ ಸಂಧಿಗಳಲ್ಲಿ ೫ ಸಂಧಿಗಳು ಮರುತ್ತನ ಕಥೆ, ಉತ್ತಂಕನ ಕಥೆ, ಪರೀಕ್ಷಿತ ಜನನ ಮತ್ತು ಅನುಗೀತೆ (ಅರ್ಜುನನಿಗೆ ಕೃಷ್ಣನ ಉಪ ದೇಶ) ಇವುಗಳಿಗೆ ಮೀಸಲಾಗಿ ಯಜ್ಞಾಶ್ವದ ಪರಿಭ್ರಮಣ ೨ ಸಂಧಿಗಳಲ್ಲಿ ಮುಗಿದು ಬಿಡುತ್ತದೆ. ಅಶ್ವಮೇಧದಲ್ಲಿ ಕುದುರೆಯ ಪರಿಭ್ರಮಣಕ್ಕೂ ಯಜ್ಞಕ್ಕೂ ಪ್ರಾಮುಖ್ಯ. ಆದರೆ ತಿಮ್ಮಣ್ಣ ಕವಿ ಅಶ್ವಪರಿಭ್ರಮಣಕ್ಕೆ ೨ ಸಂಧಿ, ಯಜ್ಞಕ್ಕೆ ಒಂದು ಸಂಧಿ ಕೊಟ್ಟಿ ದ್ದಾನೆ. ಆದುದರಿಂದ ಅಶ್ವಪರಿಭ್ರಮಣದ ವಿನ್ಯಾಸಕ್ಕೂ ವೈವಿಧ್ಯಕ್ಕೂ ಎಡೆ ಸಾಲದೆ ಹೋಗಿದೆ. ಇದರಂತೆ ಯಜ್ಞವೈಭವವೂ ತೃಪ್ತಿಕರವಾಗಿ ಮೂಡಿಬಂದಿಲ್ಲ. ಲಕ್ಷ್ಮೀಶನಲ್ಲಿ ಮಾತ್ರ ಅಶ್ವಸಾಹಸ, ಅಶ್ವಪ್ರಾಪ್ತಿ, ಅಶ್ವಪರಿಭ್ರಮಣ, ಅಶ್ವಯಜ್ಞ—ಹೀಗೆ ಹಂತ ಹಂತವಾಗಿ ಕಥೆ ಕಳೆಗಟ್ಟುತ್ತ ಹೋಗಿದೆ. ತಿಮ್ಮಣ್ಣ ಕವಿಯ ಅಶ್ವಮೇಧ ಹಿಂಸಾಯಜ್ಞ, ಆದುದರಿಂದ ಅಹಿಂಸಾಯಜ್ಞದ ಮಹತ್ತ್ವವನ್ನು ತಿಳಿಸುವುದಕ್ಕಾಗಿ ನಕುಲೋಪಾ

ಖ್ಯಾನಕ್ಕೂ ಒಂದು ಸಂಧಿಯನ್ನು ಅವನು ಕೊಡಬೇಕಾಯಿತು. ಲಕ್ಷ್ಮೀಶ ಮಾಡಿಸಿದ್ದು ಅಹಿಂಸಾಯಜ್ಞ; ಅವನ ಅಶ್ವ ಕಪ್ಪುರವಾಗುತ್ತದೆ. ಆ ಕಪ್ಪುರದ ಆಹುತಿಯಿಂದ ಯಜ್ಞ ಸಾಂಗವಾಗಿದೆ. ಅಂತೆಯೇ ಲಕ್ಷ್ಮೀಶನಿಗೆ ನಕುಲೋಪಾಖ್ಯಾನ ಅನಗತ್ಯವಾಗಿದೆ.

ತಿಮ್ಮಣ್ಣ ಕವಿಯ ಕಾವ್ಯದಲ್ಲಿ ಸಹಜತೆ ಇದೆ, ಸಾರಳ್ಯವಿದೆ. ಆದರೆ ಪ್ರತಿಭೆಯ ವಿಲಾಸವನ್ನಿಲ್ಲಿ ನಾವು ತೇಜಸ್ವಿಯಾಗಿ ಕಾಣುವುದಿಲ್ಲ.

ಕುಕ್ಕುಟದ ಕೂಗಾಟ ಮೂಡಣ
ದಿಕ್ಕಿನೆಲರೆಡೆಯಾಟ ಮರದುದಿ
ವಕ್ಕಿಗಳ ಪರಿಪರಿಯ ಚಿಲಿಪಿಲಿರವದ ಚೀರಾಟ ||
ಜಕ್ಕವಕ್ಕಿಯ ಕೂಟ ಕಮಲದ
ಸೊಕ್ಕು ದುಂಬಿಯ ಬೇಟವೆಣ್ದೆಸೆ
ಮಿಕ್ಕ ಕತ್ತಲೆಯೋಟವೆಸೆದುದು ರವಿಯ ಬರವಿನಲಿ || —ಭಾ.ಸಂ. ೬ ಪ. ೧೫

ಎಂಬಂತಹ ಸ್ವಭಾವೋಕ್ತಿಗಳು ತಿಮ್ಮಣ್ಣ ಕವಿಯಲ್ಲಿ ಹಲವೆಡೆಗೆ ಚೆನ್ನಾಗಿ ಬರುತ್ತವೆ. ಆದರೆ ಕಥಾವಸ್ತು ಏಕಮುಖವಾಗಿಲ್ಲ. ಕೃಷ್ಣನಂತಹ ಮುಖ್ಯನಾಯಕನಿಲ್ಲ, ವೈಭವದ ಯಜ್ಞವಿಲ್ಲ. ಮೇಘನಾದ, ವೃಷಕೇತು, ಪ್ರದ್ಯುಮ್ನರಂತಹ ಯುವಕ ಯೋಧರ ಸುಳಿದಾಟವಿಲ್ಲ, ವೈವಿಧ್ಯಪೂರ್ಣವಾದ ಯುದ್ಧ ಸಂದರ್ಭಗಳಿಲ್ಲ. ಈ ದೃಷ್ಟಿಯಿಂದ ತೂಗಿ ನೋಡಿದರೆ ಜೈಮಿನಿ ಭಾರತದ ತೂಕ ತಿಮ್ಮಣ್ಣನ ಅಶ್ವಮೇಧಿಕದ ಭಾರತಕ್ಕಿಂತ ಬಹಳೇ ಹೆಚ್ಚಾಗಿರುವುದು ಮನದಟ್ಟುವುದು.

ಸಂಸ್ಕೃತ ಜೈಮಿನಿಭಾರತ ಮತ್ತು ಲಕ್ಷ್ಮೀಶನ ಜೈಮಿನಿಭಾರತ ಇವುಗಳ ಮುಖ, ಪ್ರತಿಮುಖ, ಗರ್ಭ, ಅವಮರ್ಶ, ಮತ್ತು ನಿರ್ವಹಣ ಸಂಧಿಗಳ ಹಂತಗಳಲ್ಲಿ ತುಲನೆ:

## ಮುಖಸಂಧಿ

ಕನ್ನಡ ಜೈಮಿನಿ ಭಾರತದ ಮುಖಸಂಧಿ, ಸಂಧಿ ೮ ಪದ್ಯ ೧೨ ರ ವರೆಗಿದೆ. ಈ ಕಥಾಭಾಗವು ಸಂಸ್ಕೃತ ಜೈಮಿನಿ ಭಾರತದ ಅಧ್ಯಾಯ ೧೪, ಶ್ಲೋಕ ೮೬ ರವರೆಗೆ ವ್ಯಾಪಿಸಿದೆ.

ಲಕ್ಷಣಾನ್ವಿತವಾಗಿ ಕಾವ್ಯವನ್ನು ಬರೆಯಲುದ್ದೇಶಿಸಿದ ಲಕ್ಷ್ಮೀಶನು 'ಔತ್ಸುಕ್ಯ ಮಾತ್ರಮಾರಂಭಃ ಫಲಲಾಭಾಯ ಭೂಯಸೇ' ('ದ.ರೂ.' ೧–೨೯) ಎಂಬ ಮುಖ ಸಂಧಿಯ ಲಕ್ಷಣವನ್ನು ಮನಸ್ಸಿನಲ್ಲಿಟ್ಟುಕೊಂಡೇ ಪ್ರಾರಂಭಿಸಿರುವಂತೆ ಕಾಣುತ್ತದೆ. ಅಂತೆಯೆ, ಧರ್ಮನ ಮ್ಲಾನವದನವನ್ನು ನೋಡಿ ವ್ಯಾಸರು ಅವನ ಮನಃಸ್ಥಿತಿಯನ್ನು ತಿಳಿದುಕೊಳ್ಳುತ್ತಾರೆ. ಆಗಿನ ಅವರ ಸಂಭಾಷಣೆ ವ್ಯಾಸರಿಂದಲೇ ಯಜ್ಞದ ವಿಧಿ–ವಿಧಾನಗಳನ್ನು ತಿಳಿದುಕೊಂಡ ಮೇಲೆ ಧರ್ಮರಾಯನು ಅದಕ್ಕೆ ತನಗಿರುವ ಅಡೆತಡೆಗಳ ಪ್ರಶ್ನೆಯನ್ನೆತ್ತುವುದು, ವೃಷಕೇತು ಮೇಘನಾದರು ಕುದುರೆಯನ್ನು ತರಲು ಹೊರಟ ಭೀಮನೊಂದಿಗೆ ಸ್ವಯಂಸ್ಫೂರ್ತಿಯಿಂದ, ಉತ್ಸಾಹದಿಂದ ಹೊರಡಲನುವಾಗುವುದು

ಇತ್ಯಾದಿ ಸಂದರ್ಭಗಳ ಶಬ್ದಚಿತ್ರಣದಲ್ಲಿ, ಮೂಲದಲ್ಲಿ ವ್ಯತ್ಯಾಸ ಮಾಡಿಕೊಂಡಿದ್ದಾನೆ. ಸಂಸ್ಕೃತ ಜೈಮಿನಿ ಭಾರತದಲ್ಲಿ ಧರ್ಮರಾಯನು ತಾನಾಗಿಯೆ ಪ್ರಶ್ನೆ ಕೇಳುತ್ತಾನೆ—

'ಯಹಚ್ಛಯಾ ಚ ಸಂಪ್ರಾಪ್ತಂ ವ್ಯಾಸಂ ಪ್ರಪಚ್ಛ ಸಾದರವ್ ।
ಕೇನೋಪಾಯೇನ ಮೇ ಬ್ರಹ್ಮನ್‌ಗೋತ್ರಹತ್ಯಾಕೃತಂ ಭಯವ್ ।
ಧ್ರುವಂ ವಿನಾಶವಮಾಪ್ನೋತಿ ತನ್ಮೇ ಬ್ರೂಹಿ ತಪೋಧನ ||

ಮುಂದೆಯೂ, ಅಶ್ವಮೇಧದ ಉಪಾಯವನ್ನು ಅರಿತುಕೊಂಡ ಮೇಲೆ ವ್ಯಾಸರ ಧರ್ಮರಾಯನು ಅದರ ವಿಧಿವಿಧಾನಗಳನ್ನು ಅರಿತಿದ್ದವನಂತೆ ಮಾತನಾಡುತ್ತಾನೆ. ಅಂದರೆ ಅದರ ವಿವರಗಳನ್ನು ಕೇಳಿಕೊಳ್ಳದೇ ತನ್ನ ಅಡಚಣೆಯ ಮಾತನ್ನೆತ್ತುತ್ತಾನೆ. ಹೀಗೆಯೇ, ಸಂಸ್ಕೃತ ಮೂಲದ ಧರ್ಮರಾಯನು ಭೀಮನೊಬ್ಬನಿಂದಲೇ ಕುದುರೆಯನ್ನು ತರಲಾದೀತೇ ಎಂದು ಚಿಂತಾಕುಲನಾದಾಗ ವೃಷಕೇತು ಏಳುತ್ತಾನೆ, ಮೇಘನಾದ ಪ್ರೌಢರಂತೆ ಮಾತನಾಡುತ್ತಾನೆ. ಮಾತು ಒಂದರ ಮೇಲೊಂದು ಸುರಿಮಳೆಯಂತೆ ಸಾಗುತ್ತದೆ. ಹೀಗಾಗಿ ಪ್ರಸಂಗನಿರೂಪಣೆ ಅಷ್ಟೊಂದು ಮನೋಜ್ಞವಾಗಿ ಆಗುವುದಿಲ್ಲ. ಅಲ್ಲಿಯ ಪಾತ್ರಗಳಾಗಲಿ, ಸಂಭಾಷಣೆಯಾಗಲಿ, ಘಟನೆಗಳಾಗಲಿ ಓದುಗರ ಲಕ್ಷ್ಯವನ್ನು ಸೆಳೆಯುವುದಿಲ್ಲ.

ಇನ್ನೊಂದು ಉದಾಹರಣೆಯಾಗಿ ಅನುಸಾಲ್ವ ಯುದ್ಧಪ್ರಸಂಗವನ್ನು ನೋಡಬಹುದು. ಆ ಯುದ್ಧದಲ್ಲಿ ಕೃಷ್ಣನು ಮೂರ್ಛಿತನಾದುದನ್ನು ಸಂಸ್ಕೃತ ಭಾರತದಲ್ಲಿ,

ತೇನ ಚಾಸ್ಯ ಪ್ರಹಾರೇಣ ಸಂತುಷ್ಟ ಇವ ಮೂರ್ಛಿತಃ ।

ಎಂದು ಉಲ್ಲೇಖಿಸಲಾಗಿದೆ. ಅವನ ಮೂರ್ಛೆ ತೊಲಗಿ ಎಚ್ಚತ್ತ ಮೇಲೆ ಸತ್ಯಭಾಮೆ ಅವನಿಗೆ ಕೇಳಿಸುವಂತೆ ಜರೆಯುತ್ತಾಳೆ. ಕನ್ನಡ ಜೈಮಿನಿ ಭಾರತದಲ್ಲಿ ಇದೇ ಮಾತು 'ಅದ್ರಿಯ ಮೇಲೆ ಸಿಡಿಲೆರಗಿದಂತಾಗೆ ದನುಜಾರಿ ಮೈಮರೆದನು' ಎಂದಾಗಿದೆ ಲಕ್ಷ್ಮೀಶನ ಲೇಖನಿಯಲ್ಲಿ. ಹೀಗೆ ಮೈಮರೆದ ಶ್ರೀಕೃಷ್ಣನನ್ನು ಸತ್ಯಭಾಮೆ ನಗುತ್ತ ಜರೆಯುವುದರಲ್ಲಿ ಕಾವ್ಯಸೌಂದರ್ಯವಿದೆ. ಕೃಷ್ಣನ ಮೂರ್ಛೆಯ ಸ್ವರೂಪ ಅವಳಿಗೆ ಗೊತ್ತು. ವಿನೋದಕ್ಕಾಗಿ ಬಯ್ಯುತ್ತಾಳೆ ಎಂದು ಅರ್ಥಮಾಡಬಹುದು. ಬಯ್ದುದು ವಿನೋದಕ್ಕಾದರೂ ಅದೊಂದು ವಿಡಂಬನೆಯಾಗಿದೆ. ಅದರ ಪರಿಣಾಮವನ್ನು ತಿಳಿಸುತ್ತ ಕವಿ 'ನುಡಿಗೆ ಲಜ್ಜಿಸಿ, ಮನಂ ಕಂದೆ, ಕಣ್ಣಾಲಿಗಳ್ ಕೆಂಪಡರೆ' ಕೃಷ್ಣನು ರಣಾಂಗಣವನ್ನು ಪ್ರವೇಶಿಸಿದನು ಎಂದು ಹೇಳುತ್ತಾನೆ. ಸಂಸ್ಕೃತ ಭಾರತದಲ್ಲಿ ಸತ್ಯಭಾಮೆ ಚೆನ್ನಾಗಿ ಬಯ್ದರೂ ಕೃಷ್ಣನ ಮೇಲೆ ಯಾವ ಪರಿಣಾಮವೂ ಆಗದಿರುವುದು ಆಶ್ಚರ್ಯ. 'ಅನುಸಾಲ್ವನಿಂದ ಕುದುರೆಯನ್ನು ಪಡೆಯುವ ವಿಚಾರ ಮಾಡಿರಿ' ಎಂದು ಸತ್ಯಭಾಮೆ ವ್ಯಾವಹಾರಿಕವಾಗಿ ಮಾತನಾಡಿದೊಡನೆ ಕೃಷ್ಣನು ಮತ್ತೆ ಕಾಳಗಕ್ಕೆ ತೆರಳುತ್ತಾನೆ—ಮೂಲದಲ್ಲಿ. ಇಂತಹ ಕಥನರೀತಿಯಿಂದ ಕಾವ್ಯಕ್ಕೆ ಯಾವ ಶೋಭೆಯೂ ಬರುವುದಿಲ್ಲ. ಮಾತು, ಕೃತಿ, ಪರಿಣಾಮ, ಪ್ರತಿಕ್ರಿಯೆಗಳ ವರ್ಣನೆಯಿಂದ ಕಾವ್ಯಕ್ಕೆ ದೃಶ್ಯದ, ರೂಪಕದ, ನಾಟಕದ ಸ್ವರೂಪ ಪ್ರಾಪ್ತವಾಗುತ್ತದೆ. ಈ ಅಂಶದ ಕಡೆಗೆ

ಲಕ್ಷ್ಮೀಶನು ಹೆಚ್ಚು ಲಕ್ಷ್ಯವನ್ನು ಪೂರಯಿಸಿದ್ದಾನೆಂಬುದು ಸಂಧಿಸಂಧಿಗೂ ಕಂಡು ಬರುತ್ತದೆ.

ಸಂಸ್ಕೃತ ಮೂಲದ ಅ. ೧೪ ಶ್ಲೋಕ ೨ ರಲ್ಲಿ,

ಅನುಶಾಲ್ವಂ ಸಮಾಹೂಯ ತಿಷ್ಠತಿಷ್ಠೇತಿ ಚಾಬ್ರವೀತ್ ।

ಎಂದೆನ್ನುತ್ತ ವೃಷಕೇತು ೭ ಬಾಣಗಳನ್ನು ಎಚ್ಚನೆಂದು ಹೇಳಿದೆ. ಇದನ್ನು ಕ. ಜೈ. ಭಾರತದ ೭ ನೆಯ ಸಂಧಿಯಲ್ಲಿ ೫೮ನೆಯ ಪದ್ಯದಲ್ಲಿ ಹೀಗೆ ವಿವರಿಸಲಾಗಿದೆ: 'ವೃಷ ಕೇತುವನುಸಾಲ್ವನಂ ತಡೆದು, ನೀನಿಂದು ಮುರವೈರಿಯಂ ತೆರಳ್ಚಿದೆ ವೀರ! ಎನ್ನಿಂ ದುಳಿದೆಯಾದೊಡಾಂ ಕರ್ಣಜನೆ? ನಿಲ್ಲೆನುತ ತೆಗೆದೆಚ್ಚು ಬೊಬ್ಬಿರಿದನು.' ಅಲ್ಲದೆ ಆ ಯುದ್ಧವನ್ನು ಅವನಿವನು ಎಚ್ಚ ಮತ್ತು ಖಂಡಿಸಿದ ಬಾಣಸಂಖ್ಯೆಗಳಿಂದ ಸಂಸ್ಕೃತ ಭಾರತವು ಬಣ್ಣಿಸಿದ್ದರೆ, ಲಕ್ಷ್ಮೀಶನು ಅದೇ ಚಿತ್ರವನ್ನು 'ಕೂರಂಬುಗಳ್ಗೆ ಅಂಬರ ದೊಳು ಇಂಬಿಲ್ಲ ಎಂಬೊಲಾಯ್ತು' ಎಂದು ಅದ್ಭುತವಾಗಿ ಕಣ್ಣಿಗೆ ಕಟ್ಟುತ್ತಾನೆ.

ವೃಷಕೇತು ಅನುಸಾಲ್ವನನ್ನು ಸೆರೆಹಿಡಿದು ಕೃಷ್ಣನಿಗೆ ಒಪ್ಪಿಸುತ್ತಾನೆ, ಸಂಸ್ಕೃತ ಕನ್ನಡ ಎರಡರಲ್ಲಿಯೂ. ಆದರೆ, ಕೃಷ್ಣನು ಅನುಸಾಲ್ವನನ್ನು ಧರ್ಮರಾಜನಲ್ಲಿಗೆ ಒಯ್ದನೆಂಬುದೂ ಅವನನ್ನು ಧರ್ಮರಾಜನು ೫ನೆಯ ಬಂಧುವೆಂದು ಅಂಗೀಕರಿಸಿದ ನೆಂಬುದೂ ಸಂಸ್ಕೃತದಲ್ಲಿದೆ; ಕನ್ನಡದಲ್ಲಿಲ್ಲ. ಸಂಸ್ಕೃತ ಭಾರತದಲ್ಲಿ ವೃಷಕೇತುವೇ ಉಳಿದ ರಾಜರನ್ನು ಸೋಲಿಸಿ ಕುದುರೆಯನ್ನು ತರುತ್ತಾನೆ. ಆಗ ಧರ್ಮರಾಜನು ವೃಷ ಕೇತುವಿನೊಂದಿಗೆ ಪ್ರದ್ಯುಮ್ನನನ್ನೂ ಹೊಗಳುತ್ತಾನೆ:

ಯುವಾಂ ಕುಶಲಿನೌ ಪ್ರಾಪ್ತೌ ಪ್ರಿಯೌ ಮೇ ಕೃಷ್ಣಕರ್ಣಜೌ ।

ಕೃಷ್ಣನ ಮಗನಾದುದರಿಂದ ಹೀಗೆ ಹೊಗಳುತ್ತಾನೋ ಏನೋ ಎಂದೆನಿಸುತ್ತದೆ. ಏಕೆಂದರೆ, ಅದಕ್ಕೆ ಪ್ರಬಲವಾದ ಕಾರಣವಾವುದೂ, ಪ್ರದ್ಯುಮ್ನನ ಅಂತಹ ಕಾರ್ಯ ವಾವುದೂ ಸಂಸ್ಕೃತ ಕಾವ್ಯದಲ್ಲಿ ಉಲ್ಲೇಖ ಪಡೆದಿಲ್ಲ. ಆದರೆ ಇಲ್ಲಿ ಕನ್ನಡ ಜೈಮಿನಿ ಭಾರತದಲ್ಲಿ ಲಕ್ಷ್ಮೀಶನು ಮಾಡಿಕೊಂಡಿರುವ ವ್ಯತ್ಯಾಸವು ಔಚಿತ್ಯಪೂರ್ಣವಾಗಿದೆ. ವೃಷಕೇತು ಅನುಸಾಲ್ವನನ್ನು ಸೆರೆಹಿಡಿದರೆ, ಪ್ರದ್ಯುಮ್ನನು ಉಳಿದ ರಾಜರನ್ನು ಗೆದ್ದು ಕುದುರೆಯನ್ನು ಬಿಡಿಸಿ ತಂದು ತನ್ನ ಪೂಣ್ಕೆಯನ್ನು ಪೂರೈಸುತ್ತಾನೆ. ಮೂಲದ ನ್ಯೂನತೆಗಳನ್ನು ಸರಿಪಡಿಸುವ ಕಡೆ ಲಕ್ಷ್ಮೀಶನು ಎಷ್ಟು ಎಚ್ಚರದಿಂದ ನೋಡಿದ್ದಾನೆ ಎಂಬುದರ ದ್ಯೋತಕವಿದು. ಹಾಗೆಯೇ, ಸಂಸ್ಕೃತದಲ್ಲಿ (ಅ. ೧೪) ಮೂವತ್ತು ಶ್ಲೋಕ ಗಳನ್ನು ವ್ಯಾಪಿಸಿದ, ಅನುಸಾಲ್ವ ವೃಷಕೇತುಗಳ ಅತಿಯಾದ ಸಂವಾದವನ್ನು ಲಕ್ಷ್ಮೀಶನು ಮೂರು ಪದ್ಯಗಳಲ್ಲಿ ಭಟ್ಟಿ ಇಳಿಸಿದ್ದಾನೆ. (ಸಂ. ೭, ಪ. ೬೪,೬೫, ಮತ್ತು ೬೬).

ಇನ್ನು ಮೂಲದಲ್ಲಿ ಧರ್ಮರಾಜನು ಅರ್ಜುನನಿಗೆ ಮಾಡಿದ ೧೧ ಶ್ಲೋಕಗಳ ಉಪದೇಶಕ್ಕಾಗಲಿ (ಅ. ೧೪. ಶ್ಲೋಕ ೪೪-೫೪), ಅರ್ಜುನ-ಕುಂತಿಯರಲ್ಲಿ ನಡೆದ ೧೭ ಶ್ಲೋಕಗಳ ಸಂವಾದಕ್ಕಾಗಲಿ (ಅ. ೧೪ ಶ್ಲೋಕ ೫೪-೭೦) ಲಕ್ಷ್ಮೀಶನಲ್ಲಿ ಎಡೆ ಇಲ್ಲ. ಅವನು ೪ ಪದ್ಯಗಳನ್ನು ವಸಂತಋತುವಿಗೂ ಒಂದು ಪದ್ಯವನ್ನು ಚೈತ್ರಮಾಸಕ್ಕೂ

ಕೊಟ್ಟು, ಧರ್ಮನು ದೀಕ್ಷಿತನಾಗಿ ಅರ್ಜುನನ ಕಾಪಿನಲ್ಲಿ ಕುದುರೆಯನ್ನು ಬಿಟ್ಟುದನ್ನು ಹೇಳಿದ್ದಾನೆ. ಹೀಗೆ ಕಿರಿದರಲ್ಲಿ ಹೇಳುವ ಲಕ್ಷ್ಮೀಶನ ಜಾಣ್ಮೆಯನ್ನು ವೃಷಕೇತು ಅರ್ಜುನನೊಡನೆ ಅಶ್ವರಕ್ಷಣೆಗೆ ಹೊರಟ ಸಂದರ್ಭದಲ್ಲಿಯೂ ಕಾಣುತ್ತೇವೆ. ಅದು ಅವನು ಮಡದಿ ಭದ್ರಾವತಿಯನ್ನು ಬೀಳ್ಕೊಳ್ಳುವ ಸಂದರ್ಭ. ಸಂಸ್ಕೃತ ಭಾರತದಲ್ಲಿ ಹದಿನಾರು ಶ್ಲೋಕಗಳಷ್ಟು ದೀರ್ಘವಾದ ಸಂಭಾಷಣೆ ಅವರಿಬ್ಬರೊಳಗೆ ನಡೆಯುತ್ತದೆ (ಅ. ೧೪. ಶ್ಲೋಕ ೭೧-೮೬). ಕೊನೆಯಲ್ಲಿ,

> ಪ್ರಿಯೇಽಹಂ ಯದಿ ಸಂಗ್ರಾಮೇ ಭವಿಷ್ಯಾಮಿ ಪರಾಙ್ಮುಖಃ ।
> ಬಿಂಬಾಧರಂ ತೇ ವದನಂ ನ ಪಶ್ಯಾಮಿ ಪುನಸ್ತ್ವಹಮ್ ।

ಎಂದು ಪ್ರತಿಜ್ಞೆಗೈದು ವೃಷಕೇತು ಹೊರಡುತ್ತಾನೆ. ಆದರೆ ಲಕ್ಷ್ಮೀಶನ, ಮಾತೊಂದನ್ನೂ ಆಡದ ವೃಷಕೇತುವಿನ ವೀರಗಾಂಭೀರ್ಯ, ಒಂದೇ ಮಾತಿನಿಂದ ಬೀಳ್ಕೊಡುವ ಭದ್ರಾವತಿಯ ಧೀರವೃತ್ತಿ ಗಮನೀಯವಾಗಿವೆ. 'ಮುರಹರನ ರಾಣಿಯರ್ ಧುರಧೀರ ಕರ್ಣಸುತನರಸಿಯೆಂದೆನ್ನಂ ಪೊಗಳ್ವಂತೆ ಮಿಗೆ ಸಂಗರದೊಳರಿಗಳಂ ಗೆಲ್ವುದು' ಎಂದು ಮಾತ್ರ ಹಾರೈಸಿ ಪತಿಗೆ ಆರತಿಯೆತ್ತಿ, ಸೇಸೆಗಳನ್ನು ಸೂಸಿ, ಆಲಿಂಗನವನ್ನೀಯುವಳು. ವೃಷಕೇತು ಮೌನವಾಗಿ ನಲ್ಲಳ ಕುರುಳುಗಳನ್ನು ಉಗುರುಗಳಿಂದ ತಿದ್ದಿ ಮುದ್ದಿಸಿ, ತನ್ನ ಬೆರಳುಂಗುರವನ್ನು ಕೊಟ್ಟು ಸಂತಯಿಸಿ ಬೀಳ್ಕೊಳ್ಳುವನು. ಇದು ಲಕ್ಷ್ಮೀಶ ಬಿಡಿಸಿದ ಸಂದರ್ಭಚಿತ್ರ.

## ಪ್ರತಿಮುಖ ಸಂಧಿ

ಈ ಸಂಧಿಯ ವ್ಯಾಪ್ತಿ ಸಂಸ್ಕೃತ ಪುರಾಣದಲ್ಲಿ ಅ. ೧೪, ಶ್ಲೋಕ ೮೭ ರಿಂದ ಅ. ೨೨ ಶ್ಲೋಕ ೮೬ರ ವರೆಗೆ ೯೪೫ ಶ್ಲೋಕಗಳು, ಎಂದರೆ ೧೮೯೦ ಸಾಲುಗಳು. ಕನ್ನಡ ಜೈಮಿನಿ ಭಾರತದಲ್ಲಿ ಸಂಧಿ ೮ ಪದ್ಯ ೧೩ ರಿಂದ ಸಂಧಿ ೧೬ ಪೂರ್ಣ ೪೧೦ ವಾರ್ಧಕ ಷಟ್ಪದಿಗಳು, ಎಂದರೆ ೨೪೬೦ ಸಾಲುಗಳು.

ಈ ಭಾಗದಲ್ಲಿ ಮೊದಲನೆಯ ಕಥಾನಕವು ನೀಲಧ್ವಜನದು. ನೀಲಧ್ವಜನ ತನಯ ಪ್ರವೀರ, ಪತ್ನಿ ಮದನಮಂಜರಿಯೊಡನೆ ಉದ್ಯಾನಕೇಳಿಗೆ ಹೋಗಿದ್ದಾನೆ. ಆಕೆಯೊಡನೆ ಸ್ತ್ರೀಪರಿವಾರವೂ ಇದೆ. ಅವರ ಸೌಂದರ್ಯವನ್ನು ಸಂಸ್ಕೃತ ಕವಿ ವರ್ಣಿಸುವುದಿಲ್ಲ; ಲಕ್ಷ್ಮೀಶ ಪ್ರಾಸಂಗಿಕವಾಗಿ ವರ್ಣಿಸುತ್ತಾನೆ. ಕನ್ನಡದಲ್ಲಿದ್ದ ಸೂರ್ಯಾಸ್ತ ಸೂರ್ಯೋದಯಗಳ ವರ್ಣನೆಗೆ ಸಂಸ್ಕೃತದಲ್ಲಿ ಎಡೆಗೊಟ್ಟಿಲ್ಲ. ಸೂರ್ಯನೆಂದರೆ ಜ್ಞಾನದ ಪ್ರತೀಕ. ಅವನು ಮುಳುಗಿದಾಗ ನೀಲಧ್ವಜನು ಜ್ವಾಲೆಯ ಮಾತಿನಿಂದ ಮಾಯಾವಿಷ್ಟನಾಗಿ ಧರ್ಮಯಜ್ಞಕ್ಕೆ ಅಡ್ಡಿಯಾಗಬಾರದು ಎಂಬ ಅರಿವನ್ನು ಕಳೆದುಕೊಳ್ಳುತ್ತಾನೆ. ಹಗಲಿನಲ್ಲಿ ಯುದ್ಧಾನಂತರ ಜ್ಞಾನೋದಯವಾಗಿ ಪಶ್ಚಾತ್ತಾಪದಿಂದ ಜ್ವಾಲೆಯನ್ನು ಹೊರಹೊರಡಿಸಿ ಅರ್ಜುನನಿಗೆ ಅಶ್ವವನ್ನು ಒಪ್ಪಿಸುತ್ತಾನೆ.

ಮಾಹಿಸ್ಮತಿಗೆ ಅಗ್ನಿ ಬ್ರಾಹ್ಮಣವೇಷದಿಂದ ಕನ್ಯಾರ್ಥಿಯಾಗಿ ಬಂದಿದ್ದಾನೆ. ಆಗ ಮಂತ್ರಿ—

ಆತ್ಮಾನಂ ದರ್ಶಯ ವಿಭೋ ರಮ್ಯಂ ಪಾವಕರೂಪಿಣಾಮ್
—ಅ. ೧೫, ಶ್ಲೋಕ ೬೩

ಎಂದು ಸಂಸ್ಕೃತ ಪುರಾಣದಲ್ಲಿದೆ. ಮಂತ್ರಿಯ ಈ ಕೇಳಿಕೆಯಲ್ಲಿ ಯಾವ ಔದ್ಧತ್ಯ ವಾಗಲಿ ಪರೀಕ್ಷೆ ಮಾಡುವ ಬುದ್ಧಿಯಾಗಲಿ ತೋರುವುದಿಲ್ಲ. ಸಾಕಷ್ಟು ಸೌಜನ್ಯದಿಂದಲೇ ಕೇಳಿದ್ದರೂ ಅಗ್ನಿ ಅವನ ಗಡ್ಡಮೀಸೆಗಳನ್ನು ಸುಟ್ಟುದು ಅತಿಯಾಗಿ ತೋರುತ್ತದೆ. ಆದರೆ ಲಕ್ಷ್ಮೀಶ ಇದಕ್ಕೆ ಕಾರಣವನ್ನು ಸೂಚಿಸುತ್ತಾನೆ: 'ಗೋಪ್ತಾರನಾಜ್ಞೆಯಿಂದ ಪರೀಕ್ಷಿಸಲು ಹೋಗಲಾಗಿ ಗಡ್ಡಮೀಸೆ ಸುಟ್ಟನು' ಎಂದು. ಪರೀಕ್ಷಾಬುದ್ಧಿಯೇ ಗಡ್ಡ ಮೀಸೆಗಳ ಸುಡುವಿಕೆಗೆ ಕಾರಣವಾಗಿದೆ. ಬೆಂಕಿಗೆ ಹತ್ತಿರ ಮುಖವೊಡ್ಡಿದರೆ ಅಲ್ಲಿಯ ಕೂದಲು ಸುಡುವುದು ಅಷ್ಟೇ ಸಹಜವೂ ಆಗಿದೆ.

ಯಜ್ಞಾಶ್ವವು ಶಿಲೆಯಲ್ಲಿ ಕಾಲುಗಳು ಕೀಲಿಸಿದಂತೆ ನಿಂತಾಗ ಅರ್ಜುನನು ಮುನಿಗಳ ಕಡೆಗೆ ಚಾರರನ್ನುಕಳಿಸಿ ಕಾರಣವನ್ನು ತಿಳಿದುಕೊಂಡನೆಂದು ಸಂಸ್ಕೃತಪುರಾಣದಲ್ಲಿದೆ. ಇದರಿಂದ ಸೌಭರಿ ಋಷಿ ಈ ಅರಣ್ಯದಲ್ಲಿ ಇದ್ದಾರೆಂಬುದು ಅರ್ಜುನನಿಗೆ ಗೊತ್ತಿತ್ತು ಎಂದು ಓದುಗರ ಭಾವನೆಯಾಗುತ್ತದೆ. ಕನ್ನಡ ಕಾವ್ಯದಲ್ಲಿ ತಾನೀಗ ಯಾವ ಪ್ರದೇಶ ದಲ್ಲಿ ಇದ್ದೇನೆಂಬುದನ್ನೂ ಅರ್ಜುನ ಅರಿಯನು. ಎಂತಲೇ 'ಮುಳಿದ ಮುನಿಪನ ಶಾಪ ಮಾಗಬೇಕು, ಈ ವನಸ್ಥಳದೊಳು ಆಶ್ರಮವುಂಟೆ? ನೋಳ್ಪುದು ಅಗಲದೊಳು' ಎಂದು ಚಾರರನ್ನು ಅವನು ಅಟ್ಟುತ್ತಾನೆ. ಸಂಕಟ ಬಂದಾಗ ವೆಂಕಟರಮಣ ಎಂಬಂತೆ ಸೌಭರಿಯ ದರ್ಶನ ಅರ್ಜುನನಿಗಾಗುತ್ತದೆ. ಅಲ್ಲದೆ, ಸಂಸ್ಕೃತ ಪುರಾಣದ ಸೌಭರಿ, ಶಿಲೆಯಾದ ಚಂಡಿಯ ಶಾಪವಿಮೋಚನೆಗೆ ಹೆಚ್ಚಿನ ಮಹತ್ತ್ವ ಕೊಟ್ಟು, ಅವಳನ್ನು ಮುಕ್ತಮಾಡುವಂತೆ ಅರ್ಜುನನಿಗೆ ಹೇಳುತ್ತಾನೆ. ಆದರೆ ಲಕ್ಷ್ಮೀಶನು ಯಜ್ಞಾಶ್ವದ ಮುಕ್ತಿ ಮತ್ತು ಕೃಷ್ಣಸ್ಮರಣೆಯ ಯುಕ್ತಿಗೆ ಪ್ರಥಮ ಪ್ರಾಶಸ್ತ್ಯವಿತ್ತುದನ್ನು ಕಾಣು ತ್ತೇವೆ. ಇದು ಕಾವ್ಯೋದ್ದೇಶ ಮತ್ತು ಕಾರ್ಯೋದ್ದೇಶದ ದೃಷ್ಟಿಯಿಂದ ಔಚಿತ್ಯ ಪೂರ್ಣವಾದ ಬದಲಾವಣೆಯಾಗಿದೆ.

ಇಲ್ಲಿ ಬರುವ ಪರಿಪೂರ್ಣ ಕಥಾನಕವೆಂದರೆ ಹಂಸಧ್ವಜನದು. ೧೮ ಲಕ್ಷಣಗಳಿಂದ ಕೂಡಿದ ಇದರ ವಿವೇಚನೆಯನ್ನು 'ಕಾವ್ಯವಸ್ತು' ಎಂಬ ಪ್ರಕರಣದಲ್ಲಿ ಮಾಡಿದೆ. ಸಂಸ್ಕೃತ ಪುರಾಣದಲ್ಲಿ ಈ ಕಥಾಭಾಗ ೧೪ ಲಕ್ಷಣಗಳನ್ನು ಮಾತ್ರ ಒಳಗೊಂಡು ದಾಗಿದೆ. ಕನ್ನಡ ಕಾವ್ಯದಲ್ಲಿ ೪ ಲಕ್ಷಣಗಳನ್ನು ಹೆಚ್ಚಿಗೆ ಸೇರಿಸಿ ಪೂರ್ಣ ಮಾಡಿದ್ದು ಕವಿ ಲಕ್ಷ್ಮೀಶನ ಸ್ವತಂತ್ರ ವಿಚಾರಧಾರೆಯನ್ನೂ, ಪ್ರತಿಭೆಯನ್ನೂ ಮೆರೆದಿದೆ ಎಂದು ಹೇಳಬೇಕು.

ಸಂಸ್ಕೃತ ಪುರಾಣದಲ್ಲಿ ಹಂಸಧ್ವಜನು ಸಚಿವ, ಬಂಧು, ಪುತ್ರರೊಡನೆ ಆಲೋಚಿಸಿ ಅರ್ಜುನನ ಕುದುರೆಯನ್ನು ಕಟ್ಟುವುದಾಗಿ ನಿರ್ಣಯಿಸುತ್ತಾನೆ. ಇದನ್ನೇ

ಲಕ್ಷ್ಮೀಶನು 'ಶ್ರದ್ಧಾಳು, ಸುಮತಿ, ಪ್ರಮತಿ'ಗಳೊಂದಿಗೆ ಮಾತನಾಡಿ ನಿಶ್ಚಯಿಸಿದ ನೆಂದು ಹೇಳುತ್ತಾನೆ. ಹೀಗೆ ಮಂತ್ರಿಗಳ ಹೆಸರಿನೊಂದಿಗೆ ವಿವರಿಸಿರುವಲ್ಲಿ ಹಂಸಧ್ವಜನ ಮಂತ್ರಿಮಂಡಲದ ಪಾತ್ರತೆಯೂ ಹಿರಿಮೆಯೂ ಸೂಚಿತವಾಗಿದೆ.

ಹಂಸಧ್ವಜನ ಪ್ರಪಂಚಪರಿವಾರವನ್ನು ವಿವರಿಸುವಲ್ಲಿಯೂ ಲಕ್ಷ್ಮೀಶನು ಸೂಕ್ಷ್ಮದೃಷ್ಟಿಯಿಂದ ತಿದ್ದುಪಡೆ ಮಾಡಿದುದು ನಿದರ್ಶನಕ್ಕೆ ಬರುತ್ತದೆ. ಸಂಸ್ಕೃತದಲ್ಲಿ ಅವನ ಅನುಜರ ಏಳು ಹೆಸರುಗಳನ್ನು ಉಲ್ಲೇಖಿಸಿ 'ಮೊದಲಾದವರು' ಎಂದು ಹೇಳಿದೆ; ಎಂದರೆ ಇನ್ನೂ ಅನೇಕರು ಅನುಜರಿದ್ದರು ಎಂಬಂತೆ ಸೂಚಿತವಾಗಿದೆ. ಕನ್ನಡ ದಲ್ಲಿ ಆ ಏಳು ಹೆಸರುಗಳನ್ನೇ ಹೇಳಿದ್ದರೂ 'ಮೊದಲಾದವರು' ಎಂದಿಲ್ಲ. ಮಕ್ಕಳು ಅಲ್ಲಿಯೂ ನಾಲ್ವರು ಇಲ್ಲಿಯೂ ನಾಲ್ವರು. ಆದರೆ ಅಲ್ಲಿಯ 'ಸುಮ' ಎಂಬವನು ಇಲ್ಲಿ, ಲಕ್ಷ್ಮೀಶನ ಕುಶಾಗ್ರಬುದ್ಧಿಯಲ್ಲಿ 'ಸುಮನಸ್ಸು' ಆಗಿದ್ದಾನೆ. ಮಂತ್ರಿಗಳ ಮತ್ತು ಸಂಬಂಧಿಕರ ವಿಚಾರವಾದೊಡನೆ ಪುರೋಹಿತರಾಗಿದ್ದ ಶಂಖ–ಲಿಖಿತರ ವಿವರವಾದ ಪರಿಚಯ, ಆಮೇಲೆ ಸೈನ್ಯವು ಯುದ್ಧಕ್ಕೆ ಹೊರಟಾಗ ಯೋಧ ಪತ್ನಿಯರ ಸಂಭಾಷಣೆ ಬಂದುದು ಕಥನಕ್ರಮದಲ್ಲಿ ಸುಸಂಬದ್ಧವಾಗಿ ತೋರುತ್ತದೆ. ಸಂಸ್ಕೃತ ಪುರಾಣದಲ್ಲಿ, ಮಂತ್ರಿಸಂಬಂಧಿಗಳ ವಿಷಯವಾದೊಡನೆ ಯೋಧಪತ್ನಿಯರ ಸಂಭಾಷಣೆ, ಶಂಖ ಲಿಖಿತರ ವಿವರಣೆ ಇದೆ. ಯುದ್ಧಕ್ಕೆ ಹೊರಡಲು ತಡಮಾಡಿದವರನ್ನು ಕುದಿವೆಣ್ಣೆಯ ಕೊಪ್ಪರಿಗೆಯಲ್ಲಿ ಹಾಕುವ ರಾಜಾಜ್ಞೆ ಮತ್ತು ಎಣ್ಣೆ ಸಳಮಳಿಸುತಿದ್ದ ಕೊಪ್ಪರಿಗೆಯನ್ನು ನೋಡಿ ಸುಧನ್ವನು ಬೇಗನೇ ಹಂಸಧ್ವಜನತ್ತ ನಡೆದನೆಂದು ಸಂಸ್ಕೃತ ಪುರಾಣದಲ್ಲಿ ಹೇಳಿದೆ. ಅವನ ತ್ವರೆಯ ಕಾರಣ ಕುದಿವೆಣ್ಣೆಯ ಕೊಪ್ಪರಿಗೆಯ ದರ್ಶನವೆಂದು ವಿವರಿ ಸಿದ್ದು ಅಷ್ಟು ಸಮಂಜಸವಾಗಿ ಕಾಣುವುದಿಲ್ಲ. ಇದು, ಸುಧನ್ವನು ಅಂತಹ ಅಂಜು ಕುಳಿಯೇ ಎಂಬ ಭಾವನೆಗೆಡೆಕೊಟ್ಟು, ಅವನ ವೀರ ಕರ್ತವ್ಯನಿಷ್ಠೆಗೆ ಬಾಧೆ ತರುತ್ತದೆ. ಅಂತೆಯೇ ಲಕ್ಷ್ಮೀಶನು ಆ ಕಾರ್ಯಕಾರಣಸಂಬಂಧವನ್ನು ತಪ್ಪಿಸಿದ್ದಾನೆ.

ಯುದ್ಧಕ್ಕೆ ಹೊರಡುವ ಪೂರ್ವದಲ್ಲಿ ಸುಧನ್ವನು ತಾಯಿಯ ದರ್ಶನಕ್ಕೆ ಹೋಗು ತ್ತಾನೆ. ಆಗ ತಾಯಿ ಶ್ರೀಕೃಷ್ಣನ ಮಹಿಮೆಯನ್ನು ಪರಿಪರಿಯಾಗಿ ಬಣ್ಣಿಸಿ, 'ಶ್ರೀಕೃಷ್ಣ ನನ್ನು ಗೆದ್ದುಕೊಂಡು (ವಶಪಡಿಸಿಕೊಂಡು) ಬಾ. ಅವನೆದುರು ಅಂಜಬೇಡ. ಅಂಜಿ ದವರು ಜೀವಂತ ಉಳಿಯುವುದಿಲ್ಲ. ನೀನು ಕೃಷ್ಣನೊಡನೆ ಹೋರಾಡುತ್ತ ಮಡಿದರೂ ಸಂತೋಷವೇ....ಏಕೆಂದರೆ, ಹಿರಿಯರೊಡನೆ ಹೋರಾಡುವಲ್ಲಿ ಬೀಳುವುದು ಪತನವಲ್ಲ. ಅದು ನಿನ್ನ ಹಿಂದಿನ ಹಾಗೂ ಮುಂದಿನ ಹತ್ತು ತಲೆಮಾರುಗಳನ್ನು ಉದ್ಧರಿಸುವ ಹಾದಿ' ಎಂಬುದಾಗಿ ಹೇಳಿದಳೆಂದು ಸಂಸ್ಕೃತ ಪುರಾಣದಲ್ಲಿ ವಿವರಣೆಯಿದೆ. ಆದರೂ ಈ ಮಾತುಗಳೆಲ್ಲವೂ ಸಪ್ಪೆಯಾಗಿವೆ. ಕನ್ನಡದಲ್ಲಿಯಾದರೋ ಈ ಸಂದರ್ಭ ವೀರಮಾತೆಗೂ ವೀರಪುತ್ರನಿಗೂ ಒಪ್ಪುವಂತೆ ಸತ್ತ್ವಯುತವಾಗಿ ಮೂಡಿದೆ. ಲಕ್ಷ್ಮೀಶನ ಸುಧನ್ವನ ತಾಯಿಯ 'ಅವನಂ ಕಂಡ ಬಳಿಕ ಹಿಮ್ಮೆಟ್ಟದಿರ್, ಪೋಗು' ಎಂಬ ಮಾತಿನ ಧ್ವನಿ ಸತ್ತ್ವ ಸಂಸ್ಕೃತ ಪುರಾಣದಲ್ಲಿಯ ಮೇಲಣ ಯಾವೊಂದು ಮಾತಿನಲ್ಲಿಯೂ ಇಲ್ಲ.

ಈ ವಿಶೇಷತೆಯಿಂದ ಲಕ್ಷ್ಮೀಶನ ಕಾವ್ಯವು ಪುಷ್ಪರಂಜಿತವಾಗಿ ಅಲಂಕೃತವಾಗಿದೆ. 'ಪುಷ್ಪಂ ವಾಕ್ಯವಿಶೇಷವತ್' ಎಂದು ದಶರೂಪಕಕಾರನು ಹೇಳಿದ್ದಾನೆ (೧-೬೨).

ಬಳಿಕ ಸುಧನ್ವನು ಪತ್ನಿ ಪ್ರಭಾವತಿಯನ್ನು ಬೀಳ್ಕೊಳ್ಳುವ ಪ್ರಸಂಗದಲ್ಲಿ, ಸಂಸ್ಕೃತ ಪುರಾಣದಲ್ಲಿ ಅವರ ರತಿವಿಲಾಸದ ಮಾತಿಲ್ಲ. ಆದುದರಿಂದ ಅಲ್ಲಿ 'ಶಮ' ಎಂಬ ಕಾವ್ಯಲಕ್ಷಣಕ್ಕೆ ಎಡೆಯಿಲ್ಲದೆ ಹೋಗಿದೆ. ಮೂಲಪುರಾಣದ ಪ್ರಭಾವತಿಯೂ ರತಿಯ ಇಚ್ಛೆಯನ್ನೇನೋ ವ್ಯಕ್ತಪಡಿಸುತ್ತಾಳೆ, ಪ್ರಗಲ್ಭತೆಯನ್ನೂ ತೋರುತ್ತಾಳೆ. ರತೀಚ್ಛೆಯ ಪ್ರಗಲ್ಭತೆಗೆ ರತಿಸುಖ ತೃಪ್ತಿ ಬೇಕೇಬೇಕು. ಅದು ಇಲ್ಲ. ಲಕ್ಷ್ಮೀಶನು ಮೂಲದ ಈ **ಶಮ** ಲಕ್ಷಣದ ನ್ಯೂನತೆಯನ್ನು ಹೋಗಲಾಡಿಸಿದ್ದಾನೆ.

ಸುಧನ್ವನು ಯುದ್ಧಕ್ಕೆ ತಡಮಾಡಿ ಬಂದುದರಿಂದ ಅವನನ್ನು ಕುದಿವೆಣ್ಣೆಯಲ್ಲಿ ಕೆಡಹುವುದು, ಕೃಷ್ಣಸ್ಮರಣೆಯ ಮೂಲಕ ಅವನು ಅದರೊಳಗೆ ಸುಖವಾಗಿಯೆ ಇರುವುದು, ತೈಲದ ತಪ್ತತೆಯ ಪರೀಕ್ಷೆಗಾಗಿ ಶಂಖನು ಅದರಲ್ಲಿ ಎಳಗಾಯನ್ನು ಹಾಯ್ಕಿಸುವುದು, ಅದು ಸಿಡಿದು ಶಂಖನ ಹಣೆಗೆ ಬಡಿದಾಗ ಅವನಿಗೆ ಜ್ಞಾನೋದಯವಾಗಿ ಪಶ್ಚಾತ್ತಾಪದಿಂದ ಅವನೂ ಕೊಪ್ಪರಿಗೆಯಲ್ಲಿ ಹಾರಿಕೊಳ್ಳುವುದು, ಸುಧನ್ವನಿಗೆ ಅನೇಕ ಉಪದೇಶದ ಮಾತುಗಳನ್ನು ಹೇಳುವುದು ಸಂಸ್ಕೃತಪುರಾಣದಲ್ಲಿ ಬಂದಿದೆ. ಸಳಮಳಿಸುವ ಎಣ್ಣೆ ಶಂಖನನ್ನು ಬೇಯಿಸದಿರುವುದಕ್ಕೆ ಕಾರಣ ಹರಿಭಕ್ತ ಸುಧನ್ವನ ಸಂಗ ಎಂಬ ಮಾತು ಅಲ್ಲಿಲ್ಲ. ಅದನ್ನು ಲಕ್ಷ್ಮೀಶನು ಹೇಳುತ್ತಾನೆ: 'ಹರಿಭಕ್ತರಂ ಸಾರ್ದಂಗೆ ತಾಪಮಿರ್ದಪುದೆ?' ಈ ಹೇಳಿಕೆಯಿಂದ ಮೂಲದಲ್ಲಿಲ್ಲದ ಮಾರ್ಗಲಕ್ಷಣವನ್ನು—ಮಾರ್ಗಸ್ತತ್ತ್ವಾರ್ಥ ಕೀರ್ತನಂ ('ದ.ರೂ.', ೧-೬೯)—ಕವಿ ತನ್ನ ಕಾವ್ಯದಲ್ಲಿ ತಂದಿದ್ದಾನೆ.

ಸುಧನ್ವನು ಮಡಿದಾಗ ಹಂಸಧ್ವಜನು ಶೋಕಿಸುತ್ತ 'ಕಾದೆಣ್ಣೆಯೊಳ್ ದೇಹಮಂ ಕಾದ ಕೃಷ್ಣಂ ಕಾದಲ್ ಅಹಿತನು ಏಕೆ ಆದನು?' ಎಂದು, ಮಿತ್ರನಾಗಿದ್ದರೆ ಕಾದಾಡುತ್ತಿದ್ದಿಲ್ಲ—ಅಹಿತನು ಏಕಾದನು? ಎಂದು ಕೃಷ್ಣನ ಮೇಲೆ ದೋಷವಿಟ್ಟು ಮಾತನಾಡುತ್ತಾನೆ. ಈ ಮಾತಿನಿಂದ ಕಾವ್ಯಕ್ಕೆ ಅಪವಾದ ಎಂಬ ಕಾವ್ಯಲಕ್ಷಣ ಬಂದಿದೆ. ಇದು ಸಂಸ್ಕೃತಪುರಾಣದಲ್ಲಿ ಇಲ್ಲದ ಮಾತು.

ಸುಧನ್ವನ ಸಂಹಾರಕ್ಕೆ ಕಾರಣವಾದ ಅರ್ಜುನನು ಹೂಡಿದ ಕೊನೆಯ ಬಾಣಕ್ಕೆ ತ್ರೈಮೂರ್ತಿಗಳ ಶಕ್ತಿಯನ್ನಿತ್ತ ವಿಷಯ ಸಂಸ್ಕೃತ ಪುರಾಣದಲ್ಲಿ ಹೀಗಿದೆ:

> ಬ್ರಹ್ಮಾಣಂ ಪಶ್ಚಿಮೇ ಭಾಗೇ ಯೋಜಯಿತ್ವಾ ಶರಸ್ಯ ಹಿ।
> ಮಧ್ಯೇ ಕಾಲಂ ಫಲೇ ತಸ್ಯಾ ಸ್ವಯಮೇವ ಜನಾರ್ದನಃ॥
>
> —ಅ. ೧೯. ಶ್ಲೋಕ ೪೧

ಇದನ್ನು ಲಕ್ಷ್ಮೀಶನು ಸ್ವಲ್ಪ ವ್ಯತ್ಯಾಸಮಾಡಿಕೊಂಡು ಹೇಳಿದುದು ಹೀಗೆ:

> ಆ ಹೂಡಿದರ್ಜುನನ ಮಾರ್ಗಣದ ಮೊದಲೊಳಾ
> ವಾಹನಂಗೈದು ಕಮಲಜನಂ ನಿಲಿಸಿ, ವೃಷಭ
> ವಾಹನನ ಕೋಲ್ದುದಿಗೆ ತಂದಿರಿಸಿ, ಸಾಯಕದ ನಡುವೆ ತಾನೆ ವ್ಯಾಪಿಸಿ॥

ಈ ಬದಲಾವಣೆಯಲ್ಲಿ ಕವಿಯ ಉದ್ದೇಶವೇನು ಎಂಬುದು ಸ್ಪಷ್ಟವಾಗಿ ಹೇಳಲು ಬರುವಂತಿಲ್ಲ. ಬ್ರಹ್ಮ, ವಿಷ್ಣು, ಮಹೇಶ್ವರರು ಸೃಷ್ಟಿ, ಸ್ಥಿತಿ, ಲಯಗಳಿಗೆ ದೇವತೆಗಳು ಎಂಬ ಅರ್ಥದಿಂದ ಲಕ್ಷ್ಮೀಶನು ಮೊದಲಲ್ಲಿ ಬ್ರಹ್ಮನನ್ನು, ತುದಿಯಲ್ಲಿ ಮಹೇಶ್ವರನನ್ನು ಮಧ್ಯದಲ್ಲಿ ವಿಷ್ಣುವನ್ನು ಸಂಸ್ಥಾಪಿಸಿರಬೇಕು ಎಂದೆನಿಸಿರುತ್ತದೆ.

ಅರ್ಜುನ ಸುರಥರ ಸಮರಸಂದರ್ಭದಲ್ಲಿ ಸುರಥನ ಬಾಣದ ಹೊಡೆತದಿಂದ ಅರ್ಜುನನ ರಥವು ತಿರ್ರನೆ ತಿರುಗಹತ್ತಿತು. ಅದನ್ನು ನಿಲ್ಲಿಸುವುದು ಕೃಷ್ಣನ ಕೈಯಲ್ಲಿಯೂ ಆಗದೆ ಹೋಯಿತು; ಹನುಮಂತನು ತನ್ನ ಬಾಲದಿಂದ ಬಂಧಿಸಿದುದರಿಂದ ನಿಂತಿತು ಎಂಬುದು ಸಂಸ್ಕೃತ ಪುರಾಣದಲ್ಲಿ ಕಂಡುಬರುವುದು. ಲಕ್ಷ್ಮೀಶನು ಈ ವಿವರಣೆಯನ್ನು ತೆಗೆದುಕೊಂಡಿಲ್ಲ.

ಸುರಥನು ಸತ್ತಬಳಿಕ ಸ್ವಯಂ ಹಂಸಧ್ವಜನೇ ಯುದ್ಧಕ್ಕೆ ಹೊರಡುತ್ತಾನೆ. ಶ್ರೀಕೃಷ್ಣನಿಗೆ ಗೊತ್ತು ಅವನ ಸಾಮರ್ಥ್ಯ. ಆದುದರಿಂದ ಕೃಷ್ಣನು ತಾನಾಗಿ ಹೋಗಿ ಅವನಿಗೆ ಆಲಿಂಗನವನ್ನು ಕೊಟ್ಟು ಅವನ ಕ್ಷಾತ್ರತಾಮಸವನ್ನು ಹರಣಮಾಡುತ್ತಾನೆ.

> ತಂ ವೀಕ್ಷ್ಯ ಕುಪಿತಂ ವೀರಂ ಸಬಲಂ ತರಸಾ ಹರಿಃ ।
> ರಥಾತ್ಸಮುತ್ತೀರ್ಯ ತದಾ ಪ್ರಸಾರ್ಯ ಸ್ವಕರೌ ಸ್ಥಿತಃ ॥
>
> —ಅ. ೨೧, ಶ್ಲೋಕ ೩೯

ಸಂಸ್ಕೃತಪುರಾಣದಲ್ಲಿ ಹೀಗೆ ಚುಟಕವಾಗಿ ಹೇಳಿದುದನ್ನು ಕವಿ ಲಕ್ಷ್ಮೀಶನು ಸುಂದರ ಸಂದರ್ಭ ಚಿತ್ರವೆಂಬಂತೆ ಕವಿತ್ವಕುಂಚವನ್ನಾಡಿಸಿ ವಿವರಿಸುತ್ತಾನೆ. ಅವನ ಕೃಷ್ಣನು ರಥದಿಂದಿಳಿದು ಬಂದ ಚಿತ್ರು ಸೊಗಸಾಗಿ ಕಣ್ಕಟ್ಟುತ್ತಿದೆ:

'ಕುದುರೆಗಳ ವಾಘೆಯ ನಿಲಿಸಿ, ಜಗುಳಿದ ಪೀತಾಂಬರವನು ಅಂಸದೊಳು ಸಾರ್ಚುತೆ, ವರೂಥವನು ಇಳಿದು, ಸಿಂಹವನು ಸೋಲಿಸುವ ಗತಿಯಿಂದ, ತನ್ನನ್ನು ಸೇವಿಸುವವರಿಗೆ (ತಾನು) ಸೇವಕನು ಎಂಬುದನ್ನು ತೋರುತ್ತ ಆತನ ಸಮೀಪಕ್ಕಾಗಿ ಐತಂದನು' ಲಕ್ಷ್ಮೀಶನ ಕೃಷ್ಣ.

ಯಜ್ಞಾಶ್ವವು ನಡುವೆಲ್ಲೂ ನೀರನ್ನು ಕುಡಿಯಕೂಡದು, ಇದು ನಿಯಮ. ರಕ್ಷಣೆಯ ಸೈನ್ಯವೆಲ್ಲ ಅದನ್ನು ನೀರು ಕುಡಿಯಗೊಡದಂತೆ ಕಾಯ್ದುಕೊಂಡೇ ಇರುತ್ತದೆ. ಅವರನ್ನು ತಪ್ಪಿಸಿ ಅದು ಒಮ್ಮೆ ನೀರು ಕುಡಿಯುತ್ತದೆ. ಅಷ್ಟು ಕಾತರದಿಂದ ಅದು ನೀರು ಕುಡಿಯುವುದಕ್ಕೆ ಕಾರಣವೇನು? ಸಂಸ್ಕೃತಪುರಾಣದಲ್ಲಿ ಅದು ನಮಗೆ ತಿಳಿದು ಬರುವುದಿಲ್ಲ. 'ಕುದುರೆ ನೀರು ಕುಡಿಯುವುದಕ್ಕಾಗಿ ಕಮಲಗಳಿಂದೊಡಗೂಡಿದ ಸರೋವರವನ್ನು ಹೊಕ್ಕಿತು' (೨೧–೫೧) ಎಂದು ಮಾತ್ರ ಪುರಾಣ ಹೇಳುತ್ತದೆ. ಆದರೆ ಲಕ್ಷ್ಮೀಶನು ಔಚಿತ್ಯವನ್ನರಿತು, ಸಂಸ್ಕೃತದಲ್ಲಿಲ್ಲದ ಗ್ರೀಷ್ಮಋತುವಿನ ವರ್ಣನೆಯನ್ನು ತನ್ನ ಕಾವ್ಯದಲ್ಲಿ ಮಾಡಿದ್ದಾನೆ. ಇದರಿಂದ ಕುದುರೆಗೆ ಅತಿಶಯವಾಗಿ, ತಡೆಯಲಾರದಷ್ಟು ನೀರಡಿಕೆಯಾಗಿತ್ತು, ನೀರು ಕಂಡೊಡನೆ ಬುದಗ್ಗನೆ ಧಾವಿಸಿತು ಎಂಬ ಕಲ್ಪನೆ ಬರುವುದು.

ಸಂಸ್ಕೃತ ಪುರಾಣದ ಭೀಷಣನು ಮುನಿವೇಷವನ್ನು ಧರಿಸಿದಾಗ ಅತಿವಾಚಾಳಿಯಂತೆ ಮಾತನಾಡುತ್ತಾನೆ. ಅವನು 'ನೀನು ಇಲ್ಲಿದ್ದು ನಮ್ಮನ್ನೂ ಯಜ್ಞವನ್ನೂ ರಕ್ಷಿಸು, ರಾಕ್ಷಸರ ಕಾಟ ಹೆಚ್ಚಾಗಿದೆ ನಮಗೆ, ಆಶ್ರಮದ ಊಟದಿಂದ ನಿನ್ನ ಕ್ಷಾತ್ರ ತೇಜವೂ ಬೆಳೆಯುತ್ತದೆ, ನನ್ನೊಂದಿಗೆ ಕೆಲಕಾಲವಿದ್ದರೆ ರಾಕ್ಷಸರ ಸಂಹಾರ ಮಾಡುವುದಕ್ಕೆ ತಕ್ಕ ವಿದ್ಯೆಯನ್ನೂ ನಿನಗೆ ಕಲಿಸುತ್ತೇನೆ' (ಅ. ೨೨, ಶ್ಲೋಕ ೮೨–೮೪) ಇತ್ಯಾದಿಯಾಗಿ ಹಲವು ಮಾತುಗಳನ್ನಾಡಿ ಅವಲಕ್ಷಣವನ್ನು ತೋರಿಸುತ್ತಾನೆ. ಈ ಬಗೆಯ ಕಲ್ಪನೆಯಿಂದ ಅವನ ಕಾಪಟ್ಯ ತಟ್ಟನೆ ಹೊಳೆಯುವಂತಾಗುತ್ತದೆ. ಆದರೆ, ಲಕ್ಷ್ಮೀಶನ ಭೀಷಣನು ದಡ್ಡನಾಗಿಲ್ಲ. ಮಿತಭಾಷಿಯಾದ ಇವನು 'ಕೊಂದೊಡೇನಹುದು? ಪರಹಿಂಸೆ ಲೇಸಲ್ಲ ಬಲ್ಲವರ್ಗೆ' ಎಂದು ಉಪದೇಶಿಸುತ್ತಾನೆ ಅರ್ಜುನನಿಗೆ. ಯುದ್ಧದೃಶ್ಯ ಒಮ್ಮೆಲೆ ಬದಲಾಗಿ, ಆಶ್ರಮದೃಶ್ಯ ಕಂಗೊಳಿಸಿದ ವಿದ್ಯಮಾನದಿಂದಲೇ ಸಂದೇಹಕ್ಕೊಳಗಾಗಿದ್ದ ಅರ್ಜುನನಿಗೆ ಮುನಿಯ ಒಂದೆರಡು ಮಾತೇ ಸಾಕು, ಮಿಕ್ಕುದೆಲ್ಲ ಬಡಬಡಿಕೆ. ಇಲ್ಲಿಯ ಭೀಷಣ ತಕ್ಕ ರೀತಿಯಲ್ಲಿಯೇ ವರ್ತಿಸಿದರೂ ಅರ್ಜುನನಿಗೆ ಇದೆಲ್ಲ ಮಾಯೆ ಎಂದು ಗೊತ್ತಾಗುತ್ತದೆ.

ಸಂಸ್ಕೃತ ಪುರಾಣದ ಈ ಭಾಗದ ೧೮೯೦ ಸಾಲುಗಳು ಕನ್ನಡ ಜೈಮಿನಿ ಭಾರತದಲ್ಲಿ ೨೪೬೦ ಸಾಲುಗಳಾಗಿ ಹಬ್ಬಿವೆ. ಸೂರ್ಯನ ಉದಯಾಸ್ತಗಳ ವರ್ಣನೆ, ವಿಂಧ್ಯದ ವರ್ಣನೆ, ಗ್ರೀಷ್ಮಕಾಲದ ವರ್ಣನೆ, ಪಾರ್ವತಿಯ ತಪೋಭೂಮಿಯ ವರ್ಣನೆ, ಗಂಗಾನದಿಯ ವರ್ಣನೆ ಇವುಗಳಿಂದ ಇಷ್ಟು ಬೆಳವಣಿಗೆಯಾಗಿದೆ. ಈ ಭಾಗದಲ್ಲಿಯ ಯುದ್ಧ ವರ್ಣನೆಗಳೂ ಅತ್ಯುತ್ತಮವಾಗಿವೆ. ಯುದ್ಧದ ಗಂಭೀರ ಸ್ವರೂಪವನ್ನು ಅಥವಾ ಅದ್ಭುತ ಸನ್ನಿವೇಶವನ್ನು ವೀರಪ್ರತಿವೀರರು ಎಸುವ ಬಾಣಗಳ ಸಂಖ್ಯಾಬಲದಿಂದ ಅನೇಕ ಕಡೆಗಳಲ್ಲಿ ಚಿತ್ರಿಸಿರುವುದನ್ನು ಕಾಣುತ್ತೇವೆ. ಕನ್ನಡ ಕಾವ್ಯದಲ್ಲಿ ಬಾಣಗಳ ಸಂಖ್ಯೆಯನ್ನು ಮಾತ್ರವೇ ಅವಲಂಬಿಸದೇ,

'ತಾಗಿದರ್ ಕಲ್ಪಮೇಘಂಗಳಂ ತಡೆವಿಟ್ಟ ಮಳೆಯೆನಲ್ ಕಣೆಗಳಿಕ್ಕಿಯುತೆ',

'ನೆತ್ತರಾಗಸಕೆ ಚಿಮ್ಮಿತ್ತು ರಣದೋಕುಳಿಯ ಮಿತ್ತುವಿನ ಜೀರ್ಕೊಳವಿಯುಗುಳ್ವ ಕೆನ್ನೀರೆಂಬೊಲು'

ಇತ್ಯಾದಿ ಉಪಮೆಗಳಿಂದ ಆ ಅದ್ಭುತತೆಯನ್ನು ಚಿತ್ರೀಕರಿಸಲಾಗಿದೆ. ಸಂಸ್ಕೃತ ಪುರಾಣದಲ್ಲಿ ಈ ಬಗೆಯ ವರ್ಣನೆ ಕ್ವಚಿತ್ತಾಗಿ ಬಂದಿವೆ.[1]

---

[1] ಸಂಸ್ಕೃತ ಕನ್ನಡಗಳಲ್ಲಿಯ ಸಾಮ್ಯ-ವೈಷಮ್ಯಗಳಲ್ಲಿ ಕೆಲವನ್ನು ಇಲ್ಲಿ ಎತ್ತಿ ತೋರಿಸಲಾಗಿದೆ. ಈ ಕೆಳಗಿನ ಇನ್ನೂ ಕೆಲವು ವ್ಯತ್ಯಾಸಗಳನ್ನು ತುಲನೆಮಾಡಿನೋಡಬಹುದು:

ಅ. ೧೪. ಶ್ಲೋ. ೮೭–೮೯; ೧೫, ೪–೧೦; ೧೫, ೮೮–೮೯; ೧೬, ೩೧–೪೦; ೧೭, ೧೪–೧೬; ೧೭, ೫೪; ೧೭, ೫೬–೫೮; ೧೭, ೧೨೫; ೧೯. ೮೫; ೨೧, ೯೩–೯೪.

ಉಲ್ಮುಖ (ಸಂ) > ಉನ್ಮುಖ (ಕ); ಮೇದೋಹಾ (ಸಂ) > ಮೇದೋಹೋತ (ಕ).

## ಗರ್ಭಸಂಧಿ

ಸಂಸ್ಕೃತ ಜೈಮಿನಿ ಭಾರತದಲ್ಲಿ ೨೨ನೆಯ ಅಧ್ಯಾಯದ ೮೫ನೆಯ ಶ್ಲೋಕದಿಂದ ಬಭ್ರುವಾಹನನ ಕಥಾನಕವು ಪ್ರಾರಂಭವಾಗುತ್ತದೆ. ಇದು ಅಧ್ಯಾಯ ೨೩, ೨೪, ೩೭, ೩೮, ೩೯, ೪೦ ರವರೆಗೆ ೧೩೫೬ ಸಾಲುಗಳಲ್ಲಿ ಹಬ್ಬಿದೆ; ಕನ್ನಡ ಜೈಮಿನಿ ಭಾರತದಲ್ಲಿ ೧೭, ೨೨, ೨೩, ೨೪ನೆಯ ಸಂಧಿಗಳಲ್ಲಿ ೨೫೩ ಷಟ್ಪದಿಗಳಾಗಿ (೧೫೧೮ ಸಾಲುಗಳಲ್ಲಿ) ಶ್ಲೋಕರಿಸುತ್ತದೆ.

ಈ ಕಾವ್ಯಭಾಗವು ಗರ್ಭಸಂಧಿಗೆ ಸಂಬಂಧಿಸಿದ್ದು. ಈ ಕಥೆಯೊಂದಿಗೆ ದೀರ್ಘವಾಗಿ ಮುಂಬರಿಯುವ (ಸಾನುಬಂಧಂ) ಸಂಗ್ರಹರಾಮಾಯಣದ ಕಥೆ (ಪತಾಕಾ) ಮತ್ತು ಪ್ರಾಸಂಗಿಕವಾದ (ಪ್ರದೇಶಭಾಕ್) ನಾಗಲೋಕದ ಕಥೆ (ಪ್ರಕರಿ) ಸಂಸ್ಕೃತ–ಕನ್ನಡ ಕಾವ್ಯಗಳೆರಡರಲ್ಲಿಯೂ ಬಂದಿವೆ. ಆದರೆ ಈ ಕಥಾನಕಗಳನ್ನು ಸನ್ನಿವೇಶೋಚಿತವಾಗಿ ಹೊಂದಿಸುವಲ್ಲಿ ಕವಿ ಲಕ್ಷ್ಮೀಶನು ತೋರಿದ ಜಾಣ್ಮೆ ಮನಮುಟ್ಟುವಂತಿದೆ.

ಸಂಸ್ಕೃತದಲ್ಲಿ

ತತೋ ಜಗಾಮ ಪುತ್ರಸ್ಯ ಸಹಯಃ ಶ್ವೇತವಾಹನಃ |
ರಮ್ಯಂ ಮಣಿಪುರಂ ನಾಮ ಬಭ್ರುವಾಹನಪಾಲಿತಂಮಾ
ನರಾಃ ಸತ್ಯವ್ರತಾ ಯತ್ರ ನಾರ್ಯಸ್ಯ ಪತಿಸೇವಕಾಃ ||

ಅ. ೨೨. ಶ್ಲೋಕ ೮೬, ೮೭

ಎಂದು ಸರ್ವೇಸಾಧಾರಣವಾದ ಜನರ ಆಚಾರಶೀಲತೆಯ ಉಲ್ಲೇಖದಿಂದ ಈ ಕಥಾನಕ ಪ್ರಾರಂಭವಾಗುತ್ತದೆ. ಇದರಲ್ಲಿ ಅಷ್ಟೊಂದು ರಸವತ್ತತೆ ಕಾಣುವುದಿಲ್ಲ. ಆದರೆ ಕನ್ನಡ ಜೈಮಿನಿ ಭಾರತದಲ್ಲಿಯಾದರೋ ಲಕ್ಷ್ಮೀಶ ಹಿಡಿದ ದಾರಿ ತನ್ನದೇ ಆಗಿದೆ. 'ಆ ಭೀಷಣನ ಸೀಮೆಯುಂ ಕಳೆದು ಬರೆ, ಮುಂದೆ ಧರೆಯ ಬೇಸಗೆಯ ಬೇಸರಂ ತವೆತವಿಸುತ್ತ ವರ್ಷಾಗಮಂ ಶೋಭಿಸಿತು' ಎಂದು ಲಕ್ಷ್ಮೀಶ ಹೇಳುತ್ತಾನೆ; ಅಲ್ಲದೆ ವರ್ಷಾಗಮವನ್ನು ೫ ಪದ್ಯಗಳಲ್ಲಿ ಸುಂದರವಾಗಿ ವರ್ಣಿಸುತ್ತಾನೆ. ಅನಂತರ ಬರುತ್ತದೆ ಪುರವರ್ಣನೆ; ಅದಕ್ಕೆ ೧೦ ಪದ್ಯಗಳು ಮೀಸಲಾಗಿವೆ. ಅಂತಹ ಆ ಪುರವನ್ನು ಕಂಡ ಅರ್ಜುನನು ಬೆರಗುವಟ್ಟು ಹಂಸಧ್ವಜನನ್ನು 'ಪೊಳಲಿದಂ ಪಾಲಿಪ ವೀರನಾವಂ? ಕುದುರೆಯಂ ಕಟ್ಟುವನೆ?' ಎಂದು ಬೆಸಗೊಳ್ಳುತ್ತಾನೆ. ಆಗ ಹಂಸಧ್ವಜನು ಬಭ್ರುವಾಹನನ ಗುಣ ಪ್ರಶಸ್ತಿಪೂರ್ವಕವಾಗಿ ಅಲ್ಲಿಯ ಜನರ ರೀತಿ–ನೀತಿಯ ಬಗೆಗೂ ತಿಳಿಸುತ್ತಾನೆ.

ಇಲ್ಲಿ ಪುರುಷಸ್ತ್ರೀಯರೊರ್ವರುಂ ಪಾತಕಿಗ
ಳಲ್ಲ;..............................ರಮಾ
ವಲ್ಲಭಂ ಪೊರೆವನೀ ನಗರಮಂ ತನಗಿದೆರಡನೆಯ ವೈಕುಂಠವೆಂದು ||
ನಿಲ್ಲದೆ ತುರಂಗಮಂ ಪೋಗಿ ಪೊಕ್ಕುದು ಬಿಡಿಸ
ಬಲ್ಲರಂ ಕಾಣೆನಾಂ ಫಲುಗುಣ, ಮುರಾಂತಕನ
ಮೆಲ್ಲಡಿಯ ಕರುಣಮೆಂತಿಹುದೊ!'

ಎಂದು ಹಂಸಧ್ವಜನು ತನ್ನ ಮಾತಿನ ಕೊನೆಯಲ್ಲಿ ಕುತೂಹಲವನ್ನು ಜಾಗೃತಗೊಳಿಸು

ತ್ತಾನೆ. ಮುಂದೆ ಕಥೆ ಏನಾಗುತ್ತದೆ ಎಂಬುದನ್ನರಿಯುವ ಔತ್ಸುಕ್ಯ ಓದುಗನಲ್ಲಿ ಯೋಚನೆ ಅರ್ಜುನನಲ್ಲಿ ಉದಯವಾಗುತ್ತದೆ.

ಸಂಸ್ಕೃತ ಕಾವ್ಯದಲ್ಲಿ ಅಧ್ಯಾಯ ೨೨ರ ಶ್ಲೋಕ ೮೫ ರಿಂದ ೯೭ ರವರಗೆ ಮಣಿಪುರದ ಮತ್ತು ಅಲ್ಲಿಯ ನಾಗರಿಕರ ವರ್ಣನೆಯಿದೆ. ಬಳಿಕ ಶ್ಲೋಕ ೯೮ರಲ್ಲಿ ಅರ್ಜುನನು 'ನಾವೀಗ ಎಲ್ಲಿ ಬಂದಿದ್ದೇವೆ?' ಎಂದು ಹಂಸಧ್ವಜನನ್ನು ಪ್ರಶ್ನೆ ಮಾಡುತ್ತಾನೆ.

ನಿರೀಕ್ಷ್ಯ ತತ್ತಥಾರೂಪಂ ನಗರಂ ಚಾರ್ಜುನೋಽಬ್ರವೀತ್ ।
ವಯಂ ಕುತ್ರೋಽತ್ರ ಸಂಪ್ರಾಪ್ತಾ ಮರಾಲಧ್ವಜ ಶಂಸ ಮೇ ॥

ಈ ಪ್ರಶ್ನೆ ಕಥಾನಕದ ಪ್ರಾರಂಭಕ್ಕೆ ಇದ್ದಿದ್ದರೆ ವರ್ಣನೆಯ ಸೊಬಗು ಪ್ರಾಸಂಗಿಕ ಔಚಿತ್ಯ ಹೆಚ್ಚುತ್ತಿತ್ತು. ಹಂಸಧ್ವಜನು ಬಭ್ರುವಾಹನನ ಹಿರಿಮೆಯನ್ನು ಹೇಳಿ ಕೊನೆಗೆ,

ಹಯಂ ಗ್ರಹೀಷ್ಯಂತಿ ಯದಿ ಸೌನಿಕಾಶ್ಚಾಸ್ಯ ಭೂಪತೇಃ ।
ಕ್ಲೇಶೇನ ಮಹತಾ ಮೋಕ್ತುಂ ಶಕ್ಯೋ ವಾಜಿನಂ ಪುನಃ ॥ ಅ. ೨೩. ಶ್ಲೋಕ ೭

(ಇವರು ಕುದುರೆಯನ್ನು ಕಟ್ಟಿದರೆ ಬಿಡಿಸಲು ಬಹಳ ಕಷ್ಟಪಡಬೇಕಾಗುತ್ತದೆ) ಎಂದು ಅಧೈರ್ಯದ ಮಾತನ್ನಾಡುತ್ತಾನೆ. ಹೀಗೆ ನುಡಿಯುತ್ತಿದ್ದಂತೆ,

ಏವಂ ಬ್ರುವತಿ ವೀರೇ ಹಿ ಗೃಧಃ ಪರಮದಾರುಣಃ ।
ಧನಂಜಯ ಕಿರೀಟಾಗ್ರೇ ಸ್ಥಿತೋ ಮೃತ್ಯುಪ್ರದರ್ಶಕಃ ।
ತೇನ ತೇ ವಿಸ್ಮಿತಾಃ ಸರ್ವೇ ತ್ರಾಸಂ ಜಗ್ಮುಶ್ಚ ಕಂಪಿರೆ ॥ ಅ. ೨೩. ಶ್ಲೋಕ ೭, ೮.

ಅಪಶಕುನವಾದುದನ್ನು ಸಂಸ್ಕೃತಪುರಾಣದಲ್ಲಿ ಹೇಳಿದೆ. ಇಲ್ಲಿ ವಾಚಕನ ಉತ್ಸುಕತೆಯನ್ನು ಕೆರಳಿಸುವ ಮಾತು ಇಲ್ಲವೇ ಇಲ್ಲ. ಎಲ್ಲವೂ ಖಂಡತುಂಡ ಮಾತು. ಇದೇ ಸನ್ನಿವೇಶವನ್ನು ಲಕ್ಷ್ಮೀಶ ಹೇಳುವ ರೀತಿಯೇ ಬೇರೆ:

ಭೂಲೋಲ ಕೇಳ್, ಮರಾಳಧ್ವಜನ ಮಾತನಿಂ
ತಾಲಿಸುವ ಪಾರ್ಥನ ಕಿರೀಟಾಗ್ರದೊಳ್ ಬಂದು
ಕಾಲೂರಿ ನಿಂದಿರ್ದುದೊಂದು ಪರ್ದೇನೆಂಬೆನುತ್ಪಾತದದ್ಭುತವನು ॥
ನೀಲಧ್ವಜಾದಿ ನೃಪರೆಲ್ಲರುಂ ತಮತಮಗೆ
ಮೇಲಣಪಜಯದ ಸೂಚನೆಯಲಾ ನರಂಗಕಟ
ಕಾಲಗತಿಯೆಂತಿಹುದೊ? ಶಿವಶಿವಾಯೆನುತೆ ಮನವಳುಕಿ ಚಿಂತಿಸುತಿರ್ದರು ॥
—ಸಂ. ೧೭, ಪ. ೧೮

ಇಲ್ಲಿ ಲಕ್ಷ್ಮೀಶನು ಈ ಕಥಾನಕದಲ್ಲಿ ಮುಂದೊದಗಲಿದ್ದ ಅರ್ಜುನನ ಮರಣದ ಸೂಚನೆಯನ್ನು ಕೊಡುವುದೇ ಇಲ್ಲ. ಸಂಸ್ಕೃತ ಮೂಲದಲ್ಲಿ ಎರಡು ಮೂರು ಸಲ ಅವನ ಮೃತ್ಯುವನ್ನು ವಾಚ್ಯವಾಗಿಯೇ ಹೇಳಿದೆ. ಲಕ್ಷ್ಮೀಶನು ಕಾಲದ–ವಿಧಿಯ–ಆ ಗುಟ್ಟನ್ನು ಬಹಿರಂಗಪಡಿಸುವುದಿಲ್ಲ. ಅದರಿಂದ ವಾಚಕರಿಗೆ ಅರ್ಜುನನ ಸಾವು ಅನಿರೀಕ್ಷಿತವಾಗಿ ಘಟಿಸುವಂತಾಗಿ ಆ ಘಟನೆಯಿಂದಲೂ ಆ ಕಥಾಸಂದರ್ಭಕ್ಕೆ ಒಂದು ಕಳೆ, ಒಂದು ಕಾಂತಿ ಏರುತ್ತದೆ; ರಸಪೋಷಣೆ ದೊರೆಯುತ್ತದೆ.

ವೀರಾಣಾಂ ಯುಧಿ ಶೂರಾಣಾಂ ಸಹಸ್ರೇಣ ತುರಂಗಮಮ್ ।
ರಾತ್ರೌ ಸದಸಿ ಚಾನೀಯ ದದರ್ಶ ಹರಿಮುತ್ತಮಮ್ ॥
ಅ. ೨೩. ಶ್ಲೋಕ ೧೧

ಸಂಸ್ಕೃತಪುರಾಣದಲ್ಲಿ ಹೇಳಿರುವ ಈ ಮಾತಿನಲ್ಲಿಯ 'ರಾತ್ರೌ' ಎಂಬ ಶಬ್ದದ ಆಧಾರದಿಂದ ಲಕ್ಷ್ಮೀಶನು ಅಸ್ತಮಯ ಸಮಯವನ್ನೂ ರಾತ್ರಿಯನ್ನೂ ಎರಡು ಪದ್ಯಗಳಲ್ಲಿ ವರ್ಣಿಸುತ್ತಾನೆ. ಕೇವಲ ಶಬ್ದದಿಂದ ಸಮಯವನ್ನು ಉಲ್ಲೇಖಿಸಿ ಸಾಗಿದ ಸಂಸ್ಕೃತ ಕಥನಕ್ಕೆ ಲಕ್ಷ್ಮೀಶನ ಈ ವರ್ಣನೆಯಿಂದ ಜೀವಂತಕಳೆ ಬಂದಿದೆ. ಪ್ರತ್ಯುತ್ಪನ್ನ ಮತಿಯಾದ ಲಕ್ಷ್ಮೀಶನು ತಳೆದ ಅನುವಾದಸ್ವಾತಂತ್ರ್ಯದ ಇನ್ನೂ ಕೆಲವು ಮಾದರಿಗಳನ್ನು ನೋಡಬಹುದು.

ಸಂಸ್ಕೃತಪುರಾಣದ ಬಭ್ರುವಾಹನನ ಓಲಗ :

ಸಭಾ ತಸ್ಯ ವಿಚಿತ್ರೈವ ರತ್ನಚಿತ್ರಾ ಹಿರಣ್ಮಯೀ ।
ಅಯುತಸ್ತಮ್ಭಸಂಯುಕ್ತಾ ನಾನಾಭಾವಪ್ರದರ್ಶಕಾಃ ॥ —ಅ. ೨೩, ಶ್ಲೋಕ ೧೩
ಸಜೀವಾ ಇವ ಲಕ್ಷ್ಯಂತೇ ರಾಜ್ಞಃ ಸದಸಿ ಶೋಭನಾಃ ॥
—ಅ. ೨೩, ಶ್ಲೋಕ ೧೫

ಇಷ್ಟಿದ್ದುದೇ ಕನ್ನಡ ಜೈಮಿನಿಭಾರತದಲ್ಲಿ,

ಸಜ್ಜುಕಂ ಮುಡಿವ ತಿಲಕಮನಿಡುವ ಮೊಗಮುರಿವ
ಕಜ್ಜಳಂ ಬರೆವ ಕನ್ನಡಿಯ ನಿಟ್ಟಿಪ ಪಾಡು
ವುಜ್ಜುಗದ ನರ್ತನದ ಕೋಪುಗಳ ವೀಣಾದಿ ವಾದ್ಯಮಂ ಬಿತ್ತರಿಸುವ
ಕಜ್ಜದ ಪಲವು ಕಲೆಗಳಂ ತೋಱುವಭಿನಯದ
ಸಜ್ಜೀವಮಾಗಿರ್ದ ಪುತ್ತಳಿಗಳವಯವದ
ಪಜ್ಜಳಿಪ ನವರತ್ನ ಭೂಷಣದ ಕಾಂತಿಗಳು ಕಣ್ಗೆಸೆದುವಾಸಭೆಯೊಳು ॥
—ಸಂ. ೧೭. ಪ. ೨೪

ಎಂಬುದಾಗಿ ವರ್ಣಿಸಿದೆ. ಶಿಲ್ಪ ಸೃಷ್ಟಿಯ ಸುಂದರ ಮೂರ್ತಿಗಳಾದ ವಿವಿಧ ಭಂಗಿಯಲ್ಲಿದ್ದ ಶಿಲಾಬಾಲಿಕೆಯರು ರಾಜವೈಭವದ ಸುವರ್ಣಾಭರಣಗಳನ್ನು ಧರಿಸಿದ ಶೋಭೆಯಿಂದೊಡಗೂಡಿದ್ದಾರೆ.

ಲಕ್ಷ್ಮೀಶನ ಇನ್ನೂ ಒಂದು ಗಣನೀಯ ವ್ಯತ್ಯಾಸವನ್ನು ಕಾಣುತ್ತೇವೆ. ಸಂಸ್ಕೃತಪುರಾಣದ ಬಭ್ರುವಾಹನನಿಗೆ ಅರ್ಜುನನು ತನ್ನ ತಂದೆಯೆಂಬುದು ಗೊತ್ತಿದೆ. ಅಲ್ಲದೆ, ಜನ್ನಗುದುರೆ ಬಂದಾಗ ತಾಯಿ ಚಿತ್ರಾಂಗದೆ ಹತ್ತಿರವೂ ಇಲ್ಲ. ಯಜ್ಞಾಶ್ವದ ಹಣೆಯ ಪಟ್ಟದ ಬರೆಹವದ್ನು ಓದಿದಾಗ, ಅದರ ನೆನಪೂ ಆಗುತ್ತದೆ. ಆಗ ಮಂತ್ರಿಶ್ರೇಷ್ಠನಾದ ಸುಬುದ್ಧಿಗೆ ಆ ಇತಿವೃತ್ತವನ್ನು ಅವನೇ ಹೇಳುತ್ತಾನೆ. ತನ್ನ ತಾಯಿ ಬಾಲ್ಯದಲ್ಲಿ ತಾಲತಪ್ಪಿ ಕುಣಿದುದು, ಅದರಿಂದ ಕುಪಿತನಾದ ತಂದೆ ಹೆಣ್ಣು ಮೊಸಳೆಯಾಗೆಂದು ಶಪಿಸಿದುದು, ಅರ್ಜುನನ ಪಾದಸ್ಪರ್ಶದಿಂದ ಶಾಪವಿಮೋಚನೆಯಾದುದು, ಬಳಿಕ ಆಕೆಗೂ ಅರ್ಜುನನಿಗೂ ಮದುವೆಯಾಗಿ ತಾನು ಹುಟ್ಟಿದುದು, ತಾಯಿ ಯುಧಿಷ್ಠಿರನಲ್ಲಿಗೆ ಹೊರಟುಹೋದುದು ಎಲ್ಲವನ್ನೂ ಮಂತ್ರಿಗೆ ತಿಳಿಸಿ, 'ನಾನು

ವಿಚಾರಮಾಡದೇ ಕುದುರೆಯನ್ನು ಕಟ್ಟಿ ತಂದೆಗೆ ದ್ರೋಹ ಬಗೆದೆ' ಎಂದು ಹಳಹಳಿಸುತ್ತಾನೆ. ಈ ಪ್ರಸಂಗದಲ್ಲಿ, ತಂದೆಯನ್ನು ಓಲಗಿಸುವುದೇ ಮಕ್ಕಳ ಧರ್ಮವೆಂದು—

ಪುತ್ರಾಣಾಂ ಪರಮೋ ಧರ್ಮಃ ಕ್ರಿಯತೆ ಪಿತೃ ಪೂಜನಮ್। (೨೩-೨೮)

—ಮಂತ್ರಿ ಮಾರ್ಗದರ್ಶನ ಮಾಡುತ್ತಾನೆ. ಆ ಮೇರೆಗೆ ಸಂಸ್ಕೃತಕಾವ್ಯದ ಬಭ್ರುವಾಹನನು ಅರ್ಜುನನನ್ನು ಕಾಣಲು ಹೋಗುತ್ತಾನೆ.

ಇಲ್ಲಿ ಲಕ್ಷ್ಮೀಶನು ಮಾಡಿರುವ ಬದಲಾವಣೆ ಕಥಾದೃಷ್ಟಿಯಿಂದ ಒಳ್ಳೆ ಮಹತ್ತ್ವವುಳ್ಳುದಾಗಿದೆ. ಅರ್ಜುನ ತನ್ನ ತಂದೆ ಎಂಬುದು ಲಕ್ಷ್ಮೀಶನ ಬಭ್ರುವಾಹನನಿಗೆ ತಿಳಿಯದು. ಚಿತ್ರಾಂಗದೆ ಮಣಿಪುರದಲ್ಲಿಯೇ ವಿರಹಜೀವನವನ್ನು ಸಾಗಿಸುತ್ತಿದ್ದಾಳೆ. ಬಭ್ರುವಾಹನನು ಸುಬುದ್ಧಿ ಮೊದಲಾದ ಶಿರಃ ಪ್ರಧಾನಿಗಳೊಡನೆ ಚರ್ಚಿಸಿಯೇ—(ಅರ್ಜುನ ಬಭ್ರುವಾಹನರು ಪಿತೃಪುತ್ರ ಸಂಬಂಧವನ್ನರಿಯರು)—

"ಯಜ್ಞತುರಂಗಮಂ ಕಟ್ಟಿಕೊಂಡೆವು ಮನೆಯೊಳು ; ಕೊಳುಗುಳಕೆ
ಮಿಡುಕುವರ್ ನಾಳೆನಾವಿನ್ನು ಹಿಂದುಳಿಯಬಾರದು ; ಕದನಕನು-
ವಾಗಿರಲಿ ಪಾಯದಳಂ"

ಎಂದು ನಿರ್ಣಯಕ್ಕೆ ಬರುತ್ತಾನೆ. ವಸ್ತುಸ್ಥಿತಿಯನ್ನರುಹಿ, ಕುದುರೆಯನ್ನು ಕಟ್ಟಿದುದು ತರವಾಗಲಿಲ್ಲ ಎಂದು ಮಗನಿಗೆ ಬಯ್ದು ಬುದ್ಧಿ ಹೇಳುವವಳು ತಾಯಿ. ಚಿತ್ರಾಂಗದೆ ಬಭ್ರುವಾಹನರಲ್ಲಿ ಸಂಭಾಷಣೆ ೫ ಪದ್ಯಗಳಲ್ಲಿ (ಸಂಧಿ ೧೭, ಪದ್ಯ ೩೧-೩೫) ನಡೆಯುತ್ತದೆ. ಈ ಬದಲಾವಣೆ ಕನ್ನಡ ಕಾವ್ಯದಲ್ಲಿ ಪ್ರಮುಖವಾದುದು. ಈ ವ್ಯತ್ಯಾಸದಿಂದ ಲಕ್ಷ್ಮೀಶ ತನ್ನ ಕಾವ್ಯಕ್ಕೆ ಸಂಸ್ಕೃತ ಮೂಲದಲ್ಲಿಲ್ಲದಿದ್ದ ವಿಧಾನ, ಉದ್ಭೇದ, ಭೇದ, ಕರಣ, ವಿಲಾಸ ಲಕ್ಷಣಗಳನ್ನು ತಂದುಕೊಂಡಿದ್ದಾನೆ. (ಈ ಲಕ್ಷಣಗಳ ವಿವರಣೆಯನ್ನು 'ಕಾವ್ಯವಸ್ತು' ಎಂಬ ಪ್ರಕರಣದಲ್ಲಿ ಮಾಡಿದೆ.) ಕಟ್ಟಿದ ಕುದುರೆಯನ್ನು ಹಾಗೆಯೆ ತಿರುಗಿ ಒಪ್ಪಿಸುವುದು ಕ್ಷಾತ್ರಕ್ಕೆ ಕುಂದು, ತಂದೆಗೆ ವಿರೋಧಿಯಾಗಿ ಯುದ್ಧ ಮಾಡುವುದನ್ನು ಧರ್ಮ ಒಪ್ಪದು. ಧರ್ಮಸಂಕಟಕ್ಕೆ ಸಿಕ್ಕಿಕೊಳ್ಳುತ್ತಾನೆ ಬಭ್ರುವಾಹನ. ಕೊನೆಗೆ ತಾಯಿಯ ಆದೇಶದಂತೆ, ಮಂತ್ರಿಯ ಸಮ್ಮತಿಯಂತೆ ಮಾತ್ರ ಪಿತೃಭಕ್ತನಾದ ಅವನು ಅರ್ಜುನನಿಗೆ ಯಜ್ಞಾಶ್ವವನ್ನೂ ತನ್ನ ಸರ್ವಸ್ವವನ್ನೂ ಒಪ್ಪಿಸಲು ನಿರ್ಧರಿಸಿ, ಅರ್ಜುನನನ್ನು ಕಾಣಲು ಹೊರಡುತ್ತಾನೆ.

ಆದರೆ, ಬಭ್ರುವಾಹನನು ಹೋಗಿ ತಂದೆ ಎಂಬ ಸಂಭ್ರಮದಿಂದ ಅರ್ಜುನನಿಗೆ ಕಾಣಿಕೆಯಿಟ್ಟು ನಮಸ್ಕರಿಸಿದಾಗ, ಅರ್ಜುನನ ಮನದ ಮೇಲಾಗುವ ಪರಿಣಾಮ, ಸನ್ನಿವೇಶದ ಬಣ್ಣವನ್ನೇ ಬದಲಾಯಿಸಿಬಿಡುತ್ತದೆ. ಬಭ್ರುವಾಹನ ಅರ್ಜುನನಿಗೆ ಪೂರ್ಣ ಅಪರಿಚಿತ. ಅದಕ್ಕನುಗುಣವಾಗಿಯೆ ಅವನು ಮಾತಿಗೆ ತೊಡಗುತ್ತಾನೆ.

'ಎಲೆ ನೃಪಾಲ ನೀನಾರು?' ಎಂದು ಕೇಳುತ್ತಾನೆ. ಬಭ್ರುವಾಹನನು ತಳೆದಿದ್ದ ಆಶೆಗೆ ಇದೊಂದು ಆಘಾತವೇ ಸರಿ. ತಾನು ಮಗ ಎಂಬುದು ತಂದೆಗೂ ಗೊತ್ತಿಲ್ಲವಲ್ಲ!

'ನೀನು ನನ್ನ ತಂದೆ' ಎಂದು ತಿಳಿಸಿಕೊಡಬೇಕಾಗುತ್ತದೆ. ಅಪೂರ್ವ ವಿಚಿತ್ರ

ಪ್ರಸಂಗ. ಹಿಂದಣ ಚರಿತ್ರವನ್ನೆಲ್ಲ ಅರ್ಜುನನು ದೀರ್ಘ ಕಾಲಾವಧಿಯಲ್ಲಿ ಮರೆತು ಬಿಟ್ಟಿರುತ್ತಾನೆ. ಅದನ್ನೆಲ್ಲ ಅರಿಕೆ ಮಾಡಿಕೊಳ್ಳಬೇಕಾಗುತ್ತದೆ. ಇಷ್ಟೆಲ್ಲ ಮಾಡಿದರೂ ಮೂರು ಲೋಕದ ಗಂಡನೆನಿಸಿದ ಅವನ ಮನಸ್ಸು ಕ್ಷಾತ್ರವೃತ್ತಿಯ ಮಾರ್ಗದಲ್ಲಿಯೇ ಹರಿಯುತ್ತದೆ. ವ್ಯಗ್ರತೆ ಅವನ ವಿವೇಕವನ್ನು ಮುಚ್ಚಿಬಿಡುತ್ತದೆ. ಬಭ್ರುವಾಹನನ ರೀತಿ ಹೇಡಿತನದ್ದಾಗಿಯೇ ಕಾಣುತ್ತದೆ. ಆಡಬಾರದ ಮಾತುಗಳನ್ನಾಡಿ, ನೀನು ನನ್ನ ಮಗನಲ್ಲವೆಂದು ಒದೆದು ನೂಕುತ್ತಾನೆ. ಅದರಿಂದ ಅನಿವಾರ್ಯವಾಗಿ ಬಭ್ರುವಾಹನನು ಪುತ್ರಧರ್ಮವನ್ನು ಬದಿಗಿಟ್ಟು, ತನ್ನ ಶೌರ್ಯವನ್ನು ವರೆಗೆ ಹಚ್ಚಿ ತೋರಿಸುವುದಕ್ಕಾಗಿ ತಂದೆಯೊಡನೆ ಯುದ್ಧಕ್ಕೆ ನಿಲ್ಲಬೇಕಾಗುತ್ತದೆ. ಈ ಸಂದರ್ಭದಲ್ಲಿ, ಯುದ್ಧದ ನಿರ್ಣಯ ವಾದೊಡನೆಯೇ ರಾಮಾಯಣದ ಕಥೆಯನ್ನು ಲಕ್ಷ್ಮೀಶನು ಹೇಳುತ್ತಾನೆ. ಈ ಕ್ರಮ ಬದ್ಧತೆ ಸಂಸ್ಕೃತ ಪುರಾಣದಲ್ಲಿ ಇಲ್ಲ. ಅಲ್ಲಿ,

> ರಥಾಸ್ತು ವಸ್ತುಜಾತಂ ತತ್ಪುರಮಧ್ಯೇ ಗತಂ ನೃಪ |
> ಪ್ರದ್ಯುಮ್ನಪ್ರಮುಖಾ ವೀರಾ ಮೋಹಿತಾಃ ಶರವೃಷ್ಟಿಭಿಃ ||
>
> —ಅ. ೨೪, ಶ್ಲೋಕ ೪೯

ಎಂದು ಪ್ರದ್ಯುಮ್ನ ಮೊದಲಾದ ವೀರರನ್ನು ಬಭ್ರುವಾಹನನು ಮೂರ್ಛೆಗೊಳಿಸಿದುದನ್ನು ಹೇಳಿ, ಕೂಡಲೇ ರಾಮಾಯಣದ ಕಥೆ ಹೇಳಲಾಗಿದೆ. ಕನ್ನಡ ಕಾವ್ಯದಲ್ಲಿ ಅರ್ಜುನನ ಬಿರುನುಡಿಗಳು ಮುಗಿದೊಡನೆ ಬಭ್ರುವಾಹನನು 'ತೆಗೆಸಿದಂ ತಂದಖಿಳ ವಸ್ತುವಂ, ಕುದುರೆಯಂ ಬಿಗಿಸಿದಂ ಲಾಯದೊಳ್....ಸೇನಾಧಿನಾಯಕರನು ಜಗಿಸಿದಂ ಚತುರಂಗ ಮಂ ನೆರಹಿ ಧಾತ್ರಿಯಂ ಮಿಗಿಸಿದಂ' ಎಂದು ಬಣ್ಣಿಸಿ ಹೇಳಲಾಗಿದೆ.

> ಕೇಳಿಲೆ ನೃಪಾಲಕುಲತಿಲಕ, ಮುಂದದ್ಭುತ ಕ
> ಥಾಳಾಪಮಂ. ಬಳಿಕ ಪೊಡಿದುದು ಕರ್ಕಶದ
> ಕಾಳಗಂ ಸವ್ಯಸಾಚಿಗೆ ಬಭ್ರುವಾಹನನ ಕೂಡೆ ಮಹದಾಹವದೊಳು ||
> ಹೇಳಲೇನಂದು ಸುರಪಂಗೆ ಪಾರ್ಥನೊಳಾದ
> ಕೋಳಾಹಳದ ಕದನದಂತೆ, ಮುನ್ನಧ್ವರದ
> ಬೇಳಂಬದಿಂದೆ ರಾಮಂಗೆ ಕುಶಲವರೊಡನೆ ಬಂದ ಸಂಗ್ರಾಮದಂತೆ ||
>
> —ಸಂ. ೧೭, ಪ. ೫೪

ಎಂದು ಜೈಮುನಿ ಹೇಳಿದುದನ್ನು ಕೇಳಿ ಜನಮೇಜಯನಿಗೆ ರಾಮನ ಕಥೆಯನ್ನು ಕೇಳುವ ಕುತೂಹಲವುಂಟಾಗುತ್ತದೆ. ಅದನ್ನು ಮುನಿ ವಿವರಿಸಿ ಹೇಳಿದ ಮೇಲೆ, ಲಕ್ಷ್ಮೀಶ ಅನುಸಾಲ್ವಾದಿಗಳೊಡನೆ ಬಭ್ರುವಾಹನನ ಸಮರವನ್ನು ಹೂಡುತ್ತಾನೆ. ಹೀಗೆ ಇಲ್ಲಿ ರಾಮಾಯಣದ ಕಥೆ ಔಚಿತ್ಯಪೂರ್ಣವಾಗಿ ಹೊಂದಿಕೊಂಡು ಬಂದಿದೆ.

ಯುದ್ಧಸನ್ನದ್ಧನಾದ ಬಭ್ರುವಾಹನನ ಸೈನ್ಯದ ಕೋಲಾಹಲವು ಸಂಸ್ಕೃತ ಪುರಾಣದಲ್ಲಿ ಕೇಳಬರುವುದು,

> ಘೋರೇಃ ಕಿಲಕಿಲಾಶಬ್ದೈಃ ಸಿಂಹನಾದೈಶ್ಚ ತರ್ಜನೈಃ || —ಅ. ೨೭, ಶ್ಲೋಕ ೭೫

ಎಂದು ಮಾತ್ರ. ಇದನ್ನು ಲಕ್ಷ್ಮೀಶನು ಓದುಗರ ಕಿವಿ ಗಡಚಿಕ್ಕುವಂತೆ ವಿವರಿಸುತ್ತಾನೆ:

'ತೇರವಂಗಡದ ಜರ್ಜಾರವಂ, ಗಜದ ಘಂ
ಟಾರವಂ, ಹಯದ ಹೇಷಾರವಂ, ನಡೆದ ಸೇ
ನಾರವಂ,..........................................
..........................................
.........ರಣ ಕಿಲಕಿಲಾರವಂ ಪಟಹಢ
ಕ್ಕಾರವಂ ಪುದಿದ ನಾನಾರವಂ ಕಿವಿಗತಿ ಕಠೋರವಮಂ ತೀವಿತಂದು ||

—ಸಂ. ೨೨, ಪ. ೪

ಪ್ರದ್ಯುಮ್ನ ಬಭ್ರುವಾಹನರ ಯುದ್ಧದಲ್ಲಿ ಬಭ್ರುವಾಹನನನ್ನು ಪ್ರದ್ಯುಮ್ನನನ್ನು 'ಅನಂಗ' ನನ್ನಾಗಿ ಮಾಡಿ ಹೆಸರನ್ನು ಸಾರ್ಥಕಗೊಳಿಸಿದ ಮಾತು ಸಂಸ್ಕೃತ ಕನ್ನಡ ಎರಡರಲ್ಲಿಯೂ ಸಾಮಾನ್ಯವಾಗಿದೆ. ಆದರೆ ಹೇಳುವ ಬೆಡಗಿನಲ್ಲಿ ಅಜಗಜಾಂತರ.

ಬಭ್ರುವಾಹಸ್ತತಃ ಕ್ರುದ್ಧೋ ಬಾಣಾನಾಮಯುತೇನ ತಮ್ ।
ಪ್ರದ್ಯುಮ್ನಮಪಿ ಸಂಗ್ರಾಮೇಽನಂಗಚಕ್ರೇ ಯಥೋಚಿತಮ್ ॥

—ಅ. ೨೩, ಶ್ಲೋಕ ೯೬, ೯೭

ಈ ಅಜದಷ್ಟಿದ್ದುದನ್ನೇ, ಬಭ್ರುವಾಹನನು ಪ್ರದ್ಯುಮ್ನನನ್ನು ಹೊಡೆಯುವ ಮುಂದೆ ತನ್ನ ಭಾವನವರೊಡನೆ (ಪ್ರದ್ಯುಮ್ನನೊಡನೆ) ಪರಿಹಾಸ್ಯಗೈದು ಆಡಿದ ಮಾತುಗಳನ್ನು ಸೇರಿಸಿ,

ಸರಸಭಾವದೊಳು ಭಾವಿಸೆ ಭಾವನವರಿಗಿದು
ವಿರಸವಾಗದೆ ಮಾಣದೀಗ ಸಂಗ್ರಾಮದೊಳ್
ಸರಸ ಕಾರ್ಮುಕಮಿಲ್ಲ, ಸರಸ ಶಿಂಜಿನಿಯಿಲ್ಲ, ಸರಸ ಬಾಣಂಗಳಿಲ್ಲ ||
ಸರಸಯುವತಿಯ ಕಟಾಕ್ಷದ ನೆಮ್ಮುಗೆಗಳಿಲ್ಲ;
ಪರುಷವಾಗದೆ ನೋಡು ರಣ! ಎನುತ ಪತ್ತು ಸಾ
ಸಿರ ಕೋಲ್ಗಳಂ ಮುಸುಕಿ ಹರಿತನಯನಂ ದಿಟದನಂಗನೆನಿಸಿದನಾರ್ಜುನಿ ||

ಎಂದು ಓದುಗನ ಮನ ಆಹ್ಲಾದಗೊಳ್ಳುವಂತೆ ಲಕ್ಷ್ಮೀಶನು ಚಿತ್ರಿಸಿದ್ದಾನೆ. ಪ್ರದ್ಯುಮ್ನ–ಬಭ್ರುವಾಹನರ ಯುದ್ಧಕ್ಕೆ ಲಕ್ಷ್ಮೀಶನು ಕೊಟ್ಟ 'ಸುಪರ್ಣ ಹನುಮಂತರ ಕದನದಂತೆ' ಎಂಬ ಉಪಮೆಯೂ ಸಂಸ್ಕೃತದಲ್ಲಿ ಇಲ್ಲ. ವೃಷಕೇತುವಿನ ಕತ್ತರಿಸಲ್ಪಟ್ಟ ರುಂಡದ ವರ್ಣನೆಯೂ ಕನ್ನಡಲ್ಲಿ ಮಾತ್ರವಿದೆ. ಓದುಗನಲ್ಲಿ ಮರುಕವನ್ನು ಹುಟ್ಟಿಸುವುದಕ್ಕೆ ಇದು ಅಗತ್ಯವಾಗಿದೆ.

ಸಂಸ್ಕೃತ ಪುರಾಣದಲ್ಲಿ ಅರ್ಜುನನಿಗಾದ ಶಾಪ, ಒದಗಿದ ಯುದ್ಧದ ಸಮಾಚಾರವನ್ನು ಕೇಳಿದ ಚಿತ್ರಾಂಗದೆ (ಹಸ್ತಿನಾವತಿಯಿಂದ) ಮಣಿಪುರಕ್ಕೆ ಧಾವಿಸಿ ಬರುತ್ತಾಳೆ. ಅರ್ಜುನನು ಮಡಿದಿರುವುದನ್ನು ಕಂಡು,

ಕ್ಷಣಂ ಪ್ರತೀಕ್ಷ ವೈ ಪುತ್ರ ಪಿತೃಘಾತಕ ದುರ್ಮತೇ ।
ಉಪಾಯಃ ಕರಣೀಯೋಽತ್ರ ಯದಿ ಜೀವೇದ್ಧನಂಜಯಮ್ ॥

(ಸ್ವಲ್ಪ ತಾಳು, ಪಿತೃಘಾತಕ! ಅರ್ಜುನನು ಜೀವಿಸುವಂತೆ ಉಪಾಯಮಾಡಬೇಕು)

ಎಂದು ಹೇಳುತ್ತಾಳೆ; ಉಪಾಯದ ಮಾತನ್ನು ಆಡುತ್ತಾಳೆ. ಇಲ್ಲಿ ಅವಳ ಕೃಷ್ಣಶ್ರದ್ಧೆಯ ಪ್ರಸ್ತಾಪವೇ ಇಲ್ಲ. ಇದನ್ನು ಲಕ್ಷ್ಮೀಶನು ತಕ್ಕಂತೆ ತಿರುಗಿಸಿದ್ದಾನೆ. ಇಲ್ಲಿ ಆಕೆ ಸಿಟ್ಟಿನಿಂದ ಮಗನನ್ನು ಬಯ್ದು

'ಫಲುಗುಣಂಗೆ ವನಜನಾಭಂ ಮಿತ್ರಂ. ಇನ್ನೆಗಂ ಮನದೊಳೆಂದು
ಅನುಪಮ ಕೃಪಾಳು ತಾನಿಲ್ಲಿಗೈದದೆ ಮಾಣ್ದಪನೆ? ಸೈರಿಸನ್ನೆಗಂ;
ನರನ ಜೀವಕ್ಕೆ ಪೊಣೆ ದೇವಪುರ ಲಕ್ಷ್ಮೀಶನು'

ಎಂದು ಮಗನಿಗೆ ಸಮಾಧಾನ ಹೇಳುತ್ತಾಳೆ. ಅವಳ ಈ ಮಾತಿನಲ್ಲಿ ಕೃಷ್ಣನಲ್ಲಿದ್ದ ಆಕೆಯ ಅಪಾರಶ್ರದ್ಧೆಯನ್ನು ಕಾಣುತ್ತೇವೆ. ಸತ್ತವರನ್ನು ಬದುಕಿಸುವುದಕ್ಕೆ ಉಪಾಯ ಪ್ರಯತ್ನವನ್ನು ಸೂಚಿಸುವವಳು ಕನ್ನಡ ಕಾವ್ಯದಲ್ಲಿ ಚಿತ್ರಾಂಗದೆಯಲ್ಲ, ಉಲೂಪಿ.

ಏವಂ ಬ್ರುವತಿ ದೇವೇಶೇ ವಿನಷ್ಟೌ ಧೃತರಾಷ್ಟ್ರಜೌ।
ಪಾಂಡವಸ್ಯ ಶಿರಃ ಪ್ರಾಪ್ತಂ ತದಾ ಮಣಿಪುರೇ ನೃಪ ॥ —ಅ. ೪೦, ಶ್ಲೋಕ ೧೩

ಹೀಗೆ ಪುರಾಣದಲ್ಲಿ ದೇವೇಶ ನುಡಿದೊಡನೆ ಧೃತರಾಷ್ಟ್ರಪುತ್ರರಿಬ್ಬರೂ ಸತ್ತು ಶಿರಸ್ಸು ಮಣಿಪುರಕ್ಕೆ ಬರುತ್ತದೆ. ಕನ್ನಡದಲ್ಲಿ ಕೃಷ್ಣಾಜ್ಞೆಯಂತೆ ಸುದರ್ಶನ ಚಕ್ರವು ಅವರನ್ನು ಕೊಂದು ತಲೆಗಳನ್ನು ತರುತ್ತದೆ. ಈ ಬದಲಾವಣೆಯಿಂದ ಪವಾಡ ಕಥೆಗೆ ಹೆಚ್ಚು ಸಹಜತೆಯುಂಟಾಗಿದೆ.

ತತಃ ಪ್ರರೂರೂದುಃ ಸರ್ವಾಃ ಸಹ ಕುಂತ್ಯಾ ಮಹಾಸ್ವನವ್ |
ಹಾ ಪಾಂಡವೇತಿ ಪತಿತಾಃ ಸರ್ವೇಷಾಂ ಪಶ್ಯತಾಮಪಿ ॥ —ಅ. ೪೦, ಶ್ಲೋಕ ೫

ಸಂಸ್ಕೃತದಲ್ಲಿ, ಎಲ್ಲರೂ ಅತ್ತರು ಎಂದು ಇದ್ದ ವಾರ್ತಾರೂಪದ ಮಾತನ್ನು ಲಕ್ಷ್ಮೀಶನು ನಾಲ್ಕು ಪದ್ಯಗಳಲ್ಲಿ (ಸಂ. ೨೪. ಪ. ೫೭-೬೦) ವಿಸ್ತರಿಸಿ ಶೋಕಪ್ರಸಂಗದ ಚಿತ್ರವನ್ನೇ ಕಣ್ಮುಂದೆ ನಿಲ್ಲಿಸಿದ್ದಾನೆ. ಬಭ್ರುವಾಹನ, ಉಲೂಪಿ, ಚಿತ್ರಾಂಗದೆ, ಕುಂತಿಯರು ತಮ್ಮ ತಮ್ಮ ಪರಿಯಲ್ಲಿ ಶೋಕಿಸುವುದನ್ನು ವೈವಿಧ್ಯಪೂರ್ಣವಾಗಿ ಚಿತ್ರಿಸಿದ್ದಾನೆ. ಕುಂತಿ ತನ್ನ ಸೆರೆಯಲ್ಲಿದ್ದ ಸರ್ವಶಕ್ತನಾದ ಕೃಷ್ಣನನ್ನು ಕುರಿತು ದುಃಖವನ್ನು ವ್ಯಕ್ತಪಡಿಸುತ್ತಾಳೆ. 'ಕಂಡೆಲೈ ಕೃಷ್ಣ, ಫಲುಗುಣನ ಇರವ? ಇನ್ನು ಭೂಮಂಡಲದೊಳೆನಗೆ ಸುತರಿರ್ದಪರೆ? ನೀನಾರ ಬಂಡಿಯಂ ಪೊಡೆದಪೈ?' ಎಂದು ಅಳುತ್ತ ವೃಷಕೇತುವಿನ ಮರಣದಿಂದ ಕರ್ಣನ ನೆನಪು ಮರುಕಳಿಸಲು 'ವೃಷಕೇತುವಿನ ಮುಖ ನೋಡಿ ಕರ್ಣನ ಮರಣ ದುಃಖವನ್ನು ಮರೆತಿದ್ದೆನು; ಈಗ ಅವನೂ ಇಲ್ಲದಾದನೆ?' ಎಂದು ಅಳುತ್ತಾಳೆ.

ಅರ್ಜುನ ವೃಷಕೇತುಗಳು ಮೃತಿಯಿಂದ ಸ್ಮೃತಿಗೊಂಡಾಗ ಕವಿ ಲಕ್ಷ್ಮೀಶ 'ಇಡಿದ ಕತ್ತಲೆಯಿಂ ಜಗುಳ್ದ ವಾರಿಜದಂತೆ, ಬಿಡದೆ ಮುಸುಕಿದ ಮೇಘಮಂ ಕಳೆದ ರವಿಯಂತೆ' ಎಂದು ಬಣ್ಣಿಸುತ್ತಾನೆ. ಈ ಬಣ್ಣನೆ ಮೂಲದಲ್ಲಿಲ್ಲ. ಅಲ್ಲದೆ, ಕೊನೆಗೆ ಅರ್ಜುನ ಮತ್ತು ಬಭ್ರುವಾಹನರಲ್ಲಿಯ ವಿರೋಧವು ಶಾಂತವಾಗುವುದೆಂಬುದನ್ನು 'ಅರ್ಜುನಂ ತನಯನಂ ಸಂತೈಸಿ' (೨೪.೭೯) ಎಂಬ ಒಂದು ಮಾತಿನಲ್ಲಿ ಹೇಳಿ ವಿರೋಧ

ಶಾಂತಿಯೆಂಬ ಶಕ್ತಿಲಕ್ಷಣಕ್ಕೆ ಎಡೆಮಾಡಿಕೊಡಲಾಗಿದೆ. ಆಮೇಲೆ ಕೃಷ್ಣಾರ್ಜುನಾದಿಗಳೆಲ್ಲರೂ ಮಣಿಪುರದಲ್ಲಿ ೫ ದಿನಗಳನ್ನು ಆನಂದದಿಂದ ಕಳೆದು ಯಜ್ಞಾಶ್ವದೊಡನೆ ಮುಂದುವರಿಯುತ್ತಾರೆ. ಇಲ್ಲಿಗೆ ಈ ಕಥಾನಕವು ಮುಗಿಯುತ್ತದೆ.

ಸಂಘರ್ಷ ಅಥವಾ ಹೋರಾಟವೇ ಈ ಕಥಾನಕದ ಜೀವಾಳ. ಈ ಮಾತು ಕನ್ನಡ ಜೈಮಿನಿ ಭಾರತದಲ್ಲಿ ಮಾತ್ರ ಸ್ಪಷ್ಟವಾಗಿ ಕಾಣುತ್ತದೆ. ಬಭ್ರುವಾಹನನು ಯುದ್ಧವನ್ನು ತಪ್ಪಿಸಲು ಹೋದರೆ ಅದು ಪ್ರಯತ್ನ ಮೀರಿ ಅನಿವಾರ್ಯವೇ ಆಗುತ್ತದೆ; ಅರ್ಜುನ ಸಾಯುತ್ತಾನೆ; ಬಭ್ರುವಾಹನನು ನಾಗಲೋಕಕ್ಕೆ ದಾಳಿಯಿಟ್ಟು ಪರಾಕ್ರಮದಿಂದ ಸಂಜೀವಕ ಮಣಿಯನ್ನು ತರುವಷ್ಟರಲ್ಲಿ ಅರ್ಜುನ ವೃಷಕೇತುಗಳ ರುಂಡಗಳೇ ಮಾಯವಾಗಿರುತ್ತವೆ; ಕೃಷ್ಣನ ಮಹಿಮೆಯಿಂದ ಆ ಇಬ್ಬರಿಗೆ ಪ್ರಾಣಪ್ರಾಪ್ತಿಯಾಗುತ್ತದೆ ಎಂಬ ಕಥಾನಕದ ಚೌಕಟ್ಟು ಎರಡೂ ಕಾವ್ಯಗಳಿಗೆ ಸಾಮಾನ್ಯವಾಗಿದೆ. ಆದರೆ, ಕನ್ನಡ ಕಾವ್ಯದಲ್ಲಿ ಚಿತ್ರಾಂಗದೆ ಮಣಿಪುರದಲ್ಲಿಯೇ ಇದ್ದು ತಂದೆ-ಮಕ್ಕಳಲ್ಲಿ ಹೋರಾಟವೆಸಗಬಾರದೆಂದು ಇಚ್ಛಿಸುವಳು; ಅವಳಿಚ್ಛೆಯಂತೆ ಮಗನ ವಿಚಾರ ಪರಿವರ್ತನೆ ಹೊಂದುವುದು. ಇಲ್ಲಿ ಅವರಿಬ್ಬರ ಮನದಲ್ಲಿ ಮಸಗಿದ ಒಳತೋಟಿಯನ್ನು ತೋರಿಸಲಾಗಿದೆ. ಅದರಂತೆ ಅರ್ಜುನ-ಬಭ್ರುವಾಹನರ ಪ್ರಥಮದರ್ಶನದ ಪ್ರಸಂಗವನ್ನೂ ನೆನೆಯಬಹುದು.

ಒದಗಿದ ಘಟನೆಗಳಿಂದ ನಡೆದ ಸಂಭಾಷಣೆಯಿಂದ ಪರಸ್ಪರರ ಚಿತ್ತದ ಮೇಲಾಗುವ ಪರಿಣಾಮಗಳನ್ನು ಪರಿಸ್ಫುಟವಾಗಿ ಚಿತ್ರಿಸುವ ಕಡೆ ಕವಿ ಲಕ್ಷ್ಮೀಶನು ತನ್ನ ಪ್ರತಿಭೆಯನ್ನು ಕೇಂದ್ರೀಕರಿಸಿದ್ದಾನೆ. ಇದರಿಂದ ಅವನ ಪಾತ್ರಗಳು ಸಜೀವವಾಗಿವೆ. ಸಂಸ್ಕೃತ ಪುರಾಣದಲ್ಲಿ ನಾಗಾಲೋಟದಿಂದ ಕಥೆ ಮುಂದೆಸಾಗುತ್ತದೆ.ಕನ್ನಡದಲ್ಲಿ ಕಥಾಪ್ರವಾಹವು ಅಲ್ಲಲ್ಲಿ ಧುಮ್ಮಿಕ್ಕಿ, ಘೂರ್ಮಿಸುತ್ತ ಟಿಸಿಲೊಡೆದು ಹರಿಯುತ್ತ, ಮತ್ತೆ ಕೂಡುತ್ತ ಸುಳಿಯುತ್ತ ಸಾಗುತ್ತದೆ. ಕಥಾನಕವನ್ನು ಹಿಗ್ಗಿಸುವಲ್ಲಿ, ಸೌಂದರ್ಯವನ್ನು ಹೆಚ್ಚಿಸುವಲ್ಲಿ ಕವಿಯ ಪ್ರತಿಭಾಶಕ್ತಿಯ ದರ್ಶನ ನಮಗಾಗುತ್ತದೆ. ಕುತೂಹಲವು ಸದಾ ಜಾಗೃತವಾಗಿರುವಂತೆ ಕಾಯ್ದುಕೊಂಡಿರುವುದು ಗಮನಕ್ಕೆ ಬರುತ್ತದೆ. ಅಲ್ಲದೆ, ತನ್ನ ಕಾವ್ಯವನ್ನು ಸಲಕ್ಷಣವಾಗಿ ಮಾಡುವ ದೃಷ್ಟಿಯಿಂದ ಸಾಧ್ಯವಿದ್ದಲ್ಲೆಲ್ಲ ಲಕ್ಷಣಗಳಿಂದ ಸಿಂಗರಿಸಿದ್ದಾನೆ ಕನ್ನಡ ಕವಿ. ಸಂಸ್ಕೃತದಲ್ಲಿ ಕಂಡುಬಾರದ ೮ ಲಕ್ಷಣಗಳು ಇಲ್ಲಿ ಕಂಗೊಳಿಸುತ್ತವೆ.

## ಸಂಗ್ರಹ ರಾಮಾಯಣ

ಸಂಗ್ರಹ ರಾಮಾಯಣದ ಕಥಾನಕವು ಕನ್ನಡ ಜೈಮಿನಿ ಭಾರತದಲ್ಲಿ ಸಂಧಿ ೧೮ರಿಂದ ೨೧ರ ವರೆಗೆ ೩೪೮ ಪದ್ಯಗಳಾಗಿ—೧೪೮೮ ಸಾಲುಗಳಾಗಿ ಹಬ್ಬಿದೆ. ಸಂಸ್ಕೃತ ಪುರಾಣದಲ್ಲಿ ಇದರ ವ್ಯಾಪ್ತಿ ಅಧ್ಯಾಯ ೨೫ ರಿಂದ ೩೬ರ ವರೆಗೆ ೭೦೯ ಶ್ಲೋಕ—೧೪೧೮ ಪಂಕ್ತಿಗಳಷ್ಟು.

ಕನ್ನಡ ಕಾವ್ಯದಲ್ಲಿಯ ಕಥಾನಕಕ್ಕೆ ಸಂತಾನಾಪೇಕ್ಷೆ—ಸಂತಾನ ಪ್ರಾಪ್ತಿ; ಅಶ್ವ

ಮೇಧಾಪೇಕ್ಷೆ—ತತ್ಪೂರ್ತಿ ಎಂಬ ಎರಡು ಕಥಾಬೀಜ-ಫಲಗಳು ಸ್ಪಷ್ಟವಾಗಿ ಒಡೆದು ಕಾಣುತ್ತವೆ. ಸಂಸ್ಕೃತ ಕಾವ್ಯದಲ್ಲಿ ಸಂತಾನಾಪೇಕ್ಷೆ-ಸಂತಾನ ಪ್ರಾಪ್ತಿ ಕಥೆಯ ಬೀಜ-ಫಲಗಳಿಗೆ ಮಹತ್ತ್ವವನ್ನೇ ಕೊಟ್ಟಿರುವುದಿಲ್ಲ. ಅದನ್ನು ಅತಿಸೂಕ್ಷ್ಮವಾಗಿ ಉಲ್ಲೇಖಿಸಿ ಮುಂದೆ ಸಾಗಲಾಗಿದೆ. ಸಂಸ್ಕೃತ ಜೈಮಿನಿ ಭಾರತವು ಪುರಾಣವಾಗಿದ್ದರೆ, ಕನ್ನಡ ಜೈಮಿನಿ ಭಾರತವು ಕಾವ್ಯವಾಗಿ ರೂಪಾಂತರಗೊಂಡಿದೆ ಎಂಬ ಮಾತನ್ನು ಸಿದ್ಧ ಪಡಿಸುವುದಕ್ಕೆ ಸಂಗ್ರಹ ರಾಮಾಯಣದ ಕಥೆಯ ತುಲನಾತ್ಮಕ ಅಭ್ಯಾಸವು ಸಾಕು.

ಸಂಸ್ಕೃತ ಜೈಮಿನಿ ಭಾರತದಲ್ಲಿ ರಾಮಾಯಣದ ಕಥೆ

ಶೃಣು ರಾಜನ್ ಮಹಾಬಾಹೋ ರಾಮಸ್ಯ ಚರಿತಂ ಮಹತ್
ವಿಸ್ತರೇಣ ಯಥಾಪೂರ್ವಂ ವದತೋ ಮೇ ನಿಶಾಮಯ
ರಾಮಸ್ತಂ ರಾವಣಂ ಹತ್ವಾ ಕುಂಭಕರ್ಣಂ ಮಹಾಬಲಮ್ ||

ಎಂದು ಆರಂಭವಾಗುತ್ತದೆ. ಇಲ್ಲಿ 'ವಿಸ್ತಾರೇಣ' ಮತ್ತು 'ಯಥಾಪೂರ್ವಂ' ಎಂಬ ಎರಡು ಪದಗಳಿಗೆ ಪ್ರಾಶಸ್ತ್ಯವಿದೆ.[1] ಸಂಸ್ಕೃತ ಕಾವ್ಯದಲ್ಲಿ ಕಥೆಯು ರಾವಣನ ಹನನ ದಿಂದ ಪ್ರಾರಂಭವಾಗಿದ್ದು, ಕನ್ನಡ ಕಾವ್ಯದಲ್ಲಿ ದಶರಥನ ಸಂತಾನಾಪೇಕ್ಷೆಯಿಂದ ಪ್ರಾರಂಭವಾದದ್ದು ಕಂಡುಬರುತ್ತದೆ. ಸಂಸ್ಕೃತ ಕಾವ್ಯಕಾರನು ರಾಮಾಯಣದಲ್ಲಿಯ ಅಪೂರ್ವ ಸನ್ನಿವೇಶವಾದ (ಯಥಾ+ಅಪೂರ್ವಂ)ರಾವಣವಧೆಯ ಘಟನೆಯಿಂದ ಕಥೆ ಯನ್ನು ಆರಂಭಿಸುತ್ತಾನೆ. ಆದರೆ ಲಕ್ಷ್ಮೀಶನು 'ವಿಸ್ತಾರೇಣ ಯಥಾಪೂರ್ವಂ' ಎಂಬು ದರ ಆಧಾರದ ಮೇಲಿಂದ ವಿಸ್ತಾರವಾದ ರಾಮಾಯಣ ಕಥೆಯನ್ನು ಪ್ರಾರಂಭದಿಂದ ಅನುಕ್ರಮವಾಗಿ-ರಾಮಜನನ, ಪಟ್ಟಾಭಿಷೇಕ ನಿರ್ಣಯ, ದಂಡಕಾರಣ್ಯವಾಸ, ಸೀತಾಪ ಹರಣ, ಸೀತೆಯ ಶೋಧ-ಹೀಗೆ ಹಂತ-ಹಂತವಾಗಿ ಮೊದಲಿಂದ ಕೊನೆಯವರೆಗೆ ೮ ಪದ್ಯಗಳಲ್ಲಿ ಸಂಗ್ರಹಿಸಿ ಹೇಳುತ್ತಾನೆ. ಇದು ಔಚಿತ್ಯಪೂರ್ಣವಾಗಿದೆ.

ದಶವರ್ಷ ಸಹಸ್ರಾಣಿ ರಾಜ್ಯಂ ಚಕ್ರೇ ಸ ರಾಘವಃ
ಪ್ರಜಾಂ ನ ಲೇಭೇ ಸೀತಾಯಾಂ ಪಾಲಯನ್ಪೂರ್ವಜಾಸ್ಥಿತಿಮ್ ||
ತತಃ ಕಾಲೇನ ಮಹತಾ ಗರ್ಭಮಾಧತ್ತ ಮಾರಿಷ
ತಕ್ಷತ್ರೇ ವೈಷ್ಣವೇ ತುರ್ಯೇ ಪಾದೇ ತದ್ದೇವತಾಭಿಧೇ ||
ಚರೆ ಲಗ್ನೇ ಪ್ರವೃತ್ತೇ ಚ ಮಾತುರ್ದೇಶಾಂತರಪ್ರದೇ
ತತಃ ಸ ಚತುರೋ ಮಾಸಾನ್ನೇಮೇ ಪತ್ನ್ಯಾ ಸಹೇಶ್ವರಃ ||

—ಅ. ೨೬, ಶ್ಲೋಕ ೧-೩

ಹೀಗೆ ಪುರಾಣದಲ್ಲಿ ಘಟನೆಗಳಿಂದ ತುಂಬಿದ ಕಥನವನ್ನೇ ಲಕ್ಷ್ಮೀಶನು ಕುಶಲ ಕೈವಾಡ ದಿಂದ ೨೧ ಷಟ್ಪದಿಗಳಲ್ಲಿ ಒಂದು ಕಾವ್ಯಶಿಲ್ಪದ ಸೃಷ್ಟಿಯನ್ನಾಗಿ ನಿರ್ಮಿಸಿದ್ದಾನೆ. ರಾಮನ ಸಂತಾನಾಪೇಕ್ಷೆಯನ್ನು ಬೀಜವಾಗಿರಿಸಿ, ಅದಕ್ಕೆ ಸೀತೆಯ ವಾಂಛಿತದ ನೀರೆರೆ

---

[1] ಯಥಾಪೂರ್ವ ಎಂಬುದಕ್ಕೆ ಅನುಕ್ರಮವಾಗಿ ಎಂದು ಅರ್ಥ. ಆದರೆ ಕಥಾನಕವನ್ನು ಎಲ್ಲಿಂದ ಪ್ರಾರಂಭಿಸಿ ಮುಂದೆ ಅನುಕ್ರಮವಾಗಿ ವಿವರಿಸಬೇಕು ಎಂಬುದು ಆ ಆ ಕಾವ್ಯದ ಕವಿಯ ನಿರ್ಣಯವನ್ನು ಅವಲಂಬಿಸಿದೆ.

ಯುತ್ತಾನೆ. ವಸಿಷ್ಠರ ಆಶೀರ್ವಾದದಿಂದ ಆ ಅಪೇಕ್ಷೆಯ ಸಾಫಲ್ಯದ ಭರವಸೆಯನ್ನೀ ಯುತ್ತಾನೆ. ರಾಮನು ರಾಜ್ಯವಾಳಿದ ರೀತಿ, ಅವನ ಗುಣಕೀರ್ತನ, ಅವನ ರತೀಚ್ಛೆ, ರಾಮಸೀತೆಯರು ರತಿಸುಖದಿಂದ ಶಮನಹೊಂದಿದ ಬಗೆ, ಪುಂಸವನೋತ್ಸವ ಕಾಲದಲ್ಲಿ ದ್ವಿಜಮುನಿ ಮೊದಲಾಗಿ ಸಕಲ ವರ್ಣದವರನ್ನು ದಾನದಿಂದ ತೃಪ್ತಿಪಡಿಸುವುದು, ಅಪವಾದಕ್ಕಾಗಿ ಸೀತೆಯ ಪರಿತ್ಯಾಗ, ಕೊನೆಗೆ ಲವಕುಶರ ಜನನವನ್ನು ಹೇಳಲಾಗಿದೆ ಮತ್ತು ಸಂ. ೧೯, ಪದ್ಯ ೪೬ ರಲ್ಲಿ ರಾಮಸೀತೆಯರ ಸಂತಾನಾಭಾವದ ದುಃಖ ಸರಿದು ಫಲ ದೊರೆತುದರ ಶಮನವನ್ನು, ಇಡೀ ಸೃಷ್ಟಿಯೇ ನಲವೇರಿತೆಂಬ ವರ್ಣನೆಯಿಂದ ಸೂಚಿಸಿ, ಕಥಾಬೀಜದ ಫಲವನ್ನು ಕವಿ ಲಕ್ಷ್ಮೀಶನು ತೋರಿಸಿದ್ದಾನೆ. ಇದರಿಂದ ಕನ್ನಡ ಕಾವ್ಯವು ಸಂಸ್ಕೃತ ಮೂಲದಲ್ಲಿಲ್ಲದ ೧೭ ಕಾವ್ಯ ಲಕ್ಷಣಗಳನ್ನಳವಡಿಸಿಕೊಂಡು ಕಂಗೊಳಿಸುವಂತಾಗಿದೆ. ಈ ಮಾತನ್ನು 'ಕಾವ್ಯವಸ್ತು' ಎಂಬ ಪ್ರಕರಣದಲ್ಲಿ ವಿವೇಚನೆ ಮಾಡಿದೆ.

ಸಂಸ್ಕೃತ ಕಾವ್ಯದಲ್ಲಿ ರಾಮನಿಗೆ ಕೆಟ್ಟಕನಸು ಬೀಳುವುದು, ಸೀತೆಯ ಗರ್ಭಕ್ಕೆ ೫ ನೆಯ ತಿಂಗಳು ಆರಂಭವಾದಾಗ. ಲಕ್ಷ್ಮಣನು ಸೀತೆಯನ್ನು ಭಾಗೀರಥೀ ತೀರದಲ್ಲಿ ಬಿಟ್ಟುಬಂದಂತೆ, ಆಕೆ ಪ್ರಲಾಪಿಸುತ್ತಿದ್ದಂತೆ ರಾಮನು ಕನಸು ಕಾಣುತ್ತಾನೆ. ಇದರ ಬಗ್ಗೆ ರಾಮ–ವಸಿಷ್ಠರಲ್ಲಿ ಚರ್ಚೆಯಾಗಿ ಪುಂಸವನವನ್ನು ಮಾಡಿದರೆಂಬುದಾಗಿ ಮೂಲ ಪುರಾಣದಲ್ಲಿದೆ. ಈ ಕ್ರಮವನ್ನು ಹಿಂದು–ಮುಂದು ಮಾಡಿಕೊಂಡಿದ್ದಾನೆ ಕವಿ ಲಕ್ಷ್ಮೀಶ. ಇವನಲ್ಲಿ ಪುಂಸವನ ಮೊದಲು,ಕನಸು ಆಮೇಲೆ. ಕೆಟ್ಟ ಕನಸಿನಿಂದ ಅಸ್ವಸ್ಥ ಚಿತ್ತನಾದ ರಾಮನು ರಾತ್ರಿಯಲ್ಲಿ ಊರಲ್ಲಿ ತಿರುಗಾಡಲು ಹೋಗುತ್ತಾನೆ. ಆಗ ಭೆಟ್ಟಿ ಯಾದ ಚರನೊಬ್ಬನಿಂದ ತನ್ನ 'ಗುಣಕೀರ್ತನ'ವನ್ನೂ 'ಅಪವಾದಕಥನ'ವನ್ನೂ ಅವನು ಕೇಳುತ್ತಾನೆ. ಇದು ಸಹಜವಾದ ಜೋಡಣೆ. ಸಂಸ್ಕೃತ ಕಾವ್ಯದಲ್ಲಿ ಚರರು ತಾವಾಗಿಯೇ ಬಂದು 'ಗುಣಕೀರ್ತನ' ಮಾಡಿ ಅಪವಾದವನ್ನು ಕಥಿಸುತ್ತಾರೆ. ಈ ರೀತಿ ಯಲ್ಲಿ ಅಷ್ಟೊಂದು ಸುಸಂಗತಿ ಇಲ್ಲ. ಕನ್ನಡ ಕಾವ್ಯದಲ್ಲಿ ಅಶುಭಸ್ವಪ್ನದ ಫಲವಾಗಿ ಅಪವಾದವನ್ನು ಕೇಳಬೇಕಾಯಿತು ಎಂಬುದನ್ನು ಸೂಚಿಸಿ, ಎರಡು ಘಟನೆಗಳ ಕಾರ್ಯ ಕಾರಣ ಸಂಬಂಧವನ್ನು ಕಾಯಲಾಗಿದೆ.

ತನ್ನ ಚಾರಿತ್ರ್ಯವು ಕುಲಕ್ಕೆ ಭೂಷಣಪ್ರಾಯವಾಗುವಂತೆ ಲೇಶಮಾತ್ರವೂ ಕಲಂಕವಿಲ್ಲದಿರಬೇಕು—'ರವಿಕುಲದ ರಾಯರಪಕೀರ್ತಿಯಂ ತಾಳ್ದಪರೇ?' ಎಂಬುದು ರಾಮನ ಜೀವನಧ್ಯೇಯ. ಅದಕ್ಕಾಗಿ ಅವನು ಸೀತಾದೇವಿಯನ್ನು 'ಕಲಿಯುಗದ ವಿಪ್ರರಾಚಾರಮಂ ಬಿಡುವಂತೆ' ಬಿಟ್ಟುಬಿಡಲು ನಿರ್ಧರಿಸುತ್ತಾನೆ. ಅವನ ಈ ವಿಚಾರ ವನ್ನು ಭರತ ಶತ್ರುಘ್ನರು ಪ್ರಬಲವಾಗಿ ವಿರೋಧಿಸುತ್ತಾರೆ. ಲಕ್ಷ್ಮಣನಿಗೂ ಇದು ಬೇಡಾದ ಹೊಲ್ಲಾದ ಮಾತೇ. ಆದರೆ ಅಣ್ಣನ ಉಗುಳನ್ನು ಎಂದೂ ದಾಟದ ಆ ಭ್ರಾತೃ ಭಕ್ತನು, 'ಅಣ್ಣ ದೇವನೊಳಿಡಿದ ವಾತ್ಸಲ್ಯವೆಂಬ ಬಲ್ಲಣ್ಣೆಯೊಳ್' ಸಿಕ್ಕು ಸೀತೆಯನ್ನು ಘೋರಾರಣ್ಯದಲ್ಲಿ ಬಿಟ್ಟುಬರಲು ಒಪ್ಪಿಕೊಳ್ಳುತ್ತಾನೆ.

ರಾಮನು, ಗರ್ಭಿಣಿ ಸೀತೆಯನ್ನು ಬಯಕೆಯೇನೆಂದು ವಿಚಾರಿಸಿದಾಗ ಅವಳು ಆಶ್ರಮವಾಸವನ್ನು ಬಯಸಿದಳೆಂದು ಸಂಸ್ಕೃತ ಪುರಾಣದಲ್ಲಿದೆ. ಕನ್ನಡ ಕಾವ್ಯದಲ್ಲಿ ಸೀತೆ ತಾನಾಗಿ ಏಕಾಂತದಲ್ಲಿ ಬಯಕೆಯನ್ನು ವ್ಯಕ್ತಪಡಿಸುತ್ತಾಳೆ. ಇಲ್ಲಿ ವಿಧಿವಿಲಾಸದ ಕೈವಾಡವನ್ನು ಕಾಣುತ್ತೇವೆ. ಸೀತೆಯ ಆಶ್ರಮವಾಸದ ಬಯಕೆ ಅವಳನ್ನು ಘೋರಾರಣ್ಯದತ್ತ ಸಾಗಿಸಲು ಅನುಕೂಲ ಮಾಡಿಕೊಡುತ್ತದೆ. 'ತಾಯೆ ನೀನೆತಕೆಳಸಿದೆ? ನಿನ್ನನೀಗ ರಘುರಾಯಂ ತಪೋವನಕೆ ಕಳುಹಿ ಬರಹೇಳಿದಂ' ಎಂದು ಒಳಗೊಳಗೆ ದುಃಖ ವಿಹ್ವಲನಾಗಿದ್ದ ಲಕ್ಷ್ಮಣನೆಂದುದಕ್ಕೆ, ಆ ಮಾತಿನ ಭಾವವನ್ನು ತಿಳಿಯದೆ 'ಸಂಭ್ರಮಾನ್ವಿತೆಯಾದಳಾಯತಾಂಬಕಿ ತನ್ನಭೀಷ್ಟಮಂ ಸಲಿಸುವಂ ಕಾಂತನೆಂದು' ಸೀತೆ ಹರ್ಷದಿಂದ ಉಬ್ಬುತ್ತಾಳೆ, ಎಂಬಲ್ಲಿ ಕವಿ ಲಕ್ಷ್ಮೀಶನು ಎರಡು ವಿರೋಧೀಭಾವಗಳನ್ನು ಹೃದಯಂಗಮವಾಗಿ ಚಿತ್ರಿಸಿ ಸೀತಾಪರಿತ್ಯಾಗದ ಪ್ರಸಂಗಕ್ಕೆ ಅನ್ಯಾದೃಶವಾದ ಶೋಭೆಯನ್ನು ತಂದಿದ್ದಾನೆ.

ರಾಮ ಭರತ ಶತ್ರುಘ್ನರಲ್ಲಿ ಸೀತಾತ್ಯಾಗದ ಯುಕ್ತಾಯುಕ್ತತೆಯ ಬಗ್ಗೆ ಚರ್ಚೆ ನಡೆದಾಗ,

> ಅಂತ್ಯಜೇಭ್ಯೋ ಬಲಾತ್ಕಶ್ಚಿತ್ಕಪಿಲಾಂ ಗಾಂ ಸಮಾನಯೇತ್ ।
> ಪಶ್ಚಾತ್ಸಂಸರ್ಗದುಷ್ಟತ್ವಾತ್ತ್ಯಜೇತ್ತಾಂ ವಿಪಿನೇ ತು ಕಃ ॥
>
> —ಅ. ೨೭, ಶ್ಲೋಕ ೫

ಎಂಬ ಮಾತು ಬರುತ್ತದೆ. ಇಲ್ಲಿ ಸೀತೆಯನ್ನು ಆಕಳಿಗೂ ರಾವಣನನ್ನು ದುಷ್ಟನಿಗೂ ಹೋಲಿಸಿದೆ. ಆಕಳು ದೇವರ ಸಮಾನ, ಅದನ್ನು ದುಷ್ಟನು ಕದ್ದೊಯ್ದನು. ದುಷ್ಟ ಸಹವಾಸ ಬಂದಿತು ಎಂಬ ಕ್ಷುಲ್ಲಕ ಕಾರಣದ ಮೂಲಕ ಆಕಳನ್ನು ಮತ್ತೆ ಅಡವಿಗಟ್ಟುವುದು ಯೋಗ್ಯವೆ? ಈ ದೃಷ್ಟಾಂತದಲ್ಲಿ ಸೀತೆಯ 'ದೇವತ್ವ' 'ಪಾವಿತ್ರ್ಯ'ಗಳನ್ನು ಸೂಚಿಸಿರುವುದಲ್ಲದೆ, ಅವಳ ಸದ್ಯದ ಸ್ಥಿತಿ, ತುಂಬಿದ ಗರ್ಭಿಣಿ ಎಂಬ ಅಸಹಾಯಕತೆಯೂ ಇದರಲ್ಲಿ ಅಡಕವಾಗಿದೆ. ಕನ್ನಡ ಸಂಗ್ರಹ ರಾಮಾಯಣವು ಕರುಣಾರಸದ ಒಂದು ರಸ ಘಟ್ಟ. ರಾಮನು ಪಡುವ ಸಂತಾನಾಪೇಕ್ಷೆಯ ಕೊರಗು ಮತ್ತು ಸೀತಾಪರಿತ್ಯಾಗದ ಕಷ್ಟ, ಸೀತೆ ಪರಿತ್ಯಕ್ತಳಾಗಿ ಅನುಭವಿಸುವ ದುಃಖವನ್ನು ಚಿತ್ರಿಸುವಲ್ಲಿ ಲಕ್ಷ್ಮೀಶನ ಚಿತ್ರಣಕಲೆಯ ಮಹೋನ್ನತಿಯನ್ನು ಕಾಣಬಹುದು. ಸಂಸ್ಕೃತ ಜೈಮಿನಿ ಭಾರತದ ಅ. ೨೭ ಶ್ಲೋಕ ೫ರ ಸ್ಫುರಣದಿಂದ ಲಕ್ಷ್ಮೀಶ 'ಕರೆವ ಕಪಿಲೆಯಂ ನಯವಿದರ್ ಪೊಡೆದಡವಿಗಟ್ಟುವರೆ?' ಎಂದು ಧ್ವನಿಯುಕ್ತವಾಗಿ ಹೇಳಿದ್ದಾನೆ. ಇಲ್ಲಿ ಸೀತೆಯನ್ನು ಹಾಲು ಕೊಡುವ ಆಕಳಿಗೆ ಹೋಲಿಸಿ ಅವಳು ಪೂರ್ಣ ಗರ್ಭಿಣಿ ಎಂಬುದನ್ನು ಸೂಚಿಸಿದೆ. ಕುಸುಮಕೋಮಲಸ್ವಭಾವದ ನಯನಾಜೂಕು ರೀತಿಯನ್ನು ಬಲ್ಲ ನೀನು ಈ ಸ್ಥಿತಿಯಲ್ಲಿ ಸೀತೆಯನ್ನು ತ್ಯಜಿಸುವುದು ಸರಿಯೇ ಎಂದು ಪ್ರಶ್ನಿಸುವುದು ಮೇಲಣ ವಾಕ್ಯದ ವಾಚ್ಯಾರ್ಥವಾಗಿದ್ದು 'ಎಂತಹ ಹೆಡ್ಡನೂ ಹಾಲುಕೊಡುವ ಆಕಳನ್ನು ಅಡವಿಗಟ್ಟುವುದಿಲ್ಲ. ಗೊಡ್ಡಾಕಳನ್ನು ಅಟ್ಟುತ್ತಾನೆ' ಎಂಬ ವ್ಯಂಜನಾರ್ಥವು ಅದರಲ್ಲಿ ಅಡಗಿದೆ.

ಹೀಗೆ ಭರತ ಶತ್ರುಘ್ನರು, ಸೀತೆಯನ್ನು ತ್ಯಜಿಸುವುದು ಯುಕ್ತವಲ್ಲವೆಂದು ಪ್ರತಿಪಾದಿಸುತ್ತಾರೆ. ಆದರೆ, ತಿದ್ದಿ ತೀರದ ವಿಲಗಕಂಜುವ ರಾಮನು ಅವಳನ್ನು ಬಿಡುವ ನಿರ್ಧಾರಕ್ಕೇ ಮನಸ್ಸಿಲ್ಲದ ಮನಸ್ಸಿನಿಂದ ಅಂಟಿಕೊಳ್ಳುತ್ತಾನೆ.

ಕನ್ನಡ ಜೈಮಿನಿ ಭಾರತದ ಸಂಧಿ ೧೯ರಲ್ಲಿ ಪದ್ಯ ೨,೧೬,೨೧,೨೨,೨೫, ೨೮ರಲ್ಲಿ ಲಕ್ಷ್ಮೀಶನು ಮೂಡಿಸಿರುವ ಸೀತೆಯ ಮತ್ತು ಲಕ್ಷ್ಮಣನ ಪಾತ್ರಚಿತ್ರಣಕ್ಕೆ ಸಂಸ್ಕೃತ ಕಾವ್ಯದ ಆಧಾರವೇನಿಲ್ಲ. ಈ ಪದ್ಯಗಳಲ್ಲಿ ಲಕ್ಷ್ಮಣನ ಅಸಹಾಯಕತೆ, ತನ್ನ ಅತ್ತಿಗೆಯ ಬಗೆಗೆ ಅವನಿಗಿರುವ ಪೂಜ್ಯಭಾವನೆ ಚಿತ್ರಿತವಾಗಿವೆ; ಮತ್ತು ಸೀತೆಯ ಪತಿಭಕ್ತಿ, ಆಕೆಯ ಉನ್ಮನದ ನಿಲುವು ಸ್ಫುಟವಾಗಿ ಕಂಡುಬರುತ್ತದೆ. ಕನ್ನಡ ಕಾವ್ಯದಲ್ಲಿರುವ ಗಂಗಾನದೀ ವರ್ಣನೆ (೧೯-೩೫) ಕೂಡ ಸಂಸ್ಕೃತ ಮೂಲದಲ್ಲಿಲ್ಲ.

ಸೀತೆ ಕಟ್ಟಡವಿಯಲ್ಲಿ ದುಃಖದಿಂದ ಹಲುಬುತ್ತಿರುವಾಗ ವಾಲ್ಮೀಕಿ ಋಷಿ ಕಾಣಿಸಿಕೊಳ್ಳುತ್ತಾನೆ. ಸೀತೆಯ ಪರಿಸ್ಥಿತಿಯನ್ನರಿತುಕೊಂಡು, ತನ್ನ ಪರಿಚಯವನ್ನು ಅವಳಿಗೆ ಹೇಳಿ, 'ನಮ್ಮಾಶ್ರಮಕ್ಕೆ ಬಂದೀರವ್ವಾ! ನಿಮಗೆ ಯಾವ ತೊಂದರೆಯೂ ಆಗದಂತೆ ನೋಡಿಕೊಳ್ಳುತ್ತೇವೆ' ಎಂದು ಭರವಸೆ ಕೊಟ್ಟು ಕರೆಯುತ್ತಾರೆ. ಆಗ ಸೀತೆ ಮೋಡವನ್ನು ಕಂಡ ನವಿಲಿನಂತೆ ಕುಣಿಯುತ್ತಾಳೆ ಎಂಬ ಉಪಮೆಯಿಂದ ಅವಳ ಮನಃಸ್ಥಿತಿಯನ್ನು ಸಂಸ್ಕೃತ ಕವಿ ತಿಳಿಸುತ್ತಾನೆ. ಇದರಲ್ಲಿ ಸಾಮಾನ್ಯ ಸೌಂದರ್ಯವಿದೆ. ಈ ಸಂದರ್ಭವನ್ನೇ ಚಿತ್ರಿಸಿ ತೋರಿಸುವಾಗ ಲಕ್ಷ್ಮೀಶನು ವಾಲ್ಮೀಕಿಯ ಅಂತಃಕರಣದ ಹೊನಲನ್ನೇ ಹರಿಸಿದ್ದಾನೆ. ವಾಲ್ಮೀಕಿಯು ಸೀತೆಯ ಪರಿಸ್ಥಿತಿಯನ್ನು ಅರಿತುಕೊಳ್ಳುವ ಮೊದಲು ತನ್ನ ಪರಿಚಯವನ್ನು ಮಾಡಿಕೊಡುತ್ತಾನೆ. ತಾನು ಯಾರೆಂಬುದು ತಿಳಿಯದೆ, ತನ್ನ ಚರಿತ್ರದ ಬಗೆಗೆ ನಚ್ಚಿಕೆಯಿಲ್ಲದೆ, ಇನ್ನೊಬ್ಬರು-ಅದರಲ್ಲೂ ಮಹಿಳೆ-ತನ್ನೊಡನೆ ಮನಬಿಚ್ಚಿ ಮಾತನಾಡಿಯಾಳೆ? ಲಕ್ಷ್ಮೀಶನ ವಾಲ್ಮೀಕಿ ಮಾತನಾಡುವ ಬಗೆ ಇಂತಿದೆ (ಸಂ. ೧೯, ಪ. ೩೯-೪೦): 'ನೀನಾವಳೌ? ಕಂಡ ಕುರುಪಾಗಿರ್ಪುದು', 'ಭೀರು ಹೇಳೌ ಹೆದರಬೇಡ, ವಾಲ್ಮೀಕಿ ನಾಂ, ಭೂರಿ ಶೋಕಾರ್ತರಾಗಿರ್ದರಂ ಕಂಡು ಸುಮ್ಮನೆ ಪೋಪನಲ್ಲ' ಎಂದು ತಂದೆಯ ಅಂತಃಕರಣದಿಂದ ಮಾತನಾಡಿಸಿ, ಸಾಂತ್ವನಗೊಳಿಸಿ ಧೈರ್ಯಹೇಳುತ್ತಾನೆ. ವಾಲ್ಮೀಕಿ ಎಂಬ ಶಬ್ದ ಕಿವಿಗೆ ಬಿದ್ದೊಡನೆ ಭೂಮಿಜೆಗೆ 'ಹರುಷ ಮೊತ್ತರಿಸಿದುದು, ಶೋಕವಿಮ್ಮಡಿಸಿದುದು, ಬೆರಸಿದುದು ಲಜ್ಜೆ.' ಅವಳ ಅಂತರಂಗದ ಈ ಚಿತ್ರಣದಲ್ಲಿ ಭಾವತ್ರಯದ ತ್ರಿವೇಣಿ ಸಂಗಮದ ಮಸಕವಿದೆ. ಪಾತ್ರಗಳ ಅಂತಃಕರಣದ ಮೂಲೆ ಮೂಲೆಯನ್ನು ಹೊಕ್ಕು ಅದರ ರೂಪಾಂತರಗಳನ್ನು ಕಾಣುವ ಕಣ್ಣು ಲಕ್ಷ್ಮೀಶನಿಗಿದೆ; ಕಾವ್ಯಸೌಂದರ್ಯದಲ್ಲಿ ಚಿತ್ರಿಸಿ ತೋರಿಸುವ ಕೌಶಲ್ಯವಿದೆ.

ಲವಕುಶರು ಆಶ್ರಮದಲ್ಲಿ ಬೆಳೆದ ಬಗೆಯನ್ನು ಸಂಸ್ಕೃತ ಕಾವ್ಯವು ಬಣ್ಣಿಸುವುದಿಲ್ಲ. ಆದರೆ ಲಕ್ಷ್ಮೀಶನು ಅದಕ್ಕೆ ಪ್ರಾಶಸ್ತ್ಯವಿತ್ತು ೬ ಪದ್ಯಗಳನ್ನು ವಿನಿಯೋಗಿಸಿದ್ದಾನೆ (ಸಂ. ೧೯, ಪ. ೪೭-೫೨). ಇದರಿಂದ ವಾಲ್ಮೀಕಿಯ ಪಾತ್ರದ ಪದರುಗಳನ್ನು ಬಿಡಿಸಿ ತೋರಿಸಿದ್ದಾನೆ.

ಲವಕುಶರ ಯುದ್ಧರೀತಿಯನ್ನು ಚಿತ್ರಿಸುವಲ್ಲಿ ಸಂಸ್ಕೃತ ಮತ್ತು ಕನ್ನಡ ಕಾವ್ಯಗಳೆರಡೂ ಒಂದಾಗಿವೆ. ಲಕ್ಷ್ಮಣ ಶತ್ರುಘ್ನರು ರಣರಂಗದಲ್ಲಿ ಮೈಮರೆತು ಬಿದ್ದುದನ್ನು ಕಂಡ ಚಾರರು ಬಂದು ಅವರು ಸತ್ತರೆಂದು ರಾಮನಿಗೆ ತಿಳಿಸುತ್ತಾರೆ. ಆಗ ರಾಮ ಭರತರಲ್ಲಿ ನಡೆಯುವ ಸಂಭಾಷಣೆ ಮಹತ್ತ್ವದ್ದು. ರಾಮನು ಲಕ್ಷ್ಮಣನ ಬಗ್ಗೆ ಚಿಂತೆಯಿಂದ ವಿಹ್ವಲನಾಗಿದ್ದಾನೆ, ಅಶ್ವಪರಿಭ್ರಮಣದ ಅವಧಿ ಮುಗಿಯಲು ಎರಡು ದಿನಗಳು ಮಾತ್ರ ಉಳಿದಿವೆ. ಇಂತಹ ಸ್ಥಿತಿಯಲ್ಲಿ ಸಂಸ್ಕೃತ ಕಾವ್ಯದ ಭರತನು ಆಡುವ ಮಾತು ಇದು.

'ಲಕ್ಷ್ಮಣನು ರಣರಂಗದಲ್ಲಿ ಮಡಿದು ಪವಿತ್ರನಾದನು. ಅವನು ಸೀತೆಯನ್ನು ಅರಣ್ಯದಲ್ಲಿ ಬಿಟ್ಟುಬಂದಂದಿನಿಂದ ಜೀವವನ್ನು ತ್ಯಜಿಸಲು ಅಪೇಕ್ಷಿಸುತ್ತಿದ್ದನು. ಇಂದು ಆ ಅಪೇಕ್ಷೆ ಕುಶನ (ಗಂಗೆಯಂತೆ ಪಾವನವಾದ) ಬಾಣಗಳಿಂದ ಈಡೇರಿತು. ನಾನೂ ಅವನಂತೆ ಪವಿತ್ರನಾಗುವುದಕ್ಕಾಗಿ ನನಗೆ ರಣರಂಗಕ್ಕೆ ಹೋಗಲು ಅಪ್ಪಣೆ ಕೊಡು.'

ಭರತನ ಈ ಮಾತಿನಲ್ಲಿ ಅಣ್ಣನಿಗಾಗಿ ಕಾದುವ, ಪ್ರಾಣಾರ್ಪಣ ಮಾಡುವ ಕರ್ತವ್ಯನಿಷ್ಠೆಯೇನೋ ವ್ಯಕ್ತವಾಗಿದೆ. ಮಾತು ಎಷ್ಟು ಕಠೋರ! ಎಂತಹ ಕರ್ಕಶ! ಲಕ್ಷ್ಮಣನು ರಣರಂಗದಲ್ಲಿ ಸತ್ತಿದ್ದರೆ ಆತನು ಪವಿತ್ರನೂ ಅಹುದು; ತಾನೂ ಹಾಗೆ ಸತ್ತರೆ ಪವಿತ್ರನಾಗುವುದು ನಿಜ. ಅದು ಕ್ಷಾತ್ರಕ್ಕೆ ಒಪ್ಪುವ ಮಾತು. ಅದನ್ನು ಹೀಗೆ ಆಡಬೇಕೆ? ಸೀತೆಯನ್ನು ಬಿಟ್ಟು ರಾಮನು ತಪ್ಪುಮಾಡಿದನೆಂಬ ರೊಚ್ಚು ಸಂಸ್ಕೃತ ಕಾವ್ಯದ ಭರತನಿಗೆ ಇನ್ನೂ ಇದೆ. ಅದಕ್ಕೇ ಕುನಿಸಿಟ್ಟುಕೊಂಡವನಂತೆ, ಮೊದಲೇ ನೊಂದಿದ್ದ ರಾಮನಿಗೆ ಗಾಯದ ಮೇಲೆ ಬರೆಕೊಟ್ಟು ಮಾತನಾಡುತ್ತಾನೆ. ಲಕ್ಷ್ಮೀಶನು ರಾಮನ ಕೋಮಲಹೃದಯವನ್ನು ತಿಳಿದವನಾಗಿದ್ದಾನೆ. ಅಂತೆಯೆ ಲಕ್ಷ್ಮೀಶನ ಭರತ ವಿಕಾರವಶನಾಗಿರುವುದಿಲ್ಲ. ಆದುದರಿಂದ ಕನ್ನಡ ಕಾವ್ಯದಲ್ಲಿ ವಿವೇಕದಿಂದಲೂ ನಯದಿಂದಲೂ ಅವನು ವರ್ತಿಸುತ್ತಾನೆ. ಚಾರರು ಲಕ್ಷ್ಮಣ ಶತ್ರುಘ್ನರು ಸಮರದಲ್ಲಿ ಅಳಿದರೆಂದು ಹೇಳಿದರೂ, ಭರತನು ರಾಮನನ್ನು ಕುರಿತು,

'............ಭಯವಿಹ್ವಲರ್ ಚಾರರಿವ
ರಱಿದಪರೆ? ಸೌಮಿತ್ರಿಶತ್ರುಘ್ನರಾಹವಶ್ರಮದಿಂದೆ ತನುಮನವನು ॥
ಮಱೆದರಲ್ಲದೆ ಮರಣಮೆತ್ತಣದು? ಸಾಕಿನ್ನು,
ಬಱಿದೆ ಚಿಂತಿಸಬೇಡ, ನಾಂ ಪೋಗಿ ಬಾಲಕರ
ಮಱಕಮಂ ಬಿಡಿಸಿ, ತಹೆನಶ್ವಮಂ ಕಳುಹೆನ್ನನು......॥'

—ಸಂ. ೨೧, ಪ. ೨೪

ಎಂದು ಸಾಂತ್ವನದ ಮಾತಾಡಿ ಯುದ್ಧಕ್ಕೆ ಹೊರಡಲು ಅಪ್ಪಣೆ ಕೇಳುತ್ತಾನೆ.

ಸಂಸ್ಕೃತ ಕಾವ್ಯದಲ್ಲಿ ಆಗೀಗ ಸೂರ್ಯಾಸ್ತದ ಉಲ್ಲೇಖ ಮಾತ್ರ ಬಂದಿದ್ದರೆ ಲಕ್ಷ್ಮೀಶನು ಅದರ ವರ್ಣನಚಿತ್ರವನ್ನು ಕೊಡುತ್ತಾನೆಂಬುದನ್ನು ಕಾಣುತ್ತೇವೆ. ಆದರೆ, ಸಂಸ್ಕೃತದಲ್ಲಿ ಅ. ೩೬, ಶ್ಲೋಕ ೧–೩ರಲ್ಲಿ ಬಂದಿರುವ,

ಏತಸ್ಮಿನ್ನಂತರೇ ಪ್ರಾಪ್ತೋ ಧನುರ್ವಿಸ್ಫಾರಯಂಕುಶಃ
ಖಡ್ಗಚರ್ಮಧರೋ ವೀರೋ ಲವಃ ಸಂಗ್ರಾಮಮಾಗಮತ್

ಪ್ರಕಾಶಯಿತ್ವಾ ಪೃಥಿವೀಂ ಕರೈಃ ಸಾಗರಮೇಖಲಾಮ್
ಸೂರ್ಯೋಽನ್ತರ್ಧಾನಮಾಪೇದೇ ಧ್ವಾನ್ತಶ್ಚ ಸಮುಪಾಗತ
ಆತ್ಮನಶ್ಚ ಪರೇಷಾಂ ಚ ವೀರೋ ನ ಜ್ಞಾಯತೇ ತದಾ ||

ಸೂರ್ಯಾಸ್ತದ ಮಾತನ್ನು ಚಿತ್ರಿಸುವ ಕವಿ ಲಕ್ಷ್ಮೀಶನ ರೀತಿಯೇ ತೀರ ಭಿನ್ನವಾಗಿದೆ. ಸೂರ್ಯಾಸ್ತವಾಗಿ ಕತ್ತಲೆ ಕವಿದರೂ ಯುದ್ಧ ನಿಲ್ಲಲಿಲ್ಲ, ಆವೇಶದಿಂದ ಮುಂದುವರಿದಿತ್ತೆಂದು ಸಂಸ್ಕೃತ ಕಾವ್ಯದ ಕಥನ. ಸೂರ್ಯಾಸ್ತದ ಕತ್ತಲಲ್ಲಿ ಸಮರ ಸಾಗಿತು ಎಂಬ ಮಾತನ್ನು ಬಿಲ್ಲುಗಾಳಿಗದ ಜೋಡಣೆಯಿಂದ ಲಕ್ಷ್ಮೀಶನು ಅದ್ಭುತವಾಗಿ ಚಿತ್ರಿಸುತ್ತಾನೆ. 'ಬಾಣಾಂಧಕಾರದೊಳಂದು ದೀಪವಿಲ್ಲದ ಮನೆವೊಲಾದುದು ರಣಾಂಗಣಂ ಕಾದುವರದೆಂತೊ ಭಟರು?' (೨೧.೧೩) ಸೂರ್ಯ ಹೋಗಲಿ, ದೀಪಗಳಿರುತ್ತವಲ್ಲ ಎಂದರೆ, ದಟ್ಟವಾಗಿ ಕವಿದ ಬಾಣಗಳಿಂದ ಆ ಮಿಣುಕು ಜೆಳಕೂ ಇಲ್ಲ ಕನ್ನಡ ಕಾವ್ಯದ ಕದನ ಕಣದಲ್ಲಿ.

ಕಥೆಯನ್ನು ಮುಗಿಸುವಾಗ ಸಂಸ್ಕೃತ ಕಾವ್ಯದಲ್ಲಿ ಗಡಿಬಿಡಿಯ ಸಂಕ್ಷೇಪತೆ ತಲೆಯೆತ್ತಿದೆ. ವಾಲ್ಮೀಕಿ ವರುಣಾಲಯದಿಂದ ಬಂದ, ಯುದ್ಧ ಸಮಾಚಾರವನ್ನು ಕೇಳಿದ, ರಾಮಾದಿಗಳನ್ನು ಮಂತ್ರಜಲದಿಂದ ಎಬ್ಬಿಸಿದ, ಸತಿಸುತರನ್ನು ಅವನಿಗೆ ಒಪ್ಪಿಸಿದ, ರಾಮನು ಆನಂದದಿಂದ ಯಜ್ಞವನ್ನು ಪೂರ್ತಿಗೊಳಿಸಿದ–ಹೀಗಿದೆ ಕಾಲ್‌ಪುಟಿಗೆಯಂತೆ ಅಲ್ಲಿಯ ಕಥನ. ಆದರೆ ಲಕ್ಷ್ಮೀಶನು ಪ್ರತಿಯೊಂದು ಪುಟಿಗೆಯನ್ನೂ ವಿವರವಾಗಿ ತಿಳಿಸುತ್ತಾನೆ. ಸಂ. ೨೧ರ ಪ. ೪೧ರಲ್ಲಿ ವಿಜಯಿಗಳಾದ ಲವಕುಶರು ರಾಮಾದಿಗಳ ಆಭರಣಗಳನ್ನೂ ವಾನರಶ್ರೇಷ್ಠರನ್ನೂ ತಂದು ಸೀತೆಯ ಚರಣಕ್ಕೆ ಹಾಕಿ ಹರ್ಷದಿಂದ ಉಬ್ಬುತ್ತಾರೆ. ಸೀತೆಗೆ ಆಭರಣಗಳು ರಾಮಾದಿಗಳವೆಂಬುದು ಹೊಳೆಯುವುದಿಲ್ಲ. 'ಅಡವಿಯಲ್ಲಿರುವ ನಮಗೇಕೆ ಆಭರಣಾದಿಗಳು?' ಎಂದು ಆಕೆ ಎನ್ನುತ್ತಾಳೆ. ಅಲ್ಲದೆ ತನ್ನ ಮಕ್ಕಳು ಆಶ್ರಮಧರ್ಮಕ್ಕೆ ವಿರುದ್ಧವಾಗಿ ನಡೆದರಲ್ಲಾ ಎಂಬ ಅಂಜಿಕೆಯಿಂದ ನಡುಗುತ್ತಾಳೆ; ವಾನರಶ್ರೇಷ್ಠರನ್ನು ಅಡವಿಯಲ್ಲಿ ಬಿಟ್ಟು ಬರಲು ತಿಳಿಸುತ್ತಾಳೆ. ಸಂ. ೨೧ ಪ. ೪೩ರಲ್ಲಿ ಯುದ್ಧದ ಸುದ್ದಿ ನಾರದನಿಂದ ವಾಲ್ಮೀಕಿಗೆ ತಿಳಿದು ಪಾತಾಳಲೋಕದಿಂದ ಬರುತ್ತಾನೆ. ಆಗ ಲವಕುಶರು ಸ್ವಾಭಾವಿಕವಾಗಿ ತಮ್ಮ ಪೌರುಷವಾರ್ತೆಯನ್ನು ಅವರೆದುರು ಬಣ್ಣಿಸಿಹೇಳುತ್ತಾರೆ. ಆಗ ಯುದ್ಧದ ವಿವರವು ಸೀತೆಗೆ ತಿಳಿದು ಬಂದು ಅವಳು 'ತಪ್ಪಾದುದೆನುತ ನಡುನಡುಗುವಳು' (೨೧.೪೬). ವಾಲ್ಮೀಕಿ ಲವಕುಶರೊಡನೆ ರಣರಂಗಕ್ಕೆ ಹೋಗಿ ರಾಮಾದಿಗಳನ್ನು ಎಬ್ಬಿಸಿ, ಬಾಲಕರ ಪರವಾಗಿ ಕ್ಷಮೆಯನ್ನು ಕೋರಿ, ರಾಮಾದಿಗಳನ್ನು ಭೋಜನದಿಂದ ತಣಿಸಿ, ದುಗ್ಧಾಭಿಷೇಕದಿಂದ ರಾಮನನ್ನು ಮನ್ನಿಸಿ, ಲವಕುಶರನ್ನು ಆತನ ಪಾದದಲ್ಲಿ ಕೆಡಹುತ್ತಾನೆ. ಈ ಸತ್ಕಾರ ಸಂದರ್ಭದಲ್ಲಿ ಸಂಸ್ಕೃತ ಕವಿ ಭೋಜನದ ವರ್ಣನೆಗೆ ಪ್ರಾಶಸ್ತ್ಯ ಕೊಟ್ಟು ಐದು ಶ್ಲೋಕಗಳಲ್ಲಿ ಅದನ್ನು ವಿವರಿಸುತ್ತಾನೆ (೬೯. ೨೬-೩೦). ಲಕ್ಷ್ಮೀಶನು ಸಾಹಿತ್ಯ-ಸಂಗೀತ-ಕಲೆಗಳಿಗೆ, ಸತ್ಕೃತರಾಮನ ಸಮ್ಮುಖದಲ್ಲಿ ಆತನ ಮಕ್ಕಳ ಜಾಣ್ಮೆಯ ಪ್ರದರ್ಶನಕ್ಕೆ ಮಹತ್ತ್ವ

ಕೊಟ್ಟಿರುತ್ತಾನೆ. ವಾಲ್ಮೀಕಿಯಿಂದ ಕಲಿತಿದ್ದ ರಾಮಾಯಣವನ್ನು ಲವಕುಶರು ರಾಮನೆದುರಲ್ಲಿ ಹಾಡುತ್ತಾರೆ. ಅದರ ವರ್ಣನೆಯಲ್ಲಿ ಸಂಗೀತಶಾಸ್ತ್ರದ ಜೋಕೆ, ಜತಿ, ರೀತಿ, ತಾಳ, ತಾರ, ಮಧ್ಯ, ಮಂದ್ರ ಇತ್ಯಾದಿ ಪಾರಿಭಾಷಿಕ ಶಬ್ದಗಳನ್ನೂ ಸಾವೇರಿ, ಗುಜ್ಜರ, ಗೌಳ, ಪಳಮಂಜರಿ ಇತ್ಯಾದಿ ರಾಗಗಳ ಹೆಸರುಗಳನ್ನೂ ಲಕ್ಷ್ಮೀಶ ಉಲ್ಲೇಖಿಸುತ್ತಾನೆ (೨೧.೫೬, ೫೭, ೫೮). ಇದು ಲಕ್ಷ್ಮೀಶನ ಸಂಗೀತಾಭಿಜ್ಞತೆಯ ದ್ಯೋತಕವಾಗಿದೆಯಲ್ಲದೆ, ಅವನ ಸಂದರ್ಭೌಚಿತ್ಯ ಜ್ಞಾನಕ್ಕೆ ಸಾಕ್ಷಿಯೂ ಆಗಿದೆ.

ವಾಲ್ಮೀಕಿ ಲವಕುಶರನ್ನು ರಾಮನಿಗೊಪ್ಪಿಸಿ ಒಬ್ಬೊಂಟಿಗನಾಗಿ ಆಶ್ರಮಕ್ಕೆ ಹಿಂದಿರುಗುತ್ತಾನೆ. ಆಗ ಸೀತೆ, 'ತನ್ನ ಸುತರನಾರ್ಗಿತ್ತು ನೀನ್ನೈತಂದೆ ತಂದೆ?' ಎಂದು ಮುನಿಯ ಪಾದದಲ್ಲಿ ಬಿದ್ದು ಶೋಕಿಸುತ್ತಾಳೆ (೨೧.೬೪). ಅದಕ್ಕಾತನು ಅವಳನ್ನು ಸಂತಯಿಸಿ, ಸಮಸ್ತ ವೈಭವದೊಡನೆ ಅಯೋಧ್ಯಾಪುರಕ್ಕೆ ಕರೆದೊಯ್ದು ರಾಮನಿಗೆ ಒಪ್ಪಿಸುತ್ತಾನೆ, ಎಂಬುದಾಗಿ ಕನ್ನಡ ಜೈಮಿನಿ ಭಾರತದ ಕಥಾನಕ ಮುಗಿಯುತ್ತದೆ.[1]

## ಅವಮರ್ಶಸಂಧಿ

ಸಂಸ್ಕೃತ ಕಾವ್ಯದಲ್ಲಿ, ಅವಮರ್ಶ ಸಂಧಿಯ ತಾಮ್ರಧ್ವಜ, ವೀರವರ್ಮ, ಚಂದ್ರಹಾಸ, ದುಶ್ಶಳೆ, ಮತ್ತು ಬಕದಾಲ್ಭ್ಯ ಆಖ್ಯಾನಗಳು ಅಧ್ಯಾಯ ೪೧ ರಿಂದ ೬೧ ಪೂರ್ಣ, ೧೨೮೨ ಶ್ಲೋಕಗಳಲ್ಲಿ ಎಂದರೆ ೨೫೬೪ ಸಾಲುಗಳಲ್ಲಿ ಬಂದಿವೆ. ಇವೇ ಕನ್ನಡ ಜೈಮಿನಿ ಭಾರತದಲ್ಲಿ ಸಂಧಿ ೨೫ ರಿಂದ ೩೨ ಪೂರ್ಣ, ೪೯೭ ವಾರ್ಧಕ ಷಟ್ಪದಿಗಳು, ೨೯೮೨ ಸಾಲುಗಳನ್ನು ವ್ಯಾಪಿಸಿವೆ.

ತಾಮ್ರಧ್ವಜಾಖ್ಯಾನದ ಪ್ರಾರಂಭದಲ್ಲಿ, ಜನಮೇಜಯನು ಜೈಮಿನಿಯೊಡನೆ ಮಾತನಾಡುವಾಗ ಸಂಸ್ಕೃತ ಕಾವ್ಯದಲ್ಲಿ,

ಬಿಲಾನಿ ತಾನಿ ಮನ್ಯೇಽಹಂ ಮುಖಾನಿ ಜಗತಾಂ ಪತೇ ।
ಪ್ರವದಂತಿ ನ ಮಹಾತ್ಮ್ಯಂ ಯೇಷಾಂ ಪೂರ್ಣಾನಿ ಕೀಟಕೈಃ ॥

ಎಂಬುದಾಗಿ ಕೃಷ್ಣ ಸ್ಮರಣೆ ಮಾಡದವರ ಮುಖಗಳನ್ನು ಬಣ್ಣಿಸಲಾಗಿದೆ. ಇಲ್ಲಿ ಬಳಸಿದ ಉಪಮೆ ಅಸುಂದರವಾಗಿದೆ. ಬೀಭತ್ಸವೂ ಎನಿಸುತ್ತದೆ. ಈ ಮಾತನ್ನು ಕನ್ನಡ ಕಾವ್ಯದಲ್ಲಿ ತೆಗೆದುಹಾಕಿ 'ಕೃಷ್ಣ ಚರಿತಾಮೃತವನೀಕಿವಿಗಳೊಲಿದೀಂಟಿತಣಿದಪುವೆ' ಎಂಬ ಪ್ರಶ್ನೆಯಿಂದ ಕೃಷ್ಣಸ್ಮರಣೆಯ ಮಹತಿಯನ್ನು ಕಾಯ್ದುಕೊಳ್ಳಲಾಗಿದೆ.

ಸಂಸ್ಕೃತ ಕಾವ್ಯದಲ್ಲಿ ಋತುವರ್ಣನೆಗೆ ಕವಿ ಎಡೆಕೊಟ್ಟಿಲ್ಲ. ಹೀಗಾಗಿ ಅವಮರ್ಶ ಸಂಧಿಯಲ್ಲಿ ಬರುವ ಶರತ್–ಹೇಮಂತ–ಶಿಶಿರ ಋತುಗಳ ವರ್ಣನೆ ಲೋಪವಾಗಿದೆ.

---

[1] ಲಕ್ಷ್ಮೀಶನು ಹೆಚ್ಚು ಕಡಿಮೆ ಮಾಡಿಕೊಂಡ ಅಥವಾ ಸರಿಪಡಿಸಿಕೊಂಡ ಭಾಗಗಳ ಸಂಸ್ಕೃತ ಕಾವ್ಯದ ಸಂದರ್ಭಸೂಚಿ ಇಂತಿದೆ: ೨೬.೪೨, ೨೬.೫೫–೬೧; ೨೭.೧೫; ೨೭.೨೦, ೨೩–೨೪; ೫೫–೬೦, ೬೪–೬೭; ೨೮.೩೪–೩೬, ೬೦, ೬೧, ೭೧–೭೩, ೭೬; ೨೯. ೯–೧೧, ೨೬–೩೦, ೪೨–೫೫, ೬೪; ೩೧. ೧೩–೧೫, ೧೯–೨೨, ೫೪; ೩೩. ೧–೫; ೩೫. ೧೫–೧೯.

೨೫ ನೆಯ ಸಂಧಿಯ ೭ ನೆಯ ಒಂದು ಪದ್ಯದಲ್ಲಿಯೇ, 'ಧರ್ಮನ ಯಜ್ಞಾಶ್ವವು ಯಾವ ಊರಿಗೆ ಹೋಯಿತು, ಅಲ್ಲಿ ಅರಸ ಯಾರು, ಅವನೂ ಅಶ್ವಮೇಧವನ್ನು ಹೂಡಿದ್ದನೇ, ಅವನ ಯಾಗಸ್ಥಳ ಎಲ್ಲಿ, ಅಶ್ವರಕ್ಷಣೆಗೆ ಯಾರಿದ್ದರು' ಮುಂತಾದ ಮಹತ್ತ್ವದ ವಿಷಯ ವಿವರಣೆಯನ್ನು ಲಕ್ಷ್ಮೀಶನು ತಿಳಿಸುತ್ತಾನೆ. ಅಲ್ಲಿಯ ಪರಿಸ್ಥಿತಿಯ ಅರಿವಾಗುವುದಕ್ಕೆ ಇಷ್ಟು ಮಾತು ಸಾಕು, ಈ ರೀತಿ ಸೊಗಸು ಎನಿಸುತ್ತದೆ. ಮುಂದಣ ಕಥೆಯನ್ನು ತಿಳಿಯಲು ಆತುರಪಡುತ್ತಿದ್ದ ಓದುಗನ ಮನಸ್ಸಿಗೆ ಕಥನದ ಈ ಓಟ ಪ್ರಸಂಗೋಚಿತವಾಗಿದೆ. ಇದು ಲಕ್ಷ್ಮೀಶನ ಕಥನಕೌಶಲದ ಸಾಕ್ಷಿ. ಆದೇ, ಇಷ್ಟು ಮಾತ್ರ ತಿಳಿದುಕೊಳ್ಳುವುದಕ್ಕೆ ಸಂಸ್ಕೃತ ಕಾವ್ಯದಲ್ಲಿ ಅಧ್ಯಾಯ ೪೧ ಶ್ಲೋಕ ೩೬ರ ವರೆಗೆ ಸಾಗಲೇಬೇಕು. ತಾಮ್ರಧ್ವಜ–ಅರ್ಜುನರ ಸೈನ್ಯಗಳು ಸಮರಸನ್ನದ್ಧವಾಗಿವೆ. ಅರ್ಜುನನ ಸೈನ್ಯವು ಗೃಧ್ರಾಕಾರದ ವ್ಯೂಹವನ್ನು ರಚಿಸಿ ನಿಂತಿದೆ. ಅದರ ವರ್ಣನೆ

ಗೃಧ್ರಸ್ಯ ಚ ಮುಖೇ ರಾಜಾ ಗ್ರೀವಾಯಾಮನುಶಲ್ವಕಃ
ಹಂಸಧ್ವಜೋ ನೇತ್ರಸಂಸ್ಥಃ ಪಕ್ಷಯೋರ್ಯದುನಂದನೌ ||

ಎಂದು ಸಂಸ್ಕೃತದಲ್ಲಿದ್ದರೆ, ಕನ್ನಡದಲ್ಲಿ ಆ ಮಾತನ್ನು ಸ್ವಲ್ಪ ತಿದ್ದಿಕೊಂಡು 'ಕಂಗಳೊಳ್ನೀಲ ಹಂಸಧ್ವಜರು' ಹೇಳಲಾಗಿದೆ. ಗೃಧ್ರಕ್ಕೆ ಎರಡು ಕಣ್ಣು, ಇಬ್ಬರು ರಾಜರು ಬೇಕು ಎಂಬ ಅರ್ಥದಿಂದ ಲಕ್ಷ್ಮೀಶನು ನೀಲಧ್ವಜನ ಹೆಸರೊಂದನ್ನು ಸೇರಿಸಿದನೆಂದು ಕಾಣುತ್ತದೆ.

ಮಯೂರಧ್ವಜನ ಆಸ್ಥಾನಕ್ಕೆ ಅರ್ಜುನನೊಡನೆ ವೇಷಾಂತರದಿಂದ ಹೋಗಿದ್ದ ಕೃಷ್ಣನು ತನ್ನ ಮಗನ ಹೆಸರನ್ನು 'ಕೃಷ್ಣಶರ್ಮ' ಎಂದೂ, ಅವನಿಗಾಗಿ ನೋಡಲು ಬಂದಿದ್ದ ಕನ್ಯೆಯ ತಂದೆಯಾದ ಪುರೋಹಿತನ ಹೆಸರನ್ನು 'ಸತ್ಯಶೀಲ' ಎಂದೂ ಕನ್ನಡ ಕಾವ್ಯದಲ್ಲಿ ಹೇಳಿದೆ. ಸಂಸ್ಕೃತ ಕಾವ್ಯದಲ್ಲಿ ಪುರೋಹಿತನ ಹೆಸರೇ ಕೃಷ್ಣಶರ್ಮನೆಂದಿದ್ದು ಮಗನ ಹೆಸರಿನ ಉಲ್ಲೇಖವಿಲ್ಲ. ಮಗನ ಹೆಸರನ್ನು ಹೇಳುವುದು ಅಗತ್ಯವೆಂದೂ, ಅವನೇ ಕೃಷ್ಣಶರ್ಮನಾಗಿರುವುದು ಉಚಿತವೆಂದೂ ಲಕ್ಷ್ಮೀಶನ ಸೂಕ್ಷ್ಮಮತಿಗೆ ಹೊಳೆದಿರಬೇಕು. ಮಯೂರಧ್ವಜ ಮತ್ತು ಅವನ ಸತಿ ಕುಮುದ್ವತಿಯರ ಸಂಭಾಷಣೆ ಅಧ್ಯಾಯ ೪೬, ಶ್ಲೋಕ ೩೮–೪೧ರಲ್ಲಿ ಬಂದಿದೆ. ಕುಮುದ್ವತಿ ಪತಿಯ ತಲೆಯನ್ನು ಕೊರೆಯುವಾಗ ಉದ್ವಿಗ್ನಳಾಗಿ, 'ಸಿಟ್ಟಾದ ನರಸಿಂಹನು ಕಂಬವನ್ನು ಸೀಳಿ ಹೊರಬಂದಂತೆ, ದೇವನು ದೈತ್ಯನನ್ನು ಹರಿದೊಗೆದಂತೆ ನಾನು ನನ್ನ ನಾಥನನ್ನು ಸೀಳುವೆ' ಎಂದೆನ್ನುತ್ತಾಳೆ. ಶ್ರದ್ಧಾನ್ವಿತೆಯಾದ ಕುಮುದ್ವತಿಯ ಬಾಯಲ್ಲಿ ಈ ಬಗೆಯ ಉದ್ವಿಗ್ನವಚನಗಳು ಶೋಭಿಸವು ಎಂದು, ಇಷ್ಟರಿಂದಲೇ, ಉದ್ವಿಗ್ನತೆಯಿಂದ ಮಾಡುವ ದಾನವನ್ನು ತಾನೊಲ್ಲೆನೆಂದು ಬ್ರಾಹ್ಮಣ ಹೊರಟುಹೋದಾನು ಎಂದೂ ಲಕ್ಷ್ಮೀಶನು ಯೋಚಿಸಿದ್ದಾನೆ; ಸರಿಯಾಗಿಯೇ ಯೋಚಿಸಿದ್ದಾನೆ. ಎಂತಲೇ ಇಂತಹ ಮಾತುಗಳನ್ನು ಅವನ ಕುಮುದ್ವತಿ ಆಡುವುದಿಲ್ಲ; ನೆರೆದ ಜನ ಆಡುತ್ತಾರೆ. ಉದ್ವಿಗ್ನರಾದವರು ನೋಡುತ್ತಿದ್ದವರು, ನೀಡುತ್ತಿದ್ದವರಲ್ಲ. ಈ ವ್ಯತ್ಯಾಸದಿಂದ ಪ್ರೇಕ್ಷಕ ಪಾತ್ರಚಿತ್ರಣಕ್ಕೆ ಪುಷ್ಟಿಬಂದಿದೆ.

ವೀರವರ್ಮನ ಕಥಾನಕವನ್ನು ಹೇಳುವಾಗ ಸಂಸ್ಕೃತ ಕವಿ ಅ. ೪೮ ಶ್ಲೋಕ ೧೫-೯೫ರ ವರೆಗೆ ೮೦ ಶ್ಲೋಕಗಳಲ್ಲಿ ಯಮ-ಕ್ಷಯರ ಸುದೀರ್ಘವಾದ ಚರ್ಚೆಯನ್ನು ತುಂಬಿದ್ದಾನೆ. ಯಾವ ಕರ್ಮದ ಫಲ ಯಾವ ರೋಗ, ಆ ರೋಗಕ್ಕೆ ಯಾವ ಪರಿಹಾರ ಇದೇ ಆ ಚರ್ಚೆಯು ಮುಖ್ಯ ವಿಷಯ. ಈ ಬಗೆಯ ಶಾಸ್ತ್ರವಿವೇಚನೆಯಿಂದ ಕಥಾನಕ ಪೋಷಣೆಗೆ ಯಾವ ಪ್ರಯೋಜನವೂ ಇಲ್ಲ. ಆದುದರಿಂದ ಕವಿ ಲಕ್ಷ್ಮೀಶನು ಕರ್ಮ ವಿಪಾಕಕಥನದ ಈ ಭಾಗವನ್ನು ಸಂಪೂರ್ಣ ತಳ್ಳಿಹಾಕಿ ತಾನು ಒಳ್ಳೆಯ ಕತೆಗಾರನೆಂಬು ದನ್ನು ಸ್ಥಾಪಿಸಿದ್ದಾನೆ. 'ಕ್ಷಯ-ಯಮರಲ್ಲಿ ಚರ್ಚೆ ಆಯಿತು, ಯಮನ ಲಗ್ನಕ್ಕಾಗಿ ಭೂಲೋಕಕ್ಕೆ ಬರಲೊಪ್ಪದ ಕ್ಷಯಾದಿಗಳನ್ನು ಸೌಮ್ಯರೂಪ ಧರಿಸಿ ನಿಬ್ಬಣಿಗರಾಗಿ ಬನ್ನಿರಿ ಎಂದು ಹೇಳಿ ಯಮ ಒಪ್ಪಿಸಿದನು' ಎಂದು ಕಿರಿದರಲ್ಲಿ ಹೇಳಿ ಮುಂದುವರಿಯು ತ್ತದೆ ಕನ್ನಡ ಜೈಮಿನಿ ಭಾರತದ ಕಥಾನಕ.

ಸಂಸ್ಕೃತದ ಚಂದ್ರಹಾಸ ಕಥಾನಕದಲ್ಲಿ ದುಷ್ಟಬುದ್ಧಿಯ ಕಪಟ ಕುತಂತ್ರ ಸ್ವಭಾವವು ಅಷ್ಟು ಸ್ಪಷ್ಟವಾಗಿ ವ್ಯಕ್ತವಾಗಿಲ್ಲ. ಕನ್ನಡದಲ್ಲಿ, ಹೊರಗೊಂದು ಒಳ ಗೊಂದು ವಿಚಾರದಿಂದ ನಡೆಯುವ ಅವನ ನಡೆವಳಿಕೆ, ಕುತಂತ್ರದ ಮೇಲೆ ಕುತಂತ್ರ ವನ್ನೆಸಗುತ್ತ ತನ್ನ ಮಗಳು ವಿಧವೆಯಾದರೂ ಚಿಂತೆಯಿಲ್ಲ ಎಂಬ ವಿಚಾರಕ್ಕೆ ಬಂದು ಮುಟ್ಟುವ ರೀತಿ ದುಷ್ಟಬುದ್ಧಿಯ ಪಾತ್ರದ ಜೀವಾಳವಾಗಿದೆ.

ಚಂದ್ರಹಾಸ ಪಾತ್ರದ ಬೆಳವಣಿಗೆ ಹಂತಹಂತವಾಗಿ ಆದುದು ಕನ್ನಡ ಕಾವ್ಯದಲ್ಲಿ ಚೆನ್ನಾಗಿ ವ್ಯಕ್ತವಾಗಿದೆ. ಚಂಡಾಲರು ಅವನ ಆರನೆಯ ಬೆರಳನ್ನು ಕೊಯ್ದುಕೊಂಡು ಅರಣ್ಯದಲ್ಲಿ ಬಿಟ್ಟುಹೋದಮೇಲೆ ಅವನು ದುಃಖಿಸುತ್ತಾನೆ. ನಿಸರ್ಗವೆಲ್ಲ ಅವನಲ್ಲಿ ಸಹಾನುಭೂತಿಯನ್ನು ತಳೆದಿದೆ ಎಂಬ ಮಾತು ಸಂಸ್ಕೃತ-ಕನ್ನಡ ಎರಡೂ ಕಾವ್ಯ ಗಳಲ್ಲಿಯೂ ಇದೆ. ಆದರೆ ಅರಣ್ಯಕ್ಕೆ ಕುಳಿಂದನು ಬಂದುದು ಏಕೆ? ಚಂದ್ರಹಾಸನು ತಬ್ಬಲಿಯಾಗಿ ಅಳುತ್ತಿದ್ದ ಘಟನೆಗೂ ಕುಳಿಂದನು ಅಲ್ಲಿಗೆ ಬಂದು ಅವನನ್ನು ಎತ್ತಿ ಕೊಂಡು ಒಯ್ಯುವುದಕ್ಕೂ ಸಂಸ್ಕೃತ ಕಾವ್ಯದಲ್ಲಿ ಸ್ಪಷ್ಟವಾಗಿ ಕಾರ್ಯಕಾರಣ ಸಂಬಂಧವೇ ಕಾಣುವುದಿಲ್ಲ. ಅಲ್ಲಿ (೫೧.೧೦)

> ಏತಾಸ್ಮಿನ್ನಂತರೇ ಪ್ರಾಪ್ತೋ ದೇಶಾಧ್ಯಕ್ಷಃ ಕುಲಿಂದಕಃ ।
> ತದ್ದೇಶರಕ್ಷಣಾರ್ಥಾಯ ಅಗತೋ ವನಗಹ್ವರೇ ||

ಎಂದು ಮಾತ್ರ ಇದೆ. ಆದರೆ ಕನ್ನಡ ಕಾವ್ಯದಲ್ಲಿ ಕುಳಿಂದಕನು ಅರಣ್ಯಕ್ಕೆ ಬರುವುದಕ್ಕೆ ಕಾರಣ ಬೇಟೆ ಎಂಬ ರಾಜವ್ಯಸನ. (ದುಷ್ಯಂತನು ಚಿಗರಿಯ ಬೆಂಬತ್ತಿ ಬಂದು ಶಕುಂತಲೆಯನ್ನು ಕಂಡ ಹಾಗೆ) ಕುಳಿಂದಕನು 'ಹರಿಣನಂ ಬೆಂಬತ್ತಿ ಬಂದು ಹರಿಯನೇ ಜಪಿಸುತಳುತಿಹ ಬಾಲನಂ ಕಂಡನು.' ತನಗೆ ಮಕ್ಕಳಿಲ್ಲದ ಅವನು ಚಂದ್ರಹಾಸನನ್ನು ದೇವದತ್ತ ಪುತ್ರನಿವನೆಂದು ತಮ್ಮೂರಿಗೆ ಕೊಂಡೊಯ್ಯುತ್ತಾನೆ. ಹೀಗೆ ಘಟನೆಗಳಲ್ಲಿ ಕಾರ್ಯಕಾರಣ ಸಂಬಂಧವನ್ನು ಕಲ್ಪಿಸಿರುವಲ್ಲಿ ಕತೆಗಾರನ ಕಲಾದೃಷ್ಟಿಯು ಸಾರ್ಥಕತೆ ಯನ್ನು ಪಡೆಯುತ್ತದೆ. ಕುಳಿಂದಕನು ತಂದ ಮಗುವನ್ನು ನೋಡಿದ ಮೇಧಾವಿನಿ ತನಗೆ

ಆದ ಆನಂದವನ್ನು ವ್ಯಕ್ತಪಡಿಸುವುದು ಸಂಸ್ಕೃತ ಕಾವ್ಯದಲ್ಲಿ ಹೀಗೆ:

.....................ಅಶೋಚ್ಯಾಹಂ ತು ಕೇವಲಮ್ ।
ಜಾತಾ ಮನೋರಥಾಃ ಸರ್ವೇ ಪಾರ್ವಿತಾಽಹಂ ನ ಸಂಶಯಃ ॥

—ಅ. ೫೧, ಶ್ಲೋಕ ೨೧

ಇದನ್ನು ಲಕ್ಷ್ಮೀಶನು ತಿಳಿಸುವುದು ಹೀಗೆ :

ಕಂದನಂ ತೆಗೆದೆತ್ತಿಕೊಳುತ ಬಿಗಿಯಪ್ಪಿ ಸಾ
ನಂದದಿಂ ಪೊರೆಯೇರಿದಳ್, "ತನ್ನ ಬಂಜೆತನ
ಮಿಂದು ಪೋದುದು, ಪುತ್ರವತಿಯಾದೆ, ಎನ್ನ ಪುಣ್ಯದ್ರುಮಂ ಫಲಿಸಿತೆಂದು" ||

ಈ ಎರಡೂ ಉಕ್ತಿಗಳನ್ನು ಹೋಲಿಸಿ ನೋಡಿದಾಗ, ಲಕ್ಷ್ಮೀಶನು ಭಾವ–ಭಾವಗಳ ಪದರು–ಪದರುಗಳನ್ನು ಬಿಚ್ಚಿ ತೋರಿಸಬಲ್ಲ ಕುಶಲಕಲಾವಿದನೆಂಬುದು ಮನದಟ್ಟಾಗುತ್ತದೆ. ತನ್ನ ಉಳಿಗೆಲಸದ ಜಾಣ್ಮೆಯಿಂದ ಕಲ್ಲನ್ನು ಅಂದವಾದ ಮೂರ್ತಿಯನ್ನಾಗಿ ಮಾಡುವ ಶಿಲ್ಪಿಯಂತೆ, ಲಕ್ಷ್ಮೀಶನು ಅಂತರಂಗದ ಭಾವ, ನುಡಿಯಲ್ಲಿ ಒಡಮೂಡುವಂತೆ ಪಾತ್ರಗಳನ್ನು ಸೃಷ್ಟಿಸುತ್ತಾನೆ. ಈ ಗುಣವನ್ನು ವಿಷಯೆಯ ರೂಪವರ್ಣನೆಯಲ್ಲಿಯೂ ಅವಳಲ್ಲಿ ಒಡಮೂಡಿದ ಶೃಂಗಾರಿಕ ಭಾವಗಳ ಅಭಿವ್ಯಕ್ತಿಯಲ್ಲಿಯೂ ಅವಳ ವಿರಹ ವ್ಯಥೆಯ ಚಿತ್ರಣದಲ್ಲಿಯೂ ಕಾಣಬಹುದು.

ದುಷ್ಟಬುದ್ಧಿ ಕುಳಿಂದನ ನಗರಕ್ಕೆ ಹೊರಟಾಗ ಯೌವನಾವಸ್ಥೆಯನ್ನು ಪಡೆದ ಮಗಳು ವಿಷಯೆ, 'ವಸಂತ ಕಾಲದಲ್ಲಿ ಕೋಗಿಲೆ ಬಾಯ್ದೆರೆಯುವಂತೆ ಬಾಯ್ದೆರೆಯುತ್ತಾಳೆ.' ತಾನು ಪ್ರಾಪ್ತ ಯೌವನೆಯೆಂಬುದನ್ನು 'ಮಾಮರ ಹೂ ಬಿಟ್ಟದೆ' ಎಂಬ ಮಾತಿನಿಂದ ಸೂಚಿಸುತ್ತಾಳೆ. ಈ ಮಾತಿನ ಇಂಗಿತವನ್ನು ಗ್ರಹಿಸಿದ ದುಷ್ಟಬುದ್ಧಿ 'ಇವಳಿಗೆ ವರನಾಗಬೇಕು' ಎಂದು ಮನಸಿನೊಳಗೆ ಎಂದುಕೊಳ್ಳುತ್ತಾನೆ. ಇದು ಲಕ್ಷ್ಮೀಶನಲ್ಲಿದೆ. ಸಂಸ್ಕೃತ ಜೈಮಿನಿಯಲ್ಲಿ ಈ ಸೂಚ್ಯಭಾವವನ್ನು ಗ್ರಹಿಸಿದ್ದರ ಪ್ರತಿಕ್ರಿಯೆ ಕಂಡು ಬರುವುದಿಲ್ಲ.

ಬಕದಾಲ್ಭ್ಯ–ದುಶ್ಶಳೆಯರ ಆಖ್ಯಾನ ಚಿತ್ರಣದಲ್ಲಿಯೂ ನಾವು ಲಕ್ಷ್ಮೀಶನ ಕಾವ್ಯಪ್ರತಿಭೆಯನ್ನು ಕಾಣುತ್ತೇವೆ. ಶ್ರೀಕೃಷ್ಣಾದಿಗಳು ತಮ್ಮೂರಿಗೆ ಬಂದ ಸುದ್ದಿಯನ್ನು ಕೇಳಿ ದುಶ್ಶಳೆಯ ಮಗ ಪ್ರಾಣವನ್ನು ಕಳೆದುಕೊಂಡ ಎಂದು ಸಂಸ್ಕೃತ ಕಾವ್ಯದಲ್ಲಿ ಇದೆ. ಕನ್ನಡ ಕಾವ್ಯವು ಅವನು ಮೈಮರೆತ (ಸಾಯಲಿಲ್ಲ) ಎನ್ನುತ್ತದೆ.

ಈ ಅವಮರ್ಶ ಸಂಧಿಯನ್ನು ತುಲನಾತ್ಮಕ ದೃಷ್ಟಿಯಿಂದ ನೋಡಿದಾಗ ಎರಡೂ ಕಾವ್ಯಗಳಲ್ಲಿ ಆಖ್ಯಾನಗಳ ಚೌಕಟ್ಟು, ಏರಿಳಿತ ಅಭಿನ್ನವಾಗಿದೆ ಎಂದು ತೋರಿಬರುತ್ತದೆ. ಆದರೆ ಆಖ್ಯಾನಗಳನ್ನು ಹೇಳುವ ರೀತಿಯಲ್ಲಿ, ಘಟನೆಗಳನ್ನು ಕಾರ್ಯಕಾರಣ ಸಂಬಂಧದಿಂದ ಜೋಡಿಸುವಲ್ಲಿ, ಕನ್ನಡ ಕಾವ್ಯದ ಹಿರಿಮೆ, ಹೆಚ್ಚುಗಾರಿಕೆ ಗೊತ್ತಾಗುತ್ತದೆ. ಚಂದ್ರಹಾಸನ ಕಥಾನಕವು ಮುಗಿದೊಡನೆ ಫಲಶ್ರುತಿಯ ಶ್ಲೋಕಗಳನ್ನು ಸಂಸ್ಕೃತ ಕವಿ ಹೇಳುತ್ತಾನೆ; ಮತ್ತೆ ಮುಂದಣ ಅಧ್ಯಾಯದ ಪ್ರಾರಂಭದಲ್ಲಿ ಚಂದ್ರಹಾಸನ ಮಕ್ಕಳಾದ

ಪದ್ಮಾಕ್ಷ ಮಕರಧ್ವಜರ ಮಾತನ್ನು ತರುತ್ತಾನೆ. ಇದರಿಂದ ಫಲಶ್ರುತಿಯ ಮಹತ್ತ್ವ ಕಡಿಮೆಯಾಗಿ ಆ ಶ್ಲೋಕಗಳು ಅನಾವಶ್ಯಕ ಎಂದು ತೋರುತ್ತದೆ. ಆದರೆ ಕನ್ನಡ ಕಾವ್ಯದಲ್ಲಿ ಫಲಶ್ರುತಿ ಕಥಾನಕವೆಲ್ಲ ಸಂಪೂರ್ತಿಯಾದ ಬಳಿಕ ಬಂದು ಉಚಿತವೆನಿಸಿದೆ. ಅಲ್ಲದೆ ಆ ಫಲಶ್ರುತಿಯ ಪದ್ಯಕ್ಕೆ ನಾಟ್ಯಶಾಸ್ತ್ರೋಕ್ತವಾದ ನಿರ್ವಹಣ ಸಂಧಿಯ ಅಂಗ ವಾದ ಪ್ರಶಸ್ತಿ (ಇದು ಅವಮರ್ಶ ಸಂಧಿಯಲ್ಲಿಯ ನಿರ್ವಹಣ ಪ್ರಶಸ್ತಿ) 'ಪ್ರಶಸ್ತಿಃ ಶುಭ ಶಂಸನಂ' ಎಂಬ ಲಾಕ್ಷಣಿಕ ಮಹತ್ತ್ವವು ಪ್ರಾಪ್ತವಾಗುತ್ತದೆ.

ಪಾಶ್ಚಾತ್ಯ ವಿಮರ್ಶಕನಾದ ಆಬರ ಕ್ರಾಂಬಿಯು ಮಹಾಕಾವ್ಯದ ಬಗೆಗೆ ವಿವೇಚನೆ ಮಾಡುತ್ತ, "An epic is not even a re-creation of old things ; it is altogether a new creation, in terms of old things" [ಮಹಾಕಾವ್ಯವು (ಶಬ್ದಾರ್ಥವು) ಭೌತ ಪದಾರ್ಥದ ಪುನಸ್ಸೃಷ್ಟಿಯಲ್ಲ ; ಅದು ಸರ್ವಾತ್ಮನಾ ನವೀನ ಸೃಷ್ಟಿ, ಭೌತ ಪದಾರ್ಥದ ಸಂಜ್ಞೆಗಳಿಂದಲೇ ಪ್ರಕಟಿಸಿದ ನವೀನ ಸೃಷ್ಟಿ] ಎಂದಿದ್ದಾನೆ. ಕನ್ನಡ ಜೈಮಿನಿ ಭಾರತದ ಮೇಲೆ ಉಲ್ಲೇಖಿಸಿದ ಆಖ್ಯಾನಗಳನ್ನು ಅಭ್ಯಾಸ ಮಾಡಿದಾಗ ಆಬರ ಕ್ರಾಂಬಿಯ ಈ ವ್ಯಾಖ್ಯೆ ಈ ಕೃತಿಗೆ ಸರಿಹೊಂದುತ್ತದೆ ಎಂದು ಎನಿಸದೆ ಇರದು. ಲಕ್ಷ್ಮೀಶನು ಸಂಸ್ಕೃತ ಪುರಾಣದಲ್ಲಿ ಹೇಳಿದ ಸಂಗತಿಗಳನ್ನೇ ಹೇಳ ಹೊರಟಿದ್ದಾನೆ ; ಆ ಮಾತುಗಳನ್ನೇ ಅನುಸರಿಸುವವನಾಗಿದ್ದಾನೆ. ಆದರೆ ಕಥನಕಲಾ ಮಾರ್ಗದಲ್ಲಿ ಸ್ವತಂತ್ರವಾಗಿ ವಿಹರಿಸುತ್ತಾನೆ. ಅವನು ತಾನೇ ಮೊದಲಾಗಿ ಹೇಳುತ್ತಿದ್ದಾನೆ ಎಂಬಂತೆ ಹೊಸತನದಿಂದ ಹೇಳುತ್ತಾನೆ, ಕಾವ್ಯಕಥೆಯನ್ನು ಸೃಷ್ಟಿಸುತ್ತಾನೆ, ಎಂಬುದನ್ನು ಕಾಣುತ್ತೇವೆ. ಅವಮರ್ಶ ಸಂಧಿಯ ತುಲನಾತ್ಮಕ ಅಭ್ಯಾಸದಿಂದ, ಸಂಸ್ಕೃತ ಕಾವ್ಯವು ಸುವರ್ಣವಾದರೆ, ಆ ಸುವರ್ಣಕ್ಕೆ ಕನ್ನಡ ಕಾವ್ಯವು ಒಪ್ಪ ಹಾಕುವಂತೆ ತೋರುತ್ತದೆ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.[1]

## ನಿರ್ವಹಣ ಸಂಧಿ

ಸಂಸ್ಕೃತ ಕಾವ್ಯದಲ್ಲಿ ಯಜ್ಞಸಮಾಪ್ತಿ, ಬ್ರಾಹ್ಮಣರ ಜಗಳ, ನಕುಲೋಪಾಖ್ಯಾನಗಳು ಅ. ೬೨ ರಿಂದ ೬೮ರ ವರೆಗೆ ೪೧೬ ಶ್ಲೋಕಗಳಲ್ಲಿ ಎಂದರೆ ೮೩೨ ಪಂಕ್ತಿ

---

[1] ಸಂಸ್ಕೃತ ಕನ್ನಡಗಳಲ್ಲಿಯ ಇನ್ನೂ ಕೆಲವು ಭೇದಾಭೇದಗಳು ಕೆಳಗಿನಂತಿವೆ:

ಅಧ್ಯಾಯ. ಶ್ಲೋಕ : ೪೨.೨೬–೫೧ ; ೪೪. ೪೫–೫೦ ; ೪೬. ೭೦ ; ೪೭. ೧೩–೧೫ ; ೪೯. ೭–೮, ೫೮–೬೦ ; ೫೦. ೪೦ ; ೪೬–೫೧ ; ೫೨. ೩೧–೪೦ ; ೫೧. ೩೬, ೩೮, ೪೫ ; ೫೪, ೧–೭ ; ೫೬. ೫–೨೧ ; ೫೭. ೧೭–೪೧ ; ೫೮. ೮೩–೧೦೨.

ಅಧ್ಯಾಯ ೫೪ ಶ್ಲೋಕ ೨೫–೨೬ ರಲ್ಲಿದ್ದ ಧರ್ಮಬುದ್ಧಿ ಮತ್ತು ಸುಮಂತ್ರಿ ಎಂಬ ಪಾತ್ರಗಳು ಕನ್ನಡ ಕಾವ್ಯದಲ್ಲಿಲ್ಲ.

ಸಂ. ಕಾ : ಸುಭಾಲ, ಸುರಭ, ನೀಲ, ಕುವಲ, ಸರಲ } ವೀರವರ್ಮನ
ಕ. ಕಾ : ಸುಲಭ, ಸುಫಾಲ, ಕುವಲ, ನೀಲ, ಸರಳ } ಮಕ್ಕಳು

ಗಳಲ್ಲಿ ಬಂದಿವೆ. ಕನ್ನಡ ಕಾವ್ಯದಲ್ಲಿ ಬ್ರಾಹ್ಮಣರ ಜಗಳ, ಕಲಿಧರ್ಮ ವಿವರಣೆ ಮತ್ತು ನಕುಲೋಪಾಖ್ಯಾನದ ಮಾತೇ ಇಲ್ಲ. ಯಜ್ಞದ ಸಮಾಪ್ತಿ ಮತ್ತು ಕೃಷ್ಣನಿಗೆ ಯಜ್ಞ ಫಲದ ಅರ್ಪಣ ಈ ಎರಡೇ ಸಂಗತಿಗಳಿಂದ ಈ ಸಂಧಿ ಮುಗಿಯುತ್ತದೆ. ಈ ಕಥನ ಭಾಗವು ೩೩-೩೪ನೆಯ ಸಂಧಿಗಳಲ್ಲಿ ೯೯ ಷಟ್ಪದಿಗಳನ್ನು ಎಂದರೆ ೫೯೪ ಸಾಲು ಗಳನ್ನು ವ್ಯಾಪಿಸಿದೆ. ಕನ್ನಡದಲ್ಲಿಲ್ಲದ ಮೂರು ಸಂಗತಿಗಳು ಸಂಸ್ಕೃತದಲ್ಲಿ ಈ ಸಂಧಿಯ ಸುಮಾರು ಒಂದು ಮೂರಾಂಶ ಭಾಗದಷ್ಟು ವ್ಯಾಪಿಸಿವೆ.

ಅಶ್ವಮೇಧ ಕಾವ್ಯಕ್ಕೆ ಕಥಾಬೀಜವು ಯಜ್ಞವಾಗಿರುವುದರಿಂದ, ಅದರ ಸಮಾ ಪ್ತಿಯೇ ಫಲವಾಗುತ್ತದೆ. ಅಲ್ಲಿಗೆ ಕಥಾನಕವು ಮುಗಿಯಲೇಬೇಕು; ಎಂದರೆ ವಸ್ತುವಿನ ಐಕ್ಯವನ್ನು ಸಾಧಿಸಿದಂತಾಗುತ್ತದೆ. ಬೀಜವನ್ನು ತನ್ನಲ್ಲಿ ಉಳ್ಳುದಾಗಿ ಮುಖ, ಪ್ರತಿ ಮುಖ, ಗರ್ಭ, ಅವಮರ್ಶ ಸಂಧಿಗಳೆಂಬ ಹಂದರದಲ್ಲಿ ಹಬ್ಬಿ ಹರಡಿರುವ ಹಲವಾರು ವಿಷಯಗಳು ಒಂದು ಅರ್ಥಕ್ಕೆ ಹೊಂದಿಕೊಳ್ಳುವಲ್ಲಿ ನಿರ್ವಹಣವೆನಿಸುತ್ತದೆ ಎಂದು ಶಾಸ್ತ್ರವು ಹೇಳುತ್ತದೆ.[1] ಕನ್ನಡ ಕಾವ್ಯದ ನಿರ್ವಹಣಸಂಧಿಯಲ್ಲಿ ಈ ಶಾಸ್ತ್ರವ್ಯಾಖ್ಯೆಗೆ ಬಾಧೆ ಬಂದಿಲ್ಲ. ಮುಖಾದಿ ಸಂಧಿಗಳಲ್ಲಿ ಹಬ್ಬಿ ಹರಡಿರುವ ಅನೇಕ ವಿಷಯಗಳು–ಯೌವನಾಶ್ವ, ನೀಲಧ್ವಜ, ಹಂಸಧ್ವಜ, ಪ್ರಮೀಲೆ, ಭೀಷಣ, ಬಭ್ರುವಾಹನ, ತಾಮ್ರ ಧ್ವಜ, ಮಯೂರಧ್ವಜ, ವೀರವರ್ಮ, ಚಂದ್ರಹಾಸ,ಬಕದಾಲ್ಭ್ಯ, ದುಶ್ಶಳೆ ಇತ್ಯಾದಿ ಕಥಾ ನಕಗಳು—ಒಂದು ಅರ್ಥಕ್ಕೆ ಬರುತ್ತವೆ. ಎಂದರೆ ಮೇಲಣವರು ಕೃಷ್ಣಾರ್ಪಣ ಭಾವಕ್ಕೆ ಸ್ಥಿತಪ್ರಜ್ಞರಾಗಿ ಯಜ್ಞಸಮಾಪ್ತಿಯಲ್ಲಿ ಭಾಗವಹಿಸುತ್ತಾರೆ. ಸಂಸ್ಕೃತ ಕಾವ್ಯ ದಲ್ಲಿಯೂ ಈ ಮಾತುಗಳಿವೆ. ಆದರೆ ಯಜ್ಞಸಮಾಪ್ತಿಯ ಫಲಶ್ರುತಿ ಮುಗಿದೊಡನೆ ಬ್ರಾಹ್ಮಣರ ಕಥೆ ಮೊದಲಾದವು ಅನಾವಶ್ಯಕವಾಗಿ ಅಲ್ಲಿ ಬರುತ್ತವೆ. ಇದರಿಂದ ವಸ್ತುವಿನ ಐಕ್ಯ ಭಗ್ನವಾಗಿದೆ. ಸಂಸ್ಕೃತ ಜೈಮಿನಿ ಭಾರತದ ರಚನೆಯ ಕುರಿತು ಒಂದು ಆಖ್ಯಾಯಿಕೆ ಇದೆ. ಜೈಮಿನಿ ತಾನೂ ಒಂದು ಸಂಪೂರ್ಣ ಮಹಾಭಾರತವನ್ನು ಬರೆದು ವ್ಯಾಸರಿಗೆ ತೋರಿಸಿದನೆಂದೂ ಅವರು ಅದರಲ್ಲಿಯ ಆಶ್ವಮೇಧಿಕ ಪರ್ವವೊಂದು ಇರಲೆಂದೂ ಹೇಳಿದರು ಎಂದು, ಅಷ್ಟುಮಾತ್ರ ಉಳಿಯಿತೆಂದು ಹೇಳಲಾಗುತ್ತದೆ. ನಕು ಲೋಪಾಖ್ಯಾನವು ಸಂಸ್ಕೃತ ಮಹಾಭಾರತದಲ್ಲಿಯೂ ಇದೆ. ಅದನ್ನು ಅನುಸರಿಸಿದ ಜೈಮಿನಿ ಆ ಉಪಾಖ್ಯಾನಾದಿಗಳನ್ನು ತನ್ನ ಸಂಸ್ಕೃತ ಕಾವ್ಯದಲ್ಲಿ ಸೇರಿಸಿದಂತೆ ತೋರುತ್ತದೆ.

ಕನ್ನಡ ಜೈಮಿನಿ ಭಾರತದಲ್ಲಿ ಶ್ರೀಕೃಷ್ಣನು ಯಜ್ಞಾಶ್ವದೊಡನೆ ಹಸ್ತಿನಾವತಿಗೆ ಬರುತ್ತಾನೆ (ಸಂ. ೩೨). ಭೀಮಾದಿಗಳೆಲ್ಲರೂ ಬಂದು ಅವನಿಗೆ ನಮಸ್ಕರಿಸುವುದು, ಅವನು ಕೆಲವರನ್ನು ಆಶೀರ್ವದಿಸಿ, ಕೆಲವರನ್ನು ಆಲಿಂಗಿಸಿ ಪುರಸ್ಕರಿಸಿದ ಬಳಿಕ, ಅಶ್ವ ಪರಿಭ್ರಮಣದ ಸಂಭ್ರಮವನ್ನು ಧರ್ಮನಿಗೆ ಶ್ರೀಕೃಷ್ಣನು ಸ್ವತಃ ಹೇಳುತ್ತಾನೆ. ಇದು ವ್ಯವಹಾರರೂಢಿಗೆ ಒಪ್ಪುವ ಕ್ರಮ. ಆದರೆ ಸಂಸ್ಕೃತ ಕಾವ್ಯದಲ್ಲಿ ಮೊದಲು ಅಶ್ವ

[1] 'ದಶರೂಪಕ', ೧-೯೬.

ಪರಿಭ್ರಮಣದ ಕಥನ, ಆಮೇಲೆ ಆ ಜನಗಳ ನಮಸ್ಕಾರ ಪುರಸ್ಕಾರಾದಿಗಳು. ಈ ತಿರುವು ಮುರುವನ್ನು ಸರಿಪಡಿಸಿ ಲಕ್ಷ್ಮೀಶನು ಕ್ರಮದೋಷವನ್ನು ತಪ್ಪಿಸಿದುದಲ್ಲದೆ, ಕೃಷ್ಣಾಗಮನವನ್ನೇ ಕಾದಿದ್ದ ಹಸ್ತಿನಾವತಿಯ ಸಕಲ ಪರಿವಾರದವರು ಔತ್ಸುಕ್ಯ ಆತುರಗಳಿಂದ ನಮಸ್ಕರಿಸಿದರೆಂದು ಹೇಳಿ ಸಹಜ ಮನೋಧರ್ಮವನ್ನೂ ಸೂಚಿಸಿದ್ದಾನೆ.

ಇದಾದ ಮೇಲೆ ಶ್ರೀಕೃಷ್ಣನು ರುಕ್ಮಿಣಿ, ಸತ್ಯಭಾಮೆಯರಿದ್ದಲ್ಲಿಗೆ ಹೋಗುತ್ತಾನೆ. ಅಲ್ಲಿ ನಗೆಚಾಟಿಕೆಯ ಮಾತುಕತೆ ನಡೆದಾಗ ಒಬ್ಬ ದೂತನು ಬಂದು,

'ಸರ್ವೈಸ್ತು ಸಹಿತಃ ಕೃಷ್ಣ ಕುರು ಯಜ್ಞಂ ಮನೋರಮಮ್ ।

ಎಂದು ಹೇಳುತ್ತಾನೆ. ಮೂಲದಲ್ಲಿದ್ದಂತೆ ದೂತಮುಖದಿಂದ ಕೃಷ್ಣನಿಗೆ ಹೇಳಿಸುವುದು ಲಕ್ಷ್ಮೀಶನಿಗೆ ಸರಿದೋರಲಿಲ್ಲ. ಅಂತೆಯೆ ಶ್ರೀಕೃಷ್ಣನು ಅಶ್ವಸಂಚಾರದ ಸಂಗತಿಯನ್ನು ಹೇಳಿ ಕೊನೆಗೆ 'ನಡೆಸಿನ್ನು ಯಜ್ಞವನು' ಎನ್ನುತ್ತಾನೆ ಧರ್ಮನಿಗೆ.

ಸಂಸ್ಕೃತ ಕಾವ್ಯದಲ್ಲಿ ಸುಪರ್ಣ ಮತ್ತು ಹಂಸ ಎಂಬ ಇಷ್ಟಿಕಾಚಯನ ಮಾಡಿದರೆಂಬ ಉಲ್ಲೇಖವುಂಟು. ೪೦೦ ಇಟ್ಟಿಗೆ ಮಧ್ಯಭಾಗ, ಪಂಖ ೧೪೪, ೧೪೪, ಪುಚ್ಛ ೧೦೦, ಮುಖ ೨೧ ಹೀಗೆ ಅದರ ರಚನೆಯ ವಿವರಣೆ ಇದೆ. ಕನ್ನಡ ಕಾವ್ಯದಲ್ಲಿ ೪೦೦ ಇಟ್ಟಿಗೆ ಉದರ ಭಾಗ ಮತ್ತು ಮುಖ. ೧೪೪, ೧೪೪ ಪಕ್ಷಗಳು, ೭೧ ಪುಚ್ಛ ಎಂದು ಮಾತ್ರ ಹೇಳಿ ಹಂಸ ಇಷ್ಟಿಕಾಚಯನದ ಮಾತನ್ನು ಬಿಟ್ಟುಬಿಡಲಾಗಿದೆ. ಈ ಭೇದಕ್ಕೆ ಕಾರಣವೇನೋ ತಿಳಿಯದು.

ಕನ್ನಡ ಕಾವ್ಯದಲ್ಲಿ ೩೪ ನೆಯ ಸಂಧಿಯ ಕೊನೆಗೆ, ಧರ್ಮನು ವಿಧಿಯುಕ್ತವಾಗಿ ಯಜ್ಞವನ್ನು ಮಾಡಿ, 'ಹಯಮೇಧ ಫಲವನಚ್ಯುತ ಕರದೊಳೀಯಲ್ಕೆ' ಲೋಕವೆಲ್ಲ ಜಯಜಯಕಾರ ಮಾಡಿತು, ಹೂಮಳೆ ಕರೆಯಿತು, ಸುರದುಂದುಭಿ ಮೊಳಗಿದವು ಎಂದು ಹೇಳಿದೆ. ಸಂ. ೩೪ ಪ.೩೯ರಲ್ಲಿ ಪ್ರಮೀಳಾ ಅರ್ಜುನರ ವಿವಾಹದ ಮಾತು ಬಂದಿದೆ. ಎಂದರೆ ಕಾವ್ಯದಲ್ಲಿ ಆಯಾ ಉಪಕಥಾನಕಗಳಲ್ಲಿ ಅಲ್ಲಲ್ಲಿ ಬಿಟ್ಟಿದ್ದ ಎಲ್ಲ ಎಳೆಗಳನ್ನು ಕೂಡಿಸಿ ಕಟ್ಟುವ ಕಾರ್ಯವನ್ನು ಕವಿ ಲಕ್ಷ್ಮೀಶ ಮರೆಯದೆ ಪೂರಯಿಸಿದ್ದಾನೆ. ಇಲ್ಲಿ ಬಂದ ಎಲ್ಲ ಉಪಕಥೆಗಳ ನಾಯಕರು ಕೃಷ್ಣಭಕ್ತರು. ಅವರಲ್ಲಿ ಯಜ್ಞಾಧಿಪತಿಯೂ ಯಜ್ಞಸ್ವರೂಪನೂ ಆದ ಶ್ರೀಕೃಷ್ಣನ ದರ್ಶನವಾದ ಮೇಲೆ ಯಜ್ಞವನ್ನು ಮಾಡುವುದು ಅನುಚಿತವೆಂದು ಬಗೆದ ಮಯೂರಧ್ವಜನು, ಹೂಡಿದ ಯಜ್ಞವನ್ನು ನಿಲ್ಲಿಸಿ ತನ್ನ ಹಯವನ್ನು ಧರ್ಮನ ಹಯದೊಂದಿಗೆ ಬಿಟ್ಟು, ಅವುಗಳ ರಕ್ಷಣೆಗೆ ತಾನೂ ಹೊರಡುತ್ತಾನೆ. ಯಜ್ಞಾಶ್ವ ಮೊದಲು ಮಾಡಿ ಎಲ್ಲರೂ ಕೃಷ್ಣಸಾಯುಜ್ಯವನ್ನೇ ಬಯಸುತ್ತಾರೆ. ಯಜ್ಞ, ಯಜ್ಞಾಶ್ವ, ಶ್ರೀಕೃಷ್ಣ ಎಲ್ಲವೂ ಅಭಿನ್ನವೆಂಬುದನ್ನು ತೋರಿಸಿ 'ಶ್ರೀ ಕೃಷ್ಣ ಚರಿತಾಮೃತಂ' ಎಂಬ ನಾಮನಿರ್ದೇಶದಿಂದ ಕನ್ನಡ ಕಾವ್ಯವು ವಸ್ತ್ವೈಕ್ಯವನ್ನು ಚೆನ್ನಾಗಿಯೇ ಸಾಧಿಸಿದೆ ಎಂದು ಹೇಳಬಹುದು.

ಆಬರ ಕ್ರಾಂಬಿ, 'There is only one thing which can master the perplexed stuff of epic material into unity; and that is, an

ability to see in particular human experience some significant symbolism of man's general destiny' (ಪುರಾಣ ಮಹಾಕಾವ್ಯವಸ್ತುವಿನ ಸಂಮಿಶ್ರ ದ್ರವ್ಯವನ್ನು ಸಂವಾದೈಕ್ಯರೂಪವಾಗಿ ಪ್ರತಿಫಲಿಸಬಲ್ಲ ಗುರು ಐಶ್ವರ್ಯ ಯೋಗ ಒಂದು ಇದೆ—ಅದೆಂದರೆ, ಮಾನವ ಜಾತಿ ಸಾಮಾನ್ಯದ ಪ್ರಾರಬ್ಧ ಫಲವನ್ನು ಮಾನವೀಯ ವಿಶೇಷಾನುಭವಗಳಲ್ಲಿ ಸಾರ್ಥಕವಾದ ಸಂಕೇತ ಕ್ರಿಯೆಯ ಕ್ರಾಂತ ದೃಷ್ಟಿಯಿಂದ ಪ್ರಕಟಿಸುವ ಪ್ರಾತಿಭ-ಕಲಾ-ಶಕ್ತಿ) ಎಂದು ಹೇಳುತ್ತಾನೆ, ಮಹಾಕಾವ್ಯದ ವಸ್ತುವಿನ ಐಕ್ಯವನ್ನು ಕುರಿತು ವಿವೇಚಿಸುವಾಗ. ಕನ್ನಡ ಜೈಮಿನಿ ಭಾರತಕ್ಕೆ ಯಜ್ಞಾಶ್ವವೇ ಸಂಕೇತ—ಯಜ್ಞಾಶ್ವ, ಯಜ್ಞ ಮತ್ತು ಯಜ್ಞಪತಿಯಾದ ಶ್ರೀಕೃಷ್ಣ ಎಲ್ಲವೂ ಅಭಿನ್ನ. ಅವುಗಳೇ ಕಾವ್ಯದಲ್ಲಿ ಬರುವ ಎಲ್ಲ ನಾಯಕರ ದೈವವನ್ನು ತೋರಿಸುವ ದರ್ಪಣಗಳು ಎಂದು ಹೇಳಲು ಅಡ್ಡಿಯಿಲ್ಲ.

## ಮರಾಠಿ ಜೈಮಿನಿ ಭಾರತ

'ವ್ಯಾಸಮುನಿ ನಾರಾಯಣನ ಅವತಾರ. ಆತನ ಮುಖ್ಯಶಿಷ್ಯ ಜೈಮಿನಿ. ಜೈಮಿನಿ ರಚಿಸಿದ ಅಶ್ವಮೇಧ ಕಥೆಯನ್ನು ಮೂಲಕ್ಕೆ (ಸಂಸ್ಕೃತ ಜೈಮಿನಿ ಭಾರತಕ್ಕೆ) ಬಾಧೆ ಬರದಂತೆ ಮಹಾರಾಷ್ಟ್ರ ಭಾಷೆಯಲ್ಲಿ ನನಗೆ ತಿಳಿದಂತೆ ಶ್ರೋತೃಗಳಿಗೆ ಹೇಳುವೆ' ಎಂದು ಶ್ರೀಧರಕವಿ ತನ್ನ ಅಶ್ವಮೇಧ ಕಾವ್ಯವನ್ನು ಪ್ರಾರಂಭಿಸುತ್ತಾನೆ.[1]

ಈ ಶ್ರೀಧರಕವಿ ಅಶ್ವಮೇಧ ಕಾವ್ಯವನ್ನು ರಚಿಸುವ ಪೂರ್ವದಲ್ಲಿ 'ಹರಿವಿಜಯ', 'ರಾಮವಿಜಯ', 'ಪಾಂಡವಪ್ರತಾಪ', ಮೊದಲಾದ ಕಾವ್ಯಗಳನ್ನು ರಚಿಸಿ ಪ್ರಸಿದ್ಧನಾಗಿದ್ದನು. ಶಕ ೧೬೩೭ರಲ್ಲಿ 'ಅಶ್ವಮೇಧಕಾವ್ಯ'ವನ್ನೂ[2] ಶಕ ೧೬೪೦ರಲ್ಲಿ 'ಶಿವಲೀಲಾಮೃತ'ವನ್ನೂ ಅವನು ಬರೆದನು. ಶ್ರೀಧರನು ಮೊಗಲಾಯಿಯ ಪರಭಣಿ ಎಂಬ ಊರ ಹತ್ತಿರದ ಪಾಥರಿ ಎಂಬ ಹಳ್ಳಿಯವನು. ಇವನು ಪಂಢರಪುರದ ವಿಟ್ಠಲನ ಪರಮಭಕ್ತ. ತನ್ನ ಕಾವ್ಯಗಳ ರಚನೆಯನ್ನು ಪಂಢರಪುರದಲ್ಲಿ ಮಾಡುವುದು ಇವನ ರೂಢಿ. ಆದರೆ ಇದಕ್ಕೆ ಅಪವಾದವಾಗಿ ಅಶ್ವಮೇಧಕಾವ್ಯವನ್ನು ಮಾತ್ರ ಪಾಥರಿಯಲ್ಲಿಯೆ ರಚಿಸಿದ್ದಾನೆ.

ಶ್ರೀಧರನು ತನ್ನ ಸಂಕಲ್ಪದಂತೆ ಸಂಸ್ಕೃತ ಜೈಮಿನಿ ಭಾರತದ ೬೮ ಅಧ್ಯಾಯಗಳಿಗೆ ಮರಾಠಿ ಜೈಮಿನಿ ಭಾರತದಲ್ಲಿಯೂ ೬೮ ಅಧ್ಯಾಯಗಳಾಗುವಂತೆ ಎಚ್ಚರ ವಹಿಸಿದ್ದಾನೆ. ಆದರೆ ಈ ಜೋಕೆ-ತೂಕ ಕಡೆತನಕ ಉಳಿಯುವುದಿಲ್ಲ. ಕೊನೆಯಲ್ಲಿ ಸಂಸ್ಕೃತದ ೬೮ನೆಯ ಅಧ್ಯಾಯದ ಭಾಗವು ಮರಾಠಿಯಲ್ಲಿ ೬೯ನೆಯ ಅಧ್ಯಾಯದಲ್ಲಿ

1 'ಮರಾಠಿ ಜೈಮಿನಿ ಅಶ್ವಮೇಧ', ಅ. ೧, ಓವಿ ೨೪–೨೫.

2 ಶ್ರೀಧರನಲ್ಲದೆ, ನಾಮಾಪಾಠಕ, ಕೃಷ್ಣದಾಸ, ದಾಸೋಸುತ ಮುದ್ಗಲ, ನಾರಾಯಣ ವಿಪ್ರ, ಜಗಜೀವನ, ವಿಷ್ಣುದಾಸ, ಮಾಧವಸ್ವಾಮಿ. ವಿಠ್ಠಲಸ್ವಾಮಿ ಮೊದಲಾದವರು ಅಶ್ವಮೇಧವನ್ನಾಗಲಿ, ಅಥವಾ ಅದರೊಳಗಿನ ಕೆಲವು ಪ್ರಕರಣಗಳನ್ನಾಗಲಿ ಕುರಿತು ಕಾವ್ಯರಚನೆಯನ್ನು ಮಾಡಿದ್ದಾರೆ. 'ಮಹಾರಾಷ್ಟ್ರ ಸಾರಸ್ವತ', ಪು. ೧೮೬–೧೮೭.

ಸ್ಥಾನ ಪಡೆಯುತ್ತದೆ. ಅದರಿಂದ ಮುರಾರೀಕಾವ್ಯದಲ್ಲಿ[1] ಒಂದು ಅಧ್ಯಾಯ ಹೆಚ್ಚಾಯಿತು. ಇಷ್ಟೇ ಅಲ್ಲ ಶ್ರೀಧರನು ತನ್ನ ಬಹುಶ್ರುತತೆಯನ್ನು ಆಧರಿಸಿ ಮೂಲ ಸಂಸ್ಕೃತದಲ್ಲಿಲ್ಲದ **ಆರು** ಹೊಸ ಆಖ್ಯಾನಗಳನ್ನು ಪೋಣಿಸಿದನು : ಅವಾವುವೆಂದರೆ, ೧. ದುಂದುಭಿ ಆಖ್ಯಾನ (ಭವಿಸ್ಯಪುರಾಣ) ಅ. ೬೧–೭೩, ೨. ಸೈನ್ಯಪಾಳ ಆಖ್ಯಾನ (ಅಗ್ನಿಪುರಾಣ) ಅ. ೭೪–೭೭, ೩. ಸಿಂಹಧ್ವಜನ ಆಖ್ಯಾನ .(ಪದ್ಮಪುರಾಣ) ಅ. ೭೮–೮೨, ೪. ಬಾಣಾಸುರ ಆಖ್ಯಾನ (ಶಕ್ತಿಪುರಾಣ) ಅ. ೮೩–೮೫, ೫. ಸುಗ್ರೀವ ಆಖ್ಯಾನ (ಸ್ಕಂದಪುರಾಣ) ಅ. ೮೬, ೬. ಚಂದ್ರಮೌಳಿ ಆಖ್ಯಾನ (ಬ್ರಹ್ಮಾಂಡ ಪುರಾಣ) ಅ. ೮೭–೮೮. ಕೊನೆಕೊನೆಯ ಭಾಗದಲ್ಲಿ ಎಂದರೆ ಬಕದಾಲ್ಭ್ಯ ಕಥಾನಕದಿಂದ ಮುಂದೆ ಕಾವ್ಯಾಂತದವರೆಗೆ ಶ್ರೀಧರನು ಸಂಸ್ಕೃತ ಜೈಮಿನಿ ಭಾರತದ ಜೊತೆ ಜೊತೆಯಾಗಿ ಹೋಗಿದ್ದಾನೆ. ಸಂ.ಜೈ.ಭಾರತದ ಅಧ್ಯಾಯ ೬೦–೬೮ರ ಕಥೆ ಮು.ಜೈ. ಭಾರತದ ಅಧ್ಯಾಯ ೮೯–೯೬ರ ಭಾಗವನ್ನು ವ್ಯಾಪಿಸಿದೆ. ಹೀಗೆ ೬೮ ಅಧ್ಯಾಯದ ಮೂಲವು ೯೬ ಅಧ್ಯಾಯಗಳಾಗಲಿಕ್ಕೆ, ೨೮ ಅಧ್ಯಾಯಗಳು ಹೆಚ್ಚಲಿಕ್ಕೆ ಕಾರಣ, ಮೇಲಣಂತೆ ಬೇರೆ ಬೇರೆ ಪುರಾಣಗಳ ಕಥೆಗಳನ್ನು ಹೇಳುತ್ತ ಹೋದದ್ದು. 'ಅನೇಕ ಪುಷ್ಪಗಳ ರಸಸಾರವನ್ನು ಮಧುಕರ ಗ್ರಹಿಸುವಂತೆ, ಎಲ್ಲ ಪುರಾಣಗಳಿಂದ ಕಥೆಗಳನ್ನು ಸಂಗ್ರಹಿಸಿ ಹೇಳುವ' ಉದ್ದೇಶವು ಈ ಕವಿಯದಾಗಿತ್ತು.

ಶ್ರೀಧರ ಪ್ರತಿಯೊಂದು ಅಧ್ಯಾಯದ ಪ್ರಾರಂಭವನ್ನು ಮತ್ತು ಮುಗಿತಾಯವನ್ನು ತನ್ನದೇ ಆದ ಒಂದು ಸ್ವತಂತ್ರರೀತಿಯಿಂದ ನವನವೋನ್ಮೇಷದಿಂದ ಮಾಡುತ್ತಾನೆ. ಇವುಗಳಿಗೆ ಸಂಸ್ಕೃತ ಜೈಮಿನಿ ಭಾರತದ ಆಧಾರವಿಲ್ಲ. ಕನ್ನಡ ಕಾವ್ಯದಲ್ಲಿ ಸಂಧಿ ಸಂಧಿಗೆ ಸೂಚನಾಪದ್ಯವಿರುವಂತೆ ಶ್ರೀಧರಕವಿ ಪ್ರತಿ ಅಧ್ಯಾಯದ ಪ್ರಾರಂಭವನ್ನು ಹೊಸರೀತಿಯಿಂದ ಮಾಡುತ್ತಾನೆ. ಉದಾಹರಣೆಗಾಗಿ ಕೆಲವು ಅಧ್ಯಾಯಗಳ ಪ್ರಾರಂಭ–ಸಮಾಪ್ತಿಗಳನ್ನು ನೋಡೋಣ :

**ಅಧ್ಯಾಯ ೧೪—ಪ್ರಾರಂಭ :** 'ಜನಮೇಜಯನು ಜೈಮಿನಿಯ ಮಾತುಗಳನ್ನು ಕೇಳಿ, "ನಿನ್ನ ವಾಣಿಯೆಂದರೆ ಬ್ರಹ್ಮಸುಖದ ಕಣಿ ಇದ್ದಂತೆ. ನಿನ್ನ ಮಾತುಗಳನ್ನು ಕಿವಿದೆರೆದು ಕೇಳಿದಾಗ ಅವು ಅಮೃತಸಮಾನವೆನಿಸುತ್ತವೆ. ಹೀಗಿದ್ದೂ ಮನಸ್ಸಿಗೆ ಸಂತೃಪ್ತಿಯಿಲ್ಲ. ಇನ್ನೂ ಕಥೆಯನ್ನು ಕೇಳುವ ಕಿವಿಯ ಆಶೆ ಹಿಂಗಿಲ್ಲ. ಈ ಆಶೆ ಹಿಂಗುವಂತೆ ಕಥಾನಕಜಾಹ್ನವಿ ಹರಿಯಲಿ.

"ಸಾವಧಾನದಿಂದ ಹೇಳುವ ಕಥೆಯನ್ನು ಸಾವಧಾನದಿಂದ ಕೇಳಿರಿ. ಈ ಕಥಾಮೃತಪಾನದಿಂದ ಕ್ಷಣಮಾತ್ರದಿಂದ ಭವರೋಗವು ಇಲ್ಲದಂತಾಗುವುದು."

---

[1] ಶ್ರೀಧರನ ಮುರಾರಿ ಕಾವ್ಯದಲ್ಲಿ ಒಟ್ಟು ಅಧ್ಯಾಯಗಳು ೯೬. ಸಂಸ್ಕೃತ ಜೈಮಿನಿ ಭಾರತದ ೩೮ ಅಧ್ಯಾಯಗಳ ಕಥೆ ಮುರಾರಿ ಕಾವ್ಯದಲ್ಲಿ ೩೯ ಅಧ್ಯಾಯವಾಗಿದೆ. ಇದೇ ರೀತಿ ಸಂಸ್ಕೃತ ಜೈಮಿನಿ ಭಾರತದ ೬೧ ರಿಂದ ೬೮ ಅಧ್ಯಾಯಗಳ ಕಥೆ ಮುರಾರಿ ಕಾವ್ಯದಲ್ಲಿ ೮೯ ರಿಂದ ೯೬ ಅಧ್ಯಾಯಗಳಾಗಿ ಹಬ್ಬಿದೆ.

ಹೀಗೆ ಶ್ರೀಧರ ಕವಿ ಓದುಗನ ಔತ್ಸುಕ್ಯವನ್ನು ಕೆರಳಿಸುವ ರೀತಿಯನ್ನು ಅನುಸರಿಸುತ್ತಾನೆ.

**ಮುಕ್ತಾಯ:** 'ಇನ್ನು ಎರಡೂ ಸೈನ್ಯಗಳು ಕೂಡಿದಾರುಣವಾದ, ಭಯಂಕರವಾದ ಯುದ್ಧವನ್ನು ಮಾಡುವವು. ಅದನ್ನು ಇನ್ನು ಮುಂದಿನ ಭಾಗದಲ್ಲಿ ಅತಿ ಸುಂದರವಾಗಿ ಹೇಳಿದ್ದೇನೆ, ಕೇಳಿರಿ' ಎಂದು ಕಥನದ ಮುನ್ಸೂಚನೆಯನ್ನು ಕವಿ ಕೊಡುತ್ತಾನೆ.

**ಅಧ್ಯಾಯ ೩೯—ಪ್ರಾರಂಭ :** 'ಯಾವುದನ್ನು ಸಂಕ್ಷಿಪ್ತವಾಗಿ ಹೇಳಿದ್ದೇನೋ ಅದನ್ನೇ ಇನ್ನೂ ವಿಸ್ತಾರವಾಗಿ ಕೇಳಬೇಕು. ಹೇಳುವವನ ಚಿತ್ತವು ವ್ಯಗ್ರವಾದುದಾದರೆ, ಕಥಾಮೃತಕ್ಕೆ ಕೊರತೆ ಉಂಟಾಗುತ್ತದೆ. ಗಿರಾಕಿಯ ಹಾರೈಕೆಯನ್ನು ಅರಿತು ವ್ಯವಹಾರಿ ಅವನಿಗೆ ಬಟ್ಟೆಗಳನ್ನು ತೋರಿಸುತ್ತಾನೆ. ಸ್ನೇಹದೀಪವು ಪೂರ್ಣವಾಗಿದ್ದಾಗ ದೂರದ ಪದಾರ್ಥವೂ ಕಾಣಿಸುತ್ತದೆ, ಆದರೆ ಸ್ನೇಹವು ಇಲ್ಲವಾದರೆ ಕಾಣಿಕೆ ಮಸುಕಾಗುತ್ತದೆ, ಎಂಬುದು ಎಲ್ಲರಿಗೂ ಬರುವ ಅನುಭವ. ಕಂಠಶಕ್ತಿ ವಾಯುವನ್ನು ಅವಲಂಬಿಸಿದೆ. ಎಷ್ಟು ವಾಯುವೋ ಅಷ್ಟೇ ಧ್ವನಿಯು. ವಾಯು ಮಂದವಾದೊಡನೆ ಶಬ್ದವೂ ಮಂದವಾಗುತ್ತದೆ. ಕೊಳಲು ಊದುವವನು ಚೆನ್ನಾಗಿ ನುಡಿಸಿದರೆ, ಅದು ಸುಮಧುರವಾಗಿ ಕೇಳಿಸುತ್ತದೆ. ಇಲ್ಲವಾದರೆ ಕೊಳಲು ಬರೀ ಅಚೇತನ ಕಾಷ್ಠ. ಹೀಗೆಯೆ ದೃಷ್ಟಾಂತಗಳನ್ನು ಕೊಡುತ್ತ ಹೋದರೆ ಕಥೆ ಮುಂದೆ ಸಾಗಲಿಕ್ಕಿಲ್ಲ. ಕೇಳುವವನ ಚಿತ್ತವನ್ನು ಅನುಲಕ್ಷಿಸಿ ಹೇಳುವವನು ಹೇಳುತ್ತಾನೆ.'

ಹೀಗೆ ಶ್ರೋತೃ ಮತ್ತು ಪ್ರಬಂಧಕಾರನ ಸಂಬಂಧವನ್ನು ಅನೇಕ ದೃಷ್ಟಾಂತಗಳಿಂದ ಶ್ರೀಧರ ಕವಿ ಸ್ಪಷ್ಟಪಡಿಸಿದ್ದಾನೆ.

**ಮುಕ್ತಾಯ :** 'ಇನ್ನು ಮುಂದೆ ಬಭ್ರುವಾಹನನು ಮಣಿಹರಣ ಮಾಡಿದ ಪ್ರಸಂಗವನ್ನು ರಸದುಂಬಿ ಹೇಳುತ್ತೇನೆ ಕೇಳಿರಿ.'

**ಅಧ್ಯಾಯ ೯೫—ಪ್ರಾರಂಭ :** 'ಜೈಮಿನಿ ಪರೀಕ್ಷಿತನಿಗೆ ಹೇಳುತ್ತಾನೆ: ಇನ್ನು ಪೂರ್ವಜರ ಕಥೆಯನ್ನು ಹೇಳುತ್ತೇನೆ, ಏಕಚಿತ್ತದಿಂದ ಸಾವಧಾನದಿಂದ ಕೇಳು. ಯಜ್ಞವಾದ ಮೇಲೆ ಒಂದು ಪರಮಾಶ್ಚರ್ಯವಾಯಿತು. ಧರ್ಮರಾಜನು ಎಲ್ಲ ಬ್ರಾಹ್ಮಣರಿಗೆ ಸುಖವಾಗುವಂತೆ ಮಾಡಿದನು. ದೀನರಿಗೂ ಕೃಪಣರಿಗೂ ಭೋಜನವನ್ನು ಕೊಟ್ಟನು. ವಿಶ್ವದ ಜನರು ತೃಪ್ತರಾದರು ಎಂಬ ಶಬ್ದವು ಎಲ್ಲೆಲ್ಲಿಯೂ ವ್ಯಾಪಿಸಿತು. ದೇವತೆಗಳು ಜಯಜಯಕಾರ ಮಾಡಿದರು. ವಾದ್ಯಗಳು ಧ್ವನಿಗೂಡಿಸಿದವು. ಪುಷ್ಪಗಳ ಮಳೆ ಧರ್ಮನ ಮೇಲೆ ಆಯಿತು. ಹೀಗೆ ದೊಡ್ಡ ಪ್ರಮಾಣದಿಂದ ಉತ್ಸವವು ಪೂರ್ತಿಗೊಳ್ಳಲು, ಧರ್ಮನ ಮನಸ್ಸಿನಲ್ಲಿ ಅಹಂಕಾರದ ಉದಯವಾಯಿತು : "ನನ್ನ ಯಜ್ಞದಲ್ಲಿ ಚರಾಚರವು ತೃಪ್ತಿ

ಯನ್ನು ಪಡೆಯಿತು ಎಂದು. ಎಲ್ಲಿ ಅಹಂಕಾರದ ಉದಯವಾಗುತ್ತದೊ ಅಲ್ಲಿಯೆ ಸ್ವಾತ್ಮಸುಖದ ಅಸ್ತವೂ ಆಗುತ್ತದೆ.'"

**ಮುಕ್ತಾಯ** : 'ಇನ್ನು ಜನಮೇಜಯನು ನಕುಲನ ಬಗ್ಗೆ ಪ್ರಶ್ನೆಯನ್ನು ಕೇಳುವನು. ಅದನ್ನು ಮುಂದೆ ಹೇಳುತ್ತೇನೆ, ಸಾವಧಾನವಾಗಿ ಕೇಳಿರಿ.'

ಪ್ರತಿ ಅಧ್ಯಾಯದ ಮೊದಲು–ಕೊನೆಗಳಲ್ಲಿ ವಾಚಕನ ಮನಸ್ಸನ್ನು ಕಥಾ ಶ್ರವಣಕ್ಕೆ ಅಣಿಗೊಳಿಸುವ ತಂತ್ರವನ್ನು ಶ್ರೀಧರಕವಿಯು ಈ ರೀತಿಯಾಗಿ ಉಪ ಯೋಗಿಸಿದ್ದಾನೆ.

'ಮಹಾಪಾಪವನ್ನು ತೊಳೆದುಬಿಡುವಂತಹ ಸುರಸ್ಪರ್ಶವತ್ ಕಥೆಯನ್ನು ಕೇಳಿರಿ', 'ಸಂಸ್ಕೃತವೇ ಆಗಲಿ, ಪ್ರಾಕೃತವೇ ಆಗಲಿ, ವಿವೇಕದಿಂದ ನೋಡಿದರೆ ಎರಡೂ ಒಂದೇ ಅರ್ಥವನ್ನು ಹೇಳುತ್ತವೆ' ಎಂದು ತನ್ನ ಕಾವ್ಯದ ಪ್ರಾರಂಭದಲ್ಲಿ ಹೇಳುವ ಶ್ರೀಧರ ಕವಿಯು ಸಂಸ್ಕೃತ ಜೈಮಿನಿ ಭಾರತವನ್ನೇ ಸಾಕಷ್ಟು ಅವಲಂಬಿಸಿದ್ದರೂ ಆ ಮೂಲ ದಲ್ಲಿಯ ಕಲ್ಪನೆಗಳನ್ನು ಅರಳಿಸಿ ತೋರಿಸುತ್ತಾನೆ. ಉತ್ಪ್ರೇಕ್ಷೆ, ರೂಪಕ ಮೊದಲಾದ ಅಲಂಕಾರ, ನಾಣ್ನುಡಿ, ಸುಭಾಷಿತ, ಭರ್ತೃಹರಿಯ ಶ್ಲೋಕ ಇವುಗಳಿಂದ ಶ್ರೀಧರನು ತನ್ನ ಕಾವ್ಯದ ಸೌಂದರ್ಯವನ್ನು ಹೆಚ್ಚಿಸಿಕೊಂಡಿದ್ದಾನೆ.

ಧರ್ಮನಿಗೆ ಗೋತ್ರವಧೆಯ ಚಿಂತೆ ಎಷ್ಟು ಹತ್ತಿತ್ತು ಎಂಬುದನ್ನು 'ಗೋತ್ರ ವಧೆಯ ಚಿಂತೆಯು ಧರ್ಮನ ಮನಸ್ಸಿನಲ್ಲಿ ಸರ್ಪವು ಮರಿಹಾಕಿದಂತೆ ಬೆಳೆಯತೊಡಗಿತು' ಎಂಬ ಉಪಮೆಯಿಂದ ಕವಿಯು ವಿವರಿಸುತ್ತಾನೆ. ಧರ್ಮನಿಗೆ ಭೀಷ್ಮ–ದ್ರೋಣರೆಂದರೆ ದಿವ್ಯನಯನಗಳಂತಿದ್ದರಂತೆ. ಯೌವನಾಶ್ವನು ಯಜ್ಞಾಶ್ವವನ್ನು ಕಾಯುವ ಬಗೆಯನ್ನು 'ಪ್ರಾಣಿಯು ಪ್ರಾಣವನ್ನು ರಕ್ಷಿಸುವಂತೆ, ಯೋಗಿಯು ಜ್ಞಾನವನ್ನು ರಕ್ಷಿಸುವಂತೆ, ಪತಿವ್ರತೆಯು ಪತಿಚರಣಗಳನ್ನು ಮನೋಮಂದಿರದಲ್ಲಿ ರಕ್ಷಿಸುವಂತೆ' ಎಂದು ಉಪಮಾ ಮಾಲೆಯಿಂದ ಶ್ರೀಧರ ಕವಿ ತಿಳಿಸುತ್ತಾನೆ. 'ಮಜ್ಜಿಗೆಯಿಂದ ಬೆಣ್ಣೆ ತೆಗೆದಂತೆ ಸೈನ್ಯ ಮಧ್ಯದಿಂದ ಯಜ್ಞಾಶ್ವವನ್ನು ತರುತ್ತೇನೆ' ಎಂದು ಶ್ರೀಧರನ ಮೇಘನಾದನು ಹೇಳು ತ್ತಾನೆ.

ಭೀಮನು ಯಜ್ಞಾಶ್ವವನ್ನು ತರಲೊಪ್ಪಿದ ಸುದ್ದಿಯನ್ನು ಕೇಳಿದ ಶ್ರೀಕೃಷ್ಣನು, ಭೀಮನ ವಿಷಯದಲ್ಲಿ ತುಚ್ಛತೆಯ, ತಿರಸ್ಕಾರದ ಮಾತುಗಳನ್ನಾಡುತ್ತಾನೆ. ಆ ಮಾತಿ ನಲ್ಲಿಯ ವಿನೋದವನ್ನು ಅರಿತ ಭೀಮನೂ ಶ್ರೀಕೃಷ್ಣನ ಜೀವನದ ಘಟನೆಗಳನ್ನು ಎತ್ತಿ ಪ್ರತಿವಿನೋದವನ್ನು ಮಾಡುತ್ತಾನೆ. ಭೀಮನ ಕೃಷ್ಣಭಕ್ತಿ ಎಷ್ಟಿತ್ತು ಎಂಬುದು ಕೆಳಗಿನ ಮಾತಿನಿಂದ ವ್ಯಕ್ತವಾಗುತ್ತದೆ:

> 'ಕೆಸರಲ್ಲಿ ಸಿಕ್ಕ ಆಕಳು ತನ್ನ ಯಜಮಾನನಿಗಾಗಿ ದಾರಿಕಾಯುತ್ತದೆ. ಆದರೆ ಆ ಯಜಮಾನನೇ ಆಕಳನ್ನು ಕೆಸರಿನಿಂದ ಮೇಲಕ್ಕೆತ್ತುವ ಬದಲು ಇನ್ನಷ್ಟು ಒಳಕ್ಕೆ ನೂಕುವುದಾದರೆ, ಅದನ್ನು ಬದುಕಿಸುವವರು ಯಾರು?' ಎಂಬ

ದೃಷ್ಟಾಂತದಿಂದ ಶ್ರೀಧರ ಕವಿಯು ಭೀಮನ ಕೃಷ್ಣಭಕ್ತಿಯನ್ನು ಅವನ ಮಾತಿನಲ್ಲಿ ತಿಳಿಸುತ್ತಾನೆ.

ಭೀಮನು ಕೃಷ್ಣನನ್ನು ಕರೆತರುವುದಕ್ಕಾಗಿ ದ್ವಾರಕೆಗೆ ಹೋಗುತ್ತಾನೆ. ಆಗ ಶ್ರೀಕೃಷ್ಣನ ಊಟ ನಡೆದಿರುತ್ತದೆ. ವಿನೋದಕ್ಕಾಗಿ, ಭೀಮನನ್ನು ಬಾಗಿಲಲ್ಲಿ ತಡೆಯಬೇಕೆಂದು ಶ್ರೀಕೃಷ್ಣನು ದಾಸಿಗೆ ಹೇಳುತ್ತಾನೆ ಎಂದು ಸಂಸ್ಕೃತ ಜೈ.ಭಾರತದಲ್ಲಿದೆ. ಇದನ್ನು ಶ್ರೀಧರಕವಿ 'ದೇವರು ಭೋಜನಕ್ಕೆ ಕುಳಿತಿದ್ದಾರೆ. ನೀವೂ ದೂರದಿಂದ ಬಂದಿರುವಿರಿ ನಿಜ; ಆದರೆ ನಿಮ್ಮ ದೃಷ್ಟಿ ಹತ್ತಿ ದೇವರು ಊಟಬಿಟ್ಟು ಎದ್ದಾರು' ಎಂಬ ದಾಸಿಯ ಭಯದ ಮಾತಿನಿಂದ ಭೀಮನನ್ನು ಬಾಗಿಲಲ್ಲೆ ತಡೆದು ನಿಲ್ಲಿಸಿದ್ದಾನೆ—ಶ್ರೀಧರ ಕವಿ.

ಶ್ರೀಧರ ಕವಿಗೆ, ತಾನು ವರ್ಣನೆಯ ಸೆಳವಿಗೆ ಬಿದ್ದು ಗ್ರಂಥ ವಿಸ್ತಾರವಾಗುತ್ತಿದೆಯೋ ಎಂಬ ಭೀತಿ ಮೇಲಿಂದ ಮೇಲೆ ಬರುತ್ತದೆ. ಅಂತೆಯೆ ಅವನು 'ಭೋಜನದ ಕಥೆಯನ್ನು ವಿಸ್ತಾರವಾಗಿ ಹೇಳುತ್ತ ಕುಳಿತರೆ ಗ್ರಂಥವು ಬೆಳೆದೀತು, ಆದುದರಿಂದ ಸಂಕ್ಷಿಪ್ತವಾಗಿ ಹೇಳುತ್ತೇನೆ' ಎಂಬ ಬಗೆಯ ಕವಿಯಮಾತುಗಳು ಹಲವೆಡೆಗಳಲ್ಲಿ ಬರುತ್ತವೆ.

'ಜನರಿಗೆ ಧರ್ಮ, ನೀತಿ ಹೇಳುವುದನ್ನು ಮಾತ್ರ ನೀನು ಅರಿತಿರುವೆ. ಅತಿಥಿಗಳಿಗೆ ಅನ್ನದಾನ ಮಾಡಬೇಕೆಂದು ಉಪದೇಶಿಸುವೆ ಅಲ್ಲವೆ?' 'ಶ್ರೀಪತೀ, ನೀನು ನನ್ನನ್ನು ನುಂಗಿದರೂ ನುಂಗಬಹುದು; ಆದರೆ ಇದರಿಂದ ನಿನಗೆ ಸುಖವಿಲ್ಲ. ಏಕೆಂದರೆ ನನಗೆ ಅಧೋಗತಿ ಇಲ್ಲ. ಊರ್ಧ್ವಗತಿಯಿಂದ ನಿನ್ನ ಮಸ್ತಕವನ್ನು ಭೇದಿಸಿ ನಾನು ಹೊರಗೆ ಬರುವೆ' ಎಂಬ ಮಾತುಗಳು ಕೃಷ್ಣಭೀಮರ ವಾದದಲ್ಲಿ ಬರುತ್ತವೆ. ಇವು ಭೀಮನ ಕೃಷ್ಣಭಕ್ತಿಯನ್ನೂ ಅವನೊಂದಿಗಿದ್ದ ಸಲಿಗೆಯನ್ನೂ ಸೂಚಿಸುತ್ತವೆ.

ಹಂಸಧ್ವಜನಿಗೆ ೭ ಜನ ತಮ್ಮಂದಿರು, ೪ ಜನ ಮಕ್ಕಳು, ಮತ್ತು ಪ್ರಧಾನರು ಇದ್ದು ಅವರ ಹೆಸರುಗಳನ್ನು ಸಂಸ್ಕೃತ, ಮರಾಠಿ ಮತ್ತು ಕನ್ನಡ ಮೂರೂ ಕಾವ್ಯಗಳು ಉಲ್ಲೇಖಿಸುತ್ತವೆ. ಆದರೆ ಅವುಗಳಲ್ಲಿ ಅಲ್ಪಸ್ವಲ್ಪ ವ್ಯತ್ಯಾಸವಿರುವುದನ್ನು ಕಾಣುತ್ತೇವೆ. ಅದು ಹೀಗೆ:

**ತಮ್ಮಂದಿರು :** (ಸಂ.) ಚಂದ್ರಸೇನ, ಚಂದ್ರಕೇತು, ಮಹಾಬಳ, ಚಂದ್ರದೇವ, ನ್ಯಾಯವರ್ತಿ, ಧನಬಲ, ಧರ್ಮವಾಹ.

(ಮ) ವಿಡೂರಥ, ಚಂದ್ರಸೇನ, ಚಂದ್ರಕೇತನ, ಮಹಾಬಳ, ನ್ಯಾಯವಿತ್ತ, ಧರ್ಮವಾದಿ, ಚಂದ್ರದೇವ.

(ಕ) ಧನಬಲ, ಚಂದ್ರಸೇನ, ಚಂದ್ರಕೇತು, ಚಂದ್ರದೇವ, ವಿಡೂರಥ, ಧರ್ಮವಾಹ, ನ್ಯಾಯವರ್ತಿ.

**ಮಕ್ಕಳು :** (ಸಂ.) ಸುನಲ, ಸುರಥ, ಸುಮ, ಸುದರ್ಶನ, ಸುಧನ್ವ.

(ಮ) ಸುರಥ, ಸುಬಳ, ಸುದರ್ಶನ, ಸುಮ, ಸುಧನ್ವ.

(ಕ) ಸುದರ್ಶನ, ಸುಧನ್ವ, ಸುಮನಸ್ಸು, ಸುರಥ.

**ಪ್ರಧಾನರು :** (ಸಂ.) ಸುಮತಿ, ಸುಗತಿ, ಸ್ತ್ರಷ್ಟು, ಶ್ರದ್ಧಾಳು.

(ಮ) ಸುಮತಿ, ಸಂಗತಿ, ಸಂತುಷ್ಟಮನ್, ಶ್ರದ್ಧಾಳು.

(ಕ) ಶ್ರದ್ಧಾಳು, ಸುಮತಿ, ಪ್ರಮತಿ.

ಹೀಗೆ ಪಾತ್ರಗಳ ಹೆಸರು ಬದಲಾಗುವುದಕ್ಕೆ ಕಾವ್ಯದ ಅತಿಪ್ರಚಾರವೇ ಕಾರಣ. ಕಾವ್ಯವು ಬಾಯಿಂದ ಬಾಯಿಗೆ ಪ್ರಚಾರಗೊಳ್ಳುವಾಗ ಪಾತ್ರಗಳ ಹೆಸರುಗಳಲ್ಲಿ, ಕಥಾವಸ್ತುವಿನಲ್ಲಿ ಅಂತರ ಉಂಟಾಗುವುದು ಸ್ವಾಭಾವಿಕ; ಹೀಗೆ ಅಂತರ ಉಂಟಾಗಿದೆ ಎಂಬುದನ್ನು ಕಾವ್ಯಗಳ ತುಲನಾತ್ಮಕ ಅಭ್ಯಾಸದಿಂದ ನಾವು ಕಂಡುಕೊಂಡಿದ್ದೇವೆ.

ದೀಪ್ತತೇಜಸಂ, ದ್ವಿತೀಯಮಿವ ಭಾಸ್ಕರಂ, ವೇದವೇದಾಂಗಪಾರಗಂ, ಕಲಹಪ್ರೇತ್ಸುಂ ವೈಷ್ಣವಾನಾಂ ಗರೀಯಸಮ್ । ಕೃಷ್ಣಮಾಧವಗೋವಿಂದ ನೃಸಿಂಹಮಧುಸೂದನ ಜಪಂತಂ ಮನಸಾ ನಿತ್ಯಂ ಭಕ್ತ್ಯಾ ಕೇವಲಯಾ ಯುತಮ್ ॥

ಇದು ಚಂದ್ರಹಾಸ ಕಥಾನಕದಲ್ಲಿ ಸಂಸ್ಕೃತ ಕಾವ್ಯದಲ್ಲಿ ಬಂದ ನಾರದನ ವರ್ಣನೆ. ಶ್ರೀಧರ ಕವಿ 'ಯಾವನ ಮನಸ್ಸು ಯಾವಾಗಲೂ ತೃಪ್ತವಾಗಿರುವುದೋ, ಯಾವನು ಸುರ ಅಸುರರಿಗೆ ಮುಕುಟಪ್ರಾಯನೋ, ಯಾವನ ಭುಜದ ಮೇಲೆ ಬ್ರಹ್ಮ ವೀಣೆ ಇದೆಯೋ, ಯಾವನ ಮುಖದಲ್ಲಿ ಹರಿನಾಮಸ್ಮರಣೆ ಸತತವಾಗಿದೆಯೋ ಅಂಥ ನಾರದ' ಎಂದಿದ್ದಾನೆ. 'ಕ್ರೀಡೆಯಿಂ ಮಾಧವನುತಪ್ರಸಂಗವನ್ನುಂಟು ಮಾಡುತ್ತೆ, ಕೆಂಜೆಡೆಯ, ಸುಲಿಪಲ್ಲ, ಚೀರ ಕೃಷ್ಣಾಜಿನದ, ಮಂಜುಳ ತುಳಸಿಯ ದಂಡೆಯ, ಅಮಲ ವೀಣಾಕ್ವಣಿತಸಂಜಾತಗಾನಸುಖದ, ಎಸೆವ ತೇಜೋಮಯದ ಪುಂಜ' ಇತ್ಯಾದಿಯಾಗಿ ಲಕ್ಷ್ಮೀಶ ಕವಿಯು ವರ್ಣಿಸಿದ್ದಾನೆ. ಈ ಮೂರರೊಳಗಿನ ವಿಭಿನ್ನತೆಯಲ್ಲಿ ವೈವಿಧ್ಯದ ಹೊಸತನವೂ ಕವಿಸ್ವಾತಂತ್ರ್ಯದ ವೈಶಿಷ್ಟ್ಯವೂ ಇದೆ.

ಚಂದ್ರಹಾಸನನ್ನು ಸಂಸ್ಕೃತ ಮತ್ತು ಕನ್ನಡ ಕಾವ್ಯಗಳು 'ಹಿಂದಣರಸುಗಳ ಬಲಮಿವನ ಹದಿನಾಱಱೊಳಗೊಂದು ಕಳೆಯಲ್ಲ' ಎಂದು ಮಾತ್ರ ವರ್ಣಿಸಿವೆ. ಮರಾಠಿ ಜೈಮಿನಿ ಭಾರತ ಚಂದ್ರಹಾಸನ ವರ್ಣನೆ ಮನನೀಯವಾಗಿದೆ. ಅಲ್ಲಿ ಅರ್ಜುನ ಮತ್ತು ಚಂದ್ರಹಾಸ ಇವರನ್ನು ತೂಗಿ ತೋರಿಸಿದ್ದಾನೆ ಕವಿ. 'ಬಂಗಾರದ ಎದುರು ಹಿತ್ತಾಳೆ ಶೋಭಿಸುವುದೆ? ನೀನು ಮಿಂಚುಹುಳ, ಅವನು ಸೂರ್ಯ; ನೀನು ಚಿಗರಿ, ಅವನು ಸಿಂಹ; ನೀನು ಹೊಂಡ, ಅವನು ಸಾಗರ' (ಅ. ೨೦, ಓ. ೨೬).

ಹೀಗೆಯೆ ಬಭ್ರುವಾಹನನ ವರ್ಣನೆಯನ್ನೂ ತುಲನಾತ್ಮಕವಾಗಿ ನೋಡಬೇಕು. ಸಂಸ್ಕೃತ ಪುರಾಣದಲ್ಲಿ ಬಭ್ರುವಾಹನನು 'ತೇಜಸ್ವೀ, ಸಬಲಃ, ಪ್ರಾಜ್ಞಃ, ವೇದಾರ್ಥಮನುವರ್ತಕಃ, ವೃದ್ಧಾನುಶಾಸನೇ ಮಗ್ನಃ, ಪರಸ್ತ್ರೀವಿಮುಖಃ, ಸದಾ ದಾತೃಣಾಂ ಪ್ರಥಮಃ ಚ ಏಕಃ ಯಥಾ ನಾರಾಯಣೋ ಹರಿಃ ॥' ಎಂದು ಸಾಮಾನ್ಯವಾಗಿ ಚಿತ್ರಿತನಾಗಿದ್ದಾನೆ. ಮರಾಠಿ ಜೈಮಿನಿ ಭಾರತದಲ್ಲಿ 'ಪ್ರತಿಮದನನಂತೆ ರೂಪ, ಯಮನಂತೆ ಕ್ರೋಧ, ದಮನದಲ್ಲಿ ಬಲಾಢ್ಯ, ಮೋಡದಂತೆ ಉದಾರ, ಧೈರ್ಯನಿಧಿ ರತ್ನಾಕರ'

ಎಂಬ ವಿಶೇಷಣಗಳಿಂದ, ಉಪಮಾನಗಳಿಂದ ಬಭ್ರುವಾಹನನ ವರ್ಣನೆ ಮಾಡಲಾಗಿದೆ.

ಮೂವರು ಕವಿಗಳಿಗೂ ಅವರದೇ ಆದ ಪ್ರತಿಭಾಶಕ್ತಿಯಿದೆ. ಶ್ರೀಧರ ಕವಿಯು ಹೆಚ್ಚಾಗಿ ಸಂಸ್ಕೃತ ಪುರಾಣವನ್ನು ಅನುಸರಿಸುವುದರಿಂದ ಅವನ ಕೃತಿಯಲ್ಲಿ ಸಂಸ್ಕೃತ ಪುರಾಣದಲ್ಲಿಯ ಗುಣದೋಷಗಳು ಇಳಿದುಬಂದಿವೆ. ಆದರೆ ಶ್ರೀಧರನು ಸಂಸ್ಕೃತ ಕವಿಗಿಂತ ಹೆಚ್ಚು ಉತ್ಸಾಹವುಳ್ಳವನು. ವರ್ಣನಾಚಾತುರ್ಯ, ಪಾತ್ರಚಿತ್ರಣದ ಹದ ಅವನಿಗೆ ಗೊತ್ತು. ಶ್ರೀಧರ–ಲಕ್ಷ್ಮೀಶರನ್ನು ತೂಗಿ ನೋಡಿದರೆ ಲಕ್ಷ್ಮೀಶನದೇ ಮೇಲುಗೈ ಯಾಗುವುದು. ಲಕ್ಷ್ಮೀಶನಲ್ಲಿ ಇರುವ ಕಥನಕಲೆಯ ತೂಕ, ಸೂಕ್ಷ್ಮದೃಷ್ಟಿ, ರಸ ಪರಿಪೋಷಣ ಕಲೆ ಶ್ರೀಧರ ಕವಿಯಲ್ಲಿ ಕಂಡುಬರುವುದಿಲ್ಲ. ಅದಕ್ಕೆ ಇಲ್ಲಿ ಒಂದು ಉದಾ ಹರಣೆ ಕೊಡಬಹುದು.

ಚಂದ್ರಹಾಸನನ್ನು ಪರಮಭಕ್ತನೆಂದು ಕವಿಗೆ ತೋರಿಸುವುದಿದೆ. ದುಷ್ಟಬುದ್ಧಿ ಚಂದ್ರಹಾಸನನ್ನು ಕೊಲ್ಲಿಸುವ ಪ್ರಯತ್ನದಲ್ಲಿದ್ದಾನೆ; ಹಾಗೆ ಕೊಲೆಗಡುಕರಿಗೆ ಅಪ್ಪಣೆ ಯಿತ್ತಿದ್ದಾನೆ; ಅವರು ಮಗು ಒಂದೇ ಆಡುತ್ತಿರುವುದನ್ನು ಕಂಡು ಎತ್ತಿಕೊಂಡು ಒಯ್ಯುತ್ತಾರೆ. ಆ ಪ್ರಸಂಗದಲ್ಲಿ ಮರಾಠೀ ಜೈಮಿನಿ ಭಾರತದಲ್ಲಿ ಕೆಳಗಿನ ಸಂಭಾಷಣೆ ನಡೆಯುತ್ತದೆ.

**ಚಂದ್ರಹಾಸ :** ನನ್ನನ್ನು ಎಲ್ಲಿ ಒಯ್ಯುತ್ತೀರಿ?

**ಕೊಲೆಗಡಿಕರು :** ಒಂದು ಘೋರವಾದ ಅರಣ್ಯಕ್ಕೆ; ಅಲ್ಲಿ ರಮ್ಯವಾತಾವರಣವಿಲ್ಲ, ಪಕ್ಷಿಗಳಿಲ್ಲ; ಉಗ್ರಪಶುಗಳು–ಹುಲಿ, ಸಿಂಹ....

**ಚಂದ್ರಹಾಸ (ನಕ್ಕು) :** ಎಲ್ಲರನ್ನೂ ರಕ್ಷಿಸುವವನು ನಾರಾಯಣನೆ.

ಇಲ್ಲಿ ಚಂದ್ರಹಾಸನು ದೇವರಲ್ಲಿ ಅಚಲವಾದ ಶ್ರದ್ಧೆಯುಳ್ಳವನು, ದಿವ್ಯಜ್ಞಾನಿ ಎಂದು ಏನೋ ಸಾಧಿಸಿದಂತೆ ತೋರುತ್ತದೆ. ಆದರೆ ಕಾವ್ಯದೃಷ್ಟಿಯಿಂದ ಇಲ್ಲಿ ರಸ ಭಂಗವಾಗಿದೆ. ಅರಣ್ಯ, ಚಾಂಡಾಲರ ಭೀಕರಸ್ವರೂಪ, ಚಂದ್ರಹಾಸನು ಮೃತ್ಯುವನ್ನು ಎದುರಿಸಬೇಕಾದ ಪರಿಸ್ಥಿತಿ ಇವುಗಳ ಭಾವ ಓದುಗನ ಮನವನ್ನು ತಟ್ಟುವುದಿಲ್ಲ, ಮುಟ್ಟುವುದಿಲ್ಲ. ಹೀಗೆಯೆ ಚಂಡಾಲರು ಚಂದ್ರಹಾಸನಿಗೆ, 'ನಾವು ನಿನ್ನನ್ನು ಕೊಲ್ಲು ತ್ತೇವೆ, ದೇವರನ್ನು ನೆನೆ' ಎಂದು ಹೇಳಿದಾಗ ಅವನು 'ಮಗುವನ್ನು ತಂದೆತಾಯಿಗಳೆ ಹೊಡೆದರೆ, ಜಲವು ಜಲಚರಗಳನ್ನೇ ತಿಂದರೆ, ರಾಜನೇ ಜಗತ್ತಿಗೆ ಪೀಡೆಯನ್ನು ಕೊಟ್ಟರೆ ಯಾರನ್ನು ಯಾರು ರಕ್ಷಿಸುವರು?' ಎಂದು ಪ್ರೌಢ ವ್ಯಾಖ್ಯಾನವನ್ನು ಕೊಡುತ್ತಾನೆ. ಇದರಿಂದ ಜ್ಞಾನವನ್ನು ಪಡೆದ ಚಂಡಾಲರು ಚಂದ್ರಹಾಸನ ಅಶುಭ ಲಕ್ಷಣದ ಆರನೆಯ ಬೆರಳನ್ನು ಕತ್ತರಿಸಿಕೊಂಡು ಹೋಗುತ್ತಾರೆ. ಇದು ಶ್ರೀಧರಕವಿ ಕೊಟ್ಟ ಚಂದ್ರಹಾಸನ ಚಿತ್ರ.

ಈ ಸನ್ನಿವೇಶವು ಲಕ್ಷ್ಮೀಶನ ಕೈಯಲ್ಲಿ ಹೇಗೆ ಮೂಡಿದೆ ಎಂಬುದನ್ನು ನೋಡ ಬೇಕು (ಜೈ. ಭಾ. ೨೮. ೩೦-೩೨). 'ಪಶುಘಾತಕಿಗಳಾಡುತಿಹ ಶಿಶುವನು, ಹೀನ

ದಯದಿಂದೆ ಪಿಡಿದೆತ್ತಿಕೊಂಡೊಯ್ದರ್ ಭಯಾನಕದೊಳ್—ಅಂದು ಕೊಲಿಗೆಳಸಿ ಪ್ರಹ್ಲಾದನಂ ದಾನವೇಶ್ವರನಾಜ್ಞೆಯಿಂ ಕಾಳರಕ್ಕಸರ್ ಬಂದು ಕೈದುಡುಕಿದಂತೆ' ಎಂದು ಕವಿ ಲಕ್ಷ್ಮೀಶನು ಹೇಳುತ್ತಾನೆ. ಆಗ ಚಂದ್ರಹಾಸನ ಸ್ಥಿತಿಯನ್ನು 'ಮಿಗೆ ಬೆದಱಿ ಭಯದಿಂದೆ **ಬಾಲಕಂ** ಬಾಯೊಳ್ ಆವಗಂ ಇರಿಸಿಕೊಂಡಿರ್ಪ ದಿವ್ಯಸಾಲಗ್ರಾಮದ ಅತಿಮಹಿಮೆಯಿಂದೆ ಬಗೆದೋಱಲ್, ಮುರಹರ ಕೃಷ್ಣ ಕಮಲಾಕ್ಷ ಖಗರಾಜಗಮನ ಸಲಹೆಂದು ಚೀರಿದೊಡೆ, ಅವನ ಮೊಗನೋಡಿ ಕರುಣದಿಂ ಕಡಿಗರೆದೆ ಕರಗಿದುದು, ಅದೆಂತೊ ಹರಿನಾಮದೇಳ್ಗೆ!' ಬಾಲಸಹಜವಾದ ರೀತಿಯಲ್ಲಿ ತಿಳಿಸಲಾಗಿದೆ. ಲಕ್ಷ್ಮೀಶನ ಈ ಬಾಲಕನು ಚಂಡಾಲರ ವಶದಲ್ಲಿ 'ಅಂಜುತಳುತೆ' ಇದ್ದಾನೆ. ಇಲ್ಲಿ ಚಂದ್ರಹಾಸನ ಸ್ವಾಭಾವಿಕವಾದ ಭಯ, ಅದರೊಡನೆಯೆ ಮುಗ್ಧಧೀರಭಾವ, ಶಾಲಗ್ರಾಮಪ್ರಭಾವ ದಿಂದ ಸಹಜವಾಗಿ ಉಂಟಾದ ಭಕ್ತಿ, ಅವನ ಆಗಿನ ಮುದ್ದುಮೊಗವನ್ನು ನೋಡಿ ಮತ್ತು ಕೃಷ್ಣಮಹಿಮೆಯ ಪರಿಣಾಮವಾಗಿ ಉಗ್ರಹಿಂಸ್ರ ಚಂಡಾಲರಲ್ಲಾದ ಮನಃ ಪರಿವರ್ತನೆ ಇವೆಲ್ಲ ಓದುಗನ ಮನವನ್ನು ಮುಟ್ಟಿತಟ್ಟುತ್ತವೆ; ಸೂರೆಗೊಳ್ಳುತ್ತವೆ.

ಹೀಗಿದ್ದೂ ಶ್ರೀಧರ ತೀರ ಸಾಮಾನ್ಯಕವಿಯಲ್ಲ. ಅವನೂ ಒಬ್ಬ ಸತ್ಕವಿ. ನೀತಿಬೋಧೆ, ವ್ಯವಹಾರಜ್ಞಾನ, ಗೃಹಸ್ಥಧರ್ಮ, ಅತಿಥಿಮಾಹಾತ್ಮ್ಯ, ಮೊದ ಲಾದುವುಗಳನ್ನು ಅವನು ತನ್ನ ಬಹುಶ್ರುತತೆಯ ಫಲವಾಗಿ ಕಾವ್ಯದ ಮೂಲಕ ರಸಿಕ ರಿಗೆ ನೀಡಿದ್ದಾನೆ. ಅವನು ಚಮತ್ಕೃತಿಯುಕ್ತವಾದ ರಚನೆಯನ್ನು ಮಾಡಬಲ್ಲನು. ಉದಾಹರಣೆಗೆ, 'ಸರ್ವಧರ್ಮಸದನವನ್ನು ಕೆಡವಬಾರದು, ಭೂತದಯೆ ಎಂಬ ವಸ್ತ್ರ ವನ್ನು ಕಿತ್ತೆಸೆಯಬಾರದು, ವಿವೇಕವನವನ್ನು ಕಡಿಯಬಾರದು ಕುಬುದ್ಧಿಯ ಕುಠಾರ ದಿಂದ; ಹಾವಿನ ಮುಖದಲ್ಲಿ ವಿಷವಿದ್ದರೆ ಚೇಳಿನ ಬಾಲದಲ್ಲಿ ವಿಷವಿದೆ, ದುರ್ಜನರ ಅಂಗಾಂಗಗಳಲ್ಲಿಯೂ ವಿಷವಿದೆ; ಆದುದರಿಂದ ಯಾವಾಗಲೂ ಇವುಗಳಿಂದ ದೂರವಿರ ಬೇಕು.' ಇತ್ಯಾದಿ ಸಾವಿರಾರು ವಚನಗಳನ್ನು ಶ್ರೀಧರ ಕವಿ ಮರಾಠಿ ಸಾಹಿತ್ಯಕ್ಕೆ ಕೊಡಮಾಡಿದ್ದಾನೆ. ಉಪಮೆ, ಉತ್ಪ್ರೇಕ್ಷೆ, ಆಪಹ್ನುತಿ, ಶ್ಲೇಷ, ಅರ್ಥಾಂತರನ್ಯಾಸ ಮೊದಲಾದ ಅಲಂಕಾರಗಳನ್ನು ಇವನು ಹೆಚ್ಚಾಗಿ ಬಳಸುತ್ತಾನೆ. ಇವೆಲ್ಲವುಗಳಲ್ಲಿಯೂ ರೂಪಕಾಲಂಕಾರದಲ್ಲಿ ಶ್ರೀಧರನಿಗೆ ಪ್ರೀತಿ ಹೆಚ್ಚೆಂದು ತೋರುತ್ತದೆ. ನಿರವಯವ, ಸಾಂಗ ಮಾಲಾರೂಪಕಗಳನ್ನು ನಿರ್ಮಿಸುವಲ್ಲಿ ಈ ಕವಿಯ ಚಾತುರ್ಯವನ್ನು ಕಾಣು ತ್ತೇವೆ. ಕಥೆಗಳ ಮೂಲಕ ಜನರಿಗೆ ನೀತಿಬೋಧೆ ಮಾಡುತ್ತ ಗಂಭೀರ ತಾತ್ವಿಕ ಮಾತುಗಳನ್ನು ಸೇರಿಸಿಬಿಡುತ್ತಾನೆ.

ಶ್ರೀಧರ ಕವಿಯ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಸೇವೆ ಮರಾಠೀ ಸಾಹಿತ್ಯ ಚರಿತ್ರೆಯಲ್ಲಿ ಅತಿ ಮಹತ್ತ್ವದ್ದೆಂಬುದರಲ್ಲಿ ಸಂದೇಹವಿಲ್ಲ. ಅವನ ಕೃತಿಗಳನ್ನು ಕಾವ್ಯ ದೃಷ್ಟಿಯಿಂದ ವಿಮರ್ಶಿಸಿದವರು ಅಷ್ಟೊಂದು ಉಚ್ಚಸ್ಥಾನವನ್ನು ಕೊಡಲಾರರಾದರೂ ಅವನ ಸೇವೆಯ ಅಮೋಘತ್ವವನ್ನು ರಚನೆಯ ಪ್ರಾಸಾದಿಕತೆಯನ್ನು ಒಪ್ಪದಿರರು. ಕೈ.ವಾ. ಪ್ರಾ.ಚಿ.ನೀ. ಜೋಶಿಯವರು ಇವನ ಬಗ್ಗೆ 'ಜ್ಞಾನೇಶ್ವರಿಯನ್ನು ಓದುವ

ಮತ್ತು ತಿಳಿದುಕೊಳ್ಳಬಲ್ಲ ಜನ ಕಡಿಮೆ. ಆದರೆ ಸುಲಭವಾದ ಭಾಷೆಯಲ್ಲಿ ರಚಿತವಾದ ಶ್ರೀಧರನ ಈ ಅಶ್ವಮೇಧಕಾವ್ಯವು ಲೋಕಪ್ರಿಯವಾಯಿತು. ಶ್ರೀಧರನ ಇನ್ನುಳಿದ ಗ್ರಂಥಗಳಾದ 'ಹರಿವಿಜಯ' ಮತ್ತು 'ರಾಮವಿಜಯ' ಕಾವ್ಯಗಳ ಮಟ್ಟಕ್ಕೆ ಈ ಕಾವ್ಯವು ಏರಲಾರದು. ಮರಾಠಿಕವಿಗಳ ಮತ್ತು ಕಾವ್ಯಗಳ ಮೊದಲ ಪಂಕ್ತಿಯಲ್ಲಿ ಈ ಕವಿಗೆ (ಕೃತಿಗಳಿಗೆ) ಸ್ಥಾನ ದೊರೆಯುವುದಿಲ್ಲ. ಇವನು ಅಷ್ಟು ಅತ್ಯುತ್ತಮ ಕವಿಯಲ್ಲ. ಆದರೆ ಮರಾಠಿ ಕವಿ–ಕಾವ್ಯಗಳ ಎರಡನೆಯ ಪಂಕ್ತಿಯಲ್ಲಿ ಮಾತ್ರ ಇವನಿಗೆ ಪ್ರಥಮ ಸ್ಥಾನದ ಸಮೀಪದಲ್ಲಿ ಎಡೆಕೊಡಲು ಅಡ್ಡಿಯಿಲ್ಲ' ಎಂದು ಅಭಿಪ್ರಾಯಪಟ್ಟಿದ್ದಾರೆ.[1]

## ಸಂಸ್ಕೃತ–ತೆಲುಗು–ಮರಾಠಿ–ಕನ್ನಡ ಜೈಮಿನಿ ಭಾರತಗಳ ತುಲನಾತ್ಮಕ ಅಭ್ಯಾಸ[2]

ತೆಲುಗು, ಮರಾಠಿ ಮತ್ತು ಕನ್ನಡ ಜೈಮಿನಿ ಭಾರತಗಳನ್ನು ಸಂಸ್ಕೃತ ಜೈಮಿನಿ ಭಾರತದೊಡನೆ ಸರಿಹಚ್ಚಿ ನೋಡಿದರೆ, ಈ ಮೂರೂ ಕಾವ್ಯಗಳು ಸಂಸ್ಕೃತ ಮೂಲವನ್ನು ಸಾಕಷ್ಟು ಅವಲಂಬಿಸಿದ್ದರೂ ತಮ್ಮ ತಮ್ಮ ಸ್ವತಂತ್ರ ಪ್ರತಿಭೆಯನ್ನು ತೋರಿಸುತ್ತಿರುವುದನ್ನು ಕಾಣುತ್ತೇವೆ. ಆದರೆ ಕನ್ನಡ ಕಾವ್ಯದಲ್ಲಿ ಕಂಡುಬರುವ ಕಾವ್ಯಾಂಶ, ಕ್ರಿಯೆ–ಪ್ರತಿಕ್ರಿಯೆಗಳ ವೀಣೆಯ ಸುಶ್ರಾವ್ಯವಾದ–ಇಂಪು ಇನ್ನಿತರ ಕಾವ್ಯಗಳಲ್ಲಿ ಕಂಡುಬರುವುದಿಲ್ಲ. ಸಂಸ್ಕೃತ, ತೆಲುಗು, ಮರಾಠಿ ಕಾವ್ಯಗಳಲ್ಲಿ, ಪುರಾಣದಂತೆ ಕಥಾನಿರೂಪಣೆಯ ದ್ರುತಗತಿಯಿಂದ ಸಾಗುವ ಕಥನರೀತಿ ಇದೆ. ಕನ್ನಡ ಜೈಮಿನಿ ಭಾರತದಲ್ಲಿ ಲಕ್ಷ್ಮೀಶನ ಕಥನಕ್ಕೆ ನಾಟಕೀಯವಾದ ಬೆಡಗೂ, ಕಥಾಚಿತ್ರಣದ ಸೊಬಗೂ, ಕಾವ್ಯರಮ್ಯತೆಯ ಸೊಗಸೂ ಸಂಗಮಿಸಿ ವಿಶಿಷ್ಟವಾದ ಮೆರುಗನ್ನು ತಂದಿವೆ.

ಯಜ್ಞಾಶ್ವಗಳು ವೀರವರ್ಮನ ನಗರಕ್ಕೆ ಹೋದವು—

ತುರಂಗವರೌ ಗತೌ ರಾಜನ್ಪುರೆ ವೈ ವೀರವರ್ಮಣಃ —ಅ. ೪೭, ಶ್ಲೋಕ ೧

ಎಂಬ ಮೂಲದ ಘಟನೆಯನ್ನು ತೆಲುಗು ಮತ್ತು ಮರಾಠಿ ಕಾವ್ಯಗಳೂ ಹೇಳುತ್ತವೆ. ಆದರೆ ಕನ್ನಡ ಕಾವ್ಯದಲ್ಲಿ, ಒಬ್ಬೊಬ್ಬ ಅರಸನೂ ತನ್ನ ತನ್ನ ಅಪಾರ ಸೇನೆಯೊಡನೆ ಅರ್ಜುನನನ್ನು ಕೂಡಿಕೊಂಡು ಹೊರಟುದರಿಂದ ಪಾಂಡವ ಬಲವು ವೃದ್ಧಿಂಗತವಾದುದನ್ನು ಲಕ್ಷ್ಮೀಶನ ವರ್ಣನಾಚಿತ್ರದಲ್ಲಿ ಕಾಣುತ್ತೇವೆ:

ತುಂಬಿತು ಮಹೀಮಂಡಲವನತುಲ ಸೇನೆ; ನಡೆ
ಗೊಂಬುದಿನ್ನೆಲ್ಲಿಗೆ? ಮಹಾದೇವ! ಕೌತುಕಮಿ–
ದೆಂಬ ತೆಱನಾಗಿ ಮುಂದಕೆ ತಳೆವ ಕುದುರೆಗಳ ಕೂಡೆ ಸೌರಾಷ್ಟ್ರಕಾಗಿ
ಬೆಂಬಿಡದೆ ಬಂದುದರ್ಜುನನ ಬಲಂ......................

—ಸಂ. ೨೭, ಪ. ೨.

---

1 'ಶ್ರೀಧರ: ಚರಿತ್ರ ಮತ್ತು ಕಾವ್ಯವಿವೇಚನೆ.'

2 'ಕಥನ ಕುಶಲ ಕವಿ ಲಕ್ಷ್ಮೀಶ'—ವೀರವರ್ಮ ಕಥಾವಿಶ್ಲೇಷಣೆ ನೋಡಿರಿ. ಲೇ. ಡಾ. ವ್ಹಿ. ಡಿ. ಬೇಂದ್ರೆ, ಪ್ರಕಾಶಕ: ಕರ್ನಾಟಕ ವಿಶ್ವವಿದ್ಯಾಲಯ.

ಸೈನ್ಯದಿಂದಲೇ ನೆಲ ತುಂಬಿ ಹೋಗಿದೆ—ಇನ್ನು ಹೋಗುವುದು ಎಲ್ಲಿಗೆ? ಎನ್ನುತ್ತಾನೆ ಲಕ್ಷ್ಮೀಶ.

ಬಭ್ರುವಾಹನ ಮತ್ತು ವೀರವರ್ಮನ ಮುಖಂಡತ್ವದಲ್ಲಿ ನಡೆದ ಯುದ್ಧವನ್ನು :

ವಿಪರೀತಮಿದಂ ಜಾತಂ ರುದ್ರಕ್ರೀಡನಸನ್ನಿಭಮ್
ಬಭ್ರುವಾಹೇನ ವೀರೇಣ ಹನ್ಯಮಾನಂ ಬಲಂ ಮಹತ್
ಸಚುಕೋಚ ತಥಾಭೂತಮಗ್ನೌ ಚರ್ಮಾಹಿತಂ ಯಥಾ ||

—ಅ. ೪೭, ಶ್ಲೋಕ ೧೩,೧೪

ಎಂದು ಸಂಸ್ಕೃತದಲ್ಲಿ ವರ್ಣಿಸಲಾಗಿದೆ. ಇದನ್ನು ತೆಲುಗು ಕವಿ ಶಬ್ದಶಃ ಭಾಷಾಂತರಿಸಿದ್ದಾನೆ. ಮರಾಠಿಯಲ್ಲಿ ಶ್ರೀಧರ ಕವಿ ಕೂಡ.

ಸೈನ್ಯ ಆವಘೇ ಆಟಲೆ। ಜೈಸೆ ತೃಣ ಅಗ್ನಿಸಂಗೆ।

(ಕಿಚ್ಚುಕೊಂಡ ಹುಲ್ಲಿನಂತೆ ಪಡೆ ನಾಶವಾಯಿತು)—

ಎಂದಿದ್ದಾನೆ. ಮೂವರೂ ಯುದ್ಧದ ಭೀಕರ ಮಹದ್ದೃಶ್ಯವನ್ನು ಅಣುಮಾತಿನಲ್ಲಿ ಹೇಳಿದ್ದಾರೆ. ಆ ಭೀಕರತೆ ಕಣ್ಣಿಗೆ ಕಟ್ಟುವಂತೆ ವರ್ಣಿಸುತ್ತಾನೆ ಕನ್ನಡ ಕವಿ :

ಖಳಿಖಟಿಲು ಖಟಿಲೆಂದು ರವದಿಂದ ಜವದಿಂದ
ಕಳವರಿದು ಘೋರಪ್ರಹಾರದಿಂ ವೀರದಿಂ
ಬಳಸಿ ಬಿದ್ದುದು ಮಂದಿ ಹೆಣಮಯದ ರಣಮಯದ ಕಾಕುಳದ ರಚನೆ ಮೆರೆಯೆ ॥

—ಸಂ. ೨೭, ಪ. ೭

ಜೈಮಿನಿ ಭಾರತ ಕಾವ್ಯದ ಅತಿ ಪ್ರಚಾರದ ಮೂಲಕ, ಅದು ಅನೇಕ ಜನರ ಬಾಯಿಂದ ಬಾಯಿಗೆ ಹರಿದು ಬಂದ ಮೂಲಕ ಕಾವ್ಯದಲ್ಲಿ ಹೆಚ್ಚುಕಡಿಮೆ ಹೇಗಾಗುತ್ತದೆ ಎಂಬುದಕ್ಕೆ ವೀರವರ್ಮನ ಮಕ್ಕಳ ಹೆಸರುಗಳನ್ನು ಉದಾಹರಣೆಗೆ ತೆಗೆದುಕೊಳ್ಳಬಹುದು. ಅವು ಬೇರೆ ಬೇರೆ ಭಾಷೆಯ ಕಾವ್ಯದಲ್ಲಿ ಹೇಗೆ ರೂಪುಗೊಂಡಿವೆ ಎಂಬುದನ್ನು ಗಮನಿಸಬೇಕು :

ಸಂಸ್ಕೃತ : ಸುಭಾಲ, ಸುರಭ, ನೀಲ, ಕುವಲ, ಸರಲ.
ತೆಲುಗು : ಸುಲೋಲ, ಸುಲಾಖ್ಯ, ಕುವಲ, ಇತ್ಯಾದಿ.
ಮರಾಠಿ : ಸುಶೀಳ, ಸರಳ, ಸುರಭ, ಕುವಳ, ರಸಾಳ.
ಕನ್ನಡ : ಸುಲಭ, ಸುಫಾಲ, ಕುವಲ, ನೀಲ, ಸರಳ.

ಈ ಹೆಸರುಗಳನ್ನು ಹೋಲಿಸಿನೋಡಿದಾಗ ಸಂಸ್ಕೃತ, ಮರಾಠಿ ಮತ್ತು ಕನ್ನಡ ಕಾವ್ಯಗಳಲ್ಲಿ ಹೆಚ್ಚಿಗೆ ವ್ಯತ್ಯಾಸ ಕಂಡುಬರುವುದಿಲ್ಲ. ತೆಲುಗು ಕಾವ್ಯದಲ್ಲಿ ಹೆಚ್ಚು ಅಂತರ ತೋರುತ್ತದೆ. ಆದರೆ ಸಂಸ್ಕೃತ, ತೆಲುಗು, ಮರಾಠಿ ಕಾವ್ಯಗಳಲ್ಲಿ ಸುಮ್ಮನೆ ಹೆಸರುಗಳನ್ನು ಹೇಳಿಕೊಂಡಂತಿದೆ. ಯಾವ ವೈಶಿಷ್ಟ್ಯವಾಗಲಿ, ಔಚಿತ್ಯವಾಗಲಿ ಇಲ್ಲ. ಕನ್ನಡ ಕಾವ್ಯದಲ್ಲಿ ಮಾತ್ರ ಅದಕ್ಕೊಂದು ವೈಶಿಷ್ಟ್ಯವನ್ನು ತರುವ ಪ್ರಯತ್ನವನ್ನು ಕಾಣುತ್ತೇವೆ. ಆ ಕಥೆಯ ನಾಯಕನಾದ ವೀರ ಬಭ್ರುವಾಹನನು ಯಾರನ್ನು ಸೋಲಿಸಿದ

ನೆಂದು ಹೇಳುವುದಿದೆಯೋ ಅವರು ಅಸಾಮಾನ್ಯರೇ ಆಗಿರಬೇಕು; ಎಂದರೇ ಅವನ ಗೆಲವು ವೀರ ವ್ಯಕ್ತಿತ್ವಕ್ಕೆ ಭೂಷಣ. ಅದಕ್ಕಾಗಿ ವೀರವರ್ಮನ ಮಕ್ಕಳನ್ನು ಹೆಸರಿಸು ವಾಗ,

ಸುಲಭನೆಂದನುಪಮ ಸುಲೋಲನೆಂದುನ್ನತ ಕು
ವಲನೆಂದು ನೀಲನೆಂದಗ್ಗದ ಸರಳನೆಂದು —ಸಂ. ೨೭, ಪ. ೫

ಎಂದು ವಿಶೇಷಣಪೂರ್ವಕವಾಗಿ ಉಲ್ಲೇಖಿಸಿ ಅವರ ಶ್ರೇಷ್ಠತೆಯನ್ನು ವ್ಯಕ್ತಗೊಳಿಸುವ ಕಡೆ ಗಮನಕೊಟ್ಟಿದ್ದಾನೆ.

ಸಂಸ್ಕೃತ, ಕನ್ನಡ, ಮರಾಠೀ ಕಾವ್ಯಗಳಲ್ಲಿ ವೀರವರ್ಮನ ಮಗಳ ಹೆಸರು ಮಾಲಿನಿ ಎಂದಿದೆ. ತೆಲುಗು ಕಾವ್ಯದಲ್ಲಿ ಮಾತ್ರ ಮಾಲಿನಿ, ಸುಮಾಲಿನಿ ಎಂಬ ಎರಡು ಬಗೆಯಿಂದ ಹೆಸರಿಸಲಾಗಿದೆ. ಹಾಗೆಯೇ ಮಾಲಿನಿಯ ವಿವಾಹಾಪೇಕ್ಷೆ ಹಾಗೂ ಯಮ ನಲ್ಲಿ ಅವಳಿಗೆ ಇದ್ದ ಆಸಕ್ತಿ ವೀರವರ್ಮನಿಗೆ ತಿಳಿದಾಗ ಅವನ ಪಿತೃಹೃದಯವು ಹೇಗೆ ಅನುಸ್ಪಂದಿಸುತ್ತದೆ ಎಂಬುದನ್ನು 'ಸಂತೈಸಿತೊಡಗಿದಂ ಯಮಸೂಕ್ತದಿಂದೆ ವೈವಸ್ವತ ಪ್ರಾರ್ಥನೆಯನು' (ಸಂ. ೨೭, ಪ. ೧೬) ಎಂದು ಹೇಳಿ ಸ್ಪಷ್ಟಪಡಿಸಿದ್ದಾನೆ ಕವಿ ಲಕ್ಷ್ಮೀಶ. ಮಿಕ್ಕ ಕಾವ್ಯಗಳಲ್ಲಿ ಮಾಲಿನಿ ಯಮನಿಗಾಗಿ ಹಾತೊರೆದು ತಪಸ್ಸನ್ನಾ ಚರಿಸಿದ ಮಾತು ಬರುತ್ತದೆ. ತಂದೆಯ ಸಹಾನುಭೂತಿ ಅಲ್ಲಿ ವ್ಯಕ್ತಪಟ್ಟಿಲ್ಲ.

ಯಮನು ತನ್ನ ಪರಿವಾರವನ್ನು ವಿವಾಹಕ್ಕೆ ಆಮಂತ್ರಿಸುತ್ತಾನೆ. ಅವನ ಪರಿ ವಾರವೆಂದರೆ ನಾನಾ ರೋಗಗಳು. ಆ ಎಲ್ಲ ರೋಗಗಳಲ್ಲಿ ಶ್ರೇಷ್ಠ ಕ್ಷಯ. ಕ್ಷಯನ ಮುಖಂಡತ್ವದಲ್ಲಿ ಚರ್ಚೆ ನಡೆಯುತ್ತದೆ. ಅನೇಕ ರೋಗಗಳಿಗೆ ಕಾರಣ, ಅವುಗಳಿಗೆ ಪರಿಹಾರೋಪಾಯದ ಕರ್ಮವಿಪಾಕ ಇವುಗಳ ಕಥಾನಕವು ಸಂಸ್ಕೃತ ಮರಾಠೀ ಕಾವ್ಯಗಳೆರಡರಲ್ಲಿಯೂ ವಿಸ್ತಾರವಾಗಿ ಬರುತ್ತದೆ. ತೆಲುಗು ಕಾವ್ಯದಲ್ಲಿ ಇದನ್ನು ಸಂಗ್ರಹವಾಗಿಯೂ, ಮಾರ್ಮಿಕವಾಗಿಯೂ ಚರ್ಚಿಸಲಾಗಿದೆ. ಆದರೆ ಕನ್ನಡ ಕವಿಯ ಕಾವ್ಯದೃಷ್ಟಿ ಇವರಿಗಿಂತ ಭಿನ್ನವಾಗಿದೆ. ಅವನ ದೃಷ್ಟಿಯಲ್ಲಿ, ಕರ್ಮವಿಪಾಕ ಕಥನ ದಿಂದ ಕಾವ್ಯಕ್ಕೆ ಸೊಬಗು ಬರಲಾರದು. ಅದೊಂದು ಜೇಡನ ಬಲೆ. ಆದುದರಿಂದ ಆ ಚರ್ಚೆಗೆ ಇಂಬುಗೊಡದೆ ಎರಡು ಪದ್ಯಗಳಲ್ಲಿ ಮುಖ್ಯಾಂಶಗಳನ್ನು ಹೇಳಿ,

ಆಲಿಸುವುದೆಲ್ಲರು: ಪಾಪಿಗಳ ಕಣ್ಗೆ ತಾಂ
ಕಾಲಾಗ್ನಿ ಸದೃಶನಾಗಿರ್ದಪೆಂ; ಪುಣ್ಯಾತ್ಮ
ರಾಲಿಗಳ್ಗತಿ ಸೌಮ್ಯನಾಗಿಹೆಂ; ನೀವುಮೆನ್ನಂತೆ ರಮಣೀಯಮಾದ ||
ಶಾಲಿಸೌಂದರದ ರೂಪಂಗಳಂ ತಳೆದು, ದಿ
ವ್ಯಾಲಂಕೃತಿಗಳಿಂದ ವೀರವರ್ಮಕ ಧರಾ
ಪಾಲಕನ ಪಟ್ಟಣಕೆ ಬಹುದು...||

ಎಂಬ ಯಮನ ನಿರ್ಣಯವನ್ನು ಸಾರಿ ಕಥೆಯನ್ನು ಮುಂದುವರಿಸುತ್ತಾನೆ ಲಕ್ಷ್ಮೀಶ. ಸಂಸ್ಕೃತ ಕವಿ,

...............ನಾರದಸ್ತೇನ ಪ್ರಯಯೌ ವೀರವರ್ಮಣಮ್
ಕಥಯಾಮಾಸ ವೃತ್ತಾಂತಂ ಯಮೇನೋಕ್ತಂ ಸುಮಂಗಲಮ್
ರಾಜಾ ಕನ್ಯಾವಿವಾಹಂ ತು ಕರ್ತುಕಾಮೋ ವ್ಯವಸ್ಥಿತಃ ||
—ಅ. ೪೮, ಶ್ಲೋಕ ೧೨, ೧೩

ಎಂದು ಹೇಳಿರುವಲ್ಲಿ ಮಾಲಿನಿಯ ಇಚ್ಛೆ ಈಡೇರಿದ ಆನಂದವೂ ಇಲ್ಲ, ವಿವಾಹ ವೈಭವವೂ ಇಲ್ಲ. ಮಾಲಿನಿಯ ಮದುವೆ ಗೊತ್ತಾದುದು ಒಂದು ಘಟನೆ, ಮದುವೆ ನೆರವೇರಿದ್ದು ಇನ್ನೊಂದು ಘಟನೆ, ಎಂಬ ದೃಷ್ಟಿಯಿಂದಷ್ಟೇ ಈ ಪ್ರಸಂಗಕ್ಕೆ ಬೆಲೆ ಕೊಡಲಾಗಿದೆ. ಮನೋವ್ಯಾಪಾರಗಳ ಕಡೆಗೆ ಕಣ್ಣೇ ಹರಿದಿಲ್ಲ. ಮರಾಠಿ ಮತ್ತು ತೆಲುಗು ಕಾವ್ಯದಲ್ಲಿರುವುದೂ ಇಷ್ಟೇ. ಈ ಸಂದರ್ಭದಲ್ಲಿ ಲಕ್ಷ್ಮೀಶನು ಅನುಸರಿಸಿದ ರೀತಿ ಪ್ರಶಂಸನೀಯವಾಗಿದೆ. ಮರಾಠಿ ಕಾವ್ಯದಲ್ಲಿ, ಯಮ–ಮಾಲಿನಿ ವಿವಾಹ ನಿಶ್ಚಯದ, ಮತ್ತು ವೈಶಾಖ ಶುಕ್ಲ ಪಕ್ಷದಲ್ಲಿ ಯಮ ಬರುತ್ತಾನೆಂಬ ಸುದ್ದಿಯನ್ನು ನಾರದನು ಮಾಲಿನಿಗೇ ತಿಳಿಸುತ್ತಾನೆ; ಇನ್ನಿತರ ಕಾವ್ಯಗಳಲ್ಲಿ ವೀರವರ್ಮನಿಗೆ ತಿಳಿಸುತ್ತಾನೆ. ಮಾಲಿನಿಯನ್ನು ವರಿಸಲು ಯಮನೊಪ್ಪಿಕೊಂಡಾಗ ಕನ್ನಡ ಕವಿಯ ನಾರದನಿಗೆ ಆನಂದವಾಗುತ್ತದೆ.ಅವನು ಒಳ್ಳೇ ಹುಮ್ಮಸ್ಸಿನಿಂದ ವೀರವರ್ಮನಲ್ಲಿಗೆ ಬಂದು ಆ ಸುದ್ದಿಯನ್ನು ಅವನಿಗೆ ಅರುಹುತ್ತಾನೆ (ಸಂ. ೨೭ ಪ. ೨೦):

ಸುಸ್ವರದ ವೀಣೆವಿಡಿದಾನಂದದಿಂದ ಸಾ
ರಸ್ವತಪುರಕೆ ಬಂದು ಕಾಲನಾಡಿದುದಂ ಯ
ಶಸ್ವಿಯಾಗಿಹ ವೀರವರ್ಮನಂ ಕಂಡು ಸತ್ಕೃತನಾಗಿ ವಿವರಿಸಿದನು ||

ಇದನ್ನು ಕೇಳಿದ ವೀರವರ್ಮನ ಸಂಭ್ರಮವೂ ಲಕ್ಷ್ಮೀಶನಲ್ಲಿ ನೋಡುವಂತಿದೆ:

ಸುರಮುನಿಯ ವಾಕ್ಯಮಂ ಕೇಳಿದಂ ತಾಳಿದಂ
ಪರಿತೋಷಮಂ ಭೂಪನೊಲವಿಂದ ನಲವಿಂದ
ಪುರವರವನೈದೆ ಸಿಂಗರಿಸಿದಂ ತರಿಸಿದಂ ಬೇಕಾದ ವಸ್ತುಗಳನು ||
ಸರಸಗುಣ ಸೌಂದರ್ಯಶಾಲಿನಿಗೆ ಮಾಲಿನಿಗೆ
ತರಣಿಜನ ಕೂಡೆ ವೈವಾಹಮುಂ ಮೋಹಮುಂ
ದೊರೆಕೊಂಬುದೆಂದು ವಿಸ್ತರಿಸಿದಂ ಕರೆಸಿದಂ ಬಾಂಧವರನುತ್ಸವದೊಳು ||
—ಸಂ. ೨೭, ಪ. ೨೨

ಇಲ್ಲಿಯ ಪ್ರಾಸಾಲಂಕಾರವು ಕೂಡ ಅವನ ಮನದ ಉತ್ಸಾಹವನ್ನು ಚಿತ್ರಿಸುವಲ್ಲಿ ಸಹಾಯಕವಾಗಿದೆ.

ಸಂಸ್ಕೃತ ಮೂಲದ,

ತಪ್ರಾಪ್ಯ ರಮ್ಯಂ ನಗರಂ ವೀಕ್ಷ್ಯ ಸಾರಸ್ವತಂ ಯಮಃ |
ವರಯಾಮಾಸ ಧರ್ಮಿಷ್ಠಂ ಮಾಲಿನೀಂ ತತ್ಪರಾಂ ವಿಭುಃ ||
—ಅ. ೪೯, ಶ್ಲೋಕ ೨

(ಯಮನು ಸಾರಸ್ವತಪುರಕ್ಕೆ ಬಂದು ತನ್ನಲ್ಲಿ ಅನುರಕ್ತೆಯಾದ ಧರ್ಮಿಷ್ಠೆಯಾದ

ಮಾಲಿನಿಯನ್ನು ವರಿಸಿದನು) ಎಂಬ ಸಂದರ್ಭವನ್ನೇ ಲಕ್ಷ್ಮೀಶನು ವಿವರಿಸುವುದು ಹೀಗೆ: ಸಂಧಿ ೨೭ ಪದ್ಯ ೨೪ ನೋಡಿ—

ವಿಜಯ ಕೇಳಿಂತೆಂದು, ಬಳಿಕ ದಿವ್ಯಾಕೃತಿಯ
ನಿಜಭೃತ್ಯರೊಡನೆ ಶಮನಸಂ ವೀರವರ್ಮ ಭೂ
ಭುಜನ ಪಟ್ಟಣಕೆ ಬರಲ್ಲಾನೃಪನಿದಿರ್ಗೊಂಡು ನಾರದಂ ಮೊದಲಾಗಿಹ ||
ದ್ವಿಜರ ಮುಂದಗ್ನಿ ಸಾಕ್ಷಿಕದೊಳಾತಂಗೆ ಪಂ
ಕಜವದನೆ ಮಾಲಿನಿಯನಿತ್ತು ವಿಧಿವಿಭವದಿಂ
ತ್ರಿಜಗಕಿದು ಪೊಸತೆನೆ ವಿವಾಹಭವನದೊಳಂದು ಮದುವೆಯಂ ಮಾಡಿಸಿದನು ||

ಇಲ್ಲಿ ಕವಿ, ಯಮನ ಬಗ್ಗೆ ವೀರವರ್ಮ ತೋರಿದ ಆದರದ ಉಲ್ಲೇಖದಿಂದ ಮತ್ತು ಮದುವೆಯ ಸಡಗರದ ವಿರವಣೆಯಿಂದ ಹಿಗ್ಗಿನ ಸಂದರ್ಭವನ್ನು ಹಿಗ್ಗಿಸಿ ತೋರಿಸಿದ್ದಾನೆ.

ವಿವಾಹ ಮುಗಿದಿದೆ. ಯಮನು ಸಂತುಷ್ಟನಾಗಿದ್ದಾನೆ. ವರವನ್ನು ಬೇಡೆಂದು ವೀರವರ್ಮನಿಗೆನ್ನುತ್ತಾನೆ. ಅದಕ್ಕೆ ವೀರವರ್ಮನು 'ಮರಣ ಕಾಲದಲ್ಲಿ ನನಗೆ ಹೃಷಿಕೇಶನ ದರ್ಶನವಾಗಲಿ'—

ಯಸ್ಮಿನ್ ದಿನೇ ಮೇ ಮರಣಂ ಭವಿಷ್ಯತಿ ಹಿ ಭಾನುಜ।
ತ್ವದ್ವರೇಣ ಹೃಷೀಕೇಶಂ ತಸ್ಮಿನ್ನಹನಿ ಕಾಮಯೆ || —ಅ. ೪೯. ಶ್ಲೋಕ ೬, ೭

ಎಂದು ಕೇಳಿಕೊಳ್ಳುತ್ತಾನೆ. ಅಲ್ಲಿಯವರೆಗೆ ನೀನು ಇಲ್ಲಿಯೇ ಇದ್ದು, ನನ್ನನ್ನು ರಕ್ಷಿಸಬೇಕು ಎಂದೇನೂ ಸಂಸ್ಕೃತದ ವೀರವರ್ಮ ಕೇಳಿಕೊಳ್ಳುವುದಿಲ್ಲ. 'ಯಮನು ಇಲ್ಲೇಕೆ ಇದ್ದಾನೆ?' ಎಂಬ ಅರ್ಜುನನ ಪ್ರಶ್ನೆಯಿಂದಲೇ ವೀರವರ್ಮನ ಕಥೆ ಹುಟ್ಟಿರುವುದರಿಂದ, ಅವನು ಅಲ್ಲಿದ್ದುದನ್ನೂ ಅದಕ್ಕೆ ಕಾರಣವನ್ನೂ ಹೇಳಲೇಬೇಕು. ಅದಕ್ಕಾಗಿ ಸಂಸ್ಕೃತ ಮುಂದಣ ಶ್ಲೋಕದಲ್ಲಿ,

ಯಮ ಉವಾಚ—
ತಾವತ್ತ್ವಾಂ ನ ವಿಮುಂಚಾಮಿ ಯಾವತ್ಕೃಷ್ಣ ಸಮಾಗಮಃ।
ತ್ವನ್ನಿಮಿತ್ತಂ ಪರಬಲಂ ಧಾರಯಿಷ್ಯಾಮಿ ಮೇ ವರಃ ॥

ಎಂದು ತಾನಾಗಿಯೇ ಅಭಯವರವನ್ನು ಯಮ ಕೊಡುತ್ತಾನೆ. ಇದು ಕವಿ ಲಕ್ಷ್ಮೀಶನಿಗೆ ಸಮಂಜಸವಾಗಿ ಕಾಣಲಿಲ್ಲ. ಆದುದರಿಂದ ಅವನು ವೀರವರ್ಮನಿಂದಲೇ ಯಮನನ್ನು ತನ್ನಲ್ಲಿರುವಂತೆ ಬೇಡಿಸಿ, ಯಮನಿಂದ ತಥಾಸ್ತು ಎನಿಸುತ್ತಾನೆ. ಒಂದು ವರದಲ್ಲಿ ಮೂರು ವರಗಳನ್ನು ಗರ್ಭೀಕರಿಸಿ,

೧. ಇಲ್ಲಿಗೆ ಬರಲಿ ನಿನ್ನ ಕೃಪೆಯಿಂದ ಮಧುಸೂದನಂ;
೨. ತನಗೆ ಅನ್ನೆಗಂ ಮರಣವಾಗದಿರಲಿ;
೩. ಆ ದೈತ್ಯಮಥನನಂ ಕಾಣ್ಬ ಪರಿಯಂತರಂ ನೀನು ನಮ್ಮೀ ಪುರದೊಳು ಕಾದುಕೊಂಡಿಹುದು

ಎಂದು ಲಕ್ಷ್ಮೀಶನ ವೀರವರ್ಮನು ಕೇಳಿಕೊಳ್ಳುತ್ತಾನೆ.

ವೀರವರ್ಮನ ರಥವನ್ನು ಬಾಲದಿಂದ ಸುತ್ತಿ ಗಗನಕ್ಕೆ ಒಯ್ಯಲು ಶ್ರೀಕೃಷ್ಣನು

ಹನುಮಂತನಿಗೆ ಹೇಳುತ್ತಾನೆ. ಅವನು ಅದಕ್ಕೆ ಹಿಂಜರಿಯುತ್ತಾನೆ. ಆಗ ಕೃಷ್ಣನು, ಧರ್ಮದ ಸಲುವಾಗಿ ಅಕಾರ್ಯವನ್ನು ಮಾಡಬೇಕಾಗುತ್ತದೆ,

ಅಪ್ಯಕಾರ್ಯಶತಂ ಕಾರ್ಯಂ ಧರ್ಮಾರ್ಥೇ ಹಿ ತ್ವಯಾಮಯಾ ।

ಎಂದು ಬೋಧಿಸುತ್ತಾನೆ. ಈ ಮಾತನ್ನು ಲಕ್ಷ್ಮೀಶನು ಬಿಟ್ಟುಬಿಟ್ಟಿದ್ದಾನೆ. ಸೇವಕನು ಒಡೆಯನ ಹೇಳಿಕೆಯ ಬಗ್ಗೆ ಕಾರ್ಯಾಕಾರ್ಯದ ವಿಚಾರವನ್ನು ಮಾಡಕೂಡದು; ಆಜ್ಞೆಯನ್ನು ನಿಶ್ಶಂಕೆಯಿಂದ ಪಾಲಿಸುವುದೇ ಸೇವಕಧರ್ಮ ಎಂಬ ವಿಚಾರದಿಂದಲೇ ಲಕ್ಷ್ಮೀಶನು ಹೀಗೆ ಮಾಡಿರಲು ಸಾಕು. ಇಂತಹ ಸಣ್ಣಪುಟ್ಟ ಬದಲಾವಣೆಗಳನ್ನು ಕವಿ ಲಕ್ಷ್ಮೀಶ ಮಾಡಿಕೊಂಡುದಕ್ಕೆ ಹಲವಾರು ಉದಾಹರಣೆಗಳನ್ನು ಕೊಡಬಹುದು. ಕಥಾನಕವನ್ನು ರಸಮಯವಾಗಿ ನಿವೇದಿಸುವಲ್ಲಿ, ವಿವರಣೆಗಳಿಂದ ದೃಶ್ಯವನ್ನು ಸ್ಫುಟಗೊಳಿಸುವಲ್ಲಿ, ಮಾತುಮಾತಿಗೂ ವ್ಯಕ್ತಿಗಳ ಮೇಲಾಗುವ ಕ್ರಿಯೆ–ಪ್ರತಿಕ್ರಿಯೆಗಳನ್ನು ತೋರಿಸುವಲ್ಲಿ ಕವಿ ಲಕ್ಷ್ಮೀಶನು ಹಿರಿಮೆಯನ್ನು ಮೆರೆದಿದ್ದಾನೆ.

ಇನ್ನಿತರ ಕಾವ್ಯಗಳಲ್ಲಿ ಇಲ್ಲದ ಕೆಲವು ಮಾತುಗಳು ತೆಲುಗು ಕಾವ್ಯದಲ್ಲಿಯೂ, ಮರಾಠೀ ಕಾವ್ಯದಲ್ಲಿಯೂ ಬಂದಿವೆ.

**ತೆಲುಗು ಕಾವ್ಯದಲ್ಲಿ** ವೀರವರ್ಮನ ದಾನಗುಣವನ್ನು ವಿಶೇಷವಾಗಿ ಬಣ್ಣಿಸಿ ಹೇಳಿದೆ. ೧. ಅವನು ಕೋಟ್ಯನುಕೋಟಿ ಜನರಿಗೆ ದಾನ ಮಾಡುತ್ತಿದ್ದನು. ಆಗ ಎರೆದ ಧಾರೆಯ ನೀರು ಹರಿದು ಭೂಮಿಯ ಮೇಲಣ ನದಿಗಳಾದವು. 'ಗೋದೇವದ್ವಿಜ ದೈವತಃ' ಎಂಬ ಭಾವನೆಯಿಂದ ಅವನು ಬ್ರಾಹ್ಮಣಾರಾಧನೆ ಮಾಡುತ್ತಿದ್ದನು. ೨. ಹನುಮಂತನು (ಹಿಂದಕ್ಕೆ) ದ್ರೋಣಾದ್ರಿಯನ್ನು ಬುಡಸಹಿತವಾಗಿ ಕಿತ್ತುತಂದ ಶಕ್ತಿಯಿಂದ,ತನ್ನ ನೀಳವಾದ ಬಾಲದಿಂದ ವೀರವರ್ಮನ ರಥವನ್ನು ಕಟ್ಟಿ ಆಕಾಶಕ್ಕೆ ನೆಗೆದನು.

**ಮರಾಠೀ ಕಾವ್ಯದಲ್ಲಿ,** ವೀರವರ್ಮನ ಐದು ಮಕ್ಕಳ ಮೇಲೆ ಬಭ್ರುವಾಹನನು ಪಡೆದ ವಿಜಯವನ್ನು ಉಪಮಿಸಿ ಹೇಳಲಾಗಿದೆ; ಮತ್ತು ಯಮ–ಮಾಲಿನಿಯರ ವಿವಾಹದಲ್ಲಿ ನಾರದನು ಯಾವ ವಿಚಾರದಿಂದ ಸಂಘಟಕ ಪಾತ್ರವನ್ನು ವಹಿಸಿದನೆಂಬುದನ್ನೂ ಹೇಳಲಾಗಿದೆ. ೧. ಯೋಗಿಗಳು ನಿರ್ಮಲಚಿತ್ತದಿಂದ ಪಂಚವಿಷಯಗಳನ್ನು ಸಹಜವಾಗಿ ಗೆಲ್ಲುವಂತೆ ಬಭ್ರುವಾಹನನು ಐವರನ್ನು ಗೆದ್ದನು. ೨. ನಾರದನು 'ತನ್ನಿಂದ ಕನ್ಯಾದಾನ ಮಾಡುವುದಾಗದಿದ್ದರೂ, ಬೇರೆಯವರಿಂದ ಮಾಡಿಸಬೇಕು. ತನ್ನ ಕೈಲಿ ಕೆಲಸವಾಗದಿದ್ದರೂ, ಇತರರ ಕಾರ್ಯಕ್ಕೆ ಸಹಾಯಮಾಡಬೇಕು. ಅನ್ನದಾನ ಮಾಡುವ ಸಾಮರ್ಥ್ಯ ತನಗಿಲ್ಲದಿದ್ದರೂ, ಅನ್ನದಾನ ನಡೆಯುವ ಮನೆಯನ್ನು ತೋರಿಸಿಯಾದರೂ ತೋರಿಸಬೇಕು' ಎಂದು ವಿಚಾರಿಸಿ ಮಾಲಿನಿಯ ತಪಸ್ಸಿನ ಸುದ್ದಿಯನ್ನು ಯಮನಿಗೆ ತಿಳಿಸಲು ಹೊರಡುತ್ತಾನೆ. ೩. ಕರ್ಮವಿಪಾಕದ ಸುದೀರ್ಘ ವಿವರಣೆಯ ತರುವಾಯ ಯಮನೊಡನೆ ಸಾರಸ್ವತಪುರಕ್ಕೆ ಬಂದಿದ್ದ ರೋಗಾದಿಗಳು ಅಲ್ಲಿಯ ಹೋಮಧೂಮಕ್ಕೆ ಅಂಜಿ ಓಡಿಹೋಗುತ್ತವೆ.

ಹೀಗೆ ಪ್ರತಿಯೊಂದು ಭಾಷೆಯ ಕವಿ ತನ್ನದೇ ಆದ ವೈಶಿಷ್ಟ್ಯದಿಂದ ತನ್ನ ಕಾವ್ಯಕ್ಕೆ ರೂಪುಗೊಟ್ಟಿದ್ದಾನೆ ಎಂದೆನಿಸಿದರೂ ಕನ್ನಡ ಕಾವ್ಯದಲ್ಲಿ ಕಾವ್ಯಾಂಶ ಹೆಚ್ಚು, ಉಳಿದ ಕಾವ್ಯಗಳಲ್ಲಿ ಪುರಾಣಾಂಶ ಹೆಚ್ಚು ಎಂಬುದು ನಿಚ್ಚಳವಾಗಿ ಕಾಣುವಂತಿದೆ. ಕನ್ನಡ ಕಾವ್ಯವು ಮೂಲದಲ್ಲಿ ಮಾಡಿಕೊಂಡ ವ್ಯತ್ಯಾಸಗಳಲ್ಲಿ–ಅವು ಸಣ್ಣವೇ ಇರಲಿ ದೊಡ್ಡವೇ ಇರಲಿ–ಔಚಿತ್ಯ ಹೆಚ್ಚಿಗೆ ಇದೆ ಎಂದು ಧಾರಾಳವಾಗಿ ಹೇಳಬಹುದು.

**[ಚಾತುರ್ಭಾಷಿಕ ಜೈಮಿನಿ ಭಾರತಗಳಲ್ಲಿಯ ಸಾಮ್ಯ–ವೈಷಮ್ಯ ಇದರ ವಿವರಗಳನ್ನು ಪು. ೪೪೬–೪೪೮ರಲ್ಲಿ ಕೊಟ್ಟಿದೆ]**

## ಸಮಾರೋಪ

ಈ ತುಲನಾತ್ಮಕ ಅಭ್ಯಾಸದಿಂದ ಪ್ರತಿಯೊಂದು ಕಾವ್ಯದ ಗುಣವು ನಮಗೆ ಗೊತ್ತಾಗುತ್ತದೆ. ಎಲ್ಲ ಕವಿಗಳು ಸ್ವತಂತ್ರ ಪ್ರತಿಭೆಯುಳ್ಳವರಾಗಿದ್ದಾರೆ. ಪಿಲ್ಲಲಮರ್ರಿ ಪಿನವೀರಭದ್ರನ ಉಪಮೆ, ತಿಮ್ಮಣ್ಣಕವಿಯ ಸ್ವಭಾವೋಕ್ತಿ, ಶ್ರೀಧರನ ರೂಪಕ, ಕವಿ ಲಕ್ಷ್ಮೀಶನ ಕಾರಣೋತ್ಪ್ರೇಕ್ಷೆಗಳಿಗೆ ಆ ಆ ಸಾಹಿತ್ಯದಲ್ಲಿ ಮಹತ್ತ್ವದ ಸ್ಥಾನವಿದೆ.

ಪಿನವೀರಭದ್ರನು ತನ್ನ ಕಾವ್ಯವನ್ನು ಚಂಪೂಛಂದಸ್ಸಿನಲ್ಲಿ ಬರೆದು ಅದಕ್ಕೆ ಮಾರ್ಗದ ಉಡುಪನ್ನು ತೊಡಿಸಿದ್ದಾನೆ. ತಿಮ್ಮಣ್ಣಕವಿ ಭಾಮಿನೀ ಷಟ್ಪದಿಯಲ್ಲಿ ಬರೆದು ದೇಸಿಯ ಸೊಬಗನ್ನು ತೋರಿದ್ದಾನೆ. ಕವಿ ಲಕ್ಷ್ಮೀಶನು 'ಷಟ್ಪದಿಕಾರರಲ್ಲಿ ವರ್ಣಕ ಕಾವ್ಯಕ್ಕೆ ಸಹ ಲಕ್ಷಣಬೇಕೆಂದು ಬಗೆದು ದೇಸಿಯ ಛಂದದಲ್ಲಿ ಮಾರ್ಗದ ಪ್ರೌಢಿಮೆಯನ್ನು ತುಂಬಿದ್ದಾನೆ' ಎಂಬುದು ನಮಗೆ ಒಪ್ಪಿಗೆಯಾದ ಮಾತು. ಅಲ್ಲದೆ, ಕೃತಿರಚನೆಯಲ್ಲಿ ನವೀನದೃಷ್ಟಿಕೋನವನ್ನಿರಿಸಿಕೊಂಡ ಅವನು ಸಂಸ್ಕೃತ ಜೈಮಿನಿ ಭಾರತದ ಪುರಾಣಪ್ರಧಾನಕಥನವನ್ನೂ ಕಾವ್ಯಪ್ರಧಾನಕಥನವನ್ನಾಗಿ ಮಾರ್ಪಡಿಸಿದ್ದಾನೆ ಎಂಬುದು ಕನ್ನಡ ಜೈಮಿನಿ ಭಾರತದ ಪ್ರಾರಂಭದಿಂದ ಕೊನೆಯವರೆಗೂ ಕಂಡುಬರುವುದು. ಓದುಗನ ಕುತೂಹಲವನ್ನು ಕೆರಳಿಸಿ ಕಾವ್ಯವನ್ನು ಬಿತ್ತರಿಸುತ್ತಾನೆ ಲಕ್ಷ್ಮೀಶ. ಮುಖಸಂಧಿಯಲ್ಲಿ, ಓದುಗನ ಔತ್ಸುಕ್ಯವನ್ನು ಜಾಗೃತವಾಗಿರಿಸುವುದೇ ಮುಖ್ಯ ಉದ್ದೇಶ ಎಂದಿಟ್ಟುಕೊಂಡರೆ, ಪ್ರತಿಮುಖಸಂಧಿಯಲ್ಲಿ ಪುಷ್ಪ, ಶಮ, ಮಾರ್ಗ ಮತ್ತು ಅಪವಾದ ಎಂಬ ನಾಲ್ಕು ಹೊಸ ಸಂಧ್ಯಂಗ ಲಕ್ಷಣಗಳನ್ನು ತೊಡಿಸುತ್ತಾನೆ.

'ಅವನಂ ಕಂಡಬಳಿಕ ಹಿಮ್ಮೆಟ್ಟದಿರ್ ಪೋಗು' ಎಂದು ಸುಧನ್ವನಿಗೆ ಅವನ ತಾಯಿ ಹೇಳುವಲ್ಲಿ 'ಪುಷ್ಪ'ಲಕ್ಷಣವಿದೆ. ಪ್ರಭಾವತಿ–ಸುಧನ್ವರ ರತೀಚ್ಛೆ ಪೂರ್ಣವಾಗಿ ಶಮಪ್ರಾಪ್ತಿಯಾಗುವಲ್ಲಿ 'ಶಮ'ಲಕ್ಷಣವುಂಟು. ಶಂಖನು ಸುಧನ್ವನೊಂದಿಗೆ ಕುದಿವೆಣ್ಣೆಯ ಕೊಪ್ಪರಿಗೆಯಲ್ಲಿ ಹಾರಿಕೊಂಡಾಗ, ಅವನಿಗೂ ತಪ್ತ ತೈಲವು ತಂಪಾಗಿರುತ್ತದೆ. ಇದಕ್ಕೆ ಕಾರಣವನ್ನು 'ಹರಿಭಕ್ತರಂ ಸಾರ್ದಂಗೆ ತಾಪಮಿರ್ದಪುದೆ?' ಎಂದು ಕವಿ ಹೇಳುವಲ್ಲಿ ಮಾರ್ಗಲಕ್ಷಣ, ಹಂಸಧ್ವಜನು ಪುತ್ರಮರಣದ ಶೋಕದಲ್ಲಿ 'ಕಾದೆಣ್ಣೆಯೊಳ್ ದೇಹಮಂ ಕಾದ ಕೃಷ್ಣಂ ಕಾದಲ್ ಅಹಿತನೇಕಾದನು?' ಎಂದು ಶ್ರೀಕೃಷ್ಣ

# ಚಾತುರ್ಭಾಷಿಕ ಜೈಮಿನಿ ಭಾರತಗಳಲ್ಲಿಯ ಸಾಮ್ಯ-ವೈಷಮ್ಯ
## (ವೀರವರ್ಮ ಕಥಾನಕ)

| ಸಂಸ್ಕೃತ (೧) | ತೆಲುಗು (೨) | ಮರಾಠಿ (೩) | ಕನ್ನಡ (೪) |
|---|---|---|---|
| ಪ್ರಾರಂಭ : ಕುದುರೆಗಳೆರಡೂ ವೀರವರ್ಮ ನಗರಕ್ಕೆ ಹೋದವು | ಸಾಳ್ವ ನರಸಿಂಹ ಪ್ರಶಂಸೆ | ವೀರವರ್ಮನ ರಾಜ್ಯದ ವರ್ಣನೆ | ಮಯೂರಧ್ವಜನ ಪಟ್ಟಣದಿಂದ ಪಾಂಡವ ಸೇನೆ ಮುಂದೆ ಸಾಗಿತು |
| ೧. ಧರ್ಮಚತುಷ್ಪದೋ ಯತ್ರ ತೇನ ಭೂಪತಿನಾ ಕೃತಃ | ಇದೆ | ಇದೆ | ಇದೆ |
| ೨. ಸ್ವಪ್ನೇಽಪಿ ಕುತ್ಸಿತೇ ಮಾರ್ಗೇ ನ ಗಚ್ಛಂತಿ ಕದಾಚನ | ಇದೆ | ಇಲ್ಲ | ಇದೆ |
| ೩. ಕೇಶಾಕೇಶಿ ರಣೇತೀವ ಮುಷ್ಟಾಮುಷ್ಟಿ ನಖಾನಖಿ | ಇದೆ | ಇದೆ | ಇದೆ |
| ೪. ವಿಪರೀತಮಿದಂ ಜಾತಂ ರುದ್ರಕ್ರೀಡನ ಸನ್ನಿಭಮ್<br>ಬಭ್ರುವಾಹನ ವೀರೇಣ ಹನ್ಯಮಾನಂ ಬಲಂ ಮಹತ್<br>ಸಂಚುಕೋಚ ತಥಾಭೂತಮಗ್ನೌ ಚರ್ಮಾಹಿತಂ ಯಥಾ ‖ | ಇದೆ | ಇಲ್ಲ | ಇಲ್ಲ |
| ೫. ......ನಾರದಸ್ತೇನ ಪ್ರಯಯೌ ವೀರವರ್ಮಣಮ್<br>ಕಥಯಾಮಾಸ ವೃತ್ತಾಂತಂ ಯಮೇನೋಕ್ತಂ ಸುಮಂಗಲಮ್<br>ರಾಜಾ ಕನ್ಯಾವಿವಾಹಂ ತು ಕರ್ತುಕಾಮೋ ವ್ಯವಸ್ಥಿತಃ ‖ | ಇದೆ | ಯಮನು ಬರುವ ಸುದ್ದಿಯನ್ನು ನಾರದನು ಮಾಲಿನಿಗೆ ತಿಳಿಸುತ್ತಾನೆ. ಇದನ್ನು ಕೇಳಿದ ವೀರವರ್ಮನು ಸಂತೋಷಿಸುತ್ತಾನೆ. | ನಾರದನು ಸುದ್ದಿಯನ್ನು ವೀರವರ್ಮನಿಗೆ ತಿಳಿಸುತ್ತಾನೆ. |

| | | | |
|---|---|---|---|
| ೬. ಕರ್ಮವಿಪಾಕ ವರ್ಣನೆ | ಮೇಹ, ಶೂಲ, ಗ್ರಹಣಿ,ವಾತ, ಅಪಸ್ಮಾರಗಳು ಗುಸುಗುಟ್ಟುತ್ತ ಯಮನ ಹತ್ತಿರ ಹೋದವು. | ಸಂಸ್ಕೃತ ಮಹಾಭಾರತದಂತೆ ವಿಸ್ತಾರವಾಗಿ ಬಂದಿದೆ. | ಅಗಣಿತ ರೋಗಗಳು ವೇದ ಘೋಷ, ಹೋಮಧೂಮ ಇಡುಗಿದ ವೀರವರ್ಮನ ಪಟ್ಟಣಕ್ಕೆ ಹೇಗೆ ಬಂದೇವೆಂಬ ಭಯಶಂಕೆ ೨ ಪದ್ಯಗಳಲ್ಲಿ ಮುಗಿದಿದೆ. |
| ೭. ಯೇ ಜೀವಾಃ ಪಾಪಸಂಯುಕ್ತಾಸ್ತೇ ಪಶ್ಯಂತು ನಿಪಾತನಾನ್<br>ರೋಗಾನ್ಭಯಾನಕಾನ್ಭೂಮೌ ಶುಭಾನ್ಸುಕೃತಕಾರಿಣಃ ।<br>ಮಾಂ ಚ ಪಶ್ಯಂತಿ ಧರ್ಮಿಷ್ಠಾಂ ಧರ್ಮರೂಪಂ ನ ಚೇತರೇ<br>ಕಾಲಾನಲಶರೀರಂ ಹಿ ವೀಕ್ಷತೇ ಪಾಪಕಾರಿಣಃ ॥ | ಇದೆ | ಹರಿನಾಮಕೀರ್ತನೆಯನ್ನು ಕೇಳಿ ರೋಗಗಳು ಓಡಿಹೋದವು. ಯಮನೊಬ್ಬನೆ ವಿವಾಹಕ್ಕೆ ನಿಂತನು. | ಸಂಸ್ಕೃತದಂತೆ ಇದೆ |
| ೮. ತತ್ಪ್ರಾಪ್ಯ ರಮ್ಯಂ ನಗರಂ ವೀಕ್ಷ್ಯ ಸಾರಸ್ವತಂ ಯಮಃ<br>ವರಯಾಮಾಸ ಧರ್ಮಿಷ್ಠಂ ಮಾಲಿನೀಂ ತತ್ಪರಾಂ ವಿಭುಃ ॥ | ಇದೆ | ಇದೆ | ಎರಡು ಪದ್ಯಗಳಲ್ಲಿ ವರ್ಣಿಸಿದೆ ಸಂಭ್ರಮ ಗಮನಾರ್ಹವಾಗಿದೆ. |
| ೯. ಯಸ್ಮಿನ್ ದಿನೇ ಮೇ ಮರಣಂ ಭವಿಷ್ಯತಿ ಹಿ ಭಾನುಜ<br>ತ್ವದ್ವರೇಣ ಹೃಶಿಕೇಶಂ ತಸ್ಮಿನ್ನಹನಿ ಕಾಮಯೇ ॥ | ದೇವಕೀಸುತನ ಪಾದಾರವಿಂದಗಳನ್ನು ತೋರಿಸು | ಮರಣ ಸಮಯದಲ್ಲಿ ಹರಿನಾಮ ಸ್ಮರಣೆಯಾಗುವಂತಾಗಲಿ. | ೧) ನಿನ್ನ ಕೃಪೆಯಿಂದ ಮಧುಸೂದನನು ಇಲ್ಲಿಗೆ ಬರಲಿ<br>೨) ಅಲ್ಲಿಯವರೆಗೆ ತನಗೆ ಮರಣವಾಗದಿರಲಿ. ೩) ಅವನ ದರ್ಶನವಾಗುವವರೆಗೆ ನೀನು ಇಲ್ಲಿ ಕಾದುಕೊಂಡಿರು. |
| ೧೦. ಅಪ್ಯಕಾರ್ಯಶತಂ ಕಾರ್ಯಂ ಧರ್ಮಾರ್ಥೇ ಹಿ ತ್ವಯಾಮಯಾ। | ಇಲ್ಲ | ನಾನು ನೀನು ಧರ್ಮಕಾರ್ಯಗಳಲ್ಲಿ ತೊಡಗಿರಬೇಕು. ಹನುಮಂತಾ, | ವಾಯುಸುತಾ ಶಂಕೆ ಬೇಡ; ಎನ್ನಾಜ್ಞೆ, ಧರ್ಮಸಹಾಯ, |

| (೧) | (೨) | (೩) | (೪) |
|---|---|---|---|
| | | ನೀನು ಧರ್ಮಕಾರ್ಯದಿಂದ ಹಿಂದೆ ಸರಿಯಲು ಕಾರಣವೇನು? | ಇದು ನನಗೆ ನಿನಗೆ ಬೇಕಾದ ಕಜ್ಜ. |
| ೧೧. ತನೋತಿ ಪೌರುಷಂ ಸ್ವ ಯಃ ಸಾಧುಭಿರ್ವರ್ಣ್ಯತೇ ನ ಸಃ | ಇಲ್ಲ | ಯಾವನು ತನ್ನನ್ನು ತಾನು ಹೊಗಳಿಕೊಳ್ಳುವನೋ ಅವನನ್ನು ಸತ್ಪುರುಷ ಎಂದು ಕರೆಯುವುದಿಲ್ಲ. | ತಾನೆ ತನ್ನಂ ಪೊಗಳುವೀಗರು ವಿಕೆಯನರಿಯೆನತಿ ವೃದ್ಧರೆಂದು. |
| ೧೨. ತಸ್ಯ ಮುಷ್ಟಿಪ್ರಹಾರೇಣ ನ ಯಯೌ ಪವನಾತ್ಮಜಃ | ಹನುಮಂತನನ್ನು ಮುಷ್ಟಿಯಿಂದ ಹೊಡೆಯಲು ಕಣ್ಣಿನ ಗುಡ್ಡೆ ತಿರುಗಿ ನಿಶ್ಚೇಷ್ಟನಾಗಲು | ಹೊಡೆತದಿಂದ ಹನುಮಂತನು ನೆಲಕ್ಕೆ ಬಿದ್ದನು. | ಮುಷ್ಟಿಘಾತದಿಂದಾ ವಾಯುಜಂ ತೊಲಗಲು |
| ೧೩. ತಂ ನೃಪಂ ಹೃದಯೇ ಕೃಷ್ಣೋ ಜಂಘಾನ ಸ್ವಪದಾ ತ್ವರನ್<br>ಮೂರ್ಛಿತಃ ಸ ಪ್ರಪಾತೋರ್ವ್ಯಾಂ ಗೃಹೀತ್ವಾ ಚರಣೌ ಹೃದಿ \|\| | ವೀರವರ್ಮನ ತಲೆಗೆ ಒದ್ದನು. | ನೃಪನ ಹೃದಯಕ್ಕೆ ಒದ್ದನು, ಅದರಿಂದ ಅವನು ಮೂರ್ಛೆ ಹೋದನು. | ವಕ್ಷಸ್ಥಳವನೊದೆದನು. |
| ೧೪. ಹೆಸರು–ಸುಭಾಲ, ಸುರಭ, ಕುವಲ, ಸರಲ | ಸುಲೋಲ, ಸುಲಾಕ್ಷ, ಕುವಲ (ಇತ್ಯಾದಿ? ) | ಸುಶೀಳ, ಸರಳ, ಸುರಭ, ಕುವಳ ರಸಾಳ. | ಸುಲಭ, ಸುಫಾಲ, ಕುವಲ, ನೀಲ, ಸರಳ. |
| ೧೫. ಮುಕ್ತಾಯ | ಚಂದ್ರಹಾಸನ ಕಥೆಯ ಚುಂಗಿದೆ | ಹೊಸ ಅಧ್ಯಾಯ–ಚಂದ್ರಹಾಸ (ಅ. ೫೧ ರಿಂದ) | ವೀರವರ್ಮ ಕಥಾನಕ ಮುಗಿದುದು. |

ನನ್ನು ದೂಷಿಸಿದಲ್ಲಿ 'ಅಪವಾದ' ಲಕ್ಷಣ ಇವೆ. ಈ ನಾಲ್ಕು ಲಕ್ಷಣಗಳು ಸಂಸ್ಕೃತ ಜೈಮಿನಿ ಭಾರತದಲ್ಲಿ ಇಲ್ಲ.

ಸಂಸ್ಕೃತ ಮೂಲದಲ್ಲಿ ಬಭ್ರುವಾಹನನ ಕಥಾನಕದಲ್ಲಿ ಅರ್ಜುನನು ತನ್ನ ತಂದೆ ಎಂಬುದು ಬಭ್ರುವಾಹನನಿಗೆ ಯುದ್ಧಪೂರ್ವದಲ್ಲಿ ಗೊತ್ತಾಗಿಲ್ಲ; ತಾಯಿ ಚಿತ್ರಾಂಗದೆ ಮಣಿಪುರದಲ್ಲಿ ಇಲ್ಲ; ಅರ್ಜುನ-ಬಭ್ರುವಾಹನರಲ್ಲಿ ಯುದ್ಧನಡೆದ ಸಮಾಚಾರವನ್ನು ಕೇಳಿ ಮಣಿಪುರಕ್ಕೆ ಅವಳು ಬರುತ್ತಾಳೆ—ಎಂದು ಹೇಳಿದೆ. ಇಲ್ಲಿಯ ಅಸಮಂಜಸತೆ ಯನ್ನು ಹೋಗಲಾಡಿಸಲು ಕವಿ ಲಕ್ಷ್ಮೀಶನು ವ್ಯತ್ಯಾಸ ಮಾಡಿಕೊಂಡಿರುವುದು ಮೆಚ್ಚ ತಕ್ಕದ್ದು. ಅವನು ಚಿತ್ರಾಂಗದೆಯನ್ನು ಮಣಿಪುರದಲ್ಲಿಯೆ ಇಟ್ಟು, ಅರ್ಜುನಾಗಮನದ ಸುದ್ದಿ ಆಕೆಗೆ ತಿಳಿದು ಸುಖವಾಗುವಂತೆ ಮಾಡುತ್ತಾನೆ; ಅದೇ ಕಾಲಕ್ಕೆ ಬಭ್ರುವಾಹನನು ತಂದೆಯೊಡನೆ ಯುದ್ಧ ಹೂಡಲಿರುವುದನ್ನು ಕೇಳಿ ದುಃಖಪಡುವಂತೆ ಮಾಡುತ್ತಾನೆ. ಇದರಿಂದ 'ವಿಧಾನ' ಎಂಬ ಸಂಧ್ಯಂಗ ಲಕ್ಷಣಕ್ಕೆ ಎಡೆಯಾಗಿದೆ. ಅರ್ಜುನನು ತನ್ನ ತಂದೆ ಎಂಬುದು ಬಭ್ರುವಾಹನನಿಗೆ ತಾಯಿಯಿಂದ ತಿಳಿಯುವಲ್ಲಿ 'ಉದ್ಭೇದ' ಲಕ್ಷಣ, ತಂದೆಯನ್ನು ಸ್ವಾಗತಿಸಬೇಕು ಎಂದು ಆಕೆ ಹೇಳಿದ ಮಾತನ್ನೇ ಮಂತ್ರಿ ಅನುಮೋದಿಸಿ ದಲ್ಲಿ 'ಭೇದ' ಲಕ್ಷಣ, ತಂದೆಯ ಸ್ವಾಗತಸಿದ್ಧತೆಯ ಉದ್ಯೋಗದಲ್ಲಿ 'ಕರಣ' ಲಕ್ಷಣ, ತಂದೆಯನ್ನು ಕಾಣಬೇಕೆಂಬ ಬಭ್ರುವಾಹನನ ತವಕದಲ್ಲಿ 'ವಿಲಾಸ' ಲಕ್ಷಣ—ಈ ಐದು ಸಂಧ್ಯಂಗ ಲಕ್ಷಣಗಳಿಂದ ಕಾವ್ಯವನ್ನು ಅಲಂಕರಿಸಿರುವುದು ಲಕ್ಷ್ಮೀಶನ ಪ್ರತ್ಯುತ್ಪನ್ನ ಮತಿಯ ಕೈವಾಡ.

ಅವಮರ್ಶ ಸಂಧಿಯಲ್ಲಿ ಚಂದ್ರಹಾಸನ ಕಥಾನಕವೇ ಮುಖ್ಯ. ಅದನ್ನು ಕಥಿಸುವ ರೀತಿಯಲ್ಲಿ ಲಕ್ಷ್ಮೀಶನು ಅನೇಕ ಬದಲಾವಣೆಗಳನ್ನು ಮಾಡಿಕೊಂಡಿದ್ದಾನೆ. ಕಥಾನಕ ವನ್ನು ರಸಮಯವಾಗಿ ನಿವೇದಿಸುವಲ್ಲಿ, ವಿವರಣೆಗಳಿಂದ ದೃಶ್ಯವನ್ನು ಸ್ಫುಟಗೊಳಿಸು ವಲ್ಲಿ, ಮಾತು ಮಾತಿಗೂ ವ್ಯಕ್ತಿಗಳ ಮೇಲಾಗುವ ಕ್ರಿಯೆ-ಪ್ರತಿಕ್ರಿಯೆಗಳನ್ನು ತೋರಿ ಸುವಲ್ಲಿ ಕವಿಲಕ್ಷ್ಮೀಶನು ಹಿರಿಮೆಯನ್ನು ಮೆರೆದಿದ್ದಾನೆ.

ನಿರ್ವಹಣ ಸಂಧಿಯಲ್ಲಿ 'ನಕುಲೋಪಾಖ್ಯಾನ'ವನ್ನು ತೆಗೆದುಹಾಕಿ, ಧರ್ಮನ ಯಜ್ಞನಿಂದೆಯನ್ನು ತಪ್ಪಿಸಿದ್ದಾನೆ, ಕಥಾವಸ್ತುವಿನ ಅಂತ್ಯಪರಿಣಾಮವು ಚಿತ್ತವೇಧಕ ವಾಗುವಂತೆ ಲಕ್ಷ್ಮೀಶನು ಮಾಡಿದ್ದಾನೆ.

ಸಂಸ್ಕೃತ ಜೈಮಿನಿ ಭಾರತದಿಂದಲೇ ಎಲ್ಲ ಕಥಾನಕಗಳನ್ನು ಎತ್ತಿಕೊಂಡು, ಅವುಗಳಿಗೆ ಕಾಂತಿ ಶೋಭೆ ಬರುವಂತೆ ಲಕ್ಷ್ಮೀಶನು ತನ್ನ ಪ್ರತಿಭೆಯನ್ನು ಬಳಸಿದ್ದಾನೆ. ಮೂಲಕ್ಕಿಂತ ಹೆಚ್ಚಾಗಿ ಓದುಗನ ಮನದಲ್ಲಿ ಅಚ್ಚೊತ್ತಿ ನಿಲ್ಲುವಂತೆ ಅವನು ಕಥೆಗಳನ್ನು ಹೇಳಿದ್ದಾನೆ. ಸಂಸ್ಕೃತ ಜೈಮಿನಿ ಭಾರತವು ಸುವರ್ಣವಿದ್ದಂತೆ, ಅದಕ್ಕೆ ಒಪ್ಪಹಾಕುವ ಕಾರ್ಯವನ್ನು ಲಕ್ಷ್ಮೀಶನು ಜಾಣ್ಮೆಯಿಂದ ಮಾಡಿದ್ದಾನೆ ಎಂದು ಹೇಳಬಹುದು. ಒಟ್ಟಾರೆ ಲಕ್ಷ್ಮೀಶನು ಮೂಲದ (೧) ಕಥೆಗಳನ್ನೇನೋ ಅನುಸರಿಸಿದ್ದಾನೆ; ಆದರೆ, (೨) ಪುರಾಣಪ್ರಧಾನಕಥನ ರೀತಿಯನ್ನು, ಕರ್ಮವಿಪಾಕ ವಿವರಣೆಯನ್ನು (ವೀರ

ವರ್ಜುನ ಕಥಾನಕದಲ್ಲಿ), ನಕುಲೋಪಾಖ್ಯಾನವನ್ನು ತ್ಯಜಿಸಿದ್ದಾನೆ; (೩) ಬಭ್ರುವಾಹನ ಅರ್ಜುನ ಯುದ್ಧ ಮತ್ತು ಲವಕುಶ-ರಾಮ ಯುದ್ಧ ಇವುಗಳನ್ನು ಹೊಂದಿಸುವಲ್ಲಿ, ಪಾತ್ರಗಳ ಮಾತುಗಳಿಂದಾಗುವ ಕ್ರಿಯೆ-ಪ್ರತಿಕ್ರಿಯೆಗಳನ್ನು ಬಿಡಿಬಿಡಿಸಿ ತೋರಿಸುವಲ್ಲಿ ಮೂಲವನ್ನು ವ್ಯತ್ಯಾಸಮಾಡಿಕೊಂಡಿದ್ದಾನೆ; (೪) ಮಹಾಕಾವ್ಯದ ಲಕ್ಷಣಗಳಾದ ಅಷ್ಟಾದಶ ವರ್ಣನೆಗಳನ್ನು ಉಚಿತವರಿತು ಸೇರಿಸಿ ಕಾವ್ಯವನ್ನು ಬೆಳಸಿದ್ದಾನೆ; (೫) ರಾಮನ ಜನನದಿಂದ ಪಟ್ಟಾಭಿಷೇಕದವರೆಗಿನ ಜೀವನವನ್ನು ೮ ಪದ್ಯಗಳಲ್ಲಿ ಸಂಗ್ರಹಿಸುವಲ್ಲಿ ಕಥನವನ್ನು ಸಂಕ್ಷೇಪಿಸಿಕೊಂಡಿದ್ದಾನೆ-ಎಂಬಲ್ಲಿ ಲಕ್ಷ್ಮೀಶನ ಕಾವ್ಯದ ವೈಶಿಷ್ಟ್ಯವಿದೆ. 'ಮೂಲದಲ್ಲಿಯ ಪುರಾಣಪ್ರಧಾನ ಕಥನವನ್ನು ಕಾವ್ಯಪ್ರಧಾನ ಕಥನವನ್ನಾಗಿಸಿ, ಅದನ್ನು ರಸವತ್ತಾಗಿ ಮಾಡಿದ ಕೈವಾಡವೆಲ್ಲ ಲಕ್ಷ್ಮೀಶನದೇ'[1] ಎಂಬುದು ಅನುಭವಕ್ಕೆ ಬಾರದೆ ಹೋಗದು.

ತುಲನಾತ್ಮಕ ಅಭ್ಯಾಸವಾದ ಮೇಲೆ, ಕನ್ನಡ ಜೈಮಿನಿ ಭಾರತವನ್ನು ಗ್ರಂಥ ಸಂಪಾದನೆಯ ದೃಷ್ಟಿಯಿಂದ ಹಸ್ತಪ್ರತಿಗಳ ಅಭ್ಯಾಸ ಮಾಡುವುದು ಅವಶ್ಯವೆಂದು ತೋರುತ್ತದೆ. ೧. ಉತ್ತರ ಕರ್ನಾಟಕದ ಮತ್ತು ದಕ್ಷಿಣ ಕರ್ನಾಟಕದ ಹಸ್ತಪ್ರತಿಗಳಲ್ಲಿ ಭಿನ್ನ ಭಿನ್ನ ಪಾಠಗಳು ದೊರೆಯುತ್ತವೆ; ೨. ಕಾವ್ಯದಲ್ಲಿ ಒಟ್ಟು ಸಂಧಿ ಮತ್ತು ಒಟ್ಟು ಪದ್ಯಸಂಖ್ಯೆಗಳ ಬಗ್ಗೆ ಹಸ್ತಪ್ರತಿಗಳಲ್ಲಿ ಏಕಾಭಿಪ್ರಾಯವಿಲ್ಲ. ಈ ಎರಡು ಕಾರಣಗಳ ಮೂಲಕ ಹಸ್ತಪ್ರತಿಗಳನ್ನು ಪರೀಕ್ಷಿಸಿ ಪಡೆದ ಅನುಭವವನ್ನು ಮುಂದಿನ ಪುಟಗಳಲ್ಲಿ ಮಂಡಿಸುವೆವು.

---

[1] 'ಕನ್ನಡ ಸಾಹಿತ್ಯ ಚರಿತ್ರೆ', ಡಾ. ರಂ. ಶ್ರೀ. ಮುಗಳಿ, ಪು. ೨೭೪.

"Textual criticism may then be defined as the restoration of the text, as far as possible to its original form. By 'original form' we understand the form intended by the author"

—**J. P. Postgate**

## ೭/ಹಸ್ತಪ್ರತಿಗಳ ವಿಚಾರ

- ಪ್ರಸ್ತಾವನೆ
- ನಾವು ನೋಡಿದ ಹಸ್ತಪ್ರತಿಗಳ ಸಂಕ್ಷಿಪ್ತವರ್ಣನೆ
- ಅಭ್ಯಾಸಕ್ಕಾಗಿ ಆಯ್ದುಕೊಂಡ ೧೧ ಪ್ರತಿಗಳ ಸ್ವರೂಪ
- ಹಸ್ತಪ್ರತಿಗಳ ವಿಂಗಡಣೆ
- ಪಾಠಾಂತರಗಳ ಸಂಕಲನ
- ಸ್ಖಾಲಿತ್ಯಗಳು–ಅಕ್ಷರಸ್ಖಾಲಿತ್ಯ, ಇತರ ಸ್ಖಾಲಿತ್ಯಗಳು (ಸ್ಥಾನಪಲ್ಲಟ, ಪ್ರತಿನಿಧಾನ ಇತ್ಯಾದಿ)
- ಹಸ್ತಪ್ರತಿಗಳ ಪರಸ್ಪರ ಸಂಬಂಧ
- ಹಸ್ತಪ್ರತಿಗಳ ಹೊಂದಾಣಿಕೆಯ ನಕ್ಷೆ
- ಹಸ್ತಪ್ರತಿಗಳ ಪೀಳಿಗೆ
- ಪಾಠಸಂಪ್ರದಾಯಗಳು
- ಪಾಠ ಪರಿಷ್ಕರಣ
- ಈ ಕಾವ್ಯದಲ್ಲಿ ಸಂಧಿಗಳೆಷ್ಟು ?
- ಮಾದರಿಗಾಗಿ ಎರಡು ಸಂಧಿಗಳ ಸಂಪಾದನೆ :
  ಪ್ರಾರಂಭದ ಸಂಧಿ–೧೨ ಪದ್ಯ ಮತ್ತು ಮುಕ್ತಾಯದ ಸಂಧಿ–೪೬ ಪದ್ಯಗಳು
- ಸಮಾರೋಪ
- ಪ್ರಮುಖ ಹಸ್ತಪ್ರತಿಗಳ ಛಾಯಾಚಿತ್ರಗಳು, ಹಸ್ತಪ್ರತಿಗಳ ಹರಡಿಕೆ–ಕರ್ನಾಟಕದ ನಕ್ಷೆ ಮತ್ತು ಕುವಲಯಾನಂದ ಮೊದಲಾದ ಪ್ರತಿಗಳಲ್ಲಿ ಸಿಕ್ಕ ಕೆಲವು ಹೆಚ್ಚಿನ ಪದ್ಯಗಳು

## ಪ್ರಸ್ತಾವನೆ

ಕವಿ ಲಕ್ಷ್ಮೀಶನೇ ಬರೆದ 'ಜೈಮಿನಿ ಭಾರತ'ದ ಮೂಲ ಹಸ್ತಪ್ರತಿ ಉಪಲಬ್ಧವಿಲ್ಲ. ಆದರೆ ಹಸ್ತಾಂತರಗಳ ಪರಂಪರೆಯಿಂದ ಬಂದ ಇತರ ಹಸ್ತಪ್ರತಿಗಳಿಗೇನೂ ಕೊರತೆಯಿಲ್ಲ. ಉಪಲಬ್ಧವಿದ್ದ ಅಸಂಖ್ಯ ಹಸ್ತಪ್ರತಿಗಳನ್ನು ನೋಡಿ, ಅದರಲ್ಲಿಯ ದೋಷಗಳನ್ನು ಪರಿಷ್ಕರಿಸಿ ಜೈಮಿನಿ ಭಾರತದ ಶುದ್ಧಪ್ರತಿಯನ್ನು ಸಿದ್ಧಗೊಳಿಸಲು ಅನೇಕ ವಿದ್ವಾಂಸರು ಶ್ರಮಿಸಿದ್ದಾರೆ. ಅದರಲ್ಲಿ ಈ ಕೆಳಗಿನ ಕೆಲವು ಪ್ರಯತ್ನಗಳನ್ನು ನೆನೆಯಬಹುದು :

ಕರಿಬಸವಶಾಸ್ತ್ರಿಗಳು, ಕಡಬದ ನಂಜುಂಡಶಾಸ್ತ್ರಿಗಳು, ದಕ್ಷಿಣಾಮೂರ್ತಿಗಳು ಟೀಕೆ ಟಿಪ್ಪಣಿಗಳೊಂದಿಗೆ ಜೈಮಿನಿ ಭಾರತದ ಪರಿಷ್ಕೃತ ಪ್ರತಿಯನ್ನು ಸಿದ್ಧಪಡಿಸಿ ಪ್ರಕಟಿಸಿದ್ದುಂಟು. ಎಂ. ಸೀತಾರಾಮಶಾಸ್ತ್ರಿ, ಸಿದ್ಧಾಂತ ಸುಬ್ರಹ್ಮಣ್ಯಶಾಸ್ತ್ರಿ ಮೊದಲಾದ ಕೆಲವರು ಈ ಕಾವ್ಯದ ಕೆಲವು ಸಂಧಿಗಳನ್ನು ಶುದ್ಧೀಕರಿಸಿಕೊಟ್ಟಿದ್ದಾರೆ. ಇತ್ತೀಚೆಗೆ ಮೈಸೂರು ಸರಕಾರದ ಸಾಹಿತ್ಯ ಸಂಸ್ಕೃತಿ ಪ್ರಚಾರ ಶಾಖೆಯವರೂ ಪಂಡಿತರಿಂದ ಪರಿಶೋಧಿತವಾದ ಸಮಗ್ರ ಜೈಮಿನಿ ಭಾರತವನ್ನು ಪ್ರಚುರಗೊಳಿಸಿದ್ದಾರೆ. ಇಂದಿನ ವರೆಗೆ ಪರಿಷ್ಕೃತವಾದ ಜೈಮಿನಿ ಭಾರತಗಳಲ್ಲಿ ಕರಿಬಸವಶಾಸ್ತ್ರಿಗಳ ಪ್ರತಿ ಅನೇಕರಿಂದ ಮನ್ನಣೆ ಪಡೆದಿದೆ. ಈ ಪ್ರತಿಯಲ್ಲಿ ೩೪ ಸಂಧಿಗಳೂ ಒಟ್ಟು ೧೯೦೭ ಪದ್ಯಗಳೂ ಇವೆ.

ನಾವು ಜೈಮಿನಿ ಭಾರತದ ಹಸ್ತಪ್ರತಿಗಳನ್ನು ನೋಡುತ್ತಿದ್ದಾಗ, ಕಾವ್ಯದ ಸಂಧಿ ಮತ್ತು ಪದ್ಯಸಂಖ್ಯೆಗಳ ವಿಷಯದಲ್ಲಿ ಅವೆಲ್ಲವುಗಳಲ್ಲಿ ಐಕಮತ್ಯ ಕಂಡುಬರಲಿಲ್ಲ. ಒಂದರಲ್ಲಿ ೧೯೧೦, ಇನ್ನೊಂದರಲ್ಲಿ ೧೯೨೫, ಮತ್ತೊಂದರಲ್ಲಿ ೧೯೩೬, ಮಗದೊಂದರಲ್ಲಿ ೧೯೪೮ ಪದ್ಯಗಳಿದ್ದಂತೆ ಕಂಡೆವು. ಬೇರೊಂದರಲ್ಲಿಯಂತೂ ೧೯೯ರ ವರೆಗೆ ಈ ಸಂಖ್ಯೆ ಹೆಚ್ಚಿರುವುದೆಂದು ಕಣ್ಣಿಗೆ ಬಿತ್ತು. ಉಲ್ಲೇಖಗಳ ಈ ಅನೈಕ್ಯತೆಯಿಂದ ವಸ್ತುಸ್ಥಿತಿಯ ಬಗೆಗೆ ಕುತೂಹಲ ಕೆರಳಿ ಜೈಮಿನಿ ಭಾರತ ಕಾವ್ಯವನ್ನು ಗ್ರಂಥಸಂಪಾದನೆಯ ದೃಷ್ಟಿಯಿಂದ ಇನ್ನೂ ಅಭ್ಯಸಿಸುವುದು ಅವಶ್ಯ ಎಂಬ ವಿಚಾರವು ಹುಟ್ಟಿತು.

ಗ್ರಂಥಸಂಪಾದನೆ ಹೆಚ್ಚು ಪರಿಪೂರ್ಣವಾಗಿ ನೆರವೇರಬೇಕೆಂಬ ದೃಷ್ಟಿಯಿಂದ ಹೆಚ್ಚು ಹಸ್ತಪ್ರತಿಗಳನ್ನು ಕಲೆಹಾಕುವುದು ಅಗತ್ಯವೆಂದು ತೋರಿತು. ಅದರಂತೆ ಕನ್ನಡ ನಾಡಿನ–ಸುಮಾರಾಗಿ–ಎಲ್ಲ ಭಾಗಗಳಲ್ಲಿ ಪ್ರಚುರವಿದ್ದ ಪ್ರತಿಗಳು ಪ್ರಾತಿನಿಧಿಕವಾಗಿ ದೊರೆತವು. ಸಂಗ್ರಹಿಸಿದ ಹಸ್ತಪ್ರತಿಗಳಲ್ಲಿ ಉತ್ತರ ಕರ್ನಾಟಕದ ಮತ್ತು ಹಳೆಯ ಮೈಸೂರು ಸೀಮೆಯ ಪ್ರತಿಗಳು ಹೆಚ್ಚಾಗಿದ್ದರೂ ದಕ್ಷಿಣ ಕನ್ನಡ, ಹೈದರಾಬಾದ ಕನ್ನಡ ಭಾಗದವೂ ಕೆಲವು ನೋಡಸಿಕ್ಕಿವೆ. ಈ ಎಲ್ಲ ಪ್ರತಿಗಳಲ್ಲಿ ವೈವಿಧ್ಯವೂ ಸಾಕಷ್ಟುಂಟು. ಪ್ರತಿ ಪುಟದಲ್ಲಿಯೂ ನಕ್ಷೆಯುಳ್ಳ ಪ್ರತಿ, ದೇವನಾಗರಿ ಲಿಪಿಯ ಪ್ರತಿ, ಅತಿ ಖಿಲಪ್ರಾಯವಾದ ಪ್ರತಿ, ಸಂಧಿಯ ಪ್ರಾರಂಭ-ಸಮಾಪ್ತಿ ಪುಟಗಳಲ್ಲಿ ಒಣ ಹೂಗಳಿದ್ದ ಪ್ರತಿ ಇತ್ಯಾದಿ.

ಈ ಎಲ್ಲ ಹಸ್ತಪ್ರತಿಗಳನ್ನು ಕೂಲಂಕಷವಾಗಿ ನೋಡಿ, ಗ್ರಂಥ ಸಂಪಾದನೆಯ




ಹಸ್ತಪ್ರತಿಗಳ ಹರಡಿಕೆ (ಈ ಗ್ರಂಥದಲ್ಲಿ ಬಳಸಿರುವ ಹಸ್ತಪ್ರತಿಗಳನ್ನು ಒದಗಿಸಿದ ಸ್ಥಳಗಳು)

1. ಮೈಸೂರು 2. ಮಂಗಳೂರು 3. ಕಡಶವಕೆ ಮಂಜರಡಿ 4. ನಾಲುಕೂಡ 5. ಕಡಲೆ 6. ಬೀಳಗಿ 7. ಮಧ್ವಗಿರಿ 8. ಇಟಗಿ 9. ತಡಹಳ 10. ಬಲ್ಲರವಾಡ 11. ತೊರಗಲ್ಲು 12. ಬೆಳವಗಿ 13. ಕಾವಲ 14. ಮುದಗಲ್ಲು 15. ಸುರಪುರ.

ದೃಷ್ಟಿಯಿಂದ ಅವುಗಳ ವಿಂಗಡಣೆ, ಪಾಠಾಂತರಗಳ ಸಂಕಲನ, ಹಸ್ತಪ್ರತಿಗಳ ಪರಸ್ಪರ ಸಂಬಂಧ, ಪಾಠಪರಿಷ್ಕರಣ ಮೊದಲಾದ ಅಂಶಗಳನ್ನು ಚರ್ಚಿಸಲು ಈ ಪ್ರಕರಣದಲ್ಲಿ ಪ್ರಯತ್ನಿಸಿದ್ದೇವೆ.

[ನಾವು ನೋಡಿದ ಹಸ್ತಪ್ರತಿಗಳ ವರ್ಣನೆಯನ್ನು ಪು. ೪೫೪–೪೬೪ರಲ್ಲಿ ಕೊಟ್ಟಿದೆ]

## ಹಸ್ತಪ್ರತಿಗಳ ಸ್ವರೂಪ

ಕನ್ನಡ ಜೈಮಿನಿ ಭಾರತವು ಪಂಡಿತ–ಪಾಮರ ಎರಡು ವರ್ಗಗಳಿಗೂ ಪ್ರಿಯವಾದ ಕಾವ್ಯ. ಅದನ್ನು ಅಭ್ಯಸಿಸುವುದಕ್ಕಾಗಿ, ಮನೋರಂಜನೆಗಾಗಿ ಓದುವುದಕ್ಕೆ ಪ್ರತಿಮಾಡಿ ಇಲ್ಲವೆ ಮಾಡಿಸಿ ಇಟ್ಟುಕೊಳ್ಳುವವರ ಸಂಖ್ಯೆ ದೊಡ್ಡದು. ಆದುದರಿಂದ ಇದರ ಅನೇಕ ಪ್ರತಿಗಳು ಕರ್ನಾಟಕದ ತುಂಬ ಹರಡಿರುವುದು ಸ್ವಾಭಾವಿಕ. ಗ್ರಂಥ ಸಂಪಾದನೆಯ ದೃಷ್ಟಿಯಿಂದ ಈ ಕಾವ್ಯವನ್ನು ಅಭ್ಯಸಿಸುವುದಕ್ಕಾಗಿ ಈ ಹಸ್ತಪ್ರತಿಗಳನ್ನು ಸಾಧ್ಯವಿದ್ದಷ್ಟು ಹೆಚ್ಚಿನ ಸಂಖ್ಯೆಯಲ್ಲಿ ಕೂಡಹಾಕಿದೆವು.

ದ. ರಾ. ಬೇಂದ್ರೆಯವರ ಸಂಗ್ರಹದಲ್ಲಿ ಜೈಮಿನಿ ಭಾರತದ ೩ ತಾಡಪತ್ರದ ಪ್ರತಿಗಳೂ ೫ ಕಾಗದದ ಪ್ರತಿಗಳೂ ಅಲ್ಲದೆ ಕೆಲವು ಅಪೂರ್ಣ ಪ್ರತಿಗಳೂ ದೊರಕಿದವು. ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಯಲ್ಲಿ ಒಟ್ಟು ೩೨ ಪ್ರತಿಗಳಿರುವುದಾಗಿ ತಿಳಿದುಕೊಂಡೆವು. ಮೈಸೂರು ಓರಿಯಂಟಲ್ ಇನ್‌ಸ್ಟಿಟ್ಯೂಟಿನಲ್ಲಿ ೧೦ ಪ್ರತಿಗಳು ಮತ್ತು ಮದ್ರಾಸ್ ಓರಿಯಂಟಲ್ ಇನ್‌ಸ್ಟಿಟ್ಯೂಟಿನಲ್ಲಿ ಒಂದು ಪ್ರತಿ ಇದ್ದುದು ಗೊತ್ತಾಯಿತು. ಮೈಸೂರಿಗೆ ಹೋದಾಗ ಅಲ್ಲಿಯ ಸಂಸ್ಕೃತ ಕಾಲೇಜಿನಲ್ಲಿ ೩ ಪ್ರತಿಗಳು ಇರುವುದಾಗಿ ಡಿ.ಎಲ್. ನರಸಿಂಹಾಚಾರ್ ಅವರಿಂದ ತಿಳಿದು ಬಂದಿತು. ತೀ.ನಂ.ಶ್ರೀ ಅವರು ತಮ್ಮ ಸಂಗ್ರಹದಲ್ಲಿದ್ದ ಸಾಕಷ್ಟು ಹಳೆಯದಾದ–ಕ್ರಿ. ಶ. ೧೭೯೯ರ–ತಾಡಪತ್ರ ಪ್ರತಿಯನ್ನು ಅಭ್ಯಾಸಕ್ಕಾಗಿ ಕೊಟ್ಟರು. ಗದುಗಿನ ಡಾ. ಉಮಚಗಿಯವರಿಂದ ದೇವನಾಗರೀ ಲಿಪಿಯ ಪ್ರತಿಯೊಂದು ದೊರಕಿತು. ಹೀಗೆ ೫೦ ಕ್ಕಿಂತ ಹೆಚ್ಚು ಪ್ರತಿಗಳು ಕೂಡಿದವು. ಇನ್ನೂ ಅನೇಕ ಪ್ರತಿಗಳು ನಾಡಿನ ಒಳಪ್ರದೇಶದ ಹಳ್ಳಿಗಳಲ್ಲಿ ಇರಲು ಸಾಕು. ಕಪಟರಾಳ ಕೃಷ್ಣರಾಯರು ದೊರಕಿಸಿದುದೆಂದು ತಿಳಿದುಬಂದಿರುವ, ನಾ.ಶ್ರೀ. ರಾಜಪುರೋಹಿತರು ಹಾಗೂ ಬಿ.ಎಂ.ಶ್ರೀ. ಅವರು ಉಲ್ಲೇಖಿಸಿರುವ ಸುರಪುರದ ಪ್ರತಿ ನಮಗೆ ನೋಡಲು ಸಿಕ್ಕಲಿಲ್ಲ.

ನಾವು ಸಂಗ್ರಹಿಸಿದ ಪ್ರತಿಗಳಲ್ಲಿ ಪುಡಿಪುಡಿಯಾಗಿ ಓದಬಾರದಂತಿದ್ದ ಮತ್ತು ಅಪೂರ್ಣವಾಗಿದ್ದ ಇಲ್ಲವೆ ಅತಿ ಅಶುದ್ಧವಾಗಿದ್ದ ಪ್ರತಿಗಳನ್ನು ಬಿಟ್ಟು, ಉತ್ತಮಸ್ಥಿತಿಯಲ್ಲಿದ್ದ ಒಳ್ಳೆಯ ಪ್ರತಿಗಳನ್ನು ಅಭ್ಯಾಸಕ್ಕೆ ಇಟ್ಟುಕೊಳ್ಳಲಾಗಿದೆ. ಕ್ರಿ. ಶ. ೧೬೭೦ರಿಂದ ಕ್ರಿ.ಶ. ೧೮೬೦ರ ವರೆಗಿನ ಕಾಲಾವಧಿಯ ಬೇರೆಬೇರೆ ಪ್ರತಿಗಳನ್ನು ಪಾಠಾಂತರ ಸಂಕಲನಕ್ಕಾಗಿ (collation) ಒಪ್ಪಿಕೊಂಡೆವು.

## ನಾವು ನೋಡಿದ ಹಸ್ತಪ್ರತಿಗಳ ಸಂಕ್ಷಿಪ್ತ ವರ್ಣನೆ

| ಪ್ರತಿ ಸಂಕೇತ (೧) | ಪದಾರ್ಥ (substance) (೨) | ಸ್ಥಿತಿ (condition) (೩) | ವಿಶೇಷ (೪) | ಸಂಧಿ–ಪದಸಂಖ್ಯೆ (೫) | ಕಾವ್ಯಾರಂಭ (೬) | ಕಾಲ (೭) | ಸ್ಥಳ, ಪ್ರತಿಕಾರ, ಬರೆಸಿದವರು, ಇ. (೮) |
|---|---|---|---|---|---|---|---|
| K.R.I. K 37 | ತಾಳೆಗರಿ | ಉತ್ತಮ | ಸಂ. ೩೪ರಲ್ಲಿ ೫೧ ಪದ್ಯ | ೩೪/೯೯೧೦ | ಶ್ರೀವಧುವಿನಂ | ಶ.ವ. ೧೭೮೩, ದುಂದುಭಿ, ಆಷಾಢ ಕೃಷ್ಣ ಪ್ರತಿಪದೆ, ಸ್ಥಿರವಾಸರ | ಕಡಶವಕೆ ಮಂಜಿರಡಿ ಕೃಷ್ಣ ಭಟ್ಟರ ಮಗ ಬರೆದುದು |
| K 39 | ,, | ಅಪೂರ್ಣ | — | ಸಂ. ೧ ರಿಂದ ೨೬ | ಪ್ರಸ್ತುತದೊ | — | — |
| K 118 | ,, | ಸಾಧಾರಣ | ಅನೇಕ ಗರಿಗಳು ಮುರಿದಿವೆ | ಪ್ರಾರಂಭ ಮುಕ್ತಾಯಗಳಲ್ಲಿ ಬಕದಾಲ್ಭ್ಯ ವೃತ್ತಾಂತ ಅರ್ಧ | | — | — |
| K 344 | ,, | ಉತ್ತಮ | ರಾಗಗಳ ಸೂಚನೆಯಿದೆ | ೩೪/೯೭೦ | ಶ್ರೀವಧುವಿನಂ | ಶಕ ೧೭೭೨ ಸಾಧಾರಣ ಆಷಾಢ ಬಹುಳ ಭಾರ್ಗವಾರ (ಪ್ರಾರಂಭ). ಶಕ ೧೭೭೩ ವಿರೋಧಿಕೃತ್ ಚೈತ್ರ ಕೃಷ್ಣ ಮಂದವಾರ, ಅನುರಾಧಾ ನಕ್ಷತ್ರ (ಸಮಾಪ್ತ) | ಇಟ್ಟಿಗೆ ಮಠದ ಗುರಪ್ಪದೇವರ ಮಗ ಮುರಿಗೆಯ್ಯನವರ ಮನೆಯೊಳಗೆ ಓದಿಕೊಳ್ಳಲಿಕ್ಕೆ ಬರೆದಿಟ್ಟದು. (ಇಟ್ಟಿಗಿ ತಾ. ರಾಣೇಬೆನ್ನೂರು) |
| K 649 | ,, | ಸಾಧಾರಣ | ಮೊದಲ ೫ ಗರಿಗಳಿಲ್ಲ. ಅನೇಕ ಮುರಿದಿವೆ | ೩೨/೧೮೯೪ | — | ಪ್ಲವ, ಕಾರ್ತಿಕ ಶುದ್ಧ ೧ ಸ್ಥಿರವಾರ (ಸಮಾಪ್ತ) | — |

| | | | | | | | |
|---|---|---|---|---|---|---|---|
| K 666 | ,, | ಕೊನೆಯ ಗರಿ ಇಲ್ಲ | ಅಕ್ಷರಗಳು ಚೆನ್ನಾಗಿವೆ | — | ಶ್ರೀವಧುವಿನಂಬಕ | — | — |
| K 759 | ,, | ಅಪೂರ್ಣ | — | ೧೮ ಸಂಧಿಗಳು ಮಾತ್ರ | | — | — |
| K 801 | ,, | — | — | ೩೪/೧೯೦೯ | — | — | — |
| K 803 | ,, | ಸಾಧಾರಣ | ಕೊನೆ ಗರಿಗಳಿಲ್ಲ | — | — | — | — |
| K 1006 | ,, | ಅತಿಜೀರ್ಣ | — | — | — | ಅಂಗೀರ ಕಾರ್ತಿಕ ಶುದ್ಧ ೧೦ (ಪ್ರಾರಂಭ) | ನಾಲುಕೂಡ ಶಂಕ್ರಾಭರಣ ಮಗ ವೆಂಕಟ ಬರೆದ ಪುಸ್ತಕ |
| K.R.I. K 1036 | ,, | — | ಅತಿ ಅಶುದ್ಧ | ೩೨/೧೯೦೬ | ಪ್ರಸ್ತುತ ದೊಳೊಗೆದ | ದುರ್ಮುಖಿ, ಭಾದ್ರಪದ ಶು.೭ (ಸಮಾಪ್ತ) | ಬಂಡಪ್ಪನ ಮಗ ಲಿಂಗೋಭಟ್ಟನು ವೈನಶ್ಯಯ್ಯ ವೆಂಕಪ್ಪ ಹೆಗಡೆಯವರ ಮಗ ಸುಬ್ಬಯ್ಯ ಹೆಗಡೇರಿಗೆ ಬರೆದುಕೊಟ್ಟುದು |
| K 1261 | ,, | — | — | ೩೩/೧೯೯೯ | ಶ್ರೀವಧುವಿನಂ | ಶೋಭಾನು, ಶ್ರಾವಣ ಶು. ೯, ಗುರುವಾರ | — |
| K 1304 | ,, | — | ಸಂಧಿ ೩೨ಕ್ಕೆ ಜೈ.ಭಾ. ಮುಗಿದು ೪೮ ಭಾಮಿನೀ ಪದ್ಯ | ೩೨+೧/೧೯೪೮ | ಪ್ರಸ್ತುತದೊ | ಸುಭಾನು, ಆಷಾಢ ಬ. ೧೦ (ಸಮಾಪ್ತ) | ಕಡಲೆ ವೆಂಕಪ್ಪ ಭಾಗೋತರ ಮಗ ಕೃಷ್ಣನು ಬರೆದ ಪುಸ್ತಕ. ವೆಂಕಪ್ಪಹೆಗಡೆ ಹಿರೆಕೆರೂರಲ್ಲಿ |

| (೧) | (೨) | (೩) | (೪) | (೫) | (೬) | (೭) | (೮) |
|---|---|---|---|---|---|---|---|
| | | | ಗಳ ೩೩ ನೇ ಸಂಧಿ ಸೇರಿದೆ. | | | | ದೊರೆತದ್ದು. |
| K 2675 | ತಾಳೆಗರಿ | ಅಪೂರ್ಣ | ಸಾಧಾರಣ ಅನೇಕ ಗರಿಗಳು ತುಂಡಾಗಿವೆ | — | — | — | — |
| O.R.I. Mys. K. 25 | ,, | — | ಪ್ರತಿ ಸಂಧಿಯ ಆರಂಭಕ್ಕೆ ವರ್ತುಲಾಕೃತಿಯ ನಕ್ಷೆ. ಪ್ರತಿ ಶಿಥಿಲವಾಗಿದೆ. ೧, ೧೬, ೨೬, ೪೮, ೯೫, ೧೦೬, ೧೫೬, ೧೬೦ ನೇ ಗರಿ ಇಲ್ಲ. | ೩೩/೧೯೦೩ | — | ನಳ, ಜ್ಯೇಷ್ಠ ಬ. ೧೨ ಸೋಮ | ಕಾವಲ ನಾಗಪ್ಪಯ್ಯಗಳ ಕುಮಾರರು ಗಿರಿಯಪ್ಪಯ್ಯನವರಿಗೆ ಕಂಚಸೂವಾದ್ರದ ನಾರಣ್ಣನ...ಜಯಮಿನಿ ಭಾರತ ಪುಸ್ತಕ. |
| K. 84/1 | ,, | ಉತ್ತಮ | ೬೨, ೭೯ನೇ ಗರಿ ಎರಡೆರಡಿವೆ ಇದೇ ಕಟ್ಟಿನಲ್ಲಿ ನಳ ಚರಿತ್ರೆಯೂ ಇದೆ. | ೩೩/೧೯೩೬ | ಶ್ರೀವಧುವಿನಂ | ಶಕ ೧೭೭೬ ಆನಂದ, ಮಾರ್ಗಶಿರ ಶು. ೯, ಮಂಗಳವಾರ ಸಾಯಂಕಾಲ | ಮೈಸೂರ ಸ್ಥಳದ ಅರಮನೆ ಬೊಕ್ಕಸದಗುರಿಕಾರ್ರು ಕಾಡೆಯ್ಯನವರ ಮಕ್ಕಳು ಚಾಮೈಯ್ಯನವರ ಮಗ ಜ್ಯೇಷ್ಠ ಪುತ್ರನಾದ ನಂಜಪ್ಪನು ಬರೆದದ್ದು. |

| | | | | | | | | |
|---|---|---|---|---|---|---|---|---|
| O.R.I. K. 124 | ,, | ಅಪೂರ್ಣ | ೨, ೨೪ನೇ ಗರಿ ಮುರಿದಿವೆ. | ಸಂ. ೩೦ ಪ. ೨೭ರ ವರೆಗೆ ಇದೆ | ಶ್ರೀವಧುವಿನಂ | | — | — |
| K. 219 | ,, | ,, | ಶಿಥಿಲ | ಸಂ. ೨೭ ಪ. ೧೫೬೭ರ ವರೆಗೆ | — | | — | — |
| K. 264 | ,, | — | ಪ್ರತಿಯ ಕೊನೆಯಲ್ಲಿ ಪ್ರತಿಕಾರ ರಚಿತ ೯ ಪದ್ಯಗಳು | ೩೩/೧೯೦೧ | ಶ್ರೀವಧುವಿನಂ | ಶಕ ೧೭೬೦, ನಳ, ವೈಶಾಖ ಬ. ೧೨. | | — |
| K. 272 | ,, | — | ೫೪, ೬೯, ೧೦೦, ೧೩೮, ೧೫೫ ನೇ ಗರಿ ಮುರಿದಿವೆ. | ೩೩/೧೯೯೯ | ಶ್ರೀವಧುವಿನಂ | | — | — |
| K. 294 | ,, | — | ಕೊನೆಯ ಸಂಧಿಯಲ್ಲಿ ೪೭ ಪದ್ಯ | ೩೪/೧೯೦೭ | ಶ್ರೀವಧುವಿನಂ | | — | — |
| KB 293 | ,, | — | ಅತಿ ಶಿಥಿಲ | ೩೩/೧೯೦೭ | ಶ್ರೀವಧುವಿನಂ | | — | — |
| K. 682 | ,, | ಅಪೂರ್ಣ | ನೀರು ಹತ್ತಿ ಕೆಟ್ಟಿದೆ | — | ಪ್ರಾರಂಭ ಸಮಾಪ್ತಿ ಇಲ್ಲ. | | — | — |

| (೧) | (೨) | (೩) | (೪) | (೫) | (೬) | (೭) | (೮) |
|---|---|---|---|---|---|---|---|
| K. 771 | ತಾಳೆಗರಿ | .... | ಗರಿ ೪ ರಿಂದ ಇದೆ ಅನೇಕ ಗರಿಗಳು ಮುರಿದಿವೆ. | ೩೪/೧೯೦೭ | — | ಶಕ ೧೭೬೩, ಪ್ಲವ ಮಾರ್ಗಶಿರ ಶು. ೧೧, ಶುಕ್ರವಾರ | ಮಧ್ವಗಿರಿ ತಾಲೋಕು ಹಿರೆ ಮಲೂರ ಶ್ಯಾನುಭೋಗ ಅಪಂಣೈಯ್ಯನ ಬರಹ. |
| O.R.I. Madras K. 897 | ,, | ಅಪೂರ್ಣ | — | — | ಪ್ರಸ್ತುತದೊಳೊ | — | — |
| ಸಂಸ್ಕೃತ ಕಾಲೇಜು ಮೈಸೂರು 731 | ,, | — | — | — | — | ೧೮ ನೆಯ ಶತಮಾನದ್ದು | — |
| 470 | ,, | ಪೂರ್ಣ | — | — | — | ,, | — |
| 1297 | ,, | ,, | — | — | — | ,, | — |
| D.R.B. D.W.R. ಬಿಳಿಗಿ ನಾಯಕ | ,, | — | ಸಂ. ೮ ಮತ್ತು ೯ ಕೂಡಿ ಒಂದು. ಸಂಧಿ ೧೮ರಲ್ಲಿ ೩೪, ೫೬ನೇ ಸಂಧಿ ೨೬ ರಲ್ಲಿ ೨೪, ೨೫, | ೩೨/೧೯೦೬ | ಪ್ರಸ್ತುತದೊಳಗೆ | ಶಕ ೧೭೦೧, ವಿಳಂಬಿ, ಕಾರ್ತಿಕ ಬ. ೮ ಗುರುವಾರ–ಸಂಪೂರ್ಣ | ಭೂಮಿಪತಿ ಬಿಳಗಿ ಇಮ್ಮಡಿ ಸೋಮಶೇಖರ ಸನಾಮಕಂ ಪುತ್ರಪೌತ್ರಾದಿ ವೃದ್ಧ್ಯರ್ಥ... ತಾಳಗುಪ್ಪೆಯ ಸೀಮೆ ಹಿರೇ ಮನೆಯ ಗ್ರಾಮದೊಳ್ಳಿರುತ |

| | | | | | | | |
|---|---|---|---|---|---|---|---|
| | | | ೪೬ನೇ ಈ ಪದ್ಯಗಳು ಹೆಚ್ಚಿಗಿವೆ. K 1304ರಲ್ಲೂ ಈ ಪದ್ಯಗಳಿವೆ. | | | | ನೆಲಸಿರುವ ವಿಶ್ವೇಶನಡಿದಾವರೆಯ ಬಕುತನಾಗಾಂಕನೆಂಬವಂ |
| ಮುದಗಲ್ | ,, | ಸಾಧಾರಣ | — | ೩೩/೧೯೧೫ | ಶ್ರೀವಧುವಿನಂ | ಸು. ಶಕವರ್ಷ ೧೭೪೧_೪೨ | — |
| ತೀಸಂಶ್ರೀ | ,, | ಉತ್ತಮ ಪೂರ್ಣ | 'ಟ' ಬಳಕೆ. ಕೆಲಗರಿ ಕಳೆದಿವೆ. ಅನೇಕ ಪದ್ಯಗಳು ಬರೆಯುವುದು ಮಧ್ಯೆ ಮಧ್ಯೆ ಉಳಿದಿವೆ. ಅಪೂರ್ಣ ಪದ್ಯಗಳೂ ಸಾಕಷ್ಟಿವೆ. | ೩೩/೧೯೧೫ | ,, | ಶಕ ೧೬೪೦, ವಿಕಾರಿ, ಶ್ರಾವಣ ಶು. ೫ ಭಾರ್ಗವಾರ | ಹಡದಣದ ದೇವಚಂದ್ರನ ಮಗ ವಿಜ್ಜೈಯನು ತಗಡೂರ ಶಾನಭಾಗ ದೇವೈಯನವರ ಮಗ ಅಪ್ಪಾಜೈಯನಿಗೆ ಜೈಮಿನಿXXX |
| D.R.B. | ,, | ಉತ್ತಮ ಅಕ್ಷರ ಚೆನ್ನಾಗಿವೆ. | ೧೩–೧೮ ೬ ಗರಿ ಇಲ್ಲ. | ೩೩/೧೮೭೮ | ಪ್ರಾರಂಭದ ಗರಿಗಳಿಲ್ಲ | — | — |
| K.R.I. K. 16 | ಕಾಗದ | ಅಪೂರ್ಣ | — | ಹಂಸಧ್ವಜ ಕಥಾ ನಕದವರೆಗೆ | ಪ್ರಾರಂಭ-ಸಮಾಪ್ತಿ ಇಲ್ಲ. | — | — |
| K. 303 | ,, | ,, | — | ಪ್ರತಿ ಸಂಧ್ಯಾರಂಭ ಪ್ರಾರಂಭ ಸಮಾಪ್ತಿ ದಲ್ಲಿ ರಾಗಸೂಚನೆ ಇಲ್ಲ. (ಸಂ. ೨ರಿಂದ ಪ್ರತಿಸಂಧ್ಯಾಂತದಲ್ಲಿ | | — | — |

| (೧) | (೨) | (೩) | (೪) | (೫) | (೬) | (೭) | (೮) |
|---|---|---|---|---|---|---|---|
| | | | | ಉಪವನ ತಟಾಕ, ಸಂ. ೨೧ ಪ. ೧೨೮ ವರೆಗೆ ಮಾತ್ರ<br>ಇ. ೫ ಪದ್ಯಗಳು | | | |
| K.R.I. K. 330 | ತಾ | ಉತ್ತಮ | ರಾಗಗಳ ಸೂಚನೆ ಸಂಧಿ ೨ಕ್ಕೆ ಮಾತ್ರ | ೩೪/೧೯೦೯ | — | ಶಕ ೧೮೧೮, ನಳ, ಅಶ್ವಿಜ ಬ. ೯ ಮಂಗಳವಾರ ಮಗಾ ನಕ್ಷತ್ರ, ಅಮೃತ ಸಿದ್ಧಿಯೋಗ. | — |
| K 336 | ,, | — | ಕೊನೆಯ ಸಂಧಿಯಲ್ಲಿ ೫೦ ಪದ್ಯಗಳು | ೩೩/೧೯೧೧ | — | — | ಗುರವನಗೌಡ ಕಲ್ಲನಗೌಡ ಪಾಟೀಲ, ತಡಹಳ, ನವಲಗುಂದ ತಾಲ್ಲೂಕು |
| K 483 | ,, | ಸಾಧಾರಣ | ಪುಟದ ಇಕ್ಕೆಲದಲ್ಲಿ ನಕ್ಷೆ ರಾಗ ಸೂಚನೆ ಇದೆ. | — | — | — | — |
| K 573 | ,, | ಅಪೂರ್ಣ | ಕೆಲವೇ ಪುಟಗಳಿವೆ | ಕೆಲವೇ ಪುಟಗಳಿವೆ | — | — | — |
| K 635 | ,, | ,, | — | ಸಂ. ೩೪ ಪ. ೩೨ ವರೆಗೆ | ಶ್ರೀವಿಧುವಿನಂ | — | — |
| K 642 | ,, | ಪೂರ್ಣ | ಪ್ರತಿ ಸಂಧಿಯ ಕೊನೆಗೆ i ಅಶ್ವ | ೩೩/೧೯೦೦ | ಶ್ರೀವಧುವಿನಂ | ಶಕ ೧೭೬೦, ವಿಳಂಬಿ, ಫಾಲ್ಗುಣ ಕೃಷ್ಣಪಕ್ಷ | — |

| | | | | | | | |
|---|---|---|---|---|---|---|---|
| | | | ಮೇಧಿಕ ii ಉಪವನ ತಟಾಕ iii ತೊಳಗುವ ಸುವರ್ಣ iv ಲೋಕದೊಳಖಿಳ v ಪುಣ್ಯಮಿದು--ಈ ೫ ಪದ್ಯಗಳು (K 303 ರಂತೆ) | | | | |
| K 701 | ,, | ಉತ್ತಮ | ಕೊನೆಯ ಸಂಧಿಯಲ್ಲಿ ೫೦ ಪದ್ಯಗಳು | ೩೩/೧೮೯೫ | ಶ್ರೀವಧುವಿನಂ | — | — |
| K 1225 | ,, | ,, | — | ೩೩/೧೯೩೫ | ಶ್ರೀವಧುವಿನಂ | ಶಕ ೧೭೮೩, ದುರ್ಮತಿ, ಶ್ರಾವಣ ಬ. ೩ ಭಾರ್ಗವಾರ ಪ್ರಥಮಾ (ಪ್ರತಿಮಾ?) | ಬೆಳವಿಗಿಯಲ್ಲಿರುವ ಬಡಿಗೇರ ಲಿಂಗಪ್ಪ ಕರಗುದರಿ ಶೇಷಪ್ಪ ಅವರಿಗೆ ಕೊಟ್ಟ ಪುಸ್ತಕ |
| K 1393 | ,, | ಅಪೂರ್ಣ | ೧ ರಿಂದ ೨೮ ಪುಟ ಮಾತ್ರ | ಸಂ. ೫ ಪ. ೧೦೮ ವರೆಗೆ | ಶ್ರೀವಧುವಿನಂ | — | — |
| K 1944 | ,, | ,, | ಕೇವಲ ೬ ಪುಟಗಳು | — | — | — | — |
| K 1967 | ,, | ,, | ಕೇವಲ ೧೨ ಪುಟ | — | — | — | — |
| KRI K 1486 | ಕಾಗದ | ಪೂರ್ಣ | — | ೩೩/೧೯೩೬ | ಪ್ರಸ್ತುತದೊ | ಶಕ ೧೭೫೮, ದುರ್ಮುಖಿ, ಉತ್ತರಾಯಣ, ಪೌಷ್ಯಶುಕ್ಲ | — |

| (೧) | (೨) | (೩) | (೪) | (೫) | (೬) | (೭) | (೮) |
|---|---|---|---|---|---|---|---|
| K 2486 | ಕಾ. | ಉತ್ತಮ ಅಪೂರ್ಣ | ತಾಮ್ರಧ್ವಜನ ಕಾಳಗದ ವರೆಗೆ | ಸಂ. ೨೩. ಪ.೧೩೦೯ | ಶ್ರೀವಧುವಿನಂ | — | — |
| K 2487 ORI Mys | ,, | ಅಪೂರ್ಣ | — | ಸ. ೧೭ ಪ. ೨೫ವರೆಗೆ. | — | — | — |
| KA 225 | ,, | ಉತ್ತಮ | ಮಂಗಳೂರ ಕಲ್ಲಚ್ಚುಮಾರ್ಜಿನ್‌ನಲ್ಲಿ ಪಾಠಾಂತರಗಳಿವೆ. | ೩೪/೧೯೦೭ | ಶ್ರೀವಧುವಿನಂ | ಕ್ರಿ.ಶ. ೧೮೪೮ರಲ್ಲಿ ಮುದ್ರಿಸಿದ್ದು | — |
| KA 224/1 | ,, | ಉತ್ತಮ | ಶಬರಶಂಕರ ವಿಳಾಸವೂ ಇದೆ. | ೩೪/೧೯೦೭ | ಶ್ರೀವಧುವಿನಂ | — | — |
| DRB ತೊರಗಲ್ | ,, | ಉತ್ತಮ | 'ಜ' ಬಳಕೆ | ೩೩/೧೯೧೦ | ಪ್ರಸ್ತುತದೊ | ಶಕ ೧೫೯೨, ಸಾಧಾರಣ, ಮಾಘ ಬ. ಪಾಡ್ಯ, ಚಂದ್ರವಾರ | ಮಾಮಲೆ ತೊರಗಲ್ ಸರದೇಸಾಯಿ ಲಿಂಗಪ್ಪನವರ ಪುಸ್ತಕ. ಶ್ರೀಮತು ಗದುಗಿನ ಸೀಮೆಯ ದೇಶಾಯಿಗಳು ಶ್ರೀನಿವಾಸ ಅಯ್ಯXXರು ಶೇಷಾದ್ರಿಅಯ್ಯನವರು ಪ್ರೀತಿಪೂರ್ವಕದಿಂದ ಹೊಂಬಳಲ X X X X X ಜೈಮಿನಿ ಭಾರತ |

| | | | | | | | |
|---|---|---|---|---|---|---|---|
| ಜಾಯೇಂದ್ರಟೀಕಾ | ಕಾಗದ | ಉತ್ತಮ | ಪ್ರತಿಪದ್ಯಕ್ಕೂ ಕನ್ನಡ ಟೀಕೆ ಅಲ್ಲಲ್ಲಿ ಟೀಕೆ ಬರೆಯಲಾಗದೆ ಸ್ಥಳ ಬಿಡಲಾಗಿದೆ– ಪದ್ಯ ಬರೆದಿದೆ. ಪುಟ ೯೪, ೯೫ರ ಒಳಭಾಗದಲ್ಲಿ ವೈದ್ಯ ಶಾಸ್ತ್ರ ಬರೆದುಕೊಂಡಿದ್ದಾನೆ. | ೩೩/೧೯೧೦ | ಶ್ರೀವಧುವಿನಂ | ಶಕ ೧೬೯೩, ಖರ, ಶ್ರಾವಣ ಶುದ್ಧ ತ್ರಯೋದಶಿ, ಗುರುವಾರ | ಶ್ರೀಮತ್ಸಕಲಗುಣಕೋವಿದ ಶಿಖಾಮಣಿ ಮಯೂರಪುರದ ಜಾಯೇಂದ್ರ ಪರಮಪ್ರೀತನಾದ ಬನಾಜಿ ಪಂತರ ಪುತ್ರನಾದ ಕೃಷ್ಣನು ಟೀಕೆಯನ್ನು ಬರೆದನು. |
| ಸೊಂಡೂರ | ,, | ಅಪೂರ್ಣ | — | — | — | — | — |
| ಬಲ್ಲರವಾಡ | ,, | — | — | ೩೩/೧೯೩೭ | — | — | — |
| ಧಾರವಾಡ ಕಲ್ಲಚ್ಚು | ,, | ಉತ್ತಮ | ೩ನೇ ಸಂಧಿಯಲ್ಲಿಯ ೧೦ ಪದ್ಯಗಳು ಮತ್ತೆ ೮ನೇ ಸಂಧಿಯಲ್ಲಿಯೂ ಬಂದಿವೆ. ಕೊನೆಯ ಸಂಧಿಯಲ್ಲಿ ೫೦ ಪದ್ಯಗಳು. | ೩೩/೧೯೨೫ | ಶ್ರೀವಧುವಿನಂ | ಶಕ ೧೭೮೯, ರೌದ್ರಿ, ಆಷಾಢ ಬ. ೯ ಗುರುವಾರ | ಗೋವಿಂದ ಪ್ರಭಾಕರ ಜೋಯಿಸಿ ಇವರು ತಮ್ಮ ಸನ್ಮಾರ್ಗದರ್ಶಕ ಕಲ್ಲಾಪಖಾನೆಯಲ್ಲಿ ಛಾಪಿಸಿದರು. ಹಸ್ತಾಕ್ಷರ ವಿಭೂತಿ ಸಂಗಪಯ್ಯನವರ ಹುಚ್ಚಯ್ಯನದು. |
| ದೇವನಾಗರಿ ಲಿಪಿ | ,, | ಉತ್ತಮ | ಯಾರೋ ಜಾದಿ ಹಳವಿ ಮಸಿಯಿಂದ ತಿದ್ದಿದ್ದಾರೆ. | ೩೩/೧೯೧೦ | ಶ್ರೀವಧುವಿನಂ | ಶಕ ೧೭೮೪, ಆಂಗೀರ ಮಾರ್ಗಶೀರ್ಷ ಶುಕ್ಲಪಕ್ಷ ಸೌಮ್ಯವಾಸರ | — |

ಹಲಕೆಲವು ಪ್ರತಿಗಳಲ್ಲಿ ಮುಕ್ತಾಯದಲ್ಲಿ ಆ ಆ ಪ್ರತಿ ಯಾವ ಭಾಗದ ಯಾವ ಊರಿನದು ಎಂಬ ಬಗ್ಗೆ ಸ್ಪಷ್ಟ ಉಲ್ಲೇಖವಿದೆ. ಆ ಎಲ್ಲ ಊರುಗಳ ನಿರ್ದೇಶವುಳ್ಳ ಕರ್ನಾಟಕದ ನಕ್ಷೆಯನ್ನು ಕೊಡಲಾಗಿದೆ. ಆ ನಕ್ಷೆಯನ್ನು ಅವಲೋಕಿಸಿದರೆ ಕನ್ನಡ ಜೈಮಿನಿ ಭಾರತದ ಪ್ರತಿಗಳು ಗುಲ್ಬರ್ಗದಿಂದ ಮೈಸೂರವರೆಗೆ ಇಡೀ ಕರ್ನಾಟಕವನ್ನೇ ವ್ಯಾಪಿಸಿರುವುದು ನಿದರ್ಶನಕ್ಕೆ ಬರುವುದು. ಹಾಸನ ಜಿಲ್ಲೆಯ ಸುತ್ತುಮುತ್ತು ಒಳ ಹಳ್ಳಿಗಳಲ್ಲಿ ಜೈಮಿನಿ ಭಾರತದ ಅನೇಕ ಪ್ರತಿಗಳು ಇರಲೇಬೇಕು ಎಂದೆನಿಸುತ್ತದೆ. ಏಕೆಂದರೆ, ಕವಿ ಲಕ್ಷ್ಮೀಶನ ಊರಾದ ದೇವಪುರವು ಆ ಪ್ರದೇಶದಲ್ಲಿದೆ.

ಸು. ೨೦೦ ವರ್ಷಗಳ ಕಾಲಾವಧಿಯಲ್ಲಿ ಹುಟ್ಟಿದ ೧೧ ಪ್ರತಿಗಳನ್ನು ಪರಿಪೂರ್ಣ ವಾಗಿ ಅಭ್ಯಸಿಸಿ, ಅವುಗಳೊಳಗಿನ ಭೇದಾಭೇದಗಳನ್ನು ಅರಿತುಕೊಂಡೆವು. ಆ ಎಲ್ಲ ಪ್ರತಿಗಳ ಆದಿ-ಅಂತ್ಯ ಸಂಧಿಗಳ ಮತ್ತು ಮಧ್ಯಭಾಗದ ಅಲ್ಲಲ್ಲಿಯ ಮೂರು ಸಂಧಿಗಳ (ಸಂ. ೧೩, ೧೮, ೨೮) ಪಾಠಾಂತರಗಳನ್ನು ಮಾತ್ರ ಸಂಕಲನ ಮಾಡಿ ಕೆಲವೊಂದು ನಿರ್ಣಯಕ್ಕೆ ಬರಲಾಗಿದೆ. ನಮ್ಮ ಎಲ್ಲ ನಿರ್ಣಯಗಳು ಈ ೫ ಸಂಧಿಗಳ ಮಟ್ಟಿಗೆ ಸೀಮಿತವಾಗಿವೆ. ಪ್ರತಿಗಳ ಕ್ರಿ. ಶ. ಕಾಲವನ್ನು ಪಿಳ್ಳೈಕೃತ ಪಂಚಾಂಗದ[1] ಆಧಾರ ದಿಂದ ನಿಶ್ಚಯಿಸಿ ಕೊಟ್ಟಿದೆ.

[ನಾವು ಆಯ್ದುಕೊಂಡ ಪ್ರತಿಗಳ ವಿವರವನ್ನು ಪುಟ ೪೬೫, ೪೬೬ ರಲ್ಲಿ ಕೊಟ್ಟಿದೆ.]

ಇನ್ನು, ಈ ೧೧ ಪ್ರತಿಗಳ ವಿವರವಾದ ವರ್ಣನೆಯನ್ನು ನೋಡೋಣ. ಪ್ರತಿಗಳ ಆಕಾರ, ಸ್ಥಿತಿ, ಪ್ರಾರಂಭದ ಹಾಗೂ ಮುಕ್ತಾಯದ ಬರೆಹದ ಕೆಲಭಾಗ ಇತ್ಯಾದಿ ವಿಷಯಗಳನ್ನು ಇಲ್ಲಿ ಕೊಡಲಾಗಿದೆ.

**೧. ಕ ಪ್ರತಿ** (ಮಾಮಲೆ ತೊರಗಲ್ಲ ಸರದೇಸಾಯಿ ಪ್ರತಿ) :

**ಪದಾರ್ಥ** : ಕಾಗದ. **ಆಕಾರ** : ೧೦″×೬″. **ಪುಟ** : ೨೬೫

**ಬರೆಹದ ಸಾಲು** : ಪ್ರತಿ ಪುಟದಲ್ಲಿ ೧೦–೧೩ ; **ಅಕ್ಷರ** : ಪ್ರತಿ ಸಾಲಿನಲ್ಲಿ ಸು. ೩೫.

**ಸ್ಥಿತಿ** : ೧೨೩ನೆಯ ಪುಟದವರೆಗೆ ಚೆನ್ನಾಗಿದ್ದು, ಮುಂದೆ ಹುಳು ತಿನ್ನಲಾರಂಭ ವಾಗಿದೆ. ಪುಟ ೧೨೮ ರಿಂದ ೨೬೫ರ ವರೆಗೆ ಪ್ರತಿ ಪುಟವು ಕ್ರಮೇಣ ೧″ ರಿಂದ ೩″ರ ವರೆಗೆ ಹುಳುಗಳ ಪಾಲಾಗಿದೆ. **ಕಾಲ** : ೧೬–೧–೧೬೭೧.

**ಲಿಪಿ** : ಕನ್ನಡ

**ಪ್ರಾರಂಭ** ಶ್ರೀ ಗಣಾಧಿಪತಯೇನಮಃ । ಶ್ರೀ ಶಾರದಾ ಗುರುಭ್ಯೋ ನಮಃ ।
ಜಯಮುನಿ ಭಾರತದ ಪುಸ್ತಕಕ್ಕೆ ಶುಭಮಸ್ತು ಶೋಭನಮಸ್ತು ಆಯು
ರಾರೋಗ್ಯ ಅಯಿಶ್ವರ್ಯಮಸ್ತು । ರಾಗ ಲಲಿತೆ ॥

---

[1] *An Indian Ephemeris* L. D. Swamikannu Pillai, Vol 1-7

# ನಾವು ಆಯ್ದುಕೊಂಡ ಪ್ರತಿಗಳ ವಿವರ

| ಕ್ರಮಸಂಖ್ಯೆ | ಪ್ರತಿಗೆ ಕೊಟ್ಟ ಸಂಕೇತ | ಪ್ರತಿ ಪರಿಚಯ | ಪ್ರತಿಯಲ್ಲಿ ಉಲ್ಲೇಖಿಸಿದ ಕಾಲ | ಕ್ರಿ. ಶ. ಕಾಲ |
| --- | --- | --- | --- | --- |
| (1) | (2) | (3) | (4) | (5) |
| ೧ | ಕ | ಮೂಮುಲೆ ತೊರಗಲ್ಲ ಸರದೇಸಾಯಿ ಲಿಂಗಪ್ಪನವರ ಪುಸ್ತಕ (ಕಾಗದ ಪ್ರತಿ) | ಶಕ ೧೫೯೨, ಸಾಧಾರಣ, ಮಾಘ ಬ. ಪಾಡ್ಯ, ಚಂದ್ರವಾರ | ೧೬–೧–೧೬೭೧ |
| ೨ | ಖ | ಶೀ. ನಂ. ಶ್ರೀ. ಅವರ ಪ್ರತಿ (ತಾಡಪತ್ರ ಪ್ರತಿ) | ಶಕ ೧೬೪೦ [೪೧] ವಿಕಾರಿ, ಶ್ರಾವಣ ಶು. ೫, ಭಾರ್ಗವಾರ | ೧೦–೭–೧೭೧೯ |
| ೩ | ಗ | ದೇವನಾಗರಿ ಲಿಪಿಯ ಪ್ರತಿ (ಕಾಗದ ಪ್ರತಿ) | ಶಕ ೧೬೭೪, ಅಂಗೀರ, ಮಾರ್ಗಶೀರ್ಷ ಶುಕ್ಲಪಕ್ಷ ಸೌಮ್ಯವಾಸರ, ಮೃಗಶಿರಾ ನಕ್ಷತ್ರ | ೨೦–೧೨–೧೭೫೨ |
| ೪ | ಘ | (K. R. I.) K. 1304 (ತಾಡಪತ್ರ ಪ್ರತಿ) | ಸುಭಾನು ಸಂ. ಆಷಾಢ ಬ. ೧೦. | ೪–೮–೧೭೬೩ (ಗುರುವಾರ?) |
| ೫ | ಚ | ಮಯೂರಪುರದ ಜಾಯೇಂದ್ರದೇಸಾಯಿ–ಟೀಕಾ ಪ್ರತಿ (ಕಾಗದ ಪ್ರತಿ) | ಶಕ ೧೬೯೨[೯೩], ಖರ, ಶ್ರಾವಣ ಶು. ತ್ರಯೋದಶಿ ಗುರುವಾರ | ೨೨–೮–೧೭೭೧ |
| ೬ | ಛ | ಬಿಳಗಿ ನಾಯಕರ ಪ್ರತಿ (ತಾಡಪತ್ರ ಪ್ರತಿ) | ಶಕ [೧೭೦೦]–೧೭೦೧, ವಿಳಂಬಿ, ಕಾರ್ತಿಕ, ಅಷ್ಟಮಿ, ಗುರುವಾರ ಮಘಾನಕ್ಷತ್ರ | ೩೦–೧೦–೧೭೭೮ |

| (1) | (2) | (3) | (4) | (5) |
|---|---|---|---|---|
| ೭ | ಜ | (K. R. I.) K. 1261 (ತಾಡಪತ್ರ ಪ್ರತಿ) | ಶೋಭನ, ಶ್ರಾವಣ, ಶು. ೯ ಗುರುವಾರ | ೭–೮–೧೭೮೩? |
| ೮ | ಝ | ಮಂಗಳೂರು ಕಲ್ಲಚ್ಚಿನ ಪ್ರತಿ (ಕಾಗದ ಪ್ರತಿ) (O.R.I. Mys.) KA 225 | — | ೧೯೪೮ |
| ೯ | ತ | (O.R.I. Mys.) K 294 (ತಾಡಪತ್ರ ಪ್ರತಿ) | — | — |
| ೧೦ | ಥ | (K.R.I.) K. 344 (ತಾಡಪತ್ರ ಪ್ರತಿ) | ಶಕ ೧೭೭೩, ವಿರೋಧಿಕೃತ್ ಚೈತ್ರಕೃಷ್ಣಪಕ್ಷ ಮಂದವಾರ ಅನುರಾಧಾ ನಕ್ಷತ್ರ | ೧೮೫೧ |
| ೧೧ | ದ | ಧಾರವಾಡ ಕಲ್ಲಚ್ಚಿನ ಪ್ರತಿ | ಶಕ ೧೭೮೨ ರೌದ್ರಿ | ೧೮೬೦ (೧೨–೭–೧೮೬೦) |

ಪ್ರಸ್ತುತದಲೊಗದ ಮುಂಬೆಳಗಮುಳ ದಂತ [ದ] ಗ
ಭಸ್ತಿ ನವಪೂರ್ವಸಂಧ್ಯಾರುಣಂ ಭಾಳವಿ
ನ್ಯಸ್ತ ಸಿಂಧೂರಮಂಕುರಿಪ ಪೊಂಬಿಸಿಲೊಡನೆ ಮೂಡುವೆಳನೇಸರೆಸೆವ
ಮಸ್ತಕದ ಮಣಿ ಮಗುಟಮಾಗಲುದಯಾಚಳದ
ವಿಸ್ತಾರದಂತೆ ಭದ್ರಾಕೃತಿಯೊಳೊಪ್ಪುವ ಸ
ಮಸ್ತ ಸಿದ್ಧಿಪ್ರದಾಯಕ ವಿನಾಯಕ ಮಾಳ್ಕೆ ಮನ್ಮತಿಗೆ ಮಾಂಗಲ್ಯಮಂ || ೧ ||

**ಮುಕ್ತಾಯ** : ಅಂತು ಸಂಧಿ ೩೩ ಕ್ಕಂ ಪದನೂ ೧೯೧೦ಕ್ಕೆ ||| ಮಂಗಳಂ ಮಹಾ ಶ್ರೀ ಶ್ರೀ ಶ್ರೀ. ಸ್ವಸ್ತಿಶ್ರೀ ಜಯಾಭ್ಯುದಯ ಶಾಲಿವಾಹನ ಶಕವರುಷ ೧೮೩೨ ನೆಯ ಸಾಧಾರಣನಾಮ ಸಂವತ್ಸರದ ಮಾಘಮಾಸ ಬಹುಳ ಪಾಡ್ಯವು ಚಂದ್ರ ವಾರದಲ್ಲೂ ಜಯ X X X X ಕ ಸಮಾಪ್ತ|| ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ||ಶ್ರೀ ಮತ್ತು ಗದುಗಿನ ಸೀಮೆಯ ದೇಶಾಯಿಗಳು ಶ್ರೀನಿವಾಸ ಅಯ್ಯXXರು ಶೇಷಾದ್ರಿ ಅಯ್ಯನವರು ಪ್ರೀತಿಪೂರ್ವಕದಿಂದ ಹೊಂಬಳಲ X X X X X X X X ಜೈಮಿನಿ ಭಾರತ ಪುಸ್ತಕಕ್ಕೆ ಶುಭಮಸ್ತು ಶೋಭನಮಸ್ತು ಆಯುುರಾ X X X X X X X X ಶ್ರೀ ಶ್ರೀ ಶ್ರೀ ಶ್ರೀ ||

**ವಿಶೇಷ** : ಱಕಾರವನ್ನು ಅನೇಕ ಕಡೆಗಳಲ್ಲಿ ಸರಿಯಾಗಿ ಉಪಯೋಗಿಸಲಾಗಿದೆ. ಸಂಧಿ ೧೮ರ ೨೩, ೨೪, ೨೫ನೆಯ ಪದ್ಯಗಳು ಸಂಧಿ ೮ರ ೨, ೩, ೪ನೆಯ ಪದ್ಯಗಳಾಗಿವೆ. ಸಂಧಿ ೩೪ರ ೧೦ನೆಯ ಪದ್ಯವು ಸಂಧಿ ೨೫ರಲ್ಲಿ ೩ನೆಯ ಪದ್ಯವಾಗಿದೆ.

ಅನುಸ್ವಾರದ ಮುಂದೆ ಬರುವ 'ತೆ' ಯಾವಾಗಲೂ ದ್ವಿತ್ವವಾಗಿ ಬರೆಯಲ್ಪಟ್ಟಿದೆ.(ಅಂತೆ>ಅಂತ್ತೆ ಹೀಗೆ). ಶಕಾರಕ್ಕೆ ಸಕಾರವನ್ನು ಬರೆಯುವತ್ತ ಒಲವೂ ಇದೆ. ಈ ಪ್ರತಿಯನ್ನು ಓದಿದವರು ಯಾರೋ ಮಾರ್ಜಿನಿನಲ್ಲಿ ಕೆಲವೆಡೆ ಕೆಲವು ಸೂಚನೆ ಪಾಠಾಂತರಗಳನ್ನು ಬರೆದಿದ್ದಾರೆ.

| ಉದಾ : | ಪುಟ | ಮಾರ್ಜಿನ್ ಸ್ಥಳ | ಸೂಚನೆ |
|---|---|---|---|
| | ೧ | ಎಡ | ಉಪಮಾ ಅಲಂಕಾರ |
| | ೨ | ಎಡದ ಮೇಲ್ಭಾಗ | ದೃಷ್ಟಾಂತ ಅಲಂಕಾರ |
| | ೨ | ಎಡದ ಮಧ್ಯ | ಉಪಮಾ ಅಲಂಕಾರ |
| ರಾಜೇಂದ್ರ ಧರ್ಮತನಯ ಸಂಧಿ ಪ್ರಾರಂಭ | | ಎಡಕ್ಕೆ ಕೆಳಗೆ | ರಾಗ ತೋಡಿ |
| | ೧೦ | ಪದ್ಯ ೪೬ರ ಮೇಲ್ಗಡೆ | ಪ್ರಕ್ಷೇಪ ಪದ |
| | ೧೦ | ಬಲ | ಮಿತ್ರ ಮಿತ್ರದೃಗ್ |
| | ೧೦ | ಎಡ | ಪತ್ರಿಂದ್ರ ವಾಹನಂ |
| | ೧೩ | ಎಡ | ರಾಗ ಮಾಳವಗೌಳ |
| | ೧೯ | ಪ. ೩೯ರ-ಕಾಗಾಲದ ಬಲಕ್ಕೆ | ಕಾಸಾರನಿಕರ(ಪಾಠಾಂತರ) |
| | ೧೯ | ಎಡ | ರಾಗ ಸಾರಂಗ |
| | ೨೯ | ಎಡ | ರಾಗ ಸಾವೇರಿ |

ಸಾಕಷ್ಟು ಶುದ್ಧವಾದ, ಱಕಾರವನ್ನು ಬಳಸಿದ (ಕೆಲವೆಡೆ ಱ ಅಗತ್ಯವಿದ್ದಲ್ಲಿ ರೇಫೆಯನ್ನು ಬಳಸಿರಬಹುದಾದರೂ ಱಕಾರವನ್ನು ಸರಿಯಾಗಿ ಬಳಸಿದೆ) ಮತ್ತು ನಾವು ನೋಡಿದ ಪ್ರತಿಗಳಲ್ಲಿ ಎಲ್ಲಕ್ಕೂ ಹಳೆಯದಾದ (ಕ್ರಿ. ಶ. ೧೬೭೧) ಪ್ರತಿ ಇದೊಂದೇ. ಈ ಎಲ್ಲ ಗುಣಗಳಿಂದಾಗಿ ಈ ಕ ಪ್ರತಿಗೆ ಅಗ್ರಸ್ಥಾನವನ್ನು ಕೊಡಲಾಗಿದೆ.

**೨ ಖ ಪ್ರತಿ** (ತೀ.ನಂ.ಶ್ರೀ. ಪ್ರತಿ)

**ಪದಾರ್ಥ** : ತಾಡಪತ್ರ. **ಆಕಾರ** : ೧೪"×೧.೭" **ಗರಿ** : ೧೮೪.

**ಸಾಲು** : ಪ್ರತಿ ಗರಿಯಲ್ಲಿ ೯–೧೦. **ಅಕ್ಷರ** : ಪ್ರತಿ ಸಾಲಿಗೆ ಸು. ೭೦.

**ಸ್ಥಿತಿ** : ಉತ್ತಮ. ಅಂಚಿನಲ್ಲಿ ಹುಳಹತ್ತಿ ಕೆಲ ಅಕ್ಷರಗಳು ನಷ್ಟವಾಗಿವೆ.

**ಕಾಲ** : ೧೦–೭–೧೭೧೯. **ಲಿಪಿ** : ಕನ್ನಡ.

ಪ್ರಾರಂಭ : ಶಾರದಾ ಗುರುಭ್ಯೋ ನಮಃ || ಜೈಮಿನಿ ಪುಸ್ತಕಕ್ಕೆ ನಿರ್ವಿಘ್ನಮಸ್ತು ||
ಶ್ರೀವಧುವಿನಂಬಕ ಚಕೋರಕಂ ಪೊರೆಯೆ ಭ
ಕ್ತಾವಳಿಯ ಹೃತ್ಕುಮುದ ಕೊರಕಂ ಬಿರಿಎಜಗ
ತಿವಲೆಯದಮಲ ಸೌಭಾಗ್ಯರತ್ನಾಕರಂ ಪೆರ್ಚಿನಿಂ ಮೆರುವರಿಯೆ ||
ಆವಗಂ ಸರಸ ಕರುಣಾಮೃತದ ಕಲೆಗಳಿಂ
ತೀವಿದೆಳೆನಗೆಯ ಬೆಳ್ದಿಂಗಳಿಂ ಪಸರಿಸುವ
ದೇವಪುರ ನಿಲೆಯ ಲಕ್ಷ್ಮಿರಮಣನಾಸ್ಯಚಂದ್ರಾನಂದಮಂ ನಮಗಿಯ್ಯಲಿ || ೧ ||

**ಮುಕ್ತಾಯ** : ಅಂತು ಸಂಧಿ ೩೩ಕ್ಕಂ ಪದನೂ ೧೯೦೫ಕ್ಕಂ ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ || ಅನುಷ್ಟ ಶ್ಲೋಕ || ಗ್ರಂಥ ೮೫೦೦೦ಕ್ಕಂ ಜಯಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ|| ಮಂಗಳವು ಜಗಕಾಯ್ತು ಸುರರಿಗೆ| ಮಂಗಳದ್ರುಮ ಫಲಿಸಿದುದು ಜಯ | ಮಂಗಳವು ನೆಲೆಗೊಂಡುದೋದುವ ಕೇಳ್ವ ಸುಜನರಿಗೆ || ಸಂಘಟಸಿದುದು ಭಕ್ತ ಜ | ನಂಗಳಿಗೆ ಜಯರಾಯ ತೊರವೆಯ | ಮಂಗಳ ಶ್ರೀಮೂರ್ತಿ ನರಕೇಸರಿಯ ಕಾವ್ಯದಲಿ || ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ೧೬೪೦ ಸಂದಾ ವರ್ತ್ತಮಾನ ವಿಕಾರಿ ಸಂವತ್ಸರದ ಶ್ರಾವಣಶುದ್ಧ ೫ ಭಾರ್ಗ್ಗವಾರ ಸೂರ್ಯನು ಪೂರ್ವಪ್ರತಿಷ್ಠೆಯಾದ ಗಳಿಗೆ ಹನ್ನೆರಡನೆಯಲ್ಲಿ ಹಡದಣದ ದೇವಚಂದ್ರನ ಮಗ ವಿಜ್ಜೆಯನು ತಗಡೂರ ಶನಭಾಗ ದೆವ್ವೆಯನವರ ಮಗ ಅಪ್ಪಾಜ್ಜೈಯನಿಗೆ ಜೈಮಿ x x x x x x x ಶ್ರೀ ಶ್ರೀ ಶ್ರೀ ಶ್ರೀ ||

**ವಿಶೇಷ** : ಈ ಪ್ರತಿಯಲ್ಲಿಯೂ ಱಕಾರದ ಬಳಕೆ ಇದೆ. ಆದರೆ 'ಕ' ಪ್ರತಿಯಷ್ಟು ಸರಿಯಾಗಿ ಬಳಸಿಲ್ಲ. ಈ ಪ್ರತಿಯನ್ನು ಯಾವ ಮಾತೃಕೆಯಿಂದ ಬರೆದುಕೊಂಡರೊ ಅದು ಶಿಥಿಲವಾದ, ಖಿಲಪ್ರಾಯವಾದ ಪ್ರತಿಯಾಗಿದ್ದಿತೆಂದು ತೋರುತ್ತದೆ. ಏಕೆಂದರೆ ಅಲ್ಲಲ್ಲಿ ಅನೇಕ ಪದ್ಯಗಳು ಬಿಟ್ಟುಹೋಗಿವೆ ಅಥವಾ ಅಪೂರ್ಣವಾಗಿವೆ. ಆದರೂ ಪಾಠಾಂತರಗಳ ದೃಷ್ಟಿಯಿಂದ ನೋಡಿದಾಗ ಸಂಸ್ಕೃತ ಪಾಠಗಳನ್ನು ಈ ಪ್ರತಿ ಚೆನ್ನಾಗಿ, ಸರಿಯಾಗಿ ಕಾಯ್ದುಕೊಂಡು ಬಂದಿದೆ. ಆದುದರಿಂದ ಇದಕ್ಕೆ ದ್ವಿತೀಯ ಸ್ಥಾನ ಸಲ್ಲುತ್ತದೆ.

೩ 'ಗ' ಪ್ರತಿ (ದೇವನಾಗರೀ ಲಿಪಿಯ ಪ್ರತಿ)

**ಪದಾರ್ಥ** : ಕಾಗದ. **ಆಕಾರ** : ೧'×೮". **ಪುಟ** : ೯೧.

**ಕಾಲ** : ೨೦–೧೨–೧೭೫೨. **ಲಿಪಿ** : ದೇವನಾಗರಿ

**ಸ್ಥಿತಿ** : ಉತ್ತಮ. ಅನೇಕ ಕಡೆಗಳಲ್ಲಿ ಹಳದಿ ಬಣ್ಣದಿಂದ ದೋಷಗಳನ್ನು ತಿದ್ದಿದ್ದಾರೆ. ಈ ತಿದ್ದುಪಾಟ ಪ್ರತಿಕಾರನೇ ಆಮೇಲೆ ಮಾಡಿದ್ದೊ, ಓದಿದವರು ಯಾರೋ ಮಾಡಿದ್ದೊ ಹೇಳಲು ಬರುವಂತಿಲ್ಲ.

**ಪ್ರಾರಂಭ** : ಶ್ರೀಗಣೇಶಾಯ ನಮಃ | ಶ್ರೀರಸ್ತು । ಶ್ರೀ ವಿರೂಪಾಕ್ಷಾಯ ನಮಃ ।
ಶ್ರೀಕೃಷ್ಣಾಯ ನಮಃ । ವಾರ್ಧಕ ಷಟ್ಪದಿ ।
ಶ್ರೀವಧುವಿನಂಬಕ ಚಕೋರಕಂ ಪೋರೆಯೆ ಭ
ಕ್ತಾವಳಿಯ ಹೃತ್ಕುಮುದ ಕೋರಕಂ ಬಿರಿಯೇ ಜಗ
ತೀವಲಯದಮಲ ಸೌಭಾಗ್ಯರತ್ನಾಕರಂ ಪೇರ್ಚಿನಿಂ ಮೇರೇವರಿಯೇ ||
ಆವಗಂ ಸರಸಕರುಣಾಮೃತದ ಕಲೇಗಳಿಂ
ತೀವಿದೇಲೇ ನಗೇಯ ಬೇಳ್ದಿಂಗಳಂ ಪಸರಿಸುವ
ದೇವಪುರನಿಲಯ ಲಕ್ಷ್ಮೀರಮಣನಾಸ್ಯಚಂದ್ರಾನಂದಮಂ ನೀಯಲೀ || ೧ ||

**ಮುಕ್ತಾಯ** : ಅಂತು ಸಂಧಿ ೩೩ ನಾಂದಿ ಸಂಧಿ ೧. ೩೪ಕ್ಕಂ ೧೯೧೦ಕ್ಕಂ ವಾಲಿಗಳು ೯೧ಕ್ಕಂ ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ|| ಶಿವರಾಮಾರ್ಪಣಮಸ್ತು|| ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಕೇ ೧೬೭೪ ಆಂಗೀರ ಸಂವತ್ಸರೇ ಮಾರ್ಗಶೀರ್ಷ ಮಾಸೇ ಶುಕ್ಲಪಕ್ಷೇ ಸೌಮ್ಯವಾಸರೇ ೧೪|೨|೪೦ ಉಪರಿ ೫೪|೫೭| ಮೃಗಶಿರಾ ನಕ್ಷತ್ರೇ ೪೫|೨೦|೮|೨೦|೨|೪೦ ಏವಂ ಪಂಚಾಂಗ|| ಅಸ್ಮಿನ್ ದಿವಸೇ ಸೂರ್ಯೋದಯೋಪರಿ ಘಟಿಕಾ ೧೫ ಇದಂ ಜೈಮಿನಿ ಭಾರತ ಸಮಾಪ್ತಿ ಮಗಮತ್||

**ವಿಶೇಷ** : ಈ ಪ್ರತಿಯು ಪಾಠಾಂತರ ದೃಷ್ಟಿಯಿಂದ 'ಕ' (ತೊರಗಲ್ಲ) ಪ್ರತಿಯನ್ನೇ ಅನುಸರಿಸುತ್ತದೆ.

೪ 'ಘ' ಪ್ರತಿ (K.R I.—K. 1304)

**ಪದಾರ್ಥ** : ತಾಡಪತ್ರ. **ಆಕಾರ** : ೨೧" × ೨". **ಗರಿ** : ೧೬೪.

**ಸಾಲು** : ಪ್ರತಿ ಗರಿಯಲ್ಲಿ ೮ ೧೦.

**ಕಾಲ** : ೪–೮–೧೭೬೩. **ಲಿಪಿ** : ಕನ್ನಡ.

**ಸ್ಥಿತಿ** : ಉತ್ತಮ

**ಪ್ರಾರಂಭ** : ಸ್ವಸ್ತಿ ಶ್ರೀ ಗುರವೇ ನಮಃ । ಗಣಪತಯೇ ನಮಃ । ಮೂಕಾಂಬಾಯ ನಮಃ । ನಿರ್ವಿಘ್ನಮಸ್ತು। ಶ್ರೀಸರಸ್ವತ್ಯೈ ನಮಃ। ಮಹಾಭಾರತದೊಳಗೆ ಇರುವ ಅಶ್ವಮೇಧ ಪರ್ವ ಜಯಮುನಿ ಪುಸ್ತಕ ಬರುವುದಕ್ಕೆ ನಿರ್ವಿಘ್ನಮಸ್ತು । ಶುಭಮಸ್ತು ।

ಪ್ರಸ್ತುತದೊಳೊಗೆದ ಮುಂಬೆಳಗಮಳ ದಂತದ ಗ
ಭಸ್ತಿ ನವಪೂರ್ಣ ಸಂಧ್ಯಾರುಣಂ ಭಾಳವಿ
ನ್ಯಸ್ತ ಸಿಂಧೂರಮಂಕುರಿಪ ಪೊಂಬಿಸಿಲೊಡನೆ ಮೂಡುವೆಳೆನೆಸರೆಸೆವಾ ||
ಮಸ್ತಕದ ಮಣಿಮುಕುಟ ಮಾಗಲುದಯಾಚಳದ
ವಿಸ್ತಾರದಂತೆ ಭದ್ರಾಕೃತಿಯೊಳೊಪ್ಪುವ ಸ
ಮಸ್ತ ಸಿದ್ಧಿಪ್ರದಾಯಕ ವಿನಾಯಕ ಮಾಳ್ಪುದೆನಗೆ ನಿರ್ವಿಘ್ನತೆಯನು || ೧ ||

**ಮುಕ್ತಾಯ:** ಅಂತು ಸಂಧಿ ೩೩ಕ್ಕಂ ಪದನು ೧೯೪೮ಕ್ಕಂ ಮಂಗಳಂ ಮಹಾ ಶ್ರೀ ಶ್ರೀ ಶ್ರೀ ಶ್ರೀ || ಅಗ್ನಿ ಮೂಷಿಕ ಚೊರೆಭ್ಯೊ ಶಿವೊ ರಕ್ಷತು ಪುಸ್ತಕಾ | ಸುಭಾನು ಸಂವತ್ಸರಡ ಆಷಾಢ ಬ. ೧೦ ದಿವಸ ಬರದು ಮುಗಿಸಿದ ಜಯಮುನಿ ಪುಸ್ತಕಕ್ಕೆ ಶುಭಮಸ್ತು | ಯಿಾ ಪುಸ್ತಕಾ ಬರದಾತ ಕಡಲೆ+ಚಣಕಾಪುರದ ವೆಂಕಪ್ಪ ಭಾಗೋತರ ಮಗ ಕ್ರಿಷ್ಣನು ಬರದ ಪುಸ್ತಕಾ | ನಿವಿಲ ರಾಮಣ ಶೆಟ್ಟರ ಮಗ ನಾಗಪ್ಪಶೆಟ್ಟರಿಗೆ ಕಡಲೆ ಕೃಷ್ಣಯ್ಯನು ಬರಕೊಟ್ಟ ಜಯಮುನಿ ಪುಸ್ತಕಾ | ಯಿಾ ಪುಸ್ತಕ್ಕೆ ಶುಭಶೋಭನಮಸ್ತು |

**ವಿಶೇಷ:** ಸಂಧಿ ೮ ಮತ್ತು ೯ ಕೂಡಿಸಿ ಒಟ್ಟು ೭೬ ಪದ್ಯಗಳುಳ್ಳ ಒಂದು ಸಂಧಿಯನ್ನು ಮಾಡಿದೆ.

ಸಂಧಿ ೩೪ರಲ್ಲಿ ೧೫ ಪದ್ಯಗಳು ಹೆಚ್ಚು ಸೇರಿ ಅದು ೬೬ ಪದ್ಯಗಳುಳ್ಳದಾಗಿದೆ. ಆದರೆ ಹೆಚ್ಚಿಗೆ ಸೇರಿದ ಪದ್ಯಗಳು ಹೊಸವೇನಲ್ಲ. ಬೇರೆ ಬೇರೆ ಸಂಧಿಗಳಲ್ಲಿಯ ಪದ್ಯಗಳೇ ಪುನರುಕ್ತವಾಗಿವೆ. ಅದು ಹೀಗೆ:

| ಸಂಧಿ | ಪದ್ಯ | ಸಂಧಿ | ಪದ್ಯ | ಸಂಧಿ | ಪದ್ಯ |
|---|---|---|---|---|---|
| ೧೦ | ೩,೪,೫,೬ | ೧೭ | ೨,೩,೪ | ೨೮ | ೨ |
| ೧೫ | ೨,೩ | ೨೫ | ೪,೫ | ೩೩ | ೨೨ |

ಈ ೧೩ ಪದ್ಯಗಳಲ್ಲದೆ ಸಂಧಿ ೩೩ರಲ್ಲಿಯ ಸ್ವಲ್ಪ ಮಾರ್ಪಾಟು ಹೊಂದಿದ ೧೦ನೆಯ ಪದ್ಯ ಮತ್ತು ತಪ್ಪಿ ಎಲ್ಲಿಂದಲೋ ಬರೆದ ಅರ್ಧ ಷಟ್ಪದೀ ಪದ್ಯ. ಮೇಲೆ ಉಲ್ಲೇಖಿಸಿದ ೧೩ ಪದ್ಯಗಳು 'ಜ' ಪ್ರತಿಯಲ್ಲಿಯೂ ಇವೆ.

ಸಂಧಿ ೧೮ರಲ್ಲಿ ೩೪ನೆಯ ಮತ್ತು ೫೬ನೆಯ ಪದ್ಯಗಳು ಹೊಸವೆಂದು ಕಂಡು ಬರುತ್ತಿದೆ. ಈ ಎರಡು ಪದ್ಯಗಳು ಯಾವ ಪ್ರಚಲಿತ ಪ್ರತಿಗಳಲ್ಲಿಯೂ ಇಲ್ಲ.

ವ್ಯಂಜನ 'ವು' ಬರೆಯಬೇಕಾದಲ್ಲಿಯೂ 'ಉ' ಸ್ವರಾಕ್ಷರವನ್ನು ಉಪಯೋಗಿಸುತ್ತಾನೆ. ಮಹಾಪ್ರಾಣದ ಬಳಕೆ ಹೆಚ್ಚು. ದ್ವಿತ್ವಾಕ್ಷರವನ್ನು ಬರೆಯುವುದಕ್ಕೆ ಅಕ್ಷರದ ಕೆಳಗೆ ೧ ಎಂಬ ಸಂಖ್ಯಾಸಂಜ್ಞೆಯನ್ನು ಬಳಸುತ್ತಾನೆ. ಉದಾ : ತ್ತ>ತ೧, ತ್ಕ>ಕ೧.

೫೭ ಗರಿಗಳಾದ ಮೇಲೆ ಮಧ್ಯದಲ್ಲಿ ಇನ್ನಾವುದೋ ಜೈಮಿನಿ ಭಾರತದ ಪ್ರತಿಯ ೧೦ ಗರಿಗಳು ಸೇರಿಕೊಂಡಿವೆ. ಅವುಗಳ ಕ್ರಮಾಂಕ ೫೦–೬೦. ೧೧ನೆಯ ಸಂಧಿಯ ೨೯ನೆಯ ಪದ್ಯದಿಂದ ೧೪ನೆಯ ಸಂಧಿಯ ೧೬ನೆಯ ಪದ್ಯದವರೆಗಿನ ವಿಷಯ ಬಂದಿದೆ.

ಗರಿ ೧೬೧ರಲ್ಲಿ ಎಡ ಮಾರ್ಜಿನಿನಲ್ಲಿ 'ಪುರುಷಾಮೃಗದ ಪ್ರಸಂಗ' ಎಂದು ಬರೆಯಲಾಗಿದೆ. ಈ ಬಗೆಯಾಗಿ ವಿಷಯಾರಂಭದ ಸೂಚನೆ ಈ ಪ್ರತಿಯಲ್ಲಿ ಮತ್ತೆಲ್ಲಿಯೂ ಇಲ್ಲ. ೩೨ನೆಯ ಸಂಧಿಯ ೪೩ ಪದ್ಯಗಳಿಗೆ ಜೈಮಿನಿ ಭಾರತ ಕಾವ್ಯವು ಮುಗಿದಮೇಲೆ ಪುರುಷಾಮೃಗ ಪ್ರಸಂಗದ ೪೮ ಪದ್ಯಗಳಿವೆ. ಇವು ಕುಮಾರವ್ಯಾಸ ಭಾರತದ ಸಭಾಪರ್ವದಲ್ಲಿ ರಾಜಸೂಯಯಾಗ ಸಂದರ್ಭದಲ್ಲಿ ಇವೆ (ಸಂ. ೭). ಇದರಿಂದಾಗಿಯೇ ಈ ಪ್ರತಿಯಲ್ಲಿ ಒಟ್ಟು ಪದ್ಯಗಳ ಸಂಖ್ಯೆ (೧೯೦೦+೪೮) ೧೯೪೮ ಆಗಿದೆ. ಈ ಪದ್ಯಗಳು ಭಾಮಿನೀ ಷಟ್ಪದಿಯವಾಗಿದ್ದು ಕೊನೆಯಲ್ಲಿ ವೀರನಾರಾಯಣ ಮುದ್ರಿಕೆಯೂ ಉಂಟು. ಛಂದಸ್ಸಿನಲ್ಲಿ ಮಾತ್ರವಲ್ಲದೆ ಭಾಷಾಶೈಲಿಯಲ್ಲಿಯೂ ಜೈಮಿನಿ ಭಾರತಕ್ಕಿಂತ ಇದು ಅತಿ ಭಿನ್ನವಾಗಿದೆ. ಈ ಕುರಿತು ಸಾಮ್ಯ-ವೈಷಮ್ಯದ ಚರ್ಚೆ ಅನುಬಂಧದಲ್ಲಿದೆ.

**೫. 'ಚ' ಪ್ರತಿ** (ಜಾಯೇಂದ್ರ ಟೀಕಾ ಪ್ರತಿ)

**ಪದಾರ್ಥ**: ಕಾಗದ. **ಆಕಾರ**: ೧' X ೮.೩" **ಪುಟ**: ೨೪೪.

**ಸಾಲು**: ಪ್ರತಿ ಪುಟಕ್ಕೆ ೨೪-೩೦. **ಲಿಪಿ**: ಕನ್ನಡ.

**ಸ್ಥಿತಿ**: ಉತ್ತಮ. **ಕಾಲ**: ೨೨-೮-೧೭೭೧

**ಪ್ರಾರಂಭ**: ಶ್ರೀಗಣೇಶಾಯನಮಃ। ಶ್ರೀಶಾರದಾಯ ನಮಃ। ಜಯಮುನಿ ಟೀಕೆ ಬರವದಕ್ಕೆ ಶುಭಮಸ್ತು।

ಶ್ರೀವಧುವಿನಾಂಬಕ ಚಕೊರಕಂ ಪೊರಿಯ ಭ
ಕ್ತಾವಳಿಯ ಹೃತ್ಕುಮುದ ಕೊರಕಂ ಬಿರಿಯ ಜಗ
ತಿವಲಯದಮಲ ಸೌಭಾಗ್ಯರತ್ನಾಕರಂ ಪೆರ್ಚ್ಚಿನಿಂ ಮ್ಯಾರೆವರಿಯೆ ||
ಆವಗಂ ಸರಸ ಕರುಣಾಮೃತದ ಕಳೆಗಳಿಂ
ತಿವಿದೆಳೆನಗಿಯ ಬೆಳ್ದಿಂಗಳಂ ಪಸರಿಸುವ
ದೆವಪುರನಿಲಯ ಲಕ್ಷ್ಮೀರಮಣನಾಸ್ಯಚಂದ್ರಾನಂದಮಂ ನಿಯ್ಕಲಿ ||೧||

**ಮುಕ್ತಾಯ**: ಅಂತು ಸಂಧಿ ೩೩ಕ್ಕಂ ಪದನೂ ೧೯೧೦ಕ್ಕಂ ಮಂಗಳಂ ಮಹಾ ಶ್ರೀ ಶ್ರೀ ಶ್ರೀ ಶ್ರೀ॥ ಸ್ವಸ್ತಿ ಶ್ರೀ ಜಯಾಭ್ಯುಯ ಶಾಲಿವಾಹನ ಶಕೆ ೧೬೯೩ ಪ್ರವರ್ತಮಾನೆ ಖರನಾಮ ಸಂವತ್ಸರದ ಶ್ರಾವಣ ಶುದ್ಧ ತ್ರಯೋದಶಿ ಗುರುವಾರದಲ್ಲು ಜಯಮಿನಿಯ ಕಾವ್ಯದ ಪದ್ಯವನು ಮತ್ತೆ ಟೀಕೆಯನು ವಿಸ್ತರಿಸಿ ಬರೆದು ಸಮಾಪ್ತಿ ಮಾಡಿದನು। ಶ್ರೀಲಕ್ಷ್ಮೀಕಾಂತಂಗೆ ಅರ್ಪಿತಮಸ್ತು। ಶ್ರೀಮತ್ಸಕಲ ಗುಣಕೋವಿದ ಶಿಖಾಮಣಿ ಮಯೂರಪುರದ ಜಾಯೆಂದ್ರು ಪರಮ ಪ್ರಿತನಾದ ಬನಾಜಿ ಪಂತರ ಪುತ್ರನಾದ ಕ್ರಿಷ್ಣನು ಶ್ರೀ ಬಾದಾಮಿ ಬನದ ಶಂಕರಿಯನಿಸುವ ಕುಲದದೇವಿಯ ಅನುಗ್ರಹದಿಂದ ಜಡಮತಿಯಾದವರು ಓದಿ ಕೇಳಿ ಬುದ್ಧಿವಂತರಾಗಲೆಂದು ಕೋವಿದರರಿತು ತಲೆದೂಗುವಂತೆ ವಿಸ್ತರಿಸಿ ಬರಸಿದಳ್ ಕಮಲಲೋಚನೆ ದಯದಿಂದಂ॥ ಶುಭ ಶೋಭನ ಅೃಶ್ವರ್ಯ ಪುತ್ರ ಮಿತ್ರ ಕಳತ್ರಾದಿ ಸೌಭಾಗ್ಯ ಆಯುಃರಾರೋಗ್ಯಮಸ್ತು॥

**ವಿಶೇಷ**: ಪಾಠಾಂತರಗಳ ದೃಷ್ಟಿಯಿಂದ ಈ ಪ್ರತಿಯೂ 'ಕ' (ತೊರಗಲ್ಲ) ಪ್ರತಿಯನ್ನು ಅನುಸರಿಸುತ್ತದೆ.

ಇವನ ಬರೆವಣಿಯಲ್ಲಿ ಬ್ಯಾ(ಬೇ)ಡ, ಸ್ಯಾ(ಸೇ)ನೆ ಈ ಬಗೆಯ ರೂಪಗಳಿವೆ. 'ಎ' ಕಾರ ಯುಕ್ತಾಕ್ಷರವನ್ನು ಯಕಾರದ ಒತ್ತಕ್ಕರದಿಂದ ( ್ಯ ) ಸೂಚಿಸುತ್ತಾನೆ. ಚೆ>ಚ್ಯ, ಜೆ>ಜ್ಯ ಇತ್ಯಾದಿ. ಶಕಾರಕ್ಕೆ ಸಕಾರ ಪ್ರಯೋಗವಿದೆ. ಇ, ಈ, ಎ, ಏ ಇವುಗಳ ಹ್ರಸ್ವದೀರ್ಘಗಳನ್ನು ಯೋಗ್ಯವಾಗಿ ಬಳಸುತ್ತಾನೆ. ಒ, ಓಗಳ ವಿಷಯದಲ್ಲಿ ಹ್ರಸ್ವದೀರ್ಘ ಭೇದ ಅನಿಶ್ಚಿತ.

**೬. 'ಛ' ಪ್ರತಿ**: (ಬಿಳಗಿ ನಾಯಕರ ಪ್ರತಿ)

**ಪದಾರ್ಥ**: ತಾಡಪತ್ರ. **ಆಕಾರ**: ೧೩"×೨". **ಗರಿ**: ೧೯೮

**ಸಾಲು**: ಪ್ರತಿ ಪುಟದಲ್ಲಿ ೧೦ ಸಾಲು. **ಅಕ್ಷರ**: ಪ್ರತಿಸಾಲಿಗೆ ಸು. ೫೫

**ಲಿಪಿ**: ಕನ್ನಡ. **ಸ್ಥಿತಿ**: ಉತ್ತಮ. **ಕಾಲ**: ೩೦-೧೨-೧೭೭೮.

ಪ್ರಾರಂಭ: ಶ್ರೀಗಣಾಧಿಪತಯೇ ನಮಃ। ಶ್ರೀಗುರುಭ್ಯೋ ನಮಃ। ಶ್ರೀಶಾರದಾಂಬಾಯೈ ನಮಃ। ಶ್ರೀ ಲಕ್ಷ್ಮೀನಾರಾಯಣಾಭ್ಯಾಂ ನಮಃ। ಶ್ರೀ ಉಮಾಮಹೇಶ್ವರಾಯ ನಮಃ। ಜೈಮಿನಿ ಕಾವ್ಯವ ಬರವದಕ್ಕೆ ನಿರ್ವಿಘ್ನಮಸ್ತು॥

ಪ್ರಸ್ತುತದೊಳೊಗೆದ ಮುಂಬೆಳಗಮಳ ದಂತ್ತದ ಗ
ಭಸ್ತಿ ನವಪೂರ್ವ ಸಂಧ್ಯಾರುಣಂ ಭಾಳವಿ
ನ್ಯಸ್ತ ಸಿಂಧೂರಮಂಕುರಿಪ ಪೊಂಬಿಸಿಲೊಡನೆ ಮೂಡುವೆಳೆನೇಸರೆಸವ॥
ಮಸ್ತಕದ ಮಣಿಮಕುಟ ಮಾಗಲುದಯಾಚಳದ
ವಿಸ್ತಾರದಂತ್ತೆ ಬದ್ದಾಕೃತಿಯೊಳೊಪ್ಪುವ ಸ
ಮಸ್ತ ಸಿದ್ಧಿಪ್ರದಾಯಕ ವಿನಾಯಕ ಮಾಳ್ಪುದೆಮಗೆ ನಿರ್ವಿಘ್ನತೆನು ॥೧॥

**ಮುಕ್ತಾಯ**: ಅಂತು ಸಂಧಿ ೩೭ಕ್ಕಂ ಪದ ೧೯೧೬ಕ್ಕಂ ಮಂಗಳಮಹಾ ಶ್ರೀ ಶ್ರೀ ಶ್ರೀ ಶ್ರೀ। ಲಕ್ಷ್ಮೀನಾರಾಯಣಾಭ್ಯಾಂ ನಮಃ। ಶ್ರೀ ಜೈಮಿನಿ ಕಾವ್ಯಂ ಸಂಪೂರ್ಣಂ। ಶ್ರೀ ಶ್ರೀ ಶ್ರೀ ನಿರ್ವಿಘ್ನಮಸ್ತು॥

ಶ್ರೀಮಜ್ಜಯಾಭ್ಯುದಯ ಶಾಲಿವಾಹನ ಶಕದೆ
ಸೋಮಾಚಲವ್ಯೋಮ ಭೂಸಂಖ್ಯೆಯೊಳು ನೆಗಳ್
ದಾ ಮಹಾವಿಳಂಬಿ ಸಂವತ್ಸರದ ಕಾರ್ತಿಕಮಾಸದಾ ಶಕವರುಷದೊಳ್॥
ನೇಮದಿಂದಷ್ಟಮಿಯ ದಿನದೆ ಗುರುವಾಸರದೊ
ಳಾ ಮಘಾ ನಕ್ಷತ್ರದೊಳ್ ಜೈಮಿನಿಯನಿದನು
ಪ್ರೇಮದಿಂ ಬರಸಿದವನಾವನೆನೆ ಹರಚರಣ ಸರಸಿಜ ಭ್ರಮರನೆನಿಸಿ॥ ॥೧॥

ಭೂಮಿಪತಿ ಬಿಳಿಗಿ ಇಮ್ಮಡಿ ಸೋಮಶೇಖರ ಸ
ನಾಮಕಂ ಪುತ್ರಪೌತ್ರಾದಿ ವೃದ್ಧ್ಯರ್ಥಕೊಲ್
ದಾಮೋದದಿಂದಲೀ ಕರ್ನಾಟಕೃತಿಯ ಸಂಪ್ರೀತಿಯಿಂ ಲೇಖಿಸೆನಲು॥
ಈ ಮಹಾಕಾವ್ಯಮಂ ಬರದಾತನಾರೆನಲ್
ಭೂಮಿಯೊಳ್ ತಾಳಗುಪ್ಪೆಯೆ ಶೀಮೆ ಹಿರೆಮನೆಯ
ಗ್ರಾಮದೊಳ್ನೆರತ ನೆಲಸಿರುವ ವಿಶ್ವೇಶನಡಿದಾವರೆಯಭಕತನಾಗಿ॥ ॥೨॥

ಭೂವರರೊಳಿಂತು ದೇವಾಖ್ಯನ ಕುಮಾರ ಲ
ಕ್ಷ್ಮೀವರನ ಕರುಣದಿಂ ನಾಗಾಂಕವೆಂಬವಂ
ಭಾವಶುದ್ಧಿಯೊಳು ಲಿಖಿಸಿಹನಿದರೊಳಂಗುಲಿಯದೋಷಮುಂಬಂದಿರ್ದೊಡೆ ||
ಆವಗಂ ಹಸಿವು ತೃಷೆ ನಿದ್ರೆಯಾಲಸ್ಯಮಂ
ಬೀ ವ್ಯಸನದಲ್ಲಿ ಬಿಂದು ವಿಸರ್ಗ ಬೀಳಿದಿರ್ದೊ
ಡಾವ ದೋಷಮುನರಿಯೆ ಬಾಲತನದಿಂ ಯಥಾಲಿಖಿಯವೊಲ್ ಬರೆದನಿದನು|| ||೩||

ತಪ್ಪಿ ಬರದಿಹನೆಂದು ವಪ್ಪಿ ಬಯ್ಯಲಿಬೇಡ
ತಪ್ಪಲ್ಲದಾವುದುಂ ಶುದ್ಧಮೆನಿತಿದರೊಳಿಹ
ತಪ್ಪಿದಂಗುಲಿದೋಷಮುಂ ತಿದ್ದಿವುದುಪರ ಚರಣತಾನತನಪ್ಪೆನೂ ||
ವಪ್ಪಿ ಕವಿಮಾಡಿಹ ಕೃತಿಯು ಲಿಖಿಸುವಲ್ಲಿ ಕೈ
ತಪ್ಪಾಗಿ ಬರೆದ ಬಾಲನ ದೋಷವೇನಿರ್ದ
ಡರ್ಪಿಸಿದೆ ಕಂನಡಕ್ಕರದಿ ಲೇಖಿಶಿ ಸದಾಶಿವಚರಣಯುಗ್ಮಗಳಿಗೆ || ||೪||

ಮಂಗಳಂ ವಾಸುಕಿ ವಿಭೂಷಂಗೆ ಈಶಂಗೆ
ಮಂಗಳಂ ಭವರಹಿತ ರುದ್ರಂಗೆ ಭದ್ರಂಗೆ
ಮಂಗಳಂ ವಿಘ್ನೇಶ ತಾತಂಗೆ ನಾಥಂಗೆ ಮಂಗಳಂ ಮದನಾರಿಗೆ ||
ಮಂಗಳಂ ನಾಗರಿ[ಪು]ವಾಹನಗೆ ಮೋಹನಗೆ
ಮಂಗಳಂ ನಗಧರಗೆ ನಮಿತಜನಪಾಲನಿಗೆ
ಮಂಗಳಂ ಪಾಂಡವಸ್ಥಾಪನಾಚಾರ್ಯನಿಗೆ ಮದನಪಿತ ಗೋಪಾಲಗೆ || ||೫||

ಶ್ರೀ ಶ್ರೀ ಶ್ರೀ ಶ್ರೀ ಈ ಜೈಮಿನಿ ಪುಸ್ತಕವು ಸ್ವಸ್ತಿಶ್ರೀ ಜಯಾಭ್ಯುದಯ ಶಾಲಿವಾಹನ ಶಕವರ್ಷ ೧೭೦೧ನೆಯ ವಿಳಂಬಿ ಸಂವತ್ಸರದ ಕಾರ್ತಿಕ ಬ. ೮ಯು ಗುರುವಾರ ಬರದು ಸಂಪೂರ್ಣವಾಯಿತು ||ಶ್ರೀ||

ಕಂದ || ತಪ್ಪಂ ಬರದಂ ಕಡು ಜಡ
ನಪ್ಪಂ ತಾ ಬರದನೆಂದು ಬಯ್ಯಲ್ಬೇಡಂ
ತಪ್ಪುಕ್ಕು ಶುದ್ಧಮುಕ್ಕುಂ
ತಪ್ಪಾದಡೆ ತಿದ್ದಿಕೊಂಬುದು (ಉ)ತ್ತಮಪುರುಷರ್ ||

ಈ ಜೈಮಿನಿ ಪುಸ್ತಕಕ್ಕೆ ಆಚಂದ್ರಾರ್ಕ ಐಶ್ವರ್ಯಾಭಿವೃದ್ಧಿರಸ್ತು | ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ ||

**ವಿಶೇಷ** : ಈ ಪ್ರತಿಯಲ್ಲಿ ‘ಫ’ (K 1304) ದಂತೆ ೮ನೆಯ ಮತ್ತು ೯ನೆಯ ಸಂಧಿಗಳು ಕೂಡಿ ಒಂದಾಗಿವೆ. ಮತ್ತು ನಾಂದಿ ಪದ್ಯಗಳಿಗೆ ಸಂಧಿ ಎಂದು ಎನ್ನದೆ ಇರುವುದರಿಂದ ಒಟ್ಟು ಸಂಧಿಗಳು ೩೨ ಆಗಿವೆ. ೨೬ನೆಯ ಸಂಧಿಯು ೨೪, ೨೫, ಮತ್ತು ೪೬ನೆಯ ಪದ್ಯಗಳು ಪ್ರಚಲಿತ ಪ್ರತಿಗಳಲ್ಲಿ ಇಲ್ಲದ ಹೊಸ ಪದ್ಯಗಳಾಗಿವೆ.

ಈ > ಇ, ಸಿ > ಶಿ, ಸುಯ್ದು > ಸ್ಯುದು, ಳೊಯಿದು > ಳ್ಯೊದು, ಶ್ಚ > ಶತ, ಳ್ಳ > ಳ್ಲ, ಷ್ಣ > ಷ್ಟಣ ಹೀಗೆ ಬರೆಯುವುದು ಲಿಪಿಕಾರನ ಸಾಮಾನ್ಯ ರೂಢಿಯಾಗಿದೆ. ಏ, ಓ (ಕೇ, ಕೋ ಇತ್ಯಾದಿ)ಗಳ ದೀರ್ಘತೆ ಈ ಬರೆಹದಲ್ಲಿ ಅನಿಶ್ಚಿತ. ಈಕಾರದ ದೀರ್ಘತೆ ಮಾತ್ರ ನಿಶ್ಚಿತ.

೭. 'ಜ' ಪ್ರತಿ : (KRI) K 1261 ಪ್ರತಿ

**ಪದಾರ್ಥ** : ತಾಡಪತ್ರ. **ಆಕಾರ** : ೧೪"×೨.೩". **ಗರಿ** : ೧೨೪.

**ಸಾಲು** : ಪ್ರತಿ ಗರಿಗೆ ೧೦–೧೪. **ಲಿಪಿ** : ಕನ್ನಡ.

**ಸ್ಥಿತಿ** : ಉತ್ತಮ. ೨೭, ೨೮, ೨೯ನೆಯ ಗರಿಗಳು ಬಲಗಡೆ ೨"×೩" ನಷ್ಟು ೨೫, ೨೬ನೆಯ ಗರಿಗಳು ಬಲಗಡೆ ಮೇಲ್ಗಡೆ ೩–೪ ಸಾಲುಗಳಷ್ಟು ಮುರಿದಿವೆ. ಗರಿ ೧೦೨ರಿಂದ ೧೨೪ರ ವರೆಗೆ ಎಡಗಡೆ ಮಾರ್ಜಿನ್ ಹತ್ತಿರ ೧" ನಷ್ಟು ಅರ್ಧ ಚಂದ್ರಾಕಾರದಲ್ಲಿ ಮುರಿದಿವೆ.

**ಕಾಲ** : ೭–೮–೧೭೮೩.

ಪ್ರಾರಂಭ : × ಪಿಘ್ನಮಸ್ತು । ಆಯುರಾರೋಗ್ಯ ಅೃಶ್ವರ್ಯಮಸ್ತು । ಶ್ರೀ ಶಾರದಾ ಗುರುಭ್ಯೋ ನಮಃ । ಶ್ರೀಮನ್ನ ಭಾರತದೊಳಗಣ ಜಯಮುನಿ ಬರವುದಕ್ಕೆ ನಿತ್ಯ ಮಂಗಲ್ಯಮಸ್ತು । ಶುಭಮಸ್ತು ‖ ನಾಂದಿ ಸಂಧಿ ಪ್ರಾರಂಭ ‖

ಶ್ರೀವಧುವಿನಂಬಕ ಚಕೋರಕಂ ಪೊರೆಯೆ ಭ
ಕ್ತಾವಳಿಯ ಹೃತ್ಕುಮುದ ಕೋರಕಂ ಬಿರಿಯೆ ಜಗ
ತೀವಲಯದಮಲ ಸೌಭಾಗ್ಯಾರತ್ನಾಕರಂಪೆರ್ಚಿನಿಂ ಮೆರುವರಿಯೆ ॥
ಆವಗಂ ಸರಸ ಕರುಣಾಮೃತದ ಕಲೆಗಳಿಂ
ತೀವಿದೆಳೆನಗೆಯ ಬೆಳ್ದಿಂಗಳಿಂ ಪಸರಿಸುವ
ದೇವಪುರನಿಳಯ ಲಕ್ಷ್ಮೀರಮಣನಾಸ್ಯಚಂದ್ರಾನಂದಮಂ ನಮಗಿಯ್ಕುಲಿ ‖ ೧ ‖

**ಮುಕ್ತಾಯ** : ಅಂತು ಸಂಧಿ ೩೩ಕ್ಕಂ ಪದನೂ ೧೯೯೯ಕ್ಕೆ ಮಂಗಳಂ ಶ್ರೀ ಶ್ರೀ ಶ್ರೀ ಶ್ರೀ‖ ಶೋಭಾನು ಸಂವತ್ಸರದ ಶ್ರಾವಣ ಶು ೯ ಯು ಗುರುವಾರ ಸೂರ್ಯೋದಯವಾದ ತಾಸು ೨ವರಿಗೆ ಜಯಾಮುನಿ ಪುಸ್ತಕವನ್ನು ಬರದು ಸಂಪೂರ್ನ ಮುಗಿಯಿತ್ತು। ಶ್ರೀ ಶಾರದಾಂಬಿಕೆಯಮ್ಮನವರ ದಿವ್ಯ ಶ್ರೀ ಚರಣಾರವಿಂದವೆ ಗತಿ। ನಿರ್ವಿಘ್ನಮಸ್ತು। ಶುಭಮಸ್ತು। ಆಯುರಾರೋಗ್ಯ ಅೃಶ್ವರ್ಯಮಸ್ತು। ವಂಶಪರಂಪರೆ ಅಭಿವೃದ್ಧಿರಸ್ತು।

ಶ್ಲೋಕ‖ ಯದೃಶಂ ಪುಸ್ತಕಂ ದೃಷ್ಟ್ವಾ ತದೃಶಂ ಲಿಖಿತಂ ಮಯಾ।
ಅಬದ್ಧಾಯಾ ಸುಬದ್ಧಾಯಾ ಮಮದೋಷ ನ ವಿದ್ಯತೆ ॥

[ಕಂದ] ತಪ್ಪ ಬರದಾತಂ ಕಂಡು ಜಡ
ವಪ್ಪಾತಂ ಬರೆದಾತನೆಂದು ಬಯ್ಯಲು ಬೇಡಂ
ತಪ್ಪಕ್ಕು ಶುದ್ಧಮಕ್ಕು
ತಪ್ಪಂ ತಿದ್ದಿ ಬರದೋದುವುದು ಉತ್ತಮಪುರುಷರು ‖

ಜನಿತಾ ಚ ಉಪಕರ್ತಾಚ ಯಸ್ಯ ವಿದ್ಯಾ ಪ್ರಕಿರ್ತಥಾ।
ಅನ್ನದಾತಾ ಭವದಾರ್ತಾ। ಪಂಚತೇ। ಪಿತುರಸ್ತಥಾ ‖
ರಾಜಪತ್ನಿ ಗುರೂ ಪತ್ನಿ ಭಾತೃ ತಥೋ ವಚಃ
ಪತ್ನಿ ಮಾತಾ ಸ್ವಯಂ ಪಂಚತೇ ಮಾತರಸ್ಥಥಾ ‖

**ವಿಶೇಷ** : ಈ ಪ್ರತಿಯಲ್ಲಿ ಘ (1304) ಮತ್ತು 'ಥ' (ಬಿಳಿಗಿ) ಪ್ರತಿಗಳಲ್ಲಿಯಂತೆ ೮–೯ ಸಂಧಿಗಳು ಕೂಡಿ ಒಂದೇ ಸಂಧಿಯಾಗಿದೆ. 'ಘ' ಪ್ರತಿಯಲ್ಲಿದ್ದ ೧೫ ಪದ್ಯಗಳ ಪೈಕಿ ೧೩ ಪದ್ಯಗಳು ಇಲ್ಲಿಯೂ ಕಾಣುತ್ತವೆ.

ಪ್ರತಿ ಸಂಧಿ ಪ್ರಾರಂಭವಾಗುವ ಗರಿಯ ಎಡ ಮಾರ್ಜಿನಿನಲ್ಲಿ 'ಕುದುರೆಯು ಹಸ್ತಿನಾವತಿಗೆ ತಂದ ಸಂಧಿ, ಉರುಷಕೇತುವಿಗೆ ಸುಧಂನ್ವಗೆ ಲಢಾಯವಾದ ಸಂಧಿ, ಕುದುರೆ ಚಂದ್ರಹಾಸನ ಪಟ್ಟಣಕ್ಕೆ ಹೋದ ಸಂಧಿ, ಬಕದಾಲ್ಭ್ಯ ಮುನಿಯು ಕಂಡ ಸಂಧಿ....'ಇತ್ಯಾದಿಯಾಗಿ ಸಂಧಿಯ ಕಥಾವಿಷಯವನ್ನು ಸೂಚಿಸಲಾಗಿದೆ.

ವ್ಯಂಜನ ವುಕಾರಕ್ಕೆ ಸ್ವರ ಉಕಾರವನ್ನು ಬರೆಯುವುದು ಈ ಪ್ರತಿಕಾರನ ರೂಢಿ.

**೮ 'ಝ' ಪ್ರತಿ :** K.A. 225 (O.R.I. Mys.)

**ಪದಾರ್ಥ** : ಕಾಗದ. **ಆಕಾರ** : ೧'–೫"×೮". **ಪುಟ** : ೩೫೩.
**ಸಾಲು** : ಪ್ರತಿ ಪುಟಕ್ಕೆ ೩೦–೩೩. **ಅಕ್ಷರ** : ಪ್ರತಿ ಸಾಲಿಗೆ ಸು. ೨೦.
**ಲಿಪಿ** : ಕನ್ನಡ (ಮಂಗಳೂರ ಕಲ್ಲಚ್ಚು) **ಸ್ಥಿತಿ** : ಉತ್ತಮ
**ಕಾಲ** : ಕ್ರಿ.ಶ. ೧೮೪೮.

**ಪ್ರಾರಂಭ** : ಜೈಮಿನಿ ಭಾರತವು ಸಂಧಿ_೧
ಶ್ರೀವಧುವಿನಂಬಕ ಚಕೋರಕಂ ಪೊರೆಯೆ ಭಕ
ತಾವಳಿಯ ಹೃತ್ಕುಮುದಕೋರಕಂ ಬಿರಿಯೆ ಜಗ
ತೀವಲಯುದಮಲ ಸೌಭಾಗ್ಯ ರತ್ನಾಕರಂ ಪೆರ್ಚಿನಿಂ ಮೇರೆವರಿಯೆ ||
ಆವಗಂ ಸರಸ ಕರುಣಾಮೃತದ ಕಲೆಗಳಿಂ
ತೀವಿದೆಳೆನಗೆಯ ಬೆಳೆದಿಂಗಳಂ ಪಸರಿಸುವ
ದೇವಪುರನಿಲಯ ಲಕ್ಷ್ಮೀರಮಣನಾಸ್ಯಚಂದ್ರಾನಂದಮಂ ನಮಗೀಯಲಿ || ೧ ||

**ಮುಕ್ತಾಯ** : ಧರಣಿಯೊಳ್ಜೈಮಿನಿ ಮುನೀಂದ್ರನತಿ ಪೆರ್ಮೆಯೊ
ಳ್ವರ ಮಹಾಭಾರತ ಕಥಾಮೃತಾಬ್ಧಿಯೊಳೊಪ್ಪ
ವರದಾಶ್ವಮೇಧಿಕದಪರ್ವಮಂ ಸುರಪುರದಲಕ್ಷ್ಮೀಶಕನ್ನಡದೊಳೂ ||
ವಿರಚಿಸಿದ ಕೃತಿಗೆ...ಟ್ಟರಣದಿಂ ಮಾಧರ್ಯ
ಸರಸಪದ ಬಂಧಗಳ್ಗೆಣೆಸಲ್ಕೆ ಶರಧಿಯಂ
ಬರನಿಧಿ ಶಶಾಂಕ ಸೌಜ್ಞೆಗಳೈದೆನಿದುನೊಲಿದು ಭಾವಿಪುದು
ಸರ್ವಜನರು ||೪೭||

ಚತುತ್ರಿಂಶ ಸಂಧಿ ಸಂಪೂರ್ಣಂ | ಅಂತು ಸಂಧಿ ೩೪ಕ್ಕಂ ಪದ್ಯಂ ೧೯೦೭ಕ್ಕಂ ಮಂಗಳಂ ಶ್ರೀ ಶ್ರೀ ಶ್ರೀ ಶ್ರೀ ||

**ವಿಶೇಷ** : ಋಷಿ>ರುಷಿ, ಟ್ಟ>ಟ್ಯ, ಗೊಯ್ದು>ಗ್ಯೊದು ಇತ್ಯಾದಿ ಬರೆಯುತ್ತಾನೆ. ವ್ಯಂಜನ ಳ್, ಲ್ ಬರೆಯುವುದು ವಿರಳ. ಉಕಾರ ಸಹಿತವಾದ ಳು, ಲು ಎಂದು ಬರೆಯುವುದೇ ಹೆಚ್ಚು. 'ಳ' ಸ್ಥಾನದಲ್ಲಿ ಹೆಚ್ಚಾಗಿ 'ಲ'

ಉಪಯೋಗಿಸುತ್ತಾನೆ. ಇದು ಹೆಚ್ಚಾಗಿ 'ತ' ಪ್ರತಿಯನ್ನು ಅನುಸರಿಸಿರುವುದು.

ಈ ಪ್ರತಿಯಲ್ಲಿ ಹಲವೆಡೆಗಳಲ್ಲಿ ಬೇರೆ ಬೇರೆ ಪಾಠಾಂತರಗಳನ್ನು ಕೊಡಲಾಗಿದೆ. ಇದರ ಮೇಲಿಂದ ಇದು ಸಂಪಾದಿತ ಪ್ರತಿಯೆಂದು ತಿಳಿದುಬರುವುದು. ಬೇರೆ ಪ್ರತಿಗಳನ್ನು ನೋಡಿ ಗ್ರಾಹ್ಯ ಪಾಠಗಳನ್ನು ಮೂಲದಲ್ಲಿ ಬರೆದು ಪಾಠಾಂತರಗಳನ್ನು ಅದರ ಹತ್ತಿರವೇ [ ] ಹೀಗೆ ಕಂಸಿನಲ್ಲಿ ಕೊಟ್ಟಿದ್ದಾನೆ.

೯. **'ತ' ಪ್ರತಿ :** K 294 (ORI Mys.)

**ಪದಾರ್ಥ** : ತಾಡಪತ್ರ. **ಆಕಾರ** : ೯"×೨-೨". **ಗರಿ** : ೧೮೦.
**ಸಾಲು** : ಪ್ರತಿ ಗರಿಗೆ ಸು. ೧೨. **ಅಕ್ಷರ** : ಪ್ರತಿಸಾಲಿಗೆ ಸುಮಾರು ೪೮.
**ಕಾಲ** : ನಿರ್ದೇಶವಿಲ್ಲ. (ಸು. ಕ್ರಿ.ಶ. ೧೭೮೩?). **ಲಿಪಿ** : ಕನ್ನಡ.
**ಸ್ಥಿತಿ** : ಉತ್ತಮ.

**ಪ್ರಾರಂಭ** : ಶುಭಮಸ್ತು । ಶ್ರೀರಾಮುಸಹಾಯ ॥ ಜೈಮಿನಿ ಭಾರತವನ್ನು ಬರೆಯುವದಕ್ಕೆ ನಿರ್ವಿಘ್ನಮಸ್ತು ॥ ಪಿಠಿಕೆ ॥

ಶ್ರೀವಧುವಿನಂಬಕ ಚಕೋರಕಂ ಪೊರೆಯೆ ಭ
ಕ್ತಾವಳಿಯ ಹೃತ್ಕುಮುದಕೋರಕಂ ಬಿರಿಯೆ ಜಗ
ತೀವಲಯದಮಲ ಸೌಭಾಗ್ಯ ರತ್ನಾಕರಂ ಪೆರ್ಚನಿಂ ಮೇರೆವರಿಯೆ ॥
ಆವಗಂ ಸರಸಕರುಣಾಮೃತದ ಕಲೆಗಳಿಂ
ತೀವಿದೆಳೆನಗೆಯ ಬೆಳದಿಂಗಳಂ ಪಸರಿಸುವ
ದೇವಪುರನಿಲಯ ಲಕ್ಷ್ಮೀರಮಣನಾಸ್ಯಚಂದ್ರಾನಂದಮಂನಮಗೀಯಲಿ ॥೧॥

**ಮುಕ್ತಾಯ** : ಚತುಸ್ತ್ರಿಂಶತ್ಸಂಧಿ ಸಂಪೂರ್ಣ॥ ಅಂತುಸಂಧಿ ೩೪ಕ್ಕೆ ಪದ್ಯ ೧೯೦೭ಕ್ಕೆ ಮಂಗಳಮಸ್ತು ॥ ಜೈಮಿನಿಭಾರತ ಮುಗಿದುದು ॥ ಶ್ರೀರಾಮುಚಂದ್ರ ಸಹಾಯ ನಮಃ ॥ ಶ್ರೀಕೃಷ್ಣಸಹಾಯದಿಂದ ನಡಸಲ್ಪಟ್ಟಿರುತ್ತೆ ಈ ಕಥೆ.

**ವಿಶೇಷ** : ರೇಫ ಸಂಯುಕ್ತಾಕ್ಷರಕ್ಕೆ ಅರ್ಕಾವಳಿ ಚಿಹ್ನವನ್ನು [ ೯ ] ಬಳಸದೆ ಒತ್ತಕ್ಷರವಾಗಿ ಬರೆಯುವುದು ವೈಶಿಷ್ಟ್ಯ. ಉದಾ: ಯರ್ > ರ‍್ಯ, ಬರ್ > ರ‍್ಬ, ವರ್ > ರ‍್ವ ಇತ್ಯಾದಿ. ಅನುನಾಸಿಕ ದ್ವಿತ್ವಕ್ಕೆ ಬಿಂದುವನ್ನು ಬಳಸುವುದಿಲ್ಲ. ಉದಾ: ತಂದ, ನಿಂದ, ದಂಣ, ತಂಮ ಎಂದು ಬರೆಯದೆ ತನ್ನ, ನಿನ್ನ, ದಣ್ಣ, ತಮ್ಮ ಎಂದು ಬರೆದುದನ್ನು ಕಾಣುತ್ತೇವೆ. ಒಳ್ ಸಪ್ತಮೀ ವಿಭಕ್ತಿ ಪ್ರತ್ಯಯವು ಓಳ್ ಆಗಿದೆ.

೧೦ **'ಥ' ಪ್ರತಿ** (K.R.I. DWR) K. 344

**ಪದಾರ್ಥ** : ತಾಡಪತ್ರ. **ಆಕಾರ** : ೨೦.೫"×೨.೩", **ಗರಿ** : ೧೦೧.
**ಸಾಲು** : ಪ್ರತಿಗರಿಗೆ ೭-೯. **ಲಿಪಿ** : ಕನ್ನಡ. **ಸ್ಥಿತಿ** : ಉತ್ತಮ.
**ಕಾಲ** : ಕ್ರಿ.ಶ. ೧೮೫೧.

**ಪ್ರಾರಂಭ :** ಶ್ರೀಗುರುಪ್ರಸಂನ್ನಾ। ಶಖ ೧೭೭೨ ನೆಯ ಸಾಧಾರಣ ಸಂವತ್ಸರದ ಆಷಾಢಬಹುಳ ೫ ಭಾರ್ಗವಾರ ದಿವಸ ಜೈಮುನಿ ಪ್ರಬಂಧ ಬರವದಕ್ಕೆ ಪ್ರಾರಂಭ ಮಾಡಿದ್ದು। ಶುಭಮಸ್ತು। ಶೋಭನಮಸ್ತು। ಗ್ರಂಥ॥ ಗುರುದೇವೋ ಮಹಾ ದೇವೋ ಗುರುದೇವೋ ಸದಾಶಿವಾಃ॥ ಗುರುದೇವೋ ಪರಂ ನಾಸ್ತಿ ತಸ್ಮೈ ಶ್ರೀ ಗುರುವೇ ನಮಃ॥ ವಾರ್ಧಿಕ ಷಟ್ಪದಿ ಕುರಂಗ ವೃತ್ತ। ರಾಗ ಭೈರವಿ।

ಸೂಚನೆ॥

ಶ್ರೀವಧುವಿನಂಬಕ ಚಕೋರಕಂ ಪೊರೆಯೆ ಭ
ಕ್ತಾವಳಿಯ ಹೃತ್ಕುಮುದ ಕೋರಕಂ ಬಿರಿಯೆಜಗ
ತೀವಲಯದಮಲ ಸೌಭಾಗ್ಯರತ್ನಾಕರಂ ಪೆರ್ಚಿನಿಂ ಮ್ಯಾರೆವರಿಯೆ॥
ಆವಗಂ ಸರಸಕರುಣಾಮೃತದ ಕಲೆಗಳಿಂ
ತೀವಿದ್ಯಳಿನಗೆಯ ಬೆಳ್ದಿಂಗಳಿಂ ಪಸರಿಸುವ
ದೇವಪುರ ಲಕ್ಷ್ಮೀರಮಣನಾಸ್ಯ ಚಂದ್ರನಾನಂದಮಂ ನಮಗಿಯ್ಯಲಿ॥ ॥೧॥

**ಮುಕ್ತಾಯ :** ಅಂತು ಸಂಧಿ ೩೪ಕ್ಕಂ ಪದನು ೧೯೨೦ ಕ್ಕಂ ಮಂಗಳಮಹಾ ಶ್ರೀ ಶ್ರೀ ಶ್ರೀ ಶ್ರೀ॥ ಶ್ರೀಮದಮರಕಿರೀಟ ರತ್ನಪ್ರಭಾಪುಂಜ ರಂಜಿತ ಪಾದಾರ ವಿಂದ ವೈಭವ ಶ್ರೀಯುತ ಹರಿತಕಿ ಪರವರಾಧೀಶ್ವರ ಗೋಪಿನಾಥ ಚರಣಾರುಣ ಪಾದಪಂಕೇರುಹ ಮತ್ತು ಮಧುಕರಾಯಮಾನ ಶ್ರೀಮದನುಪಮಸದಾನಂದ ಯೋಗೀಂದ್ರ ನಿತ್ಯಾತ್ಮವಿರಚಿತಮಪ್ಪ ಶ್ರೀಮದ್ಭಾಗವತ ಮಹಾಪುರಾಣದೊಳ್ ಶ್ರೀಕೃಷ್ಣಲೀಲಾವತಾರಾಮೃತಂಭೊನಿಧಿ ॥೧॥

ಶ್ರೀಮತ್ಸಚ್ಚಿದಾನಂದ ನಿತ್ಯಪರಿಪೂರ್ಣ ಅವಿರಳ ಪರಂಜ್ಯೋತಿಸ್ವರೂಪಗಳಾದಂತ ಕಡಲೆ ಇಟ್ಟಿಗಿ ಮಠದ ಗುರಪ್ಪದೇವರ ಹೃದಯದಲ್ಲಿ ಉದ್ಭವ ಆದಂಥ ಮುರಿಗೆಯ್ಯನವರು ಮನೆಯೊಳಗೆ ಓದುಕೊಳಲಿಕೆ ಯಿರಬೇಕು ಅಂತ ಜೈಮುನಿ ಪುಸ್ತಕ ಬರದು ಇದ್ದೀತೆ ಶುಭಮಸ್ತು ಯಿಾ ಪುಸ್ತಕದೊಳಗೆ ಯೇನಾರೂ ಪ್ರಾಸಗಳು, ವ್ಯಂಜನಗಳು, ದೀರ್ಘಸ್ವರಗಳು, ಗುಡುಸುಗಳು, ಹೊರಗುಡುಸುಗಳು, ಹಿಂಕೊಂಬು, ಮುಂಕೊಂಬು, ಮ್ಯಾಲೈತ, ತೆಳಗೈತ, ವೋತ ಔತ, ಸಂಧಿ, ಸ್ವರವು, ಅನುಸ್ವರವು, ವಿಸರ್ಗವು, ಏನಾರೂ ಅಡಿಬಿದ್ದರೆ ತಿದ್ದಿಕೊಂಡು ಸೂಜ್ಞಪುರುಷರು ಓದಬೇಕು. ಇದಕ್ಕೆ ಯೇನಾರೂ ದೂಷಣೆ ಯಿಡಬಾರದು. ಅರಿಯದ ಮರುಳು ಬರೆದ ಪುಸ್ತಕಾ॥

ಶ್ರೀ ಗುರುವೇ ನಮಸ್ತೆ ನಮಸ್ತೆ ನಮಸ್ತಭ್ಯೋಂ ನಮಃ। ಶ್ರೀ ಸ್ವಸ್ತಿಶ್ರೀ ಶಾಲಿವಾಹನ ಶಖ ೧೭೭೩ನೆಯ ವಿರೋಧಿಕೃನ್ನಾಮ ಸಂವತ್ಸರದ ಚೈತ್ರಕೃಷ್ಣ ಪಕ್ಷ ೪ ಮಂದವಾರ ಅನೋರಾಧ ನಕ್ಷತ್ರ ತಾಸು ೧೦ಕ್ಕೆ ಜೈಮುನಿ ಪ್ರಬಂಧ ಬರೆಯೋದು ಮುಗಿಯಿತು। ಸಮಾಪ್ತ। ಮಂಗಳಂ ಶುಭಮಸ್ತು।

**ವಿಶೇಷ :** ಕೆಲವೆಡೆಗಳಲ್ಲಿ ತೆ, ದೆ ಇತ್ಯಾದಿಗಳನ್ನು ತ್ಯ, ದ್ಯ ಮುಂತಾಗಿ ಬರೆದಿರುವುದು ಕಂಡುಬರುತ್ತದೆ. ದವು>ದೌ ಎಂದೂ, ಆ ಊಕಾರಗಳ ದೀರ್ಘತ್ವವನ್ನು ದೀರ್ಘ ಚಿಹ್ನ (ೀ) ದಿಂದಲೂ ಈ ಕಾರದ ದೀರ್ಘತ್ವವನ್ನು ಅಕ್ಷರದ ಮೇಲೆ ಚಂಡಿಕೆಯ ಚಿಹ್ನ

(೧) ದಿಂದಲೂ ತೋರಿಸುವುದುಂಟು. ಉದಾ : ಅೀ<ಆ, ಉೀ<ಊ, ಇೀ<ಈ.

ಪ್ರತಿ ಸಂಧಿಯ ಪ್ರಾರಂಭದ ಗರಿಯ ಎಡಮಾರ್ಜಿನಿನಲ್ಲಿ, ಭೀಮನು ಯುವ್ವನಾಶ್ವನ ಗೆದ್ದು ಕುದುರೆ ತಂದ ಸಂಧಿ, ಕೃಷ್ಣನ ಕರವುದಕ್ಕೆ ಭೀಮನು ದ್ವಾರಕಿಗೆ ಬಂದ ಸಂಧಿ, ಸುಧನ್ವಂಗೆ ಮುಕ್ತಿ ಸಂಧಿ, ಅರ್ಜುನ ವೃಷಧ್ವಜರ ಬಭ್ರುವಾಹನ ಕೊಂದ ಸಂಧಿ, ಧರ್ಮರಾಯನ ಅಶ್ವಮೇಧ ಯಜ್ಞದ ವಿಸ್ತಾರದ ಸಂಧಿ ಇತ್ಯಾದಿ ಕಥಾ ಸೂಚನೆ ಇದೆ.

'ದ' (ಧಾರವಾಡ ಕಲ್ಲಚ್ಚು) ಪ್ರತಿಯಲ್ಲಿ ಸಂಧಿ ೩೪ರಲ್ಲಿದು ೩೯ ರಿಂದ ೪೨ ರ ವರೆಗಿನ ೪ ಹೊಸ ಪದ್ಯಗಳು ಈ ಪ್ರತಿಯಲ್ಲೂ ಸಿಕ್ಕುತ್ತವೆ. ಸಂಧಿ ೧ ರಿಂದ ೨೬ರ ವರೆಗೆ ಪ್ರತಿ ಸಂಧಿಗೆ ಮತ್ತು ಸಂಧಿ ೩೨-೩೩ಗಳಿಗೆ ಆರಂಭದಲ್ಲಿ ರಾಗಸೂಚನೆ ಕೊಡಲಾಗಿದೆ.

ಸಂಧಿ ೧೮ ರಲ್ಲಿ ೪೪ನೆಯ ಪದ್ಯವೊಂದು ಹೊಸದಾಗಿದೆ.

**೧೧. 'ದ' ಪ್ರತಿ** ಧಾರವಾಡಕಲ್ಲಚ್ಚು

**ಪದಾರ್ಥ** : ಕಾಗದ. **ಆಕಾರ** : "೮ × ೬" **ಪುಟ** : ೨೮೪

**ಸಾಲು** : ಪ್ರತಿ ಪುಟಕ್ಕೆ ೧೩ ಸಾಲು **ಅಕ್ಷರ** : ಪ್ರತಿ ಸಾಲಿಗೆ ೨೭-೩೦.

**ಸ್ಥಿತಿ** : ಉತ್ತಮ **ಲಿಪಿ** : ಕನ್ನಡ **ಕಾಲ** : ೧೨-೭-೧೮೬೦.

ಪ್ರಾರಂಭ : ಶ್ರೀಗುರುಭ್ಯೋನಮಃ। ಶ್ರೀ ವಿರೂಪಾಕ್ಷಾಯ ನಮಃ। ಶ್ರೀ ಗಣೇಶಾಯ ನಮಃ। ಜಯಮುನಿ ಪುಸ್ತಕ ಬರೆಯುವದಕ್ಕೆ ಶುಭಮಸ್ತು। ಶೋಭನಮಸ್ತು। ಆಯುರಾರೋಗ್ಯ ಐಶ್ವರ್ಯಮಸ್ತು ॥ ನಿರ್ವಿಘ್ನಮಸ್ತು ॥ ಶ್ರೀರಸ್ತು ॥ ವಾರ್ಧಿಕ ಷಟ್ಪದಿ ॥

ಶ್ರೀವಧುವಿನಂಬಕ ಚಕೋರಕಂ ಪೊರೆಯೆ ಭ
ಕ್ತಾವಳಿಯ ಹೃತ್ಕುಮುದ ಕೋರಕಂ ಬಿರಿಯೆ ಜಗ
ತೀವಲಯುದಮಲ ಸೌಭಾಗ್ಯರತ್ನಾಕರಂ ಪೆರ್ಚನಿಂ ಮೇರೆವರಿಯೆ ॥
ಆವಗಂ ಸರಸ ಕರುಣಾಮೃತದ ಕಲೆಗಳಿಂ
ತೀವಿದೆಳೆನಗೆಯ ಬೆಳ್ದಿಂಗಳಿಂ ಪಸರಿಸುವ
ದೇವಪುರ ನಿಳಯ ಲಕ್ಷ್ಮೀರಮಣನಾಸ್ಯಚಂದ್ರಾನಂದ ನಮಗಿಯಲಿ ॥

**ಮುಕ್ತಾಯ** : ಮಂಗಳಂ ಭಗವಾನ್ ವಿಷ್ಣು। ಮಂಗಳಂ ಮಧುಸೂದನಾ। ಮಂಗಳಂ ಪುಂಡರೀಕಾಕ್ಷ। ಮಂಗಳಂ ಗರುಡಧ್ವಜಾ ॥೧॥ ಅಂತು ಸಂಧಿ ೩೩ಕ್ಕೆ ಪದನೂ ೧೯೩ಚಕ್ಕಂ ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ॥ ಯಾದೃಶಂ ಪುಸ್ತಕಂ ದೃಷ್ಟ್ವಾ। ತಾದೃಶಂ ಲಿಖಿತಂ ಮಯಾ। ಅಬದ್ಧೋ ವಾ ಸುಬದ್ಧೋ ವಾ ಮಮ ದೋಷ ನ ವಿದ್ಯತೇ ॥ ೧ ॥ ತಪ್ಪಂ ಬರದಾತನಂ ಕಡು ಜಡ। ನಪ್ಪಾತನೆಂದು ಬಯ್ಯಲ್ ಬ್ಯಾಡಂ ॥ ೧ ॥ ತಪ್ಪಕ್ಕು ಶುದ್ಧಮಕ್ಕು। ತಪ್ಪಿಲ್ಲಡೆ ತಿದ್ದಿ ಕೊಂಬುದು ಉತ್ತಮ ಪುರುಷರು ॥ ೨ ॥ ಭಾಮಿನಿ ॥ ಗುಡಿಸು ಸೂದೀರ್ಘವು

ವೋತ್ಪ ವೌತ್ಪವು ಕೊಡುವ ತೆರದಿಂ ಹೆಚ್ಚು ಕುಂದನು ತೊಡಹ ಪಂಙ್ತಿ ಭ್ರಮಣ ಬೀಳಕ್ಷರ ತಪ್ಪುಗಳಾ ॥ ಹಿಡಿದು ನಾಚಿಸಲಾಗದೆಂನಯ ನುಡಿಯ ತಪ್ಪನು ತಿದ್ದಿ ಮೆರವುದು ಪೊಡವಿಯೊಳಗುತ್ತಮ ಪುರುಷರ್ಗಿದುವೆ ಗುಣವೆಂದಾ ॥ ೧ ॥ ಶ್ರೀಮನ್ ನೃಪ ಶಾಲಿವಾಹನ ಶಕೆ ೧೭೮೨ ರೌದ್ರಿ ನಾಮ ಸಂವತ್ಸರ ಆಷಾಢ ಬ. ೯ ಗುರುವಾರ ತಾರೀಖು ೧೨ ಮಾಹೆ ಜುಲೈ ಸನ್ ೧೮೬೦ ಇಸವಿಗೆ ಸಮಾಪ್ತ. ಯಿಾ ಪುಸ್ತಕವು ಧಾರವಾಡದಲ್ಲಿ ಗೋವಿಂದ ಪ್ರಭಾಕರ ಜೊಯಿಸಿ ಇವರು ತಮ್ಮ ಸನ್ಮಾರ್ಗದರ್ಶ ಕಲ್ಛಾಪಖಾನೆಯಲ್ಲಿ ಛಾಪಿಸಿದರು. ಹಸ್ತಾಕ್ಷರ ವಿಭೂತಿ ಸಂಗಪಯ್ಯನವರ ಹುಚ್ಚಯ್ಯನದು ಅದೆ.

**ವಿಶೇಷ:** ಪುಸ್ತಕದ ಪ್ರಾರಂಭದ ಪುಟದಲ್ಲಿ ಋಷಿಯು ಕಾವ್ಯವನ್ನು ಹೇಳುತ್ತಿರುವಂತೆ ಒಂದು ಚಿತ್ರವಿದೆ.

ಕೃಷ್ಣ>ಕೃಷ್ಟಣ, ಳ್ಳ>ಲ್ಲ, ಜ್ಞ>ಗ್ನ ಹೀಗೆ ಬರೆಯುತ್ತಾನೆ. ವ್ಯಾಲೆ, ಬ್ಯಾಡ ಇಂತಹ ಆಡುಮಾತಿನ ಪ್ರಯೋಗಗಳಿವೆ. ಪ್ರತಿ ಸಂಧಿಗೂ ರಾಗಸೂಚನೆ ಯಿದೆ. ಸಂಧಿ ೩೪ರ ಪದ್ಯ ೩೯ ರಿಂದ ೪೨ರ ವರೆಗಿನ ೪ ಪದ್ಯಗಳು ಹೊಸವಾಗಿವೆ.

ಈ ೧೧ ಪ್ರತಿಗಳನ್ನೂ ಇನ್ನುಳಿದ ಎಲ್ಲ ಪ್ರತಿಗಳನ್ನೂ ಸ್ಥೂಲವಾಗಿ ನೋಡಿದರೆ ಈ ಕೆಲವು ಅಂಶಗಳು ಕಂಡುಬರುತ್ತವೆ:

## ೧. ಕಾವ್ಯದ ಪ್ರಾರಂಭ

ಕವಿಯ ಆರಾಧ್ಯದೈವತವಾದ ಲಕ್ಷ್ಮೀರಮಣನ ಸ್ತುತಿಯ 'ಶ್ರೀ ವಧುವಿನಂಬಕ' ಎಂಬ ಪದ್ಯದಿಂದ ಕಾವ್ಯವನ್ನು ಆರಂಭಿಸುವ ಪ್ರತಿಗಳು ಒಂದು ಗುಂಪಿಗೆ ಸೇರಿದರೆ, ಗಣಪತಿ ಸ್ತುತಿಯ 'ಪ್ರಸ್ತುತದೊಳೊಗೆದ' ಎಂಬ ಪದ್ಯದಿಂದ ಪ್ರಾರಂಭಿಸುವ ಪ್ರತಿಗಳು ಇನ್ನೊಂದು ಗುಂಪಿಗೆ ಸೇರುತ್ತವೆ. ಈ ಬಗೆಯ ಬದಲಾವಣೆಗೆ ಎರಡು ಕಾರಣಗಳಿದ್ದಿರಲು ಸಾಕು: ಕಾವ್ಯವು ವಿಘ್ನೇಶ್ವರನ ಸ್ತುತಿಯಿಂದ ಆರಂಭವಾಗಬೇಕು ಎಂಬ ಒಂದು ಸಾಂಪ್ರದಾಯಿಕ ತಿಳಿವಳಿಕೆ ಒಂದು ಕಾರಣ; ಬರೆದವನ ಅಥವಾ ಬರೆಸಿದವನ ಮತಭಿನ್ನತೆ ಇನ್ನೊಂದು ಕಾರಣ. ಏಕೆಂದರೆ, 'ಪ್ರಸ್ತುತದೊಳೊಗೆದ' ಪದ್ಯದಿಂದ ಆರಂಭವಾಗಿರುವ ಪ್ರತಿಗಳೆಲ್ಲವುಗಳಲ್ಲಿಯೂ 'ಪಾವನ ತುಲಾಭರಣಮುಂ' ಎಂಬ ಶಿವ ಸ್ತುತಿ ಪದ್ಯವು ಎರಡನೆಯದಾಗಿ ಬಂದಿದೆ. 'ಶ್ರೀವಧುವಿನಂಬಕ' ಎಂಬುದಕ್ಕೆ ೩ ನೆಯ ಸ್ಥಾನ. ಈ ಕ್ರಮವ್ಯತ್ಯಾಸ ಶೈವರ ಪ್ರತಿಗಳಲ್ಲಿಯೇ ಆದುದನ್ನು ಕಾಣುತ್ತೇವೆ. ಈ ಕ್ರಮ ವ್ಯತ್ಯಾಸಕ್ಕೆ—ಶಿವಸ್ತುತಿ ಮೊದಲು, ಕವಿಯ ಆರಾಧ್ಯದೈವತ (ವಿಷ್ಣು) ಸ್ತುತಿ ತರುವಾಯ ಬಂದಿರುವುದಕ್ಕೆ—ಲಿಪಿಕಾರನ ಅಥವಾ ಅವನ ಯಜಮಾನನ ಮತ ದೃಷ್ಟಿಯೆ ಕಾರಣವಾಗಿರಬಹುದೆ?

ಕನ್ನಡ ಕಾವ್ಯಗಳ **ಜಾಯಮಾನವನ್ನು** ಮನದಂದರೆ ಶ್ರೀಕಾರದಿಂದಲೇ ಕಾವ್ಯಾರಂಭವಾಗಬೇಕೆಂಬುದು ಕವಿಸಂಪ್ರದಾಯವಾಗಿತ್ತೆಂಬುದು ಕಂಡುಬರುವುದು.

ಮತ್ತು ಕವಿ ತನ್ನ ಇಷ್ಟದೇವತೆಗೆ, ತಾನು ಯಾರ ಕರುಣದಿಂದ ಕಾವ್ಯರಚನೆ ಮಾಡಿದನೋ ಆ ದೇವತೆಗೆ, ಪ್ರಾಶಸ್ತ್ಯ ಕೊಡುವುದು ಸಹಜ. ಅಂತೆಯೆ ಕನ್ನಡ ಜೈಮಿನಿ ಭಾರತದ ಬಹುಸಂಖ್ಯ ಹಸ್ತಪ್ರತಿಗಳಲ್ಲಿ 'ಶ್ರೀವಧುವಿನಂಬಕ' ಎಂಬುದೇ ಪ್ರಾರಂಭದ ಪದ್ಯವಾಗಿದೆ. ಗಣಪತಿ ಸ್ತುತಿ ಪದ್ಯವು ಮೊದಲನೆಯದಾಗಿರುವ ಪ್ರತಿಗಳು ಬೆರಳೆಣಿಕೆಗೂ ಪೂರೈಸದಷ್ಟು ಅಲ್ಪಸಂಖ್ಯೆಯಲ್ಲಿರುವುದು ಗಮನಾರ್ಹವಾಗಿದೆ. (K. 1304, K.1036, K. 39 ಮತ್ತು ಕ್ರಿ.ಶ. ೧೬೭೧ರ ಪ್ರತಿಯಲ್ಲಿ ಮಾತ್ರ ಹೀಗಿದೆ.) ಆದುದರಿಂದ ಶ್ರೀಕಾರ ಯುಕ್ತ ಇಷ್ಟದೇವತಾ ಸ್ತುತಿ, ಶಿವಸ್ತುತಿ, ಗಜಾನನಸ್ತುತಿ, ಶಾರದಾಸ್ತುತಿ—ಈ ಕ್ರಮವೆ ಕವಿ ಲಕ್ಷ್ಮೀಶನ ಮೂಲವೆಂದು ಗ್ರಹಿಸಬೇಕಾಗುತ್ತದೆ.

## ೨. ಪ್ರತಿಕಾರರು ಮಾಡಿರುವ ದೇವತಾ ನಮನ

ಪ್ರತಿಕಾರರು ತಮ್ಮ ಬರೆವಣಿಗೆಯನ್ನು ಆರಂಭಿಸುವಾಗ, ಮುಗಿಸುವಾಗ ತಮ್ಮ ತಮ್ಮ ಇಷ್ಟದೇವತೆಗಳಿಗೆ, ಪ್ರಿಯದೇವತೆಗಳಿಗೆ ನಮನ ಸಲ್ಲಿಸುವಲ್ಲಿಯೂ ಸಾಕಷ್ಟು ವೈವಿಧ್ಯವು ಈ ಜೈಮಿನಿ ಭಾರತದ ಪ್ರತಿಗಳಲ್ಲಿ ಕಂಡುಬರುತ್ತದೆ. ಈ ನಮನಗಳನ್ನು ಓದಿದಾಗ, ಹರಿಹರವಿಭೇದವನ್ನು ಮಾಡದ ಈ ಕಾವ್ಯವು ಹರಿಯ ಹಾಗೆಯೆ ಹರನ ಭಕ್ತ ಸಮುದಾಯಕ್ಕೆಲ್ಲ–ಬ್ರಾಹ್ಮಣರಿಗೆ ಮಾತ್ರವಲ್ಲ ವೀರಶೈವರಿಗೂ ಮೆಚ್ಚಿನದಾಗಿ, ಜಾತಿಮತಭೇದವಿಲ್ಲದೆ ಬರೆದುಕೊಂಡು, ಬರೆಸಿಕೊಂಡು ಎಲ್ಲರೂ ಅದನ್ನು ಓದುತ್ತಿದ್ದರೆಂಬುದು ವ್ಯಕ್ತವಾಗುತ್ತದೆ. ಆ ವಿವಿಧ ದೇವತಾ ನಮನಗಳಲ್ಲಿ ಕೆಲವನ್ನು ಉದಾಹರಣೆಗಾಗಿ ಎತ್ತಿ ತೋರಿಸಬಹುದು: ೧. ಶ್ರೀಗುರುದತ್ತಾತ್ರೇಯ ನಮಃ, ೨. ಶ್ರೀಗೋಪಾಲ ಕೃಷ್ಣಾಯ ನಮಃ, ೩. ಶ್ರೀಗುರು ಗಣಾದಿಪತಯೆ ನಮಃ, ೩. ಶ್ರೀ ಸಚ್ಚಿದಾನಂದಾತ್ಮ ಗುರುವೇ ನಮಃ, ೫. ಶ್ರೀಮನ್ಮಹಾವಿಷ್ಣುಮೂರ್ತಯೇ ನಮಃ, ೬. ಶ್ರೀಶಾರದಾಯೈ ನಮಃ, ೭. ಶ್ರೀ ಸರಸ್ವತ್ಯೈ ನಮಃ, ೮. ಶ್ರೀ ವೇದವ್ಯಾಸಾಯ ನಮಃ, ೯. ಶ್ರೀರಾಮ ಕೃಷ್ಣಾಯ ನಮಃ, ೧೦. ಶ್ರೀರಾಮಚಂದ್ರಾಯ ನಮಃ ಎಂದು ಕೆಲವು ಪ್ರತಿಗಳಲ್ಲಿ ಇದ್ದರೆ, ಇನ್ನು ಕೆಲವು ಪ್ರತಿಗಳಲ್ಲಿ ೧. ಶ್ರೀಗುರು ಬಸವಲಿಂಗಾಯ ನಮಃ, ೨ ಶ್ರೀಗುರು ಶಾಂತೇಶಾಯ ನಮಃ, ೩. ಶ್ರೀ ಗುರು ಬಸವಪ್ರಭು ನಿರಂಜನ ಬ್ರಹ್ಮಣೇ ನಮಃ, ೪. ಶ್ರೀಗುರು ಶಾಂತವೀರ ಪ್ರಸನ್ನ, ೫. ಉಳವಿ ಚೆನ್ನಬಸವೇಶ್ವರಾಯ ನಮಃ, ೬. ಸೌರಾಷ್ಟ್ರ ಸೋಮೇಶ್ವರಾಯ ನಮಃ, ೭. ಸಂಗಮೇಶ್ವರಾಯ ನಮಃ, ೮. ಶ್ರೀ ರೇವಣ ಸಿದ್ಧೇಶ್ವರಾಯ ನಮಃ ಹೀಗೆ ನಮನಗಳನ್ನು ಸಲ್ಲಿಸಲಾಗಿದೆ. ಅಲ್ಲದೆ, ೧. ಬಾಗಲೂರ ಚೂಡೇಶ್ವರಸ್ವಾಮಿ ಪಾದಾರವಿಂದವೇ ಗತಿ, ೨. ಧರ್ಮಸಾಗರದ ರಂಗನಾಥ ಸ್ವಾಮಿ ಪಾದಾರವಿಂದವೆ ಗತಿ, ೩. ಬಿದರಿಹಳ್ಳಿಯ ಅಶ್ವಥನಾರಾಯಣನ ಕರುಣ ಕಟಾಕ್ಷವೆ ಗತಿ, ೪. ಶ್ರೀರಾಮಪುರದ ಹನುಮಂತದೇವರ ಪಾದಾರವಿಂದವೆ ಗತಿ ಎಂಬುದಾಗಿ ಪ್ರತಿಕಾರರು ಅವರವರ ಊರಲ್ಲಿ ಪ್ರಸಿದ್ಧವಾಗಿದ್ದ ಹಾಗೂ ಶ್ರದ್ಧಾಪಾತ್ರ

ವಾಗಿದ್ದ ದೇವತೆಗಳನ್ನು ನೆನೆದಿರುವುದನ್ನೂ ಇವುಗಳಲ್ಲಿ ಕಾಣುತ್ತೇವೆ. ಇದು ಲಿಪಿಕಾರನ ಭಕ್ತಿಯನ್ನಲ್ಲದೆ ಸ್ವಗ್ರಾಮಾಭಿಮಾನವನ್ನೂ ಸೂಚಿಸುತ್ತದೆ.

## ೩. ಪ್ರತಿ ಸಂಧಿಗೆ ರಾಗಸೂಚನೆ

K. 303, K. 344ರಲ್ಲಿ ಮತ್ತು ಕ್ರಿ.ಶ. ೧೭೭೧ ಹಾಗೂ ೧೮೬೦ರ ಪ್ರತಿಗಳಲ್ಲಿ ಪ್ರತಿ ಸಂಧಿಯ ಪ್ರಾರಂಭಕ್ಕೆ ಆ ಸಂಧಿಯನ್ನು ಯಾವ ರಾಗದಲ್ಲಿ ಹಾಡಬೇಕು ಎಂಬ ಸೂಚನೆ ಕೊಟ್ಟಿದೆ. ಆದರೆ ಅವೆಲ್ಲವೂ ಒಂದೇ ರಾಗವನ್ನು ಹೇಳುವುದಿಲ್ಲ. ಈ ಮಾತು, ಲಕ್ಷ್ಮೀಶನ ಈ ಕಾವ್ಯವು ಸಂಗೀತಕಾರರ ಪ್ರಯೋಗಕ್ಕೊಳಪಟ್ಟು ಅವರಿಂದ ಮನ್ನಣೆ ಪಡೆದ ಗ್ರಂಥ, ಒಂದನ್ನೇ ಬೇರೆ ಬೇರೆ ರಾಗಗಳಲ್ಲಿ ರಸಪೋಷಣೆಯಾಗುವಂತೆ ಹಾಡಿಕೊಳ್ಳಬಹುದಾದಂಥ ಗ್ರಂಥ ಎಂಬುದಕ್ಕೆ ಸಾಕ್ಷಿ ಎನ್ನಬಹುದು. ಅಂದರೆ, ಅನೇಕ ಸಂಗೀತಕಾರರು ಜೈಮಿನಿ ಭಾರತವನ್ನು ಓದಿ, ಯಾವುದನ್ನು ಯಾವ ರಾಗದಲ್ಲಿ ಹಾಡಿದರೆ ಒಪ್ಪುತ್ತದೆ ಎಂಬುದನ್ನು ಗೊತ್ತುಪಡಿಸಿ ರಾಗಗಳನ್ನು ಸೂಚಿಸಿದ್ದಾರೆ ಎಂದು ತೋರುತ್ತದೆ. ಮೂರು ಪ್ರತಿಗಳಲ್ಲಿಯ ರಾಗವೈವಿಧ್ಯವನ್ನು ಈ ಕೆಳಗೆ ಕೊಟ್ಟಿದೆ.

| ಸಂಧಿ (೧) | ಕ್ರಿ.ಶ. ೧೭೭೧ರ ಪ್ರತಿ (೨) | K.344 (೩) | ಕ್ರಿ.ಶ. ೧೮೬೦ರ ಪ್ರತಿ (೪) |
|---|---|---|---|
| ೧ | ...... | ಭೈರವಿ | ...... |
| ೨ | ತೋಡಿ | ಶ್ರೀ | ವಸಂತ ಭೈರವಿ |
| ೩ | ಗೌಳ | ಸಾವೇರಿ | ಕಲ್ಯಾಣಿ |
| ೪ | ...... | ಧನಶ್ರೀ | ವಸಂತ ಭೈರವಿ |
| ೫ | ಸಾವೇರಿ | ಧನಶ್ರೀ | ಕಲ್ಯಾಣಿ |
| ೬ | ಕಾಂಬೋಧಿ | ಯರಕಲ ಕಾಂಬೋಧಿ | ಯರಕಲ ಕಾಂಬೋಧಿ |
| ೭ | ಕನ್ನಡ ಕಾಂಬೋಧಿ | ಶಂಕರಾಭರಣ | ಶ್ಯಾಮಕಲ್ಯಾಣಿ |
| ೮ | ಶಂಕರಾಭರಣ | ಕೇತಾರ ಗೌಳ | ಭೈರವಿ |
| ೯ | ಪೂರವಿ...... | ಕಲ್ಯಾಣಿ... | ದೇಶಿ |
| ೧೦ | ......... | ನಾಟಿ... | ಪೂರ್ವಿ |
| ೧೧ | ಮೋಹನ ಕಲ್ಯಾಣಿ | ಭೂಪಾಳಿ...... | ಕೇತಾರಗೌಳ |
| ೧೨ | ಕಲ್ಯಾಣಿ...... | ಸುರೀಟಿ...... | ರೇಗುಪ್ತಿ |
| ೧೩ | ಗೌಡಿ...... | ಭೋಪಾಳಿ...... | ಪುನಾಗತೋಡಿ |
| ೧೪ | ರೇಗುಪ್ತಿ...... | ಮೋಹನಕಲ್ಯಾಣಿ | ವರಾಳಿ |

| (೧) | (೨) | (೩) | (೪) |
|---|---|---|---|
| ೧೫ | ಎಡೆ | ಆನಂದ ಭೈರವಿ | ಬ್ಯಾಗಡ |
| ೧೬ | ಗೌಡಿ...... | ಕಾಂಬೋಧಿ...... | ದ್ವಿಜಾವಂತಿ |
| ೧೭ | ........ | ಆನಂದಭೈರವಿ | ಸಾವೇರಿ |
| ೧೮ | ........ | ರೇಗುಪ್ತಿ...... | ಕೇತಾರಗೌಳ |
| ೧೯ | ........ | ವಸಂತಭೈರವಿ... | ಕಾಂಬೋಧಿ |
| ೨೦ | ........ | ಸಾಳಂಗ | ಧನ್ಯಾಸಿ |
| ೨೧ | ........ | ಗುಂಡಕ್ರಿ...... | ಯರಕಲ ಕಾಂಬೋಧಿ |
| ೨೨ | ........ | ಗುಂಡಕ್ರಿ...... | ಭೈರವಿ |
| ೨೩ | ........ | ತೋಡಿ...... | ಕಲ್ಯಾಣಿ |
| ೨೪ | ........ | ಜೋಗ ಆಸವೇರಿ | ಪುನಾಗತೋಡಿ |
| ೨೫ | ಸಾರಂಗ...... | ಕುರಂಗ...... | ........ |
| ೨೬ | ........ | ಗುಂಡಕ್ರಿ...... | ಭೈರವಿ |
| ೨೭ | ........ | ........ | ಕಾಂಬೋಧಿ |
| ೨೮ | ........ | ........ | ದೇಶಿ |
| ೨೯ | ........ | ........ | ಮೋಹನಕಲ್ಯಾಣಿ |
| ೩೦ | ........ | ........ | ಪೂರ್ವಿ |
| ೩೧ | ........ | ........ | ಸಾವೇರಿ |
| ೩೨ | ........ | ಕುರಂಗ...... | ರೇಗುಪ್ತಿ |
| ೩೩ | ........ | ಕೊರವಂಜಿ...... | ಕಲ್ಯಾಣಿ |
| ೩೪ | ........ | ........ | ........ |

ಇಂದಿನ ಸಂಗೀತಕಾರರೂ ರಸಜ್ಞರೂ ಈ ರಾಗಗಳನ್ನು ಸಪ್ರಯೋಗವಾಗಿ ವಿಮರ್ಶಿಸಿ, ರಸಾಭಿವ್ಯಕ್ತಿಗೆ ತಕ್ಕುದಾದ ರಾಗವನ್ನು ನಿರ್ಧರಿಸಿದರೆ, ತಮಗೆ ಸರಿಕಂಡ ರಾಗವನ್ನು ಸೂಚಿಸಿದರೆ ಗಮಕಿಗಳಿಗೆ ಸಹಾಯವಾಗುವುದು. ಕಾವ್ಯವು ಇನ್ನೂ ಜನಪ್ರಿಯವಾಗಿ ಸಾಹಿತ್ಯ ಸಂಸ್ಕೃತಿ ಪ್ರಚಾರಕ್ಕೆ ಹೆಚ್ಚು ಅನುಕೂಲವಾಗುವುದು ಎಂಬುದರಲ್ಲಿ ಸಂದೇಹವಿಲ್ಲ.

## ೪. ಪ್ರತಿಕಾರರ ಜೀವನದೃಷ್ಟಿ ಮತ್ತು ಆದರ್ಶ

(i) ಮಯೂರಪುರದ ಜಾಯೇಂದ್ರ ದೇಸಾಯಿ ಟೀಕಾ ಪ್ರತಿಯಲ್ಲಿ,ಟೀಕೆಯ ಉದ್ದೇಶ

ವನ್ನು ಹೀಗೆ ತಿಳಿಸುತ್ತಾನೆ : 'ಶ್ರೀ ಬಾದಾಮಿ ಬನಶಂಕರಿಯ ಅನುಗ್ರಹದಿಂದ, **ಜಡಮತಿಯಾದವರು ಓದಿ ಕೇಳಿ ಬುದ್ಧಿವಂತರಾಗಲೆಂದು ಕೋವಿದರರಿತು ತಲೆದೂಗುವಂತೆ** ವಿಸ್ತರಿಸಿ' ಲೋಕಕಲ್ಯಾಣಕ್ಕಾಗಿ ಟೀಕೆಯನ್ನು ಬರೆದೆ ಎನ್ನುತ್ತಾನೆ ಟೀಕಾಕಾರ.

(ii) ಬಿಳಗಿ ನಾಯಕರ ಪ್ರತಿಯ ಬರಹಗಾರನು ಮಾನವನ ನೈಸರ್ಗಿಕವಾದ ವಿಕಾರಗಳನ್ನು ಹೇಳಿಕೊಂಡು ಅವುಗಳ ದೆಸೆಯಿಂದ ಬರೆಹದಲ್ಲಾದ ತಪ್ಪುಗಳನ್ನು ಮನ್ನಿಸಬೇಕೆಂದು ಪ್ರಾಂಜಲವಾಗಿ ಕೇಳಿಕೊಳ್ಳುತ್ತಾನೆ :

'ಆವಗಂ ಹಸಿವು ತೃಷೆ ನಿದ್ರೆಯಾಲಸ್ಯಮಂ
ಬೀ ವ್ಯಸನದಲ್ಲಿ ಬಿಂದು ವಿಸರ್ಗ ಬೀಳಿದರ್ೊ
ಡಾವ ದೋಷವನರಿಯೆ ಬಾಲತನದಿಂ ಯಥಾ ಲಿಖಿಯವೊಲ್ ಬರೆದನಿದನು ॥'

'ತಪ್ಪಿಬರೆದಿಹನೆಂದು ಬಯ್ಯಲಿ ಬೇಡ.' 'ತಪ್ಪಿದಂಗುಲಿ ದೋಷಮಂ ತಿದ್ದಿ ಓದುವರ ಚರಣಕಾನತನಪ್ಪೆನು.' 'ಒಪ್ಪಿ ಕವಿ ಮಾಡಿಹ ಕೃತಿಯ ಕೈತಪ್ಪಾಗಿ ಬರೆದ ಬಾಲ—ಇದರಲ್ಲಿಯ ತಪ್ಪುಗಳು ಕವಿಯವಲ್ಲ. ಅವನು ಒಪ್ಪವಾಗಿಯೇ ರಚಿಸಿದ್ದಾನೆ, ತಪ್ಪುಗಳು ಬರೆದ ಬಾಲನವು—' ಎನ್ನುತ್ತಾನೆ. 'ದೋಷವೇ ನಿರ್ದಡಂ ಕನ್ನಡಕ್ಕರದಿ ಲೇಖಿಸಿ ಸದಾಶಿವ ಚರಣಯುಗ್ಮಗಳಿಗೆ ಅರ್ಪಿಸಿದೆ—(ಲೋಕಕ್ಕಾಗಿ ಮಾಡಬೇಕಾದ) ಸೇವೆಯನ್ನು ಮಾಡಿದೆ, ಈಶಾರ್ಪಣ ಮಾಡಿದೆ' ಎಂದೂ ಹೇಳಿಕೊಳ್ಳುತ್ತಾನೆ.

(iii) **ಬಲ್ಲರವಾಡ ಪ್ರತಿ** : ಈ ಪ್ರತಿಯ ಲಿಪಿಕಾರನು, ಬಲ್ಲರವಾಡದ ವೆಂಕಪ್ಪನವರ ಪುತ್ರ ರಂಗಧಾಮನು, ತಾನು '**ಪರಮ ಪ್ರೀತಿಯಿಂದ** ಬರಕೊಂಡ ಜಯಮಿನಿ ಪುಸ್ತಕ' ಎಂದು ತಿಳಿಸಿ,

ಭಗ್ನಪೃಷ್ಠ ಕಟಿಗ್ರೀವಾ ಬದ್ಧದೃಷ್ಟಿರಧೋಮುಖಂ ।
ಕಷ್ಟೇನ ಲಿಖಿತಂ ಗ್ರಂಥಂ ಯತ್ನೇನ ಪ್ರತಿಪಾಲಯೇತ್ ॥
ಯಾದ್ರಸೀ ಪುಸ್ತಕಂ ದೃಷ್ಟ್ವಾ ತಾದ್ರಸೀ ಲಿಖಿತಂ ಮಯಾ
ಅಪದ್ಧೋವಾ ಸುಪದ್ಧೋವಾ ಮಮದೋಷೋ ನ ವಿದ್ಯತೇ ॥

ಎಂಬ ಎರಡು ಶ್ಲೋಕಗಳನ್ನು ಮಾತ್ರ ಉದ್ಧರಿಸಿ, ಬರೆಯುವ ಕಷ್ಟವನ್ನು ಚಿತ್ರಿಸಿ, ಪುಸ್ತಕವನ್ನು ಜತನದಿಂದ ಪರಿಪಾಲಿಸಬೇಕೆಂದು ಕೂಸನ್ನು ಒಪ್ಪಿಸಿದಂತೆ ಒಪ್ಪಿಸುತ್ತಾನೆ. ಮೂಲದಲ್ಲಿದ್ದಂತೆ ಬರೆಯಲು ಇವನು ಬಹಳ ಪರಿಶ್ರಮ ಪಟ್ಟಿರಬೇಕೆಂದು ತೋರುತ್ತದೆ.

(iv) **ಬೆಳವಿಗಿ ಪ್ರತಿ**: ಈ ಪ್ರತಿಯನ್ನು ಬರೆದ ಬೆಳವಿಗಿಯ **ಬಡಿಗೇರ** ಲಿಂಗಪ್ಪನಿಗೆ ತನ್ನ ಮಗನ ಉನ್ನತಿಯ ವಿಷಯದಲ್ಲಿ ಬಹಳ ಆಸ್ಥೆ. ಮಗನಿಗೆ ಕಾವ್ಯಾಭಿರುಚಿಯೂ ರಸಾನುಭವದ ಆನಂದವೂ ಸುಬುದ್ಧಿಯೂ ಉಂಟಾಗಲೆಂದು ಅವನ ಅಪೇಕ್ಷೆ. ಕಾವ್ಯದ ಕೊನೆಯಲ್ಲಿ ಅವನು ಬರೆದಿರುವ 'ತನ್ನ ಗರ್ಭಸಂಭವನಾದ

ಮಲ್ಲಾಹುನು ವೋದಿ ಹಾಡಿಕೊಂಡು ಅಭಿವೃದ್ಧಿ ಆಗಲೆಂದು ಹರಸಿ ಬರೆದು ಕೊಟ್ಟ ಪುಸ್ತಕ' ಎಂಬ ಮಾತಿನಲ್ಲಿ ಇದು ವ್ಯಕ್ತವಾಗಿದೆ.

ಈ ಎಲ್ಲ ಅವತರಣಿಕೆಗಳ ಮೇಲಿಂದ (i) ಟೀಕಾಕಾರನ ಅಭಿಮಾನ, (ii) ಲಿಪಿಕಾರನ ಸೌಜನ್ಯ, ವಿನಯ, (iii) ಪ್ರತಿ ಮಾಡುವಲ್ಲಿ ಬರೆಹಗಾರನು ಪಟ್ಟ ಪರಿಶ್ರಮ (iv) ಬಡಿಗೇರ ಲಿಂಗಪ್ಪನಂತಹನಿಗೂ ಜೈಮಿನಿ ಭಾರತದ ಬಗೆಗಿದ್ದ ವಿಶ್ವಾಸ ಇತ್ಯಾದಿ ವಿಷಯಗಳು ಮನೋಗೋಚರವಾಗುತ್ತವೆ. ಇವುಗಳಲ್ಲದೆ ಇತರ ಅನೇಕ ಪ್ರತಿಗಳಲ್ಲಿ ಪ್ರತಿಮಾಡುವುದು ಸಾಮಾನ್ಯ ಕೆಲಸವಲ್ಲ, ಹಲವು ಬಗೆಯ ಎಚ್ಚರಿಕೆ ವಹಿಸಬೇಕಾಗುತ್ತದೆ, ಇಷ್ಟಾಗಿಯೂ ತಪ್ಪುಗಳಾಗುವುದು ಸ್ವಾಭಾವಿಕ, ಅವುಗಳನ್ನು ರಸಿಕರು ತಿದ್ದಿಕೊಂಡು ಓದಬೇಕು—ಈ ಅರ್ಥದ ವಾಕ್ಯಗಳು ಸಾಮಾನ್ಯವಾಗಿ ಇರುತ್ತವೆ.

ಬಡಿಗ ಕಾಯಕದವನು ಜೈಮಿನಿ ಭಾರತವನ್ನು ಮೆಚ್ಚಿ ಮಗನಿಗೆ ಓದಲೆಂದು ಬರೆದುಕೊಡುತ್ತಾನೆ, ಕನ್ನಡ ಬರೆಯಲು ಬಾರದವನು ದೇವನಾಗರಿ ಲಿಪಿಯಲ್ಲಿ ಅದನ್ನು ಬರೆದುಕೊಳ್ಳುತ್ತಾನೆ, (ಗ) ಎಂಬೆರಡು ಸಂಗತಿಗಳು ಜೈಮಿನಿ ಭಾರತದ ಜನಪ್ರಿಯತೆಯನ್ನೂ ವಿಖ್ಯಾತಿಯನ್ನೂ ಆಗಿನ ಸುಸಂಸ್ಕೃತ ಸಮಾಜದ ಒಲವನ್ನೂ ಮನವರಿಕೆ ಮಾಡಿಕೊಡುತ್ತವೆ.

## ಹಸ್ತಪ್ರತಿಗಳ ವಿಂಗಡಣೆ

ಈಗ ದೊರೆತಿರುವ ಹಸ್ತಪ್ರತಿಗಳಲ್ಲಿ ಕವಿಯ ಹಸ್ತಾಕ್ಷರ ಪ್ರತಿ (Autograph) ಇಲ್ಲ; ಅಂತಹದೊಂದು ಸಿಕ್ಕುವುದು ದುರಾಪಾಸ್ತವೇ ಸರಿ. ಇಷ್ಟೇ ಅಲ್ಲ, ಆ ಪ್ರತಿಯ ನೇರವಾದ ನಕಲಾಗಲಿ, ಅದಕ್ಕೆ ಸಮೀಪತಮವಾದ ಪ್ರತಿಯ ನಕಲಾಗಲಿ ದೊರೆತಿಲ್ಲ ಎಂದು ನಿಶ್ಚಿತವಾಗಿ ಹೇಳಬಹುದು.

ದಿನಾಂಕ ೧೬-೧-೧೬೭೧ರಲ್ಲಿ ಬರೆಯಲಾದುದೆಂದು ಉಲ್ಲೇಖದಿಂದ ತಿಳಿದು ಬಂದಿರುವ ತೊರಗಲ್ಲ ದೇಸಾಯಿ ಪ್ರತಿಯೇ ಉಪಲಬ್ಧ ಪ್ರತಿಗಳಲ್ಲಿ ತೀರ ಹಳೆಯದು; ಮತ್ತು ಅದು ಪಾಠಗಳನ್ನು ಚೆನ್ನಾಗಿ ಕಾಯ್ದುಕೊಂಡು ಬಂದ ಪ್ರತಿಯೂ ಆಗಿದೆ. ಇದರ ೪೮ ವರುಷಗಳ ತರುವಾಯ ದಿ. ೧೦-೭-೧೭೧೯ರಂದು ಹುಟ್ಟಿದ ತೀ.ನಂ.ಶ್ರೀ ಪ್ರತಿ ಕಾಲಕ್ರಮದಲ್ಲಿ ಎರಡನೆಯದಾಗಿದೆ.ಇವೆರಡು ಪ್ರತಿಗಳಲ್ಲಿ 'ಱ'ಕಾರವನ್ನು ಬಳಸಿರುವುದು ಇವುಗಳ ಹಳೆತನವನ್ನು ಪುಷ್ಟೀಕರಿಸುತ್ತದೆ. ತೊರಗಲ್ಲ ಪ್ರತಿಯಲ್ಲಿ ಕೆಲವೆಡೆ ಛಂದೋದೋಷಗಳು ಕಂಡುಬರುತ್ತಿದ್ದರೂ **'ಱ'ಕಾರವನ್ನು ಸಾಕಷ್ಟು ಸರಿಯಾಗಿ ಉಪಯೋಗಿಸಲಾಗಿದೆ.** ತೀ.ನಂ.ಶ್ರೀ ಪ್ರತಿ 'ಱ'ಕಾರವನ್ನು ಅಷ್ಟು ಸರಿಯಾಗಿ ಬಳಕೆ ಮಾಡುವುದಿಲ್ಲ. ಆದರೆ ಕಾವ್ಯದಲ್ಲಿಯ **ಸಂಸ್ಕೃತಪದಪ್ರಯೋಗಗಳನ್ನು ಚೆನ್ನಾಗಿ ಕಾಯ್ದುಕೊಂಡು ಬಂದಿದೆ.** ತೊರಗಲ್ಲ ಪ್ರತಿ ಉತ್ತರ ಕರ್ನಾಟಕದ ಪ್ರತಿ; ತೀ.ನಂ.ಶ್ರೀ ಪ್ರತಿ ದಕ್ಷಿಣ ಕರ್ನಾಟಕಕ್ಕೆ ಸಂಬಂಧಿಸಿದ ಪ್ರತಿ. ಈ ಎರಡು ಪ್ರತಿಗಳು, ಯಾವೊಂದು ಮೂಲವು ಯಾವಾಗ ಎರಡು ಟಿಸಿಲುಗಳಾಗಿ ಒಡೆದುವೋ, ಅವುಗಳನ್ನು

ಅನುಸರಿಸಿ ಯಾವ ಯಾವ ಮಾರ್ಗದಲ್ಲಿ ನಡೆದು ಬಂದುವೋ ಅವುಗಳ ಅನ್ವಯವನ್ನು ಗೊತ್ತುಹಚ್ಚುವುದು ಕಠಿಣ. ಆದುದರಿಂದ ಈ ಎರಡು ಪ್ರತಿಗಳನ್ನು ಅನುಸರಿಸುವ ಪ್ರತಿಗಳು ಯಾವವು ಎಂಬುದನ್ನು ಮಾತ್ರ ನಿರ್ಧರಿಸಿಕೊಂಡು ಮುಂದುವರಿಯಬೇಕಾಗಿದೆ. ಇದನ್ನು ತಿಳಿಯುವುದಕ್ಕಾಗಿ ಪಾಠಾಂತರ ಸಂಕಲನವನ್ನು ನೋಡಬೇಕು. ಸಾಮಾನ್ಯವಾಗಿ 'ಕ' (ತೊರಗಲ್ಲ) ಪ್ರತಿಯನ್ನು ಅನುಸರಿಸುವ ಪ್ರತಿಗಳನ್ನು ಉತ್ತರ ಕರ್ನಾಟಕದ ವರ್ಗದವೆಂದೂ 'ಖ' (ತೀ.ನಂ.ಶ್ರೀ) ಪ್ರತಿಯನ್ನು ಅನುಸರಿಸುವ ಪ್ರತಿಗಳನ್ನು ದಕ್ಷಿಣ ಕರ್ನಾಟಕದ ವರ್ಗವೆಂದೂ ತಿಳಿಯಲಭ್ಯಂತರವಿಲ್ಲ.

ಪಾಠಾಂತರಗಳನ್ನು ಸಂಕಲಿಸುವ ಮೊದಲು, ಎಲ್ಲ ಪ್ರತಿಗಳ ಗಾತ್ರವನ್ನು ಎಂದರೆ ವಿಷಯ ವ್ಯಾಪ್ತಿಯನ್ನು, ಪ್ರತಿಯೊಂದರ ಪ್ರತಿ ಸಂಧಿಯ ಪದ್ಯಸಂಖ್ಯೆ ಮತ್ತು ಇಡೀ ಕಾವ್ಯದ ಒಟ್ಟು ಪದ್ಯಸಂಖ್ಯೆಯಿಂದ ಕಂಡುಕೊಳ್ಳುವುದು ಅಗತ್ಯ. ಅದಕ್ಕಾಗಿ ಆಯಾ ಪ್ರತಿಗಳಲ್ಲಿ ಉಲ್ಲೇಖಿಸಿರುವ ಪದ್ಯಸಂಖ್ಯೆಯನ್ನೂ ಇಡೀ ಕಾವ್ಯವನ್ನು ಪದ್ಯಪದ್ಯವಾಗಿ ಎಣಿಸಿ ತಿಳಿದುಬಂದ ಸಂಖ್ಯೆಯನ್ನೂ ಪಟ್ಟಿಮಾಡಿ ಕೊಟ್ಟಿದೆ. ಆ ತಃಖ್ತೆಯ ಅಭ್ಯಾಸದಿಂದ ಗೊತ್ತಾಗುವ ಮಾತೆಂದರೆ—೧. ಉತ್ತರ ಕರ್ನಾಟಕದ ಪ್ರತಿಗಳು ೩೪ ಸಂಧಿ, ೧೯೧೦ ಪದ್ಯ ಉಳ್ಳವಾಗಿವೆ; ೨. ದಕ್ಷಿಣ ಕರ್ನಾಟಕದ ಪ್ರತಿಗಳು ಸಂಧಿ ೩೪, ಪದ್ಯ ೧೯೦೭ ಉಳ್ಳವಾಗಿವೆ. ಅಲ್ಲದೆ, ಪ್ರಕ್ಷೇಪ, ಪುನರುಕ್ತಿ, ಇತರ ಕಾವ್ಯಗಳ ಪದ್ಯಗಳ ಸೇರ್ಪಡೆ, ಪದ್ಯಗಳು ಕಣ್ತಪ್ಪಿ ಉಳಿಯುವಿಕೆ ಇತ್ಯಾದಿ ಕಾರಣಗಳಿಂದ ಸಂಪೂರ್ಣ ಕಾವ್ಯದ ಒಟ್ಟು ಪದ್ಯಗಳ ಸಂಖ್ಯೆಯಲ್ಲಿ ಏಕರೂಪತೆ ಕಾಣುವುದಿಲ್ಲ. ಈ ಸಂಖ್ಯೆ ೧೯೦೫, ೧೯೦೬, ೧೯೨೦, ೧೯೨೫, ೧೯೩೫, ೧೯೩೬, ೧೯೪೮, ೧೯೯೯ ಎಂದು ತೋರಿಸುವ ಪ್ರತಿಗಳೂ ಉಂಟು. ಪದ್ಯಸಂಖ್ಯೆಗಳ ವಿಷಯದಲ್ಲಿ ಪ್ರತಿಗಳಲ್ಲಿ ಕಂಡು ಬರುವ ಈ ಅನೈಕಮತ್ಯವೇ ಕನ್ನಡ ಜೈಮಿನಿ ಭಾರತವು ವಿಪುಲ ಸಂಖ್ಯೆಯಲ್ಲಿ ಪ್ರಚುರಗೊಂಡಿತ್ತೆಂಬುದನ್ನು ಸೂಚಿಸುತ್ತದೆ.

ನಮ್ಮ ಹಸ್ತಪ್ರತಿಗಳ ಪಾಠಗಳನ್ನು ಪ್ರಚಲಿತ ಪಾಠಗಳಿಗೆ (Vulgate Text) ಸರಿಹಚ್ಚಿ ನೋಡುವುದಕ್ಕಾಗಿ ಕರಿಬಸವ ಶಾಸ್ತ್ರಿಗಳವರ ಜೈಮಿನಿ ಭಾರತದ ೧೯೧೭ರ ಆವೃತ್ತಿಯ ಪ್ರತಿ ಮತ್ತು ಮೈಸೂರು ಸಂಸ್ಥಾನದ ಸಾಹಿತ್ಯ ಸಂಸ್ಕೃತಿ ಅಭಿವೃದ್ಧಿ ಇಲಾಖೆಯವರು ಪ್ರಕಟಿಸಿದ ಕನ್ನಡ ಜೈಮಿನಿ ಭಾರತದ ೧೯೫೬ರ ಪ್ರತಿಯನ್ನು ಇಟ್ಟುಕೊಂಡಿದ್ದೇವೆ. ೧೬ ಹಸ್ತಪ್ರತಿಗಳ ಪ್ರತಿ ಸಂಧಿಯ ಪದ್ಯ ಸಂಖ್ಯೆಯನ್ನು ಆ ಎರಡು ಮುದ್ರಿತ ಪ್ರತಿಗಳ ಪದ್ಯ ಸಂಖ್ಯೆಗೆ ಸರಿಹಚ್ಚಿ ನೋಡಲಾಗಿದೆ.

ಈ ಎಲ್ಲ ಪ್ರತಿಗಳಲ್ಲಿ ಪದ್ಯಸಂಖ್ಯೆಯಲ್ಲಿ ವ್ಯತ್ಯಾಸವಿಲ್ಲದ ಸಂಧಿಗಳು ೧೯: ಆ ಸಂಧಿಗಳಿವು–೧, ೨, ೪, ೭, ೯, ೧೧, ೧೨, ೧೪, ೧೬, ೨೧, ೨೨, ೨೪, ೨೫, ೨೭, ೨೮, ೨೯, ೩೦, ೩೧, ೩೨.

ಪದ್ಯವನ್ನು ಬರೆಯುವದು ಕಣ್ತಪ್ಪಿ ಬಿಟ್ಟುಹೋಗಿರುವುದರಿಂದಲೋ ಪದ್ಯಗಳ ಕ್ರಮಸಂಖ್ಯೆಯಲ್ಲಿ ತಪ್ಪಿರುವುದರಿಂದಲೋ ಕೆಲವು ಸಂಧಿಗಳ ಪದ್ಯಸಂಖ್ಯೆಯಲ್ಲಿ

ಒಂದೆರಡರಿಂದ ಹಿಗ್ಗು–ಕುಗ್ಗು ಕಂಡುಬರುವುದು. ಆ ಸಂಧಿಗಳಿವು ; ೬, ೧೦, ೧೩, ೧೫, ೨೦, ಮತ್ತು ೨೩.

ಇನ್ನು ಕೆಲವು ಪ್ರತಿಗಳಲ್ಲಿ, ಕೆಲವು ಸಂಧಿಗಳ ಪದ್ಯಸಂಖ್ಯೆಯಲ್ಲಿ ಸಾಕಷ್ಟು ಮತ್ತು ವಿಚಾರಾರ್ಹವಾದ ವ್ಯತ್ಯಾಸವಿದೆ. ಆ ಸಂಧಿಗಳಿವು ; ೩, ೫, ೮, ೧೭, ೧೮, ೧೯, ೨೬, ೩೩, ಮತ್ತು ೩೪. ಅಂತು ೯ ಸಂಧಿಗಳು.

ಸಂಧಿಶಃ ಪದ್ಯ ಸಂಖ್ಯೆ ಹಾಗೂ ೩೪ ಸಂಧಿಗಳ ಒಟ್ಟು ಪದ್ಯಸಂಖ್ಯೆ ಭಿನ್ನ ಭಿನ್ನ ವಾಗುವ ಬಗೆಯನ್ನು ಕೊಟ್ಟಿರುವ ನಕ್ಷೆಯಲ್ಲಿ ನೋಡಬಹುದು. ನಕ್ಷೆಯ ಆಧಾರದಿಂದ ಹಸ್ತಪ್ರತಿಗಳಲ್ಲಿ ಪ್ರಮುಖವಾದ ಎರಡು ಗುಂಪುಗಳನ್ನು ಮಾಡಬಹುದಾಗಿದೆ. ಒಟ್ಟು ಪದ್ಯಸಂಖ್ಯೆ ೧೮೯೫ ರಿಂದ ಬೆಳೆಯುತ್ತ ಹೋಗಿ ೧೯೦೭ಕ್ಕೆ ನಿಲ್ಲುವ ಪ್ರತಿಗಳದು ಒಂದು ಗುಂಪು; ೧೯೦೮ ರಿಂದ ಬೆಳೆಯುತ್ತ ೧೯೨೩ಕ್ಕೆ ನಿಲ್ಲುವ ಪ್ರತಿಗಳದು ಇನ್ನೊಂದು ಗುಂಪು. 'ಅಂತು ಸಂಧಿ ೩೪ಕ್ಕಂ ಪದನು ೧೯೦೭ಕ್ಕಂ' ಜೈಮಿನಿ ಭಾರತ ಕಾವ್ಯವು ಮುಗಿಯುವುದೆಂದು ಹೇಳುವ ಅನೇಕ ಪ್ರತಿಗಳುಂಟು. K.A. 225, K.224/1,K.294 ಈ ಪ್ರತಿಗಳಲ್ಲಿ ಜೈಮಿನಿ ಭಾರತದಲ್ಲಿ ಒಟ್ಟು ಇಂತಿಷ್ಟು ಪದ್ಯಗಳುಂಟೆಂದು ತಿಳಿಸುವ ಈ ಕೆಳಗಣ ಒಂದು ಪದ್ಯವು ಕಂಡುಬರುವುದು.

> ಧರಣಿಯೊಳ್ಜೈಮಿನಿ ಮುನೀಂದ್ರನತಿ ಪೆರ್ಮೆಯೊ
> ಳ್ವರ ಮಹಾಭಾರತ ಕಥಾಮೃತಾಬ್ಧಿಯೊಳೊಪ್ಪು
> ವರದಾಶ್ವಮೇಧಿಕದ ಪರ್ವಮಂ ಸುರಪುರದ ಲಕ್ಷ್ಮೀಶ ಕನ್ನಡದೊಳೂ ||
> ವಿರಚಿಸಿದ ಕೃತಿಗೆ ಷಟ್ಚರಣದಿಂ ಮಾಧುರ್ಯ
> ಸರಸಪದಬಂಧಂಗಳೆಣಿಸಲ್ಕೆ ಶರಧಿಯಂ
> ಬರನಿಧಿ ಶಶಾಂಕ ಸೌಜ್ಞೆಗಳ್ಳೈದೆನಿದನೊಲಿದು ಲಾಲಿಪುದು ಸರ್ವಜನರು ||

ಈ ಪದ್ಯದ ಅಭಿಪ್ರಾಯದ ಪ್ರಕಾರ ಕಾವ್ಯದ ಪದ್ಯಸಂಖ್ಯೆ ೧೯೦೭. (ಶರಧಿ: ೭, ಅಂಬರಃ ೦, ನಿಧಿ: ೯, ಶಶಾಂಕ: ೧). ಈ ಪದ್ಯ ಲಕ್ಷ್ಮೀಶನ ಮೂಲಕಾವ್ಯಕ್ಕೆ ಸೇರಿದು ದಲ್ಲವೆಂಬುದು ಭಾಷಾಶೈಲಿ–ಪದಗುಂಫನದ ಮೇಲಿಂದ ಒಡೆದು ಕಾಣುವಂತಿದೆ. ಯಾರೊ ಒಬ್ಬ ಪಂಡಿತರು ಪದ್ಯಸಂಖ್ಯಾವಾದವನ್ನು ಕೊನೆಗೊಳಿಸಬೇಕೆಂಬ ದೃಷ್ಟಿಯಿಂದ ಎಣಿಕೆ ಮಾಡಿ ಪದ್ಯರೂಪ ಕೊಟ್ಟು ಯಾವಾಗಲೋ ಸೇರಿಸಿರಬೇಕೆಂದು ತೋರುತ್ತದೆ. ಪದ್ಯವು ಪ್ರಕ್ಷಿಪ್ತವಾದರೂ ಆ ಪಂಡಿತನ ಅಭಿಪ್ರಾಯವನ್ನು ಗಮನಿಸಬಾರದೆಂದೇನಲ್ಲ. ಈ ಪದ್ಯವು ಕರಿಬಸವಶಾಸ್ತ್ರಿಗಳ ಗಮನಕ್ಕೂ ಬಂದಿದೆ. ಇದರ ಆಧಾರದಿಂದಲೂ ಕೆಲವು ಪ್ರತಿಗಳಲ್ಲಿ ೧೯೦೭ಕ್ಕೆ ಕಾವ್ಯ ಮುಗಿಯುತ್ತಿರುವುದರಿಂದಲೂ ೧೨ ಪ್ರತಿಗಳ ಪರಿಷ್ಕರಣದಿಂದ ಜೈಮಿನಿ ಭಾರತದ ಸಂಧಿಗಳು ೩೪, ಪದ್ಯಗಳು ೧೯೦೭ ಎಂಬ ನಿರ್ಧಾರಕ್ಕೆ ಅವರು ಬಂದಿದ್ದಾರೆ ಮತ್ತು ಮೇಲಣ ಪದ್ಯವು ಪ್ರಕ್ಷಿಪ್ತವೆಂದು ಕರಿಬಸವ ಶಾಸ್ತ್ರಿಗಳು ಅಭಿಪ್ರಾಯಪಟ್ಟಿದ್ದಾರೆ.[1]

---

[1] 'ಜೈಮಿನಿ ಭಾರತ' (೧೯೨೧)–ಅಡಿಟಿಪ್ಪಣಿ.

ಈಗ ನಾವು ಉತ್ತರ ಕರ್ನಾಟಕದ ಹಲವು ಪ್ರತಿಗಳನ್ನು ಅವಲೋಕಿಸಿದಾಗ ಜೈಮಿನಿ ಭಾರತದ ಒಟ್ಟು ಪದ್ಯ ಸಂಖ್ಯೆ ೧೯೦೮, ೧೯೧೦, ೧೯೧೨, ೧೯೧೬, ೧೯೨೩ ಹೀಗೆ ಭಿನ್ನಭಿನ್ನವಾಗಿರುವುದನ್ನು ನಾವು ಕಾಣುತ್ತೇವೆ. ಈ ಎರಡೂ ಗುಂಪುಗಳ ಪ್ರತಿಗಳ ಪರಿಷ್ಕರಣದಿಂದ ಮೂಲತಃ ಈ ಕಾವ್ಯದ ಸಂಧಿಗಳೆಷ್ಟು, ಪದ್ಯಗಳೆಷ್ಟು ಎಂಬುದನ್ನು ಕಂಡುಕೊಳ್ಳಬೇಕಾಗಿದೆ. ಈ ವಿಷಯವನ್ನು 'ಈ ಕಾವ್ಯದ ಒಟ್ಟು ಸಂಧಿಗಳು ಮತ್ತು ಪದ್ಯಸಂಖ್ಯೆ' ಎಂಬ ವಿಭಾಗದಲ್ಲಿ ಚರ್ಚಿಸಲಾಗಿದೆ.

ನಾವು ನೋಡಿದ ೧೧ ಪ್ರತಿಗಳಲ್ಲಿ ಮೂರು ಪ್ರತಿಗಳು ಉಲ್ಲೇಖಿಸಿರುವ ಪದ್ಯ ಸಂಖ್ಯೆ ಸಂಶೋಧಕರಿಗೆ ಅತ್ಯಂತ ಕುತೂಹಲಕಾರಿಯಾಗಿದೆ. K. 1304 ಪ್ರತಿ ಒಟ್ಟು ಪದ್ಯ ೧೯೪೮ ಎಂದು ಹೇಳಿದ್ದರೆ K. 272 ಮತ್ತು K. 1261 ರಲ್ಲಿ ೧೯೯೯ ಎಂದು ಹೇಳಿದೆ. ಆದರೆ ನಿಜವಾಗಿಯೂ ಇಷ್ಟು ಪದ್ಯಗಳಿವೆಯೇ ಎಂದು ಆ ಪ್ರತಿಗಳ ಪದ್ಯಗಳನ್ನು ಎಣಿಸಿ ನೋಡಿದರೆ, ವಸ್ತುಸ್ಥಿತಿಗೂ ಉಲ್ಲೇಖಕ್ಕೂ ಅಜಗಜಾಂತರ ಕಂಡುಬಂದಿತು. K. 1304 ರಲ್ಲಿ ಪುರುಷಾಮೃಗ ಪ್ರಸಂಗದ ೪೮ ಭಾಮಿನೀ ಷಟ್ಪದಿಗಳು ಸೇರಿರುವುದರಿಂದ, ಜೈಮಿನಿ ಭಾರತಕ್ಕೆ ವಿಸಂಗತವಾದ ಅದನ್ನು ಬಿಟ್ಟರೆ, ಅದರಲ್ಲಿರುವ ಪದ್ಯಗಳು ೧೯೦೦ ಮಾತ್ರ. ಇಂದಿನ ಸಾಮಾನ್ಯ ತಿಳಿವಳಿಕೆಯ ಮಟ್ಟಿಗೆ ೭ ಪದ್ಯಗಳ ಕೊರತೆಯೆ ಇದೆ. ಈ ಪ್ರತಿಯಲ್ಲಿ ಅಲ್ಲಲ್ಲಿ ಪದ್ಯಲೋಪಗಳೂ ಅಪೂರ್ಣ ಲೇಖನಗಳೂ ಕಂಡು ಬರುತ್ತಿವೆ. ಆದುದರಿಂದ ಇದು ಪದ್ಯಸಂಖ್ಯಾ ಸಂಶೋಧನೆಗೆ ಅನುಪಯುಕ್ತವೇ ಸರಿ. ಉಳಿದೆರಡು ಪ್ರತಿಗಳಲ್ಲಿ, ವಾಸ್ತವವಾಗಿ K. 272 ರಲ್ಲಿ ೧೮೯೫ ಮತ್ತು K. 1261 ರಲ್ಲಿ ೧೯೦೪ ಪದ್ಯಗಳುಂಟು. ಆದರೆ ಇವರಿಬ್ಬರೂ ಒಟ್ಟು ಸಂಖ್ಯೆಯನ್ನು, ತಮ್ಮ ಪ್ರತಿಗೆ ವ್ಯತಿರಿಕ್ತವಾಗಿ ೧೯೯೯ ಎಂದು ಏಕೆ ಬರೆದರು? ಮೂಲಪ್ರತಿಯಲ್ಲಿಯ ಉಲ್ಲೇಖ ಕಾರಣವೋ ಪರಂಪರಾಗತವಾದ ತಿಳಿವಳಿಕೆ ಕಾರಣವೋ ತಿಳಿಯದು. ೧೯೯೯ ಎಂಬ ಈ ಉಲ್ಲೇಖ ತಪ್ಪಲ್ಲದಿದ್ದರೆ ಇನ್ನು ತೊಂಬತ್ತೆರಡು (೧೯೯೯–೧೯೦೭) ಪದ್ಯಗಳ ಸಂಶೋಧನೆ ಆಗಬೇಕು ಎಂದೆನಿಸುತ್ತದೆ. ಅಖಿಲ ಕರ್ನಾಟಕವ್ಯಾಪಿಯಾದ ಹಸ್ತಪ್ರತಿಗಳ ಗಹನಾರಣ್ಯದಲ್ಲಿ ಯಾವ ಗರಿಕಟ್ಟಿನಲ್ಲಿಯಾದರೂ ಇವು ಅಡಗಿವೆಯೋ ಇಲ್ಲವೋ ಬಲ್ಲವರಾರು? ಪದ್ಯಸಂಖ್ಯೆಗಳ ವಿಷಯದಲ್ಲಿರುವ ಈ ಅನೈಕ್ಯದ ಗೊಂದಲದಲ್ಲಿ, ಚಾಮರಸನ 'ಪ್ರಭುಲಿಂಗಲೀಲೆ'ಯಲ್ಲಿ ೧೧೧೧ ಪದ್ಯಗಳಿದ್ದಂತೆ ಜೈಮಿನಿ ಭಾರತದಲ್ಲಿ ೧೯೧೯ ಪದ್ಯಗಳಿದ್ದವೋ ಏನೋ ೧೯೧೯ನ್ನು ೧೯೯೯ ಎಂದು ತಪ್ಪಾಗಿ ಬರೆದರೋ ಏನೋ ಎಂದೊಮ್ಮೆ ಎನಿಸದೇ ಹೋಗುವುದಿಲ್ಲ. ಆದರೆ ಲಕ್ಷ್ಮೀಶನವೇ ಎಂದು ಖಚಿತವಾದ ೧೨ ಪದ್ಯಗಳಾದರೂ ಸಿಕ್ಕಬೇಕಲ್ಲ. ಅವರೆಗೆ ಊಹೆ ಊಹೆಯೇ.

ಅದೇನಿದ್ದರೂ ಹಲವಾರು ಪ್ರತಿಗಳಲ್ಲಿ, ಪ್ರಚಲಿತ ಪ್ರತಿಗಳಿಗಿಂತ ಹೆಚ್ಚು ಪದ್ಯಗಳು ಎಣಿಸಿ ತೆಗೆದು ನೋಡಿದಾಗಲೂ ಕಂಡುಬಂದಿವೆ. ಅವು ಲಕ್ಷ್ಮೀಶನ ಪದ್ಯಗಳೇ ಅಥವಾ ಪ್ರಕ್ಷಿಪ್ತಗಳೇ ಎಂಬುದು ನಿರ್ಣಯವಾಗಬೇಕಾಗಿದೆ. ಅಂತಹ ಪದ್ಯಗಳನ್ನು

ಬೇರೆಡೆಯಲ್ಲಿ ಕೊಟ್ಟಿದೆ. ಅವು ಲಕ್ಷ್ಮೀಶಕೃತಗಳೇ ಎಂದು ಸಿದ್ಧವಾಗುವವರೆಗೆ ಜೈಮಿನಿ ಭಾರತದ ಒಟ್ಟು ಪದ್ಯ ಸಂಖ್ಯೆ ಅನಿರ್ಣೀತವಾಗಿಯೇ ಉಳಿಯುತ್ತದೆ.

## ಪಾಠಾಂತರಗಳ ಸಂಕಲನ

ಹಸ್ತಪ್ರತಿಗಳ ಪರಸ್ಪರ ಸಂಬಂಧವನ್ನು ತಿಳಿದುಕೊಳ್ಳುವುದಕ್ಕಾಗಿ, ಅದರ ಆಧಾರದ ಮೇಲೆ ಅವುಗಳ ಪೀಳಿಗೆಯನ್ನು ತೀರ್ಮಾನಿಸುವುದಕ್ಕಾಗಿ ಪಾಠಸಂಪ್ರದಾಯಗಳನ್ನು (Recensions) ಕಂಡುಹಿಡಿಯುವುದಕ್ಕಾಗಿ ಮತ್ತು ಸಾಧು ಪಾಠಗಳನ್ನು ಕಂಡುಹಿಡಿಯುವುದಕ್ಕಾಗಿ ಪಾಠಾಂತರಗಳ ಸಂಕಲನ ಮಾಡುವುದು ಅವಶ್ಯವಿದೆ.

ಪಾಠಾಂತರಗಳ ಸಂಕಲನ ಮಾಡುವಲ್ಲಿ ಅನೇಕ ವಿಧಗಳುಂಟು. ನಾನು ಇಲ್ಲಿ ಅನುಸರಿಸಿರುವ ರೀತಿ ತೀ.ನಂ.ಶ್ರೀ. ಅವರು ಹೇಳಿಕೊಟ್ಟುದು. ಜೈಮಿನಿ ಭಾರತದ ಪ್ರಾರಂಭದ ಸಂಧಿ, ೧೩, ೧೯, ೨೮ ನೆಯ ಸಂಧಿಗಳು ಮತ್ತು ಮುಗಿತಾಯದ ಸಂಧಿ–ಹೀಗೆ ೬ ಸಂಧಿಗಳ ಪ್ರತಿ ಪದ್ಯದ ಪಾಠಾಂತರಗಳನ್ನು ನಮೂದಿಸಿಕೊಳ್ಳಲಾಗಿದೆ. ಈ ಪಾಠಾಂತರ ಮಾದರಿಯ ಪುಟ ೫೦೧ ರ ತರುವಾಯ ಜೋಡಿಸಲಾಗಿದೆ.

ಅಭ್ಯಾಸಕ್ಕಾಗಿ ಎತ್ತಿಕೊಂಡಿರುವ ೧೧ ಹಸ್ತಪ್ರತಿಗಳಲ್ಲಿ ತೀ.ನಂ.ಶ್ರೀ ಅವರ ಪ್ರತಿಯನ್ನು ಮೊದಲನೆಯದಾಗಿ ಬರೆದುಕೊಂಡು, ಇತರ ಪ್ರತಿಗಳ ವ್ಯತ್ಯಾಸಗಳನ್ನು ಮಾತ್ರ ಮೂಲದಡಿಯಲ್ಲಿ ಸೂಚಿಸುತ್ತ ಸಾಗಿದ್ದೇವೆ. ವ್ಯತ್ಯಾಸಗಳ ಸೂಚನೆಗೆ ಬಳಸಿದ ಸಂಕೇತಗಳು ಇಂತಿವೆ; ಮೂಲಕ್ಕಿಂತ ಹೆಚ್ಚಾಗಿರುವ ಅಕ್ಷರಗಳನ್ನು ಎರಡು ಅಕ್ಷರಗಳ ಮಧ್ಯೆ + ಚಿಹ್ನವನ್ನಿಟ್ಟು ಕೆಳಗೆ ಅಕ್ಷರ ಅಥವಾ ಚಿಹ್ನಗಳನ್ನು ಬರೆದು ತೋರಿಸಿದೆ. ಕಡಿಮೆಯಾಗಿದ್ದ ಅಕ್ಷರಗಳನ್ನು ಆಯಾ ಅಕ್ಷರ ಸ್ತಂಭದಲ್ಲಿ ವಜಾಚಿಹ್ನೆಯಿಂದ (—) ತಿಳಿಸಿದೆ. ಗರಿ ಮುರಿದುಹೋಗಿರುವ ಅಕ್ಷರಗಳಿಗೆ ಕತ್ತರಿ (X) ಚಿಹ್ನ, ಲಿಪಿಕಾರನು ಬರೆಯುವುದಕ್ಕಾಗಿ ಸ್ಥಳ ಬಿಟ್ಟೆಡೆಯಲ್ಲಿ ←→ ಈ ಚಿಹ್ನ, ಬರೆಯಬೇಕಾದುದನ್ನು ಬರೆಯದೆ, ಅದಕ್ಕಾಗಿ ಸ್ಥಳವನ್ನು ಬಿಡದಿದ್ದಲ್ಲಿ ------ ಈ ಚಿಹ್ನ ಉಪಯೋಗಿಸಿದ್ದೇವೆ.

ತೀ.ನಂ.ಶ್ರೀಯವರ ಜೈಮಿನಿ ಭಾರತ ಪ್ರತಿಯ ಪಾಠವನ್ನು ಆಧಾರವಾಗಿರಿಸಿಕೊಂಡು ಉಳಿದ ೧೦ ಪ್ರತಿಗಳ ಪಾಠಾಂತರಗಳನ್ನು ಬರೆದುಕೊಂಡಿದೆ. ಅಕ್ಷರಸ್ಖಾಲಿತ್ಯ ಅಕ್ಷರಪಲ್ಲಟ, ಪ್ರತಿನಿಧಾನ ಮೊದಲಾದ ಇತರ ಸ್ಖಾಲಿತ್ಯಗಳ ದೃಷ್ಟಿಯಿಂದ ನೋಡಿದಾಗ ಹೆಚ್ಚು ಸೋಡಿದಾಗ ಹೆಚ್ಚು ಶುದ್ಧ ಮತ್ತು ಸಾಧು ಪ್ರತಿಯೆಂದು ಕಂಡುಬಂದ ತೊರಗಲ್ಲ (ಕ) ಪ್ರತಿಗೆ ಪ್ರಥಮ ಪ್ರಾಶಸ್ತ್ಯವೂ ಸಂಸ್ಕೃತ ಪಾಠಗಳನ್ನು ಸರಿಯಾಗಿ ಕಾಯ್ದುಕೊಂಡಿರುವ ತೀ.ನಂ.ಶ್ರೀ ಪ್ರತಿಗೆ ದ್ವಿತೀಯ ಸ್ಥಾನವೂ ಸಲ್ಲುತ್ತದೆ. ಇವುಗಳನ್ನು 'ಕ', 'ಖ' ಎಂದು ಹೆಸರಿಸಿದ್ದು, ಉಳಿದ ಪ್ರತಿಗಳನ್ನು ಕಾಲಾನುಕ್ರಮದಲ್ಲಿ ಹೊಂದಿಸಿ 'ಗ', 'ಘ', 'ಚ', 'ಛ', 'ಜ', 'ಝ', 'ತ', 'ಥ', 'ದ' ಎಂದು ಹೆಸರು ಕೊಟ್ಟಿದೆ.

ಈ ಕಾರ್ಯ ಮುಗಿದ ಮೇಲೆ ಕೇವಲ ೫ ಸಂಧಿಗಳ ಪಾಠಾಂತರ ಸಂಕಲನದಿಂದ ಪಾಠಸಂಪ್ರದಾಯಗಳನ್ನು ನಿರ್ಧರಿಸುವುದು ಸಾಧ್ಯವಿಲ್ಲ ಎಂದು

ಕಂಡುಬಂದಿತು. ಈ ಜನಪ್ರಿಯ ಕಾವ್ಯದಲ್ಲಿ ಅನೇಕ ಸ್ಖಾಲಿತ್ಯಗಳು ಕಂಡುಬರುತ್ತವೆ. ಆದರೆ **ಪಾಠಗ್ರಂಥಿ**ಗಳು ಸಾಕಷ್ಟು ದೊರೆಯುವುದಿಲ್ಲ. ಯಾವೊಂದು ಪ್ರತಿಯನ್ನು ನೋಡಿಕೊಂಡು ಪ್ರತಿಮಾಡಿದಂತೆ ಈಗ ನೋಡಿದ ಹಸ್ತಪ್ರತಿಗಳ ಸ್ವರೂಪವಿಲ್ಲ ಎಂದು ಹೇಳಬಹುದಾಗಿದೆ. ಒಂದು ಪ್ರತಿಯನ್ನು ಕಂಠಪಾಠ ಮಾಡಿದವನು ಅದನ್ನು ಮತ್ತೊಬ್ಬ ನಿಗೆ ಕಂಠಪಾಠ ಮಾಡಿಸಿರಬೇಕೆಂದೂ ಆ ಮತ್ತೊಬ್ಬನು ತನಗೆ ಕಂಠಗತವಾಗಿದ್ದಂತೆ ಬರೆದು ಇಲ್ಲವೆ ಬರೆಸಿ ಇರಬೇಕೆಂದೂ ತೋರುತ್ತದೆ. ಇದರಿಂದ ಲಿಪಿಕಾರನ ಸ್ಮರಣ ಶಕ್ತಿ ಗುಣದೋಷಗಳ ಪರಿಣಾಮವಾಗಿರುವುದು ಸಹಜ. ಅವನು ಕಂಠಪಾಠ ಮಾಡಿದ ಮೂಲ ಪ್ರತಿಯ ಸ್ವರೂಪವು ಕೆಟ್ಟುಹೋಗಿ ಅಥವಾ ಬೇರೆಯಾಗಿ ಅದರದೇ ಈ ಪ್ರತಿ ಎಂದು ಖಚಿತವಾಗಿ ಹೇಳಲು ಬಾರದಂತಾಗುವುದು. ಇಂಥದರ ಅನ್ವಯದಲ್ಲಿ ಹುಟ್ಟಿ ಬಂದ ಪ್ರತಿಗಳಿಗೆ ಮಿಶ್ರಪ್ರತಿ ಸ್ವರೂಪವು ಬರಲಾರಂಭಿಸುತ್ತದೆ. ಈ ಮಿಶ್ರಪ್ರತಿಗಳು ಪಾಠಸಂಪ್ರದಾಯಗಳನ್ನು ನಿರ್ಧರಿಸುವಲ್ಲಿ ಉಪಯುಕ್ತವಾಗುವುದಿಲ್ಲ. ನಾವು ಮಾಡಿ ರುವ ಐದು ಸಂಧಿಗಳ ಪಾಠಸಂಕಲನದಿಂದ ಜೈಮಿನಿ ಭಾರತದ ಪಾಠಭೇದಗಳಲ್ಲಿ (version) ಉತ್ತರ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕ ಎಂಬ ಎರಡು ವರ್ಗಗಳು ಸ್ಪಷ್ಟವಾಗಿ ಕಾಣುತ್ತವೆ ಎಂದು ಹೇಳುವುದು ಮಾತ್ರ ಸಾಧ್ಯವಾಗಿವೆ.

[ಪಾಠಾಂತರ ಸಂಕಲನದ ಮಾದರಿ ಪುಟಗಳ ವಿವರಣೆಯನ್ನು ಪುಟ ೪೯೦-೪೯೪ರಲ್ಲಿ ಕೊಟ್ಟಿದೆ.]

## ಸ್ಖಾಲಿತ್ಯಗಳು

ಯಾವುದೊಂದು ಹಸ್ತಪ್ರತಿಯಲ್ಲಿ ನಾನಾ ಬಗೆಯ ದೋಷಗಳಾಗುವುದುಂಟು. ಒಂದು ಪ್ರತಿಯಿಂದ ನೋಡಿ ನಕಲು ಮಾಡುವಾಗ ಕಣ್ತಪ್ಪಿನಿಂದ ಮತ್ತು ಅಕ್ಷರಗಳ ಸಾದೃಶ್ಯದ ಮೂಲಕ ಉಂಟಾಗುವ ಸಂದಿಗ್ಧತೆಯಿಂದ ತಪ್ಪುಗಳಾಗುತ್ತವೆ. ಬರೆಯು ವವನು ತನ್ನ ಸಹಾಯಕ್ಕೆ ಓದುವವನೊಬ್ಬನನ್ನು ತೆಗೆದುಕೊಂಡಾಗ ಆ ಎರಡನೆಯವನ ಕಣ್ತಪ್ಪು, ಉಚ್ಚಾರ ಸಂದಿಗ್ಧತೆ, ಬರೆವವನ ಕಿವಿ ತಪ್ಪು ದೋಷಗಳಿಗೆ ಕಾರಣವಾಗ ಬಹುದು. ಬರೆಹಗಾರನು ಅನುಸರಿಸುವ ಮೂಲ ಪ್ರತಿ ಅಶುದ್ಧವಾಗಿದ್ದರೆ ನಕಲು ಅಶುದ್ಧವಾಗುವುದು ಸಹಜ. ಎಷ್ಟೋ ಸಲ, ಮೂಲವು ಸಾಕಷ್ಟು ಶುದ್ಧವಾಗಿದ್ದರೂ ಬರೆಹಗಾರನ ಭಾಷಾಜ್ಞಾನ-ಶಬ್ದಜ್ಞಾನಗಳ ಮಟ್ಟಕ್ಕನುಸಾರವಾಗಿ ಬೇರೆ ತಪ್ಪು ಗಳಾಗುವುದುಂಟು. ಕಂಠಪಾಠವನ್ನನುಸರಿಸಿ ಪ್ರತಿಮಾಡುವ ಸಂದರ್ಭದಲ್ಲಿ ಪದ್ಯ ಲೋಪ-ಪ್ರಯೋಗಭೇದಗಳು ಉಂಟಾಗುತ್ತವೆಯಲ್ಲದೆ, ಸ್ಮರಣಶಕ್ತಿ ಕುಂಠಿತವಾದಾಗ ಬುದ್ಧಿಶಕ್ತಿಯಿಂದ ಪಾದಪೂರಣ ಮಾಡಿ ಬರೆಯುವ ಸಂಭವವೂ ಉಂಟು. ಕನ್ನಡ ಜೈಮಿನಿ ಭಾರತದ ಹಸ್ತಪ್ರತಿಗಳೂ ಈ ಬಗೆಯ ದೋಷಗಳಿಗೆ ಹೊರತಾಗಿಲ್ಲ. ೧, ೧೩, ೧೯, ೨೮, ೩೪ ನೆಯ ಸಂಧಿಗಳ ಪಾಠಾಂತರಗಳ ಅಭ್ಯಾಸದಿಂದ ಕಂಡುಬಂದ ಸ್ಖಾಲಿತ್ಯ ಗಳನ್ನು (೧) ಅಕ್ಷರ ಸ್ಖಾಲಿತ್ಯ ಮತ್ತು (೨) ಇತರ ಸ್ಖಾಲಿತ್ಯ ಎಂದು ಎರಡು ಭಾಗಗಳಲ್ಲಿ ವಿಂಗಡಿಸಿ ಇಲ್ಲಿ ಸಮಾಲೋಚಿಸಲಾಗಿದೆ.

# ಪಾಠಾಂತರ ಸಂಕಲನದ ಮಾದರಿ ಪುಟಗಳು

ಸಂಧಿ ೧೯, ಪದ್ಯ ೩೩ ಪೂರ್ವಾರ್ಧ (ಸಾಲು ೧, ೨)

| ಪ್ರತಿ ತೀ.ನಂ.ಶ್ರೀ | ಮೊ | ರೆ | ಯ | ಲೊ | ಲ್ಲ | ವು | ತುಂ | ಬಿ | ಕು | ಣಿ | ಯ | ನ | ವಿ | ಲ್ | ಬೆ | ರೆ | ಯ | ಲೊ | ಲ್ಲ | ವು | ಕೊ | ಕಿ | ನ | ಡೆ | ಯ | ಲೊ | ಲ್ಲ | ವು | ಹಂ | ಸೆ |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| ತೊರಗಲ್ಲ | | | | | | | | | | | + ಲೊಲ್ಲವು | | – | | ಲ್ಗೆ | ಲೆ | | | | | | | | | | | | | | |
| ದೇವನಾಗರಿ | | | | | | | | | | | + ಲೊಲ್ಲವು | | | | | | | | | | | | | | | | | | | |
| K 1304 | | | | | | | | ಬೆ | | | + ಲೊಲ್ಲವು | | ಲು | | ನೆ | | | | | | ಚ | ಕ್ರ | | | | | | | | |
| ಟೀಕಾಪ್ರತಿ | | | | | | | | ಬೆ | | | + ಲೊಲ್ಲವು | | | | | | | | | | | | | | | | | | | |
| ಬಿಳಗಿ ನಾಯಕ | | | | | | | | ಬೆ | | | + ಲೊಲ್ಲವು | | | | ನೆ | | | | | | ಚ | ಕ್ಕ | | | | | | | | |

| | | | | | | | |
|---|---|---|---|---|---|---|---|
| **K 1261** | | +<br>ಲೊಲ್ಲವು | | | | | |
| **KA 225** | | +<br>ಲೊಲ್ಲವು | – | ಲ್ಬೆ | +<br>೬ | | |
| **K 294** | | +<br>ಲೊಲ್ಲವು | – | ಲ್ಬೆ | | – – – – – – – – – – | |
| **K 344** | | | | | | | |
| ಧಾರವಾಡ<br>ಕಲ್ಲಚ್ಚು | ಬೆ | +<br>ಲೊಲ್ಲವು | – | | +<br>೬ | | ಸ |

ಸಂಧಿ ೧೯, ಪದ್ಯ ೩೩ ಪೂರ್ವಾರ್ಧ (ಸಾಲು ೩)

| ತೀ.ನಂ.ಶ್ರೀ ಪ್ರತಿ | ಕ | ರೆ | ಯ | ಲೊ | ಲ್ಲೆ | ವು | ಪಿ | ಕಂ | ನು | ಡಿ | ಯ | ಲೊ | ಲ್ಲ | ವು | ಶು | ಕಂ | ನ | ಲಿ | ಯ | ಲೊ | ಲ್ಲ | ವು | ಚ | ಕೊ | ರಿ॥ |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| ತೊರಗಲ್ಲ ಪ್ರತಿ | | | | | ಲ್ಲ | | | | | | | | | | | | | | | | | | | | |
| ದೇವನಾಗರಿ | | | | | ಲ್ಲ | | | | | | | | | | | | | | | | | | | | |
| K 1304 | | | | | ಲ್ಲ | | | | | | | | | | | | | | | | | ವು | | | ರೆ |
| ಟೀಕಾಪ್ರತಿ | | | | | ತಾ | – | | | | | | | | | | | | | | | | | | | |
| ಬಿಳಗಿ ನಾಯಕ | | | | | ಲ್ಲ | | | | | | | | | | | | | | | | | | | | |
| KA 225 | | | | | ಲ್ಲ | | | | | | | | | | | | | | | | | | | +೯ | +೯ |
| K 294 | – | – | – | – | – | – | – | – | – | – | – | – | – | | | | | | | | | | | +೯ | +೯ |
| K 344 | | | | | | | | | | | | | | | | | | | | | | | | | |
| ಧಾರವಾಡ ಕಲ್ಲಚ್ಚು | | | | | ಲ್ಲ | | | | | | | | | | | | | | | | | | | +೯ | +೯ |

ಸಂಧಿ ೧೯, ಪದ್ಯ ೪೪, ಉತ್ತರಾರ್ಧ (ಸಾಲು ೪, ೫)

| ತೀ.ನಂ.ಶ್ರೀ ಪ್ರತಿ | ದಿ | ನ | ದಿ | ನ | ಕೆ | ಬೆ | ಕಾ | ದ | ಬ | ಯ | ಕೆ | ಯ | ಕೆ | ಯಂ | ಸ | ಲಿ | ಸು | ವಂ | ಬ | ನ | ದೊ | ಳಿಂ | ತಿ | ರು | ತಿ | ರ್ದ್ದ | ಳ | ವ | ನಿ | ಸು | ತೆ | ರಾ | ಘ | ವಂ |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| ತೊರಗಲ್ಲ ಪ್ರತಿ | × | × | × | × | × | | | | | | – | – | | | | | | | | | | | | | | | | | | | | | | |
| ದೇವನಾಗರಿ | | | | | | | | | | | – | – | | | | | | | | | | | | | | | | | | | | | | |
| K 1304 | | | | | | | | | | | – | – | | | | | | | | | | | | | | ದರ್ | | | | | | | | |
| ಟೀಕಾಪ್ರತಿ | | | | | | | +ೀ | | | | – | – | | | | | | | | | | | | | | ದರ್ | | | | | | | | ವೇಂ |
| ಬಿಳಿಗಿ ನಾಯಕ | | | | | | | | | | | | | | | | | | | | | | | | | | | | | | | | | | |
| K 1261 | | | | | | | | | | | – | – | | | | | | | | | | | ತ್ರಿ | | | | | | | | | | | |
| KA 225 | | | | | | | +ೀ | | | | – | – | | | | | | | | | | | | | | ದರ್ | | | | | | | | ವೇಂ |
| K 294 | | | | | | | +ೀ | | | | – | – | | | | | | | | | | | | | | ದರ್ | | | | | | | | ವೇಂ |
| K 344 | | | | | | | | | | | – | – | | | | | | | | | | | | | | | | | | | | | | |
| ಧಾರವಾಡ ಕಲ್ಲಚ್ಚು | | | | | | | +ೀ | | | | – | – | | | | | | | ಜ | | | | | | | ದರ್ | | | | | | | | ವೇಂ |

ಸಂಧಿ ೧೯, ಪದ್ಯ ೪೪, ಉತ್ತರಾರ್ಧ (ಸಾಲು ೬)

| ತೀ.ನಂ.ಶ್ರೀ ಪ್ರತಿ | ದ್ರ | ನ | ಚ | ರ | ಣ | ಕ | ಮ | ಲ | ಮಂ | ಧ್ಯಾ | ನಿ | ಸು | ತ | ಮ | ರ | ದ | ಖಿ | ಳ | ರಾ | ಜ | ವಿ | ಭ | ವ | ಶ್ರಿ | ಯ್ಯ | ನೂ | ‖೪೪‖ |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| ತೊರಗಲ್ಲ ಪ್ರತಿ | | | × | × | × | × | × | | | | | | | | ಟ | | | | | ಜ್ಯ | | | | | ಯ | | |
| ದೇವನಾಗರಿ | | | | | | | | | | ಧೇ | | | | | ರೆ | | | | | ಜ್ಯ | | | | | | | |
| K 1304 | | | | | | | | | | | | | | | | | | | | ಜ್ಯ | | | | ದಸಿರಿಯನೂ | | | |
| ಟೀಕಾಪ್ರತಿ | | | | | | | | | | | | | | | | | | | | ಜ್ಯ | | | | | + ೯ | | |
| ಬಿಳಗಿನಾಯಕ | | | | | | | | | | | | | | | | | | | | ಜ್ಯ | | | | ದಶಿರಿಯನೂ | | | |
| K 1261 | | | | | | | | | | | | | | | | | | | | | | | | | | | |
| KA 225 | | | | | | | | | | | | | | | | | ←— | —— | —— | —— | —— | —— | —— | —— | —— | ——→ | |
| K 294 | | | | | | | | | | | | | | | | | | | | ಜ್ಯ | – | – | – | | ಯ | | |
| K 344 | | | | | | | | | | | | | | | | | | | | | | | | | | | |
| ಧಾರವಾಡ ಕಲ್ಲಚ್ಚು | | | | | | | | | | | | | | | | | | | | ಜ್ಯ | | | | | + ೯ | | |

## ಅಕ್ಷರ ಸ್ಖಾಲಿತ್ಯಗಳು

ಅ > ಆ ಆಗಿರುವುದಕ್ಕೆ : ಪಾಂಡ**ವಾ**ಸ್ಥಾಪನಾ ('ಖ' ಪ್ರತಿ), (೩೪.೪೦)

ಆ > ಅ, ಅಂ, ಊ ರೂಪ ತಳೆದುದಕ್ಕೆ—ಸಂ. ೩೪, ಪ. ೪೦ : ಕೀರ್ತಿ ಲತೆಯ **ಮಾಡ** ('ಖ'), ಕೀರ್ತಿಲತೆಯ **ಮಡ** ('ಕ'), ಕೀರ್ತಿಲತೆಯ ಮಂಡ('ದ'), ಕೀರ್ತಿಲತೆಯ ಮೂಡ ('ತ').

ಆ > ಅ ಆದುದಕ್ಕೆ; ಸಂಧಿ ೩೪, ಪ. ೨೨ : ಶಕ್ರಾದಿ ದೇವತೆಗಳ್ಗೆ ('ಕ') ಮತ್ತು ಎಲ್ಲ ಪ್ರತಿ) > ಶಾಕ್ರದಿ ದೇವತೆಗಳ್ಗೆ (ಖ)

**ಯಶ್ರುತಿಗೆ,** ಎಂದರೆ ಇ ಈ ಗಳೊಂದಿಗೆ ಯ್ ಸೇರಿಕೊಳ್ಳುವುದಕ್ಕೆ : ಸಂಧಿ ೩೪, ಪದ್ಯ ೧೬ : **ಈ**ಕ್ಷಿಸಲಿ ಸಕಲ ಜನ (ಛ) > **ಯಿಾ**ಕ್ಷಿಸಲಿ ಸಕಲಜನ ('ಕ' ಆದಿ ಎಲ್ಲ ಪ್ರತಿ) ಸಂ. ೧, ಪ. ೯ : ಇಷ್ಟವಾಗದೆ ಮಾಣದು > ಯಿಷ್ಟವಾಗದೆ ಮಾಣದು (ಕ, ಖ, ಘ, ಜ).

**ವಶ್ರುತಿಗೆ** ಎಂದರೆ ಉ, ಊಗಳೊಂದಿಗೆ ವ್ ಸೇರಿಕೊಳ್ಳುವುದಕ್ಕೆ : ಸಂ. ೧೯ ಪ. ೧೪; ಉಕ್ಕಿದವು ಕಂಬನಿ (ಛ, ತ, ಫ, ಜ), > ವುಕ್ಕಿದೌ ಕಂಬನಿ (ಕ, ಖ, ಗ).

ಯಶ್ರುತಿ ಮತ್ತು ವಶ್ರುತಿ ದೋಷಗಳು ಹಿಂದಣ ಎಲ್ಲ ಹಸ್ತಪ್ರತಿಗಳಲ್ಲಿಯೂ ಕಂಡುಬರುತ್ತಿದ್ದು ಆದು ಬರೆಹದ ರೀತಿಯ ಸರ್ವಸಾಮಾನ್ಯ ವಿಶೇಷವೆಂಬಂತೆ ತೋರು ವುದು.

**ಕ > ತ** ಎಂದಾಗಿರುವುದಕ್ಕೆ : ಸಂ. ೧೯, ಪ. ೫೦ : **ಕೊ**ಡುವ ಬೇಡುವ (ಕ ಆದಿ ಎಲ್ಲ) > **ತೊ**ಡುವ ಬೇಡುವ (ಖ)

**ಗ > ದ** : ಸಂ. ೧೯, ಪ. ೧೫ : ಪೋಗೆಂದು ಲಕ್ಷ್ಮಣಂ (ಎಲ್ಲ ಪ್ರತಿ) > ಪೋದೆಂದು ಲಕ್ಷ್ಮಣಂ (ಖ)

**ಚ > ಟ** : ಸಂ. ೧೯, ಪ. ೩೧ : ಎಳಗಱು ಬಿಚ್ಚುವಂತೆ (ಎಲ್ಲ) > ಎಳಗರು ಬಿಟ್ಟುವಂತೆ (ಖ).

**ಚ > ಭ** : ಸಂ. ೧೯, ಪ. ೪೫ : ಲವದಿಂದ ಶೇ**ಚ**ನಂ (ಎಲ್ಲ) > ಲ X X X X **ಭ**ನಂ (ಖ).

**ತ > ಕ** : ಸಂ. ೩೪, ಪ. ೧೫ : ನೆರೆದುದು ಸುಮಂತ್ರತದ (ಝ, ತ, ಚ, ಫ) > ನೆರೆದಸೂರ್ಯಯಂತ್ರಿಕದ (ದ):

**ದ > ರ** : ಸಂ. ೧೯, ಪ. ೯ : ಮುಖದಂತೆ ದಿ**ವ**ದಂತೆ (ಕ, ದ, ಗ, ಛ, ಝ) ಮುಖದಂತೆ **ದಿ**ವಿಯಂತೆ (ಖ) > ಮುಖದಂತೆ **ರ**ವಿಯಂತೆ (ಜ).

**ನ > ಣ** : ಸಂ. ೧೯, ಪ. ೨೪ : ಹಿಂದಣ ಜನಸ್ಥಾ**ನ** (ದ, ಛ, ತ, ಫ) > ಹಿಂದಣ ಜನಸ್ಥಾಣ (ಕ, ಖ, ಗ, ಝ).

**ಪ > ಪ** : ಸಂ. ೧೩, ಪ. ೨೧ : ಪೃಥೆ ನೆಲಕೆ (ಕ, ಗ, ಚ, ಝ, ತ, ದ) > ಪೃಥ ನೆಲಕೆ (ಖ) > ನೃಥ ನೆಲಕ್ಕೆ (ಛ, ಫ).

**ಬ > ಖ** : ಸಂ. ೧೩, ಪ. ೫೫ : ವಿಾಗ ಹಲುಬಲ್‌ತನ್ನನೂ (ಎಲ್ಲ)> ವಿಾಗ **ಹಲಖಲ್ತ**ನ್ನನೂ (ಖ).

**ಬ > ಚ** : ಸಂ. ೩೪, ಪ. ೧೭ : **ಬಿ**ತ್ತರದ ಪರಿಪೂತವಾಜಿ (ಕ, ಖ, ಗ, ದ ಇತ್ಯಾದಿ)> **ಚಿ**ತ್ತರದ ಪರಿಪೂತವಾಜಿ (ಝ, ತ).

**ಮ > ಪ** : ಸಂ. ೧೯, ಪ. ೫೦ : **ಮೊ**ಳೆವಲ್ಲ ಜೊಲ್ಲೊಗೆಯೆ (ಕ, ಖ, ಗ ಇತ್ಯಾದಿ) > **ಪೊ**ಳೆವಲ್ಲ ಜೊಲ್ಲೊಗೆಯೆ (ಛ, ಫ).

**ಮ > ಯ** : ಸಂ. ೩೪, ಪ. ೧೫ : ಸು**ಮ**ಂತ್ರಿತದ ಯೂಪ (ಝ, ತ, ಚ ಇತ್ಯಾದಿ)> ಸು**ಯ**ಂತ್ರಿಕದ (ಖ).

**ರ > ಲ** : ಸಂ. ೧೩, ಪ. ೫೦ : ನವಿ**ರ** ಹಿಣಿಲ ಕಾಂತಿ (ಕ, ಖ, ಗ ಇತ್ಯಾದಿ) ನವಿ**ಲ** ಹಿಣಿಲ ಕಾಂತಿ (ಝ, ತ).

**ವ > ಮ** : ಸಂ. ೧, ಪ. ೪ : **ವ**ರದೆ ಕಲ್ಯಾಣಿ (ಕ, ಗ ಇತ್ಯಾದಿ)> **ಮ**ರದೆ ಕಲ್ಯಾಣಿ (ಖ) ; ಸಂ. ೧೯, ಪ. ೩೬ : ಸಿಥಿಲ ಮಾದ**ವ**ಯುವದ (ಕ,ಗ ಇತ್ಯಾದಿ)> ಸಿಥಿಲಮಾದ**ಮ**ಯುವದ (ಖ).

**ಸ > ನ** : ಸಂ. ೧೯, ಪ. ೪೧ : ಟಿಲ್ಲಮಂ **ಸ**ಲಿಸಿ (ಕ, ಗ ಇತ್ಯಾದಿ)> ಟಿಲ್ಲಮಂ **ನಿ**ಲಿಸಿ (ಖ).

**ಸ > ಪ** : ಸಂ. ೩೪, ಪ. ೨೨ : ಸುತ್ಯಾಹದಿಂ **ಸವನ** ಸಮಯದೊಳ್ (ಕ,ಗ, ಛ, ಝ, ತ ಇತ್ಯಾದಿ) > ಸುತ್ಯಾಹದೊಳ್ **ಪವನ** ಸವನವೊಳ್ (ಖ), ಸುತ್ಯಾಹದಿಂ ಸವನ ಪವನದೊಳ್ (ದ).

## ಇತರ ಸ್ಖಾಲಿತ್ಯಗಳು

### ಪ್ರತಿನಿಧಾನ ಸ್ಖಾಲಿತ್ಯ (Substitution)

ಪ್ರತಿನಿಧಾನವೆಂಬ ಸ್ಖಾಲಿತ್ಯವು ಎರಡು ವಿಧವಾಗಿರುವುದು. ಒಂದು ಸಮಾನಾರ್ಥಕ ಪ್ರತಿನಿಧಾನ, ಇನ್ನೊಂದು ಭಿನ್ನಾರ್ಥಕ ಪ್ರತಿನಿಧಾನ. ಈಗ ಪಾಠಾಂತರಗಳನ್ನು ಸಂಕಲಿಸಿ ನೋಡಿದ ಜೈಮಿನಿ ಭಾರತದ ಸಂಧಿಗಳಲ್ಲಿ ಸಮಾನಾರ್ಥಕ ಪ್ರತಿನಿಧಾನ ಸ್ಖಾಲಿತ್ಯಗಳನ್ನು ಹೆಚ್ಚಾಗಿ ಕಾಣುತ್ತೇವೆ. ಹೀಗಾಗಲು ಈ ಕಾವ್ಯವನ್ನು ಗಮಕ ವಿಧಾನದಿಂದ ಓದುವ ಪರಿಪಾಠವಿದ್ದುದು ಕಾರಣವಾಗಿರಲು ಸಾಕು ಎಂದು ತೋರುತ್ತದೆ. ಒಂದು ಸಾಲನ್ನು ಪುನರಾವರ್ತಿಯಾಗಿ ಹೇಳುವಾಗ, ಹಾಡಿದ್ದನ್ನೇ ಹಾಡದೆ, ಅರ್ಥ ಸ್ಪಷ್ಟತೆಗಾಗಿ ಸಮಾನಾರ್ಥದ ಪದಗಳನ್ನು ಛಂದಸ್ಸಿಗೆ ಬಾಧೆ ತಟ್ಟದಂತೆ ಸೇರಿಸುವುದು ಗಮಕಗಾಯನದ ಒಂದು ವೈಶಿಷ್ಟ್ಯವಾಗಿದೆ. ಅಂತೆಯೇ ಅನೇಕ ಸಮಾನಾರ್ಥಕ ಪದಗಳ ಪಾಠಾಂತರಗಳು ಹಸ್ತಪ್ರತಿಗಳಲ್ಲಿ ಗೋಚರಿಸುವವು. ಅಂತಹ ಕೆಲವು ಸಮಾನಾರ್ಥಕ ಪ್ರತಿನಿಧಾನದ ಉದಾಹರಣೆಗಳನ್ನು ಇಲ್ಲಿ ಕೊಟ್ಟಿದೆ :

ಸಂ. ೧, ಪ. ೫ :

ಎಸಕದೊಳಿಪ್ಪ ಕಾವ್ಯ (ಕ,ಗ,ದ,ಛ,ಫ,ಚ)
ಎಸಕವಪ್ಪೋಲ್ವ ಕಾವ್ಯ (ಖ,ಝ,ತ,ಥ)

ಸಂ. ೧೩, ಪ. ೩೮ :

ನೆಚ್ಚನಾ ಶರವನೂ (ಖ)

ನೆಚ್ಚನಾ ಕಣೆಯುನೂ (ಎಲ್ಲ)

ಸಂ. ೧೩, ಪ. ೩೪ :

ಖಿರ್ರನೆ ಕಪೀಶ್ವರಂ (ಕ,ಗ,ಛ,ಝ,ತ,ದ)
ಕರ್ರನೆ ಕಪೀಶ್ವರಂ (ಚ)
ಝುರ್ರನೆ ಕಪೀಶ್ವರಂ (ಥ)
ಬಿರ್ರನೆ ಕಪೀಶ್ವರಂ (ಖಿ)

ಸಂ. ೧೩, ಪ. ೫೩ :

ಶೈಲಾಗ್ರದಿಂದ ಕಂಮುಡುವಿನೊಳ್ (ಎಲ್ಲ)
ಶೈಲಾಗ್ರದಿಂದ ಕಾಳ್ಮಡುವಿನೊಳ್ (ಛ,ಫ)

ಸಂ. ೧೯, ಪ. ೪೪ :

ವಸ್ತುಗಳ ಮುನಿವಧುಗಳ್ (ಕ,ಗ,ಛ,ದ,ಫ)
ವಸ್ತುವಂ ಋುಷಿವಧುಗಳ್ (ಖ,ಝ,ತ,ಚ,ಜ)

ಸಂ. ೧೯, ಪ. ೪೩ :

ಪೂಗೊಳಂಗಳ ವಿಲಾಸದಿಂದ (ಕ,ಗ,ದ,ಛ,ಝ,ತ,ಫ,ಥ)
ಪೂಗೊಳಂಗಳ ವಿಕಾಶ (ಸ)ದಿಂದ (ಖ,ಜ)

ಸಂ. ೧೯, ಪ. ೩೭ :

ಕೇಣಮುಂ ಬಿಟ್ಟಾತ್ಮಘಾತಕ (ಎಲ್ಲ)
ಕೇಣಮುಂ ಬಿಡದಾತ್ಮಘಾತಕ (ಖ)

ಸಂ. ೧೯, ಪ. ೨೮ :

ತನ್ನ ಮಾತೆಯಂ ಜಾನಕಿಯು (ಎಲ್ಲ)
ತನ್ನ ಮಾತೆಯಂ ಸೀತೆಯುಂ (ಖ)

ಸಂ. ೧೯, ಪ. ೧೯ :

ಹರಧನುವನುಡಿದೆನ್ನ (ಕ,ಖ,ಗ,ಚ,ಛ,ಥ,)
ಹರಧನುವ ಮುರಿದೆನ್ನ (ಉಳಿದುವು)

ಸಂ. ೨೮, ಪ. ೧೮ :

ತೊಳತೊಳಗುತಿಹ ಸೊಬಗು (ಎಲ್ಲ)
ಥಳಥಳಿಸುತಿಹ ಸೊಬಗು (ಥ)

ಸಂ. ೨೮, ಪ. ೪೦ :

ಅಂತಕನ ದೂತಸಂಘಾತದಂತೆ (ದ,ಛ,ಝ,ತ,ಖ)
ಅಂತಕನ ದೂತ ಸಂದೋಹದಂತೆ (ಕ,ಗ,ಚ,ಫ)

ಸಂ. ೨೮, ಪ. ೪೩ :

ಸೊಕ್ಕಾನೆಗಳ ಸೊವಡನುಱಿಃ (ಕ)
ಸೊಕ್ಕಾನೆಗಳ ಸೊಗಡನುರ್ವ (ಖ)

ಸಂ. ೩೪, ಪ. ೨ :

ಆ ವಶಿಷ್ಟನ ರಮಣಿ ರುಕ್ಮಿಣಿಗೆ (ಎಲ್ಲ)
ಆ ವಶಿಷ್ಟನ ರಾಣಿ ರುಕ್ಮಿಣಿಗೆ (ಖ)

ಸಂ. ೩೪, ಪ. ೧೦ :

ಭೀಮ ಫಲುಗುಣರ ಸನ್ಮಾನದ (ಕ,ಗ,ದ,ಝ,ತ)
ಭೀಮ ಫಲುಗುಣರ ಸತ್ಕಾರದ (ಖ)

ಸಂ. ೩೪, ಪ. ೧೩ :

ಅಭಿಪ್ರಾಯಮಂ ಪ್ರೀತಿಯಿಂ (ಕ,ಛ,ಚ,ಫ)
ಅಭಿಪ್ರಾಯಮಂ ನೋದದಿಂ (ಝ,ತ,ದ)

ಸಂ. ೩೪, ಪ, ೨೫ :

ಭಾಗದಿಂ ತುಷ್ಟಿವಡದುದು (ಎಲ್ಲ)
ಭಾಗದಿಂ ತೃಪ್ತಿವಡದುದು (ಖ)

ಸಂ. ೩೪, ಪ. ೩೯ :

ಭಾರತಾಗ್ರಣಿ ಯುಧಿಷ್ಠಿರಂ (ಎಲ್ಲ)
ಭೂವರಾಗ್ರಣಿ ಯುಧಿಷ್ಠಿರಂ (ಖ)

ಸಂ. ೩೪, ಪ. ೪೧ :

ಸಂಗತಿಗಳಂ ಸಕಲ ಜನಕೆ (ಎಲ್ಲ)
ಸಂಗತಿಗಳಂ ಜಗದ ಜನಕೆ (ಖ)

## ಭಿನ್ನಾರ್ಥ ಶಬ್ದ ಪ್ರತಿನಿಧಾನ

ಸಂ. ೧, ಪ. ೨ :

ಪಾವನನುಳಾಭರಣಮಂ ಮಾಡಿ (ಕ,ಖ,ದ,ಛ,ಫ)
ಪಾವನತುಳಾಭರಣಮಂ ಮಾಡಿ (ಝ,ತ,ಚ)

ಸಂ. ೧೩, ಪ. ೧೧ :

ನಿಲಯರುದ್ರನ ಕಣ್ಗಿಚ್ಚಿದೋ (ಛ,ಝ,ತ,ಚ,ಥ,ಫ)
ನಿಲಯರುದ್ರನ ಪಣೆಯ ಕಣ್ಗಿಚ್ಚಿದೋ (ಕ,ಖ,ಗ)

ಸಂ. ೧೯, ಪ. ೪ :

ಮುನ್ನೀರು ಮುಂತಾಗಿ ಮೂದೇವರು (ಕ,ಗ,ದ,ಝ,ತ,ಚ,ಜ)
ಮುನ್ನೀರು ಮುಂತಾದ ಮೂದೇವರು (ಖ,ಫ,ಥ)

ಸಂ. ೧೯, ಪ. ೨೩ :

ಸೀತೆ ಮಗುಳಿಂತೆಂದಳು (ಎಲ್ಲ)
ಸೀತೆ ಬಳಿಕಿಂತೆಂದಳು (ಖ)

ಸಂ. ೩೪, ಪ. ೧೦ :

ಭೀಮ ಫಲುಗುಣರ ಸನ್ಮಾನದ (ಕ,ಚ,ದ,ಝ,ತ)
ಭೀಮ ಫಲುಗುಣರ ಸನ್ನಾಹದ (ಛ,ಘ)

ಸಂ. ೩೪, ಪ. ೩೨ :

ಸುಕೃತಮಂ ಕೊಟ್ಟು ತನ್ನಮುಳ ಮುಖಕೆ (ಎಲ್ಲ)
ಸುಕೃತಮಂ ಕೊಟ್ಟು ತನ್ನಖಿಳ ಮುಖಕೆ (ಖ)

## ಸ್ಥಾನಪಲ್ಲಟ (Transposition)

ಸಂ. ೧, ಪ, ೧೧ :

ಕರ್ನಾಟ ಕವಿ ಚೂತವನಚೈತ್ರ ಲಕ್ಷ್ಮೀಶ (ಕ,ಖ,ಘ,ಚ,ಝ,ತ,ಜ)
ಕರ್ನಾಟ ಕವಿ ಚೈತ್ರವನಚೂತ ಲಕ್ಷ್ಮೀಶ (ದ,ಥ)
ಕರ್ನಾಟ ಕವಿ ಚರಿತ್ರ (ತ ?) ವನಚೂತ ಲಕ್ಷ್ಮೀಶ (ಖ)

ಸಂ. ೧೩, ಪ. ೧೯ :

ಭೀಷ್ಮಕರ್ಣದ್ರೋಣ ಮಾದ್ರಪತಿ ಮೊದಲಾದ (ಎಲ್ಲ)
ಕರ್ಣಭೀಷ್ಮದ್ರೋಣ ಮಾದ್ರಪತಿ ಮೊದಲಾದ (ಖ)

ಸಂ. ೧೩, ಪ. ೩೧ :

ಪೋಗಲ್ಕೆ ತಲೆದೂಗಿ ಮುರಹರಂ (ಎಲ್ಲ)
ಪೋಗಲ್ಕೆ ಮುರಹರಂ ತಲೆದೂಗಿ (ಥ)

ಸಂ. ೧೯, ಪ. ೫ :

ಮುನಿಜನಂ ಸೇವಿಸುವ ಭಾವಿಸುವ (ಎಲ್ಲ)
ಮುನಿಜನಂ ಭಾವಿಸುವ ಸೇವಿಸುವ (ಜ)

ಸಂ. ೧೯, ಪ. ೬ :

ಖರ್ಜೂರ ಜಂಬೀರ ಕಿತ್ತಳೆ ಮಾತುಳಂಗ (ಖ,ಥ)
ಜಂಬೀರ ಖರ್ಜೂರ ಕಿತ್ತಳೆ ಮಾತುಳಂಗ (ಕ,ಗ, ಎಲ್ಲ)
ಜಂಬೀರ ಕಿತ್ತಳೆ ಖರ್ಜೂರ ಮಾತುಳಂಗ (ಜ)

ಸಂ. ೧೯, ಪ. ೮ :

ವೃಕ ಶೂಕರ ವ್ಯಾಘ್ರ ಚಯಮುಯಂ ಭಯಮುಯಂ (ಕ ಮತ್ತು ಎಲ್ಲ)
ವೃಕ ಸೂಕರ ವ್ಯಾಘ್ರ ಭಯಮುಯಂ ಚಯಮುಯಂ (ಥ)

ಸಂ. ೧೯, ಪ. ೧೪ :

ಸಿಕ್ಕಿದಾ ಮಾತುಗಳ್ ಕಂಠದೊಳ್ (ಥ)
ಸಿಕ್ಕಿದವು ಕಂಠದೊಳ್ ಮಾತುಗಳ್ (ಕ ಮತ್ತು ಎಲ್ಲ)

ಸಂ. ೧೯, ಪ. ೩೨ :

ಅರಸ ಕೇಳಲ್ಲಿರ್ದ್ದ ಪಕ್ಷಿಮೃಗ ಜಂತುಗಳ್ (ಕ ಮತ್ತು ಎಲ್ಲ)
ಅರಸ ಕೇಳಲ್ಲಿರ್ದ್ದ ಮೃಗಪಕ್ಷಿ ಜಂತುಗಳ್ (ಜ)

ಸಂ. ೧೯, ಪ. ೪೯ :

ಸಂತಸದ ಬೆಳದ ಬೆಳಸಿನ ಪಸುಗೆಯೊ (ಖ)
ಸಂತಸದ ಬೆಳಸಿನ ಬೆಳದ ಪಸುಗೆಯೊ (ಎಲ್ಲ)

ಸಂ. ೨೮, ಪ. ೧ :

ಕುಗ್ಗಿದಾ ಕೋಗಿಲೆಗಳ ಧನಿಗಳ್ಕೊರಳೊಳು (ಕ,ಗ,ದ,ಚ,ಥ)
ಕುಗ್ಗಿದಾ ಕೂಡೆ ಕೋಗಿಲೆಯ ಕೊರಳ್ದನಿಗಳು (ಖ)

ಸಂ. ೨೮, ಪ. ೧೧ :

ಕಲಿ ಚಂದ್ರಹಾಸಾಖ್ಯನರಸಲ್ಲಿಗಾ ನೃಪಂ (ಕ,ಖ, ಎಲ್ಲ)
ಕಲಿ ಚಂದ್ರಹಾಸಾಖ್ಯನಲ್ಲಿಗರಸಾ ನೃಪಂ (ದ, ಚ)

ಸಂ. ೨೮, ಪ. ೩೯ :

ಭೂಗಗನ ವಾಯು ಶಶಿರವಿಗಳ್ (ಎಲ್ಲ)
ಭೂಗಗನ ವಾಯು ರವಿಶಶಿಗಳ್ (ಖ,ಥ)

ಸಂ. ೩೪, ಪ. ೪೨ :

ಐಶ್ವರ್ಯಮಾಯುಷ್ಯಮಾರೋಗ್ಯಮಭಿವೃದ್ಧಿ (ಖ,ಘ)
ಐಶ್ವರ್ಯಮಾರೋಗ್ಯಮಾಯುಷ್ಯಮಭಿವೃದ್ಧಿ (ಎಲ್ಲ)

ಸಂ. ೩೪, ಪ. ೪೩ :

ಈ ಕಥೆಯನೊಲವಿಂದ ಪೇಳ್ವರ್ಗೆ ಕೇಳ್ವರ್ಗೆ (ಕ,ಖ,ಚ,ದ)
ಈ ಕಥೆಯನೊಲವಿಂದ ಕೇಳ್ದರ್ಗೆ ಪೇಳ್ದರ್ಗೆ (ಝ,ತ)

### ಅಕ್ಷರಸ್ಥಾನ ವ್ಯತ್ಯಾಸ (Metathesis)

ಸಂ. ೧೩, ಪ. ೨೫ :

ಸಾಷ್ಟಾಂಗ ಪ್ರಮಾಣದಿಂ (ಖ)
ಸಾಷ್ಟಾಂಗ ಪ್ರಣಾಮದಿಂ (ಎಲ್ಲ)

### ಸದೃಶಾಕ್ಷರ ಲೋಪಲೇಖನ (Haplography)

ಸಂ. ೧೯, ಪ. ೧ :

ನೆರವಿ ನೆರವಿಯ ಜನಂ ಗುಜುಗುಜಿಸೆ (ಕ ಮತ್ತು ಎಲ್ಲ)
ನೆರವಿ ನೆರವಿಯ ಜನಂ ಗುಚಿಸೆ (ಖ)

ಬರೆಹದಲ್ಲಿಯ ಅಕ್ಷರಸಾದೃಶ್ಯದಿಂದ ಜ>ಚ ಭ್ರಾಂತಿ ಉಂಟಾಗುವುದುಂಟಾದರೂ ಇಲ್ಲಿ ಗುಜಿಸೆ>ಗುಚಿಸೆ ಆಗಿದೆ ಎಂದು ಹೇಳಲು ಬರುವಂತಿಲ್ಲ. ಧ್ವನ್ಯನುಕರಣವಾಚಿ ಶಬ್ದಗಳಿಗೆ ಎಲ್ಲ ಕಡೆಗೂ ಏಕರೂಪತೆ ಕಂಡುಬರುವದಿಲ್ಲ. ಪ್ರಸ್ತುತ ಕಿವಿಯಲ್ಲೆಂಬಂತೆ ಅಸ್ಪಷ್ಟವಾಗಿ ಆಡುವ–ಆಡಿಕೊಳ್ಳುವ ಮಾತನ್ನು 'ಗುಜು ಗುಜು ಮಾತು', 'ಕುಚು ಕುಚು ಮಾತು', 'ಗುಚು ಗುಚು ಮಾತು' ಹೀಗೇನೆಂದರೂ ಪರವಿಲ್ಲ. 'ಖ'

ಪ್ರತಿಯಲ್ಲಿ ಗುಚುಗುಚಿಸೆ ಎಂದು ಬರೆಯಬೇಕಾಗಿದ್ದಲ್ಲಿ ಸದೃಶಾಕ್ಷರ ಲೋಪವೆಂಬ ಹಸ್ತದೋಷದಿಂದ 'ಗುಚಿಸೆ' ಎಂದಾಗಿದೆ.

**ಪುನರ್ಲೇಖನ (Dittography)**

ಸಂ. ೩೪, ಪ. ೩೮ :

ಭೀಮ ಪಾರ್ಥರನೊಡನೊಡನೆ ಕಳುಹಿ ಕಳುಹಿದಂ ನೃಪನವರ ನಗರಿಗಳ್ಗೆ (ಝ, ತ).
ಭೀಮಪಾರ್ಥರನೊಡನೊಡನೆ ಕಳುಪಿದಂ ನೃಪರನವರವರ ಪುರಕೆ (ಖ).

ಇಲ್ಲಿ ಪರಿಶೋಧಿತವಾಗಿರುವ ೧೧ ಪ್ರತಿಗಳಲ್ಲಿ ಪ್ರತಿನಿಧಾನ, ಶಬ್ದಗಳ ಸ್ಥಾನ ವ್ಯತ್ಯಾಸ, ಅಕ್ಷರಗಳ ಸ್ಥಾನ ವ್ಯತ್ಯಾಸದ ಪಾಠಗಳು ಸಾಕಷ್ಟು ಸಿಕ್ಕುತ್ತಿವೆ. ಇದಲ್ಲದೆ, ೧೮, ೨೬, ೩೩ ಮತ್ತು ೩೪ನೆಯ ಸಂಧಿಗಳಲ್ಲಿ ಪ್ರಕ್ಷೇಪ (Interpolation) ಪದ್ಯಗಳು ದೊರೆಯುತ್ತವೆ. ಸಂಧಿ ೩೩ರಲ್ಲಿ ಫ, ಜ ಪ್ರತಿಗಳಲ್ಲಿ ೧೫ ಪ್ರಕ್ಷಿಪ್ತ ಪದ್ಯಗಳು ಕಂಡು ಬರುತ್ತವೆ. ಆದರೆ ಆ ಎಲ್ಲ ಪದ್ಯಗಳು ಹಿಂದೆ ಬೇರೆ ಬೇರೆ ಸಂಧಿಗಳಲ್ಲಿ ಬಂದುವಾಗಿದ್ದು ಇಲ್ಲಿ ಪುನರ್ಲಿಖಿತವಾಗಿ ಸೇರಿವೆ.

'ಫ' ಪ್ರತಿಯಲ್ಲಿ ಸಂ. ೩೩ರ ೨೨ನೆಯ ಪದ್ಯ—

ಧರಣಿಪತಿ ಕೇಳ್ಬಂದುದಾ ಸಮಯದೊಳ್ಕುದುರೆ
ಫಲುಗುಣನಲ್ಲಿ ಮಡಿದನಾತ್ಮಜನಿಂದ ತಜ್ಜನನಿ
ಫಣಿರಾಜ ತನುಜೆ ಪರಿಹರಿಸಿದಳ್ಮುಂದೆ ನಡೆಯಿತು ತಾಮ್ರಕೇತು ತಡದನೂ ||
ರಣದೊಳೆಮ್ಮೆಲ್ಲರುಂ ಗೆಲ್ದಡಾತನ ಪಿತಂ
ಗಣನಿಧಿ ಮಯೂರಧ್ವಜಂ ತಂನ ಯಜ್ಞಮುಂ
ಗಣಿಸದೆಮಗೊಪ್ಪಿಸಿ ತುರಂಗಮುಂ ಸಹಿತೈತಂದನರಸಕೇಳ್ಕ್ಕೌತುಕವನೂ ||

ಇಲ್ಲಿ ಸೇರಿರುವ ಈ ಪದ್ಯ ಹೊಸದೇನಲ್ಲ. ಈ ಹಸ್ತಪ್ರತಿಗೂ ಹೊಸದಲ್ಲ. ಈ ಸಂಧಿಯಲ್ಲಿಯೇ ೧೦ನೆಯ ಪದ್ಯವಾಗಿಯೂ ಇದೆ :

ಮಣಿಪುರಕೆ ಬಂದುದಾ ಸಮಯದೊಳ್ ಕುದುರೆ ಫಲು
ಗುಣನಲ್ಲಿ ಮಡಿದನಾತ್ಮಜನಿಂದೆ ಬಳಿಕದಂ
ಫಣಿರಾಜ ತನುಜೆ ಪರಿಹರಿಸಿದಳ್ಮುಂದೆ ನಡೆಯತ್ತಾಮ್ರಕೇತು ತಡೆದು ||
ರಣದೊಳೆಮ್ಮೆಲ್ಲರಂ ಗೆಲ್ದೊಡಾತನ ಪಿತಂ
ಗುಣನಿಧಿ ಮಯೂರಧ್ವಜಂ ತನ್ನಯಜ್ಞಮುಂ
ಗಣಿಸದೆಮಗೊಪ್ಪಿಸಿ ತುರಂಗ ಸಹಿತೈತಂದನರಸಕೇಳ್ಕ್ಕೌತುಕವನೂ ||

ಈ ಎರಡು ಪದ್ಯಗಳಲ್ಲಿ ಸ್ವಲ್ಪ ಮಾತ್ರ ಶಬ್ದ ವ್ಯತ್ಯಾಸಗಳು ಅಲ್ಲಲ್ಲಿ ಕಂಡುಬರುತ್ತವೆ. ಆದರೆ ೧೦ನೆಯದಾಗಿ ಬಂದಿದ್ದ ಈ ಪದ್ಯವೇ ಹೆಚ್ಚು ಶುದ್ಧವಾಗಿದೆ.

ಹೀಗೆ, ಅಲ್ಲಲ್ಲಿ ಕೆಲವೊಂದು ಕಾವ್ಯಭಾಗವನ್ನು ಬಿಟ್ಟುಬಿಡುವುದು, ಒಂದು ಸಂಧಿಯ ಪದ್ಯಗಳನ್ನು ಇನ್ನೊಂದು ಸಂಧಿಯಲ್ಲಿ ಸೇರಿಸುವುದು, ಶಬ್ದಗಳ ಮತ್ತು ಅಕ್ಷರ

ಗಳನ್ನು ಸ್ಥಾನಪಲ್ಲಟಿಸಿ ಬರೆಯುವುದು ಮೊದಲಾದ ಸ್ಖಾಲಿತ್ಯಗಳು ಜೈಮಿನಿ ಭಾರತ ಕಾವ್ಯದ ಹಸ್ತಪ್ರತಿಗಳಲ್ಲಿ ಹಲವಾರು ಕಂಡುಬರುತ್ತವೆ.

ಹ್ರಸ್ವ–ದೀರ್ಘ, ಅಲ್ಪಪ್ರಾಣ–ಮಹಾಪ್ರಾಣ, ಶ,ಷ,ಸ, ಲ–ಳ, ಮತ್ತು ರ–ಱ ಇವುಗಳನ್ನು ವ್ಯತ್ಯಾಸವಿಲ್ಲದೆ ಬಳಸಿರುವುದು, ದಡೆ>ದೊಡೆ ಎರಡೂ ರೂಪಗಳನ್ನು ಪ್ರಯೋಗಿಸಿರುವುದು ಹಸ್ತಪ್ರತಿಗಳಲ್ಲಿ ತುಂಬಾ ಕಂಡುಬರುತ್ತದೆ. ಈ ಸಾಮಾನ್ಯ ದೋಷಗಳಲ್ಲದೆ, ಕೆಲಕೆಲವು ಸಲ, ಶುದ್ಧಮೂಲವನ್ನು ಗುರುತಿಸಲಾಗದಷ್ಟು ಶಬ್ದರೂಪ ವಿಕೃತವಾಗಿರುವುದೂ ಇಲ್ಲದೇ ಇಲ್ಲ.

## ಹಸ್ತಪ್ರತಿಗಳ ಪರಸ್ಪರ ಸಂಬಂಧ

ಪಾಠಾಂತರಗಳ ಸಂಕಲನವನ್ನೂ ಸ್ಖಾಲಿತ್ಯಗಳನ್ನೂ ಅಭ್ಯಸಿಸಿದ ಮೇಲೆ ಹಸ್ತ ಪ್ರತಿಗಳ ಪರಸ್ಪರ ಸಂಬಂಧವನ್ನು ಗುರುತಿಸುವುದು ಸುಲಭ. ನಾವು ನೋಡಿದ ೧೧ ಹಸ್ತಪ್ರತಿಗಳಲ್ಲಿ ಈ ದೃಷ್ಟಿಯಿಂದ ಐದು ಗುಂಪುಗಳನ್ನು ಮಾಡಬಹುದು.

i) ತೊರಗಲ್ಲ ಸರದೇಸಾಯಿ (ಕ) ಪ್ರತಿ, ಮಯೂರಪುರದ ಜಾಯೇಂದ್ರ ದೇಸಾಯಿ-ಟೀಕಾ (ಚ) ಪ್ರತಿ, ದೇವನಾಗರೀ ಲಿಪಿಯ (ಗ) ಪ್ರತಿ ಇವುಗಳದೊಂದು.

ii) K. 1304 (ಘ) ಪ್ರತಿ, ಬಿಳಗಿ ನಾಯಕ (ಛ) ಪ್ರತಿ, ಮತ್ತು K. 126 (ಜ) ಪ್ರತಿ ಇವುಗಳದಿನ್ನೊಂದು.

iii) K 344 (ಥ), ಧಾರವಾಡ ಕಲ್ಲಚ್ಚು (ದ) ಪ್ರತಿಗಳು ಒಂದು ಗುಂಪಿನವು.

iv) KA 225 (ಝ) ಮತ್ತು K 294 (ತ) ಈ ಪ್ರತಿಗಳಲ್ಲಿಯೂ ನಿಕಟವಾದ ಸಂಬಂಧವುಂಟು.

v) ಆದರೆ, ತೀ.ನಂ.ಶ್ರೀ (ಖ) ಪ್ರತಿಯನ್ನು ಸಂಪೂರ್ಣವಾಗಿ ಅನುಸರಿಸಿದೆ ಎಂದು ಹೇಳಿಕೊಳ್ಳುವಂತಹ ಇನ್ನೊಂದು ಪ್ರತಿ ಸಿಕ್ಕಿಲ್ಲ. ಅದೊಂದೇ ಒಂದು ಗುಂಪಿನ ದಾಗಿ ಉಳಿಯುತ್ತದೆ.

ಸಿರಸಂಗಿ, ನವಿಲುಗುಂದ, ಕೆರೂರು, ತೊರಗಲ್ಲು ಈ ಸೀಮೆಯ ದೇಶಗತಿಯವರು ಮತ್ತು ಅವರಿಗೆ ಸಂಬಂಧಪಟ್ಟವರು ವಿದ್ವಾಂಸರೂ ವಿದ್ಯೆಗೆ ಆಶ್ರಯದಾತರೂ ಆಗಿದ್ದರು ಎಂಬುದು ವಿದಿತವಿದೆ. ಜೈಮಿನಿ ಭಾರತದ ಹಸ್ತಪ್ರತಿಗಳಿಂದಲೂ ಆ ಮಾತಿಗೆ ಅನು ಮೋದನೆ ದೊರೆಯುತ್ತಿದೆ. 'ಕ' ಪ್ರತಿಯ ಪ್ರಾರಂಭದ ಪುಟದ ಮೇಲೆ, 'ಮಾಮಲೆ **ತೊರಗಲ್ಲ ಸರದೇಸಾಯಿ ಲಿಂಗಪ್ಪನವರ ಪುಸ್ತಕ**' ಎಂದು ಬರೆದಿದೆ. ಗ್ರಂಥದ ಮುಗಿತಾಯವು 'ಶ್ರೀ ಮತ್ತು **ಗದುಗಿನ ಸೀಮೆಯ ದೇಶಾಯಿಗಳು** ಶ್ರೀನಿವಾಸ ಅಯ್ಯ x x ರು ಶೇಷಾದ್ರಿ ಅಯ್ಯನವರು ಪ್ರೀತಿಪೂರ್ವಕದಿಂದ ಹೊಂಬಳಲ x x x x x x x ಜೈಮಿನಿ ಭಾರತ ಪುಸ್ತಕಕ್ಕೆ ಶುಭಮಸ್ತು, ಶೋಭನಮಸ್ತು' ಎಂಬ ಮಾತಿ ನಿಂದ ಆಗಿದೆ. ದೇವನಾಗರೀ ಲಿಪಿಯ 'ಗ' ಪ್ರತಿಯಲ್ಲಿ ಪ್ರಾರಂಭ–ಸಮಾಪ್ತಿಗಳಲ್ಲಿ

ಯಾವ ವಿಶೇಷ ವಿಷಯಗಳಿಲ್ಲ. ಆದರೆ ಅದು ನಮಗೆ ದೊರೆತುದು **ಗದುಗಿನ** ಡಾ. ಉಮಚಗಿಯವರ ಮನೆಯಲ್ಲಿ. 'ಚ' ಪ್ರತಿ ಮಯೂರಪುರದ (ನವಿಲುಗುಂದದ) ಜಾಯೇಂದ್ರನ ಕಾಲದ್ದು. ಬನಾಜಿ ಪಂತರ ಪುತ್ರನಾದ ಕೃಷ್ಣನಿಂದ ಜೈಮಿನಿಭಾರತಕ್ಕೆ ಕನ್ನಡ ಟೀಕೆಯನ್ನು ಬರೆಸಿದುದು ಇದಕ್ಕೆಯೇ. ಮಯೂರಪುರದ ಜಾಯೇಂದ್ರನೆಂದರೆ ತೊರಗಲ್ಲ ಸೀಮೆಯ ಅರಸ: ಜಾಯೇಂದ್ರ ಭೂಪಾಲ ಅಥವಾ ಜಾಯಗೊಂಡ ದೇಸಾಯಿ. ಈತನ ತಂದೆಯೆ 'ಕ' ಪ್ರತಿಯ ಮಾಮಲೆ ತೊರಗಲ್ಲ ಸರದೇಸಾಯಿ ಲಿಂಗಪ್ಪ (ಲಿಂಗಭೂವರ). ಲಿಂಗಭೂವರರು ಕಾವ್ಯಪ್ರೇಮಿಗಳಾಗಿದ್ದರು, ವಿದ್ಯೆಗೆ ಆಶ್ರಯದಾತರಾಗಿದ್ದರು ಎಂಬುದಕ್ಕೆ ಅವರು ಜೈಮಿನಿ ಭಾರತದ ಪ್ರತಿಯನ್ನು ಮಾಡಿಸಿದುದೇ ಸಾಕ್ಷಿಯಾಗಿದೆ.

'ಲಿಂಗಭೂವರನ ಸತ್ಪುತ್ರ ಜಾಯೇಂದ್ರ'ರು ಸುಪ್ರಸಿದ್ಧರಾಗಿದ್ದರು. ಇವರು ಕುಶಾಗ್ರಬುದ್ಧಿಯವರೂ ರಾಜಕಾರಣಪಟುಗಳೂ ಕವಿಗಳೂ ಆಗಿದ್ದರೆಂಬುದು ಇವರ ಚರಿತ್ರೆಯಿಂದ ತಿಳಿದುಬರುತ್ತದೆ. ಇವರು ೧೭೩೯ ರಿಂದ ೧೭೪೯ರ ವರೆಗೆ ೧೦ ವರ್ಷಗಳಲ್ಲಿ ೫ ಲಕ್ಷ ರೂಪಾಯಿಗಳ ವೆಚ್ಚದಿಂದ ಕುಸುಗಲ್ಲು (ತಾ. ಹುಬ್ಬಳ್ಳಿ) ಗ್ರಾಮದಲ್ಲಿ ಒಂದು ಕೋಟೆಯನ್ನು ಕಟ್ಟಿಸಿದರು. ಮತ್ತು ೧೭೪೩ ರಿಂದ ೧೭೫೧ರ ವರೆಗಿನ ಅವಧಿಯಲ್ಲಿ ೨ ಲಕ್ಷ ರೂಪಾಯಿಗಳನ್ನು ವ್ಯಯಿಸಿ ಸವದತ್ತಿಯ ಕೋಟೆಯನ್ನು ಕಟ್ಟಿಸಿದರು. ಇದು ಇಂದಿಗೂ ನೋಡಲಿಕ್ಕೆ ಭವ್ಯವಾಗಿದೆ. ನವಿಲುಗುಂದದ ಕೋಟೆಯೂ ಇವರ ಕೈಯಲ್ಲೇ ಆದದ್ದು. ಇವರಿಗೆ ಹತ್ತು ಭಾಷೆಗಳಲ್ಲಿ ಪಾಂಡಿತ್ಯವಿತ್ತಂತೆ. ಈ ಜಾಯೇಂದ್ರನು ಕನ್ನಡ ಕುವಲಾಯನಂದ ಮತ್ತು ಶೃಂಗಾರ ತಿಲಕ ಎಂದರೆ ರಸಮಂಜರಿ ಎಂಬ ಎರಡು ಗ್ರಂಥಗಳನ್ನು ಬರೆದಿದ್ದಾನೆ. ಈತನ ಗುರು ಮತ್ತು ಕುಲದೈವ ಕಾಡಸಿದ್ಧನೆಂದು ಕುವಲಯಾನಂದದಲ್ಲಿಯ ಸ್ತೋತ್ರಪದ್ಯದಿಂದ ತಿಳಿಯುತ್ತದೆ. ಈತನು ಹುಟ್ಟಿದುದು ಕ್ರಿ.ಶ. ೧೭೧೬ರಲ್ಲಿ. ಕ್ರಿ. ಶ. ೧೭೬೦ನೆಯ ಬಹುಧಾನ್ಯ ಸಂವತ್ಸರದ ಕಾರ್ತಿಕ ವದ್ಯ ೩ ಶುಕ್ರವಾರ ಸಾಯಂಕಾಲ ನರಗುಂದದಲ್ಲಿ ಶಿವಾಧೀನನಾದನು.[1]

ಕನ್ನಡ ಕುವಲಯಾನಂದದ ಕೊನೆಯಲ್ಲಿ ಅದರ ರಚನೆ ಮುಗಿದ ಕಾಲವನ್ನು ಒಂದು ಪದ್ಯದಲ್ಲಿ ತಿಳಿಸಲಾಗಿದೆ:

ಇರುವ ತೊರಗಲ್ ಸೀಮೆಗರಸಾದ ಲಿಂಗಭೂ
ವರನ ಸತ್ಪುತ್ರ ಜಾಯೇಂದ್ರನಿಂ ನಿರ್ಮಿಸಿದ
ಸರಸ ವರ್ಣಕ ಕಾವ್ಯಮಿದನೊಲಿದು ಲಾಲಿಪುದು ಪಾಲಿಪುದು ಲೀಲೆಯಿಂದ ||

ವರುಷವಾನಂದ ಮಾಧವ ಮಾಸದಲ್ಲಿ ಭಾ
ಸುರ ಶುಕ್ಲಪಕ್ಷ ಪ್ರತಿಪದೆಯ ರವಿವಾಸರದಿ
ಪರಿಪೂರ್ಣವಾಗಿ ಸುಮತಿಗಳ ಕರಣಂಗಳಿಗೆ ಪರಮ ಮಂಗಳವೀವುದೂ ||

---

[1] ಶ್ರೀ ಕಾಡಸಿದ್ಧೇಶ್ವರ ವಚನವು (೧೯೩೭): ಶ್ರೀ ಚಂದ್ರಶೇಖರಶಾಸ್ತ್ರಿ ಹಿರೇಮಠ ಹೊಳಲು ಮತ್ತು ಶ್ರೀ ಸೋಮಶೇಖರಶಾಸ್ತ್ರಿ ಹಿರೇಮಠ ಬೆಣಕಲ್ಲು ಇವರು ಸಂಶೋಧಿಸಿದ್ದು. ಪ್ರಸ್ತಾವನೆ, ಪು. ೧೯.

ಇಲ್ಲಿ ಶಕಾಂಕವನ್ನು ಹೇಳದೆ ಸಂವತ್ಸರವನ್ನು ಮಾತ್ರ ಹೇಳಿದೆ. ಆನಂದ ಸಂವತ್ಸರವು ಕ್ರಿ.ವ. ೧೬೭೪, ೧೭೩೪, ೧೭೯೪ ಈ ವರುಷಗಳಲ್ಲಿ ಬರುತ್ತದೆ. ಇವುಗಳಲ್ಲಿ, ಮೇಲೆ ಹೇಳಿರುವ 'ವೈಶಾಖ ಶುಕ್ಲ ಪ್ರತಿಪದೆ ಸೋಮವಾರ' ಎಂಬುದು ಕ್ರಿ.ಶ. ೧೬೭೪ರ ಮೇ ತಿಂಗಳ ೫ನೆಯ ತಾರೀಖಿಗೆ ಸರಿಹೊಂದುತ್ತದೆ.' (*An Indian Ephemeris* —L. D. Swamikannu Pillai). ಆದರೆ ವಾರ-ತಿಥಿಗಳ ತಾಳ ಮೇಳ ಕೂಡಿದ್ದರೂ ಈ ಕ್ರಿಸ್ತ ಶಕಾಂಕವು ಜಾಯೇಂದ್ರನ ಜೀವಮಾನ ಕಾಲದೊಳಗೆ ಬರುವುದಿಲ್ಲ. ಅದಕ್ಕಿಂತ ಬಹು ಹಿಂದೆಯೇ ಬಂದು ಹೋಗಿದೆ. ಆತನ ಕಾಲ ಕ್ರಿ.ಶ. ೧೭೧೬ ರಿಂದ ೧೭೪೦ ಎಂಬುದು ಖಚಿತಪಟ್ಟಿದೆ. ಮೂರನೆಯ ಆನಂದ ಸಂವತ್ಸರಕ್ಕೆ ಹೊಂದುವ ಕ್ರಿ.ಶ. ೧೭೯೪ ಜಾಯೇಂದ್ರನ ಜೀವಿತ ಕಾಲದ ತರುವಾಯ ಬಂದಿದೆ. ಆದುದರಿಂದ ೧೬೭೪ ಮತ್ತು ೧೭೯೪ ಈ ಎರಡು ಇಸವಿಗಳ ಆನಂದ ಸಂವತ್ಸರವು ಜಾಯೇಂದ್ರನಿಗೆ ಅನ್ವಯಿಸುವುದಿಲ್ಲ. ಎಂದ ಮೇಲೆ ಕನ್ನಡ ಕುವಲಯಾನಂದದ ರಚನೆ ಕ್ರಿ.ಶ. ೧೭೩೪ರ ಆನಂದ ಸಂವತ್ಸರದ ವೈಶಾಖ ಶುದ್ಧ ಪ್ರತಿಪದೆಯಂದು ಪೂರ್ತಿಯಾಗಿರಲಿಕ್ಕೆ ಬೇಕು. ಮೇಲಣ ಪದ್ಯದಲ್ಲಿ ತಿಥಿ-ವಾರಗಳ ಮೇಳ ತಪ್ಪಿರಬೇಕು ಎಂದು ತೋರುತ್ತದೆ. ಈ ವಿಷಯವನ್ನು ಕುರಿತು ಗೋವಿಂದ ಪೈ ಅವರು 'ಕನ್ನಡ ಕವಿ ಲಕ್ಷ್ಮೀಶನ ಕಾಲದ ಮರುವಿಚಾರ' ಎಂಬ ಪ್ರಬಂಧದಲ್ಲಿ (ಪು. ೧೪೩) ಸುದೀರ್ಘವಾಗಿ ಚರ್ಚಿಸಿ, 'ಈ (ಕುವಲಯಾನಂದ) ಗ್ರಂಥದ ರಚನೆಯ ತೇದಿ ಕ್ರಿ.ಶ. ೧೭೩೪ ಏಪ್ರಿಲ್ ೨೧ ನೆಯ ತಾರೀಕು ಆದಿತ್ಯವಾರ ವೆನ್ನಬಹುದು' ಎಂಬ ನಿರ್ಣಯಕ್ಕೆ ಬಂದಿದ್ದಾರೆ. ಇದೇ ಜಾಯೇಂದ್ರನು ಕ್ರಿ. ಶ. ೧೭೭೧ ರಲ್ಲಿ ಎಂದರೆ ತನ್ನ ಮರಣಕ್ಕಿಂತ ೯ ವರ್ಷ ಮುಂಚೆ ನವಿಲುಗುಂದದಲ್ಲಿದ್ದಾಗ ಬನಾಜಿಪಂತರ ಪುತ್ರನಾದ ಕೃಷ್ಣನಿಂದ ಜೈಮಿನಿ ಭಾರತಕ್ಕೆ ಕನ್ನಡ ಟೀಕೆಯನ್ನು ಬರೆಸಿದ್ದಾನೆ. ಎಂದರೆ, ಆತನು ಸ್ವಯಂ ಕವಿಯಾಗಿದ್ದು ಭಾಷಾಪಂಡಿತನಾಗಿದ್ದುದ ರಿಂದ ಟೀಕೆ ಆತನದು, ಕೃಷ್ಣನು ಬರೆಹಗಾರನು ಮಾತ್ರ ಎಂಬುದು ಸ್ವತಃಸಿದ್ಧವಾಗಿದೆ.

ಹೀಗೆ ಕ,ಚ ಪ್ರತಿಗಳು ಒಂದೇ ಮನೆತನಕ್ಕೆ ಸಂಬಂಧಿಸಿದವುಗಳಾಗಿವೆ. 'ಗ' ಪ್ರತಿಯು ಗದುಗಿನದಾಗಿದ್ದುದರಿಂದಲೂ ಪಾಠಾಂತರಗಳ ಅವಲೋಕನದಿಂದ 'ಕ' ಪ್ರತಿಯನ್ನು ಅನುಸರಿಸಿದಂತೆ ಕಂಡುಬರುವುದರಿಂದಲೂ ಇದೂ ಕ, ಚ ಗಳ ಗುಂಪಿಗೆ ಸೇರುತ್ತದೆ. ಅಲ್ಲದೆ ಕ,ಗ ಎರಡರಲ್ಲಿಯೂ ಸರಿಯಾಗಿ ೧೯೧೦ ಪದ್ಯಗಳಿವೆ.'ಚ' ಪ್ರತಿಯು ಕೊನೆಯಲ್ಲಿಯೂ ಒಟ್ಟು ೧೯೧೦ ಪದ್ಯಗಳಿಗೆ ಕಾವ್ಯವು ಮುಗಿದುದೆಂದು ಹೇಳಿದೆ. ಆದರೆ, 'ಚ' ಪ್ರತಿಯ ೬ನೆಯ ಸಂಧಿಯಲ್ಲಿ ೧ ಪದ್ಯವೂ ೧೪ನೆಯ ಸಂಧಿಯಲ್ಲಿ ಎರಡು ಪದ್ಯ ಗಳೂ ಕಡಿಮೆ ಇವೆ. ಇದಕ್ಕೆ ಕಾರಣವೂ 'ಚ' ಪ್ರತಿಯ ಸ್ವರೂಪದಿಂದ ಸ್ಪಷ್ಟವಾಗಿ ಹೊಳೆಯುತ್ತದೆ. ಅದು ಯಾವುದೊಂದು ಪ್ರತಿಯನ್ನು ಮುಂದಿಟ್ಟುಕೊಂಡು ಪ್ರತಿ ಮಾಡಿದಂತೆ ಇಲ್ಲ. ಜಾಯೇಂದ್ರನಿಗೋ ಬನಾಜಿಪಂತನಿಗೋ ಅಥವಾ ಕೃಷ್ಣ ನಿಗೋ ಕಂಠಸ್ಥವಾಗಿದ್ದ 'ಕ'ಪ್ರತಿಯ ನಕಲು ಇದಾಗಿದೆ. ಆದುದರಿಂದ 'ಚ'ಪ್ರತಿಯಲ್ಲಿ ಬ್ಯಾಡ ಬ್ಯಾಂಟೆಗಳಂತಹ ಆಡುಮಾತಿನ ರೂಪಗಳು ಇಳಿದು ಬಂದಿವೆ. ಕಂಠಪಾಠದ

ಪ್ರತಿಯಾಗಿರುವುದರಿಂದಲೇ ವಿಸ್ಮರಣೆಯ ಮೂಲಕ ಮೂರು ಪದ್ಯಗಳು ಬರೆಯದೆ ಉಳಿದುಬಿಟ್ಟಿವೆ.

'ಕ' ಪ್ರತಿಯ ಪುಟ ೧೨೮ ರಿಂದ ಕೊನೆಯವರೆಗಿನ ಭಾಗವನ್ನು ಹುಳ ತಿಂದಿದೆ. ಆ ನಷ್ಟ ಭಾಗವನ್ನು ಅದೇ ಗುಂಪಿನ 'ಗ','ಚ' ಪ್ರತಿಗಳಿಂದ ತುಂಬಿಕೊಳ್ಳಬಹುದು. ಈ 'ಕ' ಪ್ರತಿಗೆ ಮೂಲವಾದ ಜೈಮಿನಿ ಭಾರತದ ಪ್ರತಿಯೊಂದನ್ನು ಲಿಂಗಭೂವರನು ಸಿದ್ಧಪಡಿಸಿದ್ದನು. ಅದು ಉಪಲಬ್ಧವಾಗಿಲ್ಲ. ತನ್ನ ಮನೆತನದಲ್ಲಿ ಪರಂಪರೆಯಿಂದ ರೂಢ ವಾಗಿ ಬಂದಿದ್ದ ಆ ಪ್ರತಿಯಿಂದಲೇ ಜಾಯೇಂದ್ರನು ತನ್ನ 'ಕುವಲಯಾನಂದ' ಗ್ರಂಥ ದಲ್ಲಿ ಜೈಮಿನಿ ಭಾರತದ ೫೦ ಪದ್ಯಗಳನ್ನು ಲಕ್ಷ್ಯಪದ್ಯಗಳಾಗಿ ಬಳಸಿಕೊಂಡಿರಲು ಸಾಕು. ಕ, ಗ, ಚ ಇವುಗಳಿಗೆ ಇದ್ದ ಮೂಲಮಾತೃಕೆ (ಲಿಂಗಭೂವರನೇ ಬರಸಿದ್ದು) ದೊರೆತಿಲ್ಲವಾದರೂ ಈ ಮೂರೂ ಒಂದೇ ಮಾತೃಕೆಯಿಂದ ಬಂದವುಗಳೆಂದು ನಿಸ್ಸಂಶಯ ವಾಗಿ ಹೇಳಬಹುದು.

ಇನ್ನು ಎರಡನೆಯ ಗುಂಪಿನ ಘ,ಛ,ಜ ಪ್ರತಿಗಳನ್ನು ಕುರಿತು ಪರ್ಯಾಲೋಚಿ ಸೋಣ. ಈ ಘ,ಛ,ಜ ಗಳು ಕ,ಗ,ಚಗಳಿಗಿಂತ ಭಿನ್ನವಾಗಿವೆ. ಮೊದಲನೆಯದಾಗಿ ಒಟ್ಟು ಪದ್ಯ ಸಂಖ್ಯೆಗಳನ್ನು ನೋಡಬೇಕು:

೧. ಘ (K 1304) ಒಟ್ಟು ೯೮೮—೯೦೦ ಪದ್ಯ
೨. ಛ (ಬಿಳಗಿ) ,, ೯೦೬—೯೦೫ ,,
೩. ಜ (K 1261) ,, ೯೯೯—೯೦೮ ,,

'ಘ' ಪ್ರತಿಯಲ್ಲಿ ಜೈಮಿನಿ ಭಾರತದ ವಾರ್ಧಕ ಷಟ್ಪದೀ ಪದ್ಯಗಳು ೯೦೦ ಮಾತ್ರ ಇದ್ದು, ಕೊನೆಯ ಸಂಧಿಯಾಗಿ ಗದುಗಿನ ಭಾರತದ ಸಭಾಪರ್ವಕ್ಕೆ ಸೇರಿದ ರಾಜ ಸೂಯ ಪ್ರಸಂಗದ (ಸಂ. ೭) ವೀರನಾರಾಯಣನ ಅಂಕಿತವುಳ್ಳ ೮೮ ಭಾಮಿನೀ ಷಟ್ಪದೀ ಪದ್ಯಗಳು ಸೇರಿವೆ. ಅವುಗಳನ್ನು ಕೂಡಿಸಿಕೊಂಡೇ ಜೈಮಿನೀ ಭಾರತದ ಒಟ್ಟು ಪದ್ಯಸಂಖ್ಯೆಯನ್ನು (೯೮೮) ಎಂದು ಹೇಳಲಾಗಿದೆ. ಈ ವಿಸಂಗತಿಯು 'ಘ' ಪ್ರತಿಯ ವಿಶಿಷ್ಟ ಸ್ಖಾಲಿತ್ಯ (Peculiar error) ಆಗಿದೆ. ಇದರಂತೆ ಛ ಮತ್ತು ಜ ಪ್ರತಿಗಳಲ್ಲಿ ೨೮ನೆಯ ಸಂಧಿಯಲ್ಲಿ ೩ ಹೊಸ ಪದ್ಯಗಳು ಸೇರಿರುವುದು ಅವುಗಳ ವಿಶಿಷ್ಟ ಸ್ಖಾಲಿತ್ಯ ವಾಗಿದೆ.

ಘ, ಛ, ಜ ಪ್ರತಿಗಳಲ್ಲಿ ಒಂದು ಏಕರೂಪತೆಯಿದೆ. ಅದೆಂದರೆ, ೮ನೆಯ ಮತ್ತು ೯ನೆಯ ಸಂಧಿಗಳನ್ನು ಕೂಡಿಸಿಬಿಟ್ಟಿರುವುದು. ಇದೇ ಇವುಗಳ ಸಂಯೋಜಕ ಸ್ಖಾಲಿತ್ಯ (conjunctive error) ಆಗಿದೆ. ಆದರೆ ಘ ಮತ್ತು ಛ ಪ್ರತಿಗಳಲ್ಲಿ ಈ ಎರಡೂ ಸಂಧಿಗಳು ಕೂಡಿದ ಒಟ್ಟು ಪದ್ಯಸಂಖ್ಯೆ ೭೬ ಆಗಿದ್ದರೆ, ಜ ಪ್ರತಿಯಲ್ಲಿ ೮೨ ಪದ್ಯ ಗಳಾಗಿವೆ. ಇದರ ಮೇಲಿಂದ ಘ, ಛ ಗಳಲ್ಲಿ ಸಾಮ್ಯವಿದೆಯೆಂದು ತೋರುತ್ತದೆ. ೩೩ನೆಯ ಸಂಧಿಯೊಳಗೆ ೧೫ ಪದ್ಯಗಳು ಘ ಪ್ರತಿಯಲ್ಲಿ ಸೇರಿವೆ; ಇವೇ ಪದ್ಯಗಳು ಜ ಪ್ರತಿ ಯಲ್ಲಿಯೂ ಕಾಣುತ್ತವೆ; ಆದರೆ ಘ ಪ್ರತಿಗಿಂತ ಎರಡು ಪದ್ಯಗಳು ಕಡಿಮೆ ಇವೆ. ಇದು ಘ,ಜ ಪ್ರತಿಗಳಲ್ಲಿಯ ಸಾಮ್ಯವಿಶೇಷ.

ಹೀಗೆ ಫ,ಛ,ಜ ಗಳಲ್ಲಿ ಅದರದರ ವಿಶಿಷ್ಟ ಸ್ಖಾಲಿತ್ಯಗಳಿದ್ದು, ಕೆಲವು ಸಂಯೋಜಕ ಸ್ಖಾಲಿತ್ಯಗಳು ಸಾಮಾನ್ಯವಾಗಿರುವುದರಿಂದ ಈ ಮೂರನ್ನೂ ಒಂದು ಗುಂಪಿನವೆಂದು ಎಣಿಸಬೇಕಾಗುತ್ತದೆ. ಈ ಮೂರು ಪ್ರತಿಗಳ ಮಾತೃಕೆಗಳು ಬೇರೆ ಬೇರೆಯಾಗಿದ್ದರೂ ಆ ಮೂರು ಮಾತೃಕೆಗಳಿಗೆ ಮೂಲ ಮಾತೃಕೆ ಒಂದೇ ಇದ್ದಿರಲು ಸಾಕು ಎಂದು ತೋರುತ್ತದೆ.

'ಥ' (K 344) ಪ್ರತಿಯಲ್ಲಿ ಕಾವ್ಯದ ಒಟ್ಟು ಪದ್ಯಸಂಖ್ಯೆ ೧೯೨೦, ದ (ಧಾರವಾಡ ಕಲ್ಲಚ್ಚು) ಪ್ರತಿಯಲ್ಲಿ ಈ ಸಂಖ್ಯೆ ೧೯೨೫ ಎಂದು ಹೇಳಿದೆ. ಇದು ಈ ಹಸ್ತಪ್ರತಿಗಳ ವಿಚ್ಛೇದಕ ಸ್ಖಾಲಿತ್ಯ. 'ದ' ಪ್ರತಿಯಲ್ಲಿ ಸಂಧಿ ೩ರಲ್ಲಿದ್ದ ೧೦ ಪದ್ಯಗಳು ಸಂಧಿ ೮ರಲ್ಲಿ ಪುನರ್ಲಿಖಿತವಾಗಿವೆ; ಸಂಧಿ ೩೪ರಲ್ಲಿ ೪ ಹೊಸ ಪದ್ಯಗಳು ಸೇರಿವೆ. ಪದ್ಯಸಂಖ್ಯೆಗಳ ಬೇರೀಜು ೨ ರಿಂದ ತಪ್ಪಿರುವುದರಿಂದ 'ದ' ಪ್ರತಿಯ ಒಟ್ಟು ಪದ್ಯ ಸಂಖ್ಯೆ ೧೯೨೩ ಆಗುತ್ತದೆ. ಇದು 'ದ' ಪ್ರತಿಯ ವಿಶಿಷ್ಟ ಸ್ಖಾಲಿತ್ಯ. ಅದರಂತೆ 'ಥ' ಪ್ರತಿಯಲ್ಲಿ ವಾಸ್ತವವಾಗಿ ೧೯೧೧ ಪದ್ಯಗಳು ಮಾತ್ರ ಇವೆ. ೩ನೆಯ ಸಂಧಿಯ ೧೦ ಪದ್ಯಗಳ ಪುನರಾವೃತ್ತಿ ಈ ಪ್ರತಿಯಲ್ಲಿ ಆಗಿಲ್ಲ. ಇದು 'ಥ' ಪ್ರತಿಯ ವಿಶಿಷ್ಟ ಸ್ಖಾಲಿತ್ಯ. ಆದರೆ ೩೪ನೆಯ ಸಂಧಿಯಲ್ಲಿ ೪ ಹೊಸ ಪದ್ಯಗಳು 'ಥ','ದ' ಎರಡೂ ಪ್ರತಿಗಳಲ್ಲುಂಟು.ಇವೆರಡರ ಸಂಯೋಜಕ ಸ್ಖಾಲಿತ್ಯವಿದು. ಆದುದರಿಂದಲೇ ಇವೆರಡೂ ಪ್ರತಿಗಳು ಒಂದು ಗುಂಪಿಗೆ ಸೇರುತ್ತವೆ.

'ಝ' (K 225) ಮತ್ತು 'ತ' (K 294) ಪ್ರತಿಗಳ ಒಟ್ಟು ಪದ್ಯಸಂಖ್ಯೆ ೧೯೦೭. ಇದು ಈ ಪ್ರತಿಗಳ ವಿಚ್ಛೇದಕ ಸ್ಖಾಲಿತ್ಯ. ದಕ್ಷಿಣ ಕರ್ನಾಟಕದ ಪ್ರತಿಗಳ ವರ್ಗಕ್ಕೆ ೧೯೦೭ ಪದ್ಯಗಳುಳ್ಳ ಜೈಮಿನಿ ಭಾರತದ ಪ್ರತಿಯೆ ಮೂಲಮಾತೃಕೆಯಾಗಿರಬೇಕೆಂಬುದು ಸ್ಪಷ್ಟವಿದೆ. ಏಕೆಂದರೆ, ದಕ್ಷಿಣ ಕರ್ನಾಟಕದ (O.R.I. Mys.) ಅನೇಕ ಪ್ರತಿಗಳು ೧೯೦೭ ಪದ್ಯಗಳಿಂದ ಕೂಡಿವೆ. ಹೀಗಾಗಿ, ಕರಿಬಸವಶಾಸ್ತ್ರಿಗಳಿಂದ ಪರಿಶೋಧಿತವಾದ ಪ್ರತಿಯೂ ೧೯೦೭ ಪದ್ಯಗಳನ್ನು ಒಳಗೊಂಡಿರುವುದು.

'ಝ' ಪ್ರತಿಯು ಮಂಗಳೂರು ಕಲ್ಲಿಚ್ಚಿನ ಪ್ರತಿ. 'ತ' ಪ್ರತಿಯು ತಾಳೆ ಗರಿಯ ಪ್ರತಿ. ಇವೆರಡರ ಪಾಠಾಂತರಗಳನ್ನು ಹೋಲಿಸಿ ನೋಡಿದರೆ ಏನೇನೂ ಭೇದ ಕಾಣುವುದಿಲ್ಲ. 'ಝ' ಪ್ರತಿಯ ಮಾರ್ಜಿನಿನಲ್ಲಿ ಬೇರೆ ಬೇರೆ ಪಾಠಗಳನ್ನು ಪ್ರತಿಕಾರನು (ಬೇಕಾದರೆ ಅವನನ್ನೇ ಸಂಪಾದಕನೆಂದು ಕರೆಯಬಹುದು) ಕೊಟ್ಟಿದ್ದಾನೆ. ಅವುಗಳನ್ನು ಅವನು ಸ್ವೀಕರಿಸಿ ಅಳವಡಿಸಿಕೊಂಡಿಲ್ಲ. 'ತ' ಪ್ರತಿಯ ಪಾಠಗಳನ್ನು ಸ್ವೀಕರಿಸಿದುದು ಕಂಡುಬರುತ್ತದೆ. ಆದುದರಿಂದ ಈ ಎರಡೂ ಪ್ರತಿಗಳು ಒಂದು ಗುಂಪಿನವಾಗಿವೆ.

'ಖ' (ತೀ.ನಂ.ಶ್ರೀ) ಪ್ರತಿಯನ್ನು ಅನುಸರಿಸಿದ್ದೆಂದು ಹೇಳಬಹುದಾದ ಯಾವ ಪ್ರತಿಯೂ ನಮಗೆ ನೋಡಲು ದೊರೆಯಲಿಲ್ಲ. ಆದುದರಿಂದ ಅದು ಆ ಗುಂಪಿನ ಏಕೈಕ ಪ್ರತಿಯಾಗಿ ಉಳಿದಿದೆ.

ಪ್ರತಿಗಳಲ್ಲಿಯ ಹೊಂದಾಣಿಕೆಯ ವಿವರವನ್ನು ತೋರಿಸುವ ನಕ್ಷೆಯನ್ನು ೫೦೮-೫೧೮ ಪುಟಗಳಲ್ಲಿ ಕೊಟ್ಟಿದೆ.ಒಂದೊಂದು ಹಸ್ತಪ್ರತಿಯಲ್ಲಿಯೂ ಏನಾದರೊಂದು

ವೈಶಿಷ್ಟ್ಯವಿದ್ದೇ ಇರುತ್ತದೆ. ಪ್ರಮುಖವಾದ ಸಾಮ್ಯವೈಷಮ್ಯಗಳನ್ನು ಮಾತ್ರ ನಕ್ಷೆಯಲ್ಲಿ ಎತ್ತಿಕೊಟ್ಟಿದೆ. ಇವಲ್ಲದೆಯೂ ಇನ್ನು ಕೆಲವು ಸಾಮ್ಯವೈಷಮ್ಯಗಳು ಆ ಪ್ರತಿಗಳಲ್ಲಿವೆ. ಆದರೆ ಅವು ಸಾಮಾನ್ಯವಾದವುಗಳು. ಉದಾ: ಪದ್ಯ ಸಂಖ್ಯೆ ತಪ್ಪುವಿಕೆ, ಪದ್ಯ ಹಿಂದೆ ಮುಂದೆ ಆಗುವಿಕೆ, ಪದ್ಯಗಳ ಲೋಪ ಇತ್ಯಾದಿ. ಅತಿ ಪ್ರಮುಖವಾದ ವ್ಯತ್ಯಾಸಗಳನ್ನು ಸಂಧಿ ೧೩,೧೮,೨೬,೩೩ ಮತ್ತು ೩೪ರಲ್ಲಿ ಕಾಣುತ್ತೇವೆ.

## ಹಸ್ತಪ್ರತಿಗಳ ಪೀಳಿಗೆ (Recensions of Mss.)

ಯಾವುದೇ ಹಸ್ತಪ್ರತಿಗಳ ಪ್ರಾರಂಭದ, ಮಧ್ಯದ ಒಂದೆರಡು ಮತ್ತು ಕೊನೆಯ ಸಂಧಿಯ ಪಾಠಸಂಕಲನದಿಂದ ಅವುಗಳ ಪೀಳಿಗೆಯನ್ನು ನಿರ್ಧರಿಸುವುದು ಸುಲಭಸಾಧ್ಯವಾಗಬಹುದು. ಆದರೆ ಜೈಮಿನಿ ಭಾರತದಂತಹ ಕಾವ್ಯದ ಹಸ್ತಪ್ರತಿಗಳ ಪೀಳಿಗೆಯನ್ನು ನಿರ್ಧರಿಸುವುದು ಕಠಿನ. ಇದು ಅತಿ ಪ್ರಚಾರ ಪಡೆದ ಮತ್ತು ಗಮಕ ಪದ್ಧತಿಯಲ್ಲಿ ಹಾಡುತ್ತ ಬಂದ ಎಂದರೆ ಹೆಚ್ಚಾಗಿ ಕಂಠಪಾಠವನ್ನು ಅನುಸರಿಸಿ ಬಂದ ಕಾವ್ಯವಾಗಿದೆ. ಆದುದರಿಂದ ಪ್ರತಿ ಪ್ರತಿಗೂ ವ್ಯತ್ಯಾಸಗಳು ವಿಶೇಷವಾಗಿ ಕಂಡುಬರುವವು.

ನಾವು ನೋಡಿದ ೧೧ ಪ್ರತಿಗಳಲ್ಲಿ ಒಂದನ್ನೊಂದು ಎಲ್ಲ ರೀತಿಯಿಂದಲೂ ಪೂರ್ಣವಾಗಿ ಅನುಸರಿಸಿರುವ ಎರಡು ಪ್ರತಿಗಳೂ ದೊರೆಯುವಂತಿಲ್ಲ. ಇದೊಂದು ದುರ್ದೈವದ ಸಂಗತಿ. ಗಮಕ ಪದ್ಧತಿಯ ಹಾಡುಗಾರಿಕೆಯ ಮೂಲಕ ಪದಗಳ ಸ್ಥಾನಪಲ್ಲಟ, ಪ್ರತಿನಿಧಾನ ಸ್ಖಾಲಿತ್ಯಗಳೇ ಅನಂತವಾಗಿ ಸಿಕ್ಕುತ್ತಿವೆ. ಈ ಕಾರಣದಿಂದಾಗಿ ಹಸ್ತಪ್ರತಿಗಳಿಗೆ ಮಿಶ್ರಪ್ರತಿಗಳ ಸ್ವರೂಪ (Conflated Texts) ಬಂದಿದೆಯೊ ಎಂಬ ಸಂಶಯ ತಲೆಯೆತ್ತುತ್ತದೆ. ಕುಮಾರವ್ಯಾಸ ಭಾರತದ ಪ್ರತಿಗಳ ಗತಿಯೂ ಹೀಗೆಯೆ ಆಗಿದೆ. ಇದಕ್ಕೆ ಕಾರಣ ಕಾವ್ಯದ ಅತಿಪ್ರಸರಣವೇ ಇರಬೇಕೆಂದು ತೋರುತ್ತದೆ.

ಜೈಮಿನಿ ಭಾರತದ ಕೈಬರಹದ ಪ್ರತಿಗಳು ಮಿಶ್ರಪ್ರತಿಗಳೇ ಎಂದು ಖಚಿತವಾದರೆ ಅವುಗಳ ಪೀಳಿಗೆಯನ್ನು ಗೊತ್ತುಪಡಿಸುವುದು ಸಾಧ್ಯವಿಲ್ಲ. ಈ ವಿಷಯದಲ್ಲಿ ಇನ್ನೂ ಆಳವಾದ ಸಂಶೋಧನೆ ನಡೆಸಿ, ಎಲ್ಲ ಪಾಠಗಳ ಸಾಧುತ್ವವನ್ನು ನಿರ್ಧರಿಸಿ, ಶುದ್ಧತರ ಪ್ರತಿಯೊಂದನ್ನು ಸಿದ್ಧಪಡಿಸುವುದು ಅಗತ್ಯ. ಅಷ್ಟಾಗಿಯೂ ಜೈಮಿನಿ ಭಾರತದ ಹಸ್ತಪ್ರತಿಗಳು ಮಿಶ್ರಪ್ರತಿಗಳೆಂದೇ ಸಿದ್ಧವಾದರೆ ಈ ಕಾವ್ಯದ ಮೂಲಮಾತೃಕೆಯನ್ನು ಗೊತ್ತುಹಚ್ಚುವುದು ಕಠಿನವಾಗುತ್ತದೆ.

### ಪಾಠಪರಿಷ್ಕರಣ

**೧. ಸಂಧಿ ೧, ಪದ್ಯ ೧, ಪಂಙ್ತಿ ೬ :**

'ದೇವಪುರಸಿಲಯ ಲಕ್ಷ್ಮೀರಮಣನಾಸ್ಯ ಚಂದ್ರಾನಂದನಂ ನಮಗೀಯಲಿ' ಎಂಬ ಪಾಠವು ೮ ಪ್ರತಿಗಳಲ್ಲಿದೆ. (ಖ,ಚ,ಛ,ಜ,ಝ,ತ,ಫ). ಬಹುಸಂಖ್ಯೆಯ ಬೆಂಬಲ

## ಹಸ್ತಪ್ರತಿಗಳ ಹೊಂದಾಣಿಕೆಯ ನಕ್ಷೆ

### (Concordance Chart)

| ಸಂಧಿ (೧) | ಪದ್ಯ (೨) | ಪದ್ಯ ಅಥವಾ ಪದ್ಯಾರಂಭ (೩) | ವಿವರಣೆ ಮತ್ತು ನಿರ್ಣಯ (೪) | ಬೆಂಬಲಿಸುವ ಪ್ರತಿಗಳು (೫) |
|---|---|---|---|---|
| ೩ | ೨೭-೩೬ | ೧. ನಸುಗಾಳಿ ಸಂದಿಸೆ ೨. ತರುಣಪಲ್ಲವದ ೩. ಎಮ್ಮಂತೆ ಕೊಪರಂ ೪. ಭೂತಳದ ಭೋಗಿ ೫. ಕುದ್ದಾಳಹತವನುರೆ ೬. ಕಡುಗಂಪೆಸೆವ ಸಂಕುಳ ೭. ಸಾಲಸಾಲಂಗಳಿಂ ೮. ಬಕುಳ ಮಂದಾರ ೯. ಬಗೆವಡಿವುಮುನ್ನ ೧೦. ಮಡಿವಾಳ ಲಾಮಂಚ | ಈ ೧೦ ಪದ್ಯಗಳು ಸಂಧಿ ೮ ರಲ್ಲಿ 'ತರುಣಪಲ್ಲವ' ಎಂಬುದು ೫ನೆಯ ಪದ್ಯವಾಗಿಯೂ ಉಳಿದ ಒಂಬತ್ತು ೧೬ ರಿಂದ ೨೪ನೆಯ ಪದ್ಯಗಳಾಗಿಯೂ ಮತ್ತೆ ಬರುತ್ತವೆ, ಕೆಲವು ಪ್ರತಿಗಳಲ್ಲಿ. ಹೀಗೆ ಕೆಲವೊಂದು ಪದ್ಯಗಳು ಬೇರೆ ಬೇರೆ ಸಂಧಿಗಳಲ್ಲಿ ಪ್ರಕ್ಷೇಪವಾಗಿ (Interpolation) ದ್ವಿರುಕ್ತವಾಗುವುದು ಸ್ವಾಭಾವಿಕ. ಆದರೆ ಈ ೧೦ ಪದ್ಯಗಳು ೩ನೆಯ ಸಂಧಿಗೆ ಸೇರಬೇಕೆ, ಅಥವಾ ೮ನೆಯ ಸಂಧಿಗೆ ಸೇರಬೇಕೆ? <br> ೩ನೆಯ ಸಂಧಿ ಭದ್ರಾವತೀ ನಗರ ವರ್ಣನೆಯ ಸಂಧಿ. ಈ ಎಲ್ಲ ೧೦ ಪದ್ಯಗಳೂ ವರ್ಣನಾ ಪದ್ಯಗಳೇ. ಆದುದರಿಂದ ಇವುಗಳನ್ನು ೩ನೆಯ ಸಂಧಿಯಲ್ಲಿಡುವುದೇ ಲೇಸು. ೮ನೆಯ ಸಂಧಿಯಿಂದ ಈ ಪದ್ಯಗಳನ್ನು ಪ್ರಕ್ಷೇಪಗಳೆಂದು ತೆಗೆದುಹಾಕಬೇಕು. ಎಂದರೆ, ಈ ನಿರ್ಣಯದಿಂದ ೩ನೆಯ ಸಂಧಿ ೪೨ ಪದ್ಯಗಳುಳ್ಳದಾಯಿತು. | ೪೨ ಪದ್ಯಗಳುಳ್ಳ ೩ನೆಯ ಸಂಧಿಯಾಗಿರುವ ಪ್ರತಿ : ಕ, ಗ, ಘ, ಛ, ಝ, ತ, ದ ; <br> ೩೨ ಪದ್ಯಗಳ ೩ನೆಯ ಸಂಧಿಯಿರುವ ಪ್ರತಿ : ಖ, ಚ, ಜ, ಥ. |
| ೫ | ೬೭ | ಮಧುರವಾಣಿಯ ಕೃತಜ್ಞನ ದಾನಪರನಪರ <br> ವಧುವಿನೊಲ್ಮೆಯ ಬೇಟಕೊಳಗಾಗದನ ಮಾನ <br> ನಿಧಿಯೆನಿಸುವನ ತೀರ್ಥಸಂಗತನ ಸಲೆಕೂಟ ಸಾಕ್ಷ್ಯಮಂ <br> ನುಡಿಯದವನ ॥ | ಈ ಪದ್ಯವನ್ನೊಳಗೊಂಡಿರುವ ಪ್ರತಿಗಳಲ್ಲಿ ೫ನೆಯ ಸಂಧಿ ೬೩ ಪದ್ಯಗಳಿಂದ ಕೂಡಿರುತ್ತದೆ; ಇದಿಲ್ಲದ ಪ್ರತಿಗಳಲ್ಲಿ ೬೨ ಪದ್ಯಗಳದ್ದಾಗಿದೆ. | ೫ನೆಯ ಸಂಧಿ ೬೩ ಪದ್ಯಗಳಿದ್ದ ಪ್ರತಿಗಳು: ಖ, ಗ, ಚ, ಜ, ಝ, ತ, ಥ, ದ. |

| | | | | |
|---|---|---|---|---|
| | | ವಿಧಿತಕರ್ಮದ ಮಾಳ್ಕೆಯಂ ಮಾಜದಾತನವ<br>ಸುಧೆಯೊಳಿಷ್ಟಾರ್ಥವಂ ತವೆನೆಗಳ್ಚುವನ ಬಹು<br>ವಿಧದ ಧರ್ಮಂಗಳಂ ರಚಿಸುವನ ಮನೆಯೊಳಿಂ<br>ದಿರೆ ಬಿಡದೆ ನೆಲಸಿರ್ಪಳು \|\| | ಈ ಪದ್ಯವನ್ನು ಇಟ್ಟುಕೊಳ್ಳಲೇಬೇಕು ಎಂದು ತೋರುತ್ತದೆ. ಏಕೆಂದರೆ ಸಂಸ್ಕೃತ ಜೈಮಿನಿ ಭಾರತದಲ್ಲಿ ಹೇಳಿದ ಹಲವು ಮಾತುಗಳು ಈ ಪದ್ಯದಲ್ಲಿವೆ. ಮುಖ್ಯವಾಗಿ ಕೂಟ ಸಾಕ್ಷಿ ಎಂಬ ಪದವಿದೆ. ಮೂಲದ ಅ. ೯, ಶ್ಲೋ. ೪ ರಲ್ಲಿ 'ಕೃತಂ ಜಾನಾತಿ ಯೋ ಮಾನೀ ಕೂಟ ಸಾಕ್ಷ್ಯಂ ನ ಯೋ ವದೇತ್ \|' ೭೨ ಪದ್ಯ ಸಂಖ್ಯೆಯುಳ್ಳ ಪ್ರತಿಗಳಲ್ಲಿ ಯಾವ ಕಾರಣದಿಂದಲೋ ಬಿಟ್ಟುಹೋಗಿದೆ ಎಂದು ಈ ಪದ್ಯವನ್ನಿಟ್ಟುಕೊಂಡು ಈ ಸಂಧಿಯ ವ್ಯಾಪ್ತಿ ೭೩ ಪದ್ಯಗಳೆಂದು ಎಣಿಸಬೇಕು. | ೭೨ ಪದ್ಯಗಳಿದ್ದ ಪ್ರತಿಗಳು : ಕ, ಘ, ಛ. |
| ೬ | – | ಚ ಪ್ರತಿಯಲ್ಲಿ ೫೪ ಪದ್ಯಗಳು ಎಂದು ಹೇಳಿದೆ. ಇಲ್ಲಿ ಬೇರೀಜು ತಪ್ಪಿದೆ. ಎಲ್ಲ ಪ್ರತಿಗಳಲ್ಲಿ ೫೫ ಪದ್ಯಗಳಿವೆ. | ೬ನೆಯ ಸಂಧಿ ೫೫ ಪದ್ಯಗಳುಳ್ಳುದೆಂಬುದು ಸಾಧು. | ಎಲ್ಲ ಪ್ರತಿಗಳು. |
| ೮ | ೫ | ತರುಣ ಪಲ್ಲವದ ವಿಸ್ತಾರದಿಂ ನೇರದಿಂ<br>ಸರಗೈವ ಕಳಪಿಕೋಚ್ಚಾರದಿಂ ಸಾರದಿಂ<br>ಸುರಿವ ಪೂದೊಂಗಲ ತುಷಾರದಿಂ ಸ್ವೈರದಿಂ<br>ಸಲ್ಲಾಪಕೆಳಸಿ ಬಳಸಿ \|\|<br>ಮೊರೆವ ತುಂಬಿಗಳ ಝುಂಕಾರದಿಂಘೋರದಿಂ<br>ಪರಿಪಕ್ವಮಾದ ಫಲಭಾರದಿಂ ಕೀರದಿಂ<br>ಕರಮೆಸೆವುತಿರ್ಪ ಸಹಕಾರದಿಂ ತೀರದಿಂ<br>ದೆಲ್ಲಿಯುಂ ನಂದನದೊಳು \|\| | ಈ ಪದ್ಯವು ಸಂಧಿ ೩ರಲ್ಲಿ ೨೭ನೆಯ ಪದ್ಯವಾಗಿದೆ. ಇದನ್ನು ಮತ್ತೆ ೮ನೆಯ ಸಂಧಿಯಲ್ಲಿ ತರುವುದು ಅಪ್ರಸ್ತುತವೆಂದು ಹಿಂದೆಯೆ ಹೇಳಿದೆ. | ಸಂ. ೮ರಲ್ಲಿ ೫ನೆಯ ಪದ್ಯವಾಗಿದ್ದ ಪ್ರತಿಗಳು : ಕ, ಗ.<br>ಈ ಪದ್ಯವಿಲ್ಲದ ಪ್ರತಿ: ಕ, ಗ ಹೊರತು ಎಲ್ಲ. |
| ೮ | ೪೩ | ಘ ಮತ್ತು ಛ ಪ್ರತಿಗಳಲ್ಲಿ ೮ ಮತ್ತು ೯ನೆಯ ಸಂಧಿಗಳು ಕೂಡಿ ಒಂದಾಗಿ ೮ನೆಯ ಸಂಧಿಯಾಗಿದೆ. ನಡುವಿನ ಸೂಚನಾ ಪದ್ಯಾರ್ಥವನ್ನು ಬಿಟ್ಟು ೮ನೆಯ ಸಂಧಿಯ ೪೨ ಹಾಗೂ ೯ನೆಯ ಸಂಧಿಯ ೩೪ ಪದ್ಯಗಳು ಸೇರಿ ಈ ಸಂಧಿ ೭೬ ಪದ್ಯಗಳದಾಗಿದೆ. | ಕಥಾವಿವರಣೆ ಅಥವಾ ವರ್ಣನೆಯನ್ನು ಪರ್ಯಾಲೋಚಿಸಿದರೆ ಎರಡು ಸಂಧಿಗಳು ಬೇರೆ ಬೇರೆ ಆಗಿರಬೇಕು; ಕೂಡಿಸತಕ್ಕುದಲ್ಲ ಎಂದು ಕಂಡುಬರುವುದು. ಮತ್ತು ಇವುಗಳ ಪದ್ಯಸಂಖ್ಯೆಗಳು ಕ್ರಮವಾಗಿ ೪೯, ೩೪ ಇರಬೇಕು.<br>೮ನೆಯ ಸಂಧಿ ೪೯ ಪದ್ಯಗಳದು ಎನ್ನುವುದಕ್ಕೆ ಕಾರಣ— | ಎರಡೂ ಸಂಧಿಗಳನ್ನು ಕೂಡಿಸುವ ಪ್ರತಿಗಳು : ಗ, ಛ, ಜ.<br>ಪ್ರತ್ಯೇಕವಾಗಿಟ್ಟಿರುವ ಪ್ರತಿಗಳು : ಉಳಿದೆಲ್ಲ ಪ್ರತಿಗಳು. |

| (೧) | (೨) | (೩) | (೪) | (೫) |
| --- | --- | --- | --- | --- |
| | | ಜ ಪ್ರತಿಯಲ್ಲಿಯೂ ಈ ಎರಡೂ ಸಂಧಿಗಳು ಕೂಡಿ ಒಂದು ಸಂಧಿಯಾಗಿರುವುದು. ಆದರೆ ಪದ್ಯ ಸಂಖ್ಯೆ ಒಟ್ಟು ೮೨ (viii ೪೮+ix ೩೪) ಆಗಿದೆ. | ೩ನೆಯ ಸಂಧಿಯಲ್ಲಿಯ ೧೦ ಪದ್ಯಗಳು ಕೆಲವು ಪ್ರತಿಗಳಲ್ಲಿ ಪುನರುಕ್ತವಾಗಿರುವುದರಿಂದ, ಅದು ಅನುಚಿತವಾಗಿರುವುದರಿಂದ ಸಂಖ್ಯೆ ತಪ್ಪಾಗಿ ಬೆಳೆದಿದೆ. ಅವುಗಳನ್ನು ಬಿಟ್ಟುಬಿಟ್ಟರೆ ಈ ಸಂಧಿಯ ಪದ್ಯ ಸಂಖ್ಯೆ ೪೯ ಎಂಬುದು ಸಾಧುವೆನಿಸುವುದು. | ೮ನೆಯ ಸಂಧಿಯಲ್ಲಿ ೪೯ ಇರುವ ಪ್ರತಿಗಳು : ಝ ಮತ್ತು ತ.<br>೫೯ ಇರುವ ಪ್ರತಿಗಳು : ಖ, ಛ, ಫ, ದ. |
| ೧೩ | ೨೮ | ಜೀಯ ಜಗದಂತರಾತ್ಮಕ ಸರ್ವಚೈತನ್ಯ<br>ಜೀಯ ಶುದ್ಧಾದ್ವಯ ನಿರಂಜನ ನಿರಾವರಣ<br>ಜೀಯ ನಿನ್ನೊಳಗೀ ಸಮಸ್ತಮಧ್ಯಸ್ತವಾಗಿದೆ<br>ನೀನೆ ಸತ್ಯರೂಪ \|\|<br>ಜೀಯ ನಾರಾಯಣ ಮುಕುಂದ ಮಾಧವಕೃಷ್ಣ<br>ಜೀಯ ಚಕ್ರಿಯೆ ಪೀತವಾಸ ಲಕ್ಷ್ಮೀಲೋಲ<br>ಜೀಯ ಸರ್ವಸ್ವತಂತ್ರನೆ ಬಿಡಿಸುಸಂಸಾರಪಾಶದಿಂ<br>ದೆನ್ನನೆಂದು \|\| | ಈ ಪದ್ಯವು ಕರಿಬಸವಶಾಸ್ತ್ರಿ, ಮತ್ತು ಸಾ. ಸಂ. ಶಾಖೆಯ ಮುದ್ರಿತ ಪ್ರತಿಗಳಲ್ಲಿ ಮಾತ್ರ ಇದೆ. ನಾವು ನೋಡಿದ ಯಾವೊಂದು ಹಸ್ತಪ್ರತಿಯಲ್ಲಿಯೂ ಇದು ಇಲ್ಲ.<br>ಅಲ್ಲದೆ, ದೇವನೂರಲ್ಲಿ ಕೊಠಾರ ಉತ್ಸವ ಕಾಲಕ್ಕೆ ಅನ್ನುವ ದೇವತಾಸ್ತುತಿಯ ೩೪ ಪದ್ಯಗಳಲ್ಲಿಯೂ ಇದು ಇಲ್ಲ.<br>i ಅಲ್ಲದೆ, ಸಾಮಾನ್ಯವಾಗಿ ಒಂದು ಪದ್ಯದಲ್ಲಿ ಒಂದು ಮಾತನ್ನು ಮುಗಿಸುತ್ತಾನೆ; ಹಾಗೆ ಈ ಪದ್ಯದಲ್ಲಿ ಮುಗಿದಿಲ್ಲ. ii ಮೇಲಣ ಜಯಚತುರ್ಮುಖ ಎಂಬ ಪದ್ಯದಂತೆ ಇದೂ ಸಂಬೋಧನೆಗಳಿಂದ ಕೂಡಿದುದಾಗಿದ್ದು ನಡುವೆ ಮಾತ್ರ ನಿನ್ನೊಳಗೆ, ಆಗಿದೆ. ನೀನೆ ಎಂಬ ಮಾತುಗಳು ಬಂದಿರುವುದರಿಂದ ಶೈಲಿಗೆ ಚ್ಯುತಿಬಂದಂತಾಗಿದೆ; iii 'ಸಮಸ್ತ' ಎಂಬಲ್ಲಿ ಪ್ರಥಮೆಗೆ ಅಕಾರಾಂತ ಶಬ್ದದ ಪ್ರಕೃತಿರೂಪದ ಬಳಕೆಯೂ ವಿಲಕ್ಷಣವಾಗಿ ತೋರುತ್ತದೆ.<br>ಆದುದರಿಂದ ಈ ಪದ್ಯವು ಪ್ರಕ್ಷಿಪ್ತವಾಗಿದೆ. ಈ ಸಂಧಿಯು ಪ್ರಚಲಿತ ಪ್ರತಿಗಳಲ್ಲಿರುವಂತೆ ೬೪ ಪದ್ಯಗಳದಾಗಿರದೆ ೬೩ ಪದ್ಯಗಳದಾಗಿದೆ. | ೬೩ ಪದ್ಯಗಳುಳ್ಳ ಪ್ರತಿಗಳು: ಎಲ್ಲಾ ಹಸ್ತಪ್ರತಿಗಳು.<br>೬೪ ಪದ್ಯಗಳುಳ್ಳ ಪ್ರತಿಗಳು : ಪ್ರಚಲಿತ ಮುದ್ರಿತ ಪ್ರತಿಗಳು ಮಾತ್ರ. |

೧೭ ಜ ಪ್ರತಿಯಲ್ಲಿ ಸಂಧಿ ೧೭ರ ಆರಂಭದ ೫ ಪದ್ಯಗಳೂ ಖ ಪ್ರತಿಯಲ್ಲಿ 'ಇನ್ನು ಕಟ್ಟಿಸು ಗುಡಿಗಳು' ಎಂಬ ೩೭ನೆಯ ಪದ್ಯವೂ ಇಲ್ಲ. ಇದರಿಂದ ಆ ಸಂಧಿಯ ಒಟ್ಟು ಪದ್ಯ ಸಂಖ್ಯೆ ೫೯ ಮತ್ತು ೫೫ ಆಗಿದೆ.

ಈ ಕೊರೆ ಬರೆಹಗಾರನ ದೋಷದಿಂದ ಆಗಿದೆ. ವಾಸ್ತವವಾಗಿ ೧೭ನೆಯ ಸಂಧಿ ೬೦ ಪದ್ಯಗಳದು.

೬೦ಕ್ಕಿಂತ ಕಡಿಮೆ ಪದ್ಯಗಳುಳ್ಳ ಪ್ರತಿಗಳು : ಖ ಮತು ಜ

೬೦ ಪದ್ಯಗಳುಳ್ಳ ಪ್ರತಿಗಳು: ಖ,ಜ ಹೊರತು ಉಳಿದೆಲ್ಲ ಪ್ರತಿಗಳು.

೧೮ ೨೩ ಕ, ಗ, ದ ಪ್ರತಿಗಳಲ್ಲಿ ಈ ಪದ್ಯಗಳಿವೆ :

೨೪ ಮಿರುಗುವ ತಳಿರ್ದೋರಣಂಗಳಂ ಕಟ್ಟಿಸುತೆ<br>
೨೫ ಮರಿಕೋಗಿಲೆಗಳ ಬಾಯಿಗಳ ಬಲಿಯ ಬಂಧನದ<br>
ಶರೆಗಳಂ ಬಿಡಿಸುತ್ತ ತುಂಬಿಗಳದಳಕೆ ಕ<br>
ಮ್ಮಲರ್ಗಳಂ ಸೂರೆವಿಡುತ ॥

ಕಿರುವೆಲರೊಳೆತ್ತಲುಂ ಸಾರಿಸುತ ವಿರಹಿಗಳ<br>
ನೆರಗಿಸುತ ಜೊಂನದ ಝುಸಂ ಪೆರ್ಚಿಮಧುನೃಪಂ<br>
ಪೊರಮಟ್ಟು ನಾಗಿಯಂ ಮುದುಗಿಸಿ ಸಮಸ್ತವನ<br>
ರಾಷ್ಟ್ರಮಂ ಕೈಕೊಂಡನು ||೨೩||

ಪೊಸಮಾವಶೋಕೆಯೊಳ್ ಮರಿದುಂಬಿ ಕೋಗಿಲೆಯೊ<br>
ಳೆಸವ ಸಂಪಗೆ ಪೊಚ್ಚಪೊಂದಾವರೆಯೊಳೊಳ್ಪ<br>
ಡಸಿದ ಮಲ್ಲಿಗೆಯಲರ್ ಬೆಚ್ಚ ಬೆಳ್ದಿಂಗಳೊಳ್<br>
ಗಿಳಿವಿಂಡು ಬನಸಿರಿಯೊಳು ॥

ಎಸದುವೊಂದೊಂದರೊಳ್ ಮಧುಮಾಸಕಂಗಜನ<br>
ದೆಸೆಯಂತೆ ಖಳೆಯಂತೆ ಧನದಂತೆ ಜಸದಂತೆ<br>
ಪಸುರ್ವೆಳಸಿನಂತೆ ಕೆಂಪಸಿತಂ ಪಳದಿಪಳುಕು<br>
ಪಚ್ಚೆಗಳ ಬಣ್ಣದಿಂದೆ ||೨೪||

ಈ ಮೂರು ಪದ್ಯಗಳು ೮ನೆಯ ಸಂಧಿಯ ೨,೩,೪ ನೆಯ ಪದ್ಯಗಳೇ ಆಗಿವೆ. ಅಲ್ಲಿ, ಕುದುರೆಯನ್ನು ಬಿಡಬೇಕಾದ ಕಾಲ ವಸಂತಋತು. ಸಂಧಿ ೧೮ರಲ್ಲಿ ಸೀತೆ ಋತುಮತಿಯಾದ ಕಾಲ ವಸಂತಋತು. ಸಂಪ್ರಾಪ್ತವಾಗಿದೆ. ಅಲ್ಲಿಯ ಆ ಋತುವರ್ಣನೆಯ ಪದ್ಯಗಳು ಮೂರನ್ನು ಇಲ್ಲಿ ಪುನಃ ತರಲಾಗಿದೆ.

ಸಾಮಾನ್ಯವಾಗಿ ಪದ್ಯಗಳ ಪುನರಾವೃತ್ತಿಯನ್ನು ಒಪ್ಪಬಾರದೇನೋ ಸರಿ. ಆದರೆ ಈ ಮೂರು ಪದ್ಯಗಳ ಪುನರಾವರ್ತನೆಯನ್ನು ಈ ನಿಯಮಕ್ಕೆ ಅಪವಾದವೆಂದು ಗ್ರಹಿಸಬೇಕಾಗುತ್ತದೆ. ಸಂಧಿ ೮ರಲ್ಲಿ ಅಶ್ವಪರಿಭ್ರಮಣಾರಂಭದ ಸಮಯವಿಶೇಷವನ್ನು ವರ್ಣಿಸಿರುವಂತೆ ಸಂಧಿ ೧೮ರಲ್ಲಿ ಸೀತೆಯು ಪುಷ್ಪವತಿಯಾದ ಕಾಲದ ಮಹತ್ತ್ವವನ್ನು ಬಿಂಬಿಸುವುದಕ್ಕೆ ಈ ವರ್ಣನೆ ಇದೆ. ಆದುದರಿಂದ ಋತುವರ್ಣನೆ ಎರಡೂ ಕಡೆ ಅಗತ್ಯವೆಂದು, ಹಿಂದಿನ ಆ ಸಿದ್ಧ ಪದ್ಯಗಳನ್ನೇ ಇಲ್ಲಿ ಮತ್ತೆ ಕವಿಯೇ ತಂದಿರಬೇಕೆಂದು ತೋರುತ್ತದೆ. ಇದರಿಂದ ಜೈಮಿನಿ ಭಾರತದ ಕರ್ತೃವೂ ತದಂತರ್ಗತವಾದ ರಾಮಾಯಣ ಕಥೆಯ ಕರ್ತೃವೂ ಅಭಿನ್ನ

೩ ಪದ್ಯಗಳ ಪುನರಾವೃತ್ತಿಯಾದ ಪ್ರತಿಗಳು : ಕ, ಗ, ದ, ಘ, ಛ.

೩ ಪದ್ಯಗಳ ಪುನರಾವೃತ್ತಿಯಿಲ್ಲದ ಪ್ರತಿಗಳಲ್ಲಿ ೧೮ನೆಯ ಸಂಧಿಯಲ್ಲಿ ೬೪ ಪದ್ಯಗಳಿವೆ. ಈ ಪುನರಾವೃತ್ತಿ ನಮ್ಮ ಅಭಿಪ್ರಾಯದಂತೆ ಗ್ರಾಹ್ಯವೆಂದಾದರೆ, ಈ ಸಂಧಿಯ ಒಟ್ಟು ಪದ್ಯಗಳು ೬೭ ಎಂದಾಗುತ್ತದೆ.

| (೧) | (೨) | (೩) | (೪) | (೫) |
| --- | --- | --- | --- | --- |
| | | ಒಂದು ಬಳಿಯಲ್ಲಿ ನಿಲುಕಡೆಗಾಣದತಿ ವೇಗ<br>ದಿಂದಾವಗಂ ಪ್ರಬಲವಾಗಿ ಬೀಸುವಗಾಳಿ<br>ಚಂದನದ್ರುಮುಮಂ ತೊಡರ್ದಹಿಗಳಾಹಾರಮಂ<br>ಕೊಂಡುಕೊಂಡು ಮಿಕ್ಕು \|\|<br>ಮಂದತ್ವಮಂ ತಳೆದು ಮಲಯಾಚಲದ ಸೀಮೆ<br>ಯಿಂದೆ ಸರಸಿಜದೊಳ್ ಭ್ರಮಿಸುವ ಮರಿದುಂಬಿಗಳ<br>ವೃಂದಮಂ ಕೂಡಿಕೊಂಡಲೆವೆಲರ್ ಬಂದುದು ವಿರಹಿಗ<br>ಳೆದೆಯೊರುವಂತೆ \|\|೨೫\|\| | ಎಂಬುದು ಸ್ಪಷ್ಟವಾಗುತ್ತದೆ.<br>ಹೀಗೆ ಕವಿ ಒಂದು ಕಾವ್ಯದಲ್ಲಿ ತನ್ನದೇ ಆದ ಇನ್ನೊಂದು ಕಾವ್ಯದಿಂದ ಕೆಲವು ಪದ್ಯಗಳನ್ನು ಸೇರಿಸುವುದು ಹೊಸ ಮಾತೇನಲ್ಲ. ಪೂರ್ವಕವಿಗಳಲ್ಲೂ ಇದು ಕಂಡುಬರುತ್ತದೆ. ನಾಗಚಂದ್ರನು 'ಮಲ್ಲಿನಾಥ ಪುರಾಣ' ಮತ್ತು 'ರಾಮಚಂದ್ರ ಚರಿತ ಪುರಾಣ' ಎರಡೂ ಕೃತಿಗಳು ತನ್ನವು ಎಂಬುದನ್ನು ನೂರಾರು ಪದ್ಯಗಳ ವಿನಿಮಯದಿಂದ ಸೂಚಿಸಿದ್ದಾನೆ.[1] ಇದೊಂದು ಬಹುಜನ ಕವಿಗಳ ರೂಢಿಯೇ ಆಗಿದೆ. ಇದರಂತೆ ಲಕ್ಷ್ಮೀಶನೂ ಮಾಡಿರಲು ಸಾಕು. ಅಶ್ವಮೇಧ ಕಥೆ ಮತ್ತು ರಾಮಾಯಣ ಕಥೆ ಎರಡೂ ಅವನವೇ ಎಂಬುದನ್ನು ಸ್ಥಾಪಿಸಲು ಈ ನೂರು ಪದ್ಯಗಳು ಉತ್ತಮ ಆಧಾರಗಳಾಗಿವೆ. | |
| ೧೮ | ೩೪<br>೪೪<br>೫೬ | ಘ ಪ್ರತಿಯಲ್ಲಿ ೩೪ನೆಯ ಹಾಗೂ ೫೬ನೆಯ ಎರಡು ಪದ್ಯಗಳು ಹೊಸವಾಗಿವೆ. (ಸಂ. ೧೮); ಹಾಗೆಯೆ ಘದಲ್ಲಿ ೪೪ನೆಯ ಪದ್ಯ ಹೊಸದು.<br>ಸರಸಿಜಾಕ್ಷಿಯ ವದನದಿಂಗಿತವ ಮೇಲಿಕ್ಕಿ<br>ಬೆರಸಲಳುಕುವ ಮನವ ನಸುನೋಟದೋರೆಯೊಳು<br>ತರುಣಿಯರಿಯದವೊಲುರೆ ನೋಡಿನೋಟವನೊಲದ<br>ನಾಕ್ಷಣದೊಳಾ ಜಾಣ್ಮೆಯಾ \|\| | ಪ. ೩೪ : ಇದರ ಹಿಂದಣ ೩೩ನೆಯ ಪದ್ಯವು ಗರ್ಭವತಿಯಾದುದನ್ನು ಹೇಳಿದೆ. ಘ ಪ್ರತಿಯಲ್ಲಿಯ ಈ ೩೪ನೆಯ ಪದ್ಯ ರಘುನಾಥನು ಅವನಿಜೆಯನ್ನು ನೆರದನೆಂದು ಹೇಳುತ್ತದೆ. ಇದು ವಿಸಂಗತ. ಲಕ್ಷ್ಮೀಶನಿಗೊಪ್ಪುವ ಬಂಧವೂ ಇಲ್ಲಿಲ್ಲ. ಇದು ಕೃತಕ ಪದ್ಯ. ಇದನ್ನು ಯಾವ ಪ್ರತಿಯೂ ಬೆಂಬಲಿಸುವುದಿಲ್ಲ. ಆದುದರಿಂದ ಇದು ತ್ಯಾಜ್ಯ.!<br>ಪ. ೬೪ : ಈ ಪದ್ಯವು ೨೬ನೆಯ ಸಂಧಿಯಲ್ಲಿ ೨೫ನೆಯ | ಸಂ. ೮ರಲ್ಲಿ ೬೯ ಪದ್ಯಗಳುಳ್ಳ ಪ್ರತಿ: ಘ.<br>೬೯ಕ್ಕಿಂತ ಕಡಿಮೆ ಇರುವ ಪ್ರತಿಗಳು : ಉಳಿದೆಲ್ಲವು.<br>೪೪ನೆಯ ಪದ್ಯವು ಥ ಪ್ರತಿಯೊಂದರಲ್ಲೇ ಇದೆ. |

1 'ಸಾಹಿತ್ಯ ಸಂಶೋಧನೆ', ದ.ರಾ. ಬೇಂದ್ರೆ, ಪು. ೪೫.

ತರುಣಿಯರಿದೊಯ್ಯೊಯ್ಯನೈತರಲು ಜವದಿ ಮುಂ
ಜರದ ಕರದಿಂ ಪಿಡಿದು ತೆಗದಪ್ಪಿ ಮುಂಡಾಡಿ
ನೆರದನನುರಾಗದಿಂದವನಿಜೆಯ ಮನನೊಲಿಯ
ಲನುವಿಂದ ರಘುನಾಥನೂ ||೩೪||

ಬಳಿಕ ದಿನದಿನಕೊಂದು ಪರಿಯಾಗಿ ದೋಷಮುಂ
ತಳದು ಸತಿ ಪೆಚ್ಚಿದ ಕರಂಗಳಂ ಸಿರಿಯಿರ್ಪ
ನಿಳೆಯಂ ಬಾಧಿಸುತ್ತಿರೆ ರಾಜನೈಶ್ವರ್ಯಮಿರ್ದಪುದೆ
ಪೇಳ್ವನಲ್ಕೆ ||

ತೊಲಗಿದುದು ಬೆಳ್ದಿಂಗಳಾದಿತ್ಯನೊಳ್ಕ್ಕುರೆಯ
ಲ್ಕಳ ಕುಂಕುಮದಿಂದ ಪೂರ್ವದಿಗ್ವನಿತೆ ಮುಂ
ಗಳ ಮಜ್ಜನಂಗೈದಳೆಂಬಂತೆ ರಾಂಜಿಸಿತು ಮೂಡ
ದೆಸೆ ಕೆಂಪಡರ್ದು ||೪೪||

ನಿನುಗೆ ಮನದೊಳ್ ಸಂದೆಗಂ ಬಡದೆನುಡಿದೆಮ್ಮ
ಕ್ರಮಮುಂ ನಿಧಾನಿಪುದು ಬಯಕೆ ಮುಂತಲ್ಲದೆ
ರಮಣಿಗಾದುದು ಬನದ ರುಷಿಪತ್ನಿಯರ ಖೇಳ
ಮೇಳದಿಂ ಮುದರಿನಿಂದಾ ||

ಸಮುತೆಯಿಂದಾಕೆಯಂ ಕಳಹೂದು ಮನಕಿದು
ತ್ರಮನೆಂದು ರಘುಜ ಸವುಮಿತ್ರಿಭರತಾದಿಗಳ
ಮನುತೆ ಮಿಗೆ ನೋಡಿದಂ ಮಾಡಿದಂ ಮನಕೆ ಸಂ
ತಾಪಮುಂ ತನ್ನವರ್ಗೆ ||೫೬||

೧೯ – ಈ ಸಂಧಿಯಲ್ಲಿ ಥ ಪ್ರತಿಯಲ್ಲಿ ೫೩ ಪದ್ಯಗಳಿವೆ.

ಪದ್ಯವಾಗಿದೆ. ಅಲ್ಲಿ ಬೆಳ್ದಿಂಗಳ ರಾತ್ರಿಯ ವರ್ಣನೆ ತರುವಾಯ ಸೂರ್ಯೋದಯವಾದ ಮಾತು ಇದೆ. ಅಲ್ಲಿ ಈ ಪದ್ಯ ಸರಿಹೊಂದಿದೆ.

ಥ ಪ್ರತಿಯಲ್ಲಿ ಇದು ಬಂದಿರುವುದು ರಾಮಚಂದ್ರ–ಪುರರಕ್ಷಕರಲ್ಲಿ ಸಂಭಾಷಣೆ ನಡೆದಲ್ಲಿ, ನಡುವೆಯೇ ಬಂದು ಬಿಟ್ಟಿದೆ. ಇದು ಅಪ್ರಾಸಂಗಿಕ. ತಪ್ಪು ಸೇರ್ಪಡೆ. ಇದನ್ನು ಇಲ್ಲಿ ಗ್ರಹಿಸಲಾಗದು.

ಪ ೫೬ : ಇದರ ಹಿಂದಣ ಪದ್ಯವು 'ಶತ್ರುಘ್ನನಿಂತೆಂದನು' ಎಂದು ಮುಗಿದಿದೆ. ಎಂದರೆ ಮುಂದಿನ ಪದ್ಯದಲ್ಲಿ ಶತ್ರುಘ್ನನ ಮಾತಿರಬೇಕು. ಆದರೆ ಘ ಪ್ರತಿಯ ಈ ಪದ್ಯದಲ್ಲಿ ರಘುಜನ ಮಾತೇ ಇದೆ. ಅದೂ ಪ್ರೌಢವಲ್ಲದ ಅಸಂಬದ್ಧ ಮಾತಿನಂತಿದೆ. ಈ ಪದ್ಯದಲ್ಲಿಯ ರಾಮನ ಮಾತಿನ ಅಭಿಪ್ರಾಯಗಳೆಲ್ಲ ಹಿಂದು ಮುಂದಿನ ಪದ್ಯಗಳಲ್ಲಿ ಅಲ್ಲಲ್ಲಿ ಬಂದುಹೋಗಿವೆ. ಆದುದರಿಂದ ಇದನ್ನೂ ಬಿಡುವುದೇ ಲೇಸು.

ಆದುದರಿಂದ ಋತುವರ್ಣನೆಯ ಮೂರು ಪದ್ಯಗಳನ್ನು ವಿಮರ್ಶಿಸುತ್ತ ಮೇಲೆ ಅಭಿಪ್ರಾಯಪಟ್ಟಂತೆ ೧೬ನೆಯ ಸಂಧಿಯ ಪದ್ಯ ಸಂಖ್ಯೆ ೬೭ಕ್ಕೆ ನಿಲ್ಲುತ್ತದೆ.

'ಪಾವನಕೆ ಪಾವನಂ' (ಪ. ೧೨) 'ಮೊರೆಯುತೊಲ್ಲವು ತುಂಬಿ' (ಪ ೩೩) ಎಂಬೆರಡು ಪದ್ಯಗಳು ಬರೆಯದೆ ಉಳಿದುಹೋಗಿವೆ. ಆದುದರಿಂದ ಅವೆರಡು ಸೇರಿ ಈ ಸಂಧಿ ೫೫ ಪದ್ಯಗಳದಾಗುವುದು.

೫೫ಕ್ಕಿಂತ ಕಡಿಮೆ ಪದ್ಯಗಳಿದ್ದ ಪ್ರತಿ: ಥ ಒಂದೇ.

ಮಿಕ್ಕೆಲ್ಲವಲ್ಲಿಯೂ ೫೫ ಪದ್ಯಗಳುಂಟು.

| (೧) | (೨) | (೩) | (೪) | (೫) |
|---|---|---|---|---|
| ೨೬ | ೨೪<br>೨೫<br>೪೬ | ಛ ಪ್ರತಿಯಲ್ಲಿ ಈ ಮೂರು ಪದ್ಯಗಳಿವೆ. ಜ ಪ್ರತಿಯಲ್ಲಿ ಇವುಗಳ ಪೈಕಿ ೪೬ನೆಯ ಪದ್ಯ ಮಾತ್ರವಿದೆ :<br>ಕೆಲರು ಸಂಯೋಗದಿಂ ಕೆಲರು ವಿರಹಂಗಳಿಂ<br>ಕೆಲರು ಸದ್ವಿನಯದಿಂ ಕೆಲರು ಸತ್ಕಥೆಗಳಿಂ<br>ಕೆಲರು ಗೇಯಂಗಳಿಂ ಕೆಲರು ಹಾಸ್ಯಂಗಳಿಂ<br>ಕೆಲರು ಕಾಮಾಗಮದೊಳು \|\|<br>ಕೆಲಬರನುಲೇಪನದಿ ಕೆಲರು ತಾಂಬೂಲದಿಂ<br>ಕೆಲರು ಪಣ್ಫಲಗಳಿಂ ಕೆಲರು ನಿದ್ರೆಗಳಿಂದ<br>ಕೆಲಬರಾನಂದದಿಂ ಕೆಲರಾಡುತಿರುರ್ದರಿಕ್ಕೆಲದ<br>ಕೇರಿಗಳೊಳು \|\|೨೪\|\|<br>ಇದಿರ ಪಾರಿವದಂತೆ ಗಳರವಂಗಳನೆಸಗು<br>ತಧರವಂ ಗಿಳಿ ಚೂತ ಪಣ್ಫಲವ ಕರ್ದುಂಕುವಂ<br>ತೊದವಿದನುಬಂಧಗತಿಗುಭಯವಯವಂಗಳಂ<br>ಸಾಧನಾಧಿಕಗಳಿಂದ \|\|<br>ಚದುರೋಜೆ ಲಲ್ಲೆಯಾಲಿಂಗನ ಸಚುಂಬನಂ<br>ಮೃದುತರತ್ತಾಡನ ಸುದಂತಕ್ಷತಂಗಳಿಂ<br>ಮದನಾಗಮವನರಿದ ಗಣಿಕಾವಿಟರ ತಂಡ<br>ಮುದವೀಯೆ ಹರನರರ್ಗೆ \|\|೨೫\|\|<br>ಹರಿವಿಜಯರಂ ತರಣಿಯುದಯದೊಳ್ಕಂಡುತವ<br>ಚರಣಕೆರಗುವೆನೆಂಬ ಮನಮಿತ್ತತಿರುಗಿ ಭೂ<br>ಸುರನೆ ಹರಿ ವಿಜಯ ಶಿಷ್ಯಂ ಭಾವವೆನಗೆಂದು ಪೊಕ್ಕ<br>ನರಮನೆಯನವನೂ \|\| | ಪ್ರಚಲಿತ ಪ್ರತಿಗಳಲ್ಲಿ ೨೪ನೆಯ ಪದ್ಯದಲ್ಲಿ ಅಸುರಾರಿ ಫಲುಗುಣರು ಪುರಜನದ ನಾನಾ ಪ್ರಪಂಚವನ್ನು ನೋಡುತ್ತ ಸಂಚರಿಸುತ್ತಿದ್ದರೆಂದು ಹೇಳಿದೆ. ಆ ನಾನಾ ಪ್ರಪಂಚಿನ ವಿವರಣೆ ಅಲ್ಲಿಲ್ಲ. ಛ ಪ್ರತಿಯಲ್ಲಿಯ ಈ ಎರಡು ಪದ್ಯಗಳು ಅದನ್ನು ವಿವರಿಸುತ್ತವೆ. ಈ ಪದ್ಯಗಳು ಮಿಕ್ಕಾವ ಹಸ್ತ ಪ್ರತಿಗಳಲ್ಲಿಯೂ ಇರುವುದಿಲ್ಲ. ತೀರ ಸಾಮಾನ್ಯವಾದ ಮಾತಿನಲ್ಲಿ, ತೀರ ಸಾಮಾನ್ಯವಾದ ವಿಷಯವನ್ನು ಲಕ್ಷ್ಮೀಶ ಹೇಳಿರಲಾರನೆಂದೂ ಇವನ್ನು ಯಾರೋ ಸೇರಿಸಿರಬೇಕೆಂದೂ ತೋರುವುದು.<br><br>ಪದ್ಯ ೪೫ರಲ್ಲಿ ಅರಸನು ಮಂಟಪದಿಂದ ಹೊರಟು ಹೋದನೆಂದು ಹೇಳಿದೆ ಮತ್ತು ಮುಂದಿನ ಪದ್ಯದಲ್ಲಿ ಸ್ನಾನ ಮಾಡಿಕೊಂಡು ಬಂದನೆಂದು ಹೇಳಿದೆ ಅದರೆ ಛ, ಜ ಪ್ರತಿಗಳಲ್ಲಿರುವ ಈ ೪೬ನೆಯ ಪದ್ಯದಲ್ಲಿ ಅರಸನು ಅರಮನೆಗೆ | ಈ ಎರಡು ಪದ್ಯಗಳನ್ನುಳ್ಳ ಪ್ರತಿ ಛ ಮಾತ್ರ. ಬೇರೆ ಯಾವ ಪ್ರತಿಯಲ್ಲಿಯೂ ಇವು ಇಲ್ಲ.<br><br>ಈ ಪದ್ಯವುಳ್ಳ ಪ್ರತಿಗಳು : ಛ ಮತ್ತು ಜ.<br>ಮಿಕ್ಕ ಯಾವ ಹಸ್ತಪ್ರತಿಯಲ್ಲಿಯೂ ಇದು ಇಲ್ಲ. |

ತುರಗಮೇಧವುದಂತಿರಲಿ ತರುಣಿ ನಿಲ್ಲೆಂದು
ಪರಮಸಂತೋಷದಿಂದಾ ಯಮುಂ ಕಂಡು ಪಂ
ಕರುಹದಳನೇತ್ರನಂ ಧ್ಯಾನಿಸುತ ಮನದೊಳಗೆ
ಸಂತಸಂಗೊಂಡನೂ ||೪೬||

ಹೋದನೆಂದು ಹೇಳಿದ್ದೂ, ಅಲ್ಲಿ ತನ್ನ ಹೆಂಡತಿಗೆ ಯಜ್ಞ ಸಾಕೆಂದು ತಿಳಿಸಿದನೆಂಬಂತೆ ಅರ್ಥಭಾಸವೂ ಕಂಡುಬರುತ್ತದೆ. ಆದರೆ ಲಕ್ಷ್ಮೀಶನ ಕಥನ ಸಾರಲ್ಯವಾಗಲಿ, ಸುಸಂಬದ್ಧತೆಯಾಗಲಿ ಈ ಪದ್ಯದಲ್ಲಿ ಕಾಣುವುದಿಲ್ಲ. ಇದು ಛ,ಜ ಎರಡು ಪ್ರತಿಗಳಲ್ಲಿ ಮಾತ್ರವೇ ಇದ್ದು ತನಗೆ ಕೊರತೆಯೆಂದು ತೋರಿದ ವಿಷಯ ವಿಚಾರಗಳನ್ನು ಯಾರೋ ಸೇರಿಸಿರಬೇಕೆಂಬಂತಿದೆ.

೩೩ — ಈ ಸಂಧಿಯಲ್ಲಿ ಸಾಮಾನ್ಯವಾಗಿ ೫೩ ಪದ್ಯಗಳಿವೆ. ಆದರೆ ಕ,ಚ,ದ ಈ ಮೂರು ಪ್ರತಿಗಳಲ್ಲಿ ೫೪ ಪದ್ಯಗಳಿವೆ. ಘ ಮತ್ತು ಜ ಪ್ರತಿಗಳಲ್ಲಿ ಮಾತ್ರ ೬೬ ಪದ್ಯಗಳಿವೆ. ಕ ಮತ್ತು ಚ ಪ್ರತಿಗಳಲ್ಲಿ ಹೆಚ್ಚಾಗಿರುವ ಒಂದು ಪದ್ಯವಿದು (೩೩.೧೮):

ವರುಷರುತುವಂಕಳಿಯೆ ಬಂದುದು ಶರತ್ಕಾಲ
ವರಸಂಚೆ ಸಂಚರಿಸತೊಡಗಿದವು ನದಿಗಳು
ಬ್ಬರವಡಗಿ ತಿಳಿದು ಪರಿದವು ಬೆಳತುದಾಗಸಂ
ಮೆರೆದವುಡುರಾಜಿ ಕೂಡೆ ||
ತರಣಿ ಶಶಿಗಳ ಕಿರಣ ವ್ಯೆಗೆ ನಿರ್ಮಳಮುದಂ
ಅರವಿಂದದಲರನರಸುವಳಿಗಳೀಗಳೆಡ್ಡೆಸೆಯ
ತರುಣಿಯರ ಗುರುಕುಚದ ಮೇಲುದಂ ಸೆಳೆದಂತೆ
ಗಿರಿಶಿಖರ ಮೊಸದಿರ್ದುದೂ ||೧೦||

ಈ ಪದ್ಯವೇನೂ ಹೊಸದಲ್ಲ. ಸಂಧಿ ೨೫ ಪದ್ಯ ೩ (ತುರಗಂ ನಡೆದುದು ಮಣಿಪುರದಿಂ) ಮಾರ್ಪಾಟು ಹೊಂದಿ ಇತ್ತಿಲ್ಲಿ ಬಂದಿದೆ. ಇಲ್ಲಿ ಇದು ೧೧ನೆಯ ಪದ್ಯವಾಗಿ ಸೇರಿರುವುದು ಹೊಂದುವುದಿಲ್ಲ. ಕೃಷ್ಣನು ಯಜ್ಞಾಶ್ವ ಸಂಚಾರದ ವೃತ್ತಾಂತವನ್ನು ಸಂಕ್ಷೇಪದಲ್ಲಿ ಹೇಳುವ ಈ ಪ್ರಸಂಗದಲ್ಲಿ ವರ್ಣನಾವಿಸ್ತಾರವು ಅಯುಕ್ತ. ಆದುದರಿಂದ ಇಲ್ಲಿ, ೩೩ನೆಯ ಸಂಧಿಯಲ್ಲಿ ಈ ಪದ್ಯವು ತ್ಯಾಜ್ಯ.

ಈ ಪದ್ಯ ಕ, ಚ ಗಳಲ್ಲಿ ಮಾತ್ರವಿದೆ; ಬೇರೆ ಯಾವ ಹಸ್ತಪ್ರತಿಯಲ್ಲಿಯೂ ಇಲ್ಲ.

ದ ಪ್ರತಿಯಲ್ಲಿಯ ಒಂದು ಹೆಚ್ಚಿನ ಪದ್ಯ:

ವರರುಚಿರ ತಾಂಬೂಲ ಬಾರ ವೇಣಾಕ್ಷಿಯರ
ಗುರುಕುಚದ ಕಠಿನನಾನಂದಾಶ್ರು ಬಿಸಿ ಬೆಚ್ಚು

ಸಂ. ೩೩ ಪ. ೧೧-ಚಂದ್ರಹಾಸನ ಪುರದಲ್ಲಿ ೫ ದಿನ ಇದ್ದೆವು ಎಂಬ ಮಾತಿನಿಂದ ಮುಗಿಯುತ್ತದೆ. ಮುಂದಿನ ಪದ್ಯದಲ್ಲಿ ಅಲ್ಲಿಂದ ಹೊರಟ ವಿಷಯ ಬರುತ್ತದೆ. ಆದರೆ ಈ ಪದ್ಯದಲ್ಲಿ ಜನ (ತಮ್ಮ ಜನ?) ಹೇಗಿದ್ದರು ಎಂಬುದನ್ನು

ಇದು ದ ಪ್ರತಿಯಲ್ಲಿ ಮಾತ್ರ. ಮಿಕ್ಕಾವುದರಲ್ಲಿಯೂ ಇಲ್ಲ.

| (೧) | (೨) | (೩) | (೪) | (೫) |
| --- | --- | --- | --- | --- |
| | | ನೆರೆಕಾಣಿಸುವ ತೆಕ್ಕೆ ಬೆಚ್ಚಾಗಿ ತೆರನಾಲ್ಕನನುದಿನಂ<br>ಜನಮುರಿಯದೆ ॥<br>ಇರುತಿರ್ದುದೀ ಪರಿಯೊಳೆಂದು ದಾನವ ವೈರಿ<br>ವಿರಚಿಸಿದರಾಗ ಭೂಪಾಲ ಸಂತೋಷದಿಂ<br>ಪರಿಯೆ ಮುನಮುಥ್ವರ [ದ] ಹರಿಯೆತ್ತ ಹರಿದವನೆ<br>ಹರಿಹರುಷದಿಂ ಪೇಳ್ದನು ॥೧೨॥ | ಹೇಳುವುದು ಕೃಷ್ಣನು ಹೇಳುತ್ತಿದ್ದ ವೃತ್ತಾಂತಕಥನರೀತಿಯಲ್ಲಿ ಸಹಜವಲ್ಲ ಎಂದೇ ಹೆಚ್ಚಾಗಿ ತೋರುತ್ತದೆ. ಹಾಗೊಮ್ಮೆ ಹೇಳಿದರೂ ಅದಕ್ಕಾಗಿ ಒಂದು ಪದ್ಯವನ್ನು ವ್ಯಯಿಸಿದ್ದು, ಹೆಂಗುಸರ ಸಂಗದಲ್ಲಿ ಗೊತ್ತಾಗದೆ ಕಾಲ ಗತಿಸಿತೆಂದಿರುವಲ್ಲಿ ವೈಶಿಷ್ಟ್ಯವಿಲ್ಲದು, ಭೂಪಾಲ ಸಂತೋಷದಿಂದ ಕುದುರೆ ಮುಂದೆಲ್ಲಿ ಹೋದುವೆಂದು ಕೇಳಿದಂತೆ ಹರಿಹರುಷದಿಂದ ಮುಂದೆ ಹೇಳಿದಂತೆ ಮಾಡಿ ಪದ್ಯಪೂರಣ ಮಾಡಿದ್ದು ಈ ಪದ್ಯದ ಕೃತಕತೆಯ ಲಕ್ಷಣಗಳಾಗಿವೆ. ಆದುದರಿಂದ ಇದು ಪ್ರಕ್ಷಿಪ್ತವೆಂದೇ ತಿಳಿಯಬೇಕಾಗಿದೆ. | |
| | | ಘ ಪ್ರತಿಯಲ್ಲಿ ೧೫ ಪದ್ಯಗಳು (೮ನೆಯ ಪದ್ಯದಿಂದ ೩೫ನೆಯ ಪದ್ಯದವರೆಗೆ) ಹೆಚ್ಚಿಗೆ ಇರುವಂತೆ ಗೋಚರವಾಗುತ್ತದೆ; ಜ ದಲ್ಲಿ ೧೩ ಹೆಚ್ಚಿಗಿವೆ. ಇವು 'ಘ'ವನ್ನು ಅನುಸರಿಸಿಯೇ ಇವೆ. | ಘದ ೧೫ ಪದ್ಯಗಳಲ್ಲಿ, ೧೨ನೆಯ ಪದ್ಯ ಅರ್ಧಮಾತ್ರವಿದೆ; ೨೨ನೆಯ ಪದ್ಯ ಈ ೧೫ರ ಪೈಕಿಯೇ ೧೦ನೆಯ ಪದ್ಯವಾಗಿದೆ. ಇನ್ನುಳಿದ ೧೩ ಪದ್ಯಗಳು ಬೇರೆ ಬೇರೆ ಕಡೆಗಳಲ್ಲಿ ಬಂದವಾಗಿವೆ:<br>ಸಂ. ೧೦ : ೩,೪,೫,೬ ; ಸಂ. ೧೫ : ೨,೩; ಸಂ. ೧೭: ೨,೩,೪; ಸಂ. ೨೫ : ೪,೫; ಸಂ. ೨೮ : ೨; ಸಂ. ೩೩: ೨೨.<br>ಪುನರುಕ್ತವಾದುದರಿಂದ ಈ ೧೫ ಅಥವಾ ೧೩ ಸದ್ಯಗಳು ಅಗ್ರಾಹ್ಯ. | ಇವು ಇರುವುದು ಘ, ಜ ಗಳಲ್ಲಿ ಮಾತ್ರವೇ. |
| ೩೪ | ೩೯ | ಧೃತರಾಷ್ಟ್ರ ಗಾಂಧಾರಿ ವಿದುರ ಮಜ್ಜನನಿಯನು<br>ಮತದಿಂದ ಸಿಂಧುದೇಶಕೋಶಕೆ ಪೋಗಿ ನೀ ನಿಂನ್ನ<br>ಸುತನ ಸಾಮ್ರಾಜ್ಯಮಂ ನೋಡೆಂದು ಧರ್ಮಜಂ ಕಳು<br>ಹಿದಂ ಸೌಬಲನಸುತೆಯಾ ॥ | ಪ್ರಚಲಿತ ಪ್ರತಿಗಳಲ್ಲಿಯೂ ಎರಡರ ಹೊರತು ಎಲ್ಲ ಹಸ್ತಪ್ರತಿಗಳಲ್ಲಿಯೂ ಈ ಪದ್ಯಗಳಿರುವುದಿಲ್ಲ. ಅವುಗಳಲ್ಲೆಲ್ಲ ೩೮ನೆಯ ಪದ್ಯದ ಉತ್ತರಾರ್ಧದಲ್ಲಿ,<br>ಭೂಮಿಪತಿಗಳನೆಲ್ಲರಂ ಸಕಲ ಯಾದವ | ೫೦ ಪದ್ಯಗಳುಳ್ಳ ಪ್ರತಿಗಳು ದ ಮತ್ತು ಥ |

| | | | |
|---|---|---|---|
| | ಸುತೆಯನಾಯವುಸೂನುವಾಗ ಸಂಮುಖಕೆ ತ<br>ತ್ಪತಿಯರೊಡನೈತಂದು ನಿಂದಳ್ ಪ್ರಮೀಳೆ ಸಿರಿ<br>ಪತಿನಿಯಾಮಿಸಿದನಾ ಯವುಜಂಗೆ ಫಲುಗುಣಂಗೀಕೆ<br>ವಧುವಾಗಲೆಂದೂ ॥೩೯॥ | ಸ್ತೋಮಸಹಿತಂಬುಜದಳಾಕ್ಷನಂ ಸತ್ಕರಿಸಿ<br>ಭೀಮು ಪಾರ್ಥರನೊಡನೊಡನೆ ಕಳುಹಿದಂ ಯುಧಿಷ್ಠಿರನ<br>ವರವರ ನಗರಿಗೆ ॥<br>ಎಂದು ಹೇಳಿದೆ. ಕೃಷ್ಣನು ತನ್ಮೂರಿಗೆ ಹೋದನೆಂಬ ಸಂಗತಿ ಸೂಚ್ಯವಾಗಿ ತಿಳಿಸಲ್ಪಟ್ಟಿದೆ ಮತ್ತು ಮುಂದಿನ (೩೯ನೆಯ) ಪದ್ಯದಲ್ಲಿ, ಅವರೆಲ್ಲ ಹೋದ ತರುವಾಯದಲ್ಲಿ ಅರ್ಜುನ–ಪ್ರಮೀಲೆಯರ ಸಂಯೋಗದ, ಧರ್ಮರಾಜನು ಸುಖದಿಂದ ರಾಜ್ಯವಾಳಿದ ವಿಷಯ ಹೇಳಿದೆ. | ೪೬ ಅಥವಾ ಅದಕ್ಕಿಂತ ಕಡಿಮೆ ಪದ್ಯಗಳುಳ್ಳ ಪ್ರತಿಗಳು: ಉಳಿದೆಲ್ಲವು. |
| ೩೪ ೪೦ | ದೇವ ನೀನಾವಪರಿಯಿಂದಲೆಮ್ಮವನು ನೀ<br>ಜೀವಿಸುವದೇ ಬಯಕೆ ವಿಷವಧುವನೀಕೆಯನ<br>ದಾವಪರಿಯಿಂದಲರ್ಜುನನಾಳ್ವನೆನಲಾಕೆಯಂ ದೇವ<br>ನೀಕ್ಷಿಸಲ್ಕೆ ॥<br>ದೇವತ್ವಮವಳ ತಟುನಿಂದಿರಲ್ ಧೃತರಾಷ್ಟ್ರ<br>ದೇವಿ ಗಾಂಧಾರಿ ವಿದುರಾದಿಗಳ್ ನೋಡಿ ರಾ<br>ಜೀವನಾಭಂ ಹಸ್ತಿನಾವತಿಯೊಳಿರಿ ಸುಖದೊಳೆಂದು<br>ಕರುಣದಿ ನುಡಿದನೂ ॥೪೦॥ | ಇಲ್ಲಿ ಕ್ರಮದಲ್ಲಿ ಚ್ಯುತಿಯೇನೂ ಎನಿಸುವುದಿಲ್ಲ. ಆದರೆ ಕೃಷ್ಣನಂತಹ ಮಹಾವ್ಯಕ್ತಿಯನ್ನು ಕಳಿಸಿದುದನ್ನು ಒಂದು ಮಾತಿನಲ್ಲಿ ಹೇಳಿ ಮುಂದೆ ಸಾಗಿದುದರಲ್ಲಿ ಕೆಲವರಿಗಾದರೂ ಅತೃಪ್ತಿ ಎನಿಸುವಂತಿದೆ. ಸರ್ವಕರ್ತೃವಾದ ಶ್ರೀಕೃಷ್ಣನು ಬೀಳ್ಕೊಂಡುದರ ವಿವರವಿದ್ದರೆ ಸರಿಹೋಗುತ್ತಿತ್ತು ಎಂದೆನಿಸುವ ಸಂಭವವಿದೆ. ದ ಮತ್ತು ಥ ಪ್ರತಿಗಳಲ್ಲಿರುವ ಈ ನಾಲ್ಕು ಪದ್ಯಗಳು ಆ ಕೊರತೆಯನ್ನು ತುಂಬಿಕೊಡುತ್ತವೆ. ಆದರೆ ಈ ವಿವರಣೆಯ ಪದ್ಯಗಳು ಲಕ್ಷ್ಮೀಶ ಮೂಲದಲ್ಲಿ ಇದ್ದಿರಬಹುದೇ ಎಂಬುದು ವಿಚಕ್ಷಣರಿಗೆ ವಿಮರ್ಶಾರ್ಹವಾದ ಮಾತಾಗಿದೆ. | |
| ೩೪ ೪೧ | ಅರಸು ಮಾರುತಿ ವಿಜಯ ನಕುಲಸಹದೇವರಂ<br>ಬರಸೆಳದು ತಕ್ಕೈಸಿ ಧೃತರಾಷ್ಟ್ರ ಸೌಬಲಸುತೆ<br>ಯರ ಕುಂತಿ ದ್ರೌಪದಿ ಸುಭದ್ರೆ ವಿದುರಾದಿಗಳ ಮನ್ನಿಸಿ<br>ದುದಾರಕಂಗೆ ॥ | ಈ ನಾಲ್ಕು ಪದ್ಯಗಳು ದೋಷಪೂರ್ಣವಾಗಿವೆ. ಎಲ್ಲವೂ ಬರೆಹದ ತಪ್ಪುಗಳೇನಲ್ಲ; ಛಂದೋದೋಷಗಳಿವೆ; ವ್ಯಾಕರಣ ವೈಪರೀತ್ಯಗಳಿವೆ; ಪದಜೋಡಣೆಯಲ್ಲಿ ವಿರಸತೆಯಿದೆ. ವಿಷಯದ ದೃಷ್ಟಿಯಿಂದ ನೋಡಿದರೂ, ಶ್ರೀಕೃಷ್ಣನು | |

| (೧) | (೨) | (೩) | (೪) | (೫) |
|---|---|---|---|---|
| | | ತರುಣಿಯರ ಪ್ರದ್ಯುಮ್ನ ದೇವಕಿಯತೋದೆಯರ<br>ತೆರಳಲನುಗೆಯ್ಯಲೆಂದರುಹಿ ದಾನವವೈರಿ<br>ತಿರುಗಲನುವಾಗೆ ಕೂಡಿತು ಸಕಲ ಚತುರಂಗಭೂಮಿ<br>ಬೆಸಲಾದಂತಿರೆ ॥೪೧॥ | ಪ್ರಮೀಲೆಯ ವಿಷವಧುತ್ವವನ್ನು ಕಳೆದದ್ದು (ಅವನ ಆದೇಶ ದಂತೆ ಅರ್ಜುನನೊಡನೆ ಅವಳ ವಿವಾಹವಾದದ್ದು), ಧರ್ಮಾದಿಗಳನ್ನು ಚಿಂತಿಸಬೇಡಿ, ನೀವು ನೆನೆದಾಗ ನಿಮ್ಮ ಹತ್ತಿರವೇ ಇರುವೆ ಎಂದು ಸಂತೈಸಿದ್ದು ಈ ಎರಡು ಮಾತು ಗಳೇನೋ ಹೊಸವು. ಆದನ್ನು ಸರಿಯಾಗಿ ಹೇಳಿಲ್ಲ. ಎಲ್ಲವೂ ಯತ್ಕಾನಾನ್ಯ ವಿಚಾರ, ಕಲ್ಪನೆ, ಮಂಡನೆ, ಲಕ್ಷ್ಮೀಶನ ಪ್ರೌಢಿಯಿಲ್ಲ. | |
| ೩೪ | ೪೨ | ದನುಜಹರ ಮತ್ತೆ ಯಮತನುಜನಂ ನೋಡಿ ಮನ<br>ದನುತಾಪಬ್ಯಾಡವಾವು ಪುರಕೆ ಮರಳಿದರೆಂದು<br>ನೆನದ ಮಾತ್ರದಿಂ ನಿನ್ನಬಳಿಯ ನಿಂದಿಹೆನೆಂದು ನಯ<br>ದೊಳೊಡಂಬಡಿಸಿ ಪೊನ್ನಾ ॥<br>ಮಿನುಗುವಂದಣಮುಖದ ಕುದುರೆ ನಿಂದಿರಲು ಘ<br>ಮ್ಮನೆ ವಾಜಿಯಾರೋಹಣಂ ಗೈದು ತೆರಳ್ದನಾ<br>ವನಜಾಕ್ಷ ನತರಕ್ಷ ಖಳಶಿಕ್ಷ ದೇವನೂರೊಡೆಯ<br>ಲಕ್ಷ್ಮೀಕಾಂತನೂ ॥೪೨॥ | | |

ವಿದ್ದ ಪಾಠವೆಂದು ಇದನ್ನು ಸ್ವೀಕರಿಸಲು ಬರುವಂತಿಲ್ಲ. ಏಕೆಂದರೆ ಇಲ್ಲಿ ಛಂದೋ ದೋಷವಿದೆ.

ಕ ಮತ್ತು ಥ ಪ್ರತಿಗಳಲ್ಲಿ ಈ ಪಂಜ್ತಿ,

'ದೇವಪುರ ಲಕ್ಷ್ಮೀರಮಣನಾಸ್ಯಚಂದ್ರನಾನಂದಮಂ ನಮಗೀಯಲಿ' ಎಂದಿದೆ. ಈ ಪಾಠವು ಛಂದೋಮರ್ಯಾದೆಯನ್ನು ಮೀರಿಲ್ಲ. ಆದುದರಿಂದ ಎರಡೇ ಪ್ರತಿಗಳದಾದರೂ ಈ ಪಾಠವನ್ನು ಸಾಧುವೆಂದು ಪರಿಗ್ರಹಿಸಬೇಕಾಗುತ್ತದೆ.

## ೨. ಸಂಧಿ ೧, ಪದ್ಯ ೪, ಸಾಲು ೬

'ನೇ ವ್ಯಾಪಿಸಿರ್ದನಗಭಿಜ್ಞೆಯಂ ತಾಯೆನಲ್ ತಾಯೆನಲ್ಕೆಯೊಳೀವುದು' ಮತ್ತು 'ನೇ ವ್ಯಾಪಿಸಿರ್ದಮಲ ಸುಮತಿಯಂ ತಾಯೆನಗೆ ತಾಯೆ ನಗೆಗೂಡಿ ನೋಡಿ' ಎಂಬ ಎರಡು ಪಾಠಗಳು ಇಲ್ಲಿ ಪ್ರಮುಖವಾಗಿ ಕಂಡುಬರುತ್ತವೆ. ಇದಕ್ಕೆ ಭಿನ್ನವಾದ ಪಾಠಗಳೂ ಉಂಟು. ಪ್ರಚಲಿತ ಪ್ರತಿಗಳಲ್ಲಿ (ಪ್ರ. ರ.) 'ಅಮಲ ಸುಮತಿಯಂ' ಎಂಬ ಎರಡನೆಯ ಪಾಠವನ್ನೇ ಸ್ವೀಕರಿಸಿದ್ದಾರೆ.

ಮೊದಲನೆಯ ಪಾಠದಲ್ಲಿರುವ ಅಭಿಜ್ಞ ಎಂಬ ಶಬ್ದಕ್ಕೆ 'A supernatural faculty or power of which five kinds are usually mentioned: 1. taking form at will, 2. hearing to any distance, 3. seeing to any distance, 4. penetrating men's thoughts, 5. knowing their state and antecedents—Monier Williams'[1] ಎಂದು ಅರ್ಥವನ್ನು ಕೊಡಲಾಗಿದೆ. ಇಲ್ಲಿ ಹೇಳಿದ ೧. ಕಾಮರೂಪ, ೨. ದೂರಶ್ರವಣ, ೩. ದೂರ ದರ್ಶನ, ೪. ವಿಚಾರಪ್ರವೇಶ, ಮತ್ತು ೫. ಪರರನ್ನು ಅರಿತುಕೊಳ್ಳುವ ಶಕ್ತಿ–ಈ ಐದು ಗುಣವಿಶೇಷಗಳು ಕವಿಯಲ್ಲಿ ಇರಬೇಕು. ಇವುಗಳ ಅಸ್ತಿತ್ವದ ಹೆಚ್ಚುಕಡಿಮೆಯಂತೆ–ಒಬ್ಬ ಕವಿ ಇನ್ನೊಬ್ಬ ಕವಿಗಿಂತ ಮೇಲು–ಕೆಳಗು ಆಗುವನು. ಮೊದಲನೆಯ ಪಾಠದ ಪ್ರಕಾರ ಇಂತಹ ಅಭಿಜ್ಞೆಯನ್ನು ಈ ಕಾವ್ಯರಚನೆಗಾಗಿ ಕವಿ ಶಾರದೆಯಲ್ಲಿ ಪ್ರಾರ್ಥಿಸಿದ್ದಾನೆ. ಇದು ಸಂದರ್ಭೋಚಿತವಾದ ಉತ್ತಮ ಪದ ಪ್ರಯೋಗವಾಗಿದೆ. ಅಭಿಜ್ಞೆ ಎಂಬ ಕಠಿನ ಶಬ್ದವನ್ನೊಳಗೊಂಡ ಆ ಪಾಠವನ್ನು ತ್ಯಜಿಸಿ, 'ಅಮಲ ಸುಮತಿಯಂ' ಎಂಬ ಸುಲಭಪಾಠವನ್ನು, ಅಥವಾ ಟೀಕಾ ಪಾಠವನ್ನು ಯಾವನೋ ಪ್ರತಿಕಾರನು ಸೇರಿಸಿರಬೇಕು ಎಂದು ತೋರುತ್ತದೆ. ಇಂತಹ ಸಂದರ್ಭದಲ್ಲಿ ಕಠಿನ ಪಾಠವನ್ನೇ ಸ್ವೀಕರಿಸಬೇಕು, ಅದೇ ಪ್ರಾಚೀನ ಎಂದು ಗ್ರಂಥ ಸಂಪಾದನಶಾಸ್ತ್ರವು ಹೇಳುತ್ತದೆ.[2] ಆದುದರಿಂದ ಅಭಿಜ್ಞೆ ಎಂಬ ಪ್ರಯೋಗವನ್ನುಳ್ಳ ಪಾಠವು ಸ್ವೀಕಾರ್ಯವಾದುದು.

---

[1] *The Practical Sanskrit–English Dictionary*–V.S. Apte.

[2] 'Harder readings are better than easier'—Textual Criticism by J. P. Postgate, *Encyclopeadia Britanica*, Vol. 26.

## ೩. ಸಂಧಿ ೧೩, ಪದ್ಯ ೧೦, ಪಂಕ್ತಿ ೩

| | | |
|---|---|---|
| | ತಾಂಡಾವರದ ಕೋಪದಿಂ ಮೂಡಿಗೆಯೊಳಾಗ್ನೇಯಮಾರ್ಗಣವನುಗಿದು | (ತೀನಂ) |
| | ” ” ” ಜ್ಞ ” ” | (ತೊರ) |
| | ” ” ” ಜ್ಞ ” ” | (ಬಿಳಗಿ) |
| N. | ” ” ” ಜ್ಞ ” ” | (K 272) |
| | ತಾಂಡ್ವಾವರದ ” ” ಗ್ನಿ ” ” | (K 1261) |
| N. | ತಾಂಡ್ವಾವರದ ” ” ಗ್ನೇ ” ” | (K 25) |
| | ತಾಂಡಾವರದ ಕೋಪದಿಂದ ಮೂಡಿಗೆಯೊಳಾಗ್ನೇಯ ಮಾರ್ಗಣವನುಗಿದು | (ತೀನಂ) |
| | ತಾಂಡವರದ ” ” ” ” ” | (K 1304) |
| N. | ತಾಂಡವರ್ವ+ದ ” ” ” ” ” | (K 224) |
| | ತಾಂಡವರ್ವ+ದ ” ” ” ” ” | (K 344) |
| | ತಾಂಡವರಿದಾ ” ” ” ” ” | (ದೇವನಾಗರಿ) |
| N. | ಕಾಂಡಾವರದ ” ” ” ” ” | (K 293) |
| N. | ಕಾಂಡವದಹನ ಲಬ್ಧವಾಗಿ ಮೂಡಿಗೆಯೊಳಿದ್ದಾಜ್ಞೇಯ ಮಾರ್ಗಣವನು | (K 294) |
| N. | ಕಾಂಡವಂ_ _ಕೋಪದಿಂ ” ಗ್ನೇ ” | (K 264) |
| N. | ಕಾಂಡವದ ಕೋಪದಿಂ ” ” ” | (K 219) |
| N. | ಕಾಂಡವದ ” ” ” ” | (K84) |
| | ಕಾಂಡವದ ” ” ” ” | (K 225) |
| | ತಾಂಡವದ ಕೋಪದಿಂ ಮೂಡಿಗೆಯೊಳಾಗ್ನೇಯ ಮಾರ್ಗಣವನುಗಿದು | (K1036) |
| | ತಾಂಡವದ ” ” ” ” | (ಧಾ. ಕಲ್ಲಚ್ಚು) |
| | ತಾಂಡವನ ” ” ” ” | (ಟೀಕಾ) |
| N. | ತಾಂಡವ+ಮೃಡನ ” ” ” | (K 124) |

ಡಿ. ಎಲ್. ನರಸಿಂಹಾಚಾರ್ ಅವರು ತಮ್ಮ 'ಕನ್ನಡ ಗ್ರಂಥಸಂಪಾದನೆ' ಎಂಬ ಗ್ರಂಥದಲ್ಲಿ (ಪು. ೧೩೩-೧೩೪) ಹಸ್ತಪ್ರತಿಗಳಲ್ಲಿ ಸ್ಖಾಲಿತ್ಯಗಳು ಯಾವ ಪ್ರಕಾರ ಆಗುತ್ತವೆ ಎಂಬುದನ್ನು ತೋರಿಸುವುದಕ್ಕಾಗಿ ಈ ಪಂಕ್ತಿಯ ೯ ಪ್ರತಿಗಳ ಪಾಠಗಳನ್ನು ಕೊಟ್ಟಿದ್ದಾರೆ. ಅವರು ಕೊಟ್ಟ ಪಾಠಗಳನ್ನು N. ಸಂಕೇತದಿಂದ ಇಲ್ಲಿ ಗುರುತಿಸಿದೆ. ಆ ಪ್ರತಿಗಳ ಪಾಠಗಳೊಡನೆ ನಮ್ಮ ೧೧ ಪ್ರತಿಗಳ ಪಾಠಗಳನ್ನೂ ಒರೆ ಹಚ್ಚಿ ನೋಡುವುದಕ್ಕೆ ಕೊಟ್ಟಿದ್ದೇವೆ.

ಡಿ. ಎಲ್. ನರಸಿಂಹಾಚಾರ್ಯರು K 294 ಪ್ರತಿಯ 'ಕಾಂಡವ ದಹನ ಲಬ್ಧವಾಗಿ' ಎಂಬ ಪಾಠಕ್ಕೆ ಸ್ವಲ್ಪ ಮಹತ್ತ್ವಕೊಟ್ಟು, 'ಇಲ್ಲಿ ಏನೋ ಅಪೂರ್ವ ಶಬ್ದ ಹುದುಗಿಕೊಂಡಿರಬಹುದು' ಎನ್ನುತ್ತಾರೆ. ನಮ್ಮ ೧೧ ಹಸ್ತಪ್ರತಿಗಳಲ್ಲಿ

K 294 ರ ಈ ಪಾಠವು ಒಂದು ಪ್ರತಿಯಲ್ಲಿಯೂ ಇರುವುದಿಲ್ಲ. ಹಾಗೆ ನೋಡಿದರೆ K 294 ಹಳೆಯ ಪ್ರತಿಯೇನಲ್ಲ, ಇತ್ತೀಚಿನದು ಎಂದು ಬರೆವಣಿಗೆಯ ಲಕ್ಷಣಗಳಿಂದ ಕಂಡುಬರುವುದು. ಉದಾಹರಣೆಗಾಗಿ, ದೀರ್ಘಚಿಹ್ನ (ೀ) ಪ್ರಯೋಗ, ಅನುನಾಸಿಕ ದ್ವಿತ್ವಗಳಲ್ಲಿ ಬಿಂದುವಿನ ಪರಿತ್ಯಾಗ (ತನ್ನ, ನಿಮ್ಮ ಇ.) ಮೊದಲಾದವನ್ನು ಹೇಳಬಹುದು. ಹಳೆಯದಲ್ಲದ ತೀರ ಇತ್ತೀಚೆಯ ಈ ಪ್ರತಿಯ ಪಾಠವು ಅರ್ಥಸೌಗಮ್ಯಕ್ಕಾಗಿ ತಿದ್ದಿದ್ದಾಗಿರಲು ಸಾಕು ಎಂದೆನಿಸುತ್ತದೆ.

ಈ ಎಲ್ಲ ಪಾಠಗಳಲ್ಲಿ 'ತಾಂಡಾವರದ ಕೋಪದಿಂದ ಮೂಡಿಗೆ....'ಎಂಬುದಕ್ಕೆ ಹೆಚ್ಚಿನ ಪ್ರಾಶಸ್ತ್ಯ ಕೊಡಬೇಕೆಂದು ನಮಗೆ ತೋರುತ್ತದೆ. ಇದೇ ಮೂಲಮಾತೃಕೆಯ ಪಾಠವಿರಬೇಕು ಎಂಬುದಕ್ಕೆ 'ಡಾವರ' ಶಬ್ದಪ್ರಯೋಗವನ್ನು ಪ್ರಮಾಣವೆಂದು ಇಟ್ಟುಕೊಳ್ಳಬಹುದು. ಲಕ್ಷ್ಮೀಶನು ಈ ಶಬ್ದವನ್ನು ಈ ಕಾವ್ಯದಲ್ಲಿ ಹಲವಾರು ಕಡೆ ಬಳಸಿದ್ದಾನೆ. (ಉದಾ: ಸಂ. ೮.ಪ. ೩೯, ಸಂ. ೧೩.ಪ. ೧೧, ಸಂ. ೧೩. ಪ. ೫೯, ಸಂ ೨೪. ಪ. ೩೧ ಇ.) ಎಂದರೆ ಈ ಶಬ್ದವನ್ನು ಬಳಸುವತ್ತ ಕವಿ ತನ್ನ ಒಲವನ್ನು ತೋರಿದ್ದಾನೆ. ಕಿಟ್ಟೆಲ್ ಕೋಶದಲ್ಲಿ ಇದಕ್ಕೆ–Burning, thirst, desire, need, want ಎಂದೂ, ಡಾವರಿಸು ಎಂದರೆ to whirl or move about as sparks, to flicker as flames, to rave to talk irrationally ಮೊದಲಾದ ಅರ್ಥಗಳನ್ನು ಕೊಟ್ಟಿದೆ. ಈ ಅರ್ಥವಿವರಣೆಯಲ್ಲಿ ಡಾವರ ಎಂದರೆ ಅತಿಶಯ, ಹೆಚ್ಚಳ ಎಂಬ ಅರ್ಥ ಸೂಚಿತವಾಗಿದೆ. 'ಡಾವರದ ಕೋಪ' ಎಂದರೆ 'ಉರಿಯುರಿಯುವ ಕೋಪ' ಎಂದರ್ಥ ಮಾಡಬಹುದು. ಕೋಪಾತಿಶಯವನ್ನು ನಿರೂಪಿಸುವಲ್ಲಿ 'ಡಾವರ' ಶಬ್ದವು ಪ್ರಭಾವಶಾಲಿಯಾಗಿದೆ. ಆದುದರಿಂದ 'ತಾಂಡಾವರದ ಕೋಪದಿಂದ ಮೂಡಿಗೆಯೊಳಾಗ್ನೇಯ ಮಾರ್ಗಣವನುಗಿದು' ಎಂಬ ಪಾಠವನ್ನು ಗ್ರಾಹ್ಯವೆಂದಿಟ್ಟುಕೊಂಡರೆ ತಪ್ಪೇನು?

ಈ 'ತಾಂಡಾವರದ' ಎಂಬ ಪಾಠವು ಹಲವಾರು ರೂಪಗಳನ್ನು ತಳೆದ ಕಾರಣಗಳನ್ನು ಸಹಜವಾಗಿ ಕಂಡುಹಿಡಿಯಬಹುದು. ಈ ಊಹಾಪ್ರಪಂಚವು ಶಾಸ್ತ್ರೀಯವಾಗಿರುವಂತೆ ಮನೋರಂಜಕವೂ ಆಗಿದೆ. 'ತಾಂಡಾವರದ' ಎಂಬ ಪದವು ತದ್ರೂಪವಾಗಿ ಇಲ್ಲವೆ ಅರ್ಥಾಂತರ ಹೊಂದಿದ ತತ್ಸದೃಶರೂಪವಾಗಿ ಹೆಚ್ಚು (೨೦ರ ಪೈಕಿ ೧೪) ಪ್ರತಿಗಳಲ್ಲಿ ಕಂಡುಬರುತ್ತದೆ. ೧೪ರ ಪೈಕಿ ೬ ಪ್ರತಿಗಳಲ್ಲಿ 'ತಾಂಡಾವರದ' ತದ್ರೂಪವಾಗಿಯೇ ಇದೆ; ಉಳಿದ ೮ ಪ್ರತಿಗಳಲ್ಲಿ ಒಂದೇ ಅರ್ಥವನ್ನನುಸರಿಸಿ ವಿವಿಧ ರೂಪಗಳನ್ನು ತಳೆದುನಿಂತಿದೆ. 'ಡಾವರ' ಶಬ್ದವು ಕಾಲಾಂತರದಲ್ಲಿ ಪರಿಚಯ ಕಳೆದುಕೊಂಡಾಗ ಈ ಪಾಠದ ಉದಯವಾಗಿರಬೇಕು. ಡಾವರಕ್ಕಿಂತ 'ತಾಂಡವ' ಜನಕ್ಕೆ ಹೆಚ್ಚು ಪರಿಚಯಯುದ್ದು. ಆ ಅರ್ಥವನ್ನು ಸೂಚಿಸುವುದಕ್ಕೆ ತಾಂ (ತಾನು) ಎಂಬುದು ಡಾವರಕ್ಕೆ ಕೂಡಿಕೊಂಡಿತು. ಈ ಹೊಸ ಪಾಠಕ್ಕೆ ಮುಖ್ಯವಾಗಿ ಎರಡು ರೂಪಗಳು ಪ್ರಾಪ್ತವಾದವು. ೧. ತಾಂಡವರದ, ತಾಂಡವರಿದಾ, ತಾಂಡವರ್ಪ+ದ, ೨ ತಾಂಡವದ, ತಾಂಡವನ, ತಾಂಡವ ಮೃಡನ.

೧. ತಾಂಡವರದ ಅಥವಾ ತಾಂಡವರಿಪಾ ಎಂಬುವರು ತಾಂಡವ ನೃತ್ಯದಲ್ಲಿ ಯಂತೆ ಎಂದು ಅರ್ಥ ಇಟ್ಟುಕೊಂಡಿರಬೇಕು. ಈ ಸಮಸ್ತ ಪದ ಸರಿಯೆನಿಸದೆಯೋ ಏನೋ ಇನ್ನು ಕೆಲವರು, ತಾಂಡವರದ ಎಂಬಲ್ಲಿ 'ವ' ಅಕ್ಷರ ಬಿಟ್ಟು ಹೋಗಿರ ಬೇಕೆಂದು ಅದನ್ನು ಸೇರಿಸಿ 'ತಾಂಡವರವದ' ಎಂದು ಸರಿಪಡಿಸಿಕೊಂಡು ಬರೆದರು.

೨. ಇನ್ನು ಕೆಲವು ಪ್ರತಿಗಳಲ್ಲಿ ವಿಚಾರಪೂರ್ವಕವಾಗಿಯೋ ಅಸಾವಧಾನ ದಿಂದಲೋ 'ತಾಂಡವರದ' ಎಂಬುದಕ್ಕೆ 'ತಾಂಡವದ' ಎಂಬ ರೂಪಬಂದಿತು. ಅರ್ಥಕ್ಕೆ ಅಷ್ಟೇನೂ ಕುಂದುಬಾರದ್ದರಿಂದ, ತಾಂಡವದಂತೆ ರುದ್ರವಾದ ಕೋಪ ಎಂದಾದುದರಿಂದ ಈ ಪಾಠವನ್ನಿಟ್ಟುಕೊಳ್ಳುವಲ್ಲಿ ಅವರಿಗೆ ತೊಂದರೆ ಎನಿಸಿರಲಾರದು. ಬರೆಯುತ್ತ ಬರೆಯುತ್ತ 'ತಾಂಡವನ' ಆಗಿ ನೃತ್ಯವೂ ನರ್ತಕ(ಶಿವ)ನೂ ಅಭಿನ್ನರೇ ಆದರು: ಮತ್ತೊಬ್ಬರು ತಾಂಡವನ್ಮೃಡನ ಎಂದು ಸರಿಗೊಳಿಸಿ ಸ್ಪಷ್ಟೀಕರಿಸಿದರು!

ಈ ತಾಂಡವದ ಪಾಠಗಳೆಲ್ಲಾ ತಾಂಡಾವರದ ಪ್ರಯೋಗವನ್ನೇ ಪುಷ್ಟೀಕರಿಸುವ ವೆಂದು ನಮ್ಮ ಅಭಿಪ್ರಾಯ.

ಇನ್ನು ಮೇಲಣ ಪಟ್ಟಿಯಲ್ಲಿ ಕಂಡಂತೆ ೬ ಪ್ರತಿಗಳಲ್ಲಿ ಮಾತ್ರ i ಕಾಂಡಾವರದ ಕೋಪದಿಂದ, ii ಕಾಂಡವಂ ಕೋಪದಿಂದ, ಕಾಂಡವದ ಕೋಪದಿಂದ, iii ಕಾಂಡವ ದಹನ ಲಬ್ಧಮಾಗಿ ಎಂಬ ಪಾಠಗಳಿವೆ. ಇಲ್ಲಿಯ ಪಾಠಭೇದಗಳನ್ನು ಪರಿಶೀಲಿಸುವಲ್ಲಿ ಒಂದು ಕ್ರಮವು ಗೋಚರಿಸುತ್ತಿದೆ.

i ಲಿಪಿಸಾದೃಶ್ಯದ ಮೂಲಕ ಉಂಟಾದ ತ>ಕ ಅಕ್ಷರಭ್ರಾಂತಿ 'ತಾಂಡಾ ವರದ' ಎಂಬುದು 'ಕಾಂಡಾವರದ' ಎಂದಾಗುವುದಕ್ಕೆ ಕಾರಣವಾಯಿತು. ಆದರೆ ಇದು ಅರ್ಥಕ್ಕೆ ಹೊಂದದೆ ಹೋಗಿ, ಆಗ್ನೇಯಾಸ್ತ್ರಕ್ಕೆ ಸಂಬಂಧಪಡುವಂತೆ, ಭಾರತದಲ್ಲಿ ಸುಪರಿಚಿತವಾದ ಖಾಂಡವವನದಹನದ ಪ್ರಸಂಗಕ್ಕೆ ಹೊಂದುವಂತೆ ಅರ್ಥಯಿಸು ವಂತಹ ಪಾಠಕ್ಕೆ ಎಡೆಯಾಯಿತು. ಅದಕ್ಕನುಸಾರವಾಗಿ 'ಕಾಂಡವದ' ಎಂದರು.

ii ಇನ್ನೊಬ್ಬರಿಗೆ ಕಾಂಡವದ ಕೋಪ ಎಂಬುದು ಸಮಂಜಸವೆನಿಸಲಿಲ್ಲ. ಅವರು 'ಕಾಂಡವಂ ಕೋಪದಿಂ' ಎಂಬ ಇನ್ನೊಂದು ಅಸಮಂಜಸ ಪಾಠವನ್ನು ಉಂಟು ಮಾಡಿರಬೇಕೆಂದು ತೋರುತ್ತದೆ.

iii ಈ ಪಾಠವನ್ನು ಅನುಸರಿಸಿದ ಮತ್ತೊಬ್ಬರು ಈ ಅಸಮಂಜಸತೆಯನ್ನು ಹೋಗಲಾಡಿಸಲು 'ಕಾಂಡವದಹನ ಲಬ್ಧಮಾಗಿ ಮೂಡಿಗೆಯೊಳಿದ್ದ' ಎಂದು ತಿದ್ದಿರ ಬೇಕೆಂಬುದು ಸ್ಪಷ್ಟವಿದೆ. ಏಕೆಂದರೆ ಈ ಒಂದು ಪ್ರತಿಯ ಹೊರತು ಎಲ್ಲ ಪ್ರತಿ ಗಳಲ್ಲಿಯೂ 'ಕೋಪದಿಂದ' ಎಂಬ ಪದವು ಇದ್ದೇ ಇದೆ. ಈ ಪದವನ್ನು ಈ ಪ್ರತಿ ಕಾರನು ತೆಗೆದು ಹಾಕಿದ್ದಾನೆಯೇ ಹೊರತು ಉಳಿದೆಲ್ಲರು ಸೇರಿಸಲಿಲ್ಲ ಎಂದು ಬೇರೆ ಹೇಳಬೇಕಾಗಿಲ್ಲ.

## ೪. ಸಂಧಿ ೧೯, ಪದ್ಯ ೧, ಉತ್ತರಾರ್ಧ

ಪರಮ ದಾರುಣಮಾಯ್ತು ದೆಂದಯೋಧ್ಯಾಪುರದ
ನೆರವಿನೆರವಿಯ ಜನಂ ಗುಜುಗುಜಿಸಿ ಶೋಕದಿಂ
ಕರಗಿ ಕಾತರಿಸುತಿರೆ ಪರಿಸಿದಂ ಕಾಳ್ಬಟ್ಟೆಗೊಂಡನಿಲವೇಗದಿಂದಾ ||೧||

ಎಂಬ ಪಾಠವು ಕ, ಖ ಮೊದಲಾದ ಪ್ರತಿಗಳಲ್ಲಿದೆ. ಇನ್ನು ಕೆಲವು ಹಸ್ತಪ್ರತಿಗಳಲ್ಲಿಯೂ ಪ್ರಚಲಿತ ಪ್ರತಿಗಳಲ್ಲಿಯೂ ೫-೬ನೆಯ ಸಾಲುಗಳು ಬೇರೆ ಬೇರೆ ಇರುವುದನ್ನು ಕಾಣುತ್ತೇವೆ.

**ಸಾಲು ೫ :** ಖ ಪ್ರತಿಯಲ್ಲಿ 'ಗುಜುಗುಜಿಸಿ' ಎಂಬುದರ ಬದಲು 'ಗುಚಿಸೆ' ಎಂದು ಇರುವುದನ್ನು ಬಿಟ್ಟರೆ, ಉಳಿದೆಲ್ಲ ಪ್ರತಿಗಳಲ್ಲಿಯೂ ಒಂದೇ ತೆರನಾಗಿದೆ. ಈ ವ್ಯತ್ಯಾಸವಾದರೂ ಗುಜುಗುಜಿಸೆ ಎಂಬುದು ಧ್ವನ್ಯನುಕರಣವಾಚಿಯಾದುದರಿಂದ ಗುಚುಗುಚಿಸೆ ಎಂಬುದು ಸಹಜ ವ್ಯತ್ಯಾಸವಾಗಿದೆ; ಗುಚುಗುಚಿಸೆ ಎಂಬುದು ಗುಚಿಸೆ ಎಂದಾಗಿರುವುದು ಅಂಗುಲಿದೋಷವೆನಿಸುವುದು. ಖ ಪ್ರತಿಗೆ ಪಾಠಾಂತರದ ಮಹತ್ತ್ವ ಬರಲಾರದು.

ಪ್ರಚಲಿತ ಪ್ರತಿಗಳಲ್ಲಿ ಮಾತ್ರ 'ನೆರವಿಯ ಜನಂ ಗುಜುಗುಜಿಸಿ ಮನದಿ ಕರಗಿ ಕಾ' ಎಂದಿದೆ. ಈ ಪಾಠವು ಹಸ್ತಪ್ರತಿಗಳಲ್ಲಿ ಇಲ್ಲ. 'ನೆರವಿನೆರವಿಯ ಜನಂ' ಎಂಬಲ್ಲಿ ಪುನರುಕ್ತಿಯಿಂದ ನಗರದಲ್ಲಿ ಅಲ್ಲಲ್ಲಿ ಜನಗಳು ಗುಂಪುಗುಂಪಾಗಿ ಆಡಿಕೊಳ್ಳುತ್ತಿದ್ದರು, ಅನೇಕ ಗುಂಪುಗಳಿದ್ದವು ಎಂದು ಅರ್ಥಪ್ರತೀತಿಯಾಗುವುದರಿಂದ ಈ ಪಾಠವೇ ಹೆಚ್ಚು ಸಾಧುವಾದುದೆಂದು ತೋರುತ್ತದೆ.

**ಸಾಲು ೬ :** ಪ್ರಚಲಿತ ಪ್ರತಿಗಳಲ್ಲಿಯೂ ಝ, ತ ಹಸ್ತಪ್ರತಿಗಳಲ್ಲಿಯೂ 'ತರಿಸುತಿರೆ ಪರಿಸಿದಂ ಕಲ್ಬಟ್ಟೆಗೊಂಡನಿಲವೇಗದಿಂದಾರಥವನು' ಎಂದಿದೆ. ಮಿಕ್ಕೆಲ್ಲ ಹಸ್ತಪ್ರತಿಗಳಲ್ಲಿ ಮೇಲಣ ಉದ್ಧೃತ ಪದ್ಯಾರ್ಧದಲ್ಲಿಯಂತೆ ಇದೆ. ಝ, ತ, ಪ್ರ, ರ (ಪ್ರಚಲಿತ) ಪ್ರತಿಗಳಲ್ಲಿಯ ವ್ಯತ್ಯಾಸವೆಂದರೆ, 'ರಥವನು' ಎಂಬ ಕರ್ಮಪದವನ್ನು ಇಲ್ಲಿ ಸೇರಿಸಿದೆ. ಆದರೆ ಪದ್ಯಾರಂಭದಲ್ಲಿ ಸೌಮಿತ್ರಿ ವೈದೇಹಿಯನ್ನು ರಥದಲ್ಲಿ ಕರೆದುಕೊಂಡು ಹೊರಟ ಉಲ್ಲೇಖವಿರುವುದರಿಂದ ಇಲ್ಲಿ ಕರ್ಮಪದ ಬೇಕೇಬೇಕು ಎಂದಿಲ್ಲ. ಆದುದರಿಂದ ಕ, ಖ ಆದಿ ಪ್ರತಿಗಳ ಪಾಠದ ಸಾಧುತ್ವಕ್ಕೆ ಚ್ಯುತಿಯಿಲ್ಲ. ಅದನ್ನು ನಾವು ಸ್ವೀಕರಿಸಬಹುದು. ಒಟ್ಟಿನಲ್ಲಿ ಈ ಪದ್ಯಾರ್ಧವು ಮೇಲೆ ಉದ್ಧೃತವಾಗಿರುವ ರೂಪದಲ್ಲಿ ಸ್ವೀಕಾರ್ಯವಾಗಿದೆ.[1]

---

1 ಈ ಪದ್ಯವನ್ನು ಕುರಿತು ೧೮–೧೧–೬೫ ರಂದು ತೀ. ನಂ. ಶ್ರೀಯವರನ್ನು ಕಂಡು ಚರ್ಚಿಸಲಾಗಿತ್ತು.

## ೫. ಸಂಧಿ ೧೯, ಪದ್ಯ ೬, ಉತ್ತರಾರ್ಧ

ತೊಂಗುವ ಫಲಾವಳಿಯ ಭಾರಂಗಳಾವಗಂ
ಪಿಂಗದಿದನಿಳೆಗಿಳುಹಬೇಕೆಂದು ಬಾಗಿ ಬಂ
ದಂಗಮೆನೆ ಕಣ್ಗೆಸದವಿಕ್ಕೆಲದೊಳಾಜಾಹ್ನವಿಯ ತಡಿಯಬನಬನದೊಳು ||

ಎಂಬ ಪಾಠವು ಅನೇಕ ಹಸ್ತಪ್ರತಿಗಳಲ್ಲಿದೆ. ಆದರೆ ಹಲಕೆಲವಲ್ಲಿ ೫-೬ನೆಯ ಸಾಲುಗಳಲ್ಲಿ ಸ್ವಲ್ಪ ಆದರೆ ವಿಚಾರಾರ್ಹವಾದ ಬದಲಾವಣೆಗಳನ್ನು ಕಾಣುತ್ತೇವೆ. ಪ್ರಚಲಿತ ಪ್ರತಿಗಳಲ್ಲಿ,

ಪಿಂಗವಿವನಿಳೆಗಿಳಿಪ ಬೇಕೆಂದು ಬಾಗಿದೊಂ
ದಂಗಮೆನೆ ಕಣ್ಗೆಸೆದುವಿಕ್ಕೆಲದೊಳಾ ಜಾಹ್ನವಿಯ ತಡಿಯ ಬನದೆಡೆಯೊಳು||

ಸಾಲು ೫ ಕ ಪ್ರತಿಯಲ್ಲಿ,

‘ ಪಿಂಗದಿರೆ ಭೂಜಾತೆ ಬರೆ ಕಂಡು ಬಾಗಿನಿಂ,’

ಸಾಲು ೬ ಝ, ತ ಪ್ರತಿಗಳಲ್ಲಿ,

‘ ದಂಗನೆಯಕಣ್ಗೆಸದವಿಕ್ಕೆಲದೊಳಾಜಾಹ್ನವಿಯ ತಡಿಯ ಬನಬನದೊಳು||

ಹಿಂದಣ (೫ನೆಯ) ಪದ್ಯದಲ್ಲಿ ‘ಗಂಗೆಗವನಿಜೆ ಬಂದಳು’ ಎಂಬ ಮಾತಿದೆ. ಎಂದ ಮೇಲೆ ೬ನೆಯ ಪದ್ಯದಲ್ಲಿ ಅಲ್ಲಿಯ ಮರಗಳು ಅವನಿಜೆಯನ್ನು ಸ್ವಾಗತಿಸಿದವೆನ್ನುವುದು ಒಪ್ಪತಕ್ಕ ಮಾತು. ಆದುದರಿಂದ ನಾವು,

ತೊಂಗುವ ಫಲಾವಳಿಯ ಭಾರಂಗಳಾವಗಂ
ಪಿಂಗದಿರೆ ಭೂಜಾತೆ ಬರೆ ಕಂಡು ಬಾಗಿ ನಿಂ
ದಂಗಮೆನೆ ಕಣ್ಗೆಸೆದುವಿಕ್ಕೆಲದೊಳಾಜಾಹ್ನವಿಯ ತಡಿಯ ಬನಬನದೊಳು||

ಎಂಬ ಪಾಠವನ್ನು ಇಟ್ಟುಕೊಳ್ಳುವುದು ಯುಕ್ತವೆಂದು ತೋರುತ್ತದೆ. ಕೊನೆಯ ಸಾಲಿನಲ್ಲಿ ‘ಅಂಗಮೆನೆ’ ಎಂಬುದು ಅಂಗ ಎನೆ >ಅಗಯೆನೆ ಆಗಿ, ಬಳಿಕ ಅಕ್ಷರ ಸ್ಥಾನ ಪಲ್ಲಟ ದೋಷದಿಂದ ‘ಅಂಗನೆಯ’ ಎಂಬ ಪಾಠವು ಝ, ತ, ಪ್ರತಿಗಳಲ್ಲಿ ಸೇರಿಕೊಂಡಿದೆ.

## ೬. ಸಂಧಿ ೧೯, ಪದ್ಯ ೧೭, ಪಂಙ್ತಿ ೬

ನಯ್ಯಯ್ಯೊರಾಘವಂ ಕಾರುಣ್ಯನಿಧಿಯೆಂದೊರಲ್ದಂಬುಜಾಕ್ಷಿ ಮರುಗಿ—ಕ
” ” ” ಯೆಂದಳಲ್ದಳಂದಾ ಮೃಗಾಕ್ಷಿ—ಖ
” ” ” ಯೆಂದಳಲ್ದಳಂಬುಜಾಕ್ಷಿ—ಜ,ಝ,ದ
” ” ” ಯೆಂದಳಲ್ದಳಬುಜದಳಾಕ್ಷಿ—ಛ
” ” ” ಯೆಂದಳಲ್ದಳಂಬುಜದಳಾಕ್ಷಿ—ಚ,ತ,ಘ
” ” ” ಯೆಂದಳಲ್ದಳಂಭೋಜನೇತ್ರೆ—ತ,ಪ್ರ,ರ.

ಹೀಗೆ ಅನೇಕ ಪಾಠಭೇದಗಳಿವೆ. ಇವುಗಳಲ್ಲಿ, ‘ಕ’ದಲ್ಲಿ ವಾಕ್ಯಪೂರ್ತಿಯಾಗಿಲ್ಲ.

(ತ್ಯಾಜ್ಯ); 'ಖ'ದಲ್ಲಿ 'ಅಂದು+ಆ' ಎಂಬುದು ಚರಣಪೂರಣಕ್ಕಾಗಿ ಸೇರಿದಂತಿದೆ. (ತ್ಯಾಜ್ಯ); ಜ,ಝ,ದ ಗಳಲ್ಲಿ ಎರಡು ಮಾತ್ರೆಗಳ ಕೊರತೆಯಿದೆ (ತ್ಯಾಜ್ಯ); ಛ ದಲ್ಲಿ ಒಂದು ಮಾತ್ರೆಯ ಕೊರತೆ; ಳಂಬುಜ ಎಂಬುದು ಕೈತಪ್ಪಿನಿಂದ ಶೂನ್ಯಲೋಪವಾಗಿ ಹೀಗಾಗಿರಬೇಕೆಂದು ತೋರುವುದು; ಆದುದರಿಂದ ಇದನ್ನು ಚ, ಥ, ಫ ಗಳೊಡನೆ ಸೇರಿಸಬಹುದು. ಇನ್ನುಳಿದ ಎರಡು ಪಾಠಗಳೆಂದರೆ 'ಳಂಬುಜದಳಾಕ್ಷಿ' (ಚ,ಥ,ಫ), 'ಳಂಭೋಜನೇತ್ರೆ' (ಪ್ರ,ರ). ಇವೆರಡನ್ನು ಕುರಿತು ವಿಚಾರಿಸಿದಾಗ, 'ಅಂಭೋಜನೇತ್ರೆ' ಎಂಬುದು ಗಮಕ ದೃಷ್ಟಿಯಿಂದ ಚೆನ್ನಾಗಿದೆಯಾದರೂ, ಕಾವ್ಯದೃಷ್ಟಿಯಿಂದ 'ಅಂಬುಜ ದಳಾಕ್ಷಿ' ಎಂಬಲ್ಲಿಯ ಸೌಂದರ್ಯ ಇದಕ್ಕೆ ಬರಲಾರದು. (ದಳ: an imitative sound, ದಳದಳಿಸು: to fall in large drops—ಕಿಟ್ಟೆಲ್). ಸೀತೆ ದುಃಖಪಟ್ಟ ರೀತಿಯನ್ನು, ದಳದಳ ಕಣ್ಣೀರಿಳಿಯುತ್ತಿದ್ದ ಅವಳ ಸ್ಥಿತಿಯನ್ನು ವರ್ಣಿಸುವಲ್ಲಿ ನಾದ ಲೋಲನಾದ ಲಕ್ಷ್ಮೀಶನು ದಳಾಕ್ಷಿ ಎಂಬುದನ್ನೇ ಬಳಸಿರಬೇಕು. '**ದಳಲ್ದಳಂ** (ಬುಜ) **ದಳಾಕ್ಷಿ**' ಎಂಬ ದಳತ್ರಯ ಯೋಜನೆಯಲ್ಲಿ ಕಣ್ಣೀರು ದಳ ದಳ ದಳ ಇಳಿಯುತ್ತಿದ್ದ ಚಿತ್ರವನ್ನು ಕವಿ ಕಣ್ಣೆದುರಿಗೆ ತರುತ್ತಾನೆ. ಆದುದರಿಂದ ಚ, ಛ, ಥ, ಫ ಪ್ರತಿಗಳ ಪಾಠವನ್ನು ಅಂಗೀಕರಿಸುವುದು ಯುಕ್ತ.

## ೭. ಸಂಧಿ ೨೮, ಪದ್ಯ ೫೧, ಉತ್ತರಾರ್ಧ

ಕೊಲುತ ಬಹ ಬೇಡರ್ಗೆ ಸಿಕ್ಕದೋಡಿದುದೊಂದೆ
ರಳೆಕುಳಿಂದಕನೆಂಬ ದೊರೆಕಂಡು ತನ್ನ ಚಾ
ಪಳೆಹಯದೊಳದರ ಬಳಿ ಸಂದನತಿ ವೇಗದಿಂ ಬಿಲ್ವಿಡಿದು ಕೊಲ್ವೆನೆಂದು ||

ಪ್ರ, ರ ಮತ್ತು ಖ ಹೊರತು ಎಲ್ಲ ಹಸ್ತಪ್ರತಿಗಳಲ್ಲಿ ಈ ಪಾಠವಿದೆ. ಖ ಒಂದು ಪ್ರತಿಯಲ್ಲಿ ಮಾತ್ರವೇ ಈ ಕೆಳಗಿನಂತೆ ಇರುವುದಾದರೂ ವಿಚಾರಾರ್ಹವಾದ ಪಾಠ ವಾಗಿದೆ. ಅಲ್ಲಿ ಹೀಗಿದೆ:

ಕೊಲುವ ಬಲು ಬೇಡರ್ಗೆ ಸಿಕ್ಕಿದೋಡಿದುದೆರಳೆ
ಬಳಿಕಾಗಳಾ ಕುಳಿಂದಕನೆಂಬ ದೊರೆ ಕಂಡು
ಛಲದಿಂದ ತನ್ನ ಚಾಪಳೆಹಯವನುರುಬಿದಂ ಬಿಲ್ವಿಡಿದು ಕೊಲ್ವೆನೆಂದು ||

ಖ ಪ್ರತಿಯ ಈ ಪಾಠದಲ್ಲಿ ಬಿಲ್ವಿಡಿದು ಕೊಲ್ವೆನೆಂದು ಹೊರಟ ಬೇಡನ ವರ್ತನೆ ಯನ್ನು, ಆ ಭರವನ್ನು ತಿಳಿಸುವುದಕ್ಕೆ **ಛಲದಿಂದ ಉರುಬಿದಂ** ಎಂಬ ಎರಡು ಶಕ್ತಿಯುತವಾದ ಪದಗಳನ್ನು ಪ್ರಯೋಗಿಸಲಾಗಿದೆ. ಉಳಿದ ಎಲ್ಲಾ ಪ್ರತಿಗಳು ಈ ಎರಡು ಶಬ್ದಗಳ ಅಭಾವದಿಂದ ಊನಸತ್ತ್ವವಾಗಿವೆ. ಈ ಶಬ್ದಗಳ ಸ್ಥಾನವನ್ನು ತುಂಬಿರುವ 'ಬಳಿಸಂದನತಿ ವೇಗದಿಂ' ಎಂಬ ಪದಗಳಲ್ಲಿ ಕುಳಿಂದನ ದೃಢ ಸಂಕಲ್ಪ ವಾಗಲಿ ರಭಸವಾಗಲಿ ವ್ಯಕ್ತವಾಗುವುದಿಲ್ಲ. ಆದುದರಿಂದ, ಉಱುಂಬು, ಉಱುಬು ಎಂದರೆ ಮೇಲೆ ಏರಿಹೋಗು ಎಂಬರ್ಥವನ್ನನುಸರಿಸಿ, ಕುದುರೆಯನ್ನು ಮೇಲ್ವಾಯಿ ಸಿದನು ಎಂದಿರುವ ಹಯವನುರು(ಱು)ಬಿದಂ ಎಂಬ ಪಾಠವು ಅತ್ಯುತ್ತಮ ಎಂಬು

ದರಲ್ಲಿ ಸಂದೇಹವಿಲ್ಲ. ಇಲ್ಲಿಯ 'ಉರುಬು' ಎಂಬುದು ಮೂಲತಃ 'ಉಱುಬೇ.' ಱ, ರ ಗಳ ಭಿನ್ನತ್ವದ ಶಬ್ದಜ್ಞಾನ ಮಸುಳಿಸಿದ ಕಾಲಾಂತರದಲ್ಲಿ ಬರೆಹದಲ್ಲಿ ಉರುಬಾಗಿದೆ. ಛಲದಿಂದ ಉಱುಬಿದಂ ಎಂಬುದರಿಂದ ಅರ್ಥಕ್ಕೆ ಇನ್ನಷ್ಟು ಬಲ ಬಂದಿದೆ. ಆದರೆ ಈ ಒಳ್ಳೆಯದಾದ ಪಾಠವನ್ನು ಅನುಮೋದಿಸುವ ಒಂದು ಪ್ರತಿಯೂ ಸಿಕ್ಕದಿರು ವುದೊಂದು ಆಶ್ಚರ್ಯ. ಈ ಪಾಠಕ್ಕೆ 'ಖ' ಪ್ರತಿ ಏಕೈಕವಾಗಿರುವುದೆಂಬ ಕಾರಣ ವೊಂದರಿಂದಲೇ, ಇದನ್ನು ಸ್ವೀಕರಿಸುವುದಕ್ಕೆ ಕವಿ ಲಕ್ಷ್ಮೀಶನ ಅನುಪಮ ಪ್ರತಿಭಾ ವಂತಿಕೆಯ ಬಗೆಗೆ ಸಂಪಾದಕನಿಗೆ ವ್ಯಾಮೋಹವಿದೆಯೆಂದಾದೀತಲ್ಲ ಎಂಬ ಭಯವಿದೆ. ಇನ್ನೂ ಒಂದೆರಡು ಪ್ರತಿಗಳಾದರೂ 'ಖ' ಪ್ರತಿಯನ್ನು ಅನುಮೋದಿಸುವಂತಹವು ಲಭ್ಯವಾದರೆ, ಸಂಪಾದಕನು ಭಯಮುಕ್ತನಾದಾನು; ಈ ಪದ್ಯದ ಮಟ್ಟಿಗೆ ಲಕ್ಷ್ಮೀಶನ ಪ್ರತಿಭೆ ಇನ್ನಷ್ಟು ಪ್ರಕಾಶಮಾನವಾದೀತು.

೮. ಸಂಧಿ ೩೪, ಪದ್ಯ ೧೨, ಪಙ್ತಿ ೩

'ಪೋಗಿ ಹಯಮಂ ತರಿಸಲುಜ್ವಲಿಸುವಗ್ನಿ ಪಶುವಾದುದೆಂದಭಿನಂದಿಸೆ' (ಖ)
' " " ತರಿಸಲುಚ್ಚರಿಸಿ ಯಜ್ಞಪಶುವಾದುದೆಂದಭಿವರ್ಣಿಸೆ' (ರ)
' " " ತರಿಸಲುಜ್ವಲಿಸುವಗ್ನಿ ಪಶುವಾದುದೆಂದಭಿವರ್ಧಿಸಿ'
(ಕ, ದ, ಝ, ತ, ಫ, ಥ)
'ಪೋಗಿ ಹಯಮಂ ತರಿಸಲುಜ್ವಲಿಸುವಗ್ನಿ ಪಶುವಾದುದೆಂದಭಿವಂದಿಸಿ' (ಛ)
' " " ತರಿಸಿಯಗ್ನಿಃ ಪಶುರಭೂದೆನುತಿರ್ಪುದಾದಿಯಾಗಿ' (ಪ್ರ)

ಈ ಸಂದರ್ಭದಲ್ಲಿ ಮೂಲ ಸಂಸ್ಕೃತ ಕಾವ್ಯದಲ್ಲಿ ಹೀಗಿದೆ :

ಪ್ರೋವಾಚಾಗ್ನೇ ಪಶುರಶ್ವೋಽಚ್ಯುತಿಮೇ ತಾಂ ಪಠನ್ನೃಚಃ |'

—ಅ. ೬೪, ಶ್ಲೋ. ೧೦

ಕನ್ನಡ ಕಾವ್ಯದ ಎಲ್ಲ ಪ್ರತಿಗಳ ಪಾಠಗಳಲ್ಲಿ ಈ ಮೂಲ ಸಂಸ್ಕೃತ ವಾಕ್ಯದ ಅರ್ಥವನ್ನು ಅಳವಡಿಸಲು ಪ್ರಯತ್ನಿಸಲಾಗಿದೆ. ಪ್ರ ಎಂದರೆ ಕರಿಬಸವಶಾಸ್ತ್ರಿಗಳ ಪ್ರತಿಯೊಂದರಲ್ಲಿ ಮಾತ್ರ, ಸಂಸ್ಕೃತವಾಕ್ಯವನ್ನೇ ('ಅಗ್ನಿಃ ಪಶುರಭೂತ್') ಎತ್ತಿಕೊಡಲಾಗಿದೆ. ಆದರೆ ಲೌಕಿಕ ಪ್ರಾಕೃತ ಗ್ರಂಥಗಳಲ್ಲಿ ಶ್ರುತಿವಾಕ್ಯಗಳನ್ನು ಅನುವಾದಿಸಬಹುದೇ ಹೊರತು ಆ ವಾಕ್ಯಗಳನ್ನು ಉಪಯೋಗಿಸಬಾರದು ಎಂಬುದು ವೈದಿಕ ಸಂಪ್ರದಾಯ. ಉದಾಹರಣೆ ಗಾಗಿ,'ಸೌಂದರ್ಯಲಹರಿ'ಗೆ ಕನ್ನಡ ಟೀಕೆಯನ್ನು ಬರೆದ ಟೀಕಾಕಾರನು ಮೂಲದಲ್ಲಿಯ ಶ್ರುತಿವಾಕ್ಯಗಳನ್ನು ಇಳಿಸಿಕೊಳ್ಳುವುದಿಲ್ಲ ; ಈ ಶ್ರುತಿವಾಕ್ಯಗಳಿಗಾಗಿ ಮೂಲಗ್ರಂಥವನ್ನು ನೋಡಿರಿ ಎಂದು ಸೂಚಿಸುತ್ತಾನೆ. ಇದರಂತೆಯೇ ಇಲ್ಲಿ ಲಕ್ಷ್ಮೀಶನು ಸಂಪ್ರದಾಯ ವನ್ನು ಮೀರಿರಲಾರನು ಎಂದು ತೋರುತ್ತದೆ. ಕರಿಬಸವಶಾಸ್ತ್ರಿಗಳು ನೋಡಿದ ಹಸ್ತ ಪ್ರತಿಗಳ ಪೈಕಿ ಯಾವೊಂದು ಬರಹಗಾರನು 'ಅಗ್ನಿಃ ಪಶುರಭೂತ್' ಎಂಬುದನ್ನು ಸೇರಿಸಿದ್ದುಂಟೋ ಅಥವಾ ಕರಿಬಸವಶಾಸ್ತ್ರಿಗಳೇ ಸೇರಿಸಿರಬಹುದೋ ಹೇಳಲು ಬರು

ವಂತಿಲ್ಲ. ಶಾಸ್ತ್ರಿಗಳು ತಮ್ಮ ಜೈಮಿನಿ ಭಾರತದ ೧೯೧೨ರ ಮುದ್ರಣದ ಮುನ್ನುಡಿಯಲ್ಲಿ,

'ಕವಿಯ ಆಶಯವನ್ನನುಸರಿಸಬೇಕೆಂಬ ತಾತ್ಪರ್ಯದಿಂದ ಸಂಗತವಾದ ಪಾಠವು ಒಂದು ಮಾತೃಕೆಯಲ್ಲಿದ್ದರೂ ಅದನ್ನೇ ಸ್ವೀಕರಿಸಿದ್ದಲ್ಲದೆ **ಕೆಲವುಕಡೆ** ಸ್ವಂತವಾಗಿಯೇ ತಿದ್ದಬೇಕಾಯ್ತು'

ಎಂದು ಸ್ಪಷ್ಟವಾಗಿಯೇ ಹೇಳಿದ್ದಾರೆ. ಹಾಗೆ ಈ ಪದ್ಯವನ್ನೂ ಅವರು ಸ್ವಂತವಾಗಿ ತಿದ್ದಿದ್ದಾರೋ ಹೇಗೋ ತಿಳಿಯದು. ಅಲ್ಲದೆ ಇವರ ಅವತರಣಿಕೆ ಮೂಲಕ್ಕೆ ವಿಸಂಗತ ವಾದುದೂ ಆಗಿದೆ.

ಇನ್ನೊಂದು ಪ್ರಚಲಿತ ಪ್ರತಿಯಾದ 'ರ'ದ ಹೊರತು ಎಲ್ಲಾ ಪ್ರತಿಗಳಲ್ಲಿ ಸುಮಾರಾಗಿ ಒಂದೇ ತೆರನಾದ ಪಾಠವಿದೆ. ಭೇದವಿರುವುದು ಒಂದು ಶಬ್ದದಲ್ಲಿ ಮಾತ್ರ: ಅಭಿವಂದಿಸಿ (ಛ), ಅಭಿರ್ವಂದಿಸೆ (ಖ), ಅಭಿವರ್ಧಿಸಿ (ಕ, ದ, ಝ, ತ, ಫ, ಥ), ಇವುಗಳಲ್ಲೂ ಛ, ಖ ಗಳಲ್ಲಿ ಪಾಠಭೇದವಿಲ್ಲವೆಂದು ತೋರುತ್ತದೆ; ಕಾಣುವ ಭೇದ ಅಂಗುಲಿದೋಷದ್ದು. ಉಳಿದೆರಡು ಪಾಠಗಳಲ್ಲಿ 'ಅಭಿವರ್ಧಿಸಿ' ಎಂಬುದಕ್ಕಿಂತ 'ಅಭಿವರ್ಣಿಸಿ' ಎಂಬ ಪಾಠವು ಯೋಗ್ಯವಾಗಿದೆ. ಆದುದರಿಂದ ನಾವು 'ಖ' ಪ್ರತಿಯ ಅನುಮೋದನೆಯುಳ್ಳ ಛ ಪ್ರತಿಯ 'ಪೋಗಿ ಹಯಮಂ ತರಿಸಲುಜ್ವಲಿಸುವಗ್ನಿ ಪಶು ವಾದುದೆಂದಭಿವಂದಿಸಿ' ಎಂಬ ಪಾಠವನ್ನು ಸರಿಯೆಂದಿಟ್ಟುಕೊಳ್ಳಬಹುದು.

**೯. ಸಂಧಿ ೩೪, ಪದ್ಯ ೨೭, ಪಙ್ಕ್ತಿ ೬**

'ಭ್ರಮದಿಂದ ವೀಣಾದಿ ವಾದಿತ್ರ ಘೋಷಮಂ ಮಾಡೆ ನೃಪವರನೆಸೆದನು'
(ಛ, ಝ, ತ, ಪ್ರ, ರ)
'ಭ್ರಮದಿಂದ ವೀಣಾದಿ ವಾದ್ಯತ್ರ ,, ,, ,, '(ಥ)
'ಭ್ರಮದಿಂದ ವೀಣಾದಿ ತಾವಿಪ್ರ ,, ,, ,, '(ಕ,ಚ, ಫ)
'ಭ್ರಮದಿಂದ ವೀಣಾದಿ ಶ್ರುತಿ ,, ,, ,, '(ಖ)

ಪಾಠಾಂತರಗಳನ್ನು ಪರೀಕ್ಷಿಸುವಾಗ ಸಂಸ್ಕೃತ ಜೈಮಿನಿ ಭಾರತವನ್ನು ಬಾಹ್ಯ ಸಾಕ್ಷ್ಯವೆಂದು (external testimonia) ಇಟ್ಟುಕೊಳ್ಳಬೇಕಾಗುತ್ತದೆ. ಅಲ್ಲಿ ಈ ಮಾತಿದೆ :

'ವಾದಿತ್ರನಾದೇ ಮಹತಿ ಪ್ರವರ್ತಿತೇ' —ಅ. ೬೪, ಶ್ಲೋ. ೨೨.

ವಾದಿತ್ರ ಎಂದರೆ musical instrument (ವಾದ್ಯೋಪಕರಣ). ವಾದಿತ್ರ ಎಂಬುದು ಸುಲಭವಾಗಿ ಅರ್ಥಬೋಧೆಯಾಗುವಂತಹದಲ್ಲ. ಆದುದರಿಂದ ಅದರ ಗತಿ ಭಿನ್ನಾರ್ಥಕ ವಾದ, ಅದೂ ಸಂದರ್ಭಾರ್ಥಕ್ಕೆ ಹೊಂದದ 'ತಾವಿಪ್ರ' ಎಂಬುದಾಯಿತು. ಖ ಪ್ರತಿ ಯಲ್ಲಿ ಶ್ರುತಿ (ವಾದ್ಯಸ್ವರ) ಎಂಬುದಾಯಿತು. ವಾದ್ಯತ್ರ ಎಂಬ ಥ ಪ್ರತಿಯ ಪಾಠವು ವಾದಿತ್ರದ ವಿಕೃತರೂಪವಾಗಿದೆ. ವಾದಿತ್ರ ಎಂಬ ಸರಿಯಾದ ಪಾಠವು ಛ, ಝ, ತ,

ಥ ಹಸ್ತಪ್ರತಿಗಳಲ್ಲಿಯೂ ಪ್ರಚಲಿತ ಪ್ರತಿಗಳಲ್ಲಿಯೂ ಇದೆ. ಆದುದರಿಂದ ಈ ಪಾಠ ವನ್ನು ಒಪ್ಪಿಕೊಳ್ಳುವುದು ಉಚಿತವಾಗಿದೆ.

**೧೦. ಸಂಧಿ ೩೪, ಪದ್ಯ ೩೪, ಪಙ್ತಿ ೬**

'ನಾನಾತಿಶಯದಿಂದ ಸತ್ಕರಿಸಿ ದಣಿಸಿದಂ ಪ್ರತಿದಿನಂ ಪ್ರೀತಿಯಿಂದ'

(ಖ, ಜ, ತ, ಛ, ಫ, ತ, ಪ್ರ, ರ)

' " " " ಪ್ರೀತಿಯಿಂ ಪ್ರತಿದಿನದೊಳು'

('ಕ' ಮೊದಲಾದ ಉಳಿದೆಲ್ಲ ಪ್ರತಿಗಳು)

ಇವು ಸ್ಥಾನಪಲ್ಲಟದ (transposition) ಪಾಠಭೇದಗಳಾಗಿವೆ. ಸ್ಥಾನಪಲ್ಲಟದ ಸಂದರ್ಭಗಳಲ್ಲಿ ಯಾವುದು ಮೊದಲ ಪಾಠ, ಯಾವುದು ತರುವಾಯದ್ದು ಎಂದು ಕೇವಲ ಅರ್ಥಭಾವಗಳಿಂದ ನಿರ್ಣಯಿಸಲಿಕ್ಕಾಗುವುದಿಲ್ಲ. ಆ ಪದ್ಯದ ಪದಗುಂಫನದಲ್ಲಿ ಕವಿಯ ಉದ್ದೇಶವೇನಾದರೂ ಇದೆಯೇ? ಅವನ ದೃಷ್ಟಿಯಿಂದ ಯಾವ ಪ್ರಯೋಗದಲ್ಲಿ ವಿಶೇಷತೆ ಇದೆ? ಎಂಬುದನ್ನೂ ಗಮನಿಸಬೇಕಾಗುವುದು. ಹಾಗೆ ನೋಡಿದರೆ, ಈ ಸಾಲಿನಲ್ಲಿ ಕವಿ ಅನುಸ್ವಾರದ ನಾದಮಾಧುರ್ಯವನ್ನು ಹುಟ್ಟಿಸುವ ಉದ್ದೇಶವುಳ್ಳವನಾಗಿದ್ದಾನೆ ಎಂದು ತೋರುವುದು. ಆ ದೃಷ್ಟಿಯಿಂದ 'ಪ್ರೀತಿಯಿಂ ಪ್ರತಿದಿನದೊಳು' ಎಂಬ ಪಾಠ ಕ್ಕಿಂತ 'ಪ್ರತಿದಿನಂ ಪ್ರೀತಿಯಿಂದ' ಎಂಬುದು ಮಾಧುರ್ಯವನ್ನು ಹೆಚ್ಚಿಸುವಂತಹ ದಾಗಿದೆ. ಆದುದರಿಂದ ಖ ಮೊದಲಾದ ಪ್ರತಿಗಳ 'ಪ್ರತಿದಿನಂ ಪ್ರೀತಿಯಿಂದ' ಎಂಬ ಪಾಠವು ಸ್ವೀಕಾರ್ಯ.

**೧೧. ಸಂಧಿ ೩೪, ಪದ್ಯ ೩೬, ಪಂಙ್ತಿ ೩**

೧. 'ಮುಕುಂದನಧ್ವರ ಸಭಾಸ್ಥಾನದೊಳ್ . . . . . . .' (ಫ)

೨. 'ಮುಕುಟನಧ್ವರ ಸಭಾಸ್ಥಾನದೊಳ್ . . . . . . .' (ತ)

೩. 'ಮುಕುರನಧ್ವರ ಸಭಾಸ್ಥಾನದೊಳ್ . . .' (ಕ ಮತ್ತು ಇತರ ಹಸ್ತ ಪ್ರತಿಗಳು ಹಾಗೂ ಪ್ರ, ರ)

೧. ಮೊದಲನೆಯ ಪಾಠವು ರ>೦ (ಅನುಸ್ವಾರ) ಭ್ರಾಂತಿಯಿಂದ ಬಂದಿರ ಬೇಕು; ಅದಕ್ಕೆ ಬರೆದವರು 'ಮುಕುಂದನ ಅಧ್ವರ' (ಸರ್ವಕರ್ತೃ ಅವನೇ) ಎಂಬ ತಿಳಿವಳಿಕೆಯಿಂದ ಸಮಾಧಾನ ಹೇಳಿಕೊಂಡಿರಬೇಕು. ಆದರೆ ವ್ಯಾಕರಣ ದೃಷ್ಟಿಯಿಂದ ನ್ಯೂನತೆಯಿದೆ. ಈ ವಾಕ್ಯದಲ್ಲಿ ಕರ್ತೃವಾದ ಅವನೀಶನು(ಪ್ರಥಮೆ)ಪ್ರಕೃತಿರೂಪದಲ್ಲೇ ಉಳಿದುಬಿಡುತ್ತಾನೆ. ಇದು ಲಕ್ಷ್ಮೀಶನ ರೀತಿಯಲ್ಲ.

೨, ೩. ಇನ್ನು ವಿಚಾರಣೀಯ ಪಾಠಗಳು ಎರಡು—ಮುಕುಟ ಮತ್ತು ಮುಕುರ. ಯುಧಿಷ್ಠಿರನು ಅವನೀಶರಿಗೆ ಮುಕುಟಪ್ರಾಯನೋ ಮುಕುರಪ್ರಾಯನೋ ಎಂಬು ದನ್ನು ನೋಡಬೇಕು. ಬಹುಸಂಖ್ಯೆಯವರಂತೂ 'ಮುಕುರ' (ಪ್ರಾಯ) ಎನ್ನುತ್ತಾರೆ.

ಇದಂತೂ ಸರಿಯೆ. 'ಮುಕುಟ' (ಪ್ರಾಯ) ಎಂಬುವನು ತ ಪ್ರತಿಯುವನು ಒಬ್ಬನೇ. ಬಿಟ್ಟೂಬಿಡದೆ ವಿಚಾರ ಮಾಡಿದರೂ ಮುಕುಟಕ್ಕಿಂತ ಮುಕುರ ಯುಕ್ತ ಪಾಠವೆಂದು ಎನಿಸುತ್ತದೆ. ಮುಕುಟ ಶಿರಸ್ಸಿನ ಅಲಂಕಾರ, ಮುಕುರ ಆದರ್ಶ. ಅಲ್ಲದೆ 'ಮುಕುರ ದಧ್ವರ' ಎಂಬಲ್ಲಿ ಧ್ವನಿಸಾಮರ್ಥ್ಯವೂ ಉಂಟು. ಆದುದರಿಂದ ಇದು ಸ್ವೀಕಾರ ಯೋಗ್ಯ.

**೧೨. ಸಂಧಿ ೩೪, ಪದ್ಯ ೩೮, ಪಙ್ತಿ ೬**

೧. ಭೀಮ ಪಾರ್ಥರನೊಡನೊಡನೆ ಕಳುಹಿದಂ ನೃಪರನವರವರ ಪುರಕೆ (ಖ)

೨. ,, ,, ಕಳುಹಿದ ಯುಧಿಷ್ಠಿರಂ ದ್ವಾರಾವತಿಯ ನಗರಿಗೆ (ಕ,ಗ,ಚ)

೩. ,, ,, **ಕಳುಹಿ** ಕಳುಹಿದಂ ನೃಪನವರವರ ನಗರಿಗಳ್ಗೆ (ಝ, ತ)

೪. ,, ,, ಕಳುಹಿದಂ ಯುಧಿಷ್ಠಿರನವರವರನಗರಿಗೆ (ಪ್ರ, ರ)

ಈ ಪಾಠಭೇದಗಳಲ್ಲಿ ಒಟ್ಟಿಗೆ ಒಡನೊಡನೆ, ಕಳುಹಿ ಕಳುಹಿದಂ, ಅವರವರ ಎಂಬ ಶಬ್ದಾಲಂಕಾರಿಕ ದ್ವಿರುಕ್ತಿಗಳಿವೆ. ಮೂಲತಃ ಮೂರೂ ಇದ್ದುವೇ? ಎಷ್ಟಿದ್ದುವು? ಬಿಟ್ಟು ಹೋದುದಾವುದು ? ಸೇರಿದುದಾವುದು ? ಎಂದು ವಿಚಾರಿಸಿ ಒಪ್ಪವಾದುದನ್ನು ಕಂಡುಕೊಳ್ಳುವುದು ಗೊಂದಲದ ಕೆಲಸವಾಗಿದೆ. ಆದರೂ ಝ, ತ ಪ್ರತಿಗಳ ಪಾಠದಲ್ಲಿ ಛಂದೋದೋಷವಾಗಿದ್ದರೂ (೨ ಮಾತ್ರೆ ಹೆಚ್ಚಿವೆ) ಅದು ಸಾಮಾನ್ಯ ಬರೆವಣಿಗೆಯ ದೋಷವಾದುದರಿಂದ ತೀರ ಕೊಂಚ ತಿದ್ದುಪಡಿಯೊಡನೆ ಇಟ್ಟುಕೊಳ್ಳಲು ಬರುವಂತಿದೆ: ಇಲ್ಲಿ 'ನಗರಿಗಳ್ಗೆ' ಎಂದಿರುವುದನ್ನು 'ನಗರಿಗೆ' ಎಂದು ಮಾಡಬೇಕು. ಮಾಡಬೇಕು ಎನ್ನುವುದಕ್ಕಿಂತ ಕ, ಗ, ಚ, ಅಥವಾ ಪ್ರ, ರ, ಪ್ರತಿಗಳಲ್ಲಿಯ 'ನಗರಿಗೆ' ಎಂಬುದು ಇಲ್ಲಿರಬೇಕು; ಗಳ್ಗೆ ಎಂದು ತಪ್ಪಾಗಿ ಬರೆದಿದ್ದಾನೆ ಎಂದು ತಿಳಿಯಬೇಕು. ಈ ಪಾಠ ಹೀಗೆ:

'ಭೀಮ ಪಾರ್ಥರನೊಡನೆ ಕಳುಹಿ ಕಳುಹಿದಂ ನೃಪನವರವರ ನಗರಿಗೆ' ಇದರಿಂದ ಅರ್ಥದೃಷ್ಟಿಯಿಂದ ಯಾವ ನ್ಯೂನಾಧಿಕ್ಯ ಒದಗುವುದಿಲ್ಲ. ಇಷ್ಟೇ ಅಲ್ಲ, ಮಿಕ್ಕ ಪಾಠಗಳಲ್ಲಿಯೂ ಇರಬಹುದಾದ ಕುಂದುಕೊರತೆಗಳನ್ನು ಸರಿಪಡಿಸುವುದು. ಈ ಪಾಠವೇ ಮೂಲದಲ್ಲಿರಬಹುದೆಂದೂ ಶಬ್ದಗಳ ಮರಮರಳಿ ಬರುವ ಗೊಂದಲದಲ್ಲಿ ಒಂದೊಂದು, ಹಾಡಿಕೆಯಲ್ಲಿ ಅಥವಾ ಬರೆವಣಿಗೆಯಲ್ಲಿ ಉಳಿದುಕೊಂಡು ಹೋಗಿರಬೇಕು, ಆ ಕೊರತೆಯ ತುಂಬಿಕೆಗೆ 'ನೃಪಂ ಎಂಬುದಕ್ಕೆ ಸಮಾನಾರ್ಥಕ ಪ್ರತಿನಿಧಾನವಾಗಿ 'ಯುಧಿಷ್ಠಿರಂ' ಎಂಬುದು ಬಂದಿರಬೇಕೆಂದೂ ಎನಿಸುತ್ತದೆ.

ಈ ರೀತಿಯಾಗಿ ಯಾವುದೇ ಪಾಠವನ್ನು ನಿರ್ಧರಿಸುವಾಗ ಪ್ರತಿಗಳ ಹೇಳಿಕೆ

ಯನ್ನಲ್ಲದೆ ಛಂದಸ್ಸು, ಗಮಕದ ರೀತಿ, ಕವಿಯ ಆಶಯ, ಅವನ ಶೈಲಿಯ ವೈಶಿಷ್ಟ್ಯ, ಅಲಂಕಾರಿಕತೆಯ ಒಲವು, ಪದಮೈತ್ರಿಯ ಅಥವಾ ನಾದದ ಮಾಧುರ್ಯ ಮೊದಲಾದವುಗಳನ್ನು ಗಮನಿಸಬೇಕಾಗುತ್ತದೆ. ಅಲ್ಲದೆ ಮೂಲಗ್ರಂಥವಾದ ಸಂಸ್ಕೃತ ಜೈಮಿನಿ ಭಾರತದ ಬಾಹ್ಯಸಾಕ್ಷ್ಯವನ್ನೂ ಸಂಪಾದಕನು ಪಡೆಯಬೇಕಾಗುತ್ತದೆ.

## ಕನ್ನಡ ಜೈಮಿನಿ ಭಾರತ ಕಾವ್ಯದಲ್ಲಿಯ ಸಂಧಿಗಳೆಷ್ಟು? ಒಟ್ಟು ಪದ್ಯಗಳೆಷ್ಟು?

ಈ ಕಾವ್ಯದ ಹಸ್ತಪ್ರತಿಗಳಲ್ಲಿ ಸಂಧಿಸಂಖ್ಯೆಯ ದೃಷ್ಟಿಯಿಂದ ಮೂರು ಗುಂಪುಗಳನ್ನು ಕಾಣುತ್ತೇವೆ. ಕೆಲವು ೩೨, ಕೆಲವು ೩೩, ಕೆಲವು ೩೪ ಸಂಧಿಗಳೆಂದು ಉಲ್ಲೇಖಿಸುತ್ತವೆ. ಆರಂಭದ ಸಂಧಿಯನ್ನು ಕೆಲವರು ಒಂದನೆಯ ಸಂಧಿಯೆಂದು ಎಣಿಸಿದರೆ, ಇನ್ನು ಕೆಲವರು ಅದನ್ನು ನಾಂದಿ ಸಂಧಿಯೆಂದು ಹೇಳಿ ಕ್ರಮಸಂಖ್ಯೆಯಲ್ಲಿ ಗಣಿಸುವುದಿಲ್ಲ. ಹೀಗೆ ಎಣಿಸದೆ ಬಿಟ್ಟ ಪ್ರತಿಗಳಲ್ಲಿ ಕಾವ್ಯವು ೩೩ ಸಂಧಿಗಳಿಗೆ ಮುಗಿಯುತ್ತದೆ. ೮ನೆಯ ೯ನೆಯ ಸಂಧಿಗಳನ್ನು ಕೂಡಿಸಿ ಒಂದೇ ಸಂಧಿಯಾಗಿ ಮಾಡಿರುವ ಕೆಲವು (ಫ, ಛ, ಜ) ಪ್ರತಿಗಳಲ್ಲಿ ಇನ್ನೂ ಒಂದು ಸಂಧಿ ಕಡಿಮೆಯಾಗಿ ಈ ಸಂಖ್ಯೆ ೩೨ಕ್ಕೆ ಇಳಿಯುತ್ತದೆ. ಆದರೆ ಇದೆಲ್ಲ ಎಣಿಕೆಯಲ್ಲಿಯ ಮತಭೇದವೇ ಹೊರತು, ವಾಸ್ತವವಾಗಿ ನಾಂದಿಸಂಧಿಯೂ ಒಂದು ಸಂಧಿಯಾಗಿರುವುದರಿಂದ ಕಾವ್ಯದಲ್ಲಿ ೩೪ ಸಂಧಿಗಳು ಇದ್ದೇ ಇವೆ. ಆದುದರಿಂದ ಕನ್ನಡ ಜೈಮಿನಿ ಭಾರತವು ೩೪ ಸಂಧಿಗಳ ಕಾವ್ಯವೆಂದು ಅಭಿಪ್ರಾಯಪಡುತ್ತೇವೆ.

ಇದರಂತೆಯೇ ಈ ಕಾವ್ಯದ ಪ್ರತಿಸಂಧಿಯ ಪದ್ಯಸಂಖ್ಯೆಯಲ್ಲಿಯೂ ಎಲ್ಲ ಪ್ರತಿಗಳಲ್ಲಿ ಏಕಮತವಿಲ್ಲ. ಇದನ್ನು ಪ್ರತ್ಯೇಕವಾಗಿ ನಕ್ಷೆಯಲ್ಲಿ ತೋರಿಸಿದೆ. ಮತ್ತು ಹೊಂದಾಣಿಕೆಯ ನಕ್ಷೆಯಲ್ಲಿ ಯಾವ ಪದ್ಯಗಳನ್ನು ಇಟ್ಟುಕೊಳ್ಳುವುದು, ಯಾವ ಪದ್ಯಗಳನ್ನು ಬಿಟ್ಟುಕೊಡುವುದು ಯುಕ್ತ ಎಂಬುದನ್ನು ಸಕಾರಣವಾಗಿಯೂ ಸಾಧಾರವಾಗಿಯೂ ತಿಳಿಸಿದೆ. ಈ ಎಲ್ಲ ಅಭ್ಯಾಸದಿಂದ ಈ ಕಾವ್ಯದಲ್ಲಿ ಒಟ್ಟು ಪದ್ಯಗಳ ಸಂಖ್ಯೆ ೧೯೮೯ ಇರಬೇಕೆಂದೂ ಅವುಗಳ ಶಬ್ದಶಃ ವರ್ಗೀಕರಣ ಈ ಕೆಳಗಿನಂತಿರಬೇಕೆಂದೂ ಊಹಿಸುತ್ತೇವೆ :

| ಸಂಧಿ | ಪದ್ಯ | ಸಂಧಿ | ಪದ್ಯ | ಸಂಧಿ | ಪದ್ಯ | ಸಂಧಿ | ಪದ್ಯ |
|---|---|---|---|---|---|---|---|
| ೧ | ೧೨ | ೧೦ | ೫೪ | ೧೯ | ೫೫ | ೨೮ | ೬೩ |
| ೨ | ೬೭ | ೧೧ | ೪೧ | ೨೦ | ೬೨ | ೨೯ | ೪೯ |
| ೩ | ೪೨ | ೧೨ | ೫೧ | ೨೧ | ೬೭ | ೩೦ | ೫೪ |
| ೪ | ೭೨ | ೧೩ | ೬೩ | ೨೨ | ೪೭ | ೩೧ | ೭೯ |
| ೫ | ೭೩ | ೧೪ | ೩೩ | ೨೩ | ೬೪ | ೩೨ | ೫೭ |
| ೬ | ೫೫ | ೧೫ | ೫೦ | ೨೪ | ೮೨ | ೩೩ | ೫೩ |

| ಸಂಧಿ | ಪದ್ಯ | ಸಂಧಿ | ಪದ್ಯ | ಸಂಧಿ | ಪದ್ಯ | ಸಂಧಿ | ಪದ್ಯ |
|---|---|---|---|---|---|---|---|
| ೭ | ೬೭ | ೧೬ | ೪೬ | ೨೫ | ೬೨ | ೩೪ | ೪೬ |
| ೮ | ೪೯ | ೧೭ | ೬೦ | ೨೬ | ೭೭ | — | |
| ೯ | ೩೪ | ೧೮ | ೬೭ | ೨೭ | ೫೬ | ಅಂತೂ | ೧೯೦೯ |

ಕೆಲವು ಪ್ರತಿಗಳಲ್ಲಿ ಕಂಡುಬರುವ ಕೆಲಕೆಲವು ಹೊಸ ಪದ್ಯಗಳು ಕವಿ ಲಕ್ಷ್ಮೀಶನವೇ ಇರಬಹುದೇ ಎಂಬ ವಿಚಾರವನ್ನು ವಿಮರ್ಶಿಸುವಾಗ ಜೈಮಿನಿ ಭಾರತದಲ್ಲಿ ೧೯೧೯ ಪದ್ಯಗಳಿದ್ದಿರಬೇಕೆಂದು ಕಂಡುಬಂದಿತು. ಈ ಸಂಖ್ಯೆಯನ್ನು ನೋಡಿದಾಗ ಚಾಮರಸನ 'ಪ್ರಭುಲಿಂಗಲೀಲೆ' ಕಣ್ಣೆದುರಿಗೆ ಬಂದಿತು. ಅದರ ಒಟ್ಟು ಪದ್ಯ ಸಂಖ್ಯೆ ೧೧೧೧; ಅದನ್ನವನು ಪ್ರತಿದಿವಸ ೧೦೧ ಪದ್ಯಗಳಂತೆ ೧೧ ದಿನಗಳಲ್ಲಿ ಮುಗಿಸಿದನೆಂದು ಹೇಳಲಾಗುತ್ತದೆ. ಹಾಗೆಯೇ ಲಕ್ಷ್ಮೀಶನು ೧೯೧೯ ಪದ್ಯಗಳ ತನ್ನ ಈ ಕಾವ್ಯವನ್ನು ೧೯ ದಿನಗಳಲ್ಲಿ ಮುಗಿಸಿರಬಹುದೇ ಎಂಬ ಅನುಮಾನ ಮೂಡಿತು. ಆದರೆ ಈ ಮಾತು ಇನ್ನೂ ಅನುಮಾನವಾಗಿಯೇ ಉಳಿದಿದೆ. ಈ ಅನುಮಾನವನ್ನು ನಿಷ್ಕರ್ಷೆಗೆ ತರುವುದು ಒಬ್ಬನಿಂದ ನೀಗದ ಕೆಲಸ. ಅನೇಕ ಪಂಡಿತರ ವಿಮರ್ಶನದಿಂದ ಅದರ ನಿಷ್ಕರ್ಷೆಯಾಗಬೇಕು. ಈ ಅನುಮಾನವನ್ನು ಪಂಡಿತ ಮಂಡಲಿಯ ಅವಗಾಹನೆಗೆ ತರಬಯಸುತ್ತೇವೆ.

ಅ. ಪ್ರಚಲಿತ (ಪ್ರ, ರ) ಪ್ರತಿಗಳಲ್ಲಿ ಈ ಕಾವ್ಯದ ಪದ್ಯಗಳು ಒಟ್ಟು ೧೯೦೭ ಎಂದಿದೆ. ಆದರೆ, ೧೩ನೆಯ ಸಂಧಿಯ ೨೮ನೆಯ ಪದ್ಯ, 'ಜೀಯ ಜಗದಂತರಾತ್ಮಕ ಸರ್ವಚೈತನ್ಯ' ಎಂಬುದು ನಾವು ನೋಡಿದ ಯಾವ ಹಸ್ತಪ್ರತಿಯಲ್ಲಿಯೂ, ದೇವನೂರಿನ ಸ್ತೋತ್ರ ಪದ್ಯಗಳಲ್ಲಿಯೂ ಇಲ್ಲವೆಂಬುದನ್ನು ಆಗಲೇ ಹೇಳಿದೆ. ಆದುದರಿಂದ ಇದು ಯಾರೋ ಸೇರಿಸಿದ ಪದ್ಯವಾಗಿರಬೇಕು. ಎಂದರೆ ಈ ಕಾವ್ಯದಲ್ಲಿ ಪದ್ಯಗಳು ೧೯೦೬ ಇರತಕ್ಕುದು ಎಂದಾಯಿತು.

ಆ. ಇನ್ನು, ೩ ಪದ್ಯಗಳು ದ್ವಿರುಕ್ತಿಯಾಗಿ ಬಂದಿವೆ ಕೆಲವು ಪ್ರತಿಗಳಲ್ಲಿ. ೮ ನೆಯ ಸಂಧಿಯಲ್ಲಿ ೨, ೩, ೪ನೆಯ ಪದ್ಯಗಳಾಗಿದ್ದವು ಸಂಧಿ ೧೮ರಲ್ಲಿ ೨೩, ೨೪, ೨೫ ನೆಯ ಪದ್ಯಗಳಾಗಿ ಮತ್ತೆ ಬಂದಿವೆ. ಹಿಂದೆ ನಕ್ಷೆಯಲ್ಲಿ ಪ್ರತಿಪಾದಿಸಿದಂತೆ ಈ ದ್ವಿರುಕ್ತಿ ಕವಿಯದೇ ಆಗಿರುವುದರಿಂದ ಅವುಗಳನ್ನು ಎರಡು ಕಡೆಗಳಲ್ಲಿ ಇಟ್ಟುಕೊಂಡು ಎಣಿಸಬೇಕು. ಈ ಪದ್ಯಗಳೇ ಮುಖ್ಯ ಜೈಮಿನಿ ಭಾರತ ಮತ್ತು ರಾಮಾಯಣ ಉಪಕಥೆ ಎರಡೂ ಏಕಕರ್ತೃಕಗಳೆಂದು ಹೇಳಲು ಆಧಾರವಾಗಿವೆ. ಆದುದರಿಂದ ಈ ಕಾವ್ಯದ ಪದ್ಯ ಸಂಖ್ಯೆ ೩ ರಿಂದ ಬೆಳೆದು ೧೯೦೯ ಆಯಿತು.

ಇ. ಬೇರೆ ಬೇರೆ ಪ್ರತಿಗಳಲ್ಲಿಯ ಹೊಸತೆಂದು ತೋರುವ ಪದ್ಯಗಳನ್ನು ಚೆನ್ನಾಗಿ ಪರಿಶೋಧಿಸಿ ಅಂತ್ಯದಲ್ಲಿ ೧೦ ಪದ್ಯಗಳು ಹೆಚ್ಚಿನವೆಂದೇ ಕಂಡುಬಂದಿತು. ಅವನ್ನು ಅನುಬಂಧದಲ್ಲಿ ಕೊಟ್ಟಿದೆ. ಆ ಪದ್ಯಗಳು ಮೂಲತಃ ಲಕ್ಷ್ಮೀಶನ ಜೈಮಿನಿ ಭಾರತದಲ್ಲಿ ಇದ್ದುವೋ ಏನೋ ಎಂದು ಬಲವಾದ ಶಂಕೆ. ಅವುಗಳ ಬಗ್ಗೆ ಹೆಚ್ಚಿನ ಪರಾಮರ್ಶೆ

ಯಾಗುವುದಗತ್ಯ. ಈ ಹತ್ತು ಪದ್ಯಗಳು ಮೂಲಕ್ಕೆ ಸೇರಿದರೆ, ಜೈಮಿನಿ ಭಾರತದ ಪದ್ಯಸಂಖ್ಯೆ ೧೯೧೯ ಕ್ಕೆ ಏರುತ್ತದೆ.

ಈ. ಒಟ್ಟು ಪದ್ಯ ಸಂಖ್ಯೆ ೧೯೧೯ ಎಂದು ಯಾವ ಪ್ರತಿಯೂ ಸೂಚಿಸುವುದಿಲ್ಲ ಎಂಬುದೇನೋ ನಿಜ. ಆದರೆ ಎರಡು ಪ್ರತಿಗಳಲ್ಲಿ (K 272 O.R.I. Mys.) ಮತ್ತು (K 1261 K.R.I, DWR) ಈ ಸಂಖ್ಯೆ ೧೯೯೯ ಎಂದು ಸೂಚಿತವಾಗಿದೆ. ೧೯೧೯ ಎಂಬುದು ೧೯೯೯ ಎಂದು ತಪ್ಪಾಗುವುದು ಸಹಜಸಂಭಾವ್ಯ. ಪದ್ಯಗಳ ಕ್ರಮಾಂಕಗಳ ತಪ್ಪಿನಿಂದ, ಸಂಧಿಪದ್ಯಗಳ ಬೇರೀಜಿನ ತಪ್ಪಿನಿಂದ, ಪದ್ಯಗಳ ಲೋಪಾಗಮಾದೇಶಗಳಿಂದ ಒಟ್ಟು ಪದ್ಯ ಸಂಖ್ಯೆಯ ತಾಳಮೇಳ ತಪ್ಪಿರುವುದು ಸ್ವಾಭಾವಿಕವಾಗಿದ್ದರೂ ಆ ಒಟ್ಟು ಪದ್ಯಸಂಖ್ಯೆಯನ್ನು ಇನ್ನೊಂದು ದೃಷ್ಟಿಯಿಂದಲೂ ನೋಡಬೇಕೆನಿಸುತ್ತದೆ. ಅದೆಂದರೆ, ಜೈಮಿನಿ ಭಾರತ ಕಾವ್ಯವೆಂದರೆ ಇಷ್ಟು ಪದ್ಯಗಳದು ಎಂಬ ಒಂದು ಸಾಮಾನ್ಯ ತಿಳಿವಳಿಕೆ ಸುಶಿಕ್ಷಿತ ಜನರಲ್ಲಿ ಇತ್ತೋ ಏನೋ. ತಮ್ಮ ಪ್ರತಿಯಲ್ಲಿಯ ಲೆಕ್ಕ ಎಂತಿದ್ದರೂ ಆ ಕೊನೆಯ ಅಂಕಿಯನ್ನು ಅವರು ಹಾಗೆಯೇ ಬರೆಯುತ್ತ ಬಂದಿರಬೇಕು. ಈ ಸಂಖ್ಯೆಯ ತಿಳಿವಳಿಕೆ ಪ್ರಾದೇಶಿಕವಾಗಿ ಭಿನ್ನಭಿನ್ನವಾಗಿರಲೂಬಹುದು. ಆದುದರಿಂದ ೧೯೯೯ ಪದ್ಯಗಳೆಂದು ಹೇಳುವ ಪ್ರತಿಗಳನ್ನು ನಮ್ಮ ಊಹೆಗೆ (೧೯೧೯ ಎಂಬುದಕ್ಕೆ) ಅನುಮಾನ ಸಾಕ್ಷ್ಯಗಳೆಂದು ತೆಗೆದುಕೊಳ್ಳಬಹುದು.

ಕೊನೆಯದಾಗಿ—ಕುವಲಯಾನಂದದಲ್ಲಿ 'ಜೈಮಿನಿ ವಾರ್ಥಿಕ' ಎಂದು ಹೇಳಿ ಕೆಲವು ಲಕ್ಷ್ಯಪದ್ಯಗಳೆಂದು ಎತ್ತಿಕೊಡಲಾಗಿದೆ. ಅವುಗಳಲ್ಲಿ ೭ ಪದ್ಯಗಳು ಹೊಸವೆಂದು ಕಂಡುಬಂದಿವೆ. ಅವುಗಳನ್ನು ಅನುಬಂಧದಲ್ಲಿ ಕೊಡಲಾಗಿದೆ. ಈ ಪದ್ಯಗಳು ಪ್ರಚಲಿತ ಜೈಮಿನಿ ಭಾರತ ಪ್ರತಿಗಳಲ್ಲಾಗಲಿ, ಹಸ್ತಪ್ರತಿಗಳಲ್ಲಿ ದೊರೆತ ಹೆಚ್ಚಿನ ಪದ್ಯಗಳಲ್ಲಾಗಲಿ ಇಲ್ಲ. ಮೂಲದ ಯಾವ ಪ್ರತಿಯಲ್ಲಿಯೂ ಇಲ್ಲದವು ಅಲ್ಲಿ ಹೇಗೆ ಬಂದವೋ ತಿಳಿಯದು. ಈ ಕಾವ್ಯದ ಪ್ರಾಚುರ್ಯದ ಮೂಲಕ ವಾರ್ಥಕಪಟ್ಟಿದಿ ಎಂದರೆ ಜೈಮಿನಿ ಭಾರತದ್ದಿರಬೇಕೆಂಬ ಗ್ರಹಿಕೆಯಿಂದಲೋ ಆ ಕಾವ್ಯದಿಂದವತರಿಸಿಕೊಳ್ಳುವುದು ತನ್ನ ಕಾವ್ಯಕ್ಕೆ ಗೌರವವೆಂಬ ತಿಳಿವಳಿಕೆಯಿಂದಲೋ ಅದರ ಹೆಸರನ್ನು ಕೊಟ್ಟಿರುವ ಸಂಭವವಿದೆ. ಆ ಪದ್ಯಗಳ ಶೈಲಿ-ಬಂಧಗಳನ್ನು ಗಮನಿಸಿದರೆ ಅವುಗಳಿಗೆ ಲಕ್ಷ್ಮೀಶಕೃತ ಎಂದೆನಿಸಿಕೊಳ್ಳುವುದಕ್ಕೆ ಯೋಗ್ಯತೆ ಸಾಲದು ಎಂದೆನಿಸುವಂತಿದೆ. ಮೂಲಾಧಾರವಿಲ್ಲದ (ಕುವಲಯಾನಂದದ) ಈ ಪದ್ಯಗಳನ್ನು ಸದ್ಯ ಗಣನೆಗೆ ತೆಗೆದುಕೊಳ್ಳದಿರುವುದೇ ಮೇಲು.

ಕನ್ನಡ ಜೈಮಿನಿ ಭಾರತದ ೧೮ ಪ್ರತಿಗಳಲ್ಲಿ ಸಂಧಿಗಳು ಎಷ್ಟು ಮತ್ತು ಒಟ್ಟು ಪದ್ಯಗಳೆಷ್ಟು ಎಂಬುದನ್ನು ಸಂಧ್ಯನ್ವಯವಾಗಿ ವಿಭಜಿಸಿ, ಭೇದಗಳನ್ನು ನಮೂದಿಸಿರುವ ತಃಖ್ತೆಯನ್ನು ೫೩೮-೫೪೯ ಪುಟಗಳಲ್ಲಿ ನೋಡಿ.

ಕೆಲವು ಪ್ರತಿಗಳಲ್ಲಿ ಪ್ರತಿ ಸಂಧಿಯ ಉಕ್ತ ಪದ್ಯ ಸಂಖ್ಯೆಗೂ ನೈಜ ಪದ್ಯ ಸಂಖ್ಯೆಗೂ ವ್ಯತ್ಯಾಸವಿದೆ.

೧) ತೀ.ನಂ.ಶ್ರೀ ಪ್ರತಿ ೨) ಬಿಳಗಿನಾಯಕ ಪ್ರತಿ ೩) K 13`4 K.R.I. ಪ್ರತಿ ೪) K. 344 K.R.I. ಪ್ರತಿ, ಮತ್ತು ೫) ಧಾರವಾಡ ಕಲ್ಲಚ್ಚಿನ ಪ್ರತಿಗಳಲ್ಲಿ ಅನುಕ್ರಮವಾಗಿ ಕಂಡುಬರುವ ವ್ಯತ್ಯಾಸ ಇಂತಿವೆ:

೧. ತೀ.ನಂ.ಶ್ರೀ ಪ್ರತಿಯಲ್ಲಿ ಸಂಧಿ—೧೧, ೧೭, ೧೯, ೨೪, ೨೮, ಮತ್ತು ೩೩ರಲ್ಲಿ ಒಂದೊಂದು ಪದ್ಯ ಮತ್ತು ಸಂಧಿ ೨೭ರಲ್ಲಿ ೪ ಪದ್ಯ ಕಡಿಮೆ ಇದ್ದುದರಿಂದ ಒಟ್ಟು ಪದ್ಯ ಸಂಖ್ಯೆಯಲ್ಲಿ ೧೦ ಪದ್ಯಗಳು ಕಡಿಮೆಯಾಗಿವೆ.

೨. ಬಿಳಗಿ ನಾಯಕ ಪ್ರತಿ, K. 344–K R.I. ಪ್ರತಿ ಮತ್ತು ಧಾರವಾಡ ಕಲ್ಲಚ್ಚಿನ ಪ್ರತಿಗಳಲ್ಲಿ ಅನುಕ್ರಮವಾಗಿ—ಬಿಳಗಿನಾಯಕ ಪ್ರತಿ ಸಂಧಿ ೧೦ರಲ್ಲಿ ಒಂದು ಪದ್ಯ K. 344–K R.I. ಪ್ರತಿ—ಸಂಧಿ ೯ರಲ್ಲಿ ಒಂದು ಪದ್ಯ-ಧಾರವಾಡ ಕಲ್ಲಚ್ಚಿನ ಪ್ರತಿ-ಸಂಧಿ ೨೩ರಲ್ಲಿ ಒಂದು ಪದ್ಯ ಕಡಿಮೆಯಾಗಿದ್ದರಿಂದ ಆ ಆ ಪ್ರತಿಗಳ ಒಟ್ಟು ಪದ್ಯ ಸಂಖ್ಯೆಯಲ್ಲಿ ಒಂದು ಪದ್ಯ ಕಡಿಮೆ ಆಗಿದೆ.

೩. K. 1304—K.R.I. ಪ್ರತಿ-ಸಂಧಿ ೧೦, ೨೭, ಮತ್ತು ೨೯ರಲ್ಲಿ ಒಂದೊಂದು ಪದ್ಯ ಕಡಿಮೆಯಾಗಿದ್ದರಿಂದ ಈ ಪ್ರತಿಯ ಒಟ್ಟು ಪದ್ಯಸಂಖ್ಯೆಯಲ್ಲಿ ಮೂರು ಪದ್ಯ ಕಡಿಮೆ ಇವೆ.

## ಪ್ರಾರಂಭದ (೧ನೆಯ) ಸಂಧಿ

ಈ ಸಂಧಿಯ ಪ್ರಾರಂಭವು, ಎಂದರೆ ಕೃತಿಯ ಪ್ರಾರಂಭವು ಸಾಮಾನ್ಯವಾಗಿ ಹೆಚ್ಚು ಪ್ರತಿಗಳಲ್ಲಿ 'ಶ್ರೀವಧುವಿನಂಬಕ ಚಕೋರಕಂ' ಎಂಬ ಪದ್ಯದಿಂದಾಗಿದೆ. ಆದರೆ ಇನ್ನು ಕೆಲವು ಪ್ರತಿಗಳಲ್ಲಿ 'ಪ್ರಸ್ತುತದೊಳೊಗೆದ' ಎಂಬ ಪದ್ಯವು ಮೊದಲನೆಯದಾಗಿದೆ. ಇವೆರಡರಲ್ಲಿ ಲಕ್ಷ್ಮೀಶನ ಕ್ರಮವು ಯಾವುದು? ನಮ್ಮ ಹಿಂದಣ ಕವಿಗಳಲ್ಲಿ ಯಾವುದೇ ಕಾವ್ಯವನ್ನು ಶ್ರೀಕಾರದಿಂದ ಆರಂಭಿಸುವುದು ಸಂಪ್ರದಾಯ. ಇದನ್ನು ಎಲ್ಲ ಕವಿಗಳೂ ನಡೆಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಲಕ್ಷ್ಮೀಶನೂ ಇದನ್ನು ಬಿಟ್ಟುಹೋಗಿರಲಾರ. ಯಾವ ಕಾರ್ಯಕ್ಕೂ ಆರಂಭದಲ್ಲಿ ವಿಘ್ನೇಶ್ವರನನ್ನು ಪ್ರಾರ್ಥಿಸುವ ಇನ್ನೊಂದು ಸಂಪ್ರದಾಯವೂ ನಮ್ಮಲ್ಲಿದೆ. ಈ ಸಾಮಾನ್ಯ ಸಂಪ್ರದಾಯದಂತೆ ಲಕ್ಷ್ಮೀಶನು ಗಣಪತಿಯುನ್ನು ಮೊದಲು ಸ್ತುತಿಸುವ ಉದ್ದೇಶವುಳ್ಳವನಾಗಿದ್ದರೆ ಆ ಪದ್ಯವನ್ನೇ ಶ್ರೀಕಾರದಿಂದ ಮೊದಲು ಮಾಡುತ್ತಿದ್ದನೆಂಬುದು ನಿರ್ವಿವಾದ. ಆದುದರಿಂದ 'ಪ್ರಸ್ತುತದೊಳೊಗೆದ' ಎಂಬುದು ಲಕ್ಷ್ಮೀಶನ ಮೂಲದಲ್ಲಿ ಮೊದಲನೆಯದಾಗಿರಲಾರದು. ಇಷ್ಟದೇವತೆಯ ಸ್ತವನದಿಂದ ಕಾವ್ಯವನ್ನಾರಂಭಿಸುವ ಪರಿಪಾಟಿಯನ್ನೇ ಅವನು ಅನುಸರಿಸಿ 'ಶ್ರೀವಧು' ಎಂಬುದನ್ನು ಮೊದಲಪದ್ಯವಾಗಿ ರಚಿಸಿದ್ದಾನೆ.

ಹಾಗಾದರೆ ಕೆಲವೊಂದು ಹಸ್ತಪ್ರತಿಗಳಲ್ಲಿ ಈ ಕ್ರಮವ್ಯತ್ಯಾಸ ಕಂಡುಬರುವುದು

### ಕನ್ನಡ ಜೈಮಿನಿ ಭಾರತದ ೧೮ ಪ್ರತಿಗಳಲ್ಲಿ ಸಂಧಿಗಳು ಎಷ್ಟು ಮತ್ತು ಒಟ್ಟು ಪದ್ಯಗಳೆಷ್ಟು ಎಂಬುದನ್ನು ಸಂಧ್ಯನ್ವಯವಾಗಿ ವಿಭಜಿಸಿ, ಭೇದಗಳನ್ನು ನಮೂದಿಸಿರುವ ತಃಖ್ತೆ ಕೆಳಗಿನಂತಿವೆ

| ಸಂಧಿಗಳು→ | ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ೧೧ | ೧೨ | ೧೩ | ೧೪ | ೧೫ | ೧೬ | ೧೭ |
|---|---|---|---|---|---|---|---|---|---|---|---|---|---|---|---|---|---|
| ೧) ಕರಿಬಸವಶಾಸ್ತ್ರಿ 1917 | ೧೨ | ೬೭ | ೪೨ | ೭೨ | ೭೩ | ೫೫ | ೬೭ | ೪೯ | ೩೪ | ೫೪ | ೪೧ | ೫೧ | ೬೪ | ೩೩ | ೫೦ | ೪೬ | ೬೦ |
| ೨) ಸಾ.ಸಂ. ಇಲಾಖೆ 1956 | ೧೨ | ೬೭ | ೪೨ | ೭೨ | ೭೩ | ೫೫ | ೬೭ | ೪೯ | ೩೪ | ೫೪ | ೪೧ | ೫೧ | ೬೪ | ೩೩ | ೫೦ | ೪೬ | ೬೦ |
| ೩) K 224 O.R.I.M. | ೧೨ | ೬೭ | ೩೨ | ೭೨ | ೭೩ | ೫೫ | ೬೭ | ೫೯ | ೩೪ | ೫೪ | ೪೧ | ೫೧ | ೬೩ | ೩೩ | ೫೦ | ೪೬ | ೫೫ |
| ೪) K.A. 225 O.R.I.M. | ೧೨ | ೬೭ | ೪೨ | ೭೨ | ೭೩ | ೫೫ | ೬೭ | ೪೯ | ೩೪ | ೫೪ | ೪೧ | ೫೧ | ೬೩ | ೩೩ | ೫೦ | ೪೬ | ೬೦ |
| ೫) K 294 O.R.I.M. | ೧೨ | ೬೭ | ೪೨ | ೭೨ | ೭೩ | ೫೫ | ೬೭ | ೪೯ | ೩೪ | ೫೪ | ೪೧ | ೫೧ | ೬೩ | ೩೩ | ೫೦ | ೪೬ | ೬೦ |
| ೬) ತೀ. ನಂ. ಶ್ರೀ | ೧೨ | ೬೭ | ೩೨ | ೭೨ | ೭೩ | ೫೫ | ೬೭ | ೫೯ | ೩೪ | ೫೪ | ೪೧ | ೫೧ | ೬೩ | ೩೩ | ೪೧ | ೪೬ | ೫೯ |
| ೭) K 272 O.R.I.M. | ೧೨ | ೬೭ | ೩೨ | ೭೨ | ೭೩ | ೫೫ | ೬೭ | ೫೫ | ೩೪ | ೫೪ | ೪೧ | ೫೧ | ೬೩ | ೩೩ | ೫೦ | ೪೬ | ೬೦ |
| ೮) K 1261 K.R.I. | ೧೨ | ೬೭ | ೩೩ | ೭೨ | ೭೩ | ೫೫ | ೬೭ | ೮೨ | — | ೫೪ | ೪೧ | ೫೧ | ೬೩ | ೩೩ | ೫೦ | ೪೬ | ೫೫ |

| | | | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|
| ೯) | ತೊರಗಲ್ಲ | ೧೨ | ೬೭ | ೪೨ | ೭೨ | ೭೨ | ೫೫ | ೬೭ | ೫೦ | ೩೪ | ೫೪ | ೪೧ | ೫೧ | ೬೩ | ೩೩ | ೫೦ | ೪೬ | ೬೦ |
| ೧೦) | ಜಾಯೇಂದ್ರ | ೧೨ | ೬೭ | ೩೨ | ೭೨ | ೭೩ | ೫೪ | ೬೭ | ೫೯ | ೩೪ | ೫೪ | ೪೧ | ೫೧ | ೬೩ | ೩೩ | ೫೦ | ೪೬ | ೬೦ |
| ೧೧) | ದೇವನಾಗರಿ | ೧೨ | ೬೭ | ೪೨ | ೭೨ | ೭೩ | ೫೫ | ೬೭ | ೫೦ | ೩೪ | ೫೪ | ೪೧ | ೫೧ | ೬೩ | ೩೩ | ೫೦ | ೪೬ | ೬೦ |
| ೧೨) | ಬಿಳಗಿನಾಯಕ | ೧೨ | ೬೭ | ೪೨ | ೭೨ | ೭೨ | ೫೫ | ೬೭ | ೭೬ | — | ೫೩ | ೪೧ | ೫೧ | ೬೩ | ೩೩ | ೫೦ | ೪೬ | ೬೦ |
| ೧೩) | K 1304 K.R.I. | ೧೨ | ೬೭ | ೪೨ | ೭೨ | ೭೨ | ೫೫ | ೬೭ | ೭೬ | — | ೫೪ | ೪೧ | ೫೧ | ೬೩ | ೩೩ | ೫೦ | ೪೬ | ೬೦ |
| ೧೪) | K 344 K.R.I. | ೧೨ | ೬೭ | ೩೨ | ೭೨ | ೭೩ | ೫೫ | ೬೭ | ೫೯ | ೩೪ | ೫೪ | ೪೧ | ೫೧ | ೬೩ | ೩೩ | ೫೦ | ೪೬ | ೬೧ |
| ೧೫) | ಧಾರವಾಡ ಕಲ್ಲಚ್ಚು | ೧೨ | ೬೭ | ೪೨ | ೭೨ | ೭೩ | ೫೫ | ೬೭ | ೫೯ | ೩೪ | ೫೪ | ೪೧ | ೫೧ | ೬೩ | ೩೩ | ೫೦ | ೪೬ | ೬೦ |
| ೧೬) | K 1486 ಅ K.R.I. | ೧೨ | ೬೭ | ೪೨ | ೭೨ | ೭೨ | ೫೫ | ೬೭ | ೫೦ | ೩೪ | ೫೪ | ೪೧ | ೫೧ | ೬೩ | ೩೩ | ೫೦ | ೪೬ | ೬೦ |
| ೧೭) | K 1486 ಬ K. R.I. | ೧೨ | ೬೭ | ೪೨ | ೭೨ | ೭೩ | ೫೬ | ೬೭ | ೫೦ | ೩೪ | ೫೪ | ೪೧ | ೫೧ | ೬೩ | ೩೩ | ೫೦ | ೪೬ | ೬೦ |
| ೧೮) | K 1225 K.R.I. | ೧೨ | ೬೭ | ೪೨ | ೭೨ | ೭೩ | ೫೫ | ೬೭ | ೫೦ | ೩೪ | ೫೪ | ೪೧ | ೫೧ | ೬೩ | ೩೩ | ೫೦ | ೪೬ | ೬೦ |

| ಸಂಧಿಗಳು→ | ೧೮ | ೧೯ | ೨೦ | ೨೧ | ೨೨ | ೨೩ | ೨೪ | ೨೫ | ೨೬ | ೨೭ | ೨೮ | ೨೯ | ೩೦ | ೩೧ | ೩೨ | ೩೩ | ೩೪ |
|---|---|---|---|---|---|---|---|---|---|---|---|---|---|---|---|---|---|
| ೧) ಕರಿಬಸವಶಾಸ್ತ್ರಿ 1917 | ೬೪ | ೫೫ | ೬೨ | ೬೭ | ೪೭ | ೬೪ | ೮೨ | ೬೨ | ೭೭ | ೫೬ | ೬೩ | ೪೯ | ೫೪ | ೭೯ | ೫೭ | ೫೩ | ೪೬ |
| ೨) ಸಾ.ಸಂ. ಇಲಾಖೆ ಪ್ರತಿ 1956 | ೬೪ | ೫೫ | ೬೨ | ೬೭ | ೪೭ | ೬೪ | ೮೨ | ೬೨ | ೭೭ | ೫೬ | ೬೩ | ೪೯ | ೫೪ | ೭೯ | ೫೭ | ೫೩ | ೪೬ |
| ೩) K 224 O R.I.M. | ೬೭ | ೫೫ | ೬೨ | ೬೭ | ೪೭ | ೬೩ | ೮೨ | ೬೨ | ೭೭ | ೫೬ | ೬೩ | ೪೯ | ೫೪ | ೭೯ | ೫೭ | ೪೬ | ೪೭ |
| ೪) K.A. 225 O.R.I.M. | ೬೪ | ೫೫ | ೬೨ | ೬೭ | ೪೭ | ೬೪ | ೮೨ | ೬೨ | ೭೭ | ೫೬ | ೬೩ | ೪೯ | ೫೪ | ೭೯ | ೫೭ | ೫೩ | ೪೭ |
| ೫) K 294 O.R I.M. | ೬೪ | ೫೫ | ೬೨ | ೬೭ | ೪೭ | ೬೪ | ೮೨ | ೬೨ | ೭೭ | ೫೬ | ೬೩ | ೪೯ | ೫೪ | ೭೯ | ೫೭ | ೫೩ | ೪೭ |
| ೬) ತೀ. ನಂ. ಶ್ರೀ. | ೬೪ | ೫೬ | ೬೨ | ೬೭ | ೪೭ | ೬೪ | ೮೨ | ೬೨ | ೭೭ | ೫೬ | ೬೩ | ೪೯ | ೫೪ | ೭೯ | ೫೭ | ೫೩ | ೪೫ |
| ೭) K 272 O.R.I.M. | ೬೪ | ೫೬ | ೬೧ | ೬೭ | ೪೭ | ೬೪ | ೮೨ | ೬೨ | ೭೭ | ೫೬ | ೬೩ | ೪೯ | ೫೪ | ೭೯ | ೫೭ | ೪೭ | ೪೬ |
| ೮) K 1261 K.R.I. | ೬೪ | ೫೫ | ೬೨ | ೬೭ | ೪೭ | ೬೪ | ೮೨ | ೬೨ | ೮೦ | ೫೬ | ೬೩ | ೪೯ | ೫೧ | ೭೯ | ೫೭ | ೬೬ | ೪೬ |

| | | | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|
| ೯) | ತೊರಗಲ್ | ೬೭ | ೫೫ | ೬೨ | ೬೭ | ೪೭ | ೬೪ | ೮೨ | ೬೨ | ೭೭ | ೫೬ | ೬೩ | ೪೯ | ೫೪ | ೭೯ | ೫೭ | ೫೪ | ೪೬ |
| ೧೦) | ಜಾಯೇಂದ್ರ | ೬೫ | ೫೫ | ೬೨ | ೭೨ | ೪೭ | ೬೪ | ೮೨ | ೬೨ | ೭೭ | ೫೬ | ೬೩ | ೪೯ | ೫೪ | ೭೯ | ೫೭ | ೫೪ | ೪೬ |
| ೧೧) | ದೇವನಾಗರಿ | ೬೭ | ೫೪ | ೬೨ | ೬೭ | ೪೭ | ೬೪ | ೮೨ | ೬೨ | ೭೭ | ೫೬ | ೬೩ | ೪೯ | ೫೪ | ೭೯ | ೫೭ | ೫೩ | ೪೬ |
| ೧೨) | ಬಿಳಗಿನಾಯಕ | ೬೯ | ೫೫ | ೬೨ | ೬೭ | ೪೭ | ೬೪ | ೮೨ | ೬೨ | ೮೦ | ೫೬ | ೬೩ | ೪೯ | ೫೪ | ೭೯ | ೫೭ | ೫೩ | ೪೬ |
| ೧೩) | K 1304 K.R.I. | ೬೯ | ೫೫ | ೬೨ | ೬೭ | ೪೭ | ೬೪ | ೮೨ | ೫೮ | ೭೭ | ೫೬ | ೫೮ | ೪೯ | ೫೪ | ೭೮ | ೫೬ | ೬೬ | ೪೩ |
| ೧೪) | K 344 K.R.I. | ೬೪ | ೫೩ | ೬೨ | ೬೭ | ೪೭ | ೬೪ | ೮೨ | ೬೨ | ೭೭ | ೫೬ | ೬೨ | ೪೯ | ೫೪ | ೭೯ | ೫೭ | ೪೭ | ೪೯ |
| ೧೫) | ಧಾರವಾಡ ಕಲ್ಲಚ್ಚು | ೬೭ | ೫೫ | ೬೨ | ೬೭ | ೪೭ | ೬೪ | ೮೨ | ೬೨ | ೭೭ | ೫೬ | ೬೩ | ೪೯ | ೫೪ | ೭೮ | ೫೭ | ೫೪ | ೫೦ |
| ೧೬) | K 1486 ಅ K.R.I. | ೬೭ | ೫೫ | ೬೨ | ೬೭ | ೪೭ | ೬೪ | ೮೨ | ೬೧ | ೭೭ | ೫೬ | ೬೩ | ೪೯ | ೫೪ | ೭೯ | ೫೭ | ೪೬ | ೪೬ |
| ೧೭) | K 1486 ಬ K.R.I. | ೬೫ | ೫೫ | ೬೨ | ೬೭ | ೪೭ | ೬೪ | ೮೨ | ೬೨ | ೭೭ | ೫೬ | ೬೩ | ೪೯ | ೫೪ | ೭೯ | ೫೭ | ೫೨ | ೪೬ |
| ೧೮) | K 1225 K.R.I. | ೬೭ | ೫೫ | ೬೩ | ೬೭ | ೪೭ | ೬೪ | ೮೨ | ೬೨ | ೭೭ | ೫೬ | ೬೩ | ೪೯ | ೫೪ | ೭೯ | ೫೭ | ೫೪ | ೫೦ |

| ಪ್ರತಿ | ಅಂತು ಸಂಧಿಗಳು | ಕಾವ್ಯಾಂತದಲ್ಲಿ ಹೇಳಿದ ಒಟ್ಟು ಪದ್ಯ | ಸಂಧ್ಯಂತ ಸಂಖ್ಯೆಗಳ ಬೇರೀಜಿನಂತೆ | ನಿಜವಾಗಿ ಇದ್ದ ಒಟ್ಟು ಪದ್ಯ |
|---|---|---|---|---|
| ೧) ಕರಿಬಸವಶಾಸ್ತ್ರಿ 1917 | ೩೪ | ೧೯೦೭ | ೧೯೦೭ | ೧೯೦೭ |
| ೨) ಸಾ.ಸಂ. ಇಲಾಖೆ 1956 | ೩೪ | ೧೯೦೭ | ೧೯೦೭ | ೧೯೦೭ |
| ೩) **K 244 O.R.I.M.** | ೩೪ | ೧೯೦೭ | ೧೮೯೭ | ೧೮೯೭ |
| ೪) K.A. 225—O.R.I.M. | ೩೪ | ೧೯೦೭ | ೧೯೦೭ | ೧೯೦೭ |
| ೫) K 294—O.R.I.M. | ೩೪ | ೧೯೦೭ | ೧೯೦೭ | ೧೯೦೭ |
| ೬) ಶೀ. ನಂ. ಶ್ರೀ. | ೩೩ | ೧೯೦೫ | ೧೮೯೬ | ೧೮೮೬ |
| ೭) K 272—O.R.I.M. | ೩೪ | ೧೯೯೯ | ೧೮೯೫ | ೧೮೯೫ |
| ೮) K 1261—K.R.I. | ೩೩ | ೧೯೯೯ | ೧೯೦೪ | ೧೯೦೪ |

| | | | | | |
|---|---|---|---|---|---|
| ೯) | ತೊರಗಲ್ | ೩೩ | ೧೯೧೦ | ೧೯೧೦ | ೧೯೧೦ |
| ೧೦) | ಜಾಯೇಂದ್ರ | ೩೩ | ೧೯೧೦ | ೧೯೦೭ | ೧೯೦೭ |
| ೧೧) | ದೇವನಾಗರಿ | ೩೩ | ೧೯೧೦ | ೧೯೧೦ | ೧೯೧೦ |
| ೧೨) | ಬೆಳಗಿನಾಯಕ | ೩೨ | ೧೯೦೬ | ೧೯೦೫ | ೧೯೦೪ |
| ೧೩) | N 1304—K.R.I. | ೩೨ | ೧೯೪೮ | ೧೯೦೦ | ೧೮೯೭ |
| ೧೪) | K 344—K.R.I. | ೩೪ | ೧೯೨೦ | ೧೯೦೧ | ೧೯೦೦ |
| ೧೫) | ಧಾರವಾಡ ಕಲ್ಲಚ್ಚು | ೩೩ | ೧೯೨೫ | ೧೯೨೩ | ೧೯೨೨ |
| ೧೬) | K 1486 ಅ—K.R.I. | ೩೩ | ೧೯೩೫ | ೧೯೦೨ | ೧೯೦೨ |
| ೧೭) | K 1486 ಬ—K.R.I. | ೩೩ | ೧೯೩೬ | ೧೯೦೮ | ೧೯೦೮ |
| ೧೮) | K 1225—K.R.I. | ೩೩ | ೧೯೩೫ | ೧೯೧೬ | ೧೯೧೬ |

ಏಕೆ? ಇದಕ್ಕೆ ಕಾರಣವು, ಹಸ್ತಪ್ರತಿಗಳ ಉಗಮವನ್ನು ಗಮನವಿತ್ತು ನೋಡಿದರೆ ಸಹಜವಾಗಿ ಹೊಳೆಯುವುದು. ಶೈವ ಸಂಪ್ರದಾಯದ ಜನ ಬರಸಿಕೊಂಡ ಅಥವಾ ಬರೆದ ಪ್ರತಿಗಳಲ್ಲಿಯೇ 'ಪ್ರಸ್ತುತ' ಎಂಬ ಪದ್ಯವು ಮೊದಲನೆಯದಾಗಿರುವುದು. ಅವರು ವಿಷ್ಣುವಿಗಿಂತ ಶಿವನಿಗೆ ಅಗ್ರಪ್ರಾಶಸ್ತ್ಯವನ್ನು ಕೊಡುವ ದೃಷ್ಟಿಯುಳ್ಳವರು. ಆದಕ್ಕಾಗಿ ತಮ್ಮ ಪ್ರತಿಗಳಲ್ಲಿ ಈ ಕ್ರಮವ್ಯತ್ಯಾಸವನ್ನು ಮಾಡಿಕೊಂಡಿರುವರೆಂಬುದು ಸ್ಪಷ್ಟ ವಾಗುತ್ತದೆ. ಪ್ರಥಮ ಸ್ತವನಕ್ಕೆ ಸಕಲರಿಗೂ ಸಮಾನಮಾನ್ಯನಾದ ಗಣಪತಿಯ ಪದ್ಯವನ್ನು ಮೊದಲು ಬರೆದು ಶಿವಸ್ತುತಿಯ 'ಪಾವನ ತುಲಾಭರಣ' ಎಂಬುದನ್ನು ಎರಡನೆಯದಾಗಿ ಬರೆದರು. ಲಕ್ಷ್ಮೀಪತಿಯ ಸ್ತುತಿಗೆ ತರುವಾಯದ ಮೂರನೆಯ ಸ್ಥಾನವನ್ನು ಕೊಟ್ಟರು. ಇದರಿಂದ ಕವಿಯ ಇಷ್ಟದೈವತಕ್ಕೆ ಪ್ರಥಮ ಪ್ರಾಶಸ್ತ್ಯ ಸಿಕ್ಕದ, ಕಾವ್ಯಾರಂಭಕ್ಕೆ ಶ್ರೀಕಾರವಿಲ್ಲದ ವಿಸಂಗತಿ ತಲೆದೋರಿದೆ. ಆದುದರಿಂದ, ಶ್ರೀಕಾರಯುಕ್ತವಾದ ಇಷ್ಟದೇವತಾಸ್ತುತಿ, ತರುವಾಯ ಕವಿಯ ದೃಷ್ಟಿಯಲ್ಲಿ ತತ್ಸಮಾನ ಪ್ರತಿಷ್ಠೆಯ ದೇವನಾದ ಶಿವನ ಸ್ತುತಿ, ಬಳಿಕ ಗಣಪತಿ ಸ್ತುತಿ–ಇದು ಲಕ್ಷ್ಮೀಶನ ಕ್ರಮ ಎಂಬುವುದರಲ್ಲಿ ಸಂದೇಹವಿಲ್ಲ. ಭಕ್ತನು ತನ್ನಾರಾಧ್ಯ ದೇವತೆಯಲ್ಲಿ ಸರ್ವಶಕ್ತಿಮತ್ತ್ವವನ್ನು ಆರೋಪಿಸುವುದರಿಂದ, ವಿಘ್ನನಾಶಕತ್ವವನ್ನೂ ಅದು ಒಳ ಗೊಳ್ಳುವುದರಿಂದ ಗಣಪತಿಗೆ ಅಗ್ರಸ್ಥಾನ ಕೊಡದಿರುವುದು ಅಸಮಂಜಸವೇನಲ್ಲ.

ಈ ಬಗೆಯಾದ ಪದ್ಯಗಳ ಸ್ಥಾನಪಲ್ಲಟವು ಈ ಮೊದಲ ಸಂಧಿಯ ಕೊನೆಯ ಎರಡು ಪದ್ಯಗಳಲ್ಲಿಯೂ ಕಂಡುಬರುತ್ತದೆ. ಪ್ರಚಲಿತ (ಪ್ರ,ರ) ಪ್ರತಿಗಳಲ್ಲಿ 'ವಿದ್ವತ್ಸಭಾವಲಯಮರಿಯೆ' ಎಂಬುದು ೧೧ನೆಯ ಪದ್ಯವಾಗಿ 'ವರವರ್ಣದಿಂದ ಶೋಭಿತ' ಎಂಬುದು ೧೨ನೆಯದಾಗಿದೆ. K. 264 (O.R.I. Mys.) ಮೊದಲಾದ ಹಸ್ತಪ್ರತಿಗಳಲ್ಲಿ ಇವು ಹಿಂದುಮುಂದಾಗಿವೆ. ಇವುಗಳಲ್ಲಿ ಪ್ರ, ರ ಗಳ ಕ್ರಮವು ಯುಕ್ತವಲ್ಲ, K 264 ರದು ಯುಕ್ತ. ಹೀಗೆ ಹೇಳುವುದಕ್ಕೆ ಎರಡು ಕಾರಣಗಳುಂಟು:

೧. ಪ್ರತಿ ಸಂಧಿಯ ಕೊನೆಯ ಪದ್ಯದಲ್ಲಿ ಇಷ್ಟದೇವತೆಯನ್ನು ಸ್ಮರಿಸುವುದು ಹಲವು ಕವಿಗಳಂತೆ ಲಕ್ಷ್ಮೀಶನದೂ ಪದ್ಧತಿ. ಪ್ರತಿ ಸಂಧಿಯಲ್ಲಿ ಕಥಾಸಂದರ್ಭಕ್ಕೆ 'ಲಕ್ಷ್ಮೀಕಾಂತ'ನನ್ನು ಸಂಬಂಧಿಸುವಂತೆ ಈ ಸಂಧಿಯಲ್ಲಿಯೂ ಪ್ರಸ್ತಾವನಾ ಸಂದರ್ಭಕ್ಕೆ ಹೊಂದುವಂತೆ ಆತನನ್ನು ನೆನೆಯಬೇಕು. 'ವರವರ್ಣದಿಂದ' ಎಂಬ ಪದ್ಯದಲ್ಲಿ ಈ ನೆನಕೆಯಿಲ್ಲ; 'ವಿದ್ವತ್ಸಭಾವಲಯಮರಿಯೆ' ಎಂಬ ಪದ್ಯದಲ್ಲಿದೆ. ಆದುದ ರಿಂದ ಅದೇ 'ವಿದ್ವತ್ಸಭಾ' ಎಂಬುದೇ ಸಂಧಿಯ ಕೊನೆಯ ಪದ್ಯ.

೨. ಹತ್ತನೆಯ ಪದ್ಯದಲ್ಲಿ 'ಪೂರ್ವಸತ್ಕವಿಗಳ್ಗೆ ನಮಿಸಿ ನಾಂ ಕೃತಿವೇಳ್ವೆನು' ಎಂದಿರುವ ಕವಿ ಮುಂದಿನ ಪದ್ಯದಲ್ಲಿ ತನ್ನ ಕೃತಿ ಷಟ್ಪದಿಯಲ್ಲಿದೆ ಎಂಬುದನ್ನು ತಿಳಿಸು ವುದು ಸಮಂಜಸವಾಗಿದೆ. ಹಾಗೆಯೆ ಕಾವ್ಯದ ಬಗೆಗೆ ಹೇಳುವುದನ್ನು ಹೇಳಿಯಾದ ಮೇಲೆ ಕವಿ ತನ್ನ ಬಗೆಗೆ ಹೇಳುವುದೂ ಸೂಕ್ತಕ್ರಮ. ಆದುದರಿಂದ 'ವರವರ್ಣದಿಂದ' ಎಂಬ ಪದ್ಯ ೧೧ನೆಯದಾಗುವುದು.

ಅಂತೂ, 'ದೇವಪುರದ ಲಕ್ಷ್ಮೀಶನ ಪದದ್ವಯವನಾವಗಂ ಧ್ಯಾನಿಸುವರಡಿಗಳಂ ಸದ್ವಿನಯದಿಂ ಭಜಿಪ ಬಲ್ಪಿಂದೆ' ವಿರಚಿಸಿದನೆಂದು ಇಷ್ಟದೇವತೆಯನ್ನು ಸ್ಮರಿಸುವ ಪದ್ಯದಿಂದ ಸಂಧಿಯನ್ನು ಮುಗಿಸಬೇಕು.

## ಕನ್ನಡ ಜೈಮಿನಿ ಭಾರತ

ನಮ್ಮ ಗ್ರಂಥ ಸಂಪಾದನೆಯ ಮಾದರಿಗಳೆಂದು ಮೊದಲನೆಯ ಮತ್ತು ಕೊನೆಯ ಸಂಧಿಗಳನ್ನು ಇಲ್ಲಿ ಕೊಡಲಾಗಿದೆ. ಅಗ್ರಾಹ್ಯವಾದ ಪ್ರಮುಖ ವ್ಯತ್ಯಾಸಗಳನ್ನೂ ಪಾಠಾಂತರಗಳನ್ನೂ ಅಡಿಟಿಪ್ಪಣಿಯಲ್ಲಿ ಸೂಚಿಸಲಾಗಿದೆ. ಬರೆವಣಿಗೆಯ ದೋಷಗಳನ್ನು ಉಲ್ಲೇಖಿಸಲಾಗಿಲ್ಲ.

ಸಂಧಿ ೧,

ಶ್ರೀವಧುವಿನಂಬಕ ಚಕೋರಕಂ ಪೊರೆಯೆ ಭ
ಕ್ತಾವಳಿಯ ಹೃತ್ಕುಮುದ ಕೋರಕಂ ಬಿರಿಯೆ ಜಗ
ತೀವಳಯದಮಳ ಸೌಭಾಗ್ಯರತ್ನಾಕರಂ ಪೆರ್ಚಿನಿಂ ಮೇರೆವರಿಯೆ।
ಆವಗಂ ಸರಸ ಕರುಣಾಮೃತದ ಕಲೆಗಳಿಂ
ತೀವಿದೆಳೆನಗೆಯ ಬೆಳ್ದಿಂಗಳಂ ಪಸರಿಸುವ
ದೇವಪುರ ಲಕ್ಷ್ಮೀರಮಣನಾಸ್ಯ ಚಂದ್ರನಾನಂದವಂ ನಮಗೀಯಲಿ॥ ೧

ಪಾವನಮಳಾಭರಣಮಂ ಮಾಡಿಕೊಂಡೆಸವ
ಪಾವನತರಸ್ವರೂಪಂ ನಾರದಾದಿ ಮುನಿ
ಪಾವನ ತಪಾದಪಂಕೇರುಹದ್ವಂದ್ವನಿಂದುಕಲಾವತಂ ಸನುಮೆಯ।
ಭಾವನೆಯ ನೊಡಗೂಡಿಸುವ ಸಕಲ ಸುರರ ಸಂ
ಭಾವನೆಯ ಕೈಕೊಂಬ ಲೋಕವಿಸ್ತರಣ ಪ್ರ
ಭಾವ ನಯನತ್ರಯಂ ದೇವಗಂಗಾಧರಂ ಸಲಹುಗೆಮ್ಮಂ ನಿಚ್ಚವು॥ ೨

ಪ್ರಸ್ತುತದೊಳೊಗೆದ ಮುಂಬೆಳಗಮಳ ದಂತದ ಗ
ಭಸ್ತಿ ನವಪೂರ್ವ ಸಂಧ್ಯಾರುಣಂ ಭಾಳವಿ
ನ್ಯಸ್ತ ಸಿಂಧೂರಮಂಕುರಿಪ ಪೊಂಬಿಸಿಲೊಡನೆ ಮೂಡುವೆಳೆನೇಸಱೆಸವ।

---

ಪ. ೧ : ಕ, ಘ, ಚ ಗಳಲ್ಲಿ ೩ನೆಯದಾಗಿದೆ. ಇದರ ಅಗ್ರಾಹ್ಯತೆಯನ್ನು ಹಿಂದೆ ಚರ್ಚಿಸಿದೆ.
ಸಾಲು ೬ : ದೇವಪುರನಿಲಯಲಕ್ಷ್ಮೀರಮಣನಾಸ್ಯಚಂದ್ರಾನಂದವಂ—(ಖ, ಗ, ಘ, ಚ, ಛ, ಜ, ಝ, ತ, ದ)

ಪ. ೨ : ಕ, ಘ, ಚ ಗಳಲ್ಲಿ ೩ನೆಯ ಪದ್ಯ ; ಗ, ಛ, ಜ, ಥ ಗಳಲ್ಲಿ ೪ನೆಯ ಪದ್ಯ. ಸಾಲು ೧ : ಅಮಳಾಭರಣ (ಕ, ಘ); ಅತುಳಾಭರಣ (ಪ್ರ, ರ ಮತ್ತು ಮಿಕ್ಕೆಲ್ಲ ಹಸ್ತಪ್ರತಿಗಳು)

ಮಸ್ತಕದ ಮಣಿಮಕುಟ ಮಾಗಲುದಯಾಚಳದ
ವಿಸ್ತಾರದಂತೆ ಭದ್ರಾಕೃತಿಯೊಳೊಪ್ಪುವ ಸ
ಮಸ್ತ ಸಿದ್ಧಿಪ್ರದಾಯಕ ವಿನಾಯಕ ಮಾಳ್ಪುದೆಮಗೆ ನಿರ್ವಿಘ್ನತೆಯನು ॥ ೧

ಭೂವ್ಯೋಮ ಪಾತಾಳ ಲೋಕಂಗಳೊಳಗೆ ಸಂ
ಭಾವ್ಯರೆಂದೆನಿಸಿಕೊಂಬಖಿಳ ದೇವರ್ಕಳಿಂ
ಸೇವ್ಯನಾದಜನ ಪಟ್ಟದ ರಾಣಿ ವರದೆ ಕಲ್ಯಾಣಿ ಫಣಿವೇಣಿ ವಾಣಿ ।
ಕಾವ್ಯಮಿದು ಬುವನದೊಳ್ಸಕಲ ಜನರಿಂದ ಸು
ಶ್ರಾವ್ಯಮುಪ್ಪಂತೆನ್ನ ವದನಾಬ್ಜದಲ್ಲಿ ನೀ
ನೇ ವ್ಯಾಪಿಸಿರ್ದೆನಗಭಿಜ್ಞೆಯಂ ತಾಯೆನಲ್ತಾಯೆ ನಲ್ಮೆಯೊಳೀವುದು ॥ ೪

ಪಾರದೆ ಪರಾರ್ಥಮಂ ವರಯತಿಗೆ ಭಂಗಮಂ
ತಾರದೆ ನಿಜಾನ್ವಯ ಕ್ರಿಯೆಗಳೊಳು ದೂಷಣಂ
ಬಾರದೆ ವಿಶೇಷಗುಣಗಣಕಲಾಗೌರವಂ ತೀರದೆ ದುರುಕ್ತಿಗಳ್ಗೆ ।
ಸೇರದೆ ಸುಮಾರ್ಗದೊಳ್ನಡೆವ ಸತ್ಪುರುಷರ ಗ
ಭೀರದೆಸಕದೊಳಿಪ್ಪ ಕಾವ್ಯಪ್ರಬಂಧಮಂ
ಶಾರದೆಯ ಕರುಣದಿಂ ಪೇಳ್ವೆನಾಂ ದೋಷಮಂ ತಾರದೆಲ್ಲರ್ಕೇಳ್ವುದು ॥ ೫

ಛಂದಸ್ಸು ಲಕ್ಷಣಮಲಂಕಾರ ಭಾವರಸ
ವೊಂದಿ ಕಲೆವೆತ್ತ ಸತ್ಕೃತಿ ಚಮತ್ಕೃತಿ ಯುಕ್ತಿ
ಯೊಂದುಮಿಲ್ಲದ ಕಾವ್ಯಮುಶ್ರಾವ್ಯಮಕ್ಕೆಂದಱಿಯದೆ ಕವಿತೆಯನು ಬಱೆದೆ ।
ದಂದುಗಕ್ಕೊಳಗಾಗಿ ಪೇಳ್ದನೆಂದೆನ್ನ ನಗು
ವಂದವಂ ಮಾಡದೆನಗೊಲಿದಿತ್ತನಮಳ ಮತಿ
ಯಂ ದೇವಪುರದ ಲಕ್ಷ್ಮೀಶನೆಂದಱಿದೀ ಪ್ರಬಂಧಮಂ ನಿರ್ಮಿಸಿದೆನು ॥ ೬

---

ಪ. ೧ : ಕ, ಘ, ಚ ಗಳಲ್ಲಿ ಇದು ಮೊದಲ ಪದ್ಯ. ಈ ಪ್ರಥಮತ್ವವನ್ನು ಹಿಂದೆ ಅಲ್ಲಗಳೆದಿದೆ.
ಸಾಲು ೬ : ಮಾಳ್ಕೆ ಮನ್ಮತಿಗೆ ಮಾಂಗಲ್ಯಮಂ (ಕ).
ಮಾಳ್ಪುದೆಮಗೆ ನಿರ್ವಿಘ್ನತೆಯನು (ಮಿಕ್ಕೆಲ್ಲ ಪ್ರತಿಗಳು).

ಪ. ೪ : ಇದು ಕ,ಘ,ಚ,ಛ ಗಳಲ್ಲಿ ೨ನೆಯ ಪದ್ಯ ; ಗ,ಜ,ಥ ಗಳಲ್ಲಿ ೧ನೆಯ ಪದ್ಯ.
ಸಾಲು ೬ : ವ್ಯಾಪಿಸಿರ್ದೆನಗಭಿಜ್ಞೆಯಂ ತಾಯೆನಲ್ತಾಯೆ ನಲ್ಮೆಯೊಳೀವುದು (ಕ, ಘ, ಛ, ದ); ವ್ಯಾಪಿಸಿರ್ದಮಲ ಸುಮತಿಯಂ ತಾಯೆನಗೆ ತಾಯೆ ನಗೆಗೂಡಿನೋಡಿ (ಖ, ಝ, ತ, ಥ, ಪ್ರ,ರ); ವ್ಯಾಪಿಸಿರ್ದಮಲ ಸುಮತಿಯಂ ತಾಯೆನಗೆ ತಾಯ ನಲ್ಮೆಂದು ನೋಡಿ (ಚ); ವ್ಯಾಪಿಸಿರ್ದೆನಗಭಿಜ್ಞೆಯಂ ತಾಯೆನಗೆ ತಾಯೆ ನಗೆಗೂಡಿ ನೋಡಿ (ಜ); ವ್ಯಾಪಿಸಿರ್ದೆನಗಭಿಜ್ಞೆಯಂ ತಾಯೆನಗೆ ತಾಯ(ಯೆ?) ನೊಲಿದೊಲ್ಮೆಯಿಂದ (ಗ).

ಪ. ೫ : ಸಾ. ೧ : ಪಾರದೆ ಪರಾರ್ಥ (ಪ್ರ. ರ ಮತ್ತು ಉಳಿದೆಲ್ಲ ಹಸ್ತಪ್ರತಿ).
ಪಾರದೆ ಪದಾರ್ಥ (ಘ, ಝ, ತ, ದ).
ಬಾರದೆ ಪದರ್ಥ (ಥ).

ಪ. ೬ : ಸಾ. ೨ : ಚಮುತ್ಕೃತಿಯಕ್ಕಿ (ಖ, ಕ); ಚಮುತ್ಕೃತಿಯಕ್ಕು (ಚ);
ಚಮುತ್ಕೃತಿಯಪ್ಪು (ಘ, ಛ); ಚಮುತ್ಕೃತಿಯುಕ್ತ (ರ);
ಚಮುತ್ಕೃತಿ ಯುಕ್ತಿ (ಜ, ಝ, ತ, ಥ, ಪ್ರ).

ಕೆನೆವಾಲ ಕಡದು ನವನೀತಮುಂ ತೆಗೆದು ಬಾ
ಯ್ಗನಿದಾಗಿ ಸವಿಯದದಱಿಂದೊಳಗೆ ಪುಳಿವಿಡಿದು ರಸ
ವನೆ ಕೆಡಿಸಿದಡೆ ಕಱಿದ ಸುರಭಿಗಪ್ಪುದೆ ಕೊಱತೆ ಕಾವ್ಯಮುಂ ಕೇಳ್ದು ಮಥಿಸಿ |
ಜನಿಸಿದ ಪದಾರ್ಥಮುಂ ತಿಳಿದು ನೋಡದೆ ವಿನೂ
ತನ ಕವಿತೆಗೊಂದು ಕುಂದಿಟ್ಟು ಜಱಿದಡೆ ಪೇಳ್ದ
ವನೊಳಾವುದೂಣೆಯರಿ ಜಾಣರಿದನಱಿತು ಮುಚ್ಚರವನುಳಿದಾಲಿಸುವುದು || ೭

ಜಾಣರಂ ತಲೆದೂಗಿಸದೆ ನಡದಡಾ ಪದ
ಕ್ಕೊಣೆಯಂ ಬಹುದೆಂದು ಸರಸೋಕ್ತಿಯಿಂದ ಗೀ
ರ್ವಾಣ ಪುರನಿಳಯ ಲಕ್ಷ್ಮೀವರಂ ತಾನೆ ಸಂಗೀತಸುಕಲಾನಿಪುಣನು |
ವೀಣೆಯಿಂ ಗಾನಮುಂ ನುಡಿಸುವಂದದಲೆನ್ನ
ವಾಣಿಯಿಂ ಕವಿತೆಯಂ ಪೇಳಿಸಿದನೆಂದಱಿತು
ಕೇಣಮುಂ ತೊಱದು ಪುರುಡಿಸುವರಂ ಜಱಿದು ಕಿವಿದೆಱದು ಕೇಳ್ವುದು ಸುಜನರು || ೮

ದುಷ್ಟಾಹಿ ಘೋರತರ ವಿಷವದನದಿಂದ ಸಂ
ದಷ್ಟಮಾಗಿರುತಿರ್ದಡಂ ದೋಷಮಿರ್ದಡಂ
ನಷ್ಟಕಲೆಯಾದಡಂ ಚಂದ್ರನಂತೆನ್ನ ಕಾವ್ಯದ ರಸಂ ಸುಮನಸರ್ಗೆ |
ಇಷ್ಟಮಾಗದೆ ಮಾಣದಿನ್ನಾವನಾದಡಂ
ಕಷ್ಟವಂ ಬಗೆದವಂ ಚೋರಗಂ ವಿರಹಿಗಂ
ದೃಷ್ಟಾಂತವಾಗಿ ಸಲ್ವಂ ಧರಾವಳಯದೊಳ್ಸಂದೇಹಮೇನಿದಱಿಂದೊಳು || ೯

ಮೊಗಮಾವ ಲೀಲೆಯಿಂದೆಸವುದಾ ಭಾವಮುಂ
ಮುಗುಳೆ ತೋಱಿಪುದಲ್ಲದನ್ಯಪ್ರಕಾರದಿಂ
ಸೊಗಯಿಪುದೆ ರನ್ನಗನ್ನಡಿ ಧರೆಯೊಳಾರಾಜಿಸುವ ಕನ್ನಡದ ಕೃತಿಗಳ |
ಬರೆಯಱಿದರಾವ ಲಕ್ಷಣದಿಂದ ಮುನ್ನ ಕ
ಬ್ಬಿಗಳನುಸುರಿದರದೇ ಲಕ್ಷ್ಯಮಲ್ಲದೆ ಪೆಱತೆ
ನಗೆ ಸಲ್ಲದದಱಿಂದ ಪೂರ್ವ ಸತ್ಕವಿಗಳ್ಗೆ ನಮಿಸಿ ನಾಂ ಕೃತಿವೇಳ್ವೆನು || ೧೦

---

ಪ. ೮ : ಸಾ. ೪ : ವೀಣೆಯಿಂ ಗಾನಮುಂ (ಖ, ಝ, ತ, ಪ್ರ, ರ); ವೀಣೆಯಿಂ ಗೇಯಮುಂ (ಮಿಕ್ಕೆಲ್ಲ ಪ್ರತಿ).

ಪ. ೧೦ : ಸಾ. ೩ : ಕನ್ನಡದ ಕೃತಿಗಳ (ಅ, ಇ); ಕನ್ನಡದ ನುಡಿಗಳ (ಉಳಿದೆಲ್ಲ ಪ್ರತಿಗಳು).
ಉತ್ತರಾರ್ಧ :

ಬಗೆಯಱಿದರಾವ ಲಕ್ಷಣದಿಂದ ಮುನ್ನ ಕ
ಬ್ಬಿಗಳನುಸುರಿದರದೇ ಲಕ್ಷ್ಯಮಲ್ಲದೆ ಪೆಱತೆ
ನಗೆ ಸಲ್ಲದದಱಿಂದೆ ಪೂರ್ವ ಸತ್ಕವಿಗಳ್ಗೆ ನಮಿಸಿ ನಾಂ ಕೃತಿವೇಳ್ವೆನು |
(ಊ, ಎ, ಐ, ಔ, ಖ, ಚ, ಛ, ಜ).
ಬಗೆಯಱಿದು ಕಾವ್ಯ ಲಕ್ಷಣದಿಂದ ಮುನ್ನ ಕ
ಬ್ಬಿಗಳುಸುರಿದಡೆ ಲಕ್ಷ್ಯಮಲ್ಲದೆ ಮತ್ತೆ ಪಱ
ತೆಗೆ ಸಲ್ಲದದಱಿಂದ ಪೂರ್ವ ಸತ್ಕವಿಗಳ್ಗೆ ನಮಿಸಿ ನಾಂ ಕೃತಿವೇಳ್ವೆನು |
(ಅ, ಇ, ಕ).

ವರವರ್ಣದಿಂದ ಶೋಭಿತವಾಗಿ ರೂಪು ವಿ
ಸ್ತರದಿಂದ ಚೆಲ್ವಾಗಿ ಮಧುರತರ ನವರಸೋ
ದರಭರಿತದಿಂದ ವಿಲಸಿತವಾಗಿ ಸುಮನೋನುರಾಗದಿಂ ಪ್ರಚುರವಾಗಿ ।
ನಿರುತ ಮಂಜುಳ ಶಬ್ದದಿಂದ ಕಿವಿಗಿಂಪಾಗಿ
ಚರಿಸುವ ಸುಲಲಿತ ಷಟ್ಪದಿಗಳೆಡೆವಿಡದೆ ಝೇಂ
ಕರಿಸದಿರ್ಪವೆ ಬಂದು ನೆರದ ವಿದ್ವತ್ಸಭಾನೀರೇರುಹಾಕರದೊಳು ॥ ೧೧*

ವಿದ್ವತ್ಸಭಾವಳಯ ಮಱಿಯೆ ವಿರಚಿಸಿದಂ ಭ
ರದ್ವಾಜ ಗೋತ್ರ ಭವನಣ್ಣಮಾಂಕನ ಸುತಂ
ಸದ್ವಿನುತ ಕರ್ನಾಟಕವಿಚೂತವನಚೈತ್ರ ಲಕ್ಷ್ಮೀಶನೆಂಬೊರ್ವನು ।
ಹೃದ್ವನಜದೊಳ್ದೇವಪುರದ ಸಿರಿಯೆಱೆಯನ ಪ
ದದ್ವಯವನಾವಗಂ ಧ್ಯಾನಿಸುವರಡಿಗಳಂ
ಸದ್ವಿನಯದಿಂ ಭಜಿಪ ಬಲ್ಪಿಂದ ವಿಮಳ ಜೈಮಿನಿ ಭಾರತದ ಕಥೆಯನು ॥ ೧೨*

## ಸಂಧಿ ೩೪

ಪ್ರಚಲಿತ ಪ್ರತಿಗಳಲ್ಲಿಯೂ ಅನೇಕ ಹಸ್ತಪ್ರತಿಗಳಲ್ಲಿಯೂ ಕೊನೆಯದಾದ ೩೪ನೆಯ ಸಂಧಿ ೪೬ ಪದ್ಯಗಳಿಂದ ಕೂಡಿದೆ. ಕೆಲವು ಪ್ರತಿಗಳಲ್ಲಿ 'ಧರಣಿಯೊಳ್ ಜೈಮಿನೀಂದ್ರನತಿ ಪೆರ್ಮೆ' ಎಂಬ ಒಂದು ಪದ್ಯವು ೪೭ನೆಯ ಪದ್ಯವಾಗಿ ಬಂದಿದೆ. ಇದನ್ನು ಪ್ರಕ್ಷೇಪ ಪದ್ಯವೆಂದು ಕರಿಬಸವಶಾಸ್ತ್ರಿಗಳು ನಿಶ್ಚಯಿಸಿದರು. ಅಂದಿನಿಂದ ಈ ಸಂಧಿಯ ಪದ್ಯಸಂಖ್ಯೆ ೪೬ ಎಂದಾಗಿದೆ.

ಆದರೆ ಇನ್ನು ಕೆಲವು ಹಸ್ತಪ್ರತಿಗಳಲ್ಲಿ (ಉದಾ : ದ, ಥ) ೩೪ನೆಯ ಸಂಧಿ ೫೦ ಪದ್ಯಗಳುಳ್ಳುದಾಗಿಯೂ ಇನ್ನು ಕೆಲವುಗಳಲ್ಲಿ ೫೧ ಪದ್ಯಗಳುಳ್ಳುದಾಗಿಯೂ ಕಂಡು ಬಂದಿತು. ಇದು ಏಕೆ ಹೀಗೆಂದು ಪರಿಷ್ಕರಿಸಿದಾಗ ಪ್ರ, ರ ಗಳಲ್ಲಿಲ್ಲದ ೪ ಹೆಚ್ಚಿನ ಪದ್ಯಗಳು (೪೬+೪=೫೦, ೪೭+೪=೫೧) ಅಲ್ಲಿ ದೊರೆತವು. ಅವುಗಳನ್ನು ಪರೀಕ್ಷಿಸಿದಾಗ ಅವು ಬಹುದೋಷಾಕರವಾಗಿರುವುದೂ ಅಲ್ಲದೆ, ಆ ಸ್ಥಾನದಲ್ಲಿ ಆ ಸಂದರ್ಭಕ್ಕೆ ವಿಸಂಗತವಾಗಿಯೂ ತೋರಿದವು. ಲಕ್ಷ್ಮೀಶನ ಕೃತಿಗೆ ಹೊಂದದ ತೀರ ಹೀನಮಟ್ಟದ ಪದ್ಯಗಳಾಗಿವೆ. ಆದುದರಿಂದ ಅವು ಅನ್ಯರ ಕೈಗಂಟೆಂಬುದು ಸ್ಪಷ್ಟ

---

ಪ. ೧೦ : ಉತ್ತರಾರ್ಧ : ಬಗೆಯಱಿದು ಕಾವ್ಯಲಕ್ಷಣದಿಂದ ಮುನ್ನ ಕ
ಬ್ಬಗಳ ನುಸುರಿದರದೇಂ ಲಕ್ಷ್ಯವಿಲ್ಲದೆ ಪೊಗ
ಳ್ಕೆಗೆ ಸಲ್ಲದದಱಿಂದ ಪೂರ್ವ ಸತ್ಕವಿಗಳ್ಗೆ ನಮಿಸಿ ನಾಂಕೃತಿವೇಳ್ವೆನು ।
(ಈ)

* ೧೧, ೧೨ನೆಯ ಪದ್ಯಗಳು ಪ್ರಚಲಿತ ಪ್ರತಿಗಳಲ್ಲಿಯೂ ಹಲವು ಹಸ್ತಪ್ರತಿಗಳಲ್ಲಿಯೂ ಹಿಂದುಮುಂದಾಗಿವೆ. ತಾಳೆಗರಿಯ ಎರಡು ಪ್ರತಿಗಳಲ್ಲಿ (O.R.I. Mys.) ಮಾತ್ರ ಇಲ್ಲಿ ಕೊಟ್ಟಂತಿವೆ. ಈ ಕ್ರಮದ ಗ್ರಾಹ್ಯತೆಯನ್ನು ಕುರಿತು ಹಿಂದೆ ಚರ್ಚಿಸಿದೆ.

ಪ. ೧೨ : ಸಾ. ೪ : ಹೃದ್ಯಮನದೊಳ್ ದೇವಪುರ (ಕ, ಜ ಪ್ರತಿಗಳಲ್ಲಿ ಮಾತ್ರ).

ವಾಯಿತು. ಅವು ಅಗ್ರಾಹ್ಯಗಳಾಗಿ ಈ ಸಂಧಿ ೪೬ ಪದ್ಯಗಳದೆಂಬುದೇ ಪ್ರಸ್ಥಾಪಿತ ವಾಯಿತು.

ಈ ಸಂಧಿಯಲ್ಲಿ ೪೨ ಪದ್ಯಗಳವರೆಗೆ ಎಲ್ಲ ಪದ್ಯಗಳಲ್ಲಿ ಒಂದೇ ಕ್ರಮ ಬಂದಿದೆ. ೪೩ನೆಯ ಪದ್ಯದಿಂದ ೪೬ನೆಯ ಪದ್ಯದವರೆಗಿನ ೪ ಪದ್ಯಗಳು ಬೇರೆ ಬೇರೆ ಪ್ರತಿಗಳಲ್ಲಿ ಬೇರೆ ಬೇರೆ ಕ್ರಮದಿಂದ ಹಿಂದುಮುಂದಾಗಿವೆ. ಪ್ರಾರಂಭ ಸಂಧಿಯ ಪ್ರಾರಂಭ ಪದ್ಯಗಳು, ಅಂತ್ಯ ಸಂಧಿಯ ಅಂತ್ಯ ಪದ್ಯಗಳು ಹಿಂದೆ ಮುಂದೆ ಆಗುವುದು ಸ್ವಾಭಾವಿಕ. ಬರೆವಣಿಗೆಗೆ ಮೂಲವಾಗಿದ್ದ ಪ್ರತಿಯ ಪುಟಗಳು ಕಳೆದಿರುವಿಕೆ, ಹಿಂದುಮುಂದಾಗಿ ಲಕ್ಷ್ಯಕ್ಕೆ ಬಾರದಿರುವಿಕೆ, ಬಾಯಿಪಾಠವನ್ನವಲಂಬಿಸುವಿಕೆ–ಇಂತಹ ಕಾರಣಗಳಿಂದ ಈ ೪ ಪದ್ಯಗಳ ಕ್ರಮ ವ್ಯತ್ಯಾಸವಾಗಿರಬೇಕು.

ಸೂಚನೆ ॥ ಮಿಗೆ ಮೂಜಗಂದಣಿಯೆ ಹಯಮೇಧಯಜ್ಞಮಂ
ಮುಗಿಸಿ ಧರ್ಮಾತ್ಮಜಂ ಕೃಷ್ಣಾದಿ ಸಕಲ ನೃಪ
ತಿಗಳನವರವರ ನಗರಂಗಳ್ಗೆ ಕಳುಹಿ ಸುಖದಿಂದೆ ರಾಜ್ಯಂ ಗೆಯ್ದನು ||

ಅರಸ ಕೇಳಱುವತ್ತುನಾಲ್ಕು ದಂಪತಿಗಳ
ಧ್ವರದ ಋತ್ವಿಕ್ಕುಗಳ್ವೆರಸಿ ವೇದವ್ಯಾಸ
ಪರಮ ಋಷಿ ಗಂಗೆಯೊಳ್ ಜಲದೇವತೆಗಳನರ್ಚಿಸಿ ಮಂತ್ರಿತೋದಕವನು ।
ವರಪುಷ್ಪ ಪಲ್ಲವದ ಪೊಂಗಳಸಮಂ ತುಂಬಿ
ಕರದೊಳನಸೂಯೆಗೀಯಲ್ಕವಳರುಂಧತಿಯ
ಶಿರಕೆ ಪೊಱಿಸಿದಡಾಕೆ ರುಕ್ಮಿಣಿಯ ಸಿರಿಮುಡಿಯೊಳಿರಿಸಿ ನಗುತಿಂತೆಂದಳು || ೧

ದೇವಿಸಿರಿಮುಡಿಗಲರ್ ಪೊಱಿಯಹುದು ನಿನಗೆ ನೀ
ರ್ದೀವಿರ್ದ ಪೊಂಗಳಸಮಿದು ತಿಣ್ಣಮಾಗದೆಂ
ದಾ ವಸಿಷ್ಠನ ರಮಣಿ ರುಕ್ಮಿಣಿಗೆ ವಿನಯದಿಂ ನುಡಿಯಲ್ಸುಭದ್ರೆ ಕೇಳ್ದು ।
ಗೋವರ್ಧನವನಾಂತ ವಿಶ್ವಕುಕ್ಷಿಯನೆದೆಯೊ
ಳಾವಗಂ ಧರಿಸಿಕೊಂಡಿರ್ದ ಮಾನಿನಿಗೆ ಬಿ
ಣ್ಣಾಪುದು ಪತಿವ್ರತಾಧರ್ಮಮಿದಕಳುಕಲೇತಕೆ ತಾಯೆ ನೀನೆಂದಳು || ೨

ನಸುನಗುತರುಂಧತಿಗೆ ಬಳಿಕ ರುಕ್ಮಿಣಿ ನುಡಿದ
ಳುಸುರಲಂಜುವೆನೀ ಸುಭದ್ರೆಯ ವಿಶೇಷ ಗುಣ
ದೆಸಕಮಂ ನಮ್ಮಂತೆ ಬಿಡದೆ ರಮಣನನೆದೆಯೊಳಾವಗಂ ಧರಿಸಳೊಮ್ಮೆ ।

---

ಸೂ.ಪ ಸಾ. ೧ : ಮೂಜಗಂ ದಣಿಯೆ (ಎಲ್ಲ ಹಸ್ತಪ್ರತಿಗಳು); ಮೂಜಗಂ ತಣಿಯೆ (ಪ್ರ.ರ.).

ಪ. ೨: ಸಾ. ೩ : ವಸಿಷ್ಠನ ರಮಣಿ (ಖ ಹೊರತು ಎಲ್ಲ); ವಸಿಷ್ಠನ ರಾಣಿ (ಖ)
ಸಾ. ೬ : ಅಳುಕಲ್ಯಾತಕೆ (ಚ, ಥ, ದ)

ಪ. ೩: ಸಾ. ೧ : ರುಕ್ಮಿಣೀ ಸತಿ ನುಡಿದ (ಖ); ಬಳಿಕ ರುಕ್ಮಿಣಿ ನುಡಿದ (ಉಳಿದೆಲ್ಲ ಪ್ರತಿ)

ಬಸದಡೆ ವಿಚಾರಿಸುವಳೊಲ್ಲದಡೆ ವಲ್ಲಭನ
ಘಸಣೆಯಂ ಬಾರಳು ಪತಿವ್ರತಾಧರ್ಮದೊಳ್
ಪೊಸತೆಂದು ಸರಸಮಂ ಮಾಡುತ್ತೈದೆಯರೊಡನೆ ಪೊಂಗಳಸಮಂ ತಾಳ್ದಳು || ೩

ಅಱುವತ್ತುನಾಲ್ಕು ದಂಪತಿಗಳೊಪ್ಪುವ ಗಂಗೆ
ದೊಱೆಯಿಂದ ಬಳಿಕ ಮುಖ ಮಂಟಪಕೆ ನೀರ್ದುಂಬಿ
ಮೆಱೆವ ಪೊಂಗಳಸಂಗಳಂ ಕೊಂಡು ಬಂದರುತ್ಸವದಿಂದ ಮುನಿಗಳೊಡನೆ ।
ಕಱೆದುವನಿಬರ ಮೇಲೆ ಮುತ್ತುಗಳ ಸೇಸೆಗಳ್
ನೆಱೆಮೊಳಗಿದುವು ಸಕಲ ವಾದ್ಯಂಗಳಭ್ರದೊಳ್
ತುಱುಗಿತನಿಮಿಷವಿತತಿ ಕೌತುಕಕೆ ನೆರೆದುದು ಮಹಾಜನಂ ಮೇದಿನಿಯೊಳು || ೪

ಆ ಪುಣ್ಯ ಸಲಿಲದಿಂ ಶೇಚನಂಗೈದೆಸವ
ಯೂಪದೊಳ್ಕಟ್ಟಿ ಪೂಜಿಸಿದರ್ಮಹಾಶ್ವಮಂ
ಭೂಪನುಂ ದ್ರೌಪದಿಯುಮಭಿಷಿಕ್ತರಾದರ್ ಸುಮಂತ್ರಿತ ಜಲಂಗಳಿಂದ ।
ವ್ಯಾಪಿಸಿದ ವಿಧಿವಿಧಾನಗಳಿಂದಾವುದುಂ
ಲೋಪಮಿಲ್ಲದೆ ನಡೆಯತೊಡಗಿತು ಮಹಾಧ್ವರಂ
ತಾಪಸಪ್ರತತಿ ಸಂದಿಗ್ಧಂಗಳಂ ತಿಳಿದು ಸನ್ಮತದೊಳಹುದೆನಲ್ಕೆ || ೫

ಬಂದ ಮುನಿಗಳ ಕಾಲ್ಗಳಂ ತೊಳದು ಸತ್ಕಾರ
ದಿಂದ ಪೂಜಿಸಿ ನಿವಾಸಸ್ಥಾನಮಂ ಕೊಟ್ಟು
ವಂದಿಸುವನಚ್ಯುತಂ ತಾನೆ ಕುಳ್ಳಿರ್ಪಡಾಸನವನೀವಂ ಸಾತ್ಯಕಿ ।
ಚೆಂದದ ಸುಕರ್ಪೂರ ಕುಸುಮತಾಂಬೂಲಂಗ
ಳಿಂದಲಂಕರಿಸುವಂ ಪ್ರದ್ಯುಮ್ನನವರವರ
ಮಂದಿರಕೆ ಬೇಕಾದ ವಸ್ತುಗಳನೊದವಿಸುವನಡಿಗಡಿಗೆ ಸಹದೇವನು || ೬

ಸಕಲಜನಜಾಲಮಂ ತಾರತಮ್ಯವನಱಿದು
ನಕುಲನಾದರಿಸುವಂ ಪಗಲಿರುಳ್ ಪರಿಮಳೋ
ದಕಮನಳವಡಿಸುವಂ ಕರ್ಣಸುತನೆಲ್ಲರಾರೈಕೆ ಹೈಡಿಂಬಿಗಾಯ್ತು ।
ಶಕಟಸಂದೋಹದಿಂ ಪೂಡಿಸುವ ಸಂಭಾರ
ನಿಕರಕಧಿಪತಿಯಾದನನಿರುದ್ಧನನ್ನ ವಾ
ಟಿಕೆಗಳೊಳ್ ಪಾಕಮಂ ಮಾಡಿಸುವ ಮಣಿಹಮಂ ಕೃತವರ್ಮಕಂ ತಾಳ್ದನು || ೭

ಯೋಜನತ್ರಯದ ಚಪ್ಪರದೊಳೆಡೆವಿಡದೆ ನಾ
ನಾಜನಕೆ ಬೇಕಾದ ಷಡುರಸದ ಮೃಷ್ಟಾನ್ನ
ಭೋಜನಮನೈದೆ ಮಾಡಿಸುತಿಹುದು ಸಾಂಬಾದಿಯಾದವರ್ಗಾಯ್ತು ಬಳಿಕ ।

---

ಸಾ. ೫ : ಗಸಣೆಯಂ (ಝ, ತ, ಪ್ರ, ರ); ಘಸಣೆಯಂ (ಉಳಿದೆಲ್ಲ ಪ್ರತಿ)
ಸಾ. ೬ : ಸಮ್ಮತದೊಳಹುದೆನಲ್ಕೆ (ಝ, ಕ, ಪ್ರ, ರ); ಸನ್ಮತದೊಳಹುದೆನಲ್ಕೆ (ಕ, ಖ, ಚ, ಥ, ಘ).
ಪ. ೬: ಸಾ. ೧ : ಬಂದ ಮುನಿಗಳ ಪಾದಮಂ (ಪ್ರ, ರ).
ಪ. ೮: ಸಾ. ೨ : ಷಡುರಸದ ಶಾಲ್ಯನ್ನ (ಝ, ಕ, ಪ್ರ, ರ); ಷಡುರಸದ ಮೃಷ್ಟಾನ್ನ (ಕ, ಖ, ಗ, ಚ, ಘ).

ಶ್ರೀಜನಾರ್ದನನ ಸಾನ್ನಿಧ್ಯವಾಗಿರೆ ಧರ್ಮ
ರಾಜನ ಮಹಾಧ್ವರಂ ಸಾಂಗವಾಗದೆ ಮೇಣ್ಪ
ರೋಜನಾಭಂ ತಾನೆ ಯಜ್ಞಸ್ವರೂಪನಲ್ಲವೆ ಭೂಪ ಹೇಳೆಂದನು ॥ ೮

ಸುರೆಯದೊಂದಲ್ಲದೆ ಪಯೋನಿಧಿಯನಾರನಾ
ಕರುಷಣಂಗೈದರೆನೆ ಸುರಸಂಗಳೆಸೆಯೆ ಕುಲ
ಗಿರಿಗಳಂ ನಗುವಂತೆ ಮಿಱುಪ ಶಾಲ್ಯೋದನದ ರಾಸಿಗಳ್ ಕಂಗೊಳಿಸಲು ।
ಪರಿಪರಿಯ ಭಕ್ಷ್ಯ ಪಾಯಸ ವಿವಿಧ ಶಾಖಾದಿ
ಪರಿಕರವದೆಂತೊದಗಿದವೊ ಕೃಷ್ಣ ಸುರಭಿ ತಾಂ
ಪೊರೆಯೊಳಿರಲರಿದಾವುದೆಂಬಿನಂ ದಣಿಯುಂಡರಾ ಮುಖದೊಳಖಿಳಜನರು ॥ ೯

ಊಟದ ಸುಗಂಧಾನುಲೇಪನದ ಕರ್ಪುರದ
ಪೀಟಿಕಾವಳಿಯ ಮಾಲ್ಯಾಂಬರ ವಿಭೂಷಣದ
ಮೀಟು ಸಿಂಗರದಿಂಪುವಡದು ಮಿಗೆ ಬಯಸಿ ಬಯಸಿದ ಸುವಸ್ತುಗಳನಿತ್ತು ।
ಪಾಟಿಸುವ ಭೀಮ ಫಲುಗುಣರ ಸನ್ಮಾನದ ಸ
ಘಾಟಿಕೆಯ ನೃಪಕುಲದ ಪುಣ್ಯ ಮುನಿಗಳ ಯಜ್ಞ
ವಾಟದತಿ ಕೌತುಕದ ಮಾಳ್ಕೆಯಂ ಕಂಡು ನಲಿದಾಡಿತು ಜನಂ ಮುದದೊಳು ॥ ೧೦

ಹೇಮ ವಸ್ತ್ರಾಭರಣ ಮುಕ್ತಾಫಲಂಗಳಂ
ಸಾಮಜ ತುರಂಗ ರಥ ರತ್ನಜಾಲಂಗಳಂ
ಗೋಮಹಿಷಿ ದಾಸದಾಸೀ ನಿಕರಮಂ ಮೃಗಾಜಿನ ಕಂಬಳಾದಿಗಳನು ।
ಚಾಮರವ್ಯಜನಾತಪತ್ರಯಾನಂಗಳಂ
ಭೂಮಿಗಳನಗರು ಚಂದನ ಮುಖ್ಯ ವಸ್ತುವಂ
ಭೀಮ ಫಲುಗುಣರಖಿಳಯಾಚಕಾವಳಿ ದಣಿಯೆ ಕೊಡುತಿರ್ದರಾದರದೊಳು ॥ ೧೧

ಯಾಗದೀಕ್ಷೆಯ ನೃಪಂ ಮಂತ್ರವಾರಿಸ್ನಾತ
ನಾಗಿ ಬಳಿಕನುಪಮ ಸುಪರ್ಣಚಯನದ ಪೊರೆಗೆ
ಪೋಗಿ ಹಯಮಂ ತರಿಸಲುಜ್ವಲಿಸುವಗ್ನಿ ಪಶುವಾದುದೆಂದಭಿವಂದಿಸಿ ।
ಮೇಗೆ ಶ್ರುತಿವಾಕ್ಯಂಗಳಂ ಪಠಿಸುತೆಲೆ ಘೋಟ
ಪೋಗು ನೀನಶ್ವಲೋಕದೊಳಮರ ಪದಮಪ್ಪು
ದೀಗ ನಿನಗೆಂದೆಂದು ಮಳಿವಿಲ್ಲದುತ್ತಮದ ಸ್ವರ್ಗಮಂ ಪಡೆಯೆಂದನು ॥ ೧೨

---

ಪ. ೯: ಸಾ. ೬ : ತಣಿದುಂಡರಾಮುಖದೊಳಖಿಳ ಜನರು (ಪ್ರ, ರ).

ಪ. ೧೦: ಸಾ. ೨ : ಮಾಲ್ಯಾಂಬರಾಭರಣಗಳ (ಖ) ; ಮಾಲ್ಯಾಂಬರ ವಿಭೂಷಣದ (ಮಿಕ್ಕೆಲ್ಲ ಪ್ರತಿ).

ಸಾ. ೪ : ಸತ್ಕಾರದ ಸಘಾಟಿಕೆ (ಖ) ; ಸನ್ನಾಹದ ಸಘಾಟಿಕೆ (ಘ, ಛ); ಸನ್ಮಾನದ ಸಘಾಟಿಕೆ (ಉಳಿದೆಲ್ಲ ಪ್ರತಿ).

ಪ. ೧೨: ಸಾ. ೨ : ಸುವರ್ಣಚಯನದ (ಕ, ಖ, ಚ, ದ, ರ) ; ಸುಪರ್ಣಚಯನದ (ಪ್ರ, ಘ, ಛ, ಝ, ತ).

ಸಾ. ೩ : ಪಶುವಾದುದೆಂದಭಿನಂದಿಸಿ (ಛ); ಪಶುವಾದುದೆಂದಭಿರ್ವಂದಿಸೆ (ಖ) ; ಪಶುವಾದುದೆಂದಭಿವರ್ಧಿಸೆ (ಝ, ತ, ದ) ; ಪಶುವಾದುದೆಂದಭಿವರ್ಧಿಸಿ (ಘ, ಚ, ಕ) ; ಪಶುವಾದುದೆಂದಭಿವರ್ಣಿಸೆ (ರ).

ನೃಪನ ಮಾತಂ ಕೇಳ್ದು ವಾಜಿ ತಲೆಗೊಡಹಿ ಮುರ
ರಿಪುವನೀಕ್ಷಿಸುತಭಿಪ್ರಾಯಮಂ ಪ್ರೀತಿಯಿಂ
ವಿಪುಳಮತಿ ನಕುಲಂಗೆ ಸೂಚಿಸಿದಡಾತನದಱಿಂಗಿತವನಱಿದು ಬಳಿಕ ।
ತಪನಸುತನಂದನಂಗೆಂದನವಧರಿಸು ಹಯ
ಮುಪರಿಲೋಕದೊಳಶ್ವ ಪದವಿಯಂ ತಾನೊಲ್ಲೆ
ನುಪಮೆಗೈದದ ಕೃಷ್ಣಸಾಯುಜ್ಯಮಂ ಪಡೆವೆನೆಂದೆಂಬುದೆನ್ನೊಳೆಂದು ॥ ೧೩

ಫಣಿಶಯನ ಸಾನ್ನಿಧ್ಯಮಿನಿತಿಲ್ಲದೀಶ್ವರಾ
ರ್ಪಣಮಲ್ಲದನ್ಯ ಯಜ್ಞಂಗಳೊಳು ಮಡಿದ ಪಶು
ಗಣಕೆ ಮೇಣಾ ಕರ್ತೃಗಳ್ಗತಿಶಯಸ್ವರ್ಗಭೋಗಮಾದಪುದು ನಿನ್ನ ।
ಪ್ರಣುತ ಸತ್ಕ್ರತು ಫಲಂ ಶ್ರೀಕಾಂತನಾದ ಕಾ
ರಣದಿಂದ ಕೃಷ್ಣನ ಶರೀರಮಂ ಪೊಗುವೆ ನೀ
ಕ್ಷಣದೊಳಿದನೆಲ್ಲರುಂ ನೋಡಲೆನುತಿದೆ ತುರಗಮೆಂದು ನಕುಲಂ ನುಡಿದನು ॥ ೧೪

ತುರಗದಂತರ್ಭಾವಮಂ ತಿಳಿದು ನಕುಲನಿಂ
ತರಸಂಗೆ ಬಿನ್ನಪಂ ಗೈವುದಂ ಕೇಳ್ದಖಿಳ
ಧರಣೀಶ್ವರರ್ ಮುನಿಗಳಂಗನಾನಿಕುರುಂಬ ಮಾಶ್ಚರ್ಯಮಂ ನೋಡಲು ।
ನೆರೆದುದು ಸುಮಂತ್ರಿತದ ಯೂಪದೊಳ್ಕಟ್ಟಿದ
ಧ್ವರ ಹಯವನಭಿಮಂತ್ರಿಸಿದರಚ್ಯುತನ ಮುಂದೆ
ಪರಮ ಋಷಿಗಳ್ಬಳಿಕ ಭೀಮನಂ ಕರೆದು ಮುದದಿಂ ಧೌಮ್ಯನಿಂತೆಂದನು ॥ ೧೫

ಈಕ್ಷಿಸಲಿ ಸಕಲ ಜನಮೆಲೆ ವೃಕೋದರ ನಾಂ ಪ
ರೀಕ್ಷೆಯಂ ತೋಱಿಸುವೆನೀ ತುರಂಗಮದೊಳೊಂ
ದೀಕ್ಷಣಂ ಖಡ್ಗಮಂಕೊಂಡು ನಿಶ್ಚಲನಾಗಿ ನಿಲ್ವುದೆಂದಾ ಧೌಮ್ಯನು ।
ಪ್ರೋಕ್ಷಿಸಿ ಕರಾಗ್ರದಿಂ ಪಿಡಿದು ಹಯದೆಡಗಿವಿಯ
ನಾಕ್ಷೋಭದಿಂ ಸೀಳಿದಡೆ ನೆತ್ತರಿಲ್ಲದೆ ಮ
ಹಾಕ್ಷೀರಧಾರೆ ಪೊಱಮಟ್ಟುದು ಸಮಸ್ತಲೋಕಂ ಕಂಡು ಬೆಱಗಾಗಲು ॥ ೧೬

ಮತ್ತೆ ಧೌಮ್ಯಂ ಭೀಮಸೇನನಂ ಕರೆದು ಪುರು
ಷೋತ್ತಮಂ ಪ್ರೀತನಪ್ಪವೊಲಿನ್ನು ಬಾಳಿಂದ
ಕತ್ತರಿಸು ಕುದುರೆಯ ತಲೆಯನೆಂದು ನೇಮಿಸಿದಡನಿಲಸುತನಾಕ್ಷಣದೊಳು ।
ಒತ್ತಿಡಿದ ವಾದ್ಯಘೋಷದೊಳಮರ ಭೇರಿಗಳ
ಬಿತ್ತರದ ಪರಿಪೂತ ವಾಜಿಶಿರಮಂ ಛೇದಿ
ಸುತ್ತಿರಲದಿಳೆಗೆ ಬೀಳದೆ ನಭಃಸ್ಥಳಕಡರ್ದಡಗಿತಿನಮಂಡಲದೊಳು ॥ ೧೭

ಪರಿಶುದ್ಧಮಾಗಿರ್ಪುದೀ ತುರಗಮೆಂದಱಿದು
ಹರಿಪೊಯ್ದನದನುರಸ್ಸ್ಥಳದೊಳುರ್ವಿಗೆ ಬಿದ್ದು
ದಿರದೆ ಪೊಱಮಟ್ಟ ಜೀವಾತ್ಮನತಿ ತೇಜದಿಂದಚ್ಯುತಾಸ್ಯದೊಳಡಗಲು ।

---

ಪ. ೧೩: ಸಾ. ೨ : ಅಭಿಪ್ರಾಯಮಂ ಪ್ರೀತಿಯಿಂ (ಕ, ಚ, ಛ, ಘ) ; ಅಭಿಪ್ರಾಯಮಂ ಮೋದದಿಂ (ಝ, ತ, ದ).

ಪ. ೧೫: ಸಾ. ೪ : ಸುಯಂತ್ರಿತದ ಯೂಪದೊಳ್ (ಖ); ಸುಮಂತ್ರಿತದ ಯೂಪದೊಳ್ (ಉಳಿದೆಲ್ಲ ಪ್ರತಿ)

ವರಮುನಿಗಳಮಳಧರ್ಮವಿದೆಂದರೆಲೆ ಯುಧಿ
ಷ್ಠಿರ ಪೂರ್ವಯುಗದಧ್ವರಂಗಳೊಳ್ ಕಾಣೆವೀ
ಪರಿ ಪವಿತ್ರದ ಪಶುವನಿದು ನಿನಗೆ ದೊರಕೊಂಡು ಮುಖ ಸಫಲವಾದುದೆಂದು || ೧೮

ಏವೇಳ್ವೆನಾಶ್ಚರ್ಯವಂ ಬಳಿಕ ವಾಜಿಯ ಕ
ಳೇವರಂ ಕರ್ಪೂರವಾದುದತಿ ಶುಭ್ರದಿಂ
ಭಾವಿಸಿ ಮಹಾಮುನಿಗಳಿದು ಕೃಷ್ಣಮಹಿಮೆಯೆಂದಾಗ ವಿಸ್ಮಿತರಾಗಲು ।
ಭೂವರಂ ಹರಿಸಹಿತ ಪತ್ನಿಯಂ ಕೂಡಿಕೊಂ
ಡಾವೇಷ್ಟಿಸಿದ ಸಕಲ ಬಾಂಧವರ ಗಡಣದಿಂ
ಪಾವಕನ ಮುಂದೆ ಕುಳ್ಳಿರ್ದನದಱಿಂದ ಹೋಮಂಗಳಂ ಮಾಡಿಸುವಡೆ || ೧೯

ಧಾರುಣಿಗೆ ಕುಪ್ಪಳಿಸಿದಾ ತುರಗದೊಡಲ ಕ
ರ್ಪೂರವಂ ಸ್ರುವದಿಂದ ಸಂಗ್ರಹಿಸಿ ಶಾಸ್ತ್ರ ಪ್ರ
ಕಾರದಿಂದಾಗ ವೇದವ್ಯಾಸಮುನಿಪನಮರೇಂದ್ರನಂ ಕರದು ಬರಿಸಿ ।
ಈ ರಾಜಕುಲತಿಲಕನಧ್ವರದೊಳೀವ ಘನ
ಸಾರಾಹುತಿಯನಿದಂ ಸ್ವೀಕರಿಸು ಮುಂದೆ ನಿನ
ಗಾರುಂ ಕೊಡುವರಿಲ್ಲ ಕಲಿಯುಗದೊಳೀ ತೆಱದೊಳೆನೆ ಶಕ್ರನಿಂತೆಂದನು || ೨೦

ಸರ್ವನಕ್ಷತ್ರ ಸಂಯುತದ ಗುರುವಾರ ಮಾ
ಗಿರ್ಪುದಿಂದೆಲೆ ಮುನೀಶ್ವರ ಮಹೀಪಾಲಂ ಸ
ಮರ್ಪಿಸುವ ಘನಸಾರದಾಹುತಿಯನಗ್ನಿಮುಖದಿಂದ ನೀನಿತ್ತಡೆ ।
ದರ್ಪದಿಂ ತೃಪ್ತನಾದಪೆನೆಂದು ಸುರಪನೆ
ಲ್ಲರ್ಪೊಗಳೆ ಪ್ರತ್ಯಕ್ಷವಾಗಿ ಬಂದಿರಲಾಗ
ಕರ್ಪೂರವಂ ಸ್ರುವದೊಳನಲನೊಳ್ ಬೇಳಿದಂ ವ್ಯಾಸಮುನಿ ಮಂತ್ರದಿಂದ || ೨೧

ಪ್ರತ್ಯಕ್ಷವಾದ ಶಕ್ರಾದಿ ದೇವತೆಗಳ್ಗೆ
ಶ್ರುತ್ಯುಕ್ತ ಮಂತ್ರವಿಧಿಗಳ ವಿಧಾನಂಗಳಿಂ
ದತ್ಯಧಿಕ ಘನಸಾರದಾಹುತಿಗಳಂ ಯಥಾಕ್ರಮದಿಂದ ಹುತವಹನೊಳು ||
ಸತ್ಯಸಂಪನ್ನ ವೇದವ್ಯಾಸನೀಯಲ್ಕೆ
ಸತ್ಯಾಹದಿಂ ಸವನಸವನದೊಳ್ ವಿರಚಿಸುವ
ಕೃತ್ಯಂಗಳಿಂದ ನಡದುದು ಮುಖಂ ತ್ರಿಜಗದ ಚರಾಚರಂ ಮಿಗೆ ದಣಿಯಲು || ೨೨

ಸಾಕ್ಷಾತ್ ಸುಯಜ್ಞಸ್ವರೂಪನಂತರ್ಯಾಮಿ
ಸಾಕ್ಷಿಯಾಗಿರ್ದು ಮಾಡಿಸುವನಂ ಶ್ರೌತವಿ
ದ್ಯಾಕ್ಷಮನೆನಿಪ ಧೌಮ್ಯನೇ ಕರ್ಮಕರ್ತುವಿಂಶತಿ ಕಮಲ ಸಂಭವರನು ||
ಈಕ್ಷಿಸಿದ ಬಕದಾಲ್ಭ್ಯನೇ ಬ್ರಹ್ಮನಾಚಾರ್ಯ
ನೇ ಕ್ಷಿತಿ ಸುರಾರ್ಯ ವೇದವ್ಯಾಸನಧ್ವರಕೆ
ದೀಕ್ಷಿತನೆ ಯಮಜಂ ಮಹಾಮುನಿಗಳೇ ಋತ್ವಿಜರ್ ಪೊಸತಿದೆನಿಸದಿಹುದೆ || ೨೩

ಆಹುತಿಗಳಂ ಕೊಂಡು ಮಿಗೆ ತೇಜದಿಂದೊಪ್ಪ
ವಾ ಹುತವಹಜ್ವಾಲೆಗಳ ಪುಣ್ಯದರುಶನದೊ
ಳಾ ಹೋಮಧೂಮ ಸಂಸ್ಪರುಶನದೊಳಾಕರ್ಮಕೃತ ಸೋಮಪಾನದಿಂದ ||

---

ಪ. ೨೧: ಸಾ. ೪: ಸರ್ಪದಿಂ ತೃಪ್ತನಾದ (ಖ); ದರ್ಪದಿಂ ತೃಪ್ತನಾದ (ಉಳಿದೆಲ್ಲ ಪ್ರತಿ)

ಆ ಹೋತ್ರದುರುಮಂತ್ರ ಘೋಷಣಶ್ರವಣದಿಂ
ದಾ ಹವಿರ್ಗಂಧದಾಘ್ರಾಣದಿಂದಾ ಮುಖದೊ
ಳಾ ಹಿಮಕರಾಸ್ಯಯ ಲಲಾಮನೆಸದಂ ಪೂತನಾಗಿ ಸಂತೋಷದಿಂದ || ೨೪

ಯಾಗದಿಂ ದಣಿದು ಪಾವನವಾದುದಿಳೆ ಹವಿ
ರ್ಭಾಗದಿಂ ತುಷ್ಟಿವಡೆದುದು ದೇವತಾವಳಿ ಸ
ರಾಗದಿಂದಸುರಾರಿ ಸಂತುಷ್ಟನಾಗಿ ತೆಗದಪ್ಪಿ ಭೂಪಾಲಕಂಗೆ ||
ಈಗ ನಿನ್ನಧ್ವರಂ ಸಾಂಗದಿಂ ಸಂಪೂರ್ಣ
ವಾಗಿ ಮುಗಿದುದು ಮಾಳ್ಪುದವಭೃತಸ್ನಾನಮಂ
ಭಾಗೀರಥಿಯೊಳೆಂದು ನೇಮಿಸಿದನಖಿಳ ಮುನಿಜನಮೈದೆ ಕೊಂಡಾಡಲು || ೨೫

ವಿಪ್ರವಧೆ ಮೊದಲಾದ ಬಹುಪಾಪ ಸಂಚಿತಂ
ಕ್ಷಿಪ್ರದಿಂ ಪೋಗಿ ಪರಿಶುದ್ಧಮಹುದೆಂಬ ವೇ
ದ ಪ್ರಮಾಣದ ವಾಜಿ ಮೇಧಾವಭೃಥಮಂ ಮುನೀಶ್ವರರ್ ಮಾಡಿಸಲ್ಕೆ ||
ಸುಪ್ರಸನ್ನತೆಯಿಂದ ಸಾನ್ನಿಧ್ಯಮಾಗಿ ಬಿಡ
ದಪ್ರಮೇಯಂ ತಾನಿರಲ್ಕೆ ನೃಪಮೌಳಿ ಪರ
ಮಪ್ರೀತನಾಗಿ ತೊಳಗಿದನಧ್ವರಂ ಮುಗಿಯೆ ರಾಜ ಮುನಿಗಣದ ನಡುವೆ || ೨೬

ರಮಣಿಸಹಿತರಸನಭಿಷಿಕ್ತನಾದಂ ಯಥಾ
ಕ್ರಮದಿಂದ ಸೋಮಪಾನಂಗೈದರೆಲ್ಲರುಂ
ವಿಮಲಹೋಮಂಗಳ ಪುರೋಡಾಶ ಶೇಷಮಂ ಪೋಷಿಸಿದರುತ್ಸವದೊಳು |
ತಮತಮಗೆ ವಂದಿಗಳ್ ಕೊಂಡಾಡೆ ಗಾಯಕೋ
ತ್ತಮರೊಲಿದು ಪಾಡೆ ನರ್ತನದ ಮೇಳವದ ಸಂ
ಭ್ರಮದಿಂದ ವೀಣಾದಿ ವಾದಿತ್ರ ಘೋಷಮಂ ಮಾಡೆ ನೃಪವರನೆಸೆದನು || ೨೭

ವಿನುತ ರತ್ನಾದಿ ಶಿಖರಸ್ವಮಾಗಿರುತಿರ್ಪ
ಕನಕವೃಕ್ಷಮಂ ಕೊಟ್ಟನವನಿಪಂ ಬಕದಾಲ್ಭ್ಯ
ಮುನಿಗೆ ಬಳಿಕೊಂದೊಂದು ರಥಮನೊಂದೊಂದಿಭವನೀರೈದು ವಾಜಿಗಳನು |
ಅನುಚರಚತುಷ್ಟಯವನೊಂದೊಂದು ಕೊಳಗ ಮು
ತ್ತನುಪಮ ಸುವರ್ಣಶತಭಾರಮಂ ನೂಱು ಕಾಂ
ಚನ ವಿಭೂಷಿತ ಸುರಭಿಗಳನಿತ್ತು ಮನ್ನಿಸಿದನಖಿಳ ಋತ್ವಿಕ್ಕುಗಳನು || ೨೮

ಎಂತಖಿಳ ಋತ್ವಿಕ್ಕುಗಳನೊಲ್ದು ಮನ್ನಿಸಿದ
ನಂತಾದರಿಸಿದನೆಲ್ಲಾ ದ್ವಾರಪಾಲಕರ
ನಂತರಿಸದುಳಿದ ಮುನಿನಿಕರಕಿಚ್ಛಾದಾನಮಂ ಕೊಟ್ಟನುಚಿತದಿಂ |
ತಿಂತಿಣಿಸಿ ನೆರೆದಿಹ ಸಮಸ್ತ ಭೂ ನಿರ್ಜರರ
ಸಂತತಿಗಳಂ ದಣಿಸಿದಂ ಮಹಾಧನದಿಂದ
ನಂತರದೊಳರಸನುಪಚರಿಸಿದಂ ಚಂದ್ರಹಾಸಾದಿ ಪೃಥ್ವೀಶ್ವರರನು || ೨೯

---

ಪ. ೨೭: ಸಾ. ೬ : ವೀಣಾದಿ ವಿದ್ಯಶೃತಿಘೋಷ (ಖ); ವೀಣಾದಿತಾವಿಪ್ರಘೋಷ (ಕ, ಘ, ಚ);
ವೀಣಾದಿವಾದಿತ್ರಘೋಷ (ಉಳಿದೆಲ್ಲ ಪ್ರತಿಗಳು).

ಪ. ೨೮: ಸಾ. ೪ : ಅನುಪಮ ಚತುಷ್ಟಯ; ಅನುಚಯ ಚತುಷ್ಟಯ;
ಅನುಚರ ಚತುಷ್ಟಯ (ಉಳಿದೆಲ್ಲ ಪ್ರತಿ).

ಘೋಟಕ ಸಹಸ್ರಮಂ ಶತಶತ ಗಜಂಗಳಂ
ಕೋಟಿ ಪರಿಮಿತ ಸುವರ್ಣಂಗಳಂ ಮಣಿಮಯ ಕಿ
ರೀಟಾದಿ ಭೂಷಣಾವಳಿಗಳಂ ಕೊಟ್ಟಖಿಳ ಭೂಪಾಲರಂ ಮನ್ನಿಸಿ ।
ಪಾಟಿಮಿಗೆ ರುಕ್ಮಿಣೀದೇವಿ ಮೊದಲಾಗಿಹ ವ
ಧೂಟಿಯರ ವರ್ಗಮಂ ನೃಪತಿ ಸತ್ಕರಿಸಿದಂ
ಮಿಾಟೆನಿಪ ವಿವಿಧ ರತ್ನಾಭರಣ ರಾಜಿಗಳನಿತ್ತಲಂಕಾರದಿಂದ ॥ ೩೦

ನಯದೊಳರಸಂ ಬಳಿಕ ಭೂಪಾಲ ಮುನಿವರ ನಿ
ಚಯದಿಂದ ಸಕಲ ಜನಜಾಲದಿಂದೆಸವ ಮಣಿ
ಮಯ ಸಭಾಮಧ್ಯದೊಳ್ ದಿವ್ಯ ಸಿಂಹಾಸನದ ಮೇಲೆ ಮುರಹರನನಿರಿಸಿ ।
ಪ್ರಿಯದಿಂದಲಂಕಾರ ಪೂಜೆಗಳೊಳುಪಚರಿಸಿ
ಹಯಮೇಧ ಫಲವನಚ್ಯುತ ಕರದೊಳೀಯಲ್ಕೆ
ಜಯಜಯೆಂದುದು ಲೋಕವರಳ ಮಳೆಗಱೆದು ಮೊಳಗಿದುವು ಸುರದುಂದುಭಿಗಳು॥ ೩೧

ಬಳಸಿದ ಮಹೀಪಾಲರೊಡವುಟ್ಟಿದರ್ ಬಂಧು
ಬಳಗಂಗಳಖಿಳ ಮುನಿಮುಖ್ಯರುಪಚಿತರಾಗೆ
ನಳಿನಾಂಬಕನ ಕರದೊಳಧ್ವರದ ಸುಕೃತಮಂ ಕೊಟ್ಟು ತನ್ನಮಳ ಮುಖಕೆ ।
ಕಳಸಮಿಡೆ ಮೂಜಗಂ ಮಿಗೆ ತಣಿದು ಕೊಂಡಾಡ
ಲುಳಿದ ಯೂಪಂಗಳೊಳ್ ಕಟ್ಟಿರ್ದ ಪಶುಗಳಂ
ಕಳದೆಲ್ಲಮಂ ಬಿಡಿಸಿ ತೊಳಗಿಬೆಳಗಿದನಿಂದ್ರ ತೇಜದಿಂ ಮನುಜೇಂದ್ರನು ॥ ೩೨

ವಾಜಿಮೇಧಕ್ರತು ಸಮಾಪ್ತಮಾದುದು ಬಳಿಕ
ರಾಜಮುನಿ ನಿಕರಮಂ ಪ್ರಾರ್ಥಿಸಿ ವೃಕೋದರಂ
ರಾಜಿಸುವ ಕನಕಮಯ ಮಂಟಪದೊಳರುಣ ಕಂಬಳದ ಹಸೆಗಳ ಮಿಸುನಿಯ ।
ಭಾಜನದ ಕೆಲಬಲದ ರತ್ನದೀಪದ ಹೊನ್ನ
ಪೂಜೆಗಳ ಪನ್ನೀರ ಪರಿವಿಡಿಯಲೆಡೆಯಾಗೆ
ಭೋಜನಕೆ ಬೇಕಾದ ಭಕ್ಷಭೋಜ್ಯಾದಿಗಳನೊದವಿಸಿದನಾದರದೊಳು ॥ ೩೩

ನಾನಾ ವಿಧದ ರಸದೊಳೆಸವ ಪರಿಕರದನ್ನ
ಪಾನಾದಿ ಭಕ್ಷಭೋಜ್ಯಾವಳಿಗಳಿಂದ ಪವ
ಮಾನಾತ್ಮಜಂ ಮಹೀಸುರತತಿಯನಾದರಿಸಿ ಭೋಜನಾನಂತರದೊಳು ।
ಭೂನುತ ಸುಗಂಧ ಕರ್ದಮದಿಂದ ವಿದಿತ ಪ್ರ
ಸೂನಾವಳಿಗಳಿಂದ ವೀಟಿಕಾ ವಿಭವದಿಂ
ನಾನಾತಿಶಯದಿಂದ ಸತ್ಕರಿಸಿ ದಣಿಸಿದಂ ಪ್ರತಿದಿನಂ ಪ್ರೀತಿಯಿಂದ ॥ ೩೪

---

ಪ. ೩೦: ಸಾ. ೧ : ಶತರಥಗಜಂಗಳಂ (ಖ, ಝ, ತ); ಶತಶತಗಜಂಗಳಂ (ಉಳಿದೆಲ್ಲ ಪ್ರತಿ).
ಪ. ೩೪: ಸಾ. ೪–೫ : ವಿವಿಧ ಪ್ರಸೂನಾವಳಿಯ (ಖ) ; ವಿತತ ಪ್ರಸೂನಾವಳಿ (ಘ, ಛ, ಥ) ; ವಿದಿತ ಪ್ರಸೂನಾವಳಿ (ಚ, ಗ) ; ವಿದಿತ ಸನ್ಮಾನಾವಳಿ (ಕ)
ಸಾ. ೬ : ಪ್ರತಿದಿನಂ ಪ್ರೀತಿಯಿಂದ (ಖ, ಝ, ತ, ಛ, ಘ, ಥ, ಪ್ರ, ರ). ಪ್ರೀತಿಯಿಂ ಪ್ರತಿದಿನದೊಳು (ಉಳಿದೆಲ್ಲ ಪ್ರತಿ)

ಬಹಳ ಸನ್ಮಾನವುಂ ತಳೆದಖಿಳಭೂಸುರ ನಿ
ವಹಮೈದೆ ಕೊಂಡಾಡಿತಂಬುಜದಳಾಂಬಕನ
ಮಹಿಮೆಯುಂ ಧರ್ಮಜನ ಚರಿತವುಂ ಭೀಮನ ವಿಶೇಷ ಗುಣವುಂ ಪಾರ್ಥನ ।
ವಿಹಿತ ವಿಭವಂಗಳಂ ನಕುಲನ ವಿವೇಕವುಂ
ಸಹದೇವನುಚಿತವುಂ ಧೌಮ್ಯನ ವಿಚಾರವುಂ
ಮಹಿಯ ಮನ್ನೆಯರ ಮೈತ್ರಿಗಳಂ ಮುನೀಂದ್ರರಾಧಿಕ್ಯಮುಂ ತತ್ಕ್ರತುವನು ॥ ೩೫

ಬಕದಾಲ್ಭ್ಯ ಮೊದಲಾದ ಮುನಿಗಳಂ ಕೃಷ್ಣಾದಿ
ಸಕಲ ಭೂಪಾಲರಂ ಕೂಡಿಕೊಂಡವನೀಶ
ಮುಕುರನಧ್ವರ ಸಭಾಸ್ಥಾನದೊಳ್ ನಾನಾ ಸುಕಥೆಗಳಂ ಕೇಳುತಿರ್ದು ।
ವಿಕಸಿತ ಹೃದಯನಾಗಿ ಮುದದಿಂದ ಭೂದೇವ
ನಿಕರಕುಳಿದರ್ಥಂಗಳಂ ಚೆಲ್ಲಿ ವರಸಮಾ
ಧಿಕ ವೈಭವಂಗಳಿಂ ನಗರಪ್ರವೇಶವುಂ ಮಾಡಿದಂ ಸಂಭ್ರಮದೊಳು ॥ ೩೬

ಮೃಷ್ಟಭೋಜನದಿಂದ ಭೂರಿದಕ್ಷಿಣೆಗಳಿಂ
ದಿಷ್ಟದಾನದಲಾದ ವಸ್ತು ಸಂದೋಹದಿಂ
ತುಷ್ಟಿವಡೆದಖಿಳ ಭೂಸುರತತಿ ನರೇಂದ್ರನಂ ಪರಸಿ ಬೀಳ್ಕೊಂಡು ಬಳಿಕ ।
ಸೃಷ್ಟಿಗಾಶ್ಚರ್ಯವಾಗಿಹ ಯಜ್ಞವುಂ ಪೊಗಳು
ತಷ್ಟ ದಿಗ್ವಳಯದಾಶ್ರಮ ಜನಪದಂಗಳ್ಗೆ
ಹೃಷ್ಟತೆಯೊಳೈದಿದುದು ತನತನಗೆ ಪೊತ್ತ ಬಹುಧನದ ಭಾರಂಗಳಿಂದ ॥ ೩೭

ರೋಮಶ ವಸಿಷ್ಠ ಬಕದಾಲ್ಭ್ಯ ವೇದವ್ಯಾಸ
ವಾಮದೇವಾದಿ ಮುನಿ ಮುಖ್ಯರವನೀಶನಂ
ಪ್ರೇಮದಿಂ ಪರಸಿ ಮಾನಿತರಾಗಿ ಬೀಳ್ಕೊಂಡು ತಳರ್ದರಾಶ್ರಮಕೆ ಬಳಿಕ ।
ಭೂಮಿಪತಿಗಳನೆಲ್ಲರಂ ಸಕಲ ಯಾದವ
ಸ್ತೋಮ ಸಹಿತಂಬುಜದಳಾಕ್ಷನಂ ಸತ್ಕರಿಸಿ
ಭೀಮ ಪಾರ್ಥರನೊಡನೊಡನೆ ಕಳುಹಿ ಕಳುಹಿದಂ ನೃಪವರ ನವರವರ ನಗರಿಗೆ ॥ ೩೮

---

ಪ. ೩೫: ಸಾ. ೬ : ಮಹಿಯ ಮನ್ನೆಯರ ಮಂತ್ರಿಗಳ ಮೌನಿಗಳ ಮಂತ್ರಕ್ರಮವನು(ಉ) ; ಮಹಿಯ ಮನ್ನೆಯರ ಮಂತ್ರಿಗಳ ಚಾತುರ್ಯಮುಂ ಯಾಚಕರ ಸತ್ಕೃತವನು (1304) ; ಮಹಿಯ ಮನ್ನೆಯರ ಮಂತ್ರಿಗಳಂ ಮುನೀಂದ್ರರಾಧಿಕ್ಯಮುಂ ತತ್ಕ್ರತವನು (344, K. 25) ; ಮಹಿಯ ಮನ್ನೆಯರ ಸನ್ಮೈತ್ರಿಯುಂ ಮುನಿವರಾಧಿಕ್ಯಮುಂ ತತ್ಕ್ರತುವನು (ಐ) ; ಮಹಿಯಮನ್ನೆಯರ ಮೈತ್ರಿಗಳಂ ಮುನೀಂದ್ರರಾಧಿಕ್ಯಮುಂ ತತ್ಕ್ರತುವನು (ಉಳಿದೆಲ್ಲ ಪ್ರತಿ).

ಪ. ೩೬: ಸಾ. ೩ : ಮುಕುರನಧ್ವರ (ಕ, ಝ, ತ) ; ಮುಕುರದಧ್ವರ (ಖ); ಮುಕುಟನಧ್ವರ (ತ) ; ಮುಕುಂದನಧ್ವರ (ಘ).

ಪ. ೩೮: ಸಾ. ೬ : ಭೀಮಪಾರ್ಥರನೊಡನೊಡನೆ ಕಳುಹಿ ಕಳುಹಿದಂ ನೃಪನವರವರ ನಗರಿಗಳ್ಗೆ (ಝ, ತ—ಛಂದೋದೋಷವನ್ನು ತಪ್ಪಿಸಲು ಬೇರೆ ಪ್ರತಿಗಳ 'ನಗರಿಗೆ' ಎಂಬುದನ್ನು ಒಪ್ಪಿಕೊಂಡು ಈ ಪಾಠವನ್ನು ಸ್ವೀಕರಿಸಿದೆ) ; ಭೀಮಪಾರ್ಥರ ನೊಡನೊಡನೆ ಕಳುಹಿದಂ ನೃಪರನವರವರ ಪುರಕೆ (ಖ); ಭೀಮಪಾರ್ಥರ

ಸಂಭಾವಿಸಿದನಧ್ವರದೊಳೆಲ್ಲರಂ ಬಳಿಕ
ಸಂಭೋಗ ಮರ್ಜುನಂಗಾ ಪ್ರಮಿಳೆಯ ಕೂಡೆ
ಸಂಭವಿಸುವಂತೆ ನೇಮಿಸಿದನಿಭನಗರದೊಳ್ ಕುಂತಿಸಹಿತನುಜರೊಡನೆ ।
ಒಂಭತ್ತು ವರುಷ ಪರ್ಯಂತರದೊಳೈದೆ ಸುಖ
ದಿಂ ಭೂವಲಯದ ಸಾಮ್ರಾಜ್ಯಮಂ ಮಾಡುತಿ
ರ್ದಂ ಭೂವರಾಗ್ರಣಿ ಯುಧಿಷ್ಠಿರಂ ದೇವಪುರ ಲಕ್ಷ್ಮೀಶನಾಜ್ಞೆಯಿಂದ ॥ ೩೯

ಈ ಚತುರ್ದಶ ಭುವನದೊಳ್ ಪಾಂಡವಸ್ಥಾಪ
ನಾಚಾರ್ಯನೆನಿಸಿಕೊಂಬುದೆ ಪೆರ್ಮೆಯೆಂದು ಮನು
ಜೋಚಿತದ ಲೀಲೆಯಂ ತಳೆದ ಯಾದವ ಸಾರ್ವಭೌಮಂ ನಿಜಾನತರ್ಗೆ ।
ಭೂಚಕ್ರದೊಳ್ಪಸರಿಸುವ ಕೀರ್ತಿಲತೆಯ ಮಡ
ಲಾಚಂದ್ರಮಾಗಿರ್ಪ ತೆಱದಿಂದ ಕವಿಮತಿಗೆ
ಗೋಚರಿಸಿ ಕೃತಿಗೆ ನಾಯಕನಾದನಮರಪುರದೊಡೆಯ ಲಕ್ಷ್ಮೀಕಾಂತನು ॥ ೪೦

ಈ ಪರಿಯೊಳಾಶ್ವಮೇಧಿಕದ ವೃತ್ತಾಂತಮಂ
ತಾಪಸೋತ್ತಮನಾದ ಜೈಮಿನಿ ಮುನೀಶ್ವರಂ
ಭೂಪಾಲ ತಿಲಕ ಜನಮೇಜಯಂಗೊರೆದ ಸಂಗತಿಗಳಂ ಸಕಲ ಜನಕೆ ।
ವ್ಯಾಪಿಸಿದ ಸುಪ್ರೌಢಿ ಮೆಱೆಯೆ ಕನ್ನಡದ ಭಾ
ಷಾಪದ್ಧತಿಯೊಳಣ್ಣಮಾಂಕನ ಕುಮಾರ ಲ
ಕ್ಷ್ಮೀಪತಿಯ ಮುಖದಿಂದ ರಚಿಸಿದಂ ಕೃತಿಯಾಗಿಸುರಪುರದ ಲಕ್ಷ್ಮೀಶನು ॥ ೪೧

ಅಶ್ವಮೇಧಿಕ ಪರ್ವದಮಲ ಸತ್ಕಥೆ ಯೌವ
ನಾಶ್ವಾದಿ ನೃಪರ ಚರಿತಂ ಕೇಳ್ದ ಮಾನವ
ಗೈಶ್ವರ್ಯಮಾರೋಗ್ಯಮಾಯುಷ್ಯಮಭಿವೃದ್ಧಿ ಕಲಿನಾಶನಂ ಧರೆಯೊಳು ।
ಆಶ್ವೇತಕೀರ್ತಿ ಸುತಲಾಭ ಶತ್ರುಕ್ಷಯಂ
ಶಾಶ್ವತ ಸ್ವರ್ಗ ಭೋಗಂಗಳಾದಪುವು ಸ
ರ್ವೇಶ್ವರನ ಭಕ್ತಿ ದೊರಕೊಂಡಪುದು ದೇವಪುರ ಲಕ್ಷ್ಮೀಶನಾಜ್ಞೆಯಿಂದ ॥ ೪೨

ಉಪವನ ತಟಾಕ ಪ್ರತಿಷ್ಠೆ ದೇವಾಲಯ
ಪ್ರಪೆಗಳ ಸಕಲ ದಾನ ಧರ್ಮೋಪಕಾರ ವೇ
ದ ಪುರಾಣ ಶಾಸ್ತ್ರಶ್ರವಣದ ಪುಣ್ಯಕ್ಷೇತ್ರವಾಸ ತೀರ್ಥಸ್ನಾನದ ।

---

ನೊಡನೊಡನೆ ಕಳುಹಿದಂ ಯುಧಿಷ್ಠಿರಂ ದ್ವಾರಾವತಿಯ ನಗರಿಗೆ (ಕ, ಚ, ಗ); ಭೀಮಪಾರ್ಥರನೊಡನೊಡನೆ ಕಳುಹಿದಂ ಯುಧಿಷ್ಠಿರನವರವರ ನಗರಿಗೆ (ಪ್ರ, ರ).

ಪ. ೩೯: ಸಾ. ೬ : ಭೂವರಾಗ್ರಣಿ ಯುಧಿಷ್ಠಿರ (ಖ) ; ಭಾರತಾಗ್ರಣಿ ಯುಧಿಷ್ಠಿರ (ಪ್ರ, ರ, ಮತ್ತು ಉಳಿದೆಲ್ಲ ಪ್ರತಿ).

ಪ. ೪೦: ಸಾ. ೪–೫ : ಲತೆಯ ಮಾಡಲಾಚಂದ್ರಮಾಗಿರ್ಪ (ಖ) ; ಲತೆಯ ಮಂಡಲಾಚಂದ್ರಮಾಗಿರ್ಪ (ದ, ಥ) ; ಲತೆ ಮೂಡಲಾಚಂದ್ರಮಾಗಿರ್ಪ (ತ); ಲತೆಯ ಮಡಲಾಚಂದ್ರಮಾಗಿರ್ಪ (ಕ, ಝ, ಚ, ಫ). [ಈ ಯಾವ ಪಾಠವೂ ಶುದ್ಧ ಅಥವಾ ಸಾಧುವಾಗಿದ್ದಂತೆ ತೋರುವುದಿಲ್ಲ. ಲತೆ ಮಡಲ್ತಾಚಂದ್ರಮಾಗಿರ್ಪ ಎಂದಿರಬೇಕೆಂದು ಎನಿಸುತ್ತದೆ–ಸಂ.]

ಜಪಹೋಮ ಸುವ್ರತ ಸಮಾಧಿ ಯೋಗ ಧ್ಯಾನ
ತಪಸುಗಳ ಹರಿಹರಾರ್ಚನೆಯ ಸುಕೃತಂಗಳಾ
ದಪುವು ಜೈಮಿನಿ ಭಾರತದೊಳೊಂದು ವರ್ಣಮಂ ಪ್ರೀತಿಯಿಂ ಕೇಳ್ದವರ್ಗೆ || ೪೩

ತೊಳಗುವ ಸುವರ್ಣಭೂಷಣದಿಂದ ಸೊಗಯಿಸಿದ
ಲಲಿತ ಮುಕ್ತಾಭರಣದಿಂದ ಮಿಗೆ ರಂಜಿಸುವ
ಪಲವಲಂಕಾರಂಗಳಿಡಿದ ಚೆಲ್ವಿನ ದೇವಪುರದ ಲಕ್ಷ್ಮೀಕಾಂತನ ।
ವಿಲಸಿತದ ಕೃತಿಲಲನೆ ಮೃದುಪದ ವಿಲಾಸದಿಂ
ಸಲೆ ಸೊಗಸಲಡಿಗಡಿಗೆ ನಡೆಯಲ್ಕೆ ಚಿತ್ತಂ ಗ
ಳೊಲಿದೆಱಗದಿರ್ದಪುವೆ ಧರೆಯೊಳಗೆ ರಸಿಕರಾಗಿರ್ದ ಭಾವಕ ನಿಕರದ || ೪೪

ಲೋಕದೊಳಖಿಳ ಪುಣ್ಯಕರ್ಮದಿಂ ಧರ್ಮದಿಂ
ದೇಕಾಗುಮಾಗಿರ್ದ ಯೋಗದಿಂ ಯಾಗದಿಂ
ಭೂಕನಕ ಮಣಿಧೇನು ದಾನದಿಂ ಧ್ಯಾನದಿಂ ಪಡೆವ ಸದ್ಗತಿಯನೀವ ।
ಈ ಕಥೆಯನೊಲವಿಂದ ಪೇಳ್ವರ್ಗೆ ಕೇಳ್ವರ್ಗೆ
ಶೋಕಭಯ ದುಃಖಸಂತಾಪಮಂ ಪಾಪಮಂ
ನೂಕಿ ನಿರ್ಮಲಕರ ಸುಬುದ್ಧಿಯಂ ಸಿದ್ಧಿಯಂ ಹರಿಯಿತ್ತಪಂ ಕೃಪೆಯೊಳು || ೪೫

ಪುಣ್ಯಮಿದು ಕೃಷ್ಣಚರಿತಾಮೃತಂ ಸುಕವೀಂದ್ರ
ಗಣ್ಯಮಿದು ಶೃಂಗಾರ ಕುಸುಮತರು ತುಱುಗಿದಾ
ರಣ್ಯಮಿದು ನವರಸ ಪ್ರೌಢಿ ಲಾಲಿತ್ಯ ನಾನಾ ವಿಚಿತ್ರಾರ್ಥಂಗಳ ।
ಪುಣ್ಯಮಿದು ಶಾರದೆಯ ಸಮ್ಮೋಹನಾಂಗ ಲಾ
ವಣ್ಯಮಿದು ಭಾವಕರ ಕಿವಿದೊಡವಿಗೊದಗಿದ ಹಿ
ರಣ್ಯಮಿದು ಭೂತಳದೊಳೆನೆ ವಿರಾಜಿಪುದು ಲಕ್ಷ್ಮೀಪತಿಯ ಕಾವ್ಯರಚನೆ || ೪೬

ಅಂತು ಸಂಧಿ ೩೪ಕ್ಕೆ ಪದನು ೧೯[೦೯]ಕ್ಕೆ ಮಂಗಳ
ಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ ಶ್ರಿ ಶ್ರೀ

## ಸಮಾರೋಪ

Textual Criticism is divided into two processes: 1) Recension (recensio) and Emendation (emendatio).[1]

[ಗ್ರಂಥ ಸಂಪಾದನೆಯನ್ನು ಮಾಡುವಾಗ ಪಾಠಸಂಪ್ರದಾಯಗಳು ಮತ್ತು ಪಾಠತಿದ್ದುಪಡೆಗಳು ಇವುಗಳನ್ನು ಲಕ್ಷಿಸಿ ಗ್ರಂಥವನ್ನು ಸಿದ್ಧಪಡಿಸುತ್ತಾರೆ.]

ನಾವು ಜೈಮಿನಿ ಭಾರತದ ೫ ಸಂಧಿಗಳ ಪಾಠಸಂಕಲನವನ್ನು ಮಾಡಿಕೊಂಡಿದ್ದೇವೆ. ಆದರೆ ಇಷ್ಟರಮೇಲಿಂದ ಪಾಠಸಂಪ್ರದಾಯಗಳನ್ನು ಗುರುತಿಸಲು ಬರುವಂತಿಲ್ಲ. ಪಾಠಸಂಪ್ರದಾಯಗಳನ್ನು ಗುರುತಿಸುವ ದೃಷ್ಟಿಯಿಂದ ಇನ್ನು ಸಂಶೋಧನೆ ನಡೆಯುವುದು ಅವಶ್ಯವೆಂದು ತೋರುತ್ತದೆ.

ಜೈಮಿನಿ ಭಾರತ ಕಾವ್ಯದ ಅನೇಕ ಹಸ್ತಪ್ರತಿಗಳು ಮಿಶ್ರಪ್ರತಿಗಳ ಜಾತಿಗೆ

[1] *Introduction to Indian Textual Criticism*,— Dr. S. M. Katre.

(conflated text) ಸೇರುವುದರಿಂದಲೋ ಏನೊ ಪಾಠಸಂಪ್ರದಾಯಗಳನ್ನು ಗುರುತಿಸಲು ತೊಂದರೆಯಾಗುತ್ತದೆ. ಈಗ ನಾವು ಮಾದರಿಗಾಗಿ ಸಂಪಾದಿಸಿ ಕೊಟ್ಟಿರುವ ಎರಡು ಸಂಧಿಗಳು (೧ ಮತ್ತು ೩೪) ಪಾಠಸಂಪ್ರದಾಯಗಳನ್ನಾಧರಿಸಿ ಸಂಪಾದಿತವಾಗಿಲ್ಲ. ಅವನ್ನು ಪಾಠತಿದ್ದುಪಡೆಗಳನ್ನು ಅವಲಂಬಿಸಿ ಸಿದ್ಧಪಡಿಸಲಾಗಿವೆ. ಹೀಗೆ ಪಾಠತಿದ್ದುಪಡೆಗಳ ಆಧಾರದಿಂದಲೂ ಒಂದು ಜೈಮಿನಿ ಭಾರತ ಗ್ರಂಥವನ್ನು ಸಂಪಾದಿಸಿ ಕೊಡುವುದು ಸಾಧ್ಯ ಮತ್ತು ಅವಶ್ಯ ಎಂದು ತೋರುತ್ತಿದೆ.

ನಾವು ಮಾಡಿದ ಅಭ್ಯಾಸದಿಂದ ಈ ವರೆಗೆ ಪ್ರಚಾರದಲ್ಲಿ ಬಂದಿರುವ ಜೈಮಿನಿ ಭಾರತ ಕಾವ್ಯದಲ್ಲಿಯೂ ಇಲ್ಲದ ೧೭ ಹೊಸ ಪದ್ಯಗಳು (ಜೈ. ಭಾ. ಕೆಲವು ಹಸ್ತಪ್ರತಿಗಳಲ್ಲಿದ್ದವು ೧೦, ಕುವಲಯಾನಂದದ ಲಕ್ಷ್ಯಪದ್ಯಗಳಲ್ಲಿದ್ದವು ೭) ದೊರೆತುದು ಮುಖ್ಯವಾದ ಮತ್ತು ಸುದೈವದ ಮಾತಾಗಿದೆ. ಇವುಗಳನ್ನು ಪರಿಶಿಷ್ಟದಲ್ಲಿ ಕೊಟ್ಟಿದ್ದೇವೆ. ಸದ್ಯ ಇವನ್ನು ಪ್ರಕ್ಷೇಪಗಳೆಂದೇ ಕಂಡಿದ್ದೇವೆ.

ಹಸ್ತಪ್ರತಿಗಳ ಸ್ವರೂಪ, ಅವು ಕರ್ನಾಟಕದ ತುಂಬ ಹರಡಿದ್ದ ರೀತಿ, ಹಾಸನದ ಸುತ್ತುಮುತ್ತಣ ಒಳಹಳ್ಳಿಗಳಲ್ಲಿ (ಲಕ್ಷ್ಮೀಶನ ನೆಲೆವೀಡಿನ ಪ್ರದೇಶದಲ್ಲಿ) ಜೈಮಿನಿ ಭಾರತದ ಹಸ್ತಪ್ರತಿಗಳನ್ನು ಹುಡುಕುವುದು ಅಗತ್ಯ ಎಂಬ ಅಂಶವನ್ನು ಈ ಅಭ್ಯಾಸದಿಂದ ಕಂಡುಕೊಂಡಿದ್ದೇವೆ. ತಿದ್ದುಪಡೆ ಹೊಂದಿದ ಪಾಠಗಳಲ್ಲಿಯ ಉಚಿತ ಯಾವುದು ಅನುಚಿತ ಯಾವುದು ಎಂಬುದನ್ನು ಗಮನಿಸಿ ಪ್ರಾರಂಭದ ಮತ್ತು ಸಮಾಪ್ತಿಯ ಸಂಧಿಗಳನ್ನು ಸಿದ್ಧಪಡಿಸಿಕೊಟ್ಟಿದ್ದೇವೆ. ಪಾಠಸಂಪ್ರದಾಯಗಳನ್ನು ಆಧರಿಸಿ ಜೈಮಿನಿ ಭಾರತ ಕಾವ್ಯವನ್ನು ಸಂಪಾದಿಸುವ ಕಾರ್ಯ ಇನ್ನೂ ಆಗಬೇಕಾಗಿದೆ.

## ಕೆಲವು ಹೆಚ್ಚಿನ ಪದ್ಯಗಳು

### ೧. ಜೈಮಿನಿ ಭಾರತದ ಹಸ್ತಪ್ರತಿಗಳಿಂದ

ಪ್ರಚಲಿತ ಪ್ರತಿಗಳಲ್ಲಿಲ್ಲದ, ಹಲಕೆಲವು ಹಸ್ತಪ್ರತಿಗಳಲ್ಲಿ ಕಂಡುಬಂದ ಹತ್ತು ಪದ್ಯಗಳನ್ನು ಇಲ್ಲಿ ಕೊಟ್ಟಿದೆ.

ಸಂಧಿ ೧೮, ಪದ್ಯ ೩೪

ಸರಸಿಜಾಕ್ಷಿಯ ವದನದಿಂಗಿತವ ಮೇಲಿಕ್ಕಿ
ಬೆರಸಲಳುಕುವ ಮನವ ನಸುನೋಟದೋರೆಯೊಳು
ತರುಣಿಯಱಿಯದವೊಲುಱೆ ನೋಡಿ ನೋಟವನೊಲದನಾಕ್ಷಣದೊಳಾಜಾಣ್ಮೆಯ ।
ತರುಣಿಯಱಿದೊಯ್ಯೊಯ್ಯನೈತರಲುಜವದಿ ಮುಂ
ಜಱಿಗ ಕರದಿಂ ಪಿಡಿದು ತೆಗದಪ್ಪಿ ಮುಂಡಾಡಿ
ನೆರದನನುರಾಗದಿಂದವನಿಜೆಯ ಮನವೊಲಿಯಲನುವಿಂದ ರಘುನಾಥನು ॥ ೩೪

ನಿಮಗೆ ಮನದೊಳ್ಸಂದೆಗಂ ಬಡದೆಮ್ಮ
ಕ್ರಮಮುಂ ನಿಧಾನಿಪುದು ಬಯಕೆಮಂತಲ್ಲದೆ
ರಮಣಿಗಾದುದು ಜನದ ಋಷಿಪತ್ನಿಯರ ಖೇಳಮೇಳದಿಂ ಮದರಿನಿಂದ ।
ಸಮತೆಯಿಂದಾಕೆಯಂ ಕಳುಹುಪುದು ವನಕಿದು
ತ್ತಮವೆಂದು ರಘುಜ ಸೌಮಿತ್ರಿ ಭರತಾದಿಗಳ
ಮಮತೆ ಮಿಗೆ ನೋಡಿದಂ ಮಾಡಿದಂ ಮನಕೆ ಸಂತಾಪಮುಂ ತನ್ನವರ್ಗೆ ॥ ೫೬

—(ಛ, ಗ)

೨೬ನೆಯ ಸಂಧಿ, ಪದ್ಯ ೨೪, ೨೫, ೪೬

ಕೆಲರು ಸಂಯೋಗದಿಂ ಕೆಲರು ವಿರಹಂಗಳಿಂ
ಕೆಲರು ಸದ್ವಿನಯದಿಂ ಕೆಲರು ಸತ್ಕಥೆಗಳಿಂ
ಕೆಲರು ಗೇಯಂಗಳಿಂ ಕೆಲರು ಹಾಸ್ಯಂಗಳಿಂ ಕೆಲರು ಕಾಮಾಗಮದೊಳು ।
ಕೆಲಬರನು ಲೇಪನದಿ ಕೆಲರು ತಾಂಬೂಲದಿಂ
ಕೆಲರು ಪಣ್ಫಲಗಳಿಂ ಕೆಲರು ನಿದ್ರೆಗಳಿಂದ
ಕೆಲಬರಾನಂದದಿಂ ಕೆಲರಾಡುತಿರುತಿರ್ದರಿಕ್ಕೆಲದ ಕೇರಿಗಳೊಳು ॥ ೨೪

ಇದಿರ ಪಾರಿವದಂತೆ ಗಳರವಂಗಳನೆಸಗು
ತಧರವಂ ಗಿಣಿಚೂತ ಪಣ್ಫಲವ ಕರ್ದುಕುವಂ
ತೊದವಿದನುಬಂಧಗತಿಗುಭಯವಯವಂಗಳಂ ಸಾಧನಾಧಿಕಗಳಿಂದ ।
ಚದುರೋಜೆ ಲಲ್ಲೆಯಾಲಿಂಗನ ಸಚುಂಬನಂ
ಮೃದುತರತ್ತಾಡನ ಸುಂದತಕ್ಷತಂಗಳಿಂ
ಮದನಾಗಮವನಱಿದ ಗಣಿಕಾವಿಟರ ತಂಡ ಮುದವೀಯೆ ಹರನರರ್ಗೆ ॥ ೨೫

—(ಛ)

ಹರಿವಿಜಯರಂ ತರಣಿಯುದಯದೊಳ್ಕಂಡು ತವ
ಚರಣಕೆರಗುವೆನೆಂಬ ಮನಮಿತ್ತ ತಿರುಗಿ ಭೂ
ಸುರನೆ ಹರಿವಿಜಯ ಶಿಷ್ಯಂ ಭಾವವೆನಗೆಂದು ಪೊಕ್ಕನರಮನೆಯನವನು ।
ತುರಗ ಮೇಧಮುದಂತಿರಲಿ ತರುಣಿ ನಿಲ್ಲೆಂದು
ಪರಮಸಂತೋಷದಿಂ ದಾಯಮುಂ ಕಂಡು ಪಂ
ಕರುಹದಳನೇತ್ರನಂ ಧ್ಯಾನಿಸುತ ಮನದೊಳಗೆ ಸಂತಸಂಗೊಂಡನು ॥ ೪೬

—(ಛ, ಜ)

ಸಂಧಿ ೩೩, ಪದ್ಯ ೧೨

ವರರುಚಿರ ತಾಂಬೂಲ ಬಾರವೇಣಾಕ್ಷಿಯರ
ಗುರುಕುಚದ ಕಠಿಣವಾನಂದಾಶ್ರು ಬಿಸಿ ಬೆಚ್ಚು
ನೆರೆ ಕಾಣಿಸುವ ತೆಕ್ಕೆ ಬೆಚ್ಚಾಗಿ ತೆರನಾಲ್ಕುನನುದಿನಂ ಜನಮರೆಯದೆ ।
ಇರುತಿರ್ದುದೀ ಪರಿಯೊಳೆಂದು ದಾನವವೈರಿ
ವಿರಚಿಸಿದರಾಗ ಭೂಪಾಲ ಸಂತೋಷದಿಂ
ಪರಿಯೆ ಮನಮಧ್ಸರ [ದ] ಹರಿಯೆತ್ತ ಹರಿಹರುಷದಿಂ ಪೇಳ್ದನು ॥ ೧೨

—(ದ)

ಸಂಧಿ ೩೪, ಪದ್ಯಗಳು ೩೯, ४೦, ४೧, ४೨

ಧೃತರಾಷ್ಟ್ರ ಗಾಂಧಾರಿ ವಿದುರ ಮುಜ್ಜನನಿಯನು
ಮತದಿಂದ ಸಿಂಧುದೇಶಕೆ ಪೋಗಿ ನೀಂ ನಿನ್ನ
ಸುತನ ಸಾಮ್ರಾಜ್ಯಮಂ ನೋಡೆಂದು ಧರ್ಮಜಂ ಕಳುಹಿದಂ ಸೌಬಲಸುತೆಯ ।
ಸುತೆಯ ನಾ ಯಮುಸೂನುವಾಗ ಸಮ್ಮುಖಕೆ ತ
ತ್ಸತಿಯರೊಡನೈತಂದು ನಿಂದಳ್ ಪ್ರಮೀಳೆ ಸಿರಿ
ಪತಿ ನಿಯಾಮಿಸಿದನಾ ಯಮಜಂಗೆ ಫಲುಗುಣಂಗೀಕೆ ವಧುವಾಗಲೆಂದು ‖ ೩೯

ದೇವ ನೀನಾವಪರಿಯಿಂದಲೆಮ್ಮವನು ನೀ
ಜೀವಿಸುವುದೇ ಬಯಕೆ ವಿಷವಧುವನೀಕೆಯನ
ದಾವ ಪರಿಯಿಂದಲರ್ಜುನನಾಳ್ವನೆನಲಾಕೆಯಂ ದೇವನೀಕ್ಷಿಸಲ್ಕೆ ।
ದೇವತ್ವಮವಳ ತಟು ನಿಂದಿರಲ್ ಧೃತರಾಷ್ಟ್ರ
ದೇವಿ ಗಾಂಧಾರಿ ವಿದುರಾದಿಗಳ್ ನೋಡಿ ರಾ
ಜೀವನಾಭಂ ಹಸ್ತಿನಾವತಿಯೊಳಿರಿ ಸುಖದೊಳೆಂದು ಕರುಣದಿ ನುಡಿದನು ‖ ४೦

ಅರಸು ಮಾರುತಿ ವಿಜಯ ನಕುಲ ಸಹದೇವರಂ
ಬರಸೆಳದು ತಕ್ಕೈಸಿ ಧೃತರಾಷ್ಟ್ರ ಸೌಬಲ ಸುತೆ
ಯರ ಕುಂತಿ ದ್ರೌಪದಿ ಸುಭದ್ರೆ ವಿದುರಾದಿಗಳ ಮನ್ನಿಸಿದುದಾರುಕಂಗೆ ।
ತರುಣಿಯರ ಪ್ರದ್ಯುಮ್ನ ದೇವಕಿ ಯಶೋದೆಯರ
ತೆರಳಲನುಗೈಯಲೆಂದರುಹಿ ದಾನವವೈರಿ
ತಿರುಗಲನುವಾಗೆ ಕೂಡಿತು ಸಕಲ ಚತುರಂಗಭೂಮಿ ಬೆಸಲಾದಂತಿರೆ ‖ ४೧

ದನುಜಹರ ಮತ್ತೆ ಯಮ ತನುಜನಂ ನೋಡಿ ಮನ
ದನುತಾಪ ಬೇಡಾವು ಪುರಕೆ ಮರಳಿದರೆಂದು
ನೆನೆದ ಮಾತ್ರದಿ ನಿನ್ನ ಬಳಿಯೆ ನಿಂದಿಹೆನೆಂದು ನಯದೊಳೊಡಂಬಡಿಸಿ ಪೊನ್ನ ।
ಮಿನುಗುವಂದಣ ಮುಖದ ಕುದುರೆ ನಿಂದಿರಲು ಘು
ಮ್ಮನೆ ವಾಜಿಯಾರೋಹಣಂಗೈದು ತೆರಳ್ದನಾ
ವನಜಾಕ್ಷ ನತರಕ್ಷ ಖಳಶಿಕ್ಷ ದೇವನೂರೊಡೆಯ ಲಕ್ಷ್ಮೀಕಾಂತನು ‖ ४೨

—(ದ, ಥ)

## ೨. ಕುವಲಯಾನಂದದ ಹಸ್ತಪ್ರತಿಯಿಂದ

ಕುವಲಯಾನಂದದಲ್ಲಿ ಲಕ್ಷಣ ಪದ್ಯಗಳೆಂದು ಕೊಡಲಾದ ಜೈಮಿನಿ ಭಾರತದ ಪದ್ಯಗಳ ಪೈಕಿ ಒಂಬತ್ತು ಪದ್ಯಗಳು ಪ್ರಚಲಿತ ಪ್ರತಿಗಳಲ್ಲಾಗಲಿ ನಮ್ಮ ಯಾವ ಹಸ್ತ ಪ್ರತಿಯಲ್ಲಾಗಲಿ ಕಂಡುಬರಲಿಲ್ಲ. ಆ ಏಳನ್ನು ಇಲ್ಲಿ ಕೊಡಲಾಗಿದೆ. ಇವುಗಳ ಬಗೆಗೆ ಜೈಮಿನಿ ಭಾರತದ ಪದ್ಯಸಂಖ್ಯೆಗಳನ್ನು ಚರ್ಚಿಸುವ ಸಂದರ್ಭದಲ್ಲಿ ಚರ್ಚಿಸಲಾಗಿದೆ.

ಮಡದಿಯರ ಮೈಗಂಪ ಸುಯ್ಗಂಪ ತಳದು ಸಿರಿ
ಮುಡಿಗೆ ಸುತ್ತಿದ ಮೊಲ್ಲೆ ಮಲ್ಲಿಗೆಯ ತನಿಗಂಪ
ತೊಡದು ಕುಚತಟದೆಡೆಯ ಯಕ್ಷಕರ್ದಮದ ನರುಗಂಪುಗಳನೊಸದು ತಂದು ।

ಸಡಗರದ ರಾಜಮಾರ್ಗಾಂತರದಿ ಸುಳಿವುತಿಹ
ಪೊಡವಿಪಕುಮಾರವರ್ಗಕೆ ತಂದು ಕೈಗಾಣ್ಕೆ
ಕೊಡುತಿರ್ದನಾ ಮಂದಮಾರುತಂ ಗಂಧವಿಡಿಪಸರಿಗನ ಸೊಂಪಿನಿಂದ || ೧*

ಲಾಲಿತ ಸುಧಾಸೂತಿ ವದನಾಂಶುವಂ[1] ಕುಮುದ
ಮಾಲೆಯಂ ವಿಕಸನಂಗೈದು ಮಘುಮಘಿಪ ಸ
ತ್ಕೀಲಾಲಜಾತ ಮುನಿಯಲ್ ಗೌರವರ್ಣ ಪ್ರಭಾಕಲಿತಕಾಯದಿಂದ ।
ಲೀಲೆಯೊಳ[ಮು]ರ್ಚಿ ಕಡೆಗಣ್ಗೊನೆಯ ಚಾಪಲವಿ
ಶಾಲ ರುಚಿಯಿಂದ ಸುರಹೊನ್ನೆಗಳ ಚನ್ನೆಗಳ
[2]ಕೀಲುಗಳ ದಿವರ್ನಿಶಾದಿವತೆ[3] ಪುನ್ನಾಗಮಂ ತಿಳಿಯದೋಲ್ ಕೋವಿದರ್ಗೆ || ೨

ಅರಿದು ಮಧುಪವ್ರಜ ಸಮಾಜದೊಡನಾಟಮಂ
ಮರೆದೈದೆ ಪಾದರಿಯ ಸಂಸರ್ಗಮಂ ತೊರೆದು
ಪುರುಕು ಜಾತಿಶಯ ಪ್ರಚಾರಮಂ ಜರದು ತಾಂ ಬಹುಳ ಭಂಗಂ ಪೊರ್ದದೆ ।
ತುರುಗಿದ ಸುಜಾತಿ ಪ್ರಮೋದಮಂ ಮನಗೊಂಡು
ಮಿರುವ ಸನ್ಮಾರ್ಗರತನಂತೆ ಪುರವೀಥಿಯೊಳು
[3]ಚರಿಸುತಿರ್ದಂ ಮಂದಮಾರುತಂ ಮೋದದಿಂದೊಯ್ಯೊಯ್ಯನುತ್ಸವದೊಳು || ೩

ದಿವಿಜರು ಹವಿರ್ಭಾಗವನು ಸವಿಯದಡೆ ರಮಾ
ಧವನು ವಡವಾನಲಾಶ್ರಯವಾದ ದುಗ್ಧಾರ್ಣ
ವವ ಸಾರದಡೆ ದಿನಪನಾಜ್ಞೆಯಂ ಮುಖವಾಗಿ ತಾ ನಡೆಯದಡೆಗೆಲ್ವನೇ ।
ಹಿವದ ಪೊರವಳವನೆಂಬಂತೆ ಲೋಕದಾಳುವಂ[4]
ಜವಘುವಿಸೆ ಕಂಜನಂ ಕೋಚತೆಯ ಪಡೆಯಲ್ಕೆ
ದಿವಸ ತಲೆದೋರಿದವು ಹಿಮಸಿಸಿರವೆಸನು ಚಯಕಾಲವಾ ಸಮಯದಲ್ಲಿ || ೪

ಪಾದರಿಯ ಪೊಪ್ಪು ಪುಷ್ಪಿನಮಾಲೆ ಗೊತ್ತೆ ಬೇ
ಕಾದ ಪಯಣಿ ವಿತ್ತಪೆನೆನಲ್ತೆವಂ ಬಾಲೆ ಬಿಡು
ಕೇದಗೆಯ ಪೂರ್ವಪೂವಿನ ದಂಡೆಗಳ್ ಕೊಡುವೆ ಬೆಲೆಬೇಕೆ ಬಯಸಿದರ್ಗೆ ।
ಆದರಿಪುದುಚಿತಜ್ಞರಿಗೆ ಗುಣಮಿದೆಂಬ ನಯ
ದೋದಿಕೆಯ ಕೇಳ್ದರಿಯೆಯೆಂಬ ಚದುರೊಕ್ತಿಗಳ್
ಮೋದವೀಯಲ್ಕಲಗೊಂಡು ಪೋದಂ ರಾಜಬೀದಿಯೊಳದೇಂ ಪ್ರೌಢನೋ || ೫

ಚಲುವ ಚೈತನ್ಯವಡದೊಲ್ಮೆರವ ಹರದ ನಿಂ
ಬೆಲೆಗಿತ್ತ ಮುತ್ತುಗಳ ಧರಿಪವೆನ್ನಯ ಮೊಗಂ
ಅಲರ್ದು ಕಳೆಯೇರ್ದುದೀ ಪದ್ಮರಾಗದೊಳು ಸೀರುಳೆಗೊಲ್ವ ತಕ್ಕದಾಗಿ ।

---

* ಈ ಪದ್ಯವು ಜೈ. ಭಾ. ಸಂಧಿ ೩ ಪದ್ಯ ೮ ನ್ನು ಹೋಲುತ್ತದೆ.

1 ವಿಂ ಇರಬಹುದೇ?

2 ಇಲ್ಲಿ ಛಂದೋಭಂಗ, ಶಬ್ದದೋಷ, ಸಂದಿಗ್ಧತೆ.

3 ಪ್ರಾಸಸ್ಥಾನದಲ್ಲಿ ಱ–ರ ಮಿಶ್ರ.

4 ಛಂದೋ ದೋಷ–ಪಣ ಇರಬಹುದು.

[1]ಪೊಳವ ನೀಲ್ಮಣಿಯೊಳರೆ ಕೊಠಕ್ರಯದ ಏಣಕೆ ಪೊಂ
ಗಳಸಮಿದೆಯೆಂದೊರ್ವಲಲನೆಯೂಡಿದ ವೂತಿ
ನೊಲವರಿತು ನಸುನಗುತ ಚಿಹರವಂ ಕೊಡುತಿರ್ದಪವರದೊಳ್ ಪದಪಿನಿಂದ || ೬

ಕುರವಕದ್ರುಮವನೊರ್ವಂಗನೆ ವಪಾಗ್ರದೊಳ್
ಪರದು ದೂತಿಯ ಕಯ್ಯಲಟ್ಟಲೊಡನಾ ಕೆಳದಿ
ಪರಿಮಿತದೊಳಿಯ್ಯಲನ್ನಳ ಕರಸಿಯವಳಿಟ್ಟ ಪೆರ್ಮುತ್ತಿನೆಕ್ಕಸರವ ।
ತ್ವರಿತದಿಂ ಕೊಟ್ಟೊರ್ವ ನಾಯಕಂ ಬೀಳ್ಕೊಡಲು
ಮರಳಿಬಂಧಾಕೆ ತದ್ವಿಟನಿತ್ತ ಮುತ್ತಿನೊ
ಜ್ಜರವನಿನಿಯಳ್ಗೀಯೆ ಕಂಡು ಬೆಂಡಾದಳಾತನ ಬಗೆಯ ಭಾವವರಿದು || ೭

---

1 ಛಂದೋದೋಷ.

'ನನ್ನದೇ ಕೈಗಂಟು ? ಇದು ಅನೇಕರ ನಂಟು'

—ಅಂದತ್ತ

# ೮/ಅನುಬಂಧಗಳು

- ಅಶ್ವಮೇಧ ಯಜ್ಞದ ಕಲ್ಪನೆಯ ಇತಿಹಾಸ ಮತ್ತು ಜೈಮಿನಿ ಅಶ್ವಮೇಧದ ಸ್ಥಾನ
- ಸಂಸ್ಕೃತ ಜೈಮಿನಿ ಭಾರತದ ವ್ಯಾಪ್ತಿ ಮತ್ತು ಪ್ರಭಾವ
- ಲಕ್ಷ್ಮೀಶನ ಜೈಮಿನಿ ಭಾರತದ ಪ್ರಭಾವ
- ತೆಲುಗು ಜೈಮಿನಿ ಭಾರತ
- 'ಪುರುಷಾಮೃಗ' ಪ್ರಸಂಗದ ತೌಲನಿಕ ಸಮೀಕ್ಷೆ
- ವಸ್ತುಕೋಶ
- ಪಾತ್ರಕೋಶ
- ನುಡಿಮುತ್ತುಗಳು
- ಸೂಚಿಗಳು
- ಗ್ರಂಥಋಣ

## ಅಶ್ವಮೇಧ ಯಜ್ಞದ ಕಲ್ಪನೆಯ ಇತಿಹಾಸ ಮತ್ತು ಜೈಮಿನಿ ಅಶ್ವಮೇಧದ ಸ್ಥಾನ

ಯಜ್ಞ ಸಂಸ್ಥೆ ಅತಿ ಪ್ರಾಚೀನ, ದೇವತೆಗಳನ್ನು ತೃಪ್ತಿಪಡಿಸಿ ಆಶೀರ್ವಾದವನ್ನು ಪಡೆಯುವ ಬಯಕೆಯುಳ್ಳ ವ್ಯಕಿಗಳು ಯಜ್ಞ ವಿಧಿಯನ್ನು ಆಚರಿಸುತ್ತಿದ್ದರು. ಈ ಯಜ್ಞದಲ್ಲಿ ಮೂರು ಭಾಗ. ಮೊದಲನೆಯದು ದೇವತೆಗಳನ್ನು ಮಂತ್ರಗಳಿಂದ ಸ್ತುತಿಸುವುದು, ಎರಡನೆಯದಾಗಿ ಯಜ್ಞದೇವನ ತೃಪ್ತಿಗಾಗಿ ವಿಶಿಷ್ಟ ಪದಾರ್ಥ, ದ್ರವ್ಯಗಳನ್ನು ಆಹುತಿಯಾಗಿ ಅರ್ಪಿಸುವುದು; ಮೂರನೆಯದೇ ದೇವತೆಗಳಿಂದ ಆಶೀರ್ವಾದವನ್ನು ಪಡೆಯುವದಾಗಿದೆ.

'ಬ್ರಹ್ಮಾಂಡ ಪುರಾಣ' ಪಾದ ೨, ಅ. ೩೦ ಹಾಗೂ 'ಮತ್ಸ್ಯ ಪುರಾಣ' ೧೪೩. ೩೩ರಲ್ಲಿ ಯಜ್ಞದ ವ್ಯಾಖ್ಯೆಯನ್ನು 'ದ್ರವ್ಯ ಮಂತ್ರಾತ್ಮಕೋ ಯಜ್ಞಃ' ಎಂದು ಹೇಳಿದ್ದಾರೆ. ಈ ಯಜ್ಞವನ್ನು ವ್ಯಕ್ತಿಗಳು ವೈಯಕ್ತಿವಾಗಿ ಮಾಡುತ್ತಿದ್ದರು. ಮಳೆ, ಬೆಳೆ,

ರೋಗಾದಿ, ಸಾಮಾಜಿಕ ಅಡ್ಡಿ–ಆತಂಕಗಳ ಪರಿಹಾರಾರ್ಥವಾಗಿ ಸಾಮೂಹಿಕವಾಗಿಯೂ ಯಜ್ಞವನ್ನು ಮಾಡುವ ರೂಢಿ ಇತ್ತು.

ಅಗ್ನಿಷ್ಟೋಮ, ವಾಜಪೇಯ, ಅತಿರಾತ್ರಾದಿ ೭ ಸೋಮಯಜ್ಞಗಳು ; ರಾಜಸೂಯ ಯಜ್ಞ, ಅಶ್ವಮೇಧ ಯಜ್ಞ ಹೀಗೆ ಯಜ್ಞಗಳಲ್ಲಿ ಅನೇಕ ಬಗೆಗಳ ನಿರ್ಮಿತಿ ಆಯಿತು. ಅವುಗಳಲ್ಲಿ ಅಶ್ವಮೇಧಯಜ್ಞದ ಮುಖ್ಯ ಲಕ್ಷಣ ಅಶ್ವದ–ಮೇಧ. ಈ ಯಜ್ಞದಲ್ಲಿ ಅಶ್ವದ ಹನನ ಮಾಡಿ, ಅದರ ಮಾಂಸವನ್ನೇ ದ್ರವ್ಯವಾಗಿ ಆಹುತಿ ಕೊಡುವ ರೂಢಿ ಇತ್ತು.

ಈ ಅಶ್ವಮೇಧ ಯಜ್ಞದ ಬಗ್ಗೆ ಶತಪಥ ೧೦–೪–೨ರಲ್ಲಿ ಒಂದು ಕಥೆಯಿದೆ. ಪ್ರಜಾಪತಿಯ ಕಣ್ಣು ಬೆಳೆಯುತ್ತ ಹೋಗಿ ಅದು ಒಮ್ಮೆ ಕಳಚಿ ಬಿದ್ದುಹೋಯಿತು. ಅದುವೇ ಅಶ್ವರೂಪವನ್ನು ಪಡೆದು ಭೂಲೋಕದಲ್ಲಿ ಬೆಳೆಯತೊಡಗಿತ್ತು. ಆಗ ಎಲ್ಲ ದೇವತೆಗಳೂ ಕೂಡಿ ಆ ಅಶ್ವದ ಹನನವನ್ನು ಮಾಡಿ ಪ್ರಜಾಪತಿಗೆ ಕಣ್ಣುಬರುವಂತೆ ಮಾಡಿದರು. ಅಂದರೆ ಊನನಾಗಿದ್ದ ಪ್ರಜಾಪತಿಯನ್ನು ಪೂರ್ಣ ಮಾಡಿದರು. ಹೀಗಾಗಿ ಯಾರು ಅಶ್ವಮೇಧ ಯಜ್ಞವನ್ನು ಮಾಡುವರೋ ಅವರಿಗೆ ಪ್ರಜಾಪತಿಯನ್ನು ಪೂರ್ಣಗೊಳಿಸಿದ ಪುಣ್ಯ ಪ್ರಾಪ್ತಿಯಾಗುತ್ತಿತ್ತು.

ಈ ಪ್ರಜಾಪತಿ ಯಾರು ? 'ಸಂವತ್ಸರಃ ಪ್ರಜಾಪತಿರಗ್ನಿಃ' ಎಂಬ ಮಾತಿದೆ. ವರ್ಷಕ್ಕೆ ನಿಜವಾಗಿ ೩೬೫ ೧/೪ ದಿವಸಗಳಿರುತ್ತವೆ. ಆದರೆ ನಾವು ೩೬೦ ದಿವಸಗಳನ್ನೇ ಹಿಡಿಯುತ್ತೇವೆ. ಇನ್ನುಳಿದ ೫ ೧/೪ ದಿವಸಗಳು ಗಣನೆಯಲ್ಲಿ ಬಾರದೆ ಹೋದುವಲ್ಲ! ಇದುವೆ ಪ್ರಜಾಪತಿಯ ಕಣ್ಣು. ಇದು ಪ್ರತಿವರ್ಷ ೫ ೧/೪ ದಿವಸಗಳಂತೆ ಬೆಳೆಯುತ್ತ ಹೋಗಿ ೪ ವರ್ಷಗಳಿಗೆ ೨೧ ದಿವಸಗಳು ಹೆಚ್ಚಾಗುತ್ತಿದ್ದವು. ಆಗ ಪ್ರತಿ ನಾಲ್ಕು ವರ್ಷಗಳಿಗೊಮ್ಮೆ ೩೮೧ ದಿವಸಗಳ ಅಶ್ವಮೇಧ ಯಜ್ಞದ ವರ್ಷವನ್ನು ಆಚರಿಸಿ ೩೬೦ ದಿವಸದ ವರ್ಷದ ಲೆಕ್ಕಕ್ಕೆ ಸರಿಮಾಡುತ್ತಿದ್ದರು. ಈ ರೀತಿ ನಾಲ್ಕು ವರ್ಷಕ್ಕೊಮ್ಮೆ ಅಶ್ವಮೇಧ ಯಜ್ಞ ಆಚರಿಸಲೇಬೇಕಾದ ಸಂವತ್ಸರ ಸತ್ರವಾಗಿತ್ತು.

ಯಜ್ಞಗಳಲ್ಲಿ ಅಶ್ವಮೇಧ ಯಜ್ಞದ ಮಹತಿಯನ್ನು ಕೃಷ್ಣ ಯಜುರ್ವೇದ (ತೈತ್ತಿರೀಯ ಸಂಹಿತೆ), ತೈತ್ತಿರೀಯ ಬ್ರಾಹ್ಮಣ, ಶತಪಥ ಬ್ರಾಹ್ಮಣಗಳಲ್ಲಿ ವಿವರಿಸಲಾಗಿದೆ.

ಮೊದಲನೆಯ ದಿವಸ ಋತ್ವಿಜರಿಗೆ ಭೋಜನ ಮತ್ತು ಸುವರ್ಣ ದಕ್ಷಿಣೆ. ಮುಂದೆ ೧೦ ದಿವಸ ಯಜ್ಞ ಸಿದ್ಧತೆ. ೧೨ನೆಯ ದಿವಸ ಅಶ್ವವನ್ನು ವಿಧಿವತ್ತಾಗಿ ಬಿಡುವುದು. ಅಶ್ವರಕ್ಷಣೆಗಾಗಿ ಕಾವಲುಗಾರರನ್ನು ಕಳುಹಿಸುತ್ತಿದ್ದರು. ಆ ಕುದುರೆ ೩೬೦ ದಿವಸ ಅಡ್ಡಾಡಿ ಬರುತ್ತಿತ್ತು. ಅಲ್ಲಿಯವರೆಗೆ ಯಜಮಾನನು ಯಜ್ಞ ದೀಕ್ಷಿತನಾಗಿ ಕುದುರೆ ಸುರಕ್ಷಿತವಾಗಿ ಬರುವುದರ ಸಲುವಾಗಿ ಉಪಾಸನೆ ಮಾಡುತ್ತಿದ್ದನು ('ಶತಪಥ.' ೧೩–೧–೬). ಕುದುರೆ ಬಿಟ್ಟಂದಿನಿಂದ ೧೦ ದಿವಸಗಳವರೆಗೆ ಕ್ರಮವಾಗಿ(೧) ವೈವಸ್ವತ–ಮನು (೨) ಯಮ (೩) ವರುಣಆದಿತ್ಯ (೪) ಸೋಮವೈಷ್ಣವ (೫) ಅರ್ಬುದ

ಕಾದ್ರುವೇಯ (೬) ಕುಬೇರ ವೈಶ್ರವಣ (೭) ಅಸಿತ ಧಾನವ (೮) ಮತ್ಸ್ಯ ಸಮ್ಮದ (೯) ತಾರ್ಕ್ಯ ವೈಪಸ್ಯಾತ (೧೦) ಧರ್ಮ ಇಂದ್ರ. ಹೀಗೆ ಹತ್ತು ಆಖ್ಯಾನಗಳನ್ನು ಋತ್ವಿಜರು ಹೇಳುತ್ತಿದ್ದರು. ಆ ಆ ದಿವಸದ ವ್ಯಾಖ್ಯಾನ ಮುಗಿದೊಡನೆ ಹಳೆಯ ರಾಜರ ಕಥೆಗಳನ್ನು ಹೇಳುತ್ತಿದ್ದರು. ಹೀಗೆ ೩೬೦ ದಿವಸಗಳವರೆಗೆ ಇದೇ ಕಥೆಗಳನ್ನು ಮತ್ತೆ ಮತ್ತೆ ಹೇಳುವ ಪರಿಪಾಠವಿತ್ತು—

ಸಮಾನಮಾಖ್ಯಾನಂ ಪರಿಪ್ಲವತೆ.

The Performance of the old Ashwamedha yajna for 381 days in the fourth year, made up the difference between the Civil year and the Seasonal year and pointed correctly to the people, the days when to expect Rains and to commence their operations of cultivation. This is well described in ಶತಪಥ ಅ. ೬ ಬ್ರಾಹ್ಮಣ. ೧. (*The Social Institutions in ancient India*, K.L. Daftari)

ಇನ್ನುಳಿದ ಪ್ರಾಚೀನ ಅಶ್ವಮೇಧದ ವಿಧಾನ ಮತ್ತು ಉತ್ಕ್ರಾಂತಿಯ ವಿಷಯದ ಬಗೆಗೆ ದ.ರಾ. ಬೇಂದ್ರೆಯವರು 'ಲಕ್ಷ್ಮೀಶನ ಜೈಮಿನಿ ಭಾರತ'ಕ್ಕೆ ಮುನ್ನುಡಿ ಪು. ೬೨-೬೪ರಲ್ಲಿ ವಿವರಣೆ ಬರೆದಿದ್ದಾರೆ. ಈ ಅಶ್ವಮೇಧ ಯಜ್ಞದ ವೈಭವ ಬೆಳೆಸುವುದರಲ್ಲಿ ಏನಾದರೂ ಉದ್ದೇಶವಿತ್ತೇ? ಎಂಬುದು ಗಮನಾರ್ಹವಾದ ಪ್ರಶ್ನೆ. ಅಶ್ವಮೇಧ ಯಜ್ಞಕ್ಕೆ ವಿಶಿಷ್ಟ ರೀತಿಯ ಕುದುರೆ ಬೇಕು. ವಿಶಿಷ್ಟ ಲಕ್ಷಣದ ಯಜ್ಞಭೂಮಿ ಬೇಕು. ನಿರ್ದಿಷ್ಟ ನಕ್ಷತ್ರಕ್ಕೆ ಯಜ್ಞವನ್ನು ಮಾಡಬೇಕು. ಫಾಲ್ಗುಣ ಪೌರ್ಣಿಮೆ ಅಥವಾ ಜ್ಯೇಷ್ಠ, ಆಷಾಢ ಪೌರ್ಣಿಮೆಯ ೮-೯ನೆಯ ದಿವಸ ಅಥವಾ ಚೈತ್ರ ಪೌರ್ಣಿಮೆಯ ದಿವಸವೇ ಕುದುರೆಯನ್ನು ಪರಿಭ್ರಮಣಾರ್ಥವಾಗಿ ಬಿಡಬೇಕು. ಅನೇಕ ಋತ್ವಿಜರನ್ನು ಋಷಿಗಳನ್ನು ಬೇರೆ ಬೇರೆ ದೇಶಗಳಿಂದ ಆಮಂತ್ರಿಸಬೇಕು. ಅವರಿಗೆ ಇಂತಿಷ್ಟು ದಕ್ಷಿಣೆಯನ್ನು ಕೊಡಬೇಕು. ಹೀಗೆಲ್ಲ ಕಟ್ಟಳೆಗಳನ್ನು ಮಾಡುವುದರಲ್ಲಿ ಒಂದು ಉದ್ದೇಶವಿತ್ತು. ಅದೆಂದರೆ–ವ್ಯಕ್ತಿಗತವಾದ ಯಜ್ಞಕ್ಕೆ ಅಶ್ವಮೇಧ ಯಜ್ಞದ ಮೂಲಕ ಸಾಮಾಜಿಕ ಸ್ವರೂಪವು ಬಂತು. ಕ್ಷತ್ರಿಯರು, ಬ್ರಾಹ್ಮಣರು, ವೈಶ್ಯರು ೪ ವರ್ಣಕ್ಕೊಮ್ಮೆ ಯಾದರೂ ಕೂಡಿ ಕಾಲ ಕಳೆಯುವಂತೆ ಆಯಿತು. ಪರಸ್ಪರ ಆತ್ಮೀಯತೆ ಬೆಳೆಸಿಕೊಳ್ಳಲು ಸದವಕಾಶ ದೊರಕುತ್ತಿತ್ತು ಮತ್ತು ಯಜ್ಞದ ದಾನ-ಧರ್ಮಗಳ ಕಟ್ಟಳೆಗಳ ಮೂಲಕ ದ್ರವ್ಯ ಸಂಚಯದ ದೋಷ ಮಾಯವಾಗಿ ದ್ರವ್ಯವು ಇಡೀ ದೇಶದಲ್ಲಿ ಹಂಚಿ ಹೋಗುತ್ತಿತ್ತು. ಈ ಅಶ್ವಮೇಧದ ಕಾಲಕ್ಕೆ ಹೊಸ ಹೊಸ ಮಂತ್ರಗಳ ರಚನೆಯನ್ನು ಮಾಡಿ ಸಪ್ತರ್ಷಿಗಳಿಂದ ಮನ್ನಣೆಯನ್ನು ಪಡೆಯುತ್ತಿದ್ದರು. ಹೀಗಾಗಿ ಮಂತ್ರಸಾಹಿತ್ಯದ ಬೆಳವಣಿಗೆಗೆ ಅನುಕೂಲವಾಗುತ್ತಿತ್ತು.

ಈ ರೀತಿಯಾಗಿ ನಿರ್ಮಾಣವಾದ ಮಂತ್ರಗಳನ್ನೇ ಆಮೇಲೆ ಋಗ್ವೇದ, ಯಜುರ್ವೇದ, ಸಾಮವೇದಗಳಲ್ಲಿ ಸೇರಿಸಲಾಗಿದೆ. [ಮಂತ್ರಾನ್ ಸಂಯೋಜಯಿತ್ವಾ ಥ ಇಹಾಮುವ ಚ ಕರ್ಮಸು] ಈ ಅಶ್ವಮೇಧ ಯಜ್ಞ ಕಾಲಕ್ಕೆ ಅನೇಕ ಹಾಡುಗಾರರು

ಹಾಡುಗಳನ್ನು ಹಾಡುತ್ತಿದ್ದರು. ನಕ್ಷತ್ರ ಶಾಸ್ತ್ರದ ಅಭ್ಯಾಸ ಅವಶ್ಯವಿತ್ತು. **ಹೀಗಾಗಿ ಪ್ರಾಚೀನ ಅಶ್ವಮೇಧ ಜ್ಞಾನ ಮಾರ್ಗದ್ದು ಎಂದು ಹಿಡಿಯಲು ಅಡ್ಡಿಯಿಲ್ಲ.** ಸಂಗೀತ, ಮಂತ್ರಶಾಸ್ತ್ರ, ಜ್ಯೋತಿಷ್ಯಶಾಸ್ತ್ರಗಳ ಬೆಳವಣಿಗೆಗೆ- ವಿಕಾಸಕ್ಕೆ ಈ ಪ್ರಾಚೀನ ಅಶ್ವಮೇಧ ಯಜ್ಞ ಅನುಕೂಲವನ್ನು ಒದಗಿಸಿಕೊಟ್ಟಿತು. ಈ ಯಜ್ಞವು ಕೇವಲ ಬ್ರಹ್ಮಾವರ್ತದಲ್ಲಿ ಆಚರಿಸಲ್ಪಡುತ್ತಿತ್ತು.

ಬ್ರಹ್ಮಾವರ್ತವನ್ನು ದಾಟಿ ಉಳಿದೆಲ್ಲ ಭಾಗಗಳಲ್ಲಿ ಅಶ್ವಮೇಧ ಯಜ್ಞ ಪ್ರಾರಂಭವಾದದ್ದು ಹೊಸದು. ಈ ಹೊಸ ಅಶ್ವಮೇಧಯಜ್ಞವೂ ಬಲು ದಿವಸದ್ದೇ ಇತ್ತು. ಆದರೆ ಇದು ಸಂವತ್ಸರ ಸತ್ರದಂತೆ ಪ್ರತಿ ನಾಲ್ಕು ವರ್ಷಕ್ಕೆ ಆಚರಿಸುವ ಕಟ್ಟಳೆ ಇರಲಿಲ್ಲ. ಈ ಹೊಸ ಯಜ್ಞವನ್ನು ಯಾವ ಬೇಕಾದ ರಾಜನು ತನ್ನ ಬಲವನ್ನು ಪ್ರಸ್ಥಾಪಿಸುವುದರ ಸಲುವಾಗಿ ಮಾಡುತ್ತಿದ್ದನು. ಸಾರ್ವಭೌಮತ್ವಪ್ರಸ್ಥಾಪನೆಯೇ ಈ ಹೊಸ ಅಶ್ವಮೇಧಯಜ್ಞದ ಗುರಿಯಾಗಿತ್ತು. ಹೊಸ ಹೊಸ ಮಂತ್ರಗಳ ನಿರ್ಮಿತಿ ನಿಂತು ಹೋಯಿತು. ರಾಜನಿಂದ ದಕ್ಷಿಣೆ ಪಡೆಯುವುದರ ಸಲುವಾಗಿ ಋತ್ವಿಜರು ಬಂದು ಯಜ್ಞ ಮಾಡುವಂತೆ ಆಯಿತು. **ಈ ಕರ್ಮಪ್ರಧಾನ ಅಶ್ವಮೇಧಯಜ್ಞದಲ್ಲಿ ರಾಜನ ಶೌರ್ಯಕ್ಕೆ ಪ್ರಾಧಾನ್ಯವಿತ್ತು.**

ಜನಮೇಜಯ, ಭರತ, ದಶರಥ, ಸಗರ, ರಾಮ ಅಶ್ವಮೇಧಯಜ್ಞ ಮಾಡಿದ್ದಾಗಿ ಉಲ್ಲೇಖಗಳಿವೆ. ಲಕ್ಷ್ಮೀಶನ ಜೈಮಿನಿ ಭಾರತದಲ್ಲಿ ಭರತ, ನಳ, ನಹುಷರ ಅಶ್ವಮೇಧಯಜ್ಞದ ಮಾತು ಬರುತ್ತದೆ. ಆದರೆ ಅವರೆಲ್ಲರ ಅಶ್ವಮೇಧಕ್ಕಿಂತ ಧರ್ಮರಾಜನ ಅಶ್ವಮೇಧಯಜ್ಞ ಮಿಗಿಲಾದದ್ದು ಎಂಬ ಮಾತಿದೆ. ಇದಕ್ಕೆ ಕಾರಣ ಭರತ, ನಳ, ನಹುಷಾದಿಗಳ ಅಶ್ವಮೇಧ ಯಜ್ಞ ಕರ್ಮಪ್ರಧಾನ-ದಿಗ್ವಿಜಯವನ್ನು ಮಾಡಿ, ಪರಾಕ್ರಮವನ್ನು ತೋರಿಸಿ, ಸಾರ್ವಭೌಮತ್ವವನ್ನು ಪ್ರಸ್ಥಾಪಿಸುವುದೇ ಗುರಿಯಾಗಿತ್ತು. ಆದರೆ ಧರ್ಮರಾಜನ ಅಶ್ವಮೇಧವು 'ಗೋತ್ರ ಸಂಹರಣ ಪಾತಕ ತೊಳೆವ ಮಖ'ವಾಗಿತ್ತು. ವ್ಯಾಸ ಮಹರ್ಷಿಗಳು ಗೋತ್ರ ಸಂಹರಣ ಪಾತಕ ಪರಿಹಾರಾರ್ಥವಾಗಿ ಈ ಅಶ್ವಮೇಧಯಜ್ಞದ ಉಪಾಯವನ್ನು ಸೂಚಿಸಿದರು. ಸಾಕ್ಷಾತ್ ಮಾನವರೂಪಧಾರಿ, ಯಜ್ಞಸ್ವರೂಪಿ ಶ್ರೀಕೃಷ್ಣನೇ ಯಜ್ಞ ಮಾಡಿಸತಕ್ಕವನಾಗಿದ್ದನು. ಇಂದ್ರನು ಪ್ರತ್ಯಕ್ಷವಾಗಿ ಬಂದು ಆಹುತಿಗಳನ್ನು ಸ್ವೀಕರಿಸಿದನು. ಇವೆಲ್ಲ ಧರ್ಮರಾಜನ ಅಶ್ವಮೇಧದಲ್ಲಿ ಮಾತ್ರ ಸಾಧ್ಯವಾದವು. ಹೀಗಾಗಿ ಈ ಅಶ್ವಮೇಧ ಯಜ್ಞವು ಹೊಸದು ಎಂಬ ಮಾತು ಅರ್ಥವತ್ತಾಗಿದೆ.

**ಲಕ್ಷ್ಮೀಶನ ಜೈಮಿನಿ ಭಾರತದಲ್ಲಿಯ ಅಶ್ವಮೇಧ ಯಜ್ಞವು ಭಕ್ತಿಪ್ರಧಾನವಾಗಿದೆ.** ಇಲ್ಲಿಯ ಅಶ್ವವು ಕೇವಲ ಕೃಷ್ಣಭಕ್ತಿಯುಳ್ಳ ಕ್ಷತ್ರಿಯ ರಾಜ್ಯಗಳಿಗೇ ಹೋಗುತ್ತದೆ. ಈ ಯಜ್ಞಾಶ್ವವು ಬೇಕಾದತ್ತ ಹೋಗಬಹುದಾಗಿತ್ತಲ್ಲ. ಆದರೆ ಅದು ಕೇವಲ ಕೃಷ್ಣಭಕ್ತರ ಕಡೆಗೇ ಹೋಗುತ್ತದೆ. ಅಶ್ವ = ಹರಿ = ಕೃಷ್ಣನಾಗಿರುವುದರಿಂದ ಅಶ್ವವು ಕೃಷ್ಣಭಕ್ತರೆಡೆಗೇ ಆಕರ್ಷಿಸಲ್ಪಡುವುದು ಸಹಜವಾಗಿದೆ. ಇಲ್ಲಿ ಬಂದ

ಪ್ರತಿಯೊಬ್ಬ ರಾಜನೂ ಸಾಕಷ್ಟು ಬಲವುಳ್ಳವನಾಗಿದ್ದನು. ಇದಕ್ಕೆ ಮಯೂರ ಧ್ವಜನು ೭ ಅಶ್ವಮೇಧ ಯಜ್ಞಗಳನ್ನು ಮಾಡಿದ್ದನೆಂಬ ಮಾತು ಒಂದು ಒಳ್ಳೆಯ ಉದಾಹರಣೆ. ಆದರೆ ಇಲ್ಲಿಯ ಎಲ್ಲ ರಾಜರೂ ಪೌರುಷವಿದ್ದೂ ದೇವತ್ವವನ್ನು (ದೈವಿಕ ಶಕ್ತಿಯನ್ನು) ಒಪ್ಪುವವರಾಗಿದ್ದರು. ಎಲ್ಲರಿಗೂ ಮಾನವ ಲೀಲಾವತಾರಿಯಾದ ಕೃಷ್ಣನು ಒಪ್ಪಿಗೆಯಾಗಿದ್ದರಿಂದ ಮತ್ತು ಕೃಷ್ಣನೇ ಧರ್ಮನ ಯಜ್ಞವನ್ನು ಮಾಡಿಸುವವನಾಗಿದ್ದರಿಂದ, ಕ್ಷತ್ರಿಯರ ಕ್ಷಾತ್ರ ತೇಜವು ಕೃಷ್ಣಭಕ್ತಿ ಪ್ರಕಾಶದಲ್ಲಿ ಕೂಡಿಕೊಳ್ಳುವಂತಾಗಿದೆ. ಕ್ಷತ್ರಿಯರಿಗೆ ಯುದ್ಧ ಮಾಡುವುದು ಧರ್ಮವಾಗಿದ್ದರಿಂದ ಅವರು ಅದನ್ನೂ ನಡೆಸಿಕೊಂಡೇ ಹೋಗುತ್ತಾರೆ. ಕೃಷ್ಣದರ್ಶನ ಪಡೆಯುವ ಕುತೂಹಲವುಳ್ಳವರಾಗಿದ್ದರಿಂದ ಕೃಷ್ಣದರ್ಶನದೊಡನೆ ಮತ್ತು ಕೃಷ್ಣಾಲಿಂಗನದೊಡನೆ ಇಲ್ಲಿಯ ಯುದ್ಧಗಳು ಮುಕ್ತಾಯಗೊಳ್ಳುತ್ತವೆ.

ಲಕ್ಷ್ಮೀಶನ ಜೈಮಿನಿ ಭಾರತದ, ಅಶ್ವಮೇಧದ ಮತ್ತೊಂದು ವೈಶಿಷ್ಟ್ಯವೆಂದರೆ ಇಲ್ಲಿ ಸುರಥ ಮತ್ತು ಸುಧನ್ವರು ಸಾಯುತ್ತಾರೆ. ಆದರೆ ಅವರು ಕೃಷ್ಣನಲ್ಲಿ ಸಾಯುಜ್ಯವನ್ನು ಹೊಂದುತ್ತಾರೆ. (ಮಹಾಭಾರತದ ಕಥೆಗಳಲ್ಲಿಯಂತೆ ಯಾವ ಅರಸನ ವಧೆಯನ್ನೂ ಕೃಷ್ಣನು ಇಲ್ಲಿ ಮಾಡುವುದಿಲ್ಲ.) ಮಯೂರಧ್ವಜನ ಶರೀರವನ್ನು ಇಬ್ಭಾಗ ಮಾಡಿಕೊಡಬೇಕಾದ ದಾನದಿಂದ ಆ ಕಾಲದ ಕೃಷ್ಣಭಕ್ತಿಯ ಪರಾಕೋಟಿಯನ್ನು (ಉಚ್ಚಶಿಖರ) ತೋರಿಸಲಾಗಿದೆ. ದುಷ್ಟಬುದ್ಧಿ, ಮದನ ಸತ್ತರೂ ಚಂದ್ರಹಾಸನ ಕೃಷ್ಣಭಕ್ತಿಯ ಮೂಲಕ ಎಚ್ಚರಿಯುತ್ತಾರೆ. ರಣಾಂಗಣದ ನಾಯಕನಾದ ಅರ್ಜುನನು ಮಡಿದರೂ ಸಂಜೀವನ ಮಣಿಯ ಉಪಾಯದಿಂದ ಮರಳಿ ಏಳುತ್ತಾನೆ. ಅಶ್ವಮೇಧ ಯಜ್ಞದಲ್ಲಿ ಅಶ್ವಮೇಧವೇ ಇಲ್ಲ; ಅಶ್ವದ ಹನನವಿಲ್ಲ. ಇಲ್ಲಿಯೂ ಅಶ್ವವು ಸ್ವರ್ಗಸುಖಕ್ಕಿಂತ ಕೃಷ್ಣಸಾಯುಜ್ಯ ಪಡೆಯುವ ಅಪೇಕ್ಷೆಯುಳ್ಳದ್ದಾಗಿದೆ. ಅಶ್ವದ ಕಿವಿಯನ್ನು ಹಿಂಡಿದರೆ ಹಾಲಿನ ಹೊನಲು ಹರಿಯುತ್ತದೆ; ತಲೆಯನ್ನು ಕಡಿಯಲು ತಲೆಯು ಆಕಾಶಕ್ಕೆ ನೆಗೆದು ಸೂರ್ಯಮಂಡಲದಲ್ಲಿ ಅಡಗುತ್ತದೆ; ಜೀವರೂಪದಿಂದಿದ್ದ ಪರಮಾತ್ಮನು ಹೊರ ಹೊರಟು ಶ್ರೀಪತಿಯ ಮುಖಾಂಬುಜದಲ್ಲಿ ಅಡಗುತ್ತಾನೆ. ದೇಹವು ಕರ್ಪುರವಾಗುತ್ತದೆ. ಅಶ್ವದ ಮಾಂಸದ ಹವನ ಇಲ್ಲಿಲ್ಲ. ಅಶ್ವದ ಕರ್ಪುರದ ಆಹುತಿ ಇಲ್ಲಿದೆ. ಹೀಗಾಗಿ ಇಲ್ಲಿಯ ಅಶ್ವಮೇಧ ಯಜ್ಞವು ಕೃಷ್ಣಭಕ್ತಿಪ್ರಧಾನವಾದ, ಅಹಿಂಸಾಭರಿತ ಯಜ್ಞವಾಗಿದೆ. ಇಲ್ಲಿಯ ಅಶ್ವವು ಕೇವಲ ಕೃಷ್ಣ ಮಹಿಮೆಯ ಪ್ರತೀಕವಾಗಿದೆಯೇ ಹೊರತು ಸಂವತ್ಸರದ ಸತ್ರದಲ್ಲಿಯ ಪ್ರಜಾಪತಿಯ ಕಣ್ಣಾಗಿಲ್ಲ.

ಯಜ್ಞಾಶ್ವವು ಸಂಚಾರಕ್ಕೆ ಹೊರಟಂದಿನಿಂದ ದಿನಾಲೂ ಒಂದು ಕಥೆಯಂತೆ ೧೦ ಕಥೆಗಳನ್ನು ೩೬೦ ದಿವಸಗಳವರೆಗೆ ಹೇಳುವ ರೂಢಿ ಪ್ರಾಚೀನ ಅಶ್ವಮೇಧಯಜ್ಞದಲ್ಲಿತ್ತು ಎಂಬ ಮಾತನ್ನು ನಾವು ಹಿಂದೆ ನೋಡಿದ್ದೇವೆ. ಆ ಸನ್ನಿವೇಶ ಜೈಮಿನಿ ಭಾರತಕ್ಕೆ ಸ್ಫೂರ್ತಿಯನ್ನು ಕೊಟ್ಟು ಇಲ್ಲಿಯೂ ಯಜ್ಞಾಶ್ವವು ಸಂಚಾರಕ್ಕೆ ಹೊರಟು ಮರಳಿ ಬರುವವರೆಗೆ ೧೦ ಕಥೆಗಳನ್ನೇ ವಿವರಿಸುವಂತೆ ಮಾಡಿದೆಯೇ? ಎಂಬ ಊಹೆಗೆ

ಅವಕಾಶ ಮಾಡಿಕೊಡುತ್ತದೆ. ಇಲ್ಲಿ ಪ್ರಮುಖವಾಗಿ (೧) ಅನುಸಾಲ್ವ (೨) ನೀಲ ಧ್ವಜ (೩) ಹಂಸಧ್ವಜ (೪) ಪ್ರಮೀಳೆ (೫) ಭೀಷಣ (೬) ಬಭ್ರುವಾಹನ (೭) ರಾಮಾಯಣ (೮) ಮಯೂರಧ್ವಜ (೯) ವೀರವರ್ಮ (೧೦) ಚಂದ್ರಹಾಸ —ಹೀಗೆ ಹತ್ತೇ ಕಥೆಗಳು ಹೇಳಲ್ಪಟ್ಟಿವೆ. ಇನ್ನುಳಿದ ಚಂಡಿ, ಪಾರಿಪ್ಲವ, ಬಕದಾಲ್ಭ್ಯ ಇವು ಕೃಷ್ಣ ಮಹಿಮೆಯನ್ನು ವರ್ಣಿಸಿ ಹೇಳುವ ಕಥೆಗಳು. ದುಶ್ಶಳೆಯ ಕಥೆ ಪ್ರಾಸಂಗಿಕವಾಗಿ ಬರುತ್ತದಷ್ಟೆ. ಹತ್ತು ಕಥೆಗಳಲ್ಲಿ ಮಾತ್ರ ಯಜ್ಞಾಶ್ವವನ್ನು ಬಂಧಿಸು ವುದೇ ಕಥಾವಸ್ತುವಾಗಿದೆ

ಜೈಮಿನಿ ಸಂಸ್ಕೃತ ಅಶ್ವಮೇಧ ಪರ್ವಕ್ಕೂ ಮತ್ತು ಪದ್ಮ ಪುರಾಣಾಂತರ್ಗತ ರಾಮಾಶ್ವಮೇಧಕ್ಕೂ ಸಾಕಷ್ಟು ಹೋಲಿಕೆ ಇದೆ ಎಂಬುದನ್ನು 'ಲಕ್ಷ್ಮೀಶನ ಜೈಮಿನಿ ಭಾರತ'ಕ್ಕೆ ಮುನ್ನುಡಿ ಪುಟ ೫೭–೫೮ರಲ್ಲಿ ದ.ರಾ. ಬೇಂದ್ರೆಯವರು ತೋರಿಸಿಕೊಟ್ಟಿ ದ್ದಾರೆ. ಹೀಗಾಗಿ ಈ ಎರಡೂ ಕೃತಿಗಳ ರಚನೆ ಸಮಕಾಲೀನವಾಗಿರಬೇಕು ಎಂಬ ಊಹೆಗೆ ಆಸ್ಪದವಾಗಿದೆ.

ಲಕ್ಷ್ಮೀಶನ ಜೈಮಿನಿ ಭಾರತದ ಅಶ್ವಮೇಧ ಯಜ್ಞವು ಕ್ಷತ್ರಿಯರ ಕೃಷ್ಣಭಕ್ತಿ ಯನ್ನು ತೋರಿಸಿಕೊಟ್ಟು, ಪೌರುಷಕ್ಕಿಂತ ದೇವರ ಸಾನಿಧ್ಯ, ಸಾಮಿಪ್ಯ ಹೆಚ್ಚು ಮಹತ್ತ್ವದ್ದು; ಸ್ವರ್ಗಸುಖಕ್ಕಿಂತ ಕೃಷ್ಣ ಸಾಯುಜ್ಯವು ಹೆಚ್ಚಿನ ಮಹತಿಯದು ಎಂಬ ಸಂದೇಶಗಳನ್ನು ಬೀರುವ ಕಾವ್ಯವಾಗಿದೆ.

## ಸಂಸ್ಕೃತ ಜೈಮಿನಿ ಭಾರತದ ವ್ಯಾಪ್ತಿ ಮತ್ತು ಪ್ರಭಾವ

ವ್ಯಾಸರ ಶಿಷ್ಯರಲ್ಲಿ ಒಬ್ಬರಾದ ಜೈಮಿನಿ ಮುನಿಗಳಿಂದ ಜೈಮಿನಿಭಾರತವು ರಚಿಸಲ್ಪಟ್ಟು, ಅದರಲ್ಲಿ ಅಶ್ವಮೇಧಿಕ ಪರ್ವ ಒಂದೇ ಉಳಿದಿದೆ ಎಂದು ಸರ್ವಸಾಮಾನ್ಯ ನಂಬಿಕೆ. ಇದು ಒಂದೇ ಪರ್ವ ಉಳಿಯಲು ಬೇರೆ ಬೇರೆ ಕಾರಣಗಳನ್ನು ಹೇಳುವ ದಂತಕಥೆಗಳು ಹುಟ್ಟಿಕೊಂಡಿವೆ. Government Oriental Library Series ಕುಮಾರವ್ಯಾಸ ಭಾರತ–ಸಭಾ ಪರ್ವದಲ್ಲಿಯ ಅವತರಣಿಕೆಯಲ್ಲಿ 'ದಿಗ್ವಿಜಯ ಪರ್ವದಲ್ಲಿ ರಾಜಸೂಯ ಯಾಗದ ಕ್ರಮಗಳನ್ನು ವರ್ಣಿಸುವಾಗ, ಯಾಗದಲ್ಲಿಯ ಕೆಲವು ಕಾರ್ಯ ಗಳನ್ನು ನಿರ್ವಹಿಸುವದಕ್ಕೋಸ್ಕರ ಪುರುಷಮೃಗವೆಂಬ ಪ್ರಾಣಿಯನ್ನು ಕರೆತರುವುದ ಕ್ಕಾಗಿ ಭೀಮಸೇನನನ್ನು ಕಳುಹಿಸಿದ್ದ ಹಾಗೂ ಭೀಮಸೇನನು ಅದನ್ನು ಕರೆತಂದು ಕಾರ್ಯನಿರ್ವಾಹವನ್ನು ಮಾಡಿದ ಹಾಗೂ ವರ್ಣಿಸಲ್ಪಟ್ಟಿದೆ. ಈ ಕಥೆಯು ಸಂಸ್ಕೃತ ಮಹಾಭಾರತದಲ್ಲಿ ಕಾಣುವುದಿಲ್ಲ. ಆದರೆ ಈ ಕಥೆಯು ಜೈಮಿನಿ ಭಾರತದಲ್ಲಿ ಇರುವುದಾಗಿ 'ಕೂರೇಶ ವಿಜಯ'ದ ಮೂರನೆಯ ಶ್ಲೋಕದಲ್ಲಿರುವ 'ಹನುಮತಃ ಪುಚ್ಛ ರೋಮೇಶ್ವರತ್ವಾತ್'ಎಂಬ ಪದಗಳ ವ್ಯಾಖ್ಯಾನದಲ್ಲಿ ನಿರೂಪಿಸಲ್ಪಟ್ಟಿವೆ. ಚಿತ್ರಭಾರತದ ಕಥಾವಸ್ತುವಾದ ವತ್ಸಲಾ ಹರಣವು ಜೈಮಿನಿ ಭಾರತಕ್ಕೆ ಸಂಬಂಧಪಟ್ಟದ್ದು ಎಂಬು ದನ್ನು ನೋಡಿದಾಗ ಜೈಮಿನಿ ಭಾರತದ ಎಲ್ಲ ಪರ್ವಗಳೂ ಪ್ರಚಾರದಲ್ಲಿರಬೇಕೆಂದು

ಎನಿಸುತ್ತದೆ. ಅದರಲ್ಲಿ ಅಶ್ವಮೇಧಿಕ ಪರ್ವವು ಅನೇಕ ಬೇರೆಬೇರೆ ಭಾಷೆಗಳಲ್ಲಿ ಭಾಷಾಂತರಿಸಲ್ಪಟ್ಟು ಶಾಶ್ವತವಾದ ಕೀರ್ತಿಯನ್ನು ಗಳಿಸಿದೆ.

ವಿಜಯನಗರದ ಸಾಳುವ ನರಸಿಂಹ (I) ರಾಯನ (ಕ್ರಿ. ಶ. ೧೪೮೫–೧೪೯೭) ಆಸ್ಥಾನ ಕವಿಯಾಗಿದ್ದ ಪಿಲ್ಲಲಮರ್ರಿಪಿನವೀರಭದ್ರನ ತೆಲುಗು ಭಾಷೆಯಲ್ಲಿ ಜೈಮಿನಿ ಭಾರತದ ಅಶ್ವಮೇಧಿಕ ಪರ್ವವನ್ನು ಚಂಪೂರೂಪವಾಗಿ ರಚಿಸಿರುತ್ತಾನೆ.

೧೫ನೆಯ ಶತಮಾನದಲ್ಲಿ ನೀಲಾಂಬರದಾಸ ಕವಿಯು ಜೈಮಿನಿ ಭಾರತ ಮತ್ತು ಪದ್ಮ ಪುರಾಣವನ್ನು ಓರಿಯಾ ಭಾಷೆಯಲ್ಲಿ ಭಾಷಾಂತರಿಸಿದ್ದಾನೆ.[1]

ಕ್ರಿ. ಶ. ೧೬೩೬ ರಿಂದ ೧೮೯೪ರವರೆಗೆ ಮಧ್ಯಕಾಲದಲ್ಲಿ ಜೈಮಿನಿ ಭಾರತವನ್ನು ಆಧರಿಸಿ ೧೮ ಕೃತಿಗಳು ಬೇರೆ ಬೇರೆ ಕವಿಗಳಿಂದ ಹಿಂದಿಯಲ್ಲಿ ರಚಿಸಲ್ಪಟ್ಟಿವೆ. ಕ್ರಿ. ಶ. ೧೬೩೬ (ವಿಕ್ರಮ ಸಂವತ್ ೧೫೫೮) ರಲ್ಲಿ ಪುರುಷೋತ್ತಮದಾಸ ಎಂಬ ಕವಿ ಜೈಮಿನಿ ಅಶ್ವಮೇಧ ಪರ್ವವನ್ನು ದೋಹಾ ಚೌಪಾಯಿ ಛಂದಸ್ಸಿನಲ್ಲಿ ಹಿಂದಿಯಲ್ಲಿ ಅನುವಾದಿಸಿದ್ದಾನೆ. ಈ ಕವಿಯು ಅಯೋಧ್ಯೆಯ ಹತ್ತಿರದ ಹಳ್ಳಿಯವನು. ಅನುಷ್ಟುಪ್ ಸಂಖ್ಯೆ ೩೮೪೦ ಇದೆ ಎಂದು ಹೇಳಿದ್ದಾನೆ. ಪರಮದಾಸ, ರತಿಮಾನ, ಪೂರನ ಕವಿ, ಸೇವಾದಾಸ, ಸುವಂಶರಾಯ, ಕೇಶವರಾಯ, ಜಗತಮಣಿ, ರಾಮಪುರಿ, ಭಗವಾನದಾಸ ನಿರಂಜಿನಿ, ಪ್ರಾಣನಾಥ, ಪೀತಾಂಬರ, ರಾಮಪ್ರಸಾದ, ಸರಯೂರಾಮಪಂಡಿತ, ಕೂರಕವಿ, ಸಂಡನಕವಿ, ನಂದಲಾಲ ಮತ್ತು ಪ್ರೇಮದಾಸ ಎಂಬ ಕವಿಗಳು ಜೈಮಿನಿ ಅಶ್ವಮೇಧಪರ್ವ ಅಥವಾ ಜೈಮಿನಿ ಪುರಾಣ ಇಲ್ಲವೆ ಜೈಮಿನಿ ಕಥಾ ಆಧಾರವಾಗಿಟ್ಟು ಕೊಂಡು ತಮ್ಮ ಕೃತಿಗಳನ್ನು ರಚಿಸಿದ್ದಾರೆ.[2]

ಶ್ರೀಧರ ಎಂಬ ಕವಿಯು ೧೬೩೭ರಲ್ಲಿ ಜೈಮಿನಿ ಭಾರತದ ಅಶ್ವಮೇಧಿಕ ಪರ್ವವನ್ನು ಮರಾಠಿಯಲ್ಲಿ ಅನುವಾದಿಸಿದ್ದಾನೆ. ನಾಮಾ ಪಾಠಕ, ಕೃಷ್ಣದಾಸ, ದಾಸೋಸುತ ಮುದ್ಗಲ್, ನಾರಾಯಣ ವಿಪ್ರ, ಜಗಜೀವನ ವಿಷ್ಣುದಾಸ, ಮಾಧವಸ್ವಾಮಿ, ವಿಠ್ಠಲ ಸ್ವಾಮಿ ಎಂಬವರೂ ಅಶ್ವಮೇಧಿಕ ಪರ್ವವನ್ನು ಮರಾಠಿಯಲ್ಲಿ ಅನುವಾದಿಸಿದ್ದಾರೆ, ಎಂಬ ಉಲ್ಲೇಖವಿದೆ.

ಹೀಗೆ ಜೈಮಿನಿ ಭಾರತದ ಅಶ್ವಮೇಧಿಕ ಪರ್ವವು ತೆಲುಗು, ಓರಿಯಾ, ಹಿಂದಿ, ಮರಾಠಿ ಮತ್ತು ಕನ್ನಡ ಭಾಷೆಗಳಲ್ಲಿ ತನ್ನ ಪ್ರತಿಬಿಂಬವನ್ನು ಕಂಡಿದೆ. ಅಶ್ವಮೇಧಿಕ ಪರ್ವವನ್ನು ಕನ್ನಡದಲ್ಲಿ ರಚಿಸಿದವನು ಕವಿ ಲಕ್ಷ್ಮೀಶ. ಈ ಕನ್ನಡ ಕಾವ್ಯವು ಅನೇಕ ವಿದ್ವಾಂಸರನ್ನು ಮೆಚ್ಚಿಸಿದೆ. ಅವರ ಮನವನ್ನು ಸೆಳೆದಿದೆ ಎಂಬುದನ್ನು ನಾವು ಕಾಣುತ್ತೇವೆ.

---

[1] *The Delhi Sultanate* Ed: R. C. Mujumdar & A. P Pusalkar, p. 250.

[2] 'ಹಿಂದಿ ಸಾಹಿತ್ಯ ಕಾ ಬೃಹತ್ ಇತಿಹಾಸ', ಪು. ೪೩೬–೩೭. ಸಂ. ರಾಜಬಲಿ ಪಾಂಡೆ. ಸಂ. ೩, ಪಂಡಿತ ಬಲದೇವ ಉಪಾಧ್ಯಾಯ.

*Canarese Poetical Anthology* ಯ (ಕ್ರಿ. ಶ. ೧೮೬೮) ಪ್ರಿಫೇಸಿನಲ್ಲಿ ಸಾಹಿತ್ಯದ ಪ್ರವಾಹಗಳ ಬಗ್ಗೆ ವಿವೇಚನೆ ಮಾಡುವಾಗ ಮೂರು ವಿಭಾಗಗಳನ್ನು ಮಾಡಿದ್ದಾರೆ. ಮೊದಲನೆಯುದು ಜೈನಕವಿಗಳ ಕಾಲ, ಎರಡನೆಯುದು ಬ್ರಾಹ್ಮಣ ಕವಿಗಳ ಕಾಲವಾಗಿ, ಲಿಂಗಾಯತ ಕವಿಗಳ ಕಾಲವು ಮೂರನೆಯದಾಗಿದೆ ಎಂದು ಹೇಳಿದ್ದಾರೆ.

ಬ್ರಾಹ್ಮಣ ಕವಿಗಳ ಕಾಲವನ್ನು :

In the meantime the Brahmins had began to regain their ascendancy in the country. They soon saw that in order to get a hold on the minds of the masses, they must imitate the Jains and cultivate the vernaculars. Accordingly they set to work and translated the Mahabharata and Ramayana from the Sanskrit in to Canarese, and succeeded so well that these translations are still admired and read throughout the country. The beauty however of these two works was surpassed by Jaiminy Bharat, a free translation of the 15th Section of the Maha-Bharat detailing the Horse Sacrifice. The work is rightly considered also by the Jains and Lingayats to be the first classical work of the language, though it advocates tenets quite antagonistic to their sects. 'He has read Jaimini' is equivalent to saying 'He is an accomplished man' ಎಂದು ವರ್ಣಿಸಿದ್ದಾರೆ.

ಬ್ರಾಹ್ಮಣಕಾಲದ ಮೇರುಕೃತಿಯೇ ಕವಿ ಲಕ್ಷ್ಮೀಶನ ಜೈಮಿನಿ ಭಾರತ ಎಂದು ಹೇಳಿ, ಅವನ ಪದ್ಯಗಳಿಂದಲೇ ಪುಸ್ತಕವು ಪ್ರಾರಂಭವಾಗಿದೆ. ಇಲ್ಲಿ ಕನ್ನಡ ಜೈಮಿನಿ ಭಾರತವು 'ಮಹಾಭಾರತ'ದ ೧೫ನೆಯ ಪರ್ವವಾದ ಅಶ್ವಮೇಧಿಕದ ಭಾಷಾಂತರ ಎಂದು ನಮೂದಿಸಲಾಗಿದೆ. ಆದರೆ ಕನ್ನಡ ಜೈಮಿನಿ ಭಾರತವು ಸಂಸ್ಕೃತ ಜೈಮಿನಿ ಭಾರತದ ಅಶ್ವಮೇಧಿಕ ಪರ್ವದ ಅನುವಾದವಾಗಿದೆ ; ಮಹಾಭಾರತದ ಅಶ್ವಮೇಧಿಕ ಪರ್ವದ್ದಲ್ಲ. ಮಹಾಭಾರತದ ಅಶ್ವಮೇಧಿಕ ಪರ್ವದ ಅನುವಾದವನ್ನು ತಿಮ್ಮಕವಿ ಮಾಡಿದ್ದಾನೆ.

## ಲಕ್ಷ್ಮೀಶನ ಜೈಮಿನಿ ಭಾರತದ ಪ್ರಭಾವ

'ಮಿತ್ರಪ್ರಿಯಂ ರಾಜತೋಷಿತಂ ಮಂಗಳ ಚ
ರಿತ್ರಂ ಬುಧಾಶ್ರಯಂ ಗುರುಭಾವಿ ಕವಿನುತ ವಿ
ಚಿತ್ರಗುಣಿ ಮಂದರನಿಭಂ ಭೋಗಿ ಸಂತತಂ ಧ್ವಜವಜ್ರ ಶುಭಚರಣನು|| (೩೧–೬೧)

ಎಂಬ 'ಜೈಮಿನಿ ಭಾರತ'ದ ಪದ್ಯದಂತೆ ಕ್ರಿ.ಶ. ೧೫೧೩ರ ಗುಬ್ಬಿ ಮಲ್ಲಣಾರ್ಯನ 'ಭಾವ ಚಿಂತಾರತ್ನ'ದಲ್ಲಿ,

ಎಲೆ ಮಗನೆ ನಿನ್ನಯ ವಿಲೋಚನಂ ಕಂದಿದುವೆ
ಸಲೆ ಶಶಿಯ ಪೋಲ್ವ ಮುಖಮೆಯ್ದೆ ಕೊರಗಿತ್ತೆ ಮಂ
ಗಲ ಸೌಮ್ಯವರತುದೇ ಗುರು ಕೃಪೆಯದೇನಾಯ್ತು ಸಕಲ ಕಾವ್ಯಂಗಳೊಳಗೆ || ೨೮

ಎಂಬ ಪದ್ಯವಿದೆ. ಇದರಂತೆ ಕ್ರಿ. ಶ. ೧೪೫೦ರಲ್ಲಿ ರಚಿತವಾದ ಬೊಮ್ಮರಸನ 'ಸೌಂದರ ಪುರಾಣ'ದಲ್ಲಿಯು

ಗರಳಗಳ ಗಾಯತ್ರಿಯಧಿನಾಥ ಗಿರಿಶಗೀ
ರ್ವರ ವಂದ್ಯ ಗುರುರೂಪ ಗೂಢ ವಾಙ್ಮಯಗೇಯ
ಸುರರ ಸಂಪ್ರೀತ ಗೈರಿತ ಭೂಧರಾವಾಸ ಗೋರಾಜ ತನುಜವರದ || ೪೩

ಎಂಬ ಪದ್ಯಕ್ಕೂ ಜೈಮಿನಿ ಭಾರತದ,

'ಕಮಲದಳನಯನ ಕಾಳೀಯ ಮಥನ ಕಿಸಲಯೋಪಮ ಚರಣ' (೫–೮)

ಮತ್ತು 'ಜಯಚತುರ್ಮುಖ ಜನಕ ಜಯಚಾರುಚಾರಿತ್ರ' (೧೩–೨೭) ಪದ್ಯಗಳಿಗೂ ಸಾಮ್ಯವಿದೆ. ಕವಿ ಲಕ್ಷ್ಮೀಶನ ಕಾವ್ಯದ ಪ್ರಭಾವ ಮೇಲಿನ ಇಬ್ಬರೂ ಕವಿಗಳ ಮೇಲೂ ಆಗಿದೆ ಎಂದು ಗೋವಿಂದ ಪೈಗಳು ಅಭಿಪ್ರಾಯಪಟ್ಟಿದ್ದಾರೆ.[1] ಆದುದರಿಂದ ಕವಿ ಲಕ್ಷ್ಮೀಶನ ಕಾಲದ ಉತ್ತರಾವಧಿ ಕ್ರಿ.ಶ.ಸು. ೧೪೦೦ ರಷ್ಟು ಹಿಂದಕ್ಕೆ ಸರಿಯುತ್ತದೆ.

ಹೀಗೆ ಎರಡು ಕಾವ್ಯಗಳಲ್ಲಿ ಸಾಮ್ಯ ದೊರೆಯುವುದು ಅಸ್ವಾಭಾವಿಕವಲ್ಲ. ಕವಿಯು ಇನ್ನೊಬ್ಬ ಕವಿಯ ಪ್ರಭಾವದಿಂದ ತಪ್ಪಿಸಿಕೊಳ್ಳುವುದು ಅಸಾಧ್ಯವೇ ಸರಿ. ಒಂದೆರಡು ಪದ್ಯಗಳ ಸಾಮ್ಯದ ಮೂಲಕ ಕವಿಯ ಕಾಲವನ್ನು ಹಿಂದೆ ಮುಂದೆ ಸರಿಸಲು ಬರುವಂತಿಲ್ಲ. ಯಾವುದೇ ಕವಿ, ತನ್ನ ಮೇಲೆ ಇನ್ನೊಬ್ಬ ಕವಿಯ ಪ್ರಭಾವವಾಗಿದ್ದರೆ ಆ ಪ್ರಭಾವವನ್ನು ಸಾಮಾನ್ಯವಾಗಿ ಸ್ಮರಿಸುತ್ತಾನೆ. ಸ್ಮರಿಸದವರೂ ಉಂಟು. ಗುಬ್ಬಿಯ ಮಲ್ಲಣಾರ್ಯ ಮತ್ತು ಬೊಮ್ಮರಸ ಕವಿ ಲಕ್ಷ್ಮೀಶನನ್ನು ಸ್ಮರಿಸಿಲ್ಲ. ಆದುದರಿಂದ ಯಾರ ಪ್ರಭಾವ ಯಾರ ಮೇಲಾಗಿದೆ ಎಂಬುದನ್ನು ಖಚಿತವಾಗಿ ಹೇಳುವುದು ಕಷ್ಟ. ಅಥವಾ ಎಲ್ಲರೂ ಸ್ವತಂತ್ರ ಪ್ರತಿಭೆಯಿಂದಲೇ ಮೇಲೆ ಉಲ್ಲೇಖಿಸಿದ ಪದ್ಯಗಳನ್ನು ರಚಿಸಿದ್ದಾರೋ ?

ಕ್ರಿ.ಶ. ೧೫೦೯ ರಿಂದ ೧೫೨೯ರ ಕಾಲಕ್ಕೆ ಕೃಷ್ಣದೇವರಾಯನಿಂದ ದತ್ತಿಯನ್ನು ಪಡೆದ ಕವಿ ಕೋನಪ್ಪನು (ಕೋನಯ್ಯ) ರಚಿಸಿದ 'ಗಯಚರಿತ್ರೆ' ಅಥವಾ 'ಕೃಷ್ಣಾರ್ಜುನರ ಸಂಗರ'ದ ಪೀಠಿಕಾ ಸಂಧಿ ಪ. ೧೨ ರಲ್ಲಿ :

ಕಾಳಿದಾಸ ಮಯೂರ ವರಕವಿ
ಮೌಳಿಮಣಿ ಬಾಣಾಂಕ ದಂಡಿ ವಿ
ಶಾಲಮತಿ ಮಲಹಣಿ ಕುಮಾರವ್ಯಾಸ ಶುಕರೂಪ ।
ಲೋಲಗುಣ ಲಕ್ಷ್ಮೀಶ ಘನಕವಿ
ಜಾಲಮೃದುಪಲ್ಲವಗಳಿಗೆ
ಫಾಲಮಂ ಚಾಚುತ್ತ ಪೇಳುವೆನೀ ಮಹಾಕೃತಿಯ ||

ಎಂದು ಲಕ್ಷ್ಮೀಶ ಕವಿಯನ್ನು ಸ್ಮರಿಸಿದ್ದಾನೆ. ಇದೇ ರೀತಿ ಕನಕದಾಸ, ಗೋಪಕವಿಗಳೂ ಲಕ್ಷ್ಮೀಶನನ್ನು ಸ್ಮರಿಸುತ್ತಾರೆ. ('ಕವಿ ಮತ್ತು ಕಾವ್ಯ ಪ್ರಕರಣ' ನೋಡ

[1] 'ಶ್ರೀ ಪಂಜೆಯವರ ನೆನಪಿಗಾಗಿ', ಪು. ೧೪೮–೪೯.

ಬಹುದು.) ಬಬ್ಬೂರ ರಂಗಪ್ಪ, ಲಕ್ಷ್ಮಕವಿಗಳ ಮೇಲೂ ಲಕ್ಷ್ಮೀಶನ ಪ್ರಭಾವವಾಗಿದೆ. ಹೆಳವನಕಟ್ಟೆ ಗಿರಿಯಮ್ಮ ತನ್ನ 'ಚಂದ್ರಹಾಸನಕಥೆ' ಎಂಬ ಸಾಂಗತ್ಯಕಾವ್ಯದಲ್ಲಿ

ಸುರಪುರವಾಸ ಲಕ್ಷ್ಮಿಯಕಾಂತ ಭಕ್ತರ್ಗೆ
ಒರೆದಂಥ ಜೈಮಿನಿಯೊಳಗೆ
ಪರಮಭಕ್ತ ಚಂದ್ರಹಾಸ ಕಥೆಯನು
ಚರಿತೆಯ ಮಾಡಿ ವರ್ಣಿಸುವೆ || ಸಂ. ೧.ಪ.೭

ಎಂದು ಲಕ್ಷ್ಮೀಶ ಮತ್ತು ಜೈಮಿನಿ ಭಾರತವನ್ನು ಸ್ಮರಿಸಿದ್ದಾಳೆ. ಇವು ಪ್ರಬಲವಾದ ಆಧಾರಗಳು. ಆದುದರಿಂದ ಕವಿ ಲಕ್ಷ್ಮೀಶನ ಜೈಮಿನಿ ಭಾರತದ ರಚನಾಕಾಲವು ಕ್ರಿ.ಶ. ೧೫೧೦–೧೫ ಎಂದು ಊಹಿಸಬೇಕಾಗುತ್ತದೆ. ('ಕವಿ ಮತ್ತು ಕಾವ್ಯ' ಪ್ರಕರಣ ನೋಡಬಹುದು.)

೧೬ನೆಯ ಶತಮಾನದ ಪೂರ್ವಾರ್ಧದಲ್ಲಿ ಹುಟ್ಟಿದ ಜೈಮಿನಿ ಭಾರತ ಮತ್ತು ೧೭ ನೆಯ ಶತಕದಲ್ಲಿ ಹುಟ್ಟಿದ ಷಡಕ್ಷರಿಯ 'ರಾಜಶೇಖರವಿಳಾಸ' ಈ ಗ್ರಂಥಗಳು ೧೯ನೆಯ ಶತಮಾನದ ಉತ್ತರಾರ್ಧ ಮತ್ತು ೨೦ನೆಯ ಶತಮಾನದಲ್ಲೂ ಸಾಕಷ್ಟು ಪ್ರಭಾವವನ್ನು ಬೀರಿವೆ. ಇದರ ಬಗ್ಗೆ ಮ. ಪ್ರ. ಪೂಜಾರ ಅವರು 'ಹಳ್ಳಿಪಳ್ಳಿಗಳ ಜನರು ಜಾತ್ರೆಗಳಿಗೆ ಹೋದಾಗ, ಪಟ್ಟಣಗಳಿಗೆ ಹೋದಾಗ ಕೊಂಡುಕೊಳ್ಳುವ ಭಾಷಾಪುಸ್ತಕಗಳೆಂದರೆ 'ಜೈಮಿನಿ ಭಾರತ' ಮತ್ತು 'ರಾಜಶೇಖರ ವಿಳಾಸ.' ಈ ನಾಡುಗಳಲ್ಲಿ ಸಂಜೆಯ ಮುಂದೆ ಪಡಸಾಲೆ, ಚಾವಡಿಗಳಲ್ಲಿ ಜನರು ನೆರೆದು ಕಾವ್ಯ ರಸಾಸ್ವಾದವನ್ನು ಮಾಡುವದಾದರೂ ಜೈಮಿನಿ ಭಾರತ, ರಾಜಶೇಖರ ವಿಳಾಸಗಳೇ. ಈ ಪುಸ್ತಕಗಳ ಪ್ರಚಾರವಿಲ್ಲದ ಕನ್ನಡನಾಡಿನ ಹಳ್ಳಿಗಳೂ, ಈ ಗ್ರಂಥಗಳ ಹೆಸರುಗಳನ್ನು ಅರಿಯದ ಕನ್ನಡಿಗನೂ ಇರಲಿಲ್ಲವೆಂದು ಹೇಳುವುದರಲ್ಲಿ ಅತಿಶಯೋಕ್ತಿ ಇಲ್ಲ'[1] ಎಂದಿದ್ದಾರೆ.

ಜೈಮಿನಿ ಭಾರತ ಕಾವ್ಯದ ಸತತ ಅಭ್ಯಾಸದ ಫಲವಾಗಿ, ಈ ಕಾವ್ಯವನ್ನು ಆಧರಿಸಿ ಅನೇಕ ಯಕ್ಷಗಾನಗಳು ಹುಟ್ಟಿಕೊಂಡವು. ಅವುಗಳಲ್ಲಿ '೧. ಕುಶಲವರ ಕಾಳಗ ೨. ತಾಮ್ರಧ್ವಜ ಕಾಳಗ, ೩. ಬಭ್ರುವಾಹನ ಕಾಳಗ, ೪. ಚಂದ್ರಹಾಸನ ಕತೆ, ೫. ಸುರಥ ಸುಧನ್ವರ ಕಾಳಗ, ೬. ರಾಮಾಶ್ವಮೇಧ, ೭. ಉದ್ದಾಲೀಕನ ಕತೆ, ೮. ಸುಧನ್ವರ ಕಾಳಗ, ೯. ಸುಧನ್ವನ ಕತೆ'[2] ಎಂಬ ವಿಷಯಗಳ ಮೇಲೆ ಯಕ್ಷಗಾನಗಳು ಬರೆಯಲ್ಪಟ್ಟಿದ್ದು, ಕೆಲವೊಂದು ವಿಷಯಗಳ ಮೇಲೆ ಇಬ್ಬರು, ಮೂವರು ಕವಿಗಳು ಯಕ್ಷಗಾನಗಳನ್ನು ರಚಿಸಿದ್ದಾರೆ ಎಂದು ನಮೂದಿಸಲಾಗಿದೆ.

ಮಂಗಳೂರ ಮಿಶನ್ ಪ್ರೆಸ್‌ನವರು (ಲಿಥೊ) ೧೮೪೮ ರಲ್ಲಿ ಜೈಮಿನಿ ಭಾರತದ ಮೊದಲ ಮುದ್ರಣವನ್ನು ಮಾಡಿದರು. ಆಮೇಲೆ ಕ್ರಿ. ಶ. ೧೮೫೨ರಲ್ಲಿ ಸ್ಯಾಂಡರ್ಸನ್ ಡೇನಿಯಲ್ ಎಂಬವನು ಜೈಮಿನಿ ಭಾರತ ಸಂಧಿ ೧ ರಿಂದ ೧೧ರ ವರೆಗೆ ಇಂಗ್ಲಿಷಿನಲ್ಲಿ

---

1 'ವಾಗ್ಭೂಷಣ', ಸಂಪುಟ. ೨೨, ಸಂಚಿಕೆ ೫, ಪು. ೧೮೫.

2 'ಯಕ್ಷಗಾನಸಾಹಿತ್ಯ', ಕೆ.ಎಂ. ಕೃಷ್ಣರಾವ್, ಪು. ೯೭–೧೦೫.

ಭಾಷಾಂತರಿಸಿ ಅದಕ್ಕೆ ಟೀಕೆ ಟಿಪ್ಪಣಿಗಳನ್ನು ಬರೆದನು. ಕ್ರಿ. ಶ. ೧೮೬೦ ರಲ್ಲಿ ಮೊಗ್ಲಿಂಗನು ಸ್ವದೇಶಕ್ಕೆ ಹೋದಬಳಿಕ Z.D.M.G. ಎಂಬ ಮಾಸಪತ್ರಿಕೆಯಲ್ಲಿ ಕ್ರಿ.ಶ. ೧೮೭೦ ರಿಂದ ೭೪ರ ವರೆಗಿನ ವರ್ಷಗಳ ಸಂಚಿಕೆಗಳಲ್ಲಿ ಕನ್ನಡ ಜೈಮಿನಿ ಭಾರತದ ಜರ್ಮನ್ ಅನುವಾದವನ್ನು ಪ್ರಕಟಪಡಿಸಿದ್ದಾನೆ. ಮಿಶನರಿಗಳೂ ಕನ್ನಡ ಜೈಮಿನಿ ಭಾರತದ ಕಾವ್ಯಸೌಂದರ್ಯಕ್ಕೆ ಮನಸೋತು ತಮ್ಮ ಪಾಲಿನ ಸೇವೆಯನ್ನು ಸಲ್ಲಿಸಿದ್ದಾರೆ.

ಕ್ರಿ. ಶ. ೧೯೧೩ ರಿಂದ ಮುಂದೆ ದಕ್ಷಿಣಾಮೂರ್ತಿ, ಕರಿಬಸವಶಾಸ್ತ್ರಿ, ದೊಡ್ಡಬೆಲೆ ನಾರಾಯಣಶಾಸ್ತ್ರಿ, ನಂಜುಂಡಶಾಸ್ತ್ರಿ, ಸರಸ್ವತಿ, ತಿರುವೆಂಕಟಾಚಾರ್ಯ ಮುಂತಾದ ಅನೇಕರು ಜೈಮಿನಿ ಭಾರತದ ಹಸ್ತಪ್ರತಿಗಳನ್ನು ನೋಡಿ, ಆ ಆ ಕಾಲಕ್ಕೆ ಪರಿಷ್ಕರಿಸಿ ಟೀಕೆಟಿಪ್ಪಣಿಗಳನ್ನು ಬರೆದಿದ್ದಾರೆ. ಕ್ರಿ. ಶ. ೧೭೭೦–೭೧ ರಷ್ಟು ಪೂರ್ವದಲ್ಲಿಯೇ ಬರೆದ ಒಂದು ಟೀಕೆಯೂ ದ.ರಾ. ಬೇಂದ್ರೆಯವರ ಸಂಗ್ರಹದಲ್ಲಿದೆ.

ವೆಂಕಟ ರಂಗೋ ಕಟ್ಟಿ, ಶಾಂತಕವಿಗಳು, ಗೋವಿಂದರಾವ ಚುಳಿಕಿ ಮೊದಲಾದವರು ಮೊದಲ ೩,೪,೫ ಸಂಧಿಗಳನ್ನು ಸಂಪಾದಿಸಿದ್ದಾರೆ. ಸೀತಾ ಪರಿತ್ಯಾಗ, ಚಂದ್ರಹಾಸ, ತಾಮ್ರಧ್ವಜ ಆಖ್ಯಾನಗಳೂ ಪ್ರತ್ಯೇಕವಾಗಿ ಸಂಪಾದಿಸಲ್ಪಟ್ಟಿವೆ. ಬೆಂಡಿಗೇರಿ ಎಂಬುವರಿಂದ ಕೆಲವು ಸಂಧಿಗಳು ಇಂಗ್ಲಿಷ್ ಅರ್ಥದೊಂದಿಗೆ ಸಂಪಾದಿಸಲ್ಪಟ್ಟಿವೆ. ವಾಯ್. ಬಿ. ಜಠಾರ ಅವರು ಲಕ್ಷ್ಮೀಶನ ಪೀಠಿಕಾ ಸಂಧಿಯನ್ನು ಮರಾಠಿಯಲ್ಲಿ ಮತ್ತು ವಾರ್ಧಕ ಷಟ್ಪದಿಯಲ್ಲಿಯೇ ಅನುವಾದ ಮಾಡಿದರು. ಪಟವರ್ಧನ ಅಶ್ವತ್ಥ ನಾರಾಯಣಶಾಸ್ತ್ರಿಯವರ 'ಸಚಿತ್ರ ಜೈಮಿನಿ ಭಾರತ ಕಥಾಸಂಗ್ರಹ', ಭೀ. ಶಂ. ಪೂಜಾರರ 'ಸಂಪೂರ್ಣ ಜೈಮಿನಿ ಭಾರತ ಕಥಾಸಂಗ್ರಹ', ಮೇವುಂಡಿಯವರ 'ಬಿರುದಿನ ಕುದುರೆಯ ಹಿಂದೆ' ಮೊದಲಾದ ಕಾವ್ಯದ ಗದ್ಯಾನುವಾದಗಳು ಪ್ರಕಟವಾಗಿವೆ. ಕಾವ್ಯದ ಸಂಗ್ರಹ ಮಾಡುವ ಕಾರ್ಯವೂ ಆಗಿದೆ. ಇದು ಜೈಮಿನಿ ಭಾರತದ ಲೋಕಪ್ರಿಯತೆಯ ಪ್ರತೀಕ.

ಕ್ರಿ.ಶ. ೧೮೫೬ರಲ್ಲಿ ಬಾಳಾಚಾರ್ಯ ಗೋಪಾಳಾಚಾರ್ಯ ಸಕ್ಕರಿಯವರು ಮಯೂರಧ್ವಜ ಪ್ರತಾಪ, ಸುಧನ್ವನ ವಧೆ ಎಂಬ ಕೃತಿಗಳನ್ನು ರಚಿಸಿದ್ದಾರೆ. ಕುಂಡಲಗಿರಿ ಆಚಾರ್ಯರು ಕ್ರಿ.ಶ. ೧೮೬೫ರಲ್ಲಿ ಜೈಮಿನಿ ಭಾರತ ಕಥಾಸಂಗ್ರಹ ಮಾಡಿದ್ದಾರೆ. ಅಳಿಯ ಲಿಂಗರಾಜನು ಜೈಮಿನಿ ಭಾರತದಿಂದ ಪ್ರೇರಿತನಾಗಿ ಕುಶಲವರ ಕಥೆ, ಬಭ್ರುವಾಹನ ಕಾಳಗ, ಸುಧನ್ವನ ಕಾಳಗ ಎಂಬ ಕೃತಿಗಳನ್ನು (ಕ್ರಿ.ಶ. ೧೮೨೩–೭೪) ರಚಿಸಿದ್ದಾನೆ. ಶ್ರೀಮನ್ಮಹೀಶೂರ ರಾಜಕೀಯ ಪಾಠಶಾಲಾ ಮುಖ್ಯೋಪಾಧ್ಯಾಯರಾದ ವೆಂಕಟರಾಯ ಕವಿಗಳು ರಚಿಸಿದ 'ಚಂದ್ರಹಾಸಾಭ್ಯುದಯಂ' ಎಂಬ ಚಂಪೂ ಕೃತಿಯು (೧೬ ಆಶ್ವಾಸ, ೨೪೫ ಪುಟ) ಕ್ರಿ. ಶ. ೧೯೦೬ರಲ್ಲಿ ಎಚ್. ಆರ್. ಮಿಸ್ಸರ ಟೌನ್ ಪ್ರೆಸ್, ಬೆಂಗಳೂರಿಂದ ಪ್ರಕಟಿಸಲ್ಪಟ್ಟಿದೆ. ಕವಿಯ ವಿಜ್ಞಾಪನೆಯಲ್ಲಿ 'ಇದನ್ನು ನಾನು ವಿರಚಿಸುವಾಗ ಜೈಮಿನಿ ಭಾರತದಲ್ಲಿಯ ಚಂದ್ರಹಾಸ ಚರಿತೆಯೇ ನನಗೆ

ಮುಖ್ಯ ಆಧಾರ' ಎಂದಿದ್ದಾರೆ. ಅದಲ್ಲದೆ, 'ಕನ್ನಡದೊಳುವೆತ್ತ ನುಡಿ ಪಂಪನ, ರುದ್ರನ ಜಾಣ್, ಮನೋಜನಾ ಬಿನ್ನಣದೆಳ್ತರಂ **ಸೊಬಗು ಜೈಮಿನಿಕಾರನ,** ಶಾಂತಿ ವರ್ಮನಾ ಮನ್ನಣೆಯೋಜೆ, ಪೊನ್ನನ ಬೆಡಂಗು, ಷಡಕ್ಷರಿದೇವನುಗ್ಗಡಂ, ರನ್ನನ ಗಾಡಿ, ರಾಘವನ ನೀತಿಗಳಿರ್ಕೆದದೊಳ್ನಿರಂತರಂ' ಎಂದು ಪ್ರಾರ್ಥಿಸಿದ್ದಾರೆ.

ಕ್ರಿ. ಶ. ೧೯೨೨ರಲ್ಲಿ ಪ್ರಕಟವಾದ ದ.ರಾ. ಬೇಂದ್ರೆಯವರ 'ಕೃಷ್ಣಾಕುಮಾರಿ' ಎಂಬ ವಾರ್ಧಕ ಷಟ್ಪದಿ ಕಾವ್ಯವು ಕವಿ ಲಕ್ಷ್ಮೀಶನಿಗೆ ಅರ್ಪಿತವಾಗಿದೆ. ಅವನನ್ನು ಅವರು ತಮ್ಮ ಕಾವ್ಯಗುರುಗಳಲ್ಲಿ ಒಬ್ಬನು ಎಂದು ಒಪ್ಪಿಕೊಂಡಿದ್ದಾರೆ.

ಕ್ರಿ.ಶ. ೧೯೬೩ರಲ್ಲಿ ಪ್ರಕಟವಾದ 'ಶ್ರೀ ಶ್ರೀನಿವಾಸ ವಿಲಾಸಂ' ಎಂಬ ಷಟ್ಪದಿ ಕಾವ್ಯವನ್ನು ಆಸೂರಿ ಕೆ. ರಾಮಸ್ವಾಮಯ್ಯಂಗಾರ್ ಎಂಬುವರು ಬರೆದಿದ್ದಾರೆ. ಅದರಲ್ಲಿ ಅವರು ಪೂರ್ವತರಂಗ ಪದ್ಯ ೫ರಲ್ಲಿ

'ಹೊಸತಾದ ಕನ್ನಡದ ಕಾವ್ಯಂಗಳಂ
ಮುದದೆ ಸೃಜಿಸಿದ ನಾರಣಪ್ಪ ನರಹರಿ ಕಲಾ
ವಿದರತ್ನ ಲಕ್ಷ್ಮೀಶ ಕನಕಾದಿ ಕವಿವರರ
ಪದಕೆರಗಿ ಪದ್ಮಾವತೀ ವೆಂಕಟೇಶ ಕಲ್ಯಾಣಕೃತಿಯಂ ಪೇಳ್ವೆಪಂ'

ಎಂದಿದ್ದಾರೆ.

ಈ ರೀತಿ ಅನೇಕ ಆಧುನಿಕ ಕವಿಗಳ ಮೇಲೆ ಕವಿ ಲಕ್ಷ್ಮೀಶನ ಪ್ರಭಾವವಾಗಿದೆ. ಷಟ್ಪದಿ ಕಾವ್ಯರಚನೆ ಮಾಡುವ ಆಧುನಿಕ ಕವಿಗಳ ಮೇಲೆ ಲಕ್ಷ್ಮೀಶನ ಪ್ರಭಾವವು ನಿಶ್ಚಿತವಾಗಿ ಆದದ್ದು ಕಂಡುಬರುತ್ತದೆ. ಲಕ್ಷ್ಮೀಶನ ಜೈಮಿನಿ ಭಾರತವೆಂದರೆ ಷಟ್ಪದಿ ಕಾವ್ಯರಚನೆಯ ಮಲ್ಲಶಾಲೆ ಎಂದು ಕರೆಯಬಹುದು. ಏಕೆಂದರೆ, ಅದನ್ನು ಅಭ್ಯಾಸ ಮಾಡಿದವನಿಗೆ ಷಟ್ಪದಿಯಲ್ಲಿ ರಚನೆ ಸುಲಭವಾಗಿ ಕರತಲಾಮಲಕವಾಗುವುದು. ಕವಿ ಲಕ್ಷ್ಮೀಶನ ಕಾವ್ಯವನ್ನು ಸಂಪಾದಿಸುವುದು, ಗದ್ಯಾನುವಾದ ಮಾಡುವುದು, ಟೀಕೆ ಟಿಪ್ಪಣಿಗಳನ್ನು ಬರೆಯುವುದು ಅವಿರತವಾಗಿ ನಡೆದಿರುವುದನ್ನು ಕಾಣುತ್ತೇವೆ.

ಒಂದೇ ಬೀಜದಿಂದ ಅನೇಕ ಫಲಗಳನ್ನು ಕೊಡುವುದರಲ್ಲಿ ಬೀಜದ ಸಾರ್ಥಕತೆ ಇರುವಂತೆ, ಒಂದೇ ಕಾವ್ಯದ ಅಭ್ಯಾಸದಿಂದ ಅನೇಕ ಹೊಸ ಹೊಸ ಕೃತಿಗಳು ಹುಟ್ಟು ವಂತಾಗುವಲ್ಲಿ ಕಾವ್ಯದ ಸಾರ್ಥಕತೆ ಇದೆ. ಈ ದೃಷ್ಟಿಯಿಂದ ಕವಿ ಲಕ್ಷ್ಮೀಶನ ಭಾರತವು ಸಾರ್ಥಕತೆಯನ್ನು ಪಡೆದ ಕೃತಿಯಾಗಿದೆ. ಅನೇಕ ಜನರ ಕಾವ್ಯಕ್ಕೆ ಬೀಜವಾಗಿ ನಿಲ್ಲುವ ಸತ್ತ್ವವು ಅದರಲ್ಲಿದೆ. ಕ್ರಿ. ಶ. ೧೫೮೦–೧೫೯೦ರ ಕವಿ ಕೋನಪ್ಪನಿಂದ ಕ್ರಿ.ಶ. ೧೯೬೩ ಆಸೂರಿ ಕೆ. ರಾಮಸ್ವಾಮಯ್ಯಂಗಾರ್ ಅವರವರೆಗೆ ವಿವಿಧ ಕವಿಗಳು ಲಕ್ಷ್ಮೀಶನ ಕಾವ್ಯಪ್ರಭಾವಕ್ಕೊಳಗಾಗಿದ್ದಾರೆ. ಸುಮಾರು ೫೦೦ ವರ್ಷಗಳಾದರೂ ಇನ್ನೂ ಹೊಸತೆನಿಸುವ ಜೈಮಿನಿ ಭಾರತವು ಇಂದಿಗೂ ತನ್ನ ಪ್ರಭಾವವನ್ನು ಬೀರು ತ್ತದೆ. ಹೀಗೆ ಶತಮಾನದಿಂದ ಶತಮಾನಕ್ಕೆ ಕೀರ್ತಿಯುತವಾಗಿ ನಿಲ್ಲಬಲ್ಲ ಕಾವ್ಯವು ನಿಜವಾಗಿಯೂ ಮಹಾಕಾವ್ಯ. ಈ ಕಾವ್ಯದ ಲೋಕಪ್ರಿಯತೆಯನ್ನು ಇ. ಪಿ. ರೈಸ್

ಎಂಬ ಆಂಗ್ಲ ವಿಮರ್ಶಕನು ಹೊಗಳಿರುವ ಈ ಕೆಳಗಣ ಮಾತಿನಲ್ಲಿ ಅತಿಶಯೋಕ್ತಿ ಇಲ್ಲ:

'Lakshmisa, a Sri-Vaishnava Brahmin of Devanur, in Kadur Taluk, is the author of the Jaimini Bharata, which is more famous than any other work of Kanarese literature, esteemed alike by learned and un-learned and universally studied.'

[ಕಡೂರ ತಾಲೂಕಿನಲ್ಲಿಯ ದೇವನೂರಿನಲ್ಲಿ ಜನಿಸಿದ ಶ್ರೀವೈಷ್ಣವ ಬ್ರಾಹ್ಮಣ ಲಕ್ಷ್ಮೀಶನು ಜೈಮಿನಿ ಭಾರತದ ಕರ್ತೃ. ಈ ಕಾವ್ಯವು ಕನ್ನಡ ಸಾಹಿತ್ಯದಲ್ಲಿ ಪ್ರಖ್ಯಾತವಾದ ಕೃತಿ. ಪಂಡಿತಪಾಮರರಿಂದ ಮನ್ನಣೆಯನ್ನು ಪಡೆದು ಸಾರ್ವತ್ರಿಕವಾಗಿ ಅಭ್ಯಸಿಸಲ್ಪಟ್ಟ ಕೃತಿಯಾಗಿದೆ.]

## ತೆಲುಗು ಜೈಮಿನಿ ಭಾರತ

ತೆಲುಗು ಜೈಮಿನಿ ಭಾರತದ ಕವಿ 'ಪಿಲ್ಲಲಮರ್ರಿ ಪಿನವೀರಭದ್ರ' ಎಂಬುವನು. 'ಕವಿಜೀವಿತಮುಲು' ಎಂಬ ಗ್ರಂಥದ ಅಭಿಪ್ರಾಯದ ಪ್ರಕಾರ ಈ ಕವಿಯ ಕಾಲ ಕ್ರಿ.ಶ. ೧೩೦೦–೧೩೫೦. ಆದರೆ ಕೀರ್ತಿಶೇಷ ವೀರೇಶಲಿಂಗಂ ಪಂತುಲು ಅವರು ಇವನ ಕಾಲವನ್ನು ಕ್ರಿ.ಶ. ೧೪೫೦–೧೪೮೦ ಎಂದು ನಿರ್ಣಯಿಸಿದ್ದಾರೆ.

ಪಿಲ್ಲಲಮರ್ರಿ ನಿಯೋಗಿ ಬ್ರಾಹ್ಮಣನಾಗಿದ್ದನು. ಇವನದು ಭಾರದ್ವಾಜಗೋತ್ರ. ಈತನ ತಂದೆ ಗಾದಯಾಮಾತ್ಯ, ತಾಯಿ ನಾಗಾಂಬೆ, ಅಣ್ಣ ಪೆದವೀರನ್ನ. ಭಾರತೀ ತೀರ್ಥರು ಈ ಕವಿಯ ಗುರು. ಪಿನವೀರಭದ್ರನು ಜೈಮಿನಿ ಭಾರತವನ್ನು ತೆಲುಗಿಗೆ ಅನುವಾದಿಸಿ ಸಾಳುವ ಗುಂಡ (ನರಸಿಂಹರಾಯ–I) ನೃಪಾಲನಿಗೆ ಒಪ್ಪಿಸಿದನು.[1] ಇವನ 'ಜೈಮಿನಿ ಭಾರತಮು' ೮ ಆಶ್ವಾಸಗಳ ಒಂದು ಚಂಪೂ ಕಾವ್ಯವಾಗಿದೆ. ಈ ಕಾವ್ಯವು ಮೂಲ ಸಂಸ್ಕೃತ ಕಾವ್ಯವನ್ನು ಹೆಚ್ಚು ಅಂಶಗಳಲ್ಲಿ ಹೋಲುತ್ತದೆ. ಕೆಲಕೆಲವು ಕಡೆಗಂತೂ ಶಬ್ದಶಃ ಭಾಷಾಂತರವಾಗಿದೆ. ಸಂಸ್ಕೃತ ಕಾವ್ಯದಂತೆಯೇ ಈತನೂ ಮಹಾ

1 ಇದಲ್ಲದೇ ಈ ಕವಿ 'ಶೃಂಗಾರ ಶಾಕುಂತಲ', 'ಅವತಾರ ದರ್ಪಣ', 'ನಾರದೀಯ', 'ಮಖಮಾಹಾತ್ಮ್ಯ', 'ಮಾನಸೋಲ್ಲಾಸಸಾರ', 'ನವರತ್ನಮುಲು', 'ಸಪ್ತಾಂಗಪದ್ಧತಿ' ಇತ್ಯಾದಿ ಗ್ರಂಥಗಳನ್ನು ರಚಿಸಿದಂತೆ ತಿಳಿಯುತ್ತದೆ. ಪುರುಷಾರ್ಥನಿಧಿ ಎಂಬ ಗ್ರಂಥವನ್ನೂ ಇವನು ಬರೆದಿದ್ದಾನೆಂದು ಊಹೆ. ಶೃಂಗಾರ ಶಾಕುಂತಲ ಪ್ರಚಾರದಲ್ಲಿದೆ.

ಪಿನವೀರಭದ್ರನ ಅಜ್ಜ, ತಂದೆ, ಹಿರಿಯ ಅಣ್ಣ ಇವರೂ ಕವಿಗಳಾಗಿದ್ದರು. ಇಂತಹ ಮನೆತನದಲ್ಲಿ ಹುಟ್ಟಿದ ಈತನು ತೆಲುಗು ಜೈಮಿನಿ ಭಾರತವನ್ನು ಒಂದು ತಿಂಗಳಲ್ಲಿ ರಚಿಸುವ ಪಣ ತೊಟ್ಟಿದ್ದಂತೆಯೂ ಕೊನೆಗೆ ಒಂದೇ ರಾತ್ರಿಯಲ್ಲಿ ಕವಿಯೂ ಸರಸ್ವತಿಯೂ ಕೂಡಿ ಬರೆದು ಮುಗಿಸಿದಂತೆಯೂ ದಂತಕಥೆ ಇದೆ. ಈ ಕವಿಗೆ ಯೋಗ ಸಾಮರ್ಥ್ಯವಿತ್ತು ಎಂಬ ಬಗ್ಗೆಯೂ ಒಂದು ದಂತಕಥೆಯುಂಟು.

ಜೈಮಿನಿ ಭಾರತದ ಆರಂಭದಲ್ಲಿ ಪಿಲ್ಲಲಮರ್ರಿ ವಾಲ್ಮೀಕಿ, ವ್ಯಾಸ, ಕಾಳಿದಾಸ, ಬಿಲ್ಹಣ, ಬಾಣ, ಮಯೂರ, ಶುಕ, ಭವಭೂತಿ, ಶಿವಭದ್ರ, ಮಲ್ಹಣ, ಭಾರವಿ ಎಂಬ ಸಂಸ್ಕೃತ ಕವಿಗಳನ್ನೂ, ನನ್ನಯಭಟ್ಟ, ತಿಕ್ಕನ ಎರ್ರಪ್ರೆಗ್ಗಡ ಎಂಬ ತೆಲುಗು ಕವಿಗಳನ್ನೂ ಸ್ಮರಿಸುತ್ತಾನೆ.

ಕಾವ್ಯದ ಲಕ್ಷಣವೆಂದು ಶಾಸ್ತ್ರದಲ್ಲಿ ಪರಿಗಣಿತವಾದ ಅಷ್ಟಾದಶ ವರ್ಣನೆಗಳಿಗೆ ಸ್ಥಾನವನ್ನು ಕೊಟ್ಟಿಲ್ಲ.

ಧರ್ಮರಾಜನ ಮುಖವು 'ಕಡುಬೇಸಗೆಯ ಬಿಸಿಲಿಂದ ಬಸವಳಿದ ಕೋಮಲ ರಸಾಲದಂತೆ' ಆಗಿರುವುದನ್ನು ನೋಡಿದ ವ್ಯಾಸನು ಅದರ ಕಾರಣವನ್ನು ವಿಚಾರಿಸುವ ಕನ್ನಡ ಕಾವ್ಯದಲ್ಲಿಯ ಸನ್ನಿವೇಶವು ತೆಲುಗು ಕಾವ್ಯದಲ್ಲಿ ಇಲ್ಲ. ಅಲ್ಲಿ ಧರ್ಮನು ತನ್ನ ದುಃಖವನ್ನು ತಾನಾಗಿಯೆ ತೋಡಿಕೊಳ್ಳುತ್ತಾನೆ :

ಉ || ಸತ್ಯವತೀತನೂಭವ ನೃಶಂಸತ ಭೀಷ್ಮನಿಗುಂಭಜನ್ಮುನಾ
ದಿತ್ಯಕುಮಾರು ನೂರಕ ವಧಿಂಚಿತಿ ರಾಜ್ಯರಮಾ ವಿಭೂತಿ ಕೌ–
ದ್ಧತ್ಯಮು ತೋಡುತನ್ ಸಮುಧರ್ಮಮು ವೀಸರಪುಚ್ಚಿ ವಂಚನಾ
ಕೃತ್ಯಜ ಮೈನಯಿಾ ನಿಬಿಡ ಕಿಲ್ಬಿಷಮೇಮಿಟ ಜಕ್ಕನಯ್ಯೆಡುನ್ ||

—ಆ. ೧, ಪ ೫೬

[ವ್ಯಾಸರೇ, ಭೀಷ್ಮನನ್ನೂ ಕುಂಭಜನ್ಮ (ದ್ರೋಣ)ನನ್ನೂ ಆದಿತ್ಯಕುಮಾರ (ಕರ್ಣ)ನನ್ನೂ ಅನಾವಶ್ಯಕವಾಗಿ ವಧಿಸಿದೆ ; ರಾಜ್ಯ ವೈಭವಕ್ಕಾಗಿ ಸಮುಧರ್ಮವನ್ನು ಬೀಸಾಡಿ ವಂಚನಾಕೃತ್ಯಗಳನ್ನು ಮಾಡಿದೆನು].

ಇಲ್ಲಿ ಎಲ್ಲವನ್ನೂ ವಾಚ್ಯಾರ್ಥದಲ್ಲಿ ಹೇಳಿರುವುದರಿಂದ ಓದುಗನ ಹೃದಯವನ್ನು ಮೀಟಿ ಔತ್ಸುಕ್ಯವನ್ನುಂಟು ಮಾಡುವ ಶಕ್ತಿ ಇದಕ್ಕಿಲ್ಲ. ಕನ್ನಡ ಕಾವ್ಯದಲ್ಲಿ ಭಾವಪೂರ್ಣವಾದ ಸೂಚ್ಯಾರ್ಥದಲ್ಲಿ ಹೇಳಿರುವುದರಿಂದ ಓದುಗನ ಎದೆಯನ್ನು ಮಿಡಿಯುವಂತಾಗಿದೆ.

ಅಶ್ವಮೇಧ ಯಾಗವನ್ನು ಮಾಡೆಂದು ವ್ಯಾಸರು ಹೇಳಿದಾಗ ತೆಲುಗು ಧರ್ಮರಾಜನು,

'.....................ಗೋರುಚುಟ್ಟು ಪೈ
ರೋಕಟಿ ಪೋಟು ಚಂದಮುಗರೋಸಿ ಜನುಲ್ ನನು ಜೂಚಿ ತಿಟ್ಟರೆ ?'

[ಉಗುರುಸುತ್ತಿನ ಮೇಲೆ ಒನಕೆಯ ಪೆಟ್ಟು ಬಿದ್ದಹಾಗೆ (ಯುದ್ಧದಿಂದ) ಬೇಸತ್ತ ಜನರು ನನ್ನನ್ನು ತೆಗಳುವುದಿಲ್ಲವೇ ?] ಎಂದು ಕೇಳುತ್ತಾನೆ. ಕುರುಕ್ಷೇತ್ರ ಯುದ್ಧದಿಂದ ನೊಂದ ಜನರನ್ನು ಯಜ್ಞಾಶ್ವ ರಕ್ಷಣೆಗೆ ಹೊರಡಿರಿ ಎನ್ನುವುದು ಉಗುರುಸುತ್ತಾದ ಬೆರಳನ್ನು ಒನಕೆಯಿಂದ ಜಜ್ಜಿದಂತೆ ಎಂದು ಧರ್ಮರಾಜನು ಭಾವಿಸುತ್ತಾನೆ. ಈ ಉಪಮೆ ಇನ್ನಿತರ ಕಾವ್ಯಗಳಲ್ಲಿಲ್ಲ.

ತೆಲುಗು ಛಂದಶ್ಶಾಸ್ತ್ರದಲ್ಲಿ ಮುಕ್ತಪದಗ್ರಸ್ತ ಎಂಬ ಶೈಲಿಯನ್ನು ಹೇಳಿದೆ. ಈ ಶೈಲಿಯನ್ನು ಕವಿಯು ರಾಜನ ವರ್ಣನೆಗೆ ಉಪಯೋಗಿಸಿದ್ದಾನೆ.

ಪ್ರಮದಾಸ್ವಾಂತ ನಿಶಾಂತ ಶಾಂತ ನವಶೌರ್ಯ ಪ್ರೌಢಿಮಾಭೋಗ ಭೋ
ಗ ಮರುದ್ರಾಜಸಮಾನ ಮಾನಕಲನಾಕೌರವ್ಯರವ್ಯಗ್ರಜ
ನ್ಮಮನೋಜ್ಞ ಸ್ಮೃತಿಮಾರ್ಗ ಮಾರ್ಗಣ ಕುಟುಂಬು ಸ್ಥೈರ್ಯ ಸಂಕಲ್ಪಕ
ಲ್ಪ ಮಹೀಜ ಪ್ರತಿಮಾನದಾನ ಸುಕ್ಷಮಾಭಾಸ್ವತ್ಕರಾಂಬೋರುಹಾ ||

ಈ ರೀತಿಯನ್ನು ಕನ್ನಡ ಚಂಪೂ ಕಾವ್ಯಗಳಲ್ಲಿ ಮತ್ತು ಕನ್ನಡ ಜೈಮಿನಿ ಭಾರತದಲ್ಲಿಯೂ ಕಾಣುತ್ತೇವೆ.

ರಾಮಾಯಣದ ಕಥೆಯನ್ನು ಹೇಳುವಾಗ ತೆಲುಗುಕವಿ ಆದಷ್ಟು ಸಂಕ್ಷೇಪಿಸುವ ಕಡೆಗೇ ಗಮನವಿತ್ತಿದ್ದಾನೆ. ರಾಮನ ತಪಸ್ಸು, ರಾಮ-ರಾವಣ ಯುದ್ಧ, ಅಗ್ನಿ ಪರೀಕ್ಷಾನಂತರ ಸೀತಾಸ್ವೀಕಾರ, ವಿಭೀಷಣ-ಜಾಂಬವಂತಾದಿಗಳೊಡನೆ ರಾಮನ ಅಯೋಧ್ಯಾಗಮನ, ಪೌರರಿಂದ ಸ್ವಾಗತ, ವಸಿಷ್ಠರಿಗೆ ರಾಮನ, ರಾಮನಿಗೆ ಭರತಾದಿಗಳ ವಂದನೆ—ಈ ಎಲ್ಲ ಸಂಗತಿಗಳನ್ನು ಎರಡೇ ಎರಡು ಪದ್ಯಗಳಲ್ಲಿ (ಒಂದು ಸೀಸಪದ್ಯ, ಒಂದು ತೇಟಗೀತ) ಹೇಳಿ ಮುಗಿಸಿದ್ದಾನೆ.

ಸೀತೆಯನ್ನು ಲಕ್ಷ್ಮಣನು ಅರಣ್ಯಕ್ಕೆ ಕೊಂಡೊಯ್ದಾಗ ಅವಳಿಗೆ ಕಾಡ್ಕಿಚ್ಚು ಕಂಡಿತೇ ಹೊರತು ಹೋಮಧೂಮ ಕಾಣಲಿಲ್ಲ; ಸಿಂಹ ಹುಲಿ ಕಂಡವೇ ಹೊರತು ಮುನಿಗಳ ಗುಂಪು ಕಂಡುಬರಲಿಲ್ಲ ಎಂದು ಕವಿ ಹೇಳುತ್ತಾನೆ. 'ಇದಕ್ಕೆ ಕಾರಣ, ಸೀತೆ ರಾಮನನ್ನು ಕಳೆದುಕೊಂಡ ಪಾಪಕರ್ಮ. ಅವಳಿಗೆ ಒಳ್ಳೆಯವು ಎಲ್ಲಿಂದ ಕಂಡಾವು?' ಎಂದೆನ್ನುತ್ತಾನೆ ಪಿನವೀರಭದ್ರ. ಆದರೆ ಈ ಕಾರಣವು ಅಷ್ಟು ಸಮರ್ಪಕವಲ್ಲ. ಸೀತೆ ರಾಮನನ್ನು ಕಳೆದುಕೊಳ್ಳಲು ಅವಳ ದುರ್ದೈವವು ಕಾರಣವಾಗಬಲ್ಲುದೇ ಹೊರತು ಅವಳ ಪಾಪಕರ್ಮ ಆಗಲಾರದು. ಕವಿ ಲಕ್ಷ್ಮೀಶನು ಈ ಸನ್ನಿವೇಶವನ್ನು ಈ ರೀತಿ ರಮ್ಯವಾಗಿ ವರ್ಣಿಸಿದ್ದಾನೆ :

'.........................ರಾಘವನೆ
ಜೀವೇಶನಾಗಿರಲ್ಕಾತನಂಘ್ರಿಯನಗಲ್ದೀಗ ನಾಂ ಬಂದ ಬಳಿಕ
ಈ ವನದೊಳಿನ್ನು ಪುಣ್ಯಾಶ್ರಮಂ ಗೋಚರಿಪು
ದೇ ?............................' —ಕ.ಜೈ.ಭಾ.,ಸಂ. ೧೯, ಪ ೧೨

ರಾಮನು ತನ್ನನ್ನು ತ್ಯಜಿಸಿದ ಸುದ್ದಿ ಸೀತೆಗೆ ಲಕ್ಷ್ಮಣನಿಂದ ತಿಳಿದಾಗ, ಅವಳು 'ಬಿರುಗಾಳಿಗೆ ಬೀಳುವ ಪುಷ್ಪದ ಬಳ್ಳಿಯ ಹಾಗೆ, ಅತಿ ಕಠೋರವಾದ ಭಾಷಣವನ್ನು ಕೇಳಿ ಮೂರ್ಛಿತಳಾಗಿ ನೆಲಕ್ಕೆ ಬಿದ್ದಳು' ಎಂದಿದೆ. ಆಗ ಲಕ್ಷ್ಮಣನು ಸೀತೆಗೆ ಗಾಳಿ ಹಾಕುವ ಪ್ರಸಂಗ ಬರುತ್ತದೆ. ರಾಮನು ಮಾಡಬೇಕಾದ ಕಾರ್ಯವನ್ನು ತಾನು ಮಾಡಬೇಕಾಗಿ ಬಂದುದಕ್ಕಾಗಿ ಅವನು ಮರುಗುತ್ತಾನೆ; 'ತಾನು ಸತತ ರಾಘವ ಸೇವೆಯಲ್ಲಿ ನಿರತನಾಗಿರುವವನಾಗಿದ್ದರೆ ಸೀತೆ ಪ್ರಾಣಮಯಿಯಾಗಿ ಬದುಕಲಿ' ಎಂದು ಬೇಡಿಕೊಳ್ಳುತ್ತಾನೆ. ಅವಳು ಸಪ್ರಾಣವಾಗಿ ಏಳುತ್ತಾಳೆ. ಇಲ್ಲಿ ಲಕ್ಷ್ಮಣನ ರಾಮಭಕ್ತಿ ಎದ್ದು ಕಾಣುತ್ತದೆ.

ರಾಮನನ್ನು ಗೆದ್ದು ಬಂದ ಲವಕುಶರಿಗೆ ತೆಲುಗು ಕಾವ್ಯದಲ್ಲಿಯ ಸೀತೆ, 'ಯುದ್ಧದಲ್ಲಿ ನೀವು ರಾಘವನನ್ನು ಸೋಲಿಸಿದ ರೀತಿ, ಚಿಗರಿಗಳು ಸಿಂಹವನ್ನು ಜಯಿಸಿದ ಹಾಗಿದೆ' ಎನ್ನುತ್ತಾಳೆ. ಈ ಉಪಮೆ ಇನ್ನಿತರ ಕಾವ್ಯಗಳಲ್ಲಿ ಇಲ್ಲ.

ಇಂತಹ ಅನೇಕ ವೈಶಿಷ್ಟ್ಯಪೂರ್ಣವಾದ ಭಾಗಗಳು ಪಿಲ್ಲಲಮರ್ರಿ ಪಿನವೀರ

ಭದ್ರನ ಜೈಮಿನಿ ಭಾರತದಲ್ಲಿವೆ. 'ಪಿನವೀರನ ವಾಕ್ಯಸರಣಿ ರಸಿಕರ ಕಿವಿಗೆ ರಸದ ಔತಣವಿದ್ದಂತೆ'; ಇವನಿಗೆ ಯಾವ ಸುಕವಿ ಸರಿದೊರೆಯಾಗಬಲ್ಲನು ?' ಎಂದು ಈ ಕವಿ ತನ್ನ ಪ್ರೌಢಿಮೆಯ ಬಗೆಗೆ ಹೇಳಿಕೊಂಡಿದ್ದಾನೆ. ತೆಲುಗು ಸಾಹಿತ್ಯದಲ್ಲಿ ಪಿನವೀರಭದ್ರನನ್ನೂ ಮೀರಿದ ಕವಿಗಳೂ ಇದ್ದಾರೆ. 'ಇವನ ಕಾವ್ಯ ಉತ್ತಮ ಕಾವ್ಯ ; ಅತ್ಯುತ್ತಮ ಕಾವ್ಯವೇನಲ್ಲ' ಎಂದೂ, 'ಈತನ ಕಾವ್ಯ ತಿಕ್ಕನ ಸೋಮಯಾಜಿಯೆಂಬ ತೆಲುಗು ಕವಿಯ ಕಾವ್ಯವನ್ನು ಹೋಲುತ್ತದೆ' ಎಂದೂ ಪಂಡಿತರು ಅಭಿಪ್ರಾಯಪಟ್ಟಿದ್ದಾರೆ.

### 'ಪುರುಷಾಮೃಗ' ಪ್ರಸಂಗದ ತೌಲನಿಕ ಸಮೀಕ್ಷೆ

'ದಿಗ್ವಿಜಯ ಪರ್ವದಲ್ಲಿ ರಾಜಸೂಯ ಯಾಗದ ಕ್ರಮಗಳನ್ನು ವರ್ಣಿಸುವಾಗ ಯಾಗದಲ್ಲಿ ಕೆಲವು ಕಾರ್ಯಗಳನ್ನು ನಿರ್ವಹಿಸುವುದಕ್ಕೋಸ್ಕರ 'ಪುರುಷ ಮೃಗ'ವೆಂಬ ಪ್ರಾಣಿಯನ್ನು ಕರೆತರುವುದಕ್ಕಾಗಿ ಭೀಮಸೇನನನ್ನು ಕಳುಹಿಸಿದ ಹಾಗೂ ಭೀಮಸೇನನು ಅದನ್ನು ಕರೆತಂದು ಕಾರ್ಯನಿರ್ವಾಹವನ್ನು ಮಾಡಿದ ಎಂದು ವರ್ಣಿಸಲ್ಪಟ್ಟಿರುತ್ತದೆ. **ಈ ಕಥೆಯು ಸಂಸ್ಕೃತ ಮಹಾಭಾರತದಲ್ಲಿ ಕಾಣುವುದಿಲ್ಲ. ಆದರೆ ಈ ಕಥೆಯು ಜೈಮಿನಿ ಭಾರತದಲ್ಲಿ ಇರುವುದಾಗಿ ಕೂರೇಶ ವಿಜಯದ ಮೂರನೆಯ ಶ್ಲೋಕದಲ್ಲಿರುವ 'ಹನುಮತಃ ಪುಚ್ಛ ರೋಮ್ನೋಶ್ವರತ್ವಾತ್' ಎಂಬ ಪದಗಳ ವ್ಯಾಖ್ಯಾನದಲ್ಲಿ ನಿರೂಪಿಸಲ್ಪಟ್ಟಿದೆ.**[1] ಈ ವಾಕ್ಯವೃಂದದ ಮೇಲಿಂದ ಯಾವುದೋ ಒಂದು ಕಾಲಕ್ಕೆ ಜೈಮಿನಿ ಭಾರತದ ಎಲ್ಲ ಪರ್ವಗಳು ಉಪಲಬ್ಧವಾಗಿರಬೇಕು. ಅದರಲ್ಲಿ ಈ ಪುರುಷಾಮೃಗ ಪ್ರಸಂಗ ಬಂದಿರಲು ಸಾಕು. ಈ ಜೈಮಿನಿ ಭಾರತವನ್ನು ಕವಿ ಕುಮಾರವ್ಯಾಸನೂ ನೋಡಿರಲೂಬಹುದು. ಆದರೆ ಈಗ ಅಶ್ವಮೇಧಿಕ ಪರ್ವ ಒಂದೇ ಉಪಲಬ್ಧವಾಗಿದೆ.

ಲಕ್ಷ್ಮೀಶನ ಜೈಮಿನಿ ಭಾರತದ ಹಸ್ತಪ್ರತಿಗಳನ್ನು ನೋಡುವಾಗ K 1304 ಎಂಬ ಹಸ್ತಪ್ರತಿಯು ಸುಯೋಗದಿಂದ ಲಭಿಸಿತು. ಅದರಲ್ಲಿ ೪೮ ಪದ್ಯಗಳು ಹೆಚ್ಚಿಗೆ ಇದ್ದದ್ದರಿಂದ ಆ ಪದ್ಯಗಳನ್ನು ಪರೀಕ್ಷಿಸಿದೆವು. ಅವು ಜೈಮಿನಿ ಭಾರತಕ್ಕೆ ಸಂಬಂಧಿಸಿದವುಗಳಲ್ಲ. ಪುರುಷಾಮೃಗ ಪ್ರಸಂಗವನ್ನು ಕುರಿತು ಇರುವುದಾಗಿ ಕಂಡುಬಂದಿತು. ಆಗ ಸ್ವಾಭಾವಿಕವಾಗಿಯೇ ಈ ಪದ್ಯಗಳು ಕುಮಾರವ್ಯಾಸ ಭಾರತ ಸಭಾಪರ್ವ, ರಾಜಸೂಯ ಪ್ರಸಂಗದ ಕಾಲದ ಪದ್ಯಗಳಿರಲೇಬೇಕು ಎಂದು ತೋರಿತು. ಆದುದರಿಂದ ಸಭಾಪರ್ವದ ೭ನೆಯ ಸಂಧಿಯನ್ನು K 1304 ರಲ್ಲಿ ದೊರೆತ ಪುರುಷಾಮೃಗದ ಪ್ರಸಂಗದ ಪದ್ಯಗಳೊಡನೆ ಹೋಲಿಸಿ ನೋಡಲು ಇಚ್ಛಿಸಿದೆವು.

ಈ ಎರಡು ಭಾಗಗಳನ್ನು ಹೋಲಿಸಿ ನೋಡಿದಾಗ K 1304 ರಲ್ಲಿರುವ ಪದ್ಯಗಳು ಕುಮಾರವ್ಯಾಸ ಭಾರತ ಸಭಾಪರ್ವ ೭ನೆಯ ಸಂಧಿಯ ಪದ್ಯಗಳಲ್ಲ ಎಂದು

---

1 'ಕರ್ನಾಟಕ ಮಹಾಭಾರತ'—೩ನೆಯ ಸಂಪುಟ, ಸಭಾಪರ್ವ; ಸಂ. ವಿ. ಶಾಮಾಚಾರ್ಯ Mysore Government Branch Press, 1915. ಅವತರಣಿಕೆ : p. III

ಖಚಿತವಾಯಿತು. ಪ್ರತಿ ಪದ್ಯದಲ್ಲಿಯೂ ಭೇದವಿರುವುದನ್ನು ಕಂಡೆವು. ಉದಾ :

ಸುರರ ದುಂದುಭಿ ಮೊಳಗೆ ಧರಣೀ
ಶ್ವರನ ಚಿಂತೆಗಳಡಗೆ ಯಮಸುತ
ಪುರಕೆ ಪುರುಷಾಮೃಗ ಸಹಿತ ನಡೆತಂದನಾ ಭೀಮ ॥

ಸೂಚನಾ ಪದ್ಯ, ಸಭಾಪರ್ವ, ಪುಟ ೧೨೦

ಭರದಲಿಂದ್ರಪ್ರಸ್ಥ ಪುರಕಾ
ಮುರಹರನ ನೇಮದಲಿ ಪುರುಷಾ
ಮೃಗವ ತಂದನು ಭೀಮ ಕರುಣದಲಂಜನಾಸುತನ ॥

K 1304 ಸೂಚನಾ ಪದ್ಯ.

ಸೂಚನಾ ಪದ್ಯದಲ್ಲಿ ಆ ಸಂಧಿಯಲ್ಲಿ ಬರುವ ಕಥಾನಕದ ಸಾರಾಂಶವಿರುತ್ತದೆ. ಮೇಲಿನ ಎರಡು ಸೂಚನಾ ಪದ್ಯಗಳನ್ನು ನೋಡಿದಾಗ ಎರಡನೆಯ ಸೂಚನಾ ಪದ್ಯ ಸರಸವಾಗಿದೆ. ಪುರುಷಾಮೃಗವನ್ನು ತರಲು ಮುರಹರನ ಆಜ್ಞೆಯಾದದ್ದು ಮತ್ತು ಅಂಜನಾಸುತ ಹನುಮಂತನ ಸಹಾಯವನ್ನು ಭೀಮನು ಪಡೆದದ್ದು ಈ ಸಂಧಿಯಲ್ಲಿ ಮಹತ್ತ್ವದ ಅಂಶಗಳಾಗಿವೆ. ಈ ಎರಡೂ ಅಂಶಗಳ ಲವಲೇಶವೂ ಮೊದಲಿನ ಸೂಚನಾ ಪದ್ಯದಲ್ಲಿ ಇಲ್ಲ.

ಸಭಾಪರ್ವ, ಪುಟ ೧೨೫

ಧರಣಿಪತಿ ಚಿತ್ತೈಸು ಕಪಿಕುಲ
ವರನ ನೇಮವ ಕೊಂಡು ಬೀಳ್ಕೊಂ-
ಡರಿವಿದಾರಣ ನಿಡೆದು ಗಿರಿ ಗುಹೆಗಳಲಿ ಮೃಗಪತಿಯ ।
ಅಜಿಸುತ್ತೈತರಲಮಳ ಕಾಂಚನ
ಗಿರಿಯ ದಕ್ಷಿಣ ಭಾಗದಲಿ ಬರ
ಬರಲು ತೀಡಿತ್ತಮಳ ಸೌಗಂಧದಲಿ ಪವಮಾನ ॥ ೨೦

K 1304ರಲ್ಲಿ

ಧರಣಿಪತಿ ಚಿತ್ತೈಸು ಕಪಿಕುಲ
ವರನ ನೇಮವ ಕೊಂಡು ಬೀಳ್ಕೊಂ-
ಡರಿ ವಿದಾರಣ ನಡದು ಗಿರಿ ಗುಹೆಗಳಲಿ ಮೃಗಪತಿಯಾ ।
ಅರಸುತ್ತೈತರಲಮರ ಕಾಂಚನ
ಗಿರಿಯ ಪಶ್ಚಿಮ ಭಾಗದಲಿ ಬರ
ಬರಲು ತೀಡಿತು ಪುಷ್ಪಚಯಮಿಗೆ ಮೆರೆವ ಸರಸಿಯ ಕಂಡನಾ ಭೀಮ ॥ ೧೬

ಸಭಾಪರ್ವ, ಪುಟ ೧೨೮

ಇತ್ತ ಕೇಳೀಶ್ವರನನರ್ಚಿಸಿ
ಭಕ್ತಿಯಿಂದ ಸಮೀರಜನ ಅರ-
ಸುತ್ತಲೀಕ್ಷಿಸಿ ಭರದಿ ಹೋದೊಡಿದಾತನಿರ್ದೆಡೆಗೆ ।

ಚಿತ್ತವನು ಬೀಟಿಕ್ಕೊಂಡೊಡಾಗಲೆ
ಹತ್ತಿಬರೆ ಮತ್ತೊಂದು ರೋಮವ
ನೆತ್ತಿ ಬಿಸುಡಲು ಶಂಭು ನೆಲಸಿದರಾತನಿದಿರಿನಲಿ || ೨೯

K 1304 :

ಇತ್ತ ಕೇಳೀಶ್ವರನನರ್ಚಿಸಿ
ಭಕ್ತಿಯಿಂದ ಸಮೀರಜನನರ–
ಸುತ್ತಲೀಕ್ಷಿಸಿ ಹೋದನೆತ್ತಲು ಯೆನುತ ನಾಲ್ದೆಸೆಯಾ ।
ಚಿತ್ತವನು ಬೀಳ್ಕೊಟ್ಟು ನಾಗಳೆ
ಹತ್ತೆ ಬರೆ ಮತ್ತೊಂದು ರೋಮವ
ನೆತ್ತಿ ಬಿಸುಡಲು ಶಂಭು ನೆಲಸಿದನಾತನಿದಿರಿನಲಿ || ೨೭

ಸಭಾಪರ್ವ, ಪುಟ ೧೩೦

ಇತ್ತ ತೆಗೆಯೆ ಧನಂಜಯನು ಮಗು
ಚಿತ್ತ ತೆಗೆವ ಮೃಗೇಂದ್ರನತ್ತಲು
ಮತ್ತೆ ತೂಗುವನೀಶ್ವರಾರ್ಚಕನಿತ್ತ ಬರಸೆಳೆವ ।
ಅತ್ತಲಿತ್ತಲು ತೆಗೆಯಲಿಬ್ಬರ
ಸತ್ವ ಸವೆಯದು ನಡುವೆ ಪವನಜ
ನತ್ಯಧಿಕ ಬೆಂಡಾದನೈ ಭೂಪಾಲ ಕೇಳೆಂದ || ೩೭

K 1304 :

ಅತ್ತ ತೆಗೆವ ಧನಂಜಯನು ಮಗು
ಳಿತ್ತ ತೆಗೆವ ಮೃಗೇಂದ್ರನತ್ತಲು
ಮತ್ತೆಳೆವ ನರನೀಶ್ವರಾರ್ಚಕನಿತ್ತ ಬರಸೆಳೆವಾ ।
ಅತ್ತಲಿತ್ತಲು ಸೆಳೆಯಲಿಬ್ಬರ
ಸತ್ವ ಸವೆಯದು ನಡುವೆ ಪವನನ
ಪುತ್ರನತಿ ಬೆಂಡಾದನೆಲೆ ಜನಮೇಜಯಕ್ಷಿತಿಪಾ || ೩೫

ಹೀಗೆ ಕೆಲವು ಪದ್ಯಗಳಲ್ಲಿ ಸಾಮ್ಯವು ಕಂಡರೂ ಪದ್ಯ–೨೦, ಸಾಲು–೪, ೫ ಅಮಳ ಕಾಂಚನ ಗಿರಿಯ ದಕ್ಷಿಣ ಭಾಗದಲಿ—ಅಮಳ ಕಾಂಚನ ಗಿರಿಯ ಪಶ್ಚಿಮ ಭಾಗದಲಿ ಪ. ೧೭, ಸಾಲು ೪, ೫.

ಸುತ್ತಲೀಕ್ಷಿಸಿ ಭರದಿ ಹೋದೊಡಿದಾತನಿರ್ದೆಡೆಗೆ—ಪದ್ಯ ೨೯, ಸಾಲು ೩;
ಸುತ್ತಲೀಕ್ಷಿಸಿ ಹೋದನೆತ್ತಲುಯೆನುತ ನಾಲ್ದೆಸೆಯಾ— ಪದ್ಯ ೨೭, ಸಾಲು ೩

ನತ್ಯಧಿಕ ಬೆಂಡಾದನೈ ಭೂಪಾಲ ಕೇಳೆಂದಾ. ಪದ್ಯ ೩೭, ಸಾಲು ೬ ; ಪುತ್ರನತಿ ಬೆಂಡಾದನೆಲೆ ಜನಮೇಜಯ ಕ್ಷಿತಿಪಾ. ಪದ್ಯ ೩೫, ಸಾಲು ೬ ಎಂಬಲ್ಲಿ ಭೇದವನ್ನು ಕಾಣುತ್ತೇವೆ.

ಸಭಾಪರ್ವ, ಪುಟ ೧೨೪

ಕುಶಲರನಿಬರು ಜೀಯ ದಾನವ
ಪಶು ವಿದಾರಣನನುಪಮಾಜ್ಞೆಯ
ಲೆಸೆವ ಯಜ್ಞದ ಪರಮ ವಿಭವದ ಲಲಿತ ಮಂಟಪಕೆ|| ೧೪ ಪೂ.ಅ.

K 1304 :

ಕುಶಲರನಿಬರು ಜೀಯ ದಾನವ
ರಸು ವಿದಾರಣನಾತನಾಜ್ಞೆಯ
ಲೆಸಗಿ ಯಮಸುತ ರಾಜಸೂಯಾಧ್ವರದ ವೈಭವಕೆ || ೧೩ ಪೂ.ಅ.

ಎಂಬಲ್ಲಿ 'ನಾಜ್ಞೆಯಿಂದಾ' ಎಂಬ ಪಾಠಾಂತರವನ್ನು ಕೊಟ್ಟಿದ್ದಾರೆ. ಆದರೆ 'ದಾನವ ಪಶು ವಿದಾರಣ'ದ ಬದಲಾಗಿ 'ದಾನವರಸು ವಿದಾರಣ' ಎಂಬ ಪಾಠವೇಕೆ ಕೊಟ್ಟಿಲ್ಲ ಎಂಬುದು ವಿಚಾರ ಮಾಡಬೇಕಾದ ಸಂಗತಿಯಾಗಿದೆ.

ಸಭಾಪರ್ವ, ಪುಟ ೧೨೬

ಬಂದನೀಶ್ವರ ಭಕ್ತನಡಿಗಳಿ
ಗಂದು ಮಕುಟವ ಚಾಚೆ ಪೇಟಿಸಿ
ಕಂಡ ನೀ ಹೇಟಾರ ಮಗನಭಿದಾನವೇನು ಹದ।
ಬಂದ ಕಾರ‍್ಯವದೇನು ಹೇಳೆನ
ಲಿಂದು ವಂಶದಲುದಿಸಿದರು ಯಮ
ನಂದನಾದಿಗಳವರೊಳನಿಲಜ ಭೀಮ ತಾನೆಂದ || ೨೫

K 1304 :

ಬಂದು ಕಂಡೀ ಮೃಗವರನ ಪದ
ಕಂದು ಮಕುಟವ ಚಾಚಲವನೈ
ತಂದು ಬಿಗಿಯಪ್ಪಿದನು ಭೀಮನನಾರು ನೀನೆಂದ।
ಬಂದ ಕಾರ‍್ಯ ವಿಧಾನವೇನೆನೆ
ಇಂದು ವಂಶದಲುದಿಸಿದೀ ನೃಪ
ನಂದನರು ತಾವನಿಬರೈವರು ಪಾಂಡುಸುತರೆಂದಾ|| ೨೩

ಸಭಾಪರ್ವ, ಪುಟ ೧೨೯

ಒಂದು ಯೋಜನ ವಾರಣಾವತ
ವೆಂದು ಕಂಡುತ್ಸವದಿ ಭಯಗೊಳು
ತಂದು ಹೊಕ್ಕನು ಬಟುಕತಾನಧ್ವರದ ಬಾಗಿಲಲಿ।
ಬಂದು ಪವನಜನೆಡಹಿ ಬೀಟಿಕಿ ಪು
ರಂದರನ ನಂದನನು ಕರವಿಡಿ
ದಂದು ಮೃಗ ಕಾಲ್ವಿಡಿಯಲುಭಯರಿಗಾಯ್ತು ಸಂವಾದ|| ೩೬

ಸ 1304 :

ಒಂದು ಯೋಜನ ನಮ್ಮ ಪುರವರ
ವೆಂದು ನೆನೆದುತ್ಸವ ಭಯದೊಳೈ
ತಂದು ಹೊಕ್ಕನು ಯಾಗ ಮಟಪದೆಸೆಕ ಬಾಗಿಲಲಿ।

ಬಂದು ಬಸವಳಿಯಲು ಪುರಂದರ
ನಂದನನು ಕೈಗೊಟ್ಟನಾ ನೃಗ
ಬಂದವನ ಕಾಳ್ಪಿಡಿಯಲಿಬ್ಬರಿಗಾಯ್ತು ಸಂವಾದಾ|| ೩೪

ವಜ್ರದೇಹಿ ಭೀಮನು ಎಡಹಿ ಬಿದ್ದನು ಎಂಬುದು K 1304 ರಲ್ಲಿ 'ಬಸವಳಿಯಲು' ಎಂದು ತಿದ್ದಲಾಗಿದೆ.

ಸಭಾಪರ್ವ, ಪುಟ ೧೩೦–೩೧

ಸರ್ವಗಾತ್ರಂಗಳಿಗೆ ಶಿರ ತಾ
ಸರ್ವ ಇಂದ್ರಿಯಗಳಿಗೆ ನೇತ್ರವು
ಸರ್ವಶೃಂಗಾರಕ್ಕೆ ವಸ್ತ್ರವು ಬೀಜಮಾತ್ರವಲ್ಲೆ।
ಸರ್ವ ಸಂಭಾರಕ್ಕೆ ಲವಣವು
ಸರ್ವ ಶಾಸ್ತ್ರಕೆ ಪ್ರಕರಣವು ಮಿಗೆ
ಸರ್ವಜನಕಭಿಮತವು ಚಿತ್ತೈಸೆಂದನಾ ಭೂಪ|| ೪೦

K 1304 :

ಸರ್ವ ಜೀವಕ್ಕುದಕ ಗತಿ ಕೇ–
ಳ್ಸರ್ವ ಇಂದ್ರಿಯಗಳಿಗೆ ನೇತ್ರವು
ಸರ್ವ ಔಷಧಿಯೊಳು ವಿಚಾರಿಸಲನ್ನವೇ ಮಿಗಿಲು।
ಸರ್ವ ಗಾತ್ರಕೆ ಶಿರವು ತಾನಿದು
ಸರ್ವ ವೇದಂಗಳ ಪ್ರಮಾಣವು
ಸರ್ವ ಜನಕಭಿಮತವಲಾ ನೃಗನಾಥ ಕೇಳೆಂದ|| ೩೮

ಎಂಬಲ್ಲಿ ಇಡೀ ಪದ್ಯದ ಪುನಃ ರಚನೆಯಾಗಿದೆ.

ಸಭಾಪರ್ವ, ಪುಟ ೧೩೨

ಅರಸ ಕೇಳ್ ಕೃಷ್ಣಗೆ ಕೃಪಾಳುಗ
ಳರಸಗೆಲ್ಲರು ನೃಗವರನ ಶಂ
ಕರ ಸಮಾರಾಧನೆಗೆ ಹದನೇನೆಂದು ಕೈಮುಗಿಯೆ।
ಅಱುಹಿದನು ಕಟ್ಟೆರ್ದ್ದ ಕಂಭದಿ
ಹರನ ಹರಿ ನಿರ್ಮಿಸಲು ಹರಿವತಿ
ಭರದಿ ಪಾವನ ಮೂರ್ತಿ ಬಿಜಯಂಗೈದ ನೊಲವಿನಲಿ|| ೪೬

K 1304:

ಅರಸ ಹೇಳುವುದೇನು ಕೃಷ್ಣನು
ಪರಮ ಕರುಣಾಳುಗಳ ದೇವನು
ಹರುಷದಿಂ ನೃಗನರ್ಚ್ಚಿಪನು ಶಿವಪಾದ ಪಂಕಜವ।
ಭರತ ಕರುಣೋದಯವಲಾ ನೃಗ
ಕರಣದಿದಿರಲಿ ನಿರುತದಿಂದವೆ
ಪುರುಷ ಲಿಂಗವನಿರಿಸಿ ಬಿಜಯಂಗೈದನಸುರಾರಿ|| ೪೦

ಎಂಬಲ್ಲಿ ಪದ್ಯದ **ಭಾವವೇ ಸ್ವಲ್ಪ ಬದಲಾಗಿದೆ.**

ಸಭಾಪರ್ವ, ಪುಟ ೧೨೬

ಇದುವೆ ಸಮಯ ಮಹಾನುಭಾವನ
ಪದಯುಗವ ಕಾಣುವೊಡೆನುತ ನಿಜ
ಗದೆಯನೆಡೆಗೈಯಿಂದ ಹಿಡಿದೀಕ್ಷಿಸಿದನಾ ನೃಗವ।
ವದನ ವಿಕಸಿತ ವರ ಸರೋರುಹ
ಪೊದಗೆ ಮೈಯೊಳು ಹರುಷ ಪುಳಕದ
ಹೊದಱಿನಲಿ ಹೊಱಿಯೇಱಿ ನಡೆತರುತಿರ್ದನಾ ಭೀಮ॥ ೨೪

K 1304 :

ಇದುವೆ ಸಮಯ ಮಹಾನುಭಾವನ
ಪದಯುಗವ ಕಾಂಬರೆಯೆನುತಲಾ ನಿಜ
ಗದೆಯನೆಡಗೈಯಿಂದ ಪಿಡಿದೆಡಬಲವನೀಕ್ಷಿಸದೆ।
ವದನವರಳಿತು ಹರುಷ ಪುಳಕಗ
ಳೊಡನೆ ಮನದಲಿ ಹರಿದು ಗಜಗಮ
ನದಲಿ ಬಂದನು ತಳುವದೊದಗಿಯೆ ಭೀಮನುಬ್ಬಿನಲಿ ॥ ೨೨

ಎಂಬಲ್ಲಿ **ಪದಶಯ್ಯೆ ಬದಲಾಗಿದೆ.**

ಇದೇ ರೀತಿ ಸಭಾಪರ್ವ ೭ನೆಯ ಸಂಧಿ ಪದ್ಯ-೭, K 1304—ಪದ್ಯ ೫

| | | | | |
|---|---|---|---|---|
| ,, | ೨೨ | ,, | ೨೦ |
| ,, | ೨೮ | ,, | ೨೬ |
| ,, | ೩೦ | ,, | ೨೮ |
| ,, | ೩೫ | ,, | ೩೩ |
| ,, | ೪೭ | ,, | ೪೫ |
| ,, | ೪೮ | ,, | ೪೬ |
| ,, | ೪೯ | ,, | ೪೭ |
| ,, | ೫೦ | ,, | ೪೮ |

ಈ ಪದ್ಯಗಳೊಡನೆ ಹೋಲಿಸಿ ನೋಡಬಹುದು. ಪದ್ಯಗಳನ್ನು ತಿದ್ದುವುದು, ಪುನಃ ರಚಿಸುವುದು, ಪದ್ಯದ ಭಾವವನ್ನು ಬದಲಿಸುವುದು, ಪದಶಯ್ಯೆಯನ್ನು ಬದಲಿಸುವುದು ಯಾರ ಕೈವಾಡ? ಸಭಾಪರ್ವದ ಇನ್ನೊಂದು ಪಾಠ ಸಂಪ್ರದಾಯಕ್ಕೆ ಸೇರಿದ ಪ್ರತಿಯ ಪದ್ಯಗಳು ಇವು ಆಗಿವೆಯೆ? ಎಂಬ ಎರಡು ಪ್ರಶ್ನೆಗಳು ನಮ್ಮೆದುರು ನಿಲ್ಲುತ್ತವೆ. ೧೯೧೫ ರಲ್ಲಿ ಪ್ರಕಟವಾದ ಸಭಾಪರ್ವದ ಪ್ರತಿಯಲ್ಲಿ K 1304 ರ ಪದ್ಯಗಳಲ್ಲಿಯ ಯಾವ ಪಾಠಭೇದವೂ ನಮೂದಿಸಲ್ಪಟ್ಟಿಲ್ಲ. ಎಂದ ಮೇಲೆ K 1304 ರ ಪದ್ಯಗಳು ತೀರ ಭಿನ್ನವಾಗಿರಲು ಸಾಕು.

K 1304 ಪದ್ಯ ೩೦ ರ ಉತ್ತರಾರ್ಧ

ಬೆರಗಿನಲಿ ಕಂಡಾತ ಕುಸುಮವ
ತೆರೆದನಾಗ ಶಿವಾಗಮದಿ ವಿ
ಸ್ತರಿಸಿ ವಿಷಕಂಠನ ಪದದ್ವಯಕೆರಗಿ ಬೀಳ್ಕೊಂಡ ॥ ೩೦

ಎಂಬುದನ್ನು ನೋಡಿದಾಗ ಕವಿ ಲಕ್ಷ್ಮೀಶನ ಜೈಮಿನಿ ಭಾರತದಲ್ಲಿಯ—

ಹೃದ್ವನಜದೊಳ್ ದೇವಪುರದ ಲಕ್ಷ್ಮೀಶನ ಪ
ದದ್ವಯವನಾವಗಂ ಧ್ಯಾನಿಸುವರಡಿಗಳಂ
ಸದ್ವಿನಯದಿಂ ಭಜಿಪ ಬಲ್ಪಿಂದೆ ವಿಮಲ ಜೈಮಿನಿ ಭಾರತದ ಕಥೆಯನು || ೧೧

ಎಂಬ ಪದ್ಯವು ನೆನಪಾಗದೆ ಇರದು. ಲಕ್ಷ್ಮೀಶನ ಜೈಮಿನಿ ಭಾರತ ಮತ್ತು ಕುಮಾರವ್ಯಾಸನ ಸಭಾಪರ್ವವನ್ನು ಹೋಲಿಸಿ ನೋಡಿದರೆ ಸಾಕಷ್ಟು ಸಾಮ್ಯವನ್ನು ಕಂಡುಕೊಳ್ಳುತ್ತೇವೆ. ಹೀಗಿರಲು ಕಾರಣವೇನು ?

ಸಭಾಪರ್ವದ ಕಥಾವಸ್ತು ರಾಜಸೂಯ ಯಜ್ಞವಾದರೆ, ಜೈಮಿನಿ ಭಾರತದ ಕಥಾವಸ್ತು ಅಶ್ವಮೇಧ ಯಜ್ಞ. ಎರಡೂ ಕಾವ್ಯಗಳ ಕಥಾವಸ್ತು ಒಂದೇ : ಯಜ್ಞ.

ಕವಿ ಲಕ್ಷ್ಮೀಶನು ಕವಿ ಕುಮಾರವ್ಯಾಸನನ್ನು ಎಲ್ಲಿಯೂ ಸ್ಮರಿಸಿಲ್ಲ, ನಿಜ. ಆದರೆ ಸಭಾಪರ್ವ ಮತ್ತು ಜೈಮಿನಿ ಭಾರತ ಮತ್ತು ಸಭಾಪರ್ವದ ೭ನೆಯ ಸಂಧಿ ಹಾಗೂ K 1304 ರಲ್ಲಿಯ ೪೮ ಪದ್ಯಗಳು ಇವುಗಳ ತುಲನಾತ್ಮಕ ಅಭ್ಯಾಸವನ್ನು ಮಾಡಿದಾಗ ಕವಿ ಲಕ್ಷ್ಮೀಶನಿಗೂ ಕವಿ ಕುಮಾರವ್ಯಾಸನಿಗೂ ಇರುವ ನಿಕಟ ಸಂಬಂಧದ ಕಲ್ಪನೆ ಬರುತ್ತದೆ.

ಜೈಮಿನಿ ಭಾರತವನ್ನು ಅಭ್ಯಾಸಕ್ಕೆ ತೆಗೆದುಕೊಂಡ ಲಕ್ಷ್ಮೀಶನು ಮೊದಲು ಪುರುಷಾಮೃಗ ಪ್ರಸಂಗವನ್ನು ಅಭ್ಯಾಸ ಮಾಡಿರಬಹುದು. 'ವೃದ್ಧ ಸೇವಾನುರಾಗಂ ಸತತಾಭ್ಯಾಸ ಪ್ರಯತ್ನಂ ಕವಿತೆಗೆ ನಿಯತಂ ಕಾರಣಂ...'[1] ಎಂಬಂತೆ ಕುಮಾರ ವ್ಯಾಸನು ಬರೆದ ಸಭಾಪರ್ವದ ೭ನೆಯ ಸಂಧಿಯನ್ನು ಭಾಮಿನಿ ಷಟ್ಪದಿಯಲ್ಲಿಯೇ ಬರೆಯಲು ಅಭ್ಯಾಸ ಮಾಡಿದ್ದಾನೆ. ಆ ಅಭ್ಯಾಸವೇ K 1304 ರ ೪೮ ಪದ್ಯಗಳು ಎಂದು ತೋರುತ್ತದೆ.

೭ನೆಯ ಸಂಧಿಯು ೫೦ ಪದ್ಯಗಳಿಗೆ ೫೦ ಪದ್ಯಗಳೇ K 1304 ರಲ್ಲಿ ಇರಬೇಕಾಗಿತ್ತು. ಆದರೆ ಕಾಲಕ್ರಮದಲ್ಲಿ ಮೊದಲಿನ ಕೆಲವು ಪದ್ಯಗಳು ಒಂದರಲ್ಲೊಂದು ಕೂಡಿ, ಕೆಲವು ಸಾಲುಗಳು ಲೋಪವಾಗಿ ೪೮ ಪದ್ಯಗಳು K 1304 ರಲ್ಲಿ ಉಳಿದುಕೊಂಡು ಬಂದಿವೆ.

ಇದರ ಮೇಲಿಂದ ಲಕ್ಷ್ಮೀಶನು ಭಾಮಿನಿ ಷಟ್ಪದಿಯಲ್ಲಿ ಕಾವ್ಯ ರಚನೆ ಮಾಡುವ ಪ್ರಯತ್ನವನ್ನು ಮಾಡಿ ಪಳಗಿದ ಕೈಯುಳ್ಳವನಾಗಿ ಜೈಮಿನಿ ಭಾರತಕ್ಕೆ ವಾರ್ಧಿಕ ಷಟ್ಪದಿಯನ್ನು ಬಳಸಿದ್ದಾನೆ ಎಂದು ಊಹಿಸುವಂತಿದೆ. ಕವಿ ಲಕ್ಷ್ಮೀಶನು ಕುಮಾರ

---

[1] I 'ಪ್ರತಿಭಾನಂ ಕಾವ್ಯ ವಿದ್ಯಾ ಪ್ರಚಯ ಪರಿಚಯಂ ವೃದ್ಧ ಸೇವಾನು ರಾಗಂ ಸತತಾಭ್ಯಾಸ ಪ್ರಯತ್ನಂ ಕವಿತೆಗೆ ನಿಯತಂ ಕಾರಣಂ'—'ಕಾವ್ಯಾವಲೋಕನ', ಪು. 780

II 'ಪ್ರತಿಭೆಯುಂ ಅಭ್ಯಾಸಮುಂ ವಿದ್ವತ್ ಸೇವೆಯುಂ ಕಾವ್ಯಪರಿಚಯ ಮುಂ ಕವಿತೆಗೆ ಕಾರಣಂ'—'ಶಬ್ದಮಣಿ ದರ್ಪಣ', ಪು. 175

ವ್ಯಾಸನನ್ನು ಮೆಚ್ಚಿಕೊಂಡಿದ್ದನು. ಅವನ ಕಾವ್ಯದ ಅಭ್ಯಾಸವನ್ನು ಚನ್ನಾಗಿ ಮಾಡಿದ್ದನು ಎಂಬುದರಲ್ಲಿ ಸಂಶಯವಿಲ್ಲ.

ಪಂಪ-ರನ್ನ, ಹರಿಹರ-ರಾಘವಾಂಕ ಎಂಬ ಜೋಡಿಯಂತೆ ಕುಮಾರವ್ಯಾಸ-ಲಕ್ಷ್ಮೀಶ ಎಂಬುದೂ ಒಂದು ಜೋಡಿ.

# ವಸ್ತುಕೋಶ

[ಸಂಧಿ ಮತ್ತು ಪದ್ಯ ಸಂಖ್ಯೆ—ಕೆ. ನಂಜುಂಡಶಾಸ್ತ್ರಿ ಸಂಪಾದಿತ 'ಜೈಮಿನಿ ಭಾರತ'ಕ್ಕೆ (೧೯೩೨) ಸರಿಹೋಗುತ್ತದೆ.]

## ಭಾಗ ೧

### ೧ ನೆಯ ಸಂಧಿ

ಯಜ್ಞ ಸಿದ್ಧತೆ

ಪದ್ಯ ೧–೪ ದೇವತಾ ಪ್ರಾರ್ಥನೆ
೫–೮ ಕಾವ್ಯವನ್ನು ಕೇಳಲು ಸುಜನರಿಗೆ ಕವಿಯ ಬಿನ್ನಹ
೯ ಅರಸಿಕರ ನಿಂದೆ
೧೦ ಪೂರ್ವ ಸತ್ಕವಿಗಳಿಗೆ ನಮನ
೧೧–೧೨ ಕಾವ್ಯದ ಸಂಕಲ್ಪ

### ೨ ನೆಯ ಸಂಧಿ [೬೭]

ಕೃಷ್ಣ : ಈ ವಾಜಿಮೇಧಮೇನಚ್ಚರಿಯೆ, ಕೈಕೊಳಾವಿರ್ದು ನಡೆಸುವೆವೆಂದನು. [ಭದ್ರಾವತಿಗೆ ಭೀಮನ ಗಮನ (ಹಸ್ತಿನಾವತಿ)]

ಪದ್ಯ ೧–೪ ಮಹಾಭಾರತದ ಕಥಾಪ್ರಾರಂಭ
೫–೧೨ ಧರ್ಮರಾಜನ ಧರ್ಮಸಾಮ್ರಾಜ್ಯದ ಶುಭ್ರ ಕೀರ್ತಿ
೧೩ ರಾಜನ ಸ್ತೋತ್ರ
೧೪–೧೯ ವ್ಯಾಸಮುನಿಯ ಆಗಮನವೂ ಧರ್ಮರಾಜನ ಅನುತಾಪವೂ
೨೦–೨೩ ವ್ಯಾಸಮುನಿಯ ಬುದ್ಧಿವಾದ
೨೪ ಅರಸನ ಒಪ್ಪಿಗೆ
೨೫–೩೦ ಅಶ್ವಮೇಧ ಯಜ್ಞದ ವಿಧಾನ
೩೧–೩೩ ಯಜ್ಞಕ್ಕಾಗಿ ದ್ರವ್ಯ
೩೪–೩೫ ಯಜ್ಞಾಶ್ವದ ವಾಸಸ್ಥಾನ
೩೬ ಕುದುರೆ ತರುವುದಾಗಿ ಭೀಮನ ಪ್ರತಿಜ್ಞೆ
೩೭–೩೯ ವೃಷಕೇತು ಅಪ್ಪಣೆ ಬೇಡುವುದು
೪೦–೪೧ ಮೇಘನಾದನೂ ಅಪ್ಪಣೆ ಬೇಡುವುದು
೪೨–೪೪ ಧರ್ಮರಾಜನು ಒಪ್ಪಿಗೆ ಕೊಡುವುದು
೪೫–೫೧ ವ್ಯಾಸಮುನಿಯ ಆಗಮನವೂ ಕೃಷ್ಣನ ಆಗಮನವೂ
೫೨–೫೬ ಕೃಷ್ಣ–ಧರ್ಮಜರ ಸಂಭಾಷಣೆ
೫೭–೬೨ ಕೃಷ್ಣ–ಭೀಮರ ವಾಕ್ಕಲಹ
೬೩–೬೪ ಧರ್ಮರಾಜನ ಬಿನ್ನಹಕ್ಕೆ ಮೆಚ್ಚಿ ಕೃಷ್ಣನು ಯಜ್ಞ ನಡೆಸಲು ಒಪ್ಪುವುದು
೬೫–೬೬ ಸೂರ್ಯೋದಯದಲ್ಲಿ ಮತ್ತೆ ಓಲಗ
೬೭ ಭೀಮನು ಹೊರಡುವುದು

## ೩ನೆಯ ಸಂಧಿ [೪೨]

ಭೀಮ : ಈ ಕುದುರೆಗಳೊಳಾನುತ್ತಮಾಶ್ವಮಂ ಕಂಡುದಿಲ್ಲ

(ಭದ್ರಾವತಿಯ ವೈಭವ)

ಪದ್ಯ ೧ ಭೀಮಾದಿಗಳ ಪ್ರವೇಶ

೨–೮ ಭದ್ರಾವತೀ ದೇಶ ವರ್ಣನೆ

೯–೧೨ ಅರವಟ್ಟಿಗೆಯ ವರ್ಣನೆ

೧೩–೧೪ ಭೀಮಾದಿಗಳು ಊರಬಳಿಯ ಬೆಟ್ಟವನ್ನೇರುವುದು

೧೫–೨೧ ನಗರ ವರ್ಣನೆ

(೧) ಉಪ್ಪರಿಗೆ (೨) ಬೀದಿಗಳ ಶೋಭೆ (೩) ಕೋಟೆ (೪) ಕೋಟೆಯ ರನ್ನದೆನೆಗಳು (೫) ಬುರುಜು (೬) ಧ್ವಜಸ್ತಂಭ

೨೨–೩೯ ಉಪವನ ವರ್ಣನೆ:

(೧) ಬನಗಳ ಸೊಬಗಿನ ಬಗೆ (೨) ಗಿಡಗಳ ದಟ್ಟನೆಳಲು (೩) ಕೋಗಿಲೆಯ ಕೂಗು (೪) ನವಿಲುಗಳ ಕುಣಿತ (೫) ಚಕ್ರವಾಕಗಳ ರತಿ ಕ್ರೀಡೆ (೬) ಭೂದೇವಿಗೆ ಬನದೇವಿಯ ಪೂಜೆ (೭) ಮಾವಿನ ತೋಪಿನ ತೀರದ ಇಂಪು (೮) ಎಲೆ_ಅಡಕೆಗಳ ಒಲವಿನ ಅಪ್ಪಿಗೆ (೯) ಅತಳ ಲೋಕದ ವರೆಗೂ ಬನದ ಕಂಪ್ಪಿನ ಹಬ್ಬುಗೆ (೧೦) ಬಾಳೆಯ ಗೊನೆಗಳ ಕೃತಜ್ಞತೆ (೧೧) ಮಂದ ಮಾರುತ (೧೨) ಮದನನ ಬಾಣ ಬತ್ತಳಿಕೆ (೧೩) ಬಗೆಬಗೆಯ ಹೂಗಿಡಗಳು (೧೪) ಬನದ ಹೊರಬದಿಯ ಕೇದಿಗೆಯೂ ಒಳಬದಿಯ ಸಂಪಿಗೆಯೂ (೧೫) ಸುವಾಸನೆಯಿಲ್ಲದ ಗಿಡವೇ ಇಲ್ಲ (೧೬) ಗುಂಗೀ ಹುಳದ ಗುಂ ಗುಂ ಗಾನ (೧೭) ನೀರು ಕುಡಿಯಲು ಆನೆಗಳು (೧೮) ಬೆಳ್ದಾವರೆಗಳ ಹೆಚ್ಚುಗಾರಿಕೆ

೪೦ ಯೌವನಾಶ್ವನ ಅಶ್ವ ವೈಭವ

೪೧ ನಡುಹಗಲ ಬಿಸಿಲು

೪೨ ಭೀಮನ ಚಿಂತೆ

## ೪ನೆಯ ಸಂಧಿ [೭೨]

(ಯಜ್ಞಾಶ್ವ ಸಂಪಾದನೆ) ಯೌವನಾಶ್ವನ ಕಥಾನಕ

ಭೀಮ: ಭಾಳಮಂ ಚರಣದೊಳ್ಚಾಚಿ ತಮ್ಮಯ ವಿಜಯ
ದೇಳಿಗೆಯ ನೊರೆಯಲ್ಕೆ, ಮನ್ನಿಸಿದನಾತನಂ ದೇವ
ಪುರ ಲಕ್ಷ್ಮೀಶನು (ಭದ್ರಾವತಿಯಿಂದ ಹಸ್ತಿನಾವತಿಗೆ)

ಪದ್ಯ ೧–೫ ಭೀಮನ ಚಿಂತೆ

೬–೮ ಅಶ್ವದ ಆಗಮನವೂ ಭೀಮನ ಸಂಭ್ರಮವೂ

೯–೧೧ ಮೇಘನಾದನ ಮಾಯೆ

೧೨–೧೪ ಮೇಘನಾದನ ಆಕಾಶ ಗಮನ

೧೫–೨೫ ಮೇಘನಾದನಿಗೂ ಯೌವನಾಶ್ವನ ಸೈನ್ಯಕ್ಕೂ ಯುದ್ಧ

೨೬–೨೭ ಸುವೇಗ_ಯೌವನಾಶ್ವರ ಆಗಮನ

೨೮–೪೨ ವೃಷಕೇತು_ಯೌವನಾಶ್ವರ ಯುದ್ಧ

೪೩ ಯೌವನಾಶ್ವ ಮೂರ್ಛೆ ಹೊಂದುವುದು
೪೪–೪೬ ಅರಸನ ಸೈನ್ಯದ ಪಲಾಯನ
೪೭–೪೮ ಅಸಹಾಯ ಶತ್ರುವನ್ನು ವೃಷಕೇತುವು ಉಪಚರಿಸುವುದು
೪೯ ಮೂರ್ಛೆಯಿಂದ ಎದ್ದುದು
೫೦–೫೩ ಯೌವನಾಶ್ವನು ಯಜ್ಞಾಶ್ವವನ್ನು ಕೊಡಲೊಪ್ಪುವುದು
೫೪–೫೫ ಇಬ್ಬರೂ ಭೀಮನ ಬಳಿಗೆ ಬಂದುದು
೫೬–೫೭ ಸುವೇಗ–ಭೀಮರ ಆಶ್ಚರ್ಯ
೫೮–೬೫ ಯುದ್ಧ ನಿಂತು ಎಲ್ಲರೂ ಗೆಳೆಯರಾದುದು
೬೬ ಯೌವನಾಶ್ವನ ಆದರಾತಿಥ್ಯ (೩ದಿವಸ)
೬೭–೬೮ ಯೌವನಾಶ್ವನು ಪರಿವಾರದೊಡನೆ ಹಸ್ತಿನಾವತಿಗೆ ಹೊರಡುವುದು
೬೯–೭೨ ಭೀಮನೊಬ್ಬನೇ ಮುಂದೆ ಹೊರಟು ಹಸ್ತಿನಾವತಿಗೆ ಬರುವುದು

## ೫ನೆಯ ಸಂಧಿ [೭೩]

ಮರುತ್ತನ ಕಥೆ

ವ್ಯಾಸ: ಈ ಪರಿಯೊಳಾಮುನಿ ಸಮಸ್ತ ಧರ್ಮಂಗಳಂ ಭೂಪತಿಗೆ ವಿಸ್ತರಿಸಿ

ಧರ್ಮ: ಅರ್ಥಮಂ ಸಾಗಿಸಿದನಿಭಪುರಿಗೆ ಪೆರ್ಮೊರೆಗಳಿಟ್ಟಣಿಸಲು

ಪದ್ಯ ೧–೧೭ ಧರ್ಮನು ಕೃಷ್ಣನನ್ನು ಕೂಡಿಕೊಂಡು ಯೌವನಾಶ್ವಾದಿಗಳೆಲ್ಲರನ್ನೂ ಕರೆದುಕೊಂಡು ಹಸ್ತಿನಾವತಿಗೆ ಬಂದನು
೧೮–೧೯ ಕೃಷ್ಣನು ದ್ವಾರಕೆಗೆ ಹೋದದ್ದು
೨೦ ವ್ಯಾಸರ ಆಗಮನ
೨೧–೪೭ ವ್ಯಾಸನು ಬುಧರು ಮೆಚ್ಚುವಂತೆ ಮರುತ್ತನ ಕಥೆ ಹೇಳಿದ್ದು
೪೮ ಧರ್ಮರಹಸ್ಯ, ಕೀರ್ತಿ ಪ್ರಾಪ್ತಿ ಮತ್ತು ಸುಖ ದೊರೆಯುವ ಬಗೆಯಾವುದು ಎಂಬ ಪ್ರಶ್ನೆಗಳನ್ನು ಧರ್ಮ ವ್ಯಾಸರಿಗೆ ಕೇಳಿದ್ದು
೪೯–೫೦ ಧರ್ಮ, ಕ್ಷತ್ರಿಯ ಧರ್ಮ, ವೈಶ್ಯ ಧರ್ಮದ ವಿವರಣೆ
೫೧–೫೮ ಶೂದ್ರ ಮತ್ತು ಸ್ತ್ರೀ ಧರ್ಮ ವಿವರಣೆ
೫೯–೬೦ ಜಾರೆಯರ ರೀತಿ
೬೧–೬೨ ವಿವಿಧ ಸ್ತ್ರೀಯರ ವರ್ಣನೆ, ಪತಿವ್ರತೆಯರ ಧರ್ಮ
೬೩ ರಾಜನು ರಾಜ್ಯ ಆಳುವ ಬಗೆ
೬೪ ಲಕ್ಷ್ಮಿ ನೆಲೆ ನಿಲ್ಲುವುದು ಹೇಗೆ ಎಂದು ಧರ್ಮನ ಪ್ರಶ್ನೆ
೬೫–೬೯ ಲಕ್ಷ್ಮಿಯ ಸ್ಥಿರತೆಯ ಬಗ್ಗೆ ವ್ಯಾಸರಿಂದ ವಿವರಣೆ
೭೦–೭೧ ಯಜ್ಞವು ಸಮೀಪಿಸಲು ಧರ್ಮನು ವ್ಯಾಸಾದಿ ಬ್ರಾಹ್ಮಣರೊಂದಿಗೆ ಕೂಡಿಕೊಂಡು ಮರುತ್ತನು ಬಿಸಾಡಿದ ದ್ರವ್ಯವನ್ನು ಹಸ್ತಿನಾವತಿಗೆ ಸಾಗಿಸಿದರು
೭೨ ಕೃಷ್ಣನನ್ನು ಕರೆತರಲು ಭೀಮನನ್ನು ಕಳುಹಿಸಿದ್ದು

## ೬ನೆಯ ಸಂಧಿ [೫೫]

ಭೀಮನು ದ್ವಾರಕೆಗೆ ಹೋದದ್ದು

ಕೃಷ್ಣ: ತಾಂಬೂಲ ಪುಷ್ಪಾವಳಿಗಳಿಂದೆ ಸತ್ಕರಿಸಿದಂ ಭೀಮನಂ ಸುರಪುರದ ಲಕ್ಷ್ಮೀಶನು (ದ್ವಾರಕಾಪಟ್ಟಣದಲ್ಲಿ ಭೀಮ)

ಪದ್ಯ ೧–೮ ಸಮುದ್ರ ವರ್ಣನೆ:
ದ್ವಾರಕೆಯ ವರ್ಣನೆ
(೧) ಜನ ಸಮುದ್ರ (೨) ರಾಜ ಬೀದಿಗಳ ಅಂತಸ್ತಿನಲ್ಲಿದ್ದ ಸ್ತ್ರೀಯರ ವರ್ಣನೆ (೩) ಉಪ್ಪರಿಗೆಯಿಂದ ಬರುವ ಸುವಾಸನೆ (೪) ಚಿನ್ನದಂಗಡಿ, ರತ್ನದ ವ್ಯಾಪಾರ (೫) ಸುಗಂಧ ದ್ರವ್ಯ, ಹೂ (೬) ಹೂವಾಡಿಗ ಹೆಂಗಸರ ವರ್ಣನೆ (೭) ಹೂವಾಡಗಿತ್ತಿಯರ ಹುಡುಗಿಯರ ಚಾತುರ್ಯ (೮) ವೇಶ್ಯಾ ಸ್ತ್ರೀಯರ ವರ್ಣನೆ (೯) ಮುರ ಹರನ ಪ್ರೀತಿಯನ್ನು ಸಂಪಾದಿಸಲು ನೆರೆದ ವಿದ್ಯಾವಂತರ ಗುಂಪು
೯–೪೦ (೧೦) ರಾಜಪುತ್ರರ ಆಟ
೪೧ ಭೀಮನಿಗೆ ದ್ವಾರಕೆಯು ರಮಣೀಯವಾಗಿ ತೋರಿತು
೪೨ ಭೀಮನು ದ್ವಾರಪಾಲಕರಿಂದ ತಡೆಯಲ್ಪಡದೆ, ಕೃಷ್ಣನಿದ್ದೆಡೆಗೆ ಹೋದನು
೪೩–೪೯ ಕೃಷ್ಣನ ಊಟ, ಸತ್ಯಭಾಮೆ ಹಾಸ್ಯಮಾಡುವ ರೀತಿ
೫೦ ಸೈರಂಧ್ರಿ ಭೀಮನನ್ನು ಬಾಗಿಲಲ್ಲಿ ತಡೆದಳು
೫೧–೫೩ ಭೀಮನು ಕೃಷ್ಣನನ್ನು ಟೀಕಿಸಿದ್ದು
೫೪–೫೫ ಕೃಷ್ಣನಿಂದ ಭೀಮನಿಗೆ ಸತ್ಕಾರ

## ೭ ನೆಯ ಸಂಧಿ [೬೭]

ಅನುಸಾಲ್ವನ ಕಥಾನಕ

ವೃಷಕೇತು : ಅನುಸಾಲ್ವನಳಿವಳಿದನು

(ಹಸ್ತಿನಾವತಿಗೆ ಬರುವ ಮಾರ್ಗ; ಗಂಗಾನದಿ ತೀರ.)

ಪದ್ಯ ೧–೮ ಕೃಷ್ಣಾದಿಗಳೆಲ್ಲರೂ ಹಸ್ತಿನಾವತಿಗೆ ಹೊರಟಿದ್ದು
೯–೧೧ ಕೃಷ್ಣ—ರುಕ್ಮಿಣಿಯರ ಸಂವಾದ
೧೨–೧೩ ಯಾದವ ಸೈನ್ಯ ಮುಂದೆ ಸಾಗಿತು. ಕೃಷ್ಣನೊಬ್ಬನೆ ಮುಂದೆ ಹೋದಾಗ ದಾರಿಯಲ್ಲಿ ಅವನನ್ನು ಕಂಡವರೆಲ್ಲ ಸ್ತುತಿಸಿದರು.
೧೪ ಬ್ರಾಹ್ಮಣರಿಂದ ಕೃಷ್ಣನ ಸ್ತುತಿ
೧೫ ಅಪ್ಸರೆಯರು ನೃತ್ಯದಿಂದ ಮೆಚ್ಚಿಸಿದರು
೧೬ ಹಸ್ತಿನಾವತಿ ರಾಜಬೀದಿಗಳಲ್ಲಿ ಸ್ತ್ರೀಯರು ಬಾಗಿಲಿಗೆ ಬಂದು ನಮಸ್ಕರಿಸಿದರು.
೧೭–೨೧ ಕೃಷ್ಣ ಧರ್ಮನಿಂದ ಮರ್ಯಾದೆ ಪಡೆದುದು, ಅರಮನೆಯಲ್ಲಿ ಎಲ್ಲರ ಭೆಟ್ಟಿ
೨೨–೨೭ ಧರ್ಮರಾಯನ ಜನರು ಯಾದವರ ಜನರು ಪರಸ್ಪರರಿಗೆ ಆಲಿಂಗನವನ್ನು ಕೊಟ್ಟರು; ಯಜ್ಞಾಶ್ವವನ್ನು ಪೂಜಿಸಿದರು
೨೮ ಅನುಸಾಲ್ವ ಕುದುರೆಯನ್ನು ಅಪಹರಿಸಿ, ಗೃಧ್ರ ವ್ಯೂಹವನ್ನು ರಚಿಸಿ ನಿಂತನು.
೨೯–೩೨ ಅನುಸಾಲ್ವನ ಯುದ್ಧದ ಸಿದ್ಧತೆ
೩೩ ಕೃಷ್ಣನೂ ಯುದ್ಧಕ್ಕೆ ಸಿದ್ಧ
೩೪ ಪ್ರದ್ಯುಮ್ನನ ಪ್ರತಿಜ್ಞೆ
೩೫ ಅನುಸಾಲ್ವನ ಪ್ರತಿಜ್ಞೆ
೩೬–೩೮ ಪ್ರದ್ಯುಮ್ನ ಅನುಸಾಲ್ವರ ಯುದ್ಧ
೩೯ ಪ್ರದ್ಯುಮ್ನನಿಗೆ ಮೂರ್ಛೆ; ಅವನಿಗೆ ಕೃಷ್ಣನು ಒದ್ದು ಬೈದನು
೪೦ ಕೃಷ್ಣನು ಹೀಯಾಳಿಸಿದ್ದು

೪೧ ಭೀಮನು ಕೃಷ್ಣನನ್ನು ಟೀಕಿಸಿ, ವೃಷಕೇತುವಿನೊಂದಿಗೆ ರಣಾಂಗಣವನ್ನು ಪ್ರವೇಶಿಸುವನು
೪೨ ಭೀಮ—ವೃಷಕೇತು ಸಂವಾದ
೪೩–೪೯ ವೃಷಕೇತು—ಅನುಸಾಲ್ವ ; ಅನುಸಾಲ್ವ—ಭೀಮ ಯುದ್ಧ, ಭೀಮ ವೃಷಕೇತುವಿಗೆ ಮೂರ್ಛೆ ; ಕೃಷ್ಣನ ಪ್ರವೇಶ.
೫೦–೫೪ ಕೃಷ್ಣ—ಅನುಸಾಲ್ವರ ಯುದ್ಧ
೫೫ ಕೃಷ್ಣ ಮೂರ್ಛೆ ಹೋಗುವುದು
೫೬–೫೮ ಸತ್ಯಭಾಮೆ ಕೃಷ್ಣನನ್ನು ಹೀಯಾಳಿಸಿದ್ದು
೫೯–೬೪ ವೃಷಕೇತು–ಅನುಸಾಲ್ವರ ಯುದ್ಧ ; ವೃಷಕೇತು ಅನುಸಾಲ್ವನನ್ನು ಸೆರೆಹಿಡಿದು ತಂದನು
೬೫ ಅನುಸಾಲ್ವನಿಂದ ಕೃಷ್ಣನ ಸ್ತುತಿ
೬೬–೬೭ ಕೃಷ್ಣ ಅನುಸಾಲ್ವನನ್ನು ಅಪ್ಪಿಕೊಂಡು ಹಸ್ತಿನಾವತಿಗೆ ಬರಲು ಆಮಂತ್ರಿಸಿದನು. ಪ್ರದ್ಯುಮ್ನ ಕುದುರೆಯನ್ನು ತಂದು ನಿಲ್ಲಿಸಿದನು. ಧರ್ಮನು ಎಲ್ಲರನ್ನೂ ಸ್ವಾಗತಿಸಿ, ಕೃಷ್ಣನನ್ನು ಉಪಚರಿಸಿದನು.

## ೮ ನೆಯ ಸಂಧಿ [೪೯]

ಪದ್ಯ ೧–೫ ವಸಂತಋತು–ಚೈತ್ರಾಗಮ ಸಂಭ್ರಮ. ಜಾಹ್ನವಿ ತೀರದ ಮೇಲೆ ಯಜ್ಞಶಾಲೆ ಸಿದ್ಧವಾಯಿತು.
೬ ದಕ್ಷಿಣ ವಾಯು, ಬೆಳದಿಂಗಳು
೭–೧೨ ಚೈತ್ರಸಿತ ಪೂರ್ಣಿಮೆಯ ದಿವಸ ಯಜ್ಞಾಶ್ವವನ್ನು ಬಿಟ್ಟರು. ಅರ್ಜುನ ವೃಷಕೇತು ಮೊದಲಾದವರು ಯಜ್ಞಾಶ್ವವನ್ನು ಹಿಂಬಾಲಿಸಿದರು.

## ಭಾಗ ೨

ಯಜ್ಞಾಶ್ವಪರಿಭ್ರಮಣ

ನೀಲಧ್ವಜನ ಕಥಾನಕ

ಅಗ್ನಿ : ನಿನಗೆ ಹರಿ ಸಮೀಪದೊಳಿರ್ದುಮೀ ವಾಜಿಮೇಧಮೇಕೆ?

(ಮಾಹಿಸ್ಮತಿ ಪಟ್ಟಣ)

೧೩–೧೪ ಅಶ್ವ ದಕ್ಷಿಣಾಭಿಮುಖವಾಗಿ ಸಾಗಿತು. ಮಾಹಿಸ್ಮತಿ ಪಟ್ಟಣದ ಬಹಿರ್ಭಾಗದ ಉಪವನಕೆ ಅಶ್ವ ಬಂತು.
೧೫–೨೩ ಪ್ರವೀರ, ಮದನ ಮಂಜರಿ ಉಪವನದಲ್ಲಿದ್ದರು. ಮದನಮಂಜರಿ ಮತ್ತು ಸಖಿಯರು ಆನಂದದಿಂದ ಸುತ್ತಾಡುತ್ತಿರಲು ಯಜ್ಞಾಶ್ವವನ್ನು ಕಂಡರು.
೨೪ ಈ ಸುದ್ದಿ ಪ್ರವೀರನಿಗೆ ತಿಳಿಯಲು, ಪ್ರವೀರ ಯುದ್ಧಕ್ಕೆ ಸಿದ್ಧನಾದನು.
೨೫–೨೯ ಪ್ರವೀರ–ಅರ್ಜುನ ಯುದ್ಧ
೩೦ ನೀಲಧ್ವಜ ಸೈನ್ಯದೊಂದಿಗೆ ಹೊರಟನು
೩೧–೩೬ ನೀಲಧ್ವಜ, ಪ್ರವೀರ–ಅರ್ಜುನ ಯುದ್ಧ
೩೭ ನೀಲಧ್ವಜ ಅಗ್ನಿಗೆ ಬೇಡಿಕೊಳ್ಳಲು ಅಗ್ನಿ ಅರ್ಜುನನ ಸೈನ್ಯವನ್ನು ಸುಡಲು ಪ್ರಾರಂಭಿಸಿದನು.

೩೮–೪೦ ಅಗ್ನಿಯ ಕೈವಾಡ
೪೧–೪೨ ಅರ್ಜುನನಿಂದ ಅಗ್ನಿಯ ಪ್ರಾರ್ಥನೆ
೪೩–೪೪ ಅಗ್ನಿಯಿಂದ ಅಶ್ವಮೇಧದ ಟೀಕೆ
೪೫–೪೭ ಸೂರ್ಯಾಸ್ತ ವರ್ಣನೆ
೪೮ ಸಂಜೆ ಮತ್ತು ರಾತ್ರಿಯ ವರ್ಣನೆ
೪೯ ನಾರಾಯಣಾಸ್ತ್ರದಿಂದ ಅಗ್ನಿ ಶಾಂತನಾದನು. ನೀಲಧ್ವಜನು ಕುದುರೆ ಒಪ್ಪಿಸುವುದಾಗಿ ನಿಶ್ಚಯಿಸಿದನು.

## ೯ ನೆಯ ಸಂಧಿ [೩೪]

ಜ್ವಾಲೆಯ ಕಥಾನಕ

(ಗಂಗಾನದಿ ತೀರ; ಗಂಗೆಯ ಶಾಪ)

ನೀಲಧ್ವಜ: ನಿನ್ನ ಪಾರ್ಥನ ಹಯವನಾತಂಗೆ ಬಿಡಲೀಯದೆನ್ನ ಕೆಡೆಸಿದೆಯೆಲಾ ಪಾತಕಿಯೆ?

ಗಂಗಾ: ಅರ್ಜುನನ ತಲೆಯನಾತನ ಸುತಂ ಕೊಚ್ಚಿ ಕೆಡಹಲಿ ತಿಂಗಳಾರಕಾಹವದೊಳು

ಪದ್ಯ ೧ ಜ್ವಾಲೆ ಕುದುರೆಯನ್ನು ಒಪ್ಪಿಸುವುದನ್ನು ತಡೆದಳು
೨ ಜನಮೇಜಯ ಅಗ್ನಿ ಅಳಿಯನಾದುದು ಹೇಗೆ ಎಂದು ಪ್ರಶ್ನಿಸುವನು?
೩–೧೦ ಅಗ್ನಿ ಮತ್ತು ಸ್ವಾಹಾ ಇವರ ಲಗ್ನ
೧೧ ಅಗ್ನಿ ಸ್ವಾಹಾದೇವಿಯೊಡನೆ ಮಾಹಿಷ್ಮತಿಯಲ್ಲಿಯೆ ನೆಲೆಸಿದನು
೧೨ ಯುದ್ಧ ಮಾಡುವುದಾಗಿ ಮತ್ತೆ ನೀಲಧ್ವಜನ ನಿರ್ಧಾರ
೧೩–೧೪ ಪ್ರಾತಃಕಾಲದ ವರ್ಣನೆ; ಸೂರ್ಯೋದಯದ ವರ್ಣನೆ
೧೫–೧೭ ನೀಲಧ್ವಜ–ಪಾರ್ಥ ಯುದ್ಧ; ಸುತ, ಬಾಂಧವರೆಲ್ಲ ಮಡಿದು ನೀಲಧ್ವಜನಿಗೆ ಮೂರ್ಛೆ; ಮೂರ್ಛೆಯಿಂದ ಎದ್ದು ಬೈದು ಜ್ವಾಲೆಗೆ ಹೊರಗೆ ಹಾಕಿದ್ದು.
೧೮–೧೯ ಕೃಷ್ಣನ ಭೆಟ್ಟಿಗೆ ಹೊರಟನು
೨೦–೨೨ ಜ್ವಾಲೆ ಉನ್ಮುಖನೆಡೆಗೆ ಹೋಗಿ ಅಸಫಲ ಪ್ರಯತ್ನದಿಂದ ಗಂಗಾನದಿಯ ಕಡೆಗೆ ಹೋದಳು
೨೩–೨೪ ಗಂಗಾನದಿಯ ವರ್ಣನೆ
೨೫–೨೬ ಅಂಬಿಗರು ಮತ್ತು ಜ್ವಾಲೆ ಇವರಲ್ಲಿ ಗಂಗೆಯ ಗುಣ–ದೋಷದ ಬಗ್ಗೆ ಚರ್ಚೆ
೨೭–೩೨ ಗಂಗೆ ಅರ್ಜುನನಿಗೆ ಶಾಪಕೊಡುವಂತೆ ಜ್ವಾಲೆ ಮಾಡಿದ್ದು
೩೩ ಜ್ವಾಲೆ ಅಗ್ನಿಪ್ರವೇಶ ಮಾಡಿ ಬಭ್ರುವಿನ ಬತ್ತಳಿಕೆಯಲ್ಲಿ ಬಾಣವಾಗಿ ಸೇರಿಕೊಂಡದ್ದು
೩೪ ಇನ್ನು ಅರ್ಜುನನ ಪ್ರಾಣವನ್ನು ಕೃಷ್ಣನು ಹೇಗೆ ರಕ್ಷಿಸುವನೋ? ಎಂಬುದರ ಬಗ್ಗೆ ದೇವತೆಗಳಿಗೂ ಶಂಕೆ; ಆತುರ.

## ೧೦ ನೆಯ ಸಂಧಿ [೫೪]

ಸೌಭರಿ: ಹರಿ ಮನೆಯೊಳಿರೆ ಗರ್ಧಭಾಕೃತಿಯ ಹರಿಯೊಡನೆ ಬಂದೆ (ವಿಂಧ್ಯ ಪರ್ವತ,—ಚಂಡಿಯ ಕಥೆ)

ಪದ್ಯ ೧–೨ ನೀಲಧ್ವಜ ಅಪಾರ ಸೈನ್ಯದೊಂದಿಗೆ ಅರ್ಜುನನನ್ನು ಕೂಡಿಕೊಂಡನು. ಕುದುರೆ ವಿಂಧ್ಯಾದ್ರಿಗೆ ಬಂತು.
೩–೯ ವಿಂಧ್ಯದ ವರ್ಣನೆ
೧೦ ಕುದುರೆ ಸ್ಥಿರವಾಯಿತು
೧೧ ಕುದುರೆ ಸ್ಥಿರವಾಗಿ ನಿಂತುದರ ವರ್ಣನೆ
೧೨ ಕುದುರೆಯನ್ನು ಹೊರಡಿಸುವ ಪ್ರಯತ್ನ ಸಫಲವಾಗಲಿಲ್ಲ
೧೩ ಇದು ಮುನಿಯ ಶಾಪವಿರಬಹುದು, ಇಲ್ಲಿ ಯಾರಾದರೂ ಮುನಿಗಳಿರುವರೆ ಎಂಬುದನ್ನು ನೋಡಿಕೊಂಡು ಹೋಗಲು ಹೊರಟರು.
೧೪–೧೫ ಆಶ್ರಮದ ವರ್ಣನೆ
೧೬ ಸೌಭರಿ ಮುನಿಯ ವರ್ಣನೆ
೧೭–೨೨ ಅರ್ಜುನ–ಸೌಭರಿಯರಲ್ಲಿ ಪ್ರಶ್ನೋತ್ತರ
೨೩–೩೩ ಚಂಡಿಯ ಕಥೆ ಸೌಭರಿ ಅರ್ಜುನನಿಗೆ ಹೇಳುವನು. ಕುದುರೆ ಚಂಪಾಪುರಕ್ಕೆ ಹೊರಟಿತು.
೩೪ ಚಂಪಾನಗರಿಗೆ ನಡೆದ ಸೈನ್ಯದ ವರ್ಣನೆ
೩೫–೩೬ ಚಂಪಾನಗರ, ಕೋಟೆಯ ವರ್ಣನೆ
೩೭ ಹಂಸಧ್ವಜ ಸುಮತಿ-ಪ್ರಮತಿಯರೊಡನೆ ಆಲೋಚನೆ ನಡೆಸಿದನು
೩೮ ಹಂಸಧ್ವಜನ ಕೃಷ್ಣಭಕ್ತಿ
೩೯ ಹಂಸಧ್ವಜನ ರಾಜ್ಯದ ಕಟ್ಟಾಜ್ಞೆಗಳು
೪೦–೪೨ ಪ್ರಜೆಗಳು ಧರ್ಮಮಾರ್ಗವನ್ನೇ ಅವಲಂಬಿಸಿದ್ದರು. ಸುಖ–ಸಂತೋಷದಿಂದಿದ್ದು, ಪರಾಕ್ರಮಿಗಳಾಗಿ ಯುದ್ಧಕ್ಕೆ ಆತುರತೆಯಿಂದ ಕಾಯುತ್ತಿದ್ದರು.
೪೩ ಹಂಸಧ್ವಜ ಯುದ್ಧಕ್ಕೆ ಹೊರಟ
೪೪ ಹಂಸಧ್ವಜನ ಪರಿವಾರ
೪೫ ಶಂಖ ಲಿಖಿತರ ಪರಿವಾರ
೪೬ ರಾಜನ ಕಟ್ಟಾಜ್ಞೆ
೪೭–೫೪ ಸೈನ್ಯ ಯುದ್ಧಕ್ಕೆ ಹೊರಟಿತು. ಪತ್ನಿಯರು ಮಹಡಿಯನ್ನೇರಿ ಯುದ್ಧಸಂಭ್ರಮ ನೋಡುತ್ತ ರತಿಕ್ರೀಡೆಯ ವಿಷಯ ಮಾತನಾಡಿ, ತಂತಮ್ಮ ಪತಿಗಳನ್ನಾಲಿಂಗಿಸಿ, ಆದರಿಸಿ, ಯುದ್ಧಭೂಮಿಗೆ ಕಳುಹಿಸಿ, ಕೃಷ್ಣಸಂದರ್ಶನಾರ್ಥವಾಗಿ ಉಪ್ಪರಿಗೆಯನ್ನೇರಿ ನಿಂತರು.

## ೧೧ ನೆಯ ಸಂಧಿ [೪೧]

### ಸುಧನ್ವನ ಕಥಾನಕ

ಪದ್ಯ ೧ ಸುಧನ್ವನು ತಾಯಿಗೆ ಭೆಟ್ಟಿಯಾದದ್ದು
೨ ತಾಯಿಯ ಕೃಷ್ಣಭಕ್ತಿ
೩ ಸುಧನ್ವನ ಧೈರ್ಯ, ಪೌರುಷ, ಅಭಿಮಾನ
೪ ತಾಯಿಯ ಉಪದೇಶ
೫ ಸುಧನ್ವನ ಪ್ರತಿಜ್ಞೆ, ಕೃಷ್ಣಭಕ್ತಿ
೬ ಸಹೋದರಿಯಿಂದ ಆರತಿ ಮತ್ತು ಜಯಹೊಂದಬೇಕಾಗಿ ಬಿನ್ನಹ
೭–೧೧ ಪ್ರಭಾವತಿಯ ಪ್ರವೇಶ, ಅವಳ ವರ್ಣನೆ.
೧೨–೧೬ ಪ್ರಭಾವತಿ–ಸುಧನ್ವರ ಸಂಭಾಷಣೆ

೧೭_೨೫ ಸಂಭೋಗ, ಶೃಂಗಾರ ವರ್ಣನೆ
೨೬ ಸುಧನ್ವ ಯುದ್ಧಕ್ಕೆ ಹೊರಡಲು ಸಿದ್ಧನಾದ
೨೭ ಸುಧನ್ವನನ್ನು ಹಿಡಿದು ತಂದರು
೨೮ ಪಟ್ಟಣದೊಳಗೆ ಇದ್ದುದರ ಕಾರಣವನ್ನು ಹಂಸಧ್ವಜ ಕೇಳುವನು
೨೯ ಶಂಖಲಿಖಿತರೆಡೆಗೆ ಸೇವಕರನ್ನು ಕಳುಹಿದ
೩೦ ನಿನ್ನ ಆಜ್ಞೆಯಂತೆ ನಡೆಯಲೇಬೇಕು ಎಂದು ಶಂಖಲಿಖಿತರಿಂದ ಉತ್ತರ
೩೧ ಸುಧನ್ವನನ್ನು ಕೊಪ್ಪರಿಗೆಯಲ್ಲಿ ದೂಡಲು ಆಜ್ಞೆ
೩೨ ಸುಮತಿ ಮರಗುವನು
೩೩ ಸುಧನ್ವನ ಧೈರ್ಯ
೩೪ ಜನಸಮುದಾಯ ದುಃಖಪಡುವ ರೀತಿ
೩೫_೩೬ ಸುಧನ್ವನಿಂದ ಕೃಷ್ಣನಾಮಸ್ಮರಣೆ
೩೭ ಸುಧನ್ವನ ಮುಖ ವರ್ಣನೆ
೩೮ ಕೊಪ್ಪರಿಗೆಯಲ್ಲಿ ಟೆಂಗಿನಕಾಯಿ ಹಾಕಿಸಿದ ಶಂಖಲಿಖಿತರಿಗೇ ಟೆಂಗಿನಕಾಯಿ ಹೋಳಾಗಿ ಬಂದು ಬಡಿದವು.
೩೯ ಲಿಖಿತ ಪಶ್ಚಾತ್ತಾಪದಿಂದ ಕೊಪ್ಪರಿಗೆಯಲ್ಲಿ ಬಿದ್ದ
೪೦ ಹಂಸಧ್ವಜ ಇಬ್ಬರನ್ನೂ ಹೊರಗೆ ತೆಗೆಸಿ ಆದರಿಸಿದನು
೪೧ ಕೃಷ್ಣನನ್ನು ಕಾಣಲು ಸುಧನ್ವ ಹೊರಟ, ಕೃತಜ್ಞತೆ.

## ೧೨ ನೆಯ ಸಂಧಿ [೫೧]

ಸುಧನ್ವ : ಕ್ಷೋಣಿಗೆ ಸುಧನ್ವ ನಾನಿರೆ ನೀಂ ಸುಧನ್ವನೇ
(ಚಂಪಾನಗರಿ)

ಪದ್ಯ ೧–೪ ಶಂಖಲಿಖಿತರಿಗೆ ಪಶ್ಚಾತ್ತಾಪ; ಸುಧನ್ವ ಸಿಂಗರಿಸಿಕೊಂಡು ಬಂದ.
೫_೮ ಸೈನ್ಯ ನಡೆಯಿತು. ಅರಸರ ಠೀವಿ
೯ ಪಾರ್ಥನ ಕುದುರೆಯನ್ನು ಕಟ್ಟಿದರು
೧೦–೧೧ ಅರ್ಜುನ_ಪ್ರದ್ಯುಮ್ನರಲ್ಲಿ ಮಾತಾಗಿ, ಪ್ರದ್ಯುಮ್ನ ಯುದ್ಧಕ್ಕೆ ಹೊರಟ
೧೨_೧೩ ಉಳಿದ ರಾಜರೂ ಯುದ್ಧಕ್ಕೆ ಹೊರಟರು
೧೪ ವೃಷಕೇತುವಿನ ಪ್ರತಿಜ್ಞೆ
೧೫ ವೃಷಕೇತು ರಿಪುಸೈನ್ಯವನ್ನು ಹೊಕ್ಕನು
೧೬_೨೦ ವೃಷಕೇತು_ಸುಧನ್ವರ ಸಂಭಾಷಣೆ
೨೧_೨೮ ವೃಷಕೇತು_ಸುಧನ್ವರಲ್ಲಿ ಯುದ್ಧ ; ವೃಷಕೇತು ರಥವನ್ನು ತಿರುಗಿಸಿದನು
೨೯_೩೩ ಪ್ರದ್ಯುಮ್ನ_ಸುಧನ್ವ ಯುದ್ಧ ; ಪ್ರದ್ಯುಮ್ನನಿಗೆ ಮೂರ್ಛೆ.
೩೪_೩೫ ಕೃತವರ್ಮ_ಸುಧನ್ವರ ಯುದ್ಧ
೩೬_೪೦ ಅನುಸಾಲ್ವ_ಸುಧನ್ವರ ಯುದ್ಧ; ಸುಧನ್ವನಿಗೆ ಮೂರ್ಛೆ
೪೧ ಸುಧನ್ವನಿಗೆ ಎಚ್ಚರ, ಬಾಣಪ್ರಯೋಗ, ಅನುಸಾಲ್ವನಿಗೆ ಮೂರ್ಛೆ
೪೨-೪೫ ಸುಧನ್ವನ ರಣವಿಕ್ರಮ ಮತ್ತು ರಣಾಂಗಣದ ಭೀಕರ ಸ್ವರೂಪ
೪೬_೪೯ ಸಾತ್ಯಕಿ_ಸುಧನ್ವರ ಯುದ್ಧ : ಸುಧನ್ವನು ಸಾತ್ಯಕಿಯ ಬಿಲ್ಲನ್ನು ಐದು ತುಂಡುಗಳಾಗಿ ಮಾಡಿದನು.
೫೦_೬೧ ಅರ್ಜುನ ಯುದ್ಧಕ್ಕೆ ಸಿದ್ಧನಾದ ; ಶಕುನಗಳನ್ನು ಅನುಸರಿಸಿ ಯುದ್ಧಕ್ಕೆ ನಡೆದನು.

## ೧೩ ನೆಯ ಸಂಧಿ [೬೪]

(ಚಂಪಾನಗರಿ)

ಸುಧನ್ವ : ತನ್ನಾಳ್ತನಕೆ ಸಾಕಿನ್ನು ನೆನೆದೆಣಿಕೆ ಕೈಸಾರ್ದುದೆಂದು
ಕಣ್ದಣಿಯದಚ್ಯುತನಂ ನಿರೀಕ್ಷಿಸಿದನು

ಪದ್ಯ ೧ ಅರ್ಜುನ ಸುಧನ್ವನೆಡೆಗೆ ಏರಿ ಹೋದನು

೨ ಬ್ರಹ್ಮಾದಿಗಳೆಲ್ಲ ತಮ್ಮ ವಾಹನಗಳೊಂದಿಗೆ ಯುದ್ಧವನ್ನು ನೋಡಲು ಬಂದರು. [ಆ ವಾಹನಗಳ ಸಪ್ಪಳವನ್ನು ಬೇರೆ ಬೇರೆ ಶಬ್ದಗಳಿಂದ ವರ್ಣಿಸಲಾಗಿದೆ.]

೩-೨೨ ಸುಧನ್ವ-ಅರ್ಜುನರ ಯುದ್ಧ; ಅರ್ಜುನ ಕೃಷ್ಣಸ್ಮರಣೆ ಮಾಡುವನು. ಸ್ಮರಣೆ ಕೇಳಿಸಿದ ಕೂಡಲೆ ಕೃಷ್ಣನು ಹೊರಟ.

೨೩ ಪಾಂಡವರೆಡೆಗೆ ಕೃಷ್ಣನಿದ್ದದ್ದು ಕಂಡು ದೇವತೆಗಳು ಆಶ್ಚರ್ಯಪಟ್ಟರು

೨೪ ಕೃಷ್ಣ ಅರ್ಜುನನಿಗೆ ಸಾರಥಿಯಾದನು

೨೫ ಸುಧನ್ವನ ಕೃಷ್ಣಭಕ್ತಿ

೨೬-೨೭ ಸುಧನ್ವನಿಂದ ಕೃಷ್ಣಸ್ಮರಣೆ, 'ಚ'ಕಾರದಲ್ಲಿ ನಾಮಸ್ಮರಣೆ

೨೮ ಸುಧನ್ವನ ಪ್ರಾರ್ಥನೆ

೨೯ ಸುಧನ್ವ ಪಾರ್ಥನನ್ನು ಹೀಯಾಳಿಸುವನು

೩೦ ಪಾರ್ಥನ ಪ್ರತಿಜ್ಞೆ; ಕೃಷ್ಣನು ವಿರೋಧ ಮಾಡುವನು.

೩೧ ಸುಧನ್ವನಿಂದ ಪ್ರತಿಜ್ಞೆ

೩೨ ಕೃಷ್ಣ ಪಾರ್ಥನ ಪ್ರತಿಜ್ಞೆಯನ್ನು ಟೀಕಿಸುವನು

೩೩ ಕೃಷ್ಣ ಸುಧನ್ವನನ್ನು ಹೊಗಳುವನು

೩೪ ಸುಧನ್ವನ ಕೃಷ್ಣಭಕ್ತಿ

೩೫ ಸುಧನ್ವನಿಂದ ಬಾಣಪ್ರಯೋಗ

೩೬ ಅರ್ಜುನ ಸಿಟ್ಟಿಗೆದ್ದ ರೀತಿ

೩೭ ಕೃಷ್ಣ ತನ್ನ ಗೋವರ್ಧನ ಪುಣ್ಯವನ್ನು ಹಾಕಿ ಪಾರ್ಥನಿಗೆ ಬಾಣ ಪ್ರಯೋಗ ಮಾಡಲು ಹೇಳಿದ್ದು

೩೮ ಸುಧನ್ವ ನಗುತ್ತಿದ್ದ

೩೯ ಕೃಷ್ಣಾವತಾರದ ಪುಣ್ಯದಿಂದ ಕೂಡಿದ ಬಾಣವನ್ನು ಬಿಟ್ಟ

೪೦ ಪ್ರತಿಜ್ಞೆಯೊಂದಿಗೆ ಕೃಷ್ಣಾವತಾರದ ಪುಣ್ಯದಿಂದ ಕೂಡಿದ ಬಾಣವನ್ನು ತುಂಡರಿಸಿದನು

೪೧ ಅರ್ಜುನನ ಪ್ರತಿಜ್ಞೆ

೪೨ ಬ್ರಹ್ಮ, ಕೃಷ್ಣ, ವೃಷಭರನ್ನು ಆದಿ-ಮಧ್ಯ-ಅಂತ್ಯದಲ್ಲಿರಿಸಿ ಬಾಣ ಪ್ರಯೋಗ

೪೩ ವಾದ್ಯಗಳ ಧ್ವನಿ

೪೪-೪೫ ಸುಧನ್ವನ ಪ್ರತಿಜ್ಞೆ

೪೬ ಅರ್ಜುನನಿಂದ ಬಾಣಪ್ರಯೋಗ

೪೭ ಬಾಣದ ಮಹಿಮೆ

೪೮ ಸುಧನ್ವನ ರುಂಡ ನಭಕ್ಕೆ ಜಿಗಿಯಿತು

೪೯ ಆಮೇಲೆ ಭೂಮಿಗೆ ಕೃಷ್ಣನ ಪದಾಂಬುಜಕ್ಕೆ ಬಂತು

೫೦ ಸುಧನ್ವನ ಮುಂಡವು ಯುದ್ಧ ಮಾಡುವ ರೀತಿ

೫೧ ಸುಧನ್ವನ ರುಂಡದ (ಮುಖ) ವರ್ಣನೆ
೫೨ ಸುಧನ್ವನ ಆತ್ಮ ತೇಜ ಕೃಷ್ಣನ ಮುಖದಲ್ಲಿ ಅಡಗಿತು
೫೩–೬೦ ಹಂಸಧ್ವಜನ ಶೋಕ
೬೧–೬೩ ಸುರಥ ಮತ್ತು ಹಂಸಧ್ವಜನ ಸಂವಾದ, ಸುಧನ್ವನ ರುಂಡವನ್ನು ಶಿವನು ರುಂಡಮಾಲೆಯಲ್ಲಿ ಧರಿಸಿದ್ದು
೬೪ ಸುರಥ ಯುದ್ಧಕ್ಕೆ ನಡೆದ

## ೧೪ ನೆಯ ಸಂಧಿ [೩೩]

(ಸುರಥ)

ಕೃಷ್ಣ : ಇವಂ ಧರೆಯೊಳಾಚರಿಸದಿಹ ಪುಣ್ಯಕರ್ಮಗಳೊಂದಿಲ್ಲ,
ಇವಂ ಮರೆದಾಡೊಡಂ ಮಾಡಿದ ದುರಿತಲವನುಂ ಕಾಣೆ
ಆರ್ಜಯಿಸಪರೀತನಂ

ಪದ್ಯ ೧ ಸುರಥ ರಣರಂಗಕ್ಕೆ ಬಂದನು
೨–೩ ಕೃಷ್ಣ–ಅರ್ಜುನರಲ್ಲಿ ಆಲೋಚನೆ
೪–೭ ಸುರಥನಿಂದ ಯುದ್ಧ ಪ್ರಾರಂಭ; ಸೊಕ್ಕಾನೆ ಕಾಸಾರಮುಂ ಕಲಕುವಂತೆ ಯುದ್ಧ ಮಾಡಿದನು.
೮ ಅರ್ಜುನನಿಗೆ ಇದಿರಾದ
೯–೧೭ ಸುರಥ–ಅರ್ಜುನರಲ್ಲಿ ಅದ್ಭುತ ಯುದ್ಧ ; ಸುರಥನ ರುಂಡ ಉರುಳಿತು.
೧೮ ಸುರಥನ ರುಂಡವನ್ನು ಪ್ರಯಾಗಕ್ಕೆ ಮುಟ್ಟಿಸಲು ಕೃಷ್ಣನಿಂದ ಗರುಡನಿಗೆ ಆಜ್ಞೆ
೧೯–೨೦ ಗರುಡ–ಭೃಂಗೀಶರಲ್ಲಿ ಕಲಹ ; ಭೃಂಗೀಶ ಮರಳುವನು.
೨೧ ನಂದೀಶ್ವರ-ಗರುಡರಲ್ಲಿ ಪ್ರಶ್ನೋತ್ತರ
೨೨–೨೩ ನಂದೀಶ್ವರ–ಗರುಡರಲ್ಲಿ ಕಲಹ; ಗರುಡನು ಪ್ರಯಾಗದಲ್ಲಿ ಒಗೆದ ರುಂಡವನ್ನು ನಂದೀಶ್ವರ ಶಿವನ ಅಸ್ಥಾನಕ್ಕೆ ತಂದನು.
೨೪ ಸುರಥ ಮಡಿದ ಸುದ್ದಿ ಕೇಳಿ ಹಂಸಧ್ವಜ ರಣರಂಗಕ್ಕೆ ಬಂದನು
೨೫–೨೬ ಹಂಸಧ್ವಜನನ್ನು ಕಂಡೊಡನೆ ಕೃಷ್ಣನ ಸ್ಥಿತಿಯ ವರ್ಣನೆ
೨೭ ಕೃಷ್ಣನು ಬರುವ ರೀತಿ
೨೮ ಹಂಸಧ್ವಜನಿಂದ ಕೃಷ್ಣನಿಗೆ ಸ್ವಾಗತ
೨೯–೩೧ ಕೃಷ್ಣ–ಹಂಸಧ್ವಜ ಸಂವಾದ ; ಇಬ್ಬರಲ್ಲಿ ಮೈತ್ರಿ.
೩೨–೩೩ ಹಂಸಧ್ವಜ ಕಾಣಿಕೆಯನ್ನು ಸಲ್ಲಿಸಿ, ಐದು ದಿವಸ ಹಂಸಧ್ವಜನ ನಗರಿಯಲ್ಲಿ ಇದ್ದರು.

## ೧೫ ನೆಯ ಸಂಧಿ [೫೦]

(ಮೂರು ಕಥಾನಕಗಳು)

ಅರ್ಜುನ : ಈ ವ್ಯಾಳ ರಾಜಶಾಯಿಗೆ ಬಂದ ಬಂದ ನಾನಾ ವ್ಯಥೆಯ
–ನಪಹರಿಸಿ ಪಾಂಡುಸುತರಂ ಪೊರೆವುದೇ ವ್ಯವಹರಣೆ

ಪದ್ಯ ೧ ಕೃಷ್ಣ ಹಸ್ತಿನಾವತಿಗೆ ಹೋದನು
೨-೫ ಗ್ರೀಷ್ಮದ ತಾಪ, ಗಾಳಿ, ಬಿಸಿಲಿನ ವರ್ಣನೆ ; ಯಜ್ಞಾಶ್ವದ ಹಿಂದೆ ಸೈನ್ಯ ನಡೆದ ರೀತಿ.

೬ ಸೈನ್ಯದ ವಿವರ
೭ ಪಾರಿಪ್ಲವಕ್ಕೆ ಬಂದ ಕುದುರೆ ಹೆಣ್ಣಾಗಿ, ಹುಲಿಯಾಗಿ, ಮುರಾರಿಯ ಕೃಪೆಯಿಂದ ಮತ್ತೆ ಯಜ್ಞಾಶ್ವವಾಯಿತು.
೮ ಪಾರ್ವತಿ ತಪಸ್ಸಿಗಾಗಿ ಕೊಳಕ್ಕೆ ಬಂದಳು
೯–೧೪ ಕೊಳದ ವರ್ಣನೆ
೧೫–೧೯ ಪಾರ್ವತಿಯ ತಪಸ್ಸು
೨೦–೨೧ ತಪೋವನದ ವರ್ಣನೆ
೨೨–೨೩ ಶಿವಸ್ತುತಿ
೨೪ ಪಾರ್ವತಿ ಶಿವನ ಪೂಜೆ ಮಾಡಿದ ರೀತಿ
೨೫–೨೬ ಪಾರ್ವತಿಯ ತಪಸ್ಸಿಗೆ ಅಡ್ಡಿ–ಆತಂಕ
೨೭ ಪಾರ್ವತಿಯಿಂದ ಶಾಪ
೨೮–೨೯ ಶಾಪದ ಫಲವಾಗಿ ಯಜ್ಞಾಶ್ವ ಹೆಣ್ಣಾಯ್ತು ; ಅರ್ಜುನ ಆಶ್ಚರ್ಯದಿಂದ ಕೃಷ್ಣನನ್ನು ನೆನೆದನು. ಇಳಾವೃತದಲ್ಲಿ ತಪಸ್ಸು.
೩೦–೩೧ ಅಕೃತ ವೃಣಾಖ್ಯಾನ ಕಥೆ
೩೨ ನೀರು ಕುಡಿದವರು ಹುಲಿಯಾಗಲಿ ಎಂದು ಶಾಪ
೩೩ ಇದರ ಫಲವಾಗಿ ಅಶ್ವ ಹುಲಿಯಾಯಿತು
೩೪–೩೭ ಕೃಷ್ಣನ ಸಹಾಯಕ್ಕಾಗಿ ಅರ್ಜುನನಿಂದ ಪ್ರಾರ್ಥನೆ
೩೮ ಕೃಷ್ಣನ ಕೃಪೆಯಿಂದ ಹುಲಿ ಯಜ್ಞಾಶ್ವವಾಯಿತು
೩೯ ಎಲ್ಲರಿಗೂ ಆನಂದ
೪೦ ಅರ್ಜುನ ಕೃತಜ್ಞತೆಯನ್ನು ವ್ಯಕ್ತಪಡಿಸಿದ್ದು
೪೧ ಹೀಗೆ ಅನೇಕ ದೇಶಗಳನ್ನು ದಾಟಿದ್ದು, ಪ್ರಮೀಳಾ ರಾಜ್ಯದ ವರ್ಣನೆ ಸಂಭೋಗ ಶೃಂಗಾರ, ಅರ್ಜುನ ವೃಷಕೇತುವಿನಿಂದ
೪೨–೫೦ ಸೈನ್ಯಕ್ಕೆ ಎಚ್ಚರಿಕೆ

## ೧೬ ನೆಯ ಸಂಧಿ [೪೬]

(ಪ್ರಮೀಳೆ ಮತ್ತು ಭೀಷಣನ ಕಥಾನಕಗಳು)

ಪ್ರಮೀಳಾ : ಪೇಳ್ಪುರುಷರೀ ವಿಷಯೋದ್ಭವ ಸ್ತ್ರೀಯರಂ ಬೆರಸಿ ಬಾಳ್ದಪರೇ ?

ಭೀಷಣ : ಪರಹಿಂಸೆ ಲೇಸಲ್ಲ ಬಲ್ಲವರ್ಗೆ !

ಪದ್ಯ ೧–೨ ಪ್ರಮೀಳಾ ರಾಜ್ಯದಲ್ಲಿ ಯಜ್ಞಾಶ್ವ ಬಂಧಿಸಲಾಯಿತು
೩.೪ ಸ್ತ್ರೀ ಸೈನ್ಯದ ವರ್ಣನೆ
೫–೭ ಸ್ತ್ರೀಯರ ವರ್ಣನೆ
೮ ಪ್ರಮೀಳೆಯ ಮುಖಕಾಂತಿಯ ವರ್ಣನೆ
೯ ಅರ್ಜುನ ಪ್ರಮೀಳೆಯರ ಭೆಟ್ಟಿ
೧೦ ಅರ್ಜುನ ಹೀಯಾಳಿಸಿದ್ದು
೧೧ ಪ್ರಮೀಳೆ ಅರ್ಜುನನಿಗೆ ಎಚ್ಚರಿಸುತ್ತಾಳೆ
೧೨ ಅರ್ಜುನನ ಅಂಜಿಕೆ
೧೩–೧೪ ಪರಸ್ಪರರಲ್ಲಿ ಬಾಣಪ್ರಯೋಗ
೧೫ ಆಕಾಶವಾಣಿ

## ೧೭ ನೆಯ ಸಂಧಿ [೬೦]

(ಮಣಿಪುರ : ಬಭ್ರುವಾಹನ)

ಚಿತ್ರಾಂಗದೆ : ರಾಜಕಾರ್ಯಮಿಂದಮೃತಕೆ ಸಮುದ್ರಮಂ
ಮಥಿಸೆ ವಿಷಮುದಯಿಸಿದೊಳಾಯ್ತು
ನಿನ್ನುದ್ಭವಂ ತನಗೆಂದಳು

ಅರ್ಜುನ : ಜಂಬುಕಂ ಜನಿಸುವುದೆ ಸಿಂಗದುದರದೊಳಕಟ

## ೧೮ ನೆಯ ಸಂಧಿ [೬೪]

(ರಾಮಾಯಣ; ಅಯೋಧ್ಯಾ–ಗಂಗಾನದಿ)

## ೧೯ನೆಯ ಸಂಧಿ [೫೫]

೩೮ ವಾಲ್ಮೀಕಿ ಸೀತೆಯನ್ನು ಕಂಡರು.
೩೯–೪೧ ಸುಖ–ದುಃಖವನ್ನು ವಿಚಾರಿಸಿ, ವಾಲ್ಮೀಕಿ ಸೀತೆಯನ್ನು ಆಶ್ರಮಕ್ಕೆ ಒಯ್ದನು.
೪೨–೪೩ ಸೀತೆಯ ಆಶ್ರಮವಾಸ
೪೪–೪೬ ಲವ–ಕುಶರ ಜನ್ಮ; ಮೂಜಗಕೆ ಆನಂದ
೪೭–೫೫ ಲವ–ಕುಶರ ಬೆಳವಣಿಗೆ; ರಾಮಾಯಣವನ್ನು ಹಾಡಲು ಕಲಿತರು.

## ೨೦ನೆಯ ಸಂಧಿ [೬೨]

ಪದ್ಯ ೧–೪ ಅಶ್ವಮೇಧ ಯಜ್ಞ ಮಾಡುವುದಾಗಿ ರಾಮನ ನಿಶ್ಚಯ
೫–೧೨ ಲವನು ಕುದುರೆಯನ್ನು ಕಟ್ಟಿದನು
೧೩–೧೮ ಲವ–ಶತ್ರುಘ್ನರ ಯುದ್ಧ; ಮೂರ್ಛಿತನಾದ ಲವನನ್ನು ರಥದಲ್ಲಿ ಹಾಕಿಕೊಂಡು ಹೊರಟನು.
೧೯–೨೦ ಸೀತೆಯ ಶೋಕ
೨೧–೨೨ ಕುಶನಿಗೆ ವೃತ್ತಾಂತ ತಿಳಿಸಿ, ಹರಸಿ ಕಳುಹಿದಳು
೨೩ ಕುಶನಿಂದ ಬಾಣಪ್ರಯೋಗ
೨೪ ಅಪಶಕುನ
೨೫–೩೧ ಕುಶ–ಶತ್ರುಘ್ನರ ಯುದ್ಧ; ಶತ್ರುಘ್ನ ರಥದಿಂದ ಕೆಳಕ್ಕೆ ಬಿದ್ದನು.
೩೨ ಲವ–ಕುಶರು ಕೂಡಿಕೊಂಡು ಕುದುರೆಯನ್ನು ಕಟ್ಟಿದರು
೩೩–೩೪ ದೂತರು ರಾಮನಿಗೆ ಭೆಟ್ಟಿಯಾಗಿ ಯುದ್ಧದ ಅದ್ಭುತತೆಯನ್ನು ತಿಳಿಸಿದರು
೩೫ ಲಕ್ಷ್ಮಣ ಯುದ್ಧಕ್ಕೆ ಹೊರಟನು
೩೬–೩೮ ಕಾಲಜಿತು ಸೈನ್ಯವನ್ನು ಎಚ್ಚರಿಸಿದನು
೩೯ ಲವನು ಸೂರ್ಯನನ್ನು ಪ್ರಾರ್ಥಿಸಿ, ಕೋದಂಡವನ್ನು ಪಡೆದನು.
೪೦–೪೨ ಸೂರ್ಯಸ್ತುತಿ
೪೩–೪೪ ಅರಿಬಲವನ್ನು ಲವ–ಕುಶರು ಹೊಕ್ಕರು
೪೫–೫೨ ಯುದ್ಧವರ್ಣನೆ; ರುಧಿರಾಕ್ಷಸನನ್ನು ಕೊಂದರು.
೫೩–೬೨ ಲವ–ಕುಶ, ಲಕ್ಷ್ಮಣರ ಯುದ್ಧ; ಲವಕುಶರು ತುರಗವಿದ್ದೆಡೆಗೆ ಬಂದರು

## ೨೧ ನೆಯ ಸಂಧಿ [೬೩]

ರಾಮು : ದೇವಿಯನಗಲ್ದ ವಿರಹಾಗ್ನಿ ಸುತದರ್ಶನದ ಜೀವನದೊಳುರೆ ನಂದಿತು

ಪದ್ಯ ೧-೨ ರಾಮನ ಚಿಂತೆ
೩ ದೂತರಿಂದ ರಣಾಂಗಣದ ಸುದ್ದಿ ತಿಳಿಯುವುದು
೪ ರಾಘವನ ಶೋಕ
೫ ಜನರು ರಾಮನು ಸೀತೆಯನ್ನು ಹೊರಗೆ ಹಾಕಿದ್ದರ ಫಲವಿದೆಂದರು
೬ ರಾಮನು ಬಾಲಕರ ಬಗ್ಗೆ ಚಿಂತಿಸಿದನು
೭ ಚಾರರು ಲಕ್ಷ್ಮಣನ ಚಿಂತಾಜನಕ ಸ್ಥಿತಿ; ಸೈನ್ಯ ಮಡಿದ ಸುದ್ದಿ ಹೇಳಿದರು.
೮ ಭರತನು ಯುದ್ಧಕ್ಕೆ ಹೊರಟನು

೯–೨೧ ಭರತ–ಲವಕುಶರ ಯುದ್ಧ, ಭರತನ ಅಂಗಾಂಗಗಳಲ್ಲಿ ಬಾಣ ನಟ್ಟವು; ಲವ–ಕುಶರು ಕುದುರೆ ಇದ್ದೆಡೆಗೆ ಹೊರಳಿದರು.

೨೨ ಈ ಸಂಗತಿ ರಾಮನಿಗೆ ತಿಳಿದು ರಾಮನು ಸುಗ್ರೀವ–ವಿಭೀಷಣರೊಂದಿಗೆ ಯುದ್ಧಕ್ಕೆ ಹೊರಟನು.

೨೩–೨೮ ರಾಮ–ಕುಶರಲ್ಲಿ ಸಂವಾದ

೨೯ ಲವ–ಕುಶರು ರಾಮನ ಸತ್ವ ಎಂಬುದಾಗಿ ಸುಗ್ರೀವನು ರಾಮನಿಗೆ ಹೇಳುವನು.

೩೦–೩೨ ನೀಲ, ಸುಗ್ರೀವಾದಿಗಳನ್ನು ಕುಶನು ಕೆಡವಿದನು.

೩೩–೩೭ ರಾಮ–ಲವಕುಶರ ಯುದ್ಧ; ರಾಮನು ರಥದಲ್ಲಿ ಒರಗಲು ಲವನು ರಾಮ, ಶತ್ರುಘ್ನ, ಭರತಾದಿಗಳ ಆಭರಣಗಳನ್ನು ಒಂದು ಬಟ್ಟೆಯಲ್ಲಿ ಕಟ್ಟಿಕೊಂಡನು.

೩೮–೪೧ ಲವ ರಣಾಂಗಣ ಪರೀಕ್ಷಣಮಾಡಿಕೊಂಡು ಮೋಜಿನ ಕಪಿಗಳನ್ನು ಹಿಡಿದು ತಂದು, ಕುಶನಿಗೆ ತೋರಿಸಿ, ಆಶ್ರಮಕ್ಕೆ ಬಂದು, ಎಲ್ಲವನ್ನು ತಾಯಿಗೆ ಒಪ್ಪಿಸಿದರು.

೪೨ ಸೀತೆಯ ಆಜ್ಞೆಯಂತೆ ವಾನರರನ್ನು ಬಿಟ್ಟುಬಿಟ್ಟರು.

೪೩ ನಾರದನಿಂದ ಸುದ್ದಿ ತಿಳಿದು, ವಾಲ್ಮೀಕಿ ಪಾತಾಳಲೋಕದಿಂದ ಆಶ್ರಮಕ್ಕೆ ಬಂದರು.

೪೪ ಲವ–ಕುಶರಿಗೆ ಯುದ್ಧದ ವರ್ಣನೆ ಮಾಡಿಹೇಳಲು ವಾಲ್ಮೀಕಿಯು ಆಜ್ಞಾಪಿಸುವನು.

೪೫ ಕುಶನು ಯುದ್ಧದ ವರ್ಣನೆ ಹೇಳುವನು.

೪೬ ನಡುಗುವ ಸೀತೆಯನ್ನು ಸಂತೈಸಿ, ವಾಲ್ಮೀಕಿ ಆದಿಗಳು ರಣಾಂಗಣಕ್ಕೆ ಬಂದರು.

೪೭–೪೯ ರಣಾಂಗಣ, ರಣಾಂಗಣದಲ್ಲಿ ಮಲಗಿದ ರಾಮ, ಇತರ ದೃಶ್ಯ ನೋಡಿ ವಾಲ್ಮೀಕಿ ಬೆರಗಾದನು.

೫೦ ವಾಲ್ಮೀಕಿ ಕಮಂಡಲದ ಉದಕವನ್ನು ಪ್ರೋಕ್ಷಿಸಲು ರಾಮನು ಎದ್ದನು.

೫೧ ದೇವದುಂದುಭಿ, ಹೂಮಳೆ, ಚಾತುರ್ಬಲ, ರಾಮ, ಭರತಾದಿ ಎದ್ದರು.

೫೨ ವಾಲ್ಮೀಕಿಯಿಂದ ರಾಮನಿಗೆ ದುಗ್ಧಾಭಿಷೇಕ

೫೩ ವಾಲ್ಮೀಕಿ ಕ್ಷಮೆ ಕೇಳುವನು.

೫೪–೫೮ ರಾಮನು ಸೀತೆಯ ವನವಾಸ, ಲವ–ಕುಶರ ಹುಟ್ಟು ಇತ್ಯಾದಿ ವಿವರಗಳನ್ನು ವಾಲ್ಮೀಕಿಯಿಂದ ತಿಳಿದು, ಲವ–ಕುಶರಿಂದ ರಾಮಾಯಣವನ್ನು ಕೇಳಿದನು. (ಸಂಗೀತದ ವಿಷಯ ೫೬–೫೮ ಪದ್ಯ)

೫೯–೬೩ ರಾಮ–ಲವಕುಶರ ಸಂವಾದ, ಎಲ್ಲರೊಂದಿಗೆ ಅಯೋಧ್ಯೆಗೆ ಪುನರಾಗಮನ.

## ೨೨ನೆಯ ಸಂಧಿ [೪೭]

ಬಭ್ರುವಾಹನ : ಮಾರ್ಮಲೆಯ ಬಾರದಯ್ಯನೊಳೆಂದು ಕಂಡು
ನಾಂ ಕೂರ್ಮೆಯಿಂದೆರಗಿದೊಡೆ ಜರೆದೆಲಾ

ಪದ ೧–೩ ಬಭ್ರುವಾಹನ ಕುದುರೆಯನ್ನು ಪಟ್ಟಣಕ್ಕೆ ಕಳುಹಿ, ಯುದ್ಧಕ್ಕೆ ಸಿದ್ಧನಾದನು. ಎರಡೂ ಸೈನ್ಯಗಳ ಸಿದ್ಧತೆ.

೪ ನಾನಾ ರವಗಳ ವರ್ಣನೆ

| | |
|---|---|
| ೫–೮ | ಯುದ್ಧ ಪ್ರಾರಂಭ |
| ೯–೧೪ | ಅನುಸಾಲ್ವ–ಬಭ್ರುವಾಹನ ಯುದ್ಧ |
| ೧೫–೨೧ | ಪ್ರದ್ಯುಮ್ನ–ಬಭ್ರುವಾಹನ ಯುದ್ಧ |
| ೨೨–೨೬ | ರಣರಂಗದ ವರ್ಣನೆ |
| ೨೭–೨೮ | ಪ್ರದ್ಯುಮ್ನನನ್ನು ವಿರಥನನ್ನಾಗಿ ಮಾಡಿ, ೭೦ ರಥಗಳನ್ನು ಕಡಿದನು. |
| ೨೯–೪೪ | ಬಭ್ರುವಾಹನನೊಂದಿಗೆ ಅನೇಕರ ಯುದ್ಧ ಮತ್ತು ಎಲ್ಲರೂ ದೆಸೆಗೆಟ್ಟರು |
| ೪೫ | ಅರ್ಜುನ ರಥವೇರಿ ರಣಾಂಗಣಕ್ಕೆ ಹೊರಟನು |
| ೪೬–೪೭ | ಅರ್ಜುನ–ಬಭ್ರುವಾಹನರಲ್ಲಿ ಹೊಸಪರಿಯ ಕಾಳಗ |

## ೨೩ ನೆಯ ಸಂಧಿ [೬೪]

ಚಿತ್ರಾಂಗದೆ : ಸ್ವೈರಿಸನ್ನೆಗಂ ನರನ ಜೀವಕ್ಕೆ ಪೊಣೆ ದೇವಪುರ ಲಕ್ಷ್ಮೀಶನು

| | |
|---|---|
| ಪದ್ಯ ೧–೩ | ಬಭ್ರುವಾಹನ–ಸುವೇಗರ ಯುದ್ಧ; ಅರ್ಜುನ, ವೃಷಕೇತು ಇಬ್ಬರೇ ಉಳಿದರು. |
| ೪–೫ | ಉಲೂಪಿ ಗಾಯಗೊಂಡ ರಾಜರನ್ನು ಉಪಚರಿಸುತ್ತಿದ್ದಳು; ಅನಿರುದ್ಧ, ಪ್ರದ್ಯುಮ್ನಾದಿಗಳನ್ನು ಉಪಚರಿಸುತ್ತಿದ್ದಳು. |
| ೬ | ಅರ್ಜುನನು ವೃಷಕೇತುವಿಗೆ ಯುದ್ಧದ ಸ್ಥಿತಿಯನ್ನು ವರ್ಣಿಸುತ್ತಾನೆ |
| ೭–೮ | ಅಪಶಕುನಗಳು, ಇವುಗಳನ್ನು ಕಂಡು ಅರ್ಜುನನು ವ್ಯಥೆಪಡುವನು. |
| ೯–೧೧ | ಅರ್ಜುನ–ವೃಷಕೇತು ಸಂವಾದ |
| ೧೨–೨೫ | ವೃಷಕೇತು–ಬಭ್ರುವಾಹನ ಯುದ್ಧ; ವೃಷಕೇತುವಿನ ಮರಣ. |
| ೨೬–೩೦ | ಅರ್ಜುನನ ದುಃಖ |
| ೩೧–೪೭ | ಅರ್ಜುನ–ಬಭ್ರುವಾಹನ ಸಂವಾದ, ಯುದ್ಧ; ಅರ್ಜುನನ ಮರಣ. |
| ೪೮ | ವಂದಿಮಾಗದರಿಂದ ಹೊಗಳಿಸಿಕೊಳ್ಳುತ್ತ ಬಭ್ರುವಾಹನ ಮಣಿಪುರಕ್ಕೆ ಹೊರಟನು. |
| ೪೯ | ಬಭ್ರುವಿನ ಜಯೋತ್ಸವ |
| ೫೦–೫೫ | ಚಿತ್ರಾಂಗದೆ ಮತ್ತು ಇತರ ಸ್ತ್ರೀಯರ ದುಃಖ |
| ೫೬–೬೧ | ದಾಳಿಂಬ ಗಿಡಗಳು ಬಾಡಿದ್ದು ಕಂಡ ಉಲೂಪಿ ಮತ್ತು ಚಿತ್ರಾಂಗದೆ ರಣಾಂಗಣಕ್ಕೆ ಧಾವಿಸಿ ವೃಷಕೇತು ಮತ್ತು ಅರ್ಜುನನ ಶವವನ್ನು ಕಂಡು ದುಃಖಿಸುವ ರೀತಿ. |
| ೬೨–೬೩ | ಬಭ್ರುವಾಹನನು ಅಗ್ನಿಪ್ರವೇಶ ಮಾಡುವುದಾಗಿ ನಿಶ್ಚಯಿಸುವನು |
| ೬೪ | ಚಿತ್ರಾಂಗದೆ ಬಭ್ರುವಾಹನನನ್ನು ಅಗ್ನಿಪ್ರವೇಶದಿಂದ ತಡೆಯುವಳು |

## ೨೪ನೆಯ ಸಂಧಿ [೮೨]

(ಮಣಿಪುರ)

'ಮೈಮುರಿದರೊಯ್ಯನೆ ಪಾರ್ಥ ಕರ್ಣಸುತರಸುರಾರಿಯಂ ಜಪಿಸುತೆ'

| | |
|---|---|
| ಪದ್ಯ ೧–೨ | ಉಲೂಪಿ ಬಭ್ರುವಾಹನನಿಗೆ ಉಪದೇಶಿಸಿದ್ದು ಮತ್ತು ಉಪಾಯ ಸೂಚಿಸಿದ್ದು. 'ಸಂಜೀವಕ ಮಣಿಯನ್ನು ತರಬಲ್ಲ ಶೂರರನ್ನು ಮೂರು ಲೋಕದಲ್ಲಿ ಕಾಣೆ' ಎನ್ನುತ್ತಾಳೆ ಉಲೂಪಿ. |

೩ ಬಭ್ರುವಾಹನನು ಸಿಟ್ಟಿಗೆದ್ದು ಅನೇಕ ಪ್ರತಿಜ್ಞೆಗಳನ್ನು ಮಾಡುತ್ತಾನೆ

೪ ಉಲೂಪಿ ಪಾತಾಳಲೋಕದ ಭೀಕರತೆಯನ್ನು ವರ್ಣಿಸಿ ಹೇಳುವಳು

೫ ಸಂಜೀವಕ ಮಣಿಯನ್ನು ತರುವುದಾಗಿ ಬಭ್ರುವಾಹನನ ನಿಶ್ಚಯ

೬–೯ ಬಭ್ರು ಮತ್ತು ಉಲೂಪಿ ಇವರಲ್ಲಿ ಸಂಭಾಷಣೆ. ಉಲೂಪಿಯು ಪುಂಡರೀಕ ಸರ್ಪಕ್ಕೆ ಸಂಜೀವಕ ಮಣಿಯನ್ನು ತರಲು ಆಜ್ಞಾಪಿಸುವಳು

೧೦ ಪುಂಡರೀಕ ಸರ್ಪ ಅರ್ಜುನನಿಗೆ ಕಚ್ಚುವಿಕೆ

೧೧ ವೃಷಕೇತುವಿಗೆ ಮೊದಲು ಕಚ್ಚಿ ಆಮೇಲೆ ಅರ್ಜುನನಿಗೆ ಕಚ್ಚುತ್ತದೆ

೧೨ ಪುಂಡರೀಕ ಸರ್ಪ ಆದಿಶೇಷನ ಬಳಿಗೆ ಬಂದದ್ದು

೧೩–೧೪ ಭೋಗವತಿ ನದಿ, ಹಾಟಕೇಶ್ವರ ಲಿಂಗ ಮತ್ತು ಪಾತಾಳಲೋಕದ ವರ್ಣನೆ

೧೫ ಆದಿಶೇಷನ ಓಲಗ

೧೬–೨೫ ಆದಿಶೇಷ, ಪುಂಡರೀಕ, ಮತ್ತು ಧೃತರಾಷ್ಟ್ರಾದಿ ಸರ್ಪ ಇವರಲ್ಲಿ ಸಂಭಾಷಣೆ. ಸಂಜೀವಕ ಮಣಿಯನ್ನು ಕೊಡಬಾರದು ಎಂದು ಸರ್ಪಗಳ ನಿರ್ಣಯ.

೨೬ ನರನು ಸತ್ತುಬಿದ್ದ ಸ್ಥಳದ ವರ್ಣನೆ. ಜನರ ಆತುರ

೨೭ ಚಿತ್ರಾಂಗದೆ ಅಗ್ನಿಪ್ರವೇಶ ಮಾಡುವುದಾಗಿ ನಿಶ್ಚಯಿಸುವಳು. ಬಭ್ರುವಾಹನನು ಅವಳನ್ನು ತಡೆಯುವನು.

೨೮ ಸಂಜೀವಕ ಮಣಿಯನ್ನು ತರುವುದಾಗಿ ಬಭ್ರುವಾಹನನ ಪ್ರತಿಜ್ಞೆ

೨೯–೪೦ ಬಭ್ರುವಾಹನ ಮತ್ತು ಸರ್ಪಗಳಿಗೆ ಪಾತಾಳಲೋಕದಲ್ಲಿ ಹೋರಾಟ. ಕೊನೆಗೆ ಸಂಜೀವಕ ಮಣಿಯನ್ನು ಬಭ್ರುವಾಹನ ಪಡೆಯುತ್ತಾನೆ.

೪೧–೪೩ ಶೇಷನು ಸುಖದಿಂದ ರಣಾಂಗಣಕ್ಕೆ ಮಣಿಯೊಂದಿಗೆ ಬರುತ್ತಾನೆ. ಧೃತರಾಷ್ಟ್ರನಿಗೆ ದುಃಖ. ದುರ್ಬುದ್ಧಿ ಮತ್ತು ದುಸ್ವಭಾವ ಎಂಬ ಸರ್ಪಗಳು ವೃಷಕೇತು ಮತ್ತು ಅರ್ಜುನರ ರುಂಡಗಳನ್ನು ಅಪಹರಿಸುತ್ತಾರೆ. ಮತ್ತು ಬಕದಾಲ್ಭ್ಯನ ಅರಣ್ಯದಲ್ಲಿ ರುಂಡಗಳ ಬಿಸಾಡಿ ಬರುತ್ತಾರೆ.

೪೪–೪೫ ಎಲ್ಲರೂ ರುಂಡಗಳಿಗಾಗಿ ಶೋಧಿಸುತ್ತಾರೆ. ರುಂಡಗಳು ಸಿಗದ್ದರಿಂದ ಚಿತ್ರಾಂಗದೆ–ಉಲೂಪಿ ಮೈಮರೆಯುತ್ತಾರೆ.

೪೬ ಕುಂತಿಯ ಸ್ವಪ್ನ

೪೭ ಭೀಮ, ಯಶೋದೆ, ಕುಂತಿ, ದೇವಕಿಯರೊಂದಿಗೆ ಶ್ರೀಕೃಷ್ಣನು ಗರುಡನನ್ನೇರಿ ಮಣಿಪುರದತ್ತ ಹೊರಟನು.

೪೮ ರಣಾಂಗಣದ ಭೀಕರತೆಯನ್ನು ಆಕಾಶದಿಂದ ಕಾಣುತ್ತಾರೆ

೪೯–೫೨ ಭೀಮ, ಕೃಷ್ಣ, ಯಶೋದೆ, ಮೊದಲಾದವರು ಅರ್ಜುನ ಮತ್ತು ವೃಷಕೇತು ಇವರ ಮರಣವನ್ನು ಕಂಡು ದುಃಖಿಸುತ್ತಾರೆ.

೫೩ ಅರ್ಜುನ ಮತ್ತು ವೃಷಕೇತುವನ್ನು ಕೊಂದವರು ಯಾರು ? ತೋರಿಸು ಎಂದು ಭೀಮನು ಕೃಷ್ಣನಿಗೆ ಕೇಳುತ್ತಾನೆ.

೫೪ ಅನಿರುದ್ಧ, ಸಾತ್ಯಕಿ, ಪ್ರದ್ಯುಮ್ನ ಎಚ್ಚರಗೊಂಡು ಬಭ್ರುವಾಹನನೊಂದಿಗೆ ಬರುತ್ತಾರೆ.

೫೫–೫೭ ಬಭ್ರುವಾಹನನ ಶೋಕ

೫೮–೬೦ ಕುಂತಿಯ ಶೋಕ

೬೧–೬೨ ಆದಿಶೇಷನು ಪಾತಾಳದ ವೃತ್ತಾಂತವನ್ನು ಹೇಳಿ, ಸಂಜೀವಕ ಮಣಿಯನ್ನು ಶ್ರೀಕೃಷ್ಣನಿಗೆ ಒಪ್ಪಿಸುವನು.

೬೩–೬೯ ಶ್ರೀಕೃಷ್ಣನ ಪ್ರತಿಜ್ಞೆ; ದುಸ್ವಭಾವ_ದುರ್ಬುದ್ಧಿ ಸರ್ಪಗಳ ಸಂಹಾರ, ಅರ್ಜುನ-ವೃಷಕೇತು ಇವರ ರುಂಡಪ್ರಾಪ್ತಿ; ಕೃಷ್ಣಕೃಪೆಯಿಂದ ಇಬ್ಬರೂ ಮೈಮುರಿದು ಎದ್ದರು; ಶ್ರೀಕೃಷ್ಣನಿಗೆ ನಮಸ್ಕರಿಸಿದರು. ಎಲ್ಲರಿಗೂ ಆನಂದವಾಯಿತು.

೭೦ ಮರಣಕ್ಕೆ ಕಾರಣ ಶಾಪ ಎಂದು ಶ್ರೀಕೃಷ್ಣನು ವಿವರಿಸುವನು.

೭೧ ಬಭ್ರುವಾಹನನು ಎಲ್ಲರನ್ನು ಮಣಿಪುರಕ್ಕೆ ಆಮಂತ್ರಿಸುವನು

೭೨ ಪಟ್ಟಣದ ಶೋಭೆ, ವೈಭವ.

೭೩–೭೬ ಬಭ್ರುವಾಹನನು ಎಲ್ಲರನ್ನು ಸ್ವಾಗತಿಸುವನು. ಬಭ್ರುವಾಹನನ ತಪ್ಪನ್ನು ಕ್ಷಮಿಸಲು ಅರ್ಜುನನಿಗೆ ಅನೇಕರು ಬುದ್ಧಿ ಹೇಳುತ್ತಾರೆ. ಬಭ್ರುವಾಹನನ ಪಶ್ಚಾತ್ತಾಪ.

೭೭–೭೮ ಶ್ರೀಕೃಷ್ಣ ಮಹಿಮೆಯನ್ನು ಭೀಮನು ಬಭ್ರುವಾಹನನಿಗೆ ತಿಳಿಸಿಕೊಡುತ್ತಾನೆ.

೭೯ ಎಲ್ಲರಿಗೂ ಆನಂದ

೮೦ ಮಣಿಪುರದಲ್ಲಿ ಐದು ದಿವಸ ಎಲ್ಲರ ವಾಸ್ತವ್ಯ

೮೧ ಕುಂತಿ, ಚಿತ್ರಾಂಗದೆ ಹಸ್ತಿನಾವತಿಗೆ ಹೋದರು. ಬಭ್ರುವಾಹನನು ಅರ್ಜುನನೊಂದಿಗೆ ಯಜ್ಞಾಶ್ವರಕ್ಷಣೆಗೆ ಹೊರಟನು.

೮೨ ಫಲಶ್ರುತಿ.

## ೨೫ನೆಯ ಸಂಧಿ [೬೨]

(ರತ್ನಪುರ)

ತಾಮ್ರಧ್ವಜ: ಏಳಧ್ವರಂ ಹಿಂತೆ ಕೃಷ್ಣವರ್ಜಿತಮಾಯ್ತು
ಪೇಳಲೇನಿದು ಕೃಷ್ಣ ಸಂಯುಕ್ತಮಾದಪುದು
ಕಾಳೆಗಂ ಕೃಷ್ಣನೊಳ್ದೊರೆಕೊಳ್ವುದೀಗಳೆಂದು–
ಬ್ಬೇರಿದಂ ಮುದದೊಳು

ಮಯೂರಧ್ವಜ: ಅಕಟ ಕಿಡಿಸಿದೆನಲಾ ಕಾರ್ಯಮಂ ನಮಗಿ
ದೇತಕೆ ಯಜ್ಞಮಿನ್ನು ನಮಗೀ ಮಗಂ ಪಗೆ
ಯಲ್ತೆ? ಸ್ವಕರಸ್ಥನಾದ ಹರಿಯುಂ ಬಿಟ್ಟು
ಕಚ್ಚಿದಂ ಗರ್ದಭಾಕೃತಿ ಹರಿಯನು

೧–೨ ಯಜ್ಞಾಶ್ವವು ಮತ್ತೆ ಮುಂದೆ ಸಾಗಿತು

೩–೬ ಶರತ್ಕಾಲದ ವರ್ಣನೆ

೭–೮ ಧರ್ಮನ ಯಜ್ಞಾಶ್ವಕ್ಕೂ ಮಯೂರಧ್ವಜನ ಯಜ್ಞಾಶ್ವಕ್ಕೂ ಭೆಟ್ಟಿ. ಪಾಂಡವರ ಯಜ್ಞಾಶ್ವವು ಅಂಜಿತು.

೯ ತಾಮ್ರಧ್ವಜನ ಮಂತ್ರಿ ಪಾಂಡವರ ಯಜ್ಞಾಶ್ವದ ಕನಕಪಟ್ಟವನ್ನು ಓದಿದನು.

೧೦–೧೩ ತಾಮ್ರಧ್ವಜನು ಯುದ್ಧವನ್ನು ನಿಶ್ಚೈಸಿ ಆನಂದಪಡುವನು. ತನ್ನ ರಾಜ್ಯದ ವೈಭವವನ್ನು ನೆನೆದುಕೊಳ್ಳುವನು. ತನ್ನ ಕನಸನ್ನು ನೆನೆಸಿಕೊಳ್ಳುವನು.

೧೪–೧೮ ಯುದ್ಧದ ಸಿದ್ಧತೆ

